ಸರ್ವರಿಗೂ
ದೀಪಾವಳಿಯ
ಶುಭಾಶಯಗಳು



ನೀವು ಬೆಳಗಾವಿಗೆ
ಬಂದಾಗ ಮರೆಯದಿರಿ




# ಹೊಟೆಲ್ ರಾಮದೇವ

ಲಾಜಿಂಗ್ ಆ್ಯಂಡ್ ಬೋರ್ಡಿಂಗ್
ಊಟ - ವಸತಿ - ಉಪಹಾರ

ಮತ್ತು ಪೆಗ್ ಬಾರ

ಶಂತಿ:
ಐಡಿಯೆಲ್ ಹೋಮ

ಫೋನ್ : 1787
1842

ಪುಣೆ - ಬೆಂಗಳೂರ ರಸ್ತೆ,
( ನೆಹರು ನಗರ ),
ಬೆಳಗಾವಿ

ನಮ್ಮ ಗ್ರಾಹಕರಿಗೆ ಹಾಗೂ ಹಿತಚಿಂತಕರಿಗೆ ದೀಪಾವಳಿ
ಮತ್ತು ಹೊಸ ವರ್ಷದ ಶುಭಾಶಯಗಳು!

ಯಾವಾಗಲೂ

ಭಿಕುಸಾ ಯಮಾಸಾ ಕ್ಷತ್ರಿಯ ಪ್ರಾ. ಲಿ., ಸಿನ್ನರ

ರ. ನಂ. ೨೪.



ಇವರ ಬೀಡಿಯನ್ನು ಕೇಳಿರಿ. ಇದಲ್ಲದೆ ನಮ್ಮ ಇತರ ಉತ್ಪಾದನೆಗಳಾದ 'ರಾಕೇಟ್ ಬೀಡಿ' ಭಿಕುಸಾ ಸ್ಪೇಶಲ್ ಬೀಡಿ, ಸಣ್ಣ ಲವಂಗಿ ಸಿನ್ನರ ಬೀಡಿ ಇವುಗಳನ್ನು ಯಾವಾಗಲೂ ಉಪಯೋಗಿಸಿರಿ.

— ತಯಾರಕರು: —

## ಭಿಕುಸಾ ಯಮಾಸಾ ಕ್ಷತ್ರಿಯ ಪ್ರಾ. ಲಿ.,

ಸಿನ್ನರ, ಜಿಲ್ಹಾ : ನಾಸಿಕ

ಡಿಪೋ : 1577. ಮಾರುತಿಗಲ್ಲಿ ಬೆಳಗಾವಿ. Phone No. 335.

---



ನೂತನ ವರ್ಷ ಮತ್ತು ದೀಪಾವಳಿ
ಸರ್ವರಿಗೂ ಶುಭವಾಗಲಿ



ಮೆ॥
## ಲಿಬರ್ಟಿ ಸೇಲ್ಸ್
ಅಟೋಮೋಬಾಯಿಲ
ಅಂಡ
ಹಾರ್ಡವೇಅರಡೀಲರ್ಸ

ಮೆ॥
## ಅಂಬ್ಯಾಸಡರ ಅಟೋ ವರ್ಕ್ಸ
ಸ್ಪೇಕಾರ ರಿಪೇರಿಗಳಲ್ಲಿ
ಸ್ಪೇಶಾಲ್ಟಿಸರು

ಲಿಬರ್ಟಿ ಕಂಪೌಂಡ
ಧಾರವಾಡ ರೋಡ, ಬೆಳಗಾವಿ

ಪ್ರೊ. ಎ. ಬಿ. ಹಂಗರಿಕರ ★ ಪ್ರೊ. ಶಿವಾಜಿ ಮೇಸ್ತ್ರಿ

---

ದೀಪಾವಳಿಯ ದೀಪ ಜ್ಯೋತಿಗಳು ಮನೆ ಮನೆಗೂ
ಬೆಳಗಿ ಎಲ್ಲೆಲ್ಲಿಯೂ ಹರುಷವ ತರಲಿ !

ಫೋನ- 2795

## ಅಶೋಕ ಕೆಫೆ

ವಸತಿ — ಉಪಹಾರ

ವಿದ್ಯಾನಗರ, ಹುಬ್ಬಳ್ಳಿ.

ವಿದ್ಯಾರ್ಥಿಗಳ ಅಚ್ಚುಮೆಚ್ಚಿನ ವಸತಿ ಗೃಹ

ಕಾಲೇಜು ವಿದ್ಯಾರ್ಥಿಗಳ ಸೌಕರ್ಯಕ್ಕಾಗಿ ಅವರ ಅಂತಸ್ತಿಗೆ ತಕ್ಕ
ಅತ್ಯಾಧುನಿಕ ಮಾದರಿಯ ಕೋಣೆಗಳು

ಡಾ॥ ಆರ್. ಬಿ. ಪಾಟೀಲರ ಶುಶ್ರೂಷಾ
ಕೇಂದ್ರಕ್ಕೆ ಬರುವವರ ವಸತಿಗೆ
ಅನುಕೂಲವಾದ ಸ್ಥಳ.

ವ್ಹಿ. ಎಸ್. ಭಟ್ಟ
ಡಿ. ಎಂ. ನಾಯಕ
ಒಡೆಯರು

---

"ಹಾರ್ದಿಕ ದೀಪಾವಳಿಯ ಶುಭಾಶಯಗಳು"

ದಿನಾಲು ತಾಜಾ ಕುಂದಾ ಇತರ ಸಿಹಿ ಮತ್ತು ರುಚಿಕರ ಖಾರದ ಜಿನ್ನಸುಗಳು ಯೋಗ್ಯ ದರದಲ್ಲಿ ಸಿಗುವ ಒಂದು ವಿಶ್ವಾಸಿಕ ಸ್ಥಳ.

ಬೆಳಗಾವಿಯಲ್ಲಿ ಮೊದಲಿನಿಂದಲೂ ತನ್ನ
ವೈಶಿಷ್ಟ್ಯವನ್ನು ಕಾಪಾಡಿಕೊಂಡು
ಬಂದ ಮಿಠಾಯಿ ಕೇಂದ್ರ.

ಫೋನ : 971

## ನಾಗೋರಿ ಮಿಠಾಯಿವಾಲಾ

ಕಿರ್ಲೋಸ್ಕರ ರೋಡ ಬೆಳಗಾವಿ

ವಿ. ಸೂಚನೆ : ಬೆಳಗಾವಿಯಲ್ಲಿ ಒಂದೇ ಒಂದು ಅಂಗಡಿ
ಬೇರೆಡೆಗೆ ಶಾಖೆಯಿಲ್ಲ

ಸ್ಥಾಪನೆ:- 1935



ದೀಪಾವಳಿಯು ನಮ್ಮೆಲ್ಲ ಗ್ರಾಹಕರಿಗೂ, ಹಿತೈಷಿಗಳಿಗೂ ಸುಖಪ್ರದವಾಗಲಿ !

ಟೆಲಿಫೋನ ನಂ. 2026




ಡಾಯಮಂಡ ಆಟೋ ರಿಕ್ಷಾ ಮೀಟರುಗಳು

- ಮೆಟ್ರಿಕ್ ತೂಕದ ಕಾಟಾ- ಕಲ್ಲು, ಮಾಪುಗಳ ಮತ್ತು ಹಾರ್ಡವೇರ ಸಾಮಾನುಗಳು



- ಡಾಯಮಂಡ ಆಟೋ ರಿಕ್ಷಾ ಮೀಟರಗಳ ಠೋಕ ವ ಕಿರುಕಳ ಹಂಚಿಕೆಗಾರರು ಮತ್ತು ತಯಾರಕರು ಹಾಗೂ ರಿಪೇರಿ ಮಾಡುವವರು
- "ಸೋನ್ಲೆ ಕಂಪನಿ ಜರ್ಮನ್" ಇವರ ಟೇಬಲ್ ಕಾಟಾಗಳ ಮತ್ತು "ಎವ್ಹರಿ ಕಂಪನಿಯ ಟೇಬಲ್ ಕಾಟಾಗಳ ಅಧಿಕೃತ ಮಾರಾಟಗಾರರು.

## ಡಾಯಮಂಡ ಕ್ಲಾಕ ಮ್ಯಾ. ಕಂ. ಪ್ರಾ. ಲಿ., ಪುಣೆ

ಇವರ ಡಾಯಮಂಡ ಆಟೋರಿಕ್ಷಾ ಮೀಟರಗಳ ಅಧಿಕೃತ ಹಂಚಿಕೆಗಾರರು–

# ಮೆ|| ಎಸ್. ಎಮ್. ಖೋದಾನಪೂರ

**ಹತ್ತಿಕಾಳಸಾಲ, ಹುಬ್ಬಳ್ಳಿ.**

ಪ್ರೊಪ್ರಾಯಿಟರ– ಆರ್. ಎಸ್. ಖೋದಾನಪೂರ

---



ದೀಪಾವಳಿಯ ಸಂತೋಷ ಸಮಾರಂಭಗಳಲ್ಲಿ ನಮ್ಮ ಮಾನ್ಯ ಗಿರಾಕಿಗಳಿಗೂ ಸಾರ್ವಜನಿಕರಿಗೂ ನೂತನ ಸಂವತ್ಸರದ ಸುಖ, ಶಾಂತಿ, ಸಂಪದಭಿವೃದ್ಧಿಗಾಗಿ ಹಾರ್ದಿಕ ಶುಭಾಶಯಗಳು!!




# ಸ್ಟೇಟ್ ದರ್ಬಾರ್ ಅಗರಬತ್ತಿ ಫಾಕ್ಟರಿ

ಎನ್. ಮಾಧವರಾವ್ ಸರ್ಕಲ್, ಮೈಸೂರು – 4

ಲಕ್ಷಾಂತರ ಜನರು ಮೆಚ್ಚಿದ

## 'ನೋವ್ಹಾ ಬ್ರಿಲ್'ಯಂಟೈನ್'

ನಿಮ್ಮ ವಿಪುಲ ಕೇಶರಾಶಿಯನ್ನು ಒತ್ತಡ ಲ್ಲಿಟ್ಟು, ಆದನ್ನು ನಿಮ್ಮ ಮನಸೋಕ್ತ ರಚಿಸಲು ಇದೊಂದು ವಿಶಿಷ್ಟ ಸುಗಂಧದ ಆಧುನಿಕ ಶೃಂಗಾರ ಸಾಧನೆ ಇಂದೇ ಉಪಯೋಗಿಸಿ ಖಾತ್ರಿ ಮಾಡಿರಿ।




ತಯಾರಕರು : ದಿ ನೋವ್ಹಾ ಕಂಪನಿ, ಆಗ್ರಾರೋಡ ಭಾಂಡುಪ ಬೊಂಬಾಯಿ 78



ನೂತನ ವರ್ಷವು ಸರ್ವರಿಗೂ
ಶುಭದಾಯಕವಾಗಲಿ

# VINA TILES

## ನ್ಯೂಸಿಮೆಂಟ ಕಾಂಕ್ರೀಟ ವರ್ಕ್ಸ

ಸಂಯುಕ್ತ ಕರ್ನಾಟಕ ಕಂಪಾವುಂಡ

ಕೊಪ್ಪೀಕರ ರೋಡ. ಹುಬ್ಬಳ್ಳಿ-೨೦

ಫೋನ : ೪೦೦೦೮

- ಮಾರ್ಬಲ್ ಮೋಜ್ಯಾಕ್ ಟಾಯಿಲ್ಸ
- ಚಕರ್ಡ ಟಾಯಿಲ್ಸ
- ಮತ್ತು ಇತರ R. C. C. ವಸ್ತುಗಳ ತಯಾರಕರು

ದೀಪಾವಳಿಯ ದೀಪಲಕ್ಷ್ಮೀಯು ಅಖಂಡವಾಗಿ ಬೆಳಗಲಿ!!

ತನ್ನದೇ ಆದ ವೈಶಿಷ್ಟ್ಯ ಅಂದಿನಿಂದ ಇಂದಿನವರೆಗೂ
ಕಾಪಾಡಿಕೊಂಡು ಬಂದಿರುವ

## ಅಂಬಾ ಭುವನ

ಸ್ಟೇಶನ್ ರೋಡ್, ಬೆಳಗಾವಿ

Phone :... 190

ರೆಸ್ಟಾರಂಟ್ ಆ್ಯಂಡ್ ಬೋರ್ಡಿಂಗ್

ಟಿಳಕವಾಡಿಯಲ್ಲಿ ಅಲ್ಪಾವಧಿಯಲ್ಲಿ ಕಾಲೇಜ್ ಹುಡುಗರ
ಮತ್ತು ಎಲ್ಲರ ಕಣ್ಮಣಿ

## ಮೋಹನ ವಿಲಾಸ

ಟಿಳಕವಾಡಿ, ಬೆಳಗಾವಿ

ಫೋನ್ :... 1493

ಊಟದ ಅತ್ಯುತ್ತಮ ವ್ಯವಸ್ಥೆ

## ಹೊಟೇಲ ಅಪ್ಸರಾ

ಆಧುನಿಕ ಉಪಹಾರ ಗೃಹ

ಖಡೇ ಬಝಾರ ಶಹಾಪುರ, ಬೆಳಗಾವಿ

Grams: THARAGAN-MARGOA

**For New Type Mileage**
**Solve Your Problem Through**

# DECCAN TYRES

**Post Box No. 318**

**Near Dr. Rajendra Prasad Stadium**

**MARGOA-GOA**

Is a New Name out of few in India for its quality and service

Offers different Types of Tyres of Scooter (3.50 × 8) to Earthmover (18.00 × 25)

Retreaded by the minute Supervision of well qualified Technicians under the latest process for attractive charges and terms

*A TRAIL WILL CONNVICE YOU*

Sole Proprietor: **P. G. C. Tharagan**



ನಮಗೆ ಅತ್ಯಂತ ಸಹಕರಿಸಿದ ಬೇಕರಿಯ ಒಡೆಯರಿಗೆ ಅನಂತಾನಂತ ವಂದನೆಗಳು

**ಮಿತವಾದ ದರ, ಬೇಕರಿಯ ಮಾಲೀಕರಿಗೆ ಅತ್ಯಂತ ಉಪಯುಕ್ತವಾದ**
**ಅತ್ಯಲ್ಪ ಅವಧಿಯಲ್ಲಿ ಮೈಸೂರು ರಾಜ್ಯದಲ್ಲಿ ಜನಪ್ರಿಯವಾದ**
**ಉತ್ಪಾದನೆಗಳು**



ಕೇಕ ಮಿಕ್ಶಚರ ಮಶಿನು

ಮಂಗಲ ಸ್ಲಾಯಿಸರ ಮಶಿನು



---

**ಫ್ಲೋಅರ್ ನೀಡಿಂಗ್ ಮಶಿನ್ (ಜರ್ಮನ್ ಟಾಯಿಪ್)**
**ಈಗ ಮೈಸೂರು ರಾಜ್ಯದಲ್ಲಿ ಪ್ರಥಮವಾಗಿ**

## ಬ್ರೆಡ್ ಡಿವ್ಲಾಯಿಡರ್ ಮತ್ತು ಮೋಲ್ಡರ್

★

**ಉಪಯುಕ್ತವಾದ ಮಶಿನನ್ನು ಸಾದರಪಡಿಸಲಿದ್ದೇವೆ**

ನಿರೀಕ್ಷಿಸಿರಿ?

ತಮ್ಮ ಎಲ್ಲ ಬೇಡಿಕೆಗಾಗಿ:

# ಮಂಗಲ ಮೆಟಲ್ ವರ್ಕ್ಸ್

೧೬೬೧, ಅಳವಣಗಲ್ಲಿ
ಶಹಾಪುರ, ಬೆಳಗಾವಿ

ಕೊಲ್ಹಾಪೂರ

## ಶ್ರೀಮಹಾಲಕ್ಷ್ಮೀ ದೇವಿಯ ಭಕ್ತರಲ್ಲಿ ಬಿನ್ನಹ

ಧೃವೀಕೃಪೆಯಿಲ್ಲದಿದ್ದರೆ ಕಾರ್ಯ ಸಿದ್ಧಿಯಾಗುವದಿಲ್ಲ. ಶ್ರೀ ದೇವಿಯ ಪಾದಪೂಜೆ ಅಭಿಷೇಕಾದಿ ಮಹಾಪ್ರಸಾದ ಮಾಡಿಸಿ ಕಾರ್ಯಸಿದ್ಧಿ ಸಾಧಿಸುವಗೋಸ್ಕರ ರೂ. ೬.೧೧ ಮತ್ತು ೧೫ ಕಳಿಸಿರಿ. ಪ್ರಸಾದ ಹಾಗೂ ಶ್ರೀ ದೇವಿಯ ಫೋಟೋ ಕಳಿಸುತ್ತೇವೆ.ಅದರಂತೆ ಶ್ರೀಯಂತ್ರದ ತಾಮ್ರದ ಪ್ರತಿಮೆ ಮತ್ತು ಕೊಲ್ಹಾಪೂರ ಮಹಾಲಕ್ಷ್ಮೀ ಮತ್ತು ಇತರ ದೇವತೆಗಳ ಪ್ರತಿಮೆಗಳು(ಟಂಕ) ತಯಾರ ಬಂದಿವೆ. ಪ್ರತ್ಯೇಕ ಪ್ರತಿಮೆಗೆ ರೂ. ೫/- ರಂತೆ ಮನಿಆರ್ಡರಿನಿಂದ ಕಳಿಸಿದಲ್ಲಿ ನಿಮ್ಮ ಮನೆಗೆ ಮುಟ್ಟುವಂತೆ ಕಳಿಸುತ್ತೇವೆ. ವ್ಹಿ.ಪಿ. ಮಾಡುವ ಪದ್ಧತಿ ಇಲ್ಲ.

**ಶ್ರೀ ಕೊಲ್ಹಾಪೂರ ಮಹಾಲಕ್ಷ್ಮೀ ಭಕ್ತ ಸೇವಾ ಕಾರ್ಯಾಲಯ**

೧೭೭೧ "ಎ" ತಾರಾಬಾಯಿ ರೋಡ

**ಕೊಲ್ಹಾಪೂರ**

*With Best Compliments*
*From :*

# VIJAYALAKSHMI FINANCIERS

(Regd.)

Chamarajpet, **Davangere.1**

We welcome long term fixed Deposits at attractive rat of Intest.

Daily Pigmy Collections with attractive Benefit is also our speciality. We give credits on hire Purc... es on vehicles also.

ದೀಪಾವಳಿಯ ಶುಭಾಶಯಗಳು!

ಕೊಲ್ಹಾಪುರಕ್ಕೆ ಬಂದಾಗ್ಗೆ ಸಂದರ್ಶಿಸಿರಿ.

ಹೋಟೆಲ

# ಮೇಘನಾ

ಲಕ್ಷ್ಮೀಪುರಿ, ಕೊಲ್ಹಾಪುರ

ಫೋನ : 1193.

ಮಧ್ಯವರ್ತಿ ಸ್ಥಳ, ಉತ್ತಮ ವಸತಿ ಸೌಕರ್ಯ ಮತ್ತು ಸ್ವಾದಿಷ್ಟ ಭೋಜನ.

Telegrams: "SASIPRAKSH" Telephone: 2... 3

# SHASHIPRAKASH AGENCIES

**24/71, J. C. ROAD BANGALORE-2**



*Offers Deepavali Greetings to All on this Occasion and Wish them a Prosperous New Year*



**THE NAME THAT QUALIFIES A DEPENDABLE STEEL FURNITURE**

SOLE DESTRIBUTORS FOR :

**M/s. VENUS STEEL PRODUCTS**
BOMBAY

AND

**M/s. CHALANGE ENGINEERING Co.**
CALCUTTA

**IN MYSORE STATE & UNION TERRIT..Y OF GOA**

DELARS :
for all kinds of folding Furniture, Decolam Lamanite sheelds and Gem Refregerators.

Liasion Represen... for :
M/s MUKESH ENGINEERING
M/s. ASOTEX ENGINEERING

FOR PIPES, PIPE FITTINGS AND E N STEEL

**ENQUIRIES FOR DEALERSHIP IN UNREPRESENTED AREAS SOLICITED**



ಈ ಶುಭಸಮಯದಲ್ಲಿ ನಮ್ಮ ಗ್ರಾಹಕರಿಗೆ, ಹಿತಚಿಂತಕರಿಗೆ



__ದೀಪಾವಳಿಯ ಶುಭಾಶಯಗಳನ್ನು ಕೋರುತ್ತೇವೆ__




ಪ್ರಖ್ಯಾತ ನಂಬರ್

# "ಮೂವತ್ತು"

ಮಾರ್ಕಿನ ಬೀಡಿಗಳು

ತಯಾರಕರು :




## ದಿ ಭಾರತ್ ಬೀಡಿ ವರ್ಕ್ಸ್




[ರಿಜಿಸ್ಟರ್ಡ್]

ಪೋಸ್ಟ್ ಬಾಕ್ಸ್ ನಂಬರ್ 30 ಕಾರ್ಕಳ (ದ. ಕ.)

# ಕಿರ್ಲೋಸ್ಕರ್ ಆಯಿಲ್ ಎಂಜಿನ್ಸ್ ಲಿ.,

ರಿಜಿಸ್ಟರ್ಡ್ ಆಫೀಸ್: 13, ಎಲ್ಫಿನ್‌ಸ್ಟನ್ ರೋಡ್, ಖಡ್ಕೀ, ಪುಣೆ-3

26ನೇ ಜೂನ್ 1948 ರಲ್ಲಿ ಸ್ಥಾಪಿತವಾದುದು.

**ಡೈರೆಕ್ಟರರ ಮಂಡಳಿ:**
ಶ್ರೀ ಎಸ್.ಎಲ್. ಕಿರ್ಲೋಸ್ಕರ್: ಛೇರ್‌ಮನ್ ಮತ್ತು ಮ್ಯಾನೇಜಿಂಗ್ ಡೈರೆಕ್ಟರ್
ಶ್ರೀ ಎ. ಪಿ. ವರ್ದೆ, ಶ್ರೀ ಎಸ್. ಬಿ. ಖೇರ್, ಶ್ರೀ ಎ. ನಿಂಬ್‌ಕರ್, ಶ್ರೀ ಎಂ. ಬಿ. ಜಂಭೇಕರ್,
ಡಾ. ಎನ್. ಬಿ. ಪರುಳೇಕರ್, ಶ್ರೀ ಎಚ್. ಎ. ಆರ್. ಅಯ್ಯಂಗಾರ್, ಶ್ರೀ ಸಿ.ಎಸ್. ಕಿರ್ಲೋಸ್ಕರ್

## ಕಂಪೆನಿಯು ಚಟುವಟಿಕೆಗಳು

3 ಎಚ್. ಪಿ. ಯಿಂದ 372 ಎಚ್. ಪಿ. ವರೆಗಿನ ಶ್ರೇಣಿಯಲ್ಲಿ ಇಂಟರ್ನಲ್ ಕಂಬಶ್ಚನ್ ಇಂಜಿನ್, ಪಂಪಿಂಗ್ ಸೆಟ್, ಜನರೇಟಿಂಗ್ ಸೆಟ್ ಇತ್ಯಾದಿಗಳನ್ನೂ, ಇಂಟರ್ನಲ್ ಕಂಬಶ್ಚನ್ ಇಂಜಿನ್ ಮತ್ತು ಮೋಟರ್ ವಾಹನಗಳಿಗಾಗಿ ಥಿನ್‌ವಾಲ್ ಬೈಮೆಟಲ್ ಬೇರಿಂಗ್ ಮತ್ತು ಬುಶ್‌ಗಳನ್ನೂ ತಯಾರಿಸುವುದು ಮತ್ತು ಮಾರಾಟ ಮಾಡುವುದು.

## ಸಹಾಯಕ ಕಂಪೆನಿಗಳು

(1) ಶಿವಾಜಿ ವರ್ಕ್ಸ್ ಲಿಮಿಟೆಡ್, ಶಿವಶಾಹೀ, ಸೋಲಾಪುರ. ತಯಾರಿಕೆಗಳು: ಗ್ರೇ ಆಯರ್ನ್ ಕಾಸ್ಟಿಂಗ್ಸ್, ವೈಸಸ್, ಸೆಲ್ಫ್ ಪ್ರೈಮಿಂಗ್ ಪಂಪ್ಸ್ ಇತ್ಯಾದಿ

(2) ಎಫ್.ಎಚ್. ಶೂಲೆ, ಜಿಎಮ್‌ಬಿಎಚ್, ಹ್ಯಾಂಬರ್ಗ್ (ಪಶ್ಚಿಮ ಜರ್ಮನಿ) ತಯಾರಿಕೆಗಳು: ಮಿಲ್ಲಿಂಗ್ ಮೆಶಿನರಿ, ಫಿಲ್ಟರ್ ಪ್ರೆಸಸ್, ರೋಟರಿ ಫಿಲ್ಟರ್ಸ್, ಕಾರ್ ವಾಶ್ ಯುನಿಟ್ಸ್, ಡೀಸೆಲ್ ಇಂಜಿನ್ಸ್ ಇತ್ಯಾದಿ.

(3) ಕಿರ್ಲೋಸ್ಕರ್ ಕಿಸಾನ್ ಎಕ್ವಿಪ್‌ಮೆಂಟ್ ಲಿಮಿಟೆಡ್, ಕೋಥ್ರುಡ್, ಪುಣೆ-29 ತಯಾರಿಕರು: ಪೆಟ್ರೋಲ್ ಇಂಜಿನ್ಸ್.

## 31ನೇ ಮಾರ್ಚ್, 1971 ರಂದು ಅಂತ್ಯವಾದ ಮೂರು ವರ್ಷಗಳಲ್ಲಿ ನಡೆದ ಕೆಲಸಗಳ ಫಲಿತಾಂಶ:

| | 31-3-1969 | 31-3-1970 | 31-3-1971 |
|---|---|---|---|
| ತೆರಿಗೆ ಹಾಕುವ ಮೊದಲು ಲಾಭ | 3,61,71,861 | 1,68,62,764 | 28,94,589 |
| ತೆರಿಗೆ ಹಾಕಿದ ಮೇಲೆ ಲಾಭ | 1,51,71,861 | 95,62,764 | 28,94,589 |
| ಡಿವಿಡೆಂಡ್ | | | |
| (ಅ) ಇಕ್ವಿಟಿ ಬಂಡವಾಳ | 16% | 10% (ತೆರಿಗೆ ಕೊಟ್ಟು ಕೂಡಿದ ಮೇಲೆ) | 6% (ತೆರಿಗೆ ಕೊಟ್ಟು ಕೂಡಿದ ಮೇಲೆ) |
| (ಆ) ಕ್ಯುಮ್ಯುಲೇಟಿವ್ ಪಾರ್ಟಿಸಿಪೇಟಿಂಗ್ ಪ್ರಿಫರೆನ್ಸ್ ಬಂಡವಾಳ | 10% | 8% | 8% |
| (ಇ) ಕ್ಯುಮ್ಯುಲೇಟಿವ್ ಪ್ರಿಫರೆನ್ಸ್ ಬಂಡವಾಳ | 9.5% | 9.5% | 9.5% |

(1969-70 ಮತ್ತು 1970-71ರ ಇಕ್ವಿಟಿ ಡಿವಿಡೆಂಡ್ 1:1 ಬೋನಸ್ ಶೇರುಗಳನ್ನು ಕೊಟ್ಟು ಹೆಚ್ಚಿಸಲ್ಪಟ್ಟ ಬಂಡವಾಳದ ಮೇಲೆ)

## 31-3-71 ರಂದು ಆರ್ಥಿಕ ಪರಿಸ್ಥಿತಿಯ ಸಾರಾಂಶ:

| | |
|---|---|
| 'ಪೇಡ್-ಅಪ್' ಬಂಡವಾಳ | ರೂ. 4,62,62,600 |
| ಫ್ರೀ ರಿಸರ್ವ್ಸ್ | ರೂ. 3,47,14,610 |
| ಫಿಕ್ಸ್‌ಡ್ ಡಿಪಾಸಿಟ್‌ಗಳು | ರೂ. 1,47,96,980 |
| ಶೇರುದಾರರಿಂದ ಸಾಲಗಳು | ರೂ. 28,48,300 |
| ಸೆಕ್ಯೂರಿಟಿಗಳ ಮೇಲಿನ ಸಾಲಗಳು | ರೂ. 9,68,66,486 |

ಹೆಚ್ಚಿಸಲ್ಪಟ್ಟ ದರಗಳು

# ಫಿಕ್ಸ್‌ಡ್ ಡಿಪಾಸಿಟ್‌ಗಳು ಸ್ವೀಕರಿಸಲ್ಪಡುತ್ತವೆ

| ಅವಧಿ (ವರ್ಷಗಳಲ್ಲಿ) | 1 | 2 | 3 | 5 | 7 | 10 |
|---|---|---|---|---|---|---|
| ವರ್ಷಕ್ಕೆ ಬಡ್ಡಿಯ ದರ | 7½% | 8% | 9% | 10% | 10½% | 11½% |

**ಶೇರುದಾರರಿಂದ ಪಡೆದ ಸಾಲಗಳ ಮೇಲೆ ½% ಹೆಚ್ಚಿಗೆ ಬಡ್ಡಿ ಕೊಡಲಾಗುವುದು.**

ಡಿಪಾಸಿಟ್‌ನ ತಾರೀಖಿನಿಂದ ಪ್ರತಿ ಆರು ತಿಂಗಳಿಗೊಮ್ಮೆ ಬಡ್ಡಿಯನ್ನು ಕೊಡಲಾಗುತ್ತದೆ.

ಪ್ರಚಾರ ಮಾಡುವುದಕ್ಕಾಗಿ, ಮೇಲಿನ ವಿಷಯವು ತಾ. ೮-೯-೭೧ ರಂದು ಮ್ಯಾನೇಜಿಂಗ್ ಡೈರೆಕ್ಟರಿಂದ ಮಂಜೂರಾತಿ ಪಡೆದಿದೆ.

Tom & Bay/KO-71/[illegible]

● "ಕಂಪನಿಗೆ ಬರೆಯುವಾಗ್ಗೆ ದಯವಿಟ್ಟು ಈ ದೀಪಾವಳಿಯ ವಿಶೇಷ ಸಂಚಿಕೆ ಹೆಸರನ್ನು ಬರೆಯಿರಿ."

# INDEX TO ADVERTISERS

# ಪರಿವಿಡಿ



ರೇಖಾ ಚಿತ್ರ : ಕೆ. ಬಿ. ಕುಲಕರ್ಣಿ ಹಾಗೂ ಪಿ. ಆರ್. ಪಾಟೀಲ,
ವ್ಯಂಗ್ಯ ಚಿತ್ರಗಳು : ಡಿಝು, ಕೆ. ಆರ್. ಸ್ವಾಮಿ ಪ್ರಾಣ : ಎಂ. ಆರ್. ಎಸ್.
ಛಾಯಾಚಿತ್ರ : ಬಿ. ಕೇಸರಸಿಂಗ್ ಮತ್ತು ಕೆ. ಎಲ್. ಕಾಮತ

ಮುಖಚಿತ್ರ : ರಾಜನ್‌ಕುಮಾರ ಶಹಾ, ಮುಂಬಯಿ

# ಕರ್ಮವೀರ ದೀಪಾವಳಿ ಲೇಖಕರ ಬಳಗ

## ವಿ. ಕೃ. ಗೋಕಾಕ



ಆಕ್ಸ್‌ಫರ್ಡಿನಲ್ಲಿಯೂ ಕನ್ನಡದ ಕೀರ್ತಿಧ್ವಜ ಮೆರೆಸಿದ ಡಾ. ವಿನಾಯಕ ಕೃಷ್ಣ ಗೋಕಾಕರ ಪರಿಚಯ ಕನ್ನಡಿಗರಿಗೆ ಅನಗತ್ಯ. ಶ್ರೇಷ್ಠ ಸಾಹಿತಿ, ನುರಿತ ಶಿಕ್ಷಕ, ದಕ್ಷ ಆಡಳಿತಗಾರ, ಅನುಭಾವಿ ಅಧ್ಯಾತ್ಮಜೀವಿಯಾದ ಅವರು ಮಹಾರಾಷ್ಟ್ರ, ಗುಜರಾತ, ಮೈಸೂರು ಶಿಕ್ಷಣ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆ ಅನುಪಮ, ಪ್ರಭಾವಪೂರ್ಣ. ಇಂಗ್ಲೀಷ-ಕನ್ನಡಗಳೆರಡರಲ್ಲೂ ಹೆಸರಾಂತ ಕಾವ್ಯಕೃತಿ ರಚಿಸಿರುವ ಇವರು ಕಾದಂಬರಿ—ನಾಟಕ-ವಿಮರ್ಶೆ ರಂಗದಲ್ಲೂ ಎತ್ತಿದ ಕೈ.

## ಶಿವರಾಮ ಕಾರಂತ



ಈ ಕಡಲ ತೀರದ ಭಾರ್ಗವ ಸ್ಪರ್ಶಿಸದ ಸಾಹಿತ್ಯದಂಶವೇ ಇಲ್ಲ. ಅಲ್ಲದೆ ರಾಷ್ಟ್ರ ಸೇವೆ, ವ್ಯಾಪಾರ, ಪತ್ರಿಕೋದ್ಯಮ, ಅಧ್ಯಾತ್ಮಸಾಧನೆ, ಫೋಟೋಗ್ರಫಿ, ನಾಟಕ, ನೃತ್ಯ, ಚಿತ್ರ, ವಾಸ್ತು, ಸಂಗೀತ, ಸಿನೆಮಾಗಳಲ್ಲದೆ ಸಮಾಜ ಸುಧಾರಣೆ, ಗ್ರಾಮೋದ್ಧಾರ, ಶಿಕ್ಷಣ ಪ್ರಯೋಗ, ಉದ್ಯೋಗ- ಈ ಎಲ್ಲ ಕ್ಷೇತ್ರಗಳಲ್ಲೂ ಸಾಕಷ್ಟು ಪ್ರಯೋಗ ನಡೆಸಿದ ಅವರು ಮುದ್ರಣಾಲಯದ ಒಡೆಯರೂ ಆಗಿದ್ದಾರೆ. ಕಾರಂತರ ಸಾಹಿತ್ಯ ಕೃತಿಗಳೂ ಎಣಿಕೆಗೆ ಮೀರಿದುವು!

## ಎನ್. ಕೆ. ಕುಲಕರ್ಣಿ



ಎನ್ಕೆ ನಾನಿ ಎಂದು ಬಾನುಲಿ ಹಾಗು ಕನ್ನಡಸಾಹಿತ್ಯ ಲೋಕದಲ್ಲಿ ಪರಿಚಿತರಾಗಿರುವ ಕುಲಕರ್ಣಿಯವರು ಕನ್ನಡ ಏಕಾಂಕ ಹರಟೆ ಹಾಗು ಕಾದಂಬರಿಗಳಿಗೆ ವಿಶಿಷ್ಟ ಸೇವೆಸಲ್ಲಿಸಿದವರು. ಕುಮಾರವ್ಯಾಸನ ಬಗೆಗೆ ಆಳವಾಗಿ ಅಭ್ಯಾಸಮಾಡಿದ ಕುಲಕರ್ಣಿಯವರು ತುಂಬ ಸುಂದರವಾದ 'ಕುಮಾರವ್ಯಾಸ' ಹಾಗು 'ಕೃಷ್ಣನಕಥೆ' ಪ್ರಕಟಿಸಿದ್ದಾರೆ. ಸಾವಿನ ಉಡಿಯಲ್ಲಿ ಎರಡನೆಯ ಸಂಬಂಧ ಪೈನಿ ಅವರ ಶ್ರೇಷ್ಠ ಕಾದಂಬರಿಗಳು. ಕನ್ನಡ ಸಾಹಿತ್ಯವಾಹಿನಿಯು ಕನ್ನಡ ಸಾಹಿತ್ಯದ ಪರಿಚಯಾತ್ಮಕ ಗ್ರಂಥ ನಡುಮನೆಯಲ್ಲಿ ಹಾಗು ಮಂದಿರ ಪ್ರವೇಶ ಅವರ ನಾಟಕಗಳು. ಅವರ ಬೃಹದ್‌ಗ್ರಂಥ ಗದುಗಿನ ಭಾರತ ಪ್ರಕಟವಾಗಿದೆ. ಆಕಾಶವಾಣಿಯಲ್ಲಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ.

## ಕೃಷ್ಣಮೂರ್ತಿ ಪುರಾಣಿಕ



ಕನ್ನಡದ ಅಗ್ರಮಾನ್ಯ ಸಾಹಿತಿಗಳಲ್ಲೊಬ್ಬರಾದ ಶ್ರೀ ಕೃಷ್ಣಮೂರ್ತಿ ಪುರಾಣಿಕರು ಮುಟ್ಟದ ಸಾಹಿತ್ಯದ ಅಂಗವೇ ಇಲ್ಲ. "ಮುಗಿಲು ಮಲ್ಲಿಗೆ"-ಯಿಂದ "ಹಾಲುಂಡ ತವರು"ನವರೆಗೆ ಪ್ರಕಟವಾದ ಅವರ ಕಾದಂಬರಿಗಳ ಸಂಖ್ಯೆ ೬೯; ಹತ್ತು ಕಥಾಸಂಗ್ರಹಗಳು, ಮೂರು ಕವನ ಸಂಗ್ರಹಗಳು, ಐದು ಸರಳ ರಗಳೆಯ ನಾಟಕಗಳು, ಮೂರು ಮಕ್ಕಳ ಸಾಹಿತ್ಯ ಕೃತಿಗಳು ಅಲ್ಲದೆ ವಿಮರ್ಶೆ ಪುರಾಣಿಕರ ಇತರ ಪ್ರಕಟಿತ ಸಾಹಿತ್ಯ ಕೃತಿಗಳು. ರಜತ-ಪರದೆಗೂ ಆಧಾರ ನೀಡಿದ ೧೩ ಕೃತಿಗಳಿವೆ

## ರಾ. ಯ. ಧಾರವಾಡಕರ

ಧಾರವಾಡದ ಬನಶಂಕರೀ ಆರ್ಟ್ಸ್ ಕಾಲೇಜಿನ ಪ್ರಿನ್ಸಿಪಾಲ್ ರಾ.ಯ. ಧಾರವಾಡಕರ ಅವರು ಒಳ್ಳೆಯ ಲೇಖಕರೂ ದಕ್ಷ ಆಡಳಿತಗಾರರೂ ಎಂದು ಹೆಸರು ಪಡೆದಿರುವವರು. ಅವರ 'ಸಾಹಿತ್ಯ ಸಮೀಕ್ಷೆ', 'ಕನ್ನಡ ಭಾಷಾ ಶಾಸ್ತ್ರ', 'ಪತ್ರಿಕಾ ವ್ಯವಸಾಯ', 'ಆರು ಪ್ರಬಂಧಗಳು', ಹಾಗು 'ಧೂಮ್ರ ವಲಯಗಳು', ಮುಂತಾದ ಗ್ರಂಥಗಳಿಗೆ ದೇವರಾಜ ಬಹದೂರ ಬಹುಮಾನ, ಮೈಸೂರು ರಾಜ್ಯ ಪ್ರಶಸ್ತಿ ಮತ್ತು ಅನೇಕ ವಿ.ವಿ.ಗಳ ಪಠ್ಯ ಪುಸ್ತಕ ಮನ್ನಣೆ ದೊರೆತಿದೆ. ಒಳ್ಳೇ ವಾಗ್ಮಿಗಳಾದ ಇವರು ಅಮೇರಿಕಾ ಪ್ರವಾಸವನ್ನು ಮುಗಿಸಿ ಬಂದಿದ್ದು, ಮೈಸೂರು ರಾಜ್ಯ ಸರಕಾರದಿಂದ ಸಾರ್ವಜನಿಕ ಸೇವಾಪ್ರಶಸ್ತಿ ಪಡೆದಿರುವವರು.

## ಕಯ್ಯಾರ ಕಿಞ್ಞಣ್ಣ ರೈ

ಕಯ್ಯಾರ ಕಿಞ್ಞಣ್ಣ ರೈಗಳು ಕಾಸರಗೋಡಿನ ಕನ್ನಡ ಶಕ್ತಿ. ಕನ್ನಡ ಸಾಹಿತ್ಯ ಸರಸ್ವತಿಯ ಉಪಾಸನೆಯೊಂದಿಗೆ ಕರ್ನಾಟಕ ಏಕೀಕರಣದ ಆಂದೋಲನವನ್ನೂ ಅವರು ಸಾಗಿಸಿದ್ದಾರೆ. ಹೈಸ್ಕೂಲಿನಲ್ಲಿ ಶಿಕ್ಷಕರಾಗಿರುವ ರೈಗಳು ಶಿಕ್ಷಣ ಸಾಹಿತ್ಯ ಕರ್ನಾಟಕ ಏಕೀಕರಣ ಈ ಮೂರರಲ್ಲಿ ಹೆಸರುಗಳಿಸಿಕೊಂಡಿದ್ದಾರೆ. ಶ್ರೀಮುಖ ಅವರ ಮೊದಲ ಕಾವ್ಯ ಸಂಗ್ರಹ. ೧೯೪೩ರಲ್ಲಿ ಪ್ರಕಟವಾಗಿದೆ. ಅವರ 'ಪುನರ್ನವ' ಕವನ ಸಂಕಲನಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರೆತಿದೆ.

## ಜಿ. ಡಿ. ನಾಡಕರ್ಣಿ

ಪ್ರಾಧ್ಯಾಪಕ ನಾಡಕರ್ಣಿಯವರ ವಿಮರ್ಶೆ ವಿಡಂಬನೆ ಲೇಖಗಳು ಪ್ರಕಟವಾಗದ ಕನ್ನಡ ಪತ್ರಿಕೆಗಳಿಲ್ಲ. ಅವರ ಹಾಸ್ಯ ವಿಡಂಬನಾತ್ಮಕ ಲೇಖಗಳನ್ನೋದದ ಕನ್ನಡ ಓದುಗನಿಲ್ಲ. ಅವರ ಹಾಸ್ಯ ಲೇಖಗಳ ಸಂಕಲನವೊಂದು ಇಷ್ಟರಲ್ಲಿ ಬೆಳಕಿಗೆ ಬರಲಿದೆ. ಧಾರವಾಡದ ಜನತಾ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ಜಿ.ಡಿ. ನಾಡಕರ್ಣಿಯವರು ಶಿಕ್ಷಣ ರಂಗದಲ್ಲಿ ಇಪ್ಪತ್ತು ವರುಷಗಳಿಗಿಂತ ಹೆಚ್ಚು ಕಾಲದಿಂದ ಸೇವೆಸಲ್ಲಿಸುತ್ತಿದ್ದಾರೆ.

## ಶೇಪ ನಮಿರಾಜ ಮಲ್ಲ

ಕೃಷಿಕ ಕುಟುಂಬದಲ್ಲಿ ಹುಟ್ಟಿದ ಶ್ರೀ ಶೇಪ ನಮಿರಾಜ ಮಲ್ಲರು ವಿದ್ಯಾರ್ಜನೆಯಲ್ಲಿ ಅನುಭವಿಸಿದ ಅಡೆತಡೆ ಅಪಾರ. ಹಾಗೆಯೇ ಕ್ರಮವಾಗಿ ವ್ಯಾಪಾರ, ಪತ್ರಿಕೋದ್ಯಮ, ಕೃಷಿ ವೃತ್ತಿಗಳ ನಂತರ ವಕೀಲರಾಗಿ ಈಗ ವರು ನ್ಯಾಯಾಂಗದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಸಾಹಿತ್ಯ ಕೃತಿ ರಚನೆಯಲ್ಲಿ ವಿಶೇಷ ಆಸಕ್ತಿ ಹೊಂದಿರುವ ಮಲ್ಲರು ಕಾದಂಬರಿಗಳು, ಸಣ್ಣ ಕತೆಗಳು, ಲಘು ಪ್ರಬಂಧಗಳ ರಚಯಿತರು.

## ದೇವೇಂದ್ರಕುಮಾರ ಹಕಾರಿ

ಪ್ರತಿಭಾಸ್ಪದ ಕವಿ, ಕಾದಂಬರಿಕಾರ ನಾಟಕಕಾರ, ಕಲೆಗಾರರಾದ ಪ್ರೊ. ದೇವೇಂದ್ರಕುಮಾರ ಹಕಾರಿಯವರ ಪ್ರತಿನುಡಿಯಲ್ಲೂ ಅನುಭಾವ ತುಂಬಿ ದು ತ್ತ ದೆ. ಪಾ ಠ್ಯ ರು ಭಾವಗಳ ಸಮೀಪ ದರ್ಶನದಿಂದ ಅವರ ವಿಚಾರ ಪ್ರಣಾಲಿ ಶಕ್ತಿ-ಯುಟಿದೆ. 'ಚಿನ್ಮಯ'ದ ನಂತರ 'ಆಟ-ಕಾಟ' ಎಂಬುದು ಹಕಾರಿಯವರ ಎರಡನೆಯ ಕವನ ಸಂಕಲನ. ಅವರ 'ಅಮೃತಮತಿ' ಗೀತನಾಟಕ ಕನ್ನಡ ಪ್ರಾಚೀನ ಕಾವ್ಯವೊಂದರ ಪ್ರತಿಸೃಷ್ಟಿಯಾಗಿದೆ.

## ಶ್ರೀ ರಾಘವೇಂದ್ರ ಇಟಗಿ

ಕವಿಸುವ ಗೀಳಿನಿಂದ ಕನ್ನಡಕ್ಕೆ ಅಂಟಿಕೊಂಡ ಶ್ರೀ ಇಟಗಿ ರಾಘವೇಂದ್ರರು ಉಸ್ಮಾನಿಯಾ ವಿಶ್ವವಿದ್ಯಾಲಯದ ಎಂ.ಎ. ಪ್ರಥಮದರ್ಜೆ ಪ್ರಥಮ ಕ್ರಮಾಂಕದವರು. ಆಕಾಶವಾಣಿಯಲ್ಲಿ ವಿವಿಧ ರೀತಿಯಲ್ಲಿ ಸೇವೆ ಸಲ್ಲಿಸುತ್ತಿರುವರು. ವಸುಂಧರಾ ಗೀತೆ, ಕವನ ಕುಸುಮ, ಕ್ಷಿತಿಜ ಕೋದಂಡ, ಬೆಳಕು ತುಂಬಿದ ಬಲ್ಬು, ಸನ್ನದ್ಧ ಭಾರತ, ಬಸವಗೀತ. ಈ ಕವಿ ಪ್ರಕಟಿಸಿದ ಕವನ ಸಂಗ್ರಹಗಳು 'ಸ್ವಸ್ತಿಪಾನ' ನವ್ಯ ಬಗೆಯ ಕವನ ಸಂಗ್ರಹ. ಅವರು ಉತ್ತಮ ಹರಟೆಗಾರರು.

## ಹಾ. ಮಾ. ನಾಯಕರು



ಭಾಷಾಶಾಸ್ತ್ರದಲ್ಲಿ ವಿಶೇಷ ಅಧ್ಯಯನ ಮಾಡಿದ ಡಾ.ಹಾ.ಮಾ. ನಾಯಕರು ಮೈಸೂರಿನ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರು. ವಿಶ್ವಕೋಶದ ಸಂಪಾದಕರು. ಮಲೆನಾಡಿನ ಶಿಶುವಾಗಿರುವ ಅವರಿಗೆ ಅದರ ಬಗೆಗೆ ತುಂಬ ಮಮತೆ ಅವರು ಸಾಹಿತ್ಯ ಸೇವೆ ತೊಡಗಿದರೂ ಕಾವ್ಯದಿಂದ ಇಂದವರು ಚಿಂತನಶೀಲ ಸಾಹಿತಿಗಳು. 'ಸಾಹಿತ್ಯ ಸಲ್ಲಾಪ' ಅವರ ಕೈಯಿಂದ ರೂಪಿತವಾಗುತ್ತಿರುವ ಸಾಪ್ತಾಹಿಕ ಸಾಹಿತ್ಯ ನೋಟ. ಅನೇಕ ಗ್ರಂಥಗಳನ್ನು ಅವರು ಸಂಪಾದಿಸಿದ್ದಾರೆ. ಅವರು ಕತೆಗಾರರೂ ಹೌದು. ವ್ಯಕ್ತಿಚಿತ್ರಕಾರರೂ ಹೌದು

## ಶ್ರೀಮತಿ ಶಾಂತಾದೇವಿ ಕಣವಿ



ಎಳೆತನದಲ್ಲೇ ಸಾಹಿತ್ಯದಲ್ಲಿ ಆಸಕ್ತಿ ಮೂಡಿಸಿಕೊಂಡಿದ್ದ ಶ್ರೀಮತಿ ಶಾಂತಾದೇವಿ ಕಣವಿ ಅವರು ಆಗಲೇ ಸಾಹಿತ್ಯ ಸೃಷ್ಟಿಗೆ ತೊಡಗಿದ್ದರು. ಆಗ ತಂದೆ–ತಾಯಿಗಳ ಪ್ರೋತ್ಸಾಹದೊರತರೆ ಮದುವೆಯ ನಂತರ ಸಾಹಿತಿ ಪತಿಯ ಪ್ರೋತ್ಸಾಹದಿಂದ ಅದು ಮುಂದುವರಿಯಿತು. ಅವರು ಒಳ್ಳೆ ಕಥೆಗಾರ್ತಿ, ಉತ್ತಮ ಹರಟೆಗಾರ್ತಿ; ಗೀತಗಳನ್ನು ಭಾವಪೂರ್ಣವಾಗಿ ಹಾಡಬಲ್ಲರು. ಅವರ ಕಥಾ ಸಂಕಲನ "ಸಂಜೆ ಮಲ್ಲಿಗೆ" ದ್ವಿತೀಯ ಮುದ್ರಣ ಕಂಡಿದೆ.

## ಭಾರತೀಸುತ



ಭಾರತೀಸುತರೆಂದೇ ಪ್ರಸಿದ್ಧಿ ಪಡೆದಿರುವ ಶಾನುಭಾಗರ ಆರ್. ನಾರಾಯಣರಾಯರು ಶ್ರೀ ಪಂಜೆ ಮಂಗೇಶರಾಯರ ಶಿಷ್ಯರು; ಸ್ವಾತಂತ್ರ್ಯ ಹೋರಾಟದಲ್ಲೂ ಭಾಗವಹಿಸಿ ಸೆರೆಮನೆ ವಾಸವನ್ನನುಭವಿಸಿದ ಇವರು ವೈನಾಡಿನ ಕಾಫಿ ತೋಟದಲ್ಲಿ ನೌಕರಿ ಮಾಡಿ ೧೯೪೫ರಿಂದ ಹೈಸ್ಕೂಲಿನಲ್ಲಿ ಅಧ್ಯಾಪನ ವೃತ್ತಿ ಕೈಕೊಂಡರು. ಸಾಹಿತ್ಯ ಕ್ಷೇತ್ರದಲ್ಲಿ ಭಾರತೀಸುತರು ಗೈದ ಸೇವೆ ಗಮನಾರ್ಹವಾದುದು. ಇಲ್ಲಿಯವರೆಗೆ ಇವರು ಇಪ್ಪತ್ತು ಕಾದಂಬರಿಗಳನ್ನು ಎಂಟು ಸಣ್ಣಕಥಾ ಸಂಕಲಗಳನ್ನು ಬರೆದಿದ್ದಾರೆ. ಇದಲ್ಲದೆ ಐದು ಅನುವಾದ ಮತ್ತು ರೂಪಾಂತರಗಳು

## ಶ್ರೀ ಕೃಷ್ಣಮೂರ್ತಿ ಕಿತ್ತೂರ



ಕನ್ನಡವನ್ನು ಮುಖ್ಯ ವಿಷಯವಾಗಿ ತೆಗೆದುಕೊಂಡು ಬಿ.ಎ. ಎಂ.ಎ. ಪರೀಕ್ಷೆಗಳಲ್ಲಿ ಉಚ್ಚಶ್ರೇಣಿಯಲ್ಲಿ ಉತ್ತೀರ್ಣರಾದ ಶ್ರೀ ಕೃಷ್ಣಮೂರ್ತಿ ಕಿತ್ತೂರ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದು ವಿದ್ಯಾರ್ಥಿದೆಸೆಯಿಂದಲೇ ಸೃಜನಶೀಲ ಸಾಹಿತ್ಯದಲ್ಲಿ ಆಸಕ್ತಿ ಹೊಂದಿರುವವರು. ಅವರ ಕಥಾ ಸಂಕಲನ ಹಂಬಲ ೧೯೫೧ ರಲ್ಲಿಯೇ ಪ್ರಕಟವಾಗಿದ್ದು ಅವರ ಹಲವಾರು ಕಥೆಗಳು, ಲಲಿತ ಪ್ರಬಂಧ, ವ್ಯಕ್ತಿಚಿತ್ರ ವಿಮರ್ಶೆಗಳು ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದು "ಗಳಗನಾಥರ ಕಾದಂಬರಿಗಳು" ಅವರ ಇತ್ತೀಚಿನ ಪ್ರಕಟನೆ.

## ಸಾ. ಶಿ. ಮರುಳಯ್ಯ



ನಾಯಕ ಮನೆತನದ ಮರುಳಯ್ಯ ಅವರಿಗೆ ಅಧ್ಯಾಪಕ ವೃತ್ತಿ ವಂಶ ಪಾರಂಪರ್ಯವಾಗಿ ಬಂದುದು ನಾಟಕ ಗೀಳಿನಿಂದಾಗಿ ರಂಗದ ಮೇಲೆ ಇವರು ಅಭಿನಯಿಸಿದುದೂ ಉಂಟು. ಕಾವ್ಯೋಪಾಸಕರಾದ ಮರುಳಯ್ಯನವರು ಪ್ರಹಸನ ಹಾಗು ನಾಟಕಗಳನ್ನೂ ರಚಿಸಿದುದುಂಟು. ೧೯೭೮ರಲ್ಲಿ ರಾಜ್ಯ ಸರಕಾರದ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನೂ ದೊರಕಿಸಿರುವರು ಇದೇ ವರ್ಷ ಡಾಕ್ಟರೇಟ್ ಪಡೆದ ಅವರಿಗೆ ವಿಮರ್ಶೆಯಲ್ಲಿ ವಿಶೇಷ ಆಸಕ್ತಿ.

## ಸುಂದರ ನಾಡಕರ್ಣಿ



ಬಂಕಿಕೋಡ್ಲದ ಸುಂದರ ನಾಡಕರ್ಣಿ ಗುಜರಾತದ ಆನಂದದ ಕಾಲೇಜದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರು. ಇಂಗ್ಲಿಷ್ ಸಾಹಿತ್ಯವನ್ನೇ ಪ್ರಾಮುಖ್ಯವಾಗಿ ಅಭ್ಯಸಿಸಿದವರಾದರೂ ಕನ್ನಡದ ಉತ್ತಮ ಕವಿಗಳು. ಕಾದಂಬರಿಕಾರರು. ಅವರ ಒಂದು ಕವನ ಸಂಕಲನ 'ಮಥನ' ಈಗಾಗಲೇ ಪ್ರಕಟವಾಗಿದ್ದು ಇನ್ನೊಂದು ಇಷ್ಟರಲ್ಲಿ ಪ್ರಕಟವಾಗಲಿದೆ. ಅವರ ಕಾದಂಬರಿ 'ಮೋಹಿತರು' ಈಚೆಗೆ ಪ್ರಕಟವಾಗಿದೆ. ಅನೇಕ ಕಥೆಗಳನ್ನು ಬರೆದಿದ್ದಾರೆ. ಯಕ್ಷಗಾನ ನೃತ್ಯ, ಸಂಗೀತ, ಚಿತ್ರಕಲೆ ನಾಟಕಗಳನ್ನು ಆಡುವುದು, ಆಡಿಸುವುದು ಇವರ ಅಭಿರುಚಿಗಳು.



## ರಾವಬಹಾದ್ದೂರ

'ರಾವಬಹಾದ್ದೂರ'ರೆಂದೇ ಖ್ಯಾತ ನಾಮ.ರಾಗಿರುವ ಶ್ರೀ ರಾಮಚಂದ್ರ ಭೀಮರಾವ ಕುಲಕರ್ಣಿಯವರು ಕವನ ವೊಂದನ್ನುಳಿದು ಬಹುತೇಕವಾಗಿ ಸಾಹಿತ್ಯದ ಎಲ್ಲ ಅಂಗಗಳಲ್ಲೂ ಕೈಯಾಡಿಸಿದವರು. ಅವರ 'ಗ್ರಾಮಾಯಣ' ಕಾದಂಬರಿ ಅವರಿಗೆ ತುಂಬ ಪ್ರಸಿದ್ಧಿ ತಂದು ಕೊಟ್ಟಿತು. 'ಮನೆ ಸುಟ್ಟ ಕಿಡಿ ಮನಬೆಳಗಿತು' (ಸಣ್ಣಕತೆಗಳ ಸಂಕಲನ) 'ಮರೆಯಾದ ನೆನಪುಗಳು' (ಹರಟೆ), 'ಕರ್ಮಯೋಗಿ ಹಣಮಂತರಾವ ಕೌಜಲಗಿ (ಜೀವನ ಚರಿತ್ರೆ) ಹಾಗು 'ಕರ ನಿರಾಕರಣೆಯು ವೀರ ಕಥೆ(ಇತಿಹಾಸ) ರಾವಬಹಾದ್ದೂರರ ಪ್ರಾರಂಭಿಕ ಸಾಹಿತ್ಯ ಕೃತಿಗಳು ಇತ್ತೀಚೆಗೆ ಅವರ ಅನೇಕ ಕಾದಂಬರಿಗಳು ಹಾಗು ಹರಟೆ–ಲೇಖನಗಳು ಪ್ರಕಟವಾಗಿವೆ.

## ಎಚ್.ಎನ್. ರಂಗರಾವ



ಎಚ್. ಎನ್. ರಂಗರಾವ್ ಬಾಲ್ಯದಲ್ಲೆ ಸಾಹಿತ್ಯದತ್ತ ಆಕರ್ಷಿತರಾದವರು. ಕಾಲೇಜಿನಲ್ಲಿದ್ದಾಗ ಕೈಬರಹದ ಪತ್ರಿಕೆಯ ಸಂಪಾದನೆಯನ್ನೂ ಅವರು ಮಾಡಿದ್ದುಂಟು. ಅವರ ಅನೇಕ ಲೇಖಗಳು ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಅವರು ಕರ್ಮವೀರದ ದಿಲ್ಲಿಯ ಪ್ರತಿನಿಧಿಗಳು.

## ಕೈಪ್ರು ಲಕ್ಷ್ಮೀನರಸಿಂಹ ಶಾಸ್ತ್ರಿ

ಶಾಸ್ತ್ರಿಗಳು ಕೈವಾರದಲ್ಲಿ ಶಿಕ್ಷಕರಾದರೂ ತಮ್ಮ ಲೇಖಗಳಿಂದ ಕರ್ನಾಟಕದಲ್ಲೆಲ್ಲ ಪರಿಚಿತರು. ಅವರ ಬೋಧಸುಧಾ, ಕಥಾವಳಿ, ಮರ್ಯಾದೆ ರಾಮಣ್ಣನ ಕತೆಗಳು ಹಿರಿ-ಕಿರಿಯರ ಮೆಚ್ಚಿಗೆಗಳಿಸಿವೆ. ಅವರ ಶೈಲಿ ಸರಳ ಕಥೆಗಳು ಸುಂದರ ಹಾಗು ನೀತಿಬೋಧಕ. ಕನ್ನಡ ಸಂಸ್ಕೃತಗಳಲ್ಲಿ ಬಲ್ಲಿದರಾದ ಶಾಸ್ತ್ರಿಗಳು ಸರಸ ಹಾಗು ವಿಮರ್ಶಾತ್ಮಕ ಅನೇಕ



ಲೇಖಗಳನ್ನು ಬರೆದಿದ್ದಾರೆ. ಅವರು ಕಾದಂಬರಿಕಾರರೂ ಅಹುದು.



ಮಲೆನಾಡಿನ ವಾಸ್ತು ಶಿಲ್ಪ ಕಲಾವೈಭವ, ಕವಿ ಕಂಡ ಮಲೆನಾಡು. ಕುವೆಂಪು ಕಂಡ ಮಲೆನಾಡು. ಮಲೆನಾಡ ಜಾನಪದ ಸಾಹಿತ್ಯದ ಮುಖಗಳು, ಮುದವನೀಡಿತು, ಮಲೆನಾಡು ಲೇಖನಗಳಲ್ಲಿ ಪ್ರಕಟವಾದ ಛಾಯಾಚಿತ್ರಗಳು: ಶ್ರೀ ಬಿ. ಕೇಸರಸಿಂಗ ಅವರವು.

## ಜಿ. ವಿ. ಕುಲಕರ್ಣಿ

ಮುಂಬಯಿಯ ಸರ್.ಎಂ.ವಿ. ಕಾಲೇಜಿನಲ್ಲಿ ಪ್ರೊಫೆಸರರಾಗಿರುವ ಜಿ.ವಿ ಕುಲಕರ್ಣಿ ಸಾಹಿತ್ಯದ ವಿವಿಧ ಅಂಗಗಳಲ್ಲಿ ವಿಶೇಷ ಆಸಕ್ತಿಯಿರುವವರು. ಇವರು 'ಮಧುಸಂಚಯ' (ಕವನ ಸಂಗ್ರಹ) ಹಾಗು 'ಹುಚ್ಚ-ಹುಚ್ಚಿ' (ಪ್ರಣಯಗೀತ ಸಂಗ್ರಹ)ಗಳೊಂದಿಗೆ 'ಧೃತರಾಷ್ಟ್ರ ಸಂತಾನ'ವೆಂಬ ಕಥಾಸಂಗ್ರಹವನ್ನೂ 'ಪ್ರಜಾಪ್ರಭುತ್ವದ' ಹೆಸರಿನಲ್ಲಿ ನಾಲ್ಕು ಏಕಾಂಕಗಳನ್ನೂ ರಚಿಸಿದ್ದಾರೆ.

## ಎಸ್. ಎಸ್. ಬ್ಯಾತನಾಳ

ಮುಂಬೈ ಪಾರ್ಲೆ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ಎಸ್. ಎಸ್. ಬ್ಯಾತನಾಳರು ಒಳ್ಳೆಯ ಲೇಖಕರು, ವಿದ್ವಾಂಸರು. ವಿಮರ್ಶಾತ್ಮಕ ಹಾಗು ಸಂಶೋಧನಾತ್ಮಕ ಲೇಖನಗಳನ್ನು ಬರೆಯುವದರಲ್ಲಿ ಅವರಿಗೆ ಹೆಚ್ಚು ಅಭಿರುಚಿ ಬ್ಯಾತನಾಳರು ಕನ್ನಡ ಇಂಗ್ಲೀಷುಗಳಲ್ಲದೆ ಅನೇಕ ಭಾರತೀಯ ಭಾಷೆಗಳನ್ನು ಬಲ್ಲರು. ಬೇರೆ ಬೇರೆ ಭಾಷೆಗಳಿಂದ ಅವರು ಕನ್ನಡಕ್ಕೆ ಲೇಖನ ಮೊದಲಾದವನ್ನು ಅನುವಾದಿಸಿದ್ದಾರೆ.



## ಸಿದ್ದಯ್ಯ ಪುರಾಣಿಕ



ಶ್ರೀ ಸಿದ್ದಯ್ಯ ಪುರಾಣಿಕರು ತಮ್ಮ 'ಕಾವ್ಯಾನಂದ ಕಾವ್ಯನಾಮ ಅನ್ವರ್ಥವಾಗುವಂತೆ, ಕಾವ್ಯಸಂಗ್ರಹ ಹೊರತಂದಿದ್ದಾರೆ. ಸಾಹಿತಿ ಸ್ನೇಹಿತರ ಪ್ರೇರಣೆ-ಪ್ರೋತ್ಸಾಹದಿಂದ ಪ್ರಕಟಿತ ಇವರ 'ಜಲಪಾತ', ಕರುಣಾ ಶ್ರಾವಣ, 'ವಿಕಾಸವಾಣಿ ಹಾಗು 'ಮಾನಸ ಸರೋವರ' ಕವನ ಸಂಗ್ರಹಗಳು ಅಪಾರ ಜನ ಮನ್ನಣೆಗಳಿಸಿದವು. 'ಕಥಾಮಂಜರಿ ಹಾಗು 'ತುಷಾರಹಾರಿ' ಎಂಬ ಕಥಾ ಸಂಗ್ರಹಗಳಿಗೂ ಆತ್ಮಾರ್ಪಣ ನಾಟಕಕ್ಕೂ ಕೃತ್ರ್ಯವಾದ ಕಾವ್ಯಾನಂದರ ಸಾಹಿತ್ಯ ಸೇವೆತಿಕ್ಸಯ

## ಗೀತಾ ಕುಲಕರ್ಣಿ



ಗೀತಾ ಕುಲಕರ್ಣಿಯವರು ಕನ್ನಡದ ಉತ್ತಮ ಕಥೆಗಾರ್ತಿ ಕಾದಂಬರಿಗಾರತಿ. ಸುತ್ತಮುತ್ತಲು ಕಾಣಸುವ ವ್ಯಕ್ತಿಘಟನೆಗಳು ಅವರ ಲೇಖನಿಯ ವಸ್ತು.ಯಥಾರ್ಥ ಚಿತ್ರಣದಲ್ಲಿ ಅವರು ಹೆಸರುವಾಸಿ. ಅವರ ಭಾಷೆ ಸರಳ ಸುಂದರ. ಮೂರು ಕಾದಂಬರಿ ಮೂರು ಕಥಾ ಸಂಕಲನಗಳ ಲೇಖಿಕೆಯರಾದ ಅವರು ಇವಲ್ಲದೆ ಇನ್ನನೇಕ ಕಥೆ ಲೇಖನ ಬರೆದಿರುವರು.

## ಟಿ. ಮಹಾಬಳೇಶ್ವರ ಭಟ್ಟ



ಕಳೆದೆರಡು ದಶಕಗಳಿಂದ ಕನ್ನಡ ಸಾಹಿತ್ಯ ಹಾಗು ಸಮಾಜ ಸೇವೆಯನ್ನು ಅತ್ಯಂತ ಶ್ರದ್ಧಾಪೂರ್ವಕ ಮಾಡುತ್ತಿರುವ ಸಾಗರರ ಶ್ರೀ ಟಿ. ಮಹಾಬಳೇಶ್ವರಭಟ್ಟರು ಕವಿಗಳು, ವಿಮರ್ಶಕರು: ಕೃಷಿಗಾರರು ಕೂಡ. ಅವರ ಕೃತಿಗಳಲ್ಲಿ, ನಿತ್ಯ ಜೀವನದ ವಾಸ್ತವ ಚಿತ್ರಣವಿರುವುದು. ಗದ್ಯಕ್ಕಿಂತ ಪದ್ಯ ಹಾಗು ವಿಮರ್ಶೆಯಲ್ಲಿಯೇ ಭಟ್ಟರಿಗೆ ಹೆಚ್ಚು ಆಸಕ್ತಿ. ಸಾಹಿತ್ಯದಷ್ಟೇ ರಾಜಕಾರಣದಲ್ಲೂ ಆಸಕ್ತಿ.

## ಜಯತೀರ್ಥ ರಾಜಪುರೋಹಿತ



ಈಗಾಗಲೇ ಮಾಸಪತ್ರಿಕೆ ವಾರ ಪತ್ರಿಕೆಗಳಲ್ಲಿ ಪ್ರಕಟಗೊಂಡ ವಿವಿಧ ಬಗೆಯ ಸಾಹಿತ್ಯ ಕೃತಿಗಳ ಮೂಲಕ ಜನಪ್ರಿಯರಾಗಿರುವ ಶ್ರೀ ಜಯತೀರ್ಥ ರಾಜಪುರೋಹಿತರು ಆಡಳಿತಾಧಿಕಾರಿ. ಸಣ್ಣ ಕತೆಗಳಿಂದ ಸಾಹಿತ್ಯ ಕೃತಿಯಾರಂಭಿಸಿದರು. ಇದುವರೆಗೆ ಪ್ರಕಟಿಸಲ್ಪಟ್ಟ ಅವರ ಕೃತಿಗಳಲ್ಲಿ ಕಥಾಸಂಕಲನಗಳು: ಕಾದಂಬರಿಗಳಿವೆ 'ಜಗನ್ನಾಥದಾಸರು', 'ವ್ಯಾಸಯೋಗಿರಾಜರು' ಹಾಗೂ 'ಜಯ-ಬಂಗ್ಲಾ' ಏಕಾಂಕಗಳಲ್ಲದೆ 'ತುಂಗೆಯಂಗಳದಲ್ಲಿ' ಗೀತರೂಪಕ ರಚಿಸಿದ್ದಾರೆ,

## ವಿ. ವಿ. ನರಸಿಂಹಮೂರ್ತಿ



ಮೈಸೂರಿನ ಮಾನಸಗಂಗೋತ್ರಿಯಲ್ಲಿ ರೀಡರ್ ಆಗಿರುವ ಡಾ. ನರಸಿಂಹ ಮೂರ್ತಿಯವರು ಆಂಧ್ರ ವಿದ್ಯಾಲಯದಲ್ಲಿ ಪುರಾತತ್ವ ವಿಭಾಗದ ಉಪನ್ಯಾಸಕ ಹಾಗು ಹಾರ್ವರ್ಡ್ ವಿ.ವಿ. ದಲ್ಲಿ ಸಂಶೋಧಕರಾಗಿಯೂ ಕಾರ್ಯ ನಿರ್ವಹಿಸಿದ್ದುಂಟು. ನರಸಿಂಹ ಮೂರ್ತಿಯವರ 'ಕನ್ನಡ ಲಿಪಿಯ ಉಗಮ ಮತ್ತು ವಿಕಾಸ'ಕ್ಕೆ ಸಾಹಿತ್ಯ ಅಕಾಡಮಿಯ ಪ್ರಥಮ ಬಹುಮಾನ ದೊರೆತಿದೆ. ಅವರ ಇತರ ಸಾಹಿತ್ಯ ಕೃತಿಗಳೆಂದರೆ ಕರ್ನಾಟಕದ ಸೇವುಣರ ಇತಿಹಾಸ ಸಾಂಸ್ಕೃತಿಕ ಬೃಹದ್ಭಾರತ, ಭಾರತೀಯ ನಾಣ್ಯಗಳು. ಅವರ ವಿಶೇಷ ಅಧ್ಯಯನ ಕರ್ನಾಟಕದ ಇತಿಹಾಸ, ವಾಸ್ತು, ಶಿಲ್ಪಕಲೆ ಮತ್ತು ಪುರಾತತ್ವ.

## ಎನ್. ಬಿ. ಮೊಗಸಾಲೆ



ಎನ್.ಬಿ. ಮೊಗಸಾಲೆ, ನಾ. ಮೊಗಸಾಲೆ ಇವು ಮೊಗಸಾಲೆ ನಾರಾಯಣ ಭಟ್ಟರ ಕಾವ್ಯನಾಮಗಳು. ವೃತ್ತಿಯಿಂದ ಅವರು ವೈದ್ಯರು. ಉದಯೋನ್ಮುಖ ಸಾಹಿತಿಗಳೆನಿಸಿದರೂ ಭಟ್ಟರು ಈಗಾಗಲೇ "ಮಣ್ಣಿನ ಮಕ್ಕಳು 'ಕನಸಿನ ಬಳ್ಳಿ', 'ಅನಂತ' ಹಾಗು ಪ್ರವಾಹ' ಎಂಬ ನಾಲ್ಕು ಕಾದಂಬರಿಗಳನ್ನೂ, 'ಆಶಾಂಕುರ', 'ಹಸಿರು ಬಿಸಿಲು' ಗಳೆಂಬ ಕಥಾಸಂಗ್ರಹಗಳನ್ನೂ ಜೊತೆಗೆ 'ಕುರೂರವ್' ಗೀತಾ ನಾಟಕವನ್ನೂ ರಚಿಸಿರುವರು. ಇತ್ತೀಚೆ ಅವರ ಕವನಗಳು ಬೆಳಕುಕಾಣುತ್ತಲೂ ಇವೆ.









### ಸಂತೋಷಕುಮಾರ ಗುಲ್ವಾಡಿ

ಸಂತೋಷಕುಮಾರರು ಹೆಸರಿನಂತೆ ಮಾತಿನಲ್ಲೂ ಸಂತೋಷಪ್ರದರು. ಸ್ನೇಹ ಶೀಲರು. ಅವರ ಕಥೆ ಲೇಖಗಳು ಕನ್ನಡ ಇಂಗ್ಲೀಷ ಭಾಷೆಯ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಹಿಂದಿ ಮರಾಠಿಗೆ ಅನುವಾದ ಹೊಂದಿವೆ. ಲಲಿತ ಕಲೆ ಹಾಗು ಸಾಹಿತ್ಯದಲ್ಲಿ ಅವರಿಗೆ ಬಹಳಷ್ಟು ಅಭಿರುಚಿ. ಪತ್ರಿಕೋದ್ಯಮದಲ್ಲಿ ಪದವೀಧರರು ಇಪ್ಪರಲ್ಲಿ, ತಮ್ಮೆರಡು ಪುಸ್ತಕಗಳನ್ನು ಹೊರಗೆ ತರಲಿದ್ದಾರೆ.

### ಅರವಿಂದ ನಾಡಕರ್ಣಿ

ವೃತ್ತಿಯಿಂದ ಕಾಯ್ದೆ ಸಲಹೆಗಾರರಾದ ಶ್ರೀ ಅರವಿಂದ ನಾಡಕರ್ಣಿ ಕನ್ನಡದ ಭಕ್ತರು; ಸಾಹಿತ ಉಪಾಸಕರು. ಮುಂಬಯಿಯ ಸಾಹಿತ ಚಟುವಟಿಕೆಗಳಲ್ಲಿ ಅವರು ಸದಾ ಪಾತ್ರವಹಿಸುತ್ತಾರೆ. ಕನ್ನಡದ ಉತ್ತಮ ಕವಿಗಳು. ಅನೇಕ ಕವನಗಳನ್ನು ರಚಿಸಿದ್ದಾರೆ.

### ಶ್ರೀನಿವಾಸ ಕುಲಕರ್ಣಿ

ಕನ್ನಡ ಎಂ.ಎ. ಪದವೀಧರರಾದ ಶ್ರೀನಿವಾಸ ಕುಲಕರ್ಣಿಯವರು ವಿದ್ಯಾರ್ಥಿದೆಸೆಯಲ್ಲಿಯೇ ಸಾಹಿತ್ಯ ಸೇವೆ ಪ್ರಾರಂಭಿಸಿದರು. ಧಾರವಾಡ ಬಾನುಲಿಯಲ್ಲಿ ಪ್ರಸಾರ ನಿರ್ವಹಣಾಧಿಕಾರಿಯಾಗಿದ್ದಾರೆ. ಅವರ ಕಥಾಸಂಕಲನ 'ಬಾಳು ನಂಜು ಬದುಕೆ ನಂಜು? ಈಗಾಗಲೇ ಪ್ರಕಟವಾಗಿದೆ. ಅವರ ಕವನ ಸಂಗ್ರಹ 'ಕೆಥಾರ್ಸಿಸ್' ಈಚೆಗೆ ಪ್ರಕಟವಾಗಿದೆ.

### ರಮಣ ಅಂಬಲಪಾಡಿ

ರಮಣ ಅಂಬಲಪಾಡಿ ಎಂಬ ಹೆಸರಿನಿಂದ ಓದುಗರಿಗೆ ಪರಿಚಿತವಾಗಿರುವ ಎ. ವೆಂಕಟರಮಣ ಉಪಾಧ್ಯಾಯ ಉದಯೋನ್ಮುಖ ಸಾಹಿತಿಗಳು. ಜೀವವಿಮಾ ಕಾರ್ಪೊರೇಶನ್ ಉಡುಪಿ ಡಿವಿಜನಲ್ ಆಫೀಸಿನಲ್ಲಿ ಕೆಲಸಮಾಡುತ್ತಿರುವ ಇವರ 'ಕನಸೊ ನನಸೊ' ಜನಪ್ರಿಯ ಕೃತಿ.

## ಕೆ. ಎಲ್. ಕಾಮತ



ಕರ್ನಾಟಕ ಕಾಲೇಜಿನಲ್ಲಿ ಶಿಕ್ಷಣ ಪೂರೈಸಿ, ಎರಡು ವರ್ಷ ಶಿಕ್ಷಕನಾಗಿ ಕೆಲಸ ಮಾಡಿದ ಕಾಮತರು ಅಮೇರಿಕೆಯ ನ್ಯೂಯಾರ್ಕ್ ವಿ.ವಿ.ದ ಶಿಷ್ಯವೇತನ ಪಡೆದು ಡಾಕ್ಟರೇಟ್ ಗಳಿಸಿದರು. ರಾಜಸ್ಥಾನದ ಉದಯಪುರ ಕೃಷಿ ವಿಶ್ವ ವಿದ್ಯಾಲಯದಲ್ಲಿ ಅಧ್ಯಾಪಕರಾಗಿ ಕಾರ್ಯ ನಿರ್ವಹಿಸಿದ ನಂತರ ಇವರು ಪ್ಲಾಸಿ (ಪ. ಬಂಗಾಲ)ಯಲ್ಲಿ ಸಂಶೋಧನಾ ಕೇಂದ್ರವೊಂದರ ಮೇಲ್ವಿಚಾರಕರಾಗಿದ್ದರು. ಅದಕ್ಕೆ ರಾಜಿನಾಮೆಯಿತ್ತು ಸದ್ಯ ಸ್ವತಂತ್ರವಾಗಿ ವೈಜ್ಞಾನಿಕ ಛಾಯಾಗ್ರಹಣ ಕೈಕೊಂಡಿದ್ದಾರೆ. 'ನಾನೂ ಅಮೇರಿಕೆಗೆ ಹೋಗಿದ್ದೆ' ಎಂಬ ಪ್ರವಾಸ ಕಥನದಿಂದ ಅಪಾರ ಜನಪ್ರಿಯತೆ ಪಡೆದ ಕಾಮತರು 'ಭಗ್ನ ಸ್ವಪ್ನ ಮೌಜು' ಕಾದಂಬರಿಯನ್ನೂ ರಚಿಸಿದ್ದಾರೆ. ವೈಜ್ಞಾನಿಕ ವಿಚಾರಪರ ಲೇಖನ ತುಂಬ ಪ್ರಕಟವಾಗಿವೆ.



## ಪಂಚಾಕ್ಷರಿ ಹಿರೇಮಠ

ಪಂಚಾಕ್ಷರಿ ಹಿರೇಮಠರು ಕನ್ನಡದ ಉತ್ಸಾಹಿ ತರುಣ ಸಾಹಿತಿಗಳು. ಕಥೆ, ಕಾದಂಬರಿ, ಕವನ, ವಿಮರ್ಶೆ ಅನುವಾದ ಮೊದಲಾದ ಎಲ್ಲ ರಂಗಗಳಲ್ಲಿ ಅವರು ಮಹತ್ವಪೂರ್ಣವಾದ ಕೆಲಸ ಮಾಡಿದ್ದಾರೆ. ಚೈತ್ಯಾಕ್ಷಿ



ನೀ ರುದ್ರನಾಗು ಬಯಲ ಬಾನಿನಲ್ಲಿ ಗಾಳಿ ಗಂಧ ಅವರ ಕವನ ಸಂಕಲನಗಳು ಹಿಂದಿ ಉರ್ದು ಭಾಷೆಗಳಲ್ಲಿ ಪರಿಣತರಾದ ಹಿರೇಮಠರು ಆ ಭಾಷೆಗಳಲ್ಲಿಯ ಅನೇಕ ಕಥೆ ಕಾದಂಬರಿಗಳನ್ನು ಕನ್ನಡಕ್ಕೆ ನೀಡಿದ್ದಾರೆ.

## ಶ್ರೀನಿವಾಸ ಉಡುಪ



ಶ್ರೀನಿವಾಸ ಉಡುಪರು ಉತ್ಸಾಹಿ ತರುಣ ಲೇಖಕರು. ಮೂವತ್ತು ಕಾದಂಬರಿಗಳನ್ನು ನೂರಕ್ಕೂ ಹೆಚ್ಚು ಕಥೆಗಳನ್ನು ಅವರು ಬರೆದಿದ್ದಾರೆ. ಅವರ ಅನೇಕ ಲೇಖನಗಳು ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಉಡುಪರು ಅನೇಕ ಕಾದಂಬರಿ ಬರೆದಿದ್ದು 'ಒಲಿದು ಬಂದವಳು' ೧೯೬೬ ರಲ್ಲಿ ಮೈಸೂರು ರಾಜ್ಯ ಸಾಹಿತ್ಯ ಅಕೆಡೆಮಿಯು ದ್ವಿತೀಯ ಪ್ರಶಸ್ತಿ ಪಡೆದಿದೆ.

## ಎಂ ಗೋವಿಂದ



ವೈದ್ಯಕೀಯವೃತ್ತಿಯುವರಾದರೂ ಸಾಹಿತ್ಯವು ಅವರ ಹವ್ಯಾಸ. ಚುಟುಕುಗಳಿಂದ ಸಾಹಿತ್ಯ ರಂಗವನ್ನು ಪ್ರವೇಶಿಸಿದ ಎಂ. ಗೋವಿಂದರು ಈಗಾಗಲೇ 'ಕುರ್‌ಮಾಪಾ' ಕವನ ಸಂಕಲನವನ್ನು ಪ್ರಕಟಿಸಿದ್ದಾರೆ. ಅವರ ಅನೇಕ ಲೇಖ ಸಂದರ್ಶನ ನಿರೂಪಣೆಗಳು ಕರ್ಮವೀರದ ಓದುಗರನ್ನು ರಂಜಿಸಿವೆ.

## ಎ. ಎಸ್. ವೇಣುಗೋಪಾಲರಾವ

ಶಿವಮೊಗ್ಗೆಯಲ್ಲಿ ಕನ್ನಡ ಉಪನ್ಯಾಸಕರಾಗಿರುವ ಶ್ರೀ. ಎ.ಎಸ್. ವೇಣುಗೋಪಾಲ ರಾಯರಿಗೆ ಲಲಿತ ಪ್ರಬಂಧಗಳತ್ತ ವಿಶೇಷ ಒಲವು. 'ಬಾಳು ಬಂಗಾರ'ವೆಂಬ ಲಲಿತ ಪ್ರಬಂಧ ಸಂಕಲನದ ಜೊತೆ ಇವರು 'ಆಲದ



ಮರ' ವೆಂಬ ಕಾದಂಬರಿಯನ್ನೂ ಹೊರತಂದಿರುವರು. ಅಲ್ಲದೆ 'ಸಣ್ಣ ಕತೆಗಳು' ಅಚ್ಚಿನಲ್ಲಿದೆ.

# ಕರ್ಮವೀರ
## ದೀಪಾವಳಿ ಸಂಚಿಕೆ

೧೯೭೧



ಸಂಪಾದಕರು :

**ರಂಗನಾಥ ದಿವಾಕರ**

ಸಹಾಯಕ ಸಂಪಾದಕರು :

**ಎಸ್. ವಿ. ಪಾಟೀಲ**


# ನಮ್ಮ ನುಡಿ

ಪ್ರಿಯ ಓದುಗ,

ನಮನಗಳು. ನಿಮಗಾಗಿ, ನಿಮ್ಮ ಕುಟುಂಬದವರಿಗಾಗಿ ಈ ದೀಪಾವಳಿಯು ಹರುಷ-ನಲಿವುಗಳ ಸಂದರ್ಭದಲ್ಲಿ ಅದನ್ನು ವರ್ಧಿಸಲು ಇದಿಗೊ ಈ ನಮ್ಮ ದೀಪಾವಳಿ ಸಂಚಿಕೆಯನ್ನು ನಿಮಗೆ ಅರ್ಪಿಸುತ್ತಿದ್ದೇವೆ.

ಈ ಸಲ ನಿಮಗೆ ನಮ್ಮ ರಾಜ್ಯದ ಭಾಗ್ಯನಿಧಿ ಎನಿಸಿದ, ಸಂಪತ್‌ಸಮೃದ್ಧಿಯಿಂದ ಕೂಡಿದ ಮಲೆಗಳಿಂದ, ಮಳೆಯಿಂದ ಆವೃತವಾದ, ನಿಸರ್ಗ ಸೌಂದರ್ಯದಿಂದ ಶೋಭಿಸುವ, ವೃಕ್ಷಗಳ ರಾಜಿಯಿಂದ ದಟ್ಟವಾದ ಅರಣ್ಯದಿಂದ ಕೂಡಿರುವ, ನೋಡಬನ್ನಿ ಎಂದು ನಿಮ್ಮನ್ನು ಕೈ ಮಾಡಿ ಕರೆದು ಮುದಗೊಳಿಸುವ ಮಲೆನಾಡಿನ ಪರಿಚಯ ಮಾಡಿಕೊಡುವ ವಿಶೇಷ ಶಬ್ದಚಿತ್ರ ಕರ್ಮವೀರನ ವಿಶೇಷಕೊಡುಗೆಯಾಗಿ ಬಂದಿದೆ. ಮಲೆನಾಡಿನ ವಿಶೇಷ ಪರಿಚಯವಿರುವ ಅನುಭವ ಹೊಂದಿರುವ ಲೇಖಕರೇ ಈ ಶಬ್ದಚಿತ್ರವನ್ನು ಕಣ್ಣಿಗೆ ಕಟ್ಟುವಂತೆ ರೂಪಿಸಲು ನಮಗೆ ನೆರವಾಗಿದ್ದಾರೆ. ಹೆಸರಾಂತ ಛಾಯಾಚಿತ್ರಗ್ರಾಹಕ ಶ್ರೀ ಬಿ. ಕೇಸರಸಿಂಗ ಹಾಗೂ ಉತ್ಸಾಹಿ ಲೇಖಕ – ಛಾಯಾಚಿತ್ರಗ್ರಾಹಕ ಡಾ. ಕೃಷ್ಣಾನಂದ ಕಾಮತ ಮಲೆನಾಡನ್ನು ಚಿತ್ರಗಳಲ್ಲಿ ಸೆರೆಹಿಡಿದು ಕೊಡುವ ಸಾಹಸ ಮಾಡಿದ್ದಾರೆ. ಸಾಧ್ಯವಿದ್ದ ಮಟ್ಟಿಗೂ ಮಲೆನಾಡಿನ ಸರ್ವರೀತಿಯ ಪರಿಚಯವನ್ನು ಮಾಡಿಕೊಡಲು ನಾವು ಇಲ್ಲಿ ಯತ್ನಿಸಿದ್ದೇವಾದರೂ ಲೋಪದೋಷಗಳಿರಬಹುದು, ಅವನ್ನು ನೀವು ಮನ್ನಿಸಬೇಕು.

ಲಲಿತ ಸಾಹಿತ್ಯದ ಇತರ ಅಂಶಗಳು – ಕಥೆಗಳು, ಹರಟೆಗಳು, ಕವನಗಳು. ಅಲ್ಲದೇ ಒಂದು ಗೀತನಾಟಕವನ್ನು ಈ ಸಂಚಿಕೆ ಒಳಗೊಂಡಿದೆ. ಉದಯೋನ್ಮುಖ ಕಾದಂಬರಿಕಾರ ಡಾ. ಮೊಗಸಾಲೆಯವರ ಕಿರುಕಾದಂಬರಿ ಇದೆ. ರಸಿಕರಿಗಾಗಿ ಚಿತ್ರ ಪ್ರಪಂಚವಿದೆ. ಮುಂದಿನ ವರುಷಕ್ಕಾಗಿ ನಿಮ್ಮ ಆಗುಹೋಗುಗಳನ್ನು ಅರಿತುಕೊಳ್ಳಲು ವರ್ಷ ಭವಿಷ್ಯ ಇದೆ. ಜೊತೆಗೆ ವ್ಯಂಜನವೂ ಬೇಕಲ್ಲವೆ? ನಾಡಿನ ಹೆಸರಾಂತ ವ್ಯಂಗ್ಯಚಿತ್ರಕಾರರಾದ ಡಿರಿಖಿ ಹಾಗೂ ಕೆ. ಆರ್ ಸ್ವಾಮಿ ನಿಮಗೆ ಅಂಥ ವ್ಯಂಜನ ಒದಗಿಸಿದ್ದಾರೆ.

ಈ ಸಂಚಿಕೆ ಸರ್ವಾಂಗಸುಂದರವಾಗುವಂತೆ ಓದುಗರಿಗೆ ಮುದವ ನೀಡುವಂತೆ ಮಾಡುವಲ್ಲಿ ನಮ್ಮ ಲೇಖಕರ ಬಳಗ, ಕಲಾವಿದರ ಬಳಗ, ಛಾಯಾಚಿತ್ರಗ್ರಾಹಕ ಬಳಗ, ತುಂಬ ನೆರವು ನೀಡಿದ್ದಾರೆ; ನಮ್ಮ ಸಹಕಾರಿಗಳು ಅವಿಶ್ರಾಂತವಾಗಿ ಪರಿಶ್ರಮಿಸಿದ್ದಾರೆ. ಜಾಹೀರಾತುದಾರರು ತಮ್ಮ ಜಾಹೀರಾತುಗಳನ್ನು ನೀಡಿ ಎಂದಿನಂತೆ ಸಹಕಾರ ನೀಡಿದ್ದಾರೆ. ಇವರೆಲ್ಲರಿಗೂ ನಿಮಗೂ ನಮ್ಮ ಅನಂತ ವಂದನೆಗಳು.

ಈ ದೀಪಾವಳಿ ನಿಮಗೆ, ನಮಗೆ ನಾಡಿಗೆ ಶುಭವುಂಟುಮಾಡಲಿ, ಹರುಷ ತರಲಿ ಎಂದು ಹಾರೈಸಿ ಈ ಸಂಚಿಕೆಯನ್ನು ನಿಮ್ಮ ಕೈಯಲ್ಲಿರಿಸುತ್ತೇವೆ.





ದೇಹದ ಅಧಿಷ್ಠಾನ ಕರ್ನಾಟಕ. ಮಾನಸಿಕ ಸಂಸ್ಕಾರಗಳ ಸಾಧನ ಹಾಗು ಮೂಲ ಅಧಿಷ್ಠಾನ ಕನ್ನಡ ನುಡಿ. ಇವೆಲ್ಲವುಗಳಿಗೆ ಸಮನ್ವಯ ಕೇಂದ್ರವಾದ ಜೀವಾತ್ಮನ ಅಧಿಷ್ಠಾನ ಯಾವುದು ?

# ನಾನೊಬ್ಬ ಕರ್ನಾಟಕಸ್ಥ

ರಂಗನಾಥ ದಿವಾಕರ

ನಾನೊಬ್ಬ ಕರ್ನಾಟಕಸ್ಥ: ಕರ್ನಾಟಕ ಇದು ನನ್ನ ಅಧಿಷ್ಠಾನ. ಅಧಿಷ್ಠಾನವೆಂದರೆ ಸ್ಥಿರವಾಗಿದ್ದುಕೊಂಡು ದೃಢವಾಗಿ ನೆಲೆಸಿ ಕಾರ್ಯಮಾಡುವ ಕ್ಷೇತ್ರ. ಇದು ಮೂಲ – ಮುಖ್ಯ ಕಾರ್ಯಕ್ಷೇತ್ರವೆನಿಸಿದರೂ ಕರ್ನಾಟಕದ ಹೊರಗೆ ಭಾರತದಲ್ಲಿ, ಬೇರೆ ದೇಶ ದೇಶಾಂತರಗಳಲ್ಲಿ ಕಾರ್ಯಮಾಡಲಾಗದು ಎಂಬ ನಿರ್ಬಂಧವಿರಲಾರದು.

ಕರ್ನಾಟಕಕ್ಕೆ ಈಚೆಗೆ ಮೈಸೂರು ರಾಜ್ಯವೆಂಬ ಹೆಸರು ರೂಢವಾಗಿದೆ. ಆದರೆ ಇದು ರಾಜಕೀಯ ದೃಷ್ಟಿಯಿಂದ ಬಂದ ಹೆಸರು. ಐತಿಹಾಸಿಕವಾಗಿ ಇದು ಕರ್ನಾಟಕವೇ. ಮಹಾಭಾರತ ಕಾಲದಿಂದ ನಡೆದು ಬಂದ ಹೆಸರಿದು ಎಂದು ಹೇಳುವರು. ಇದು ಭೌಗೋಲಿಕ ಹೆಸರು ಎಂದೂ ಹೇಳಬಹುದು. ಆದರೆ ಇದು ಇಡೀ ಭಾರತ ದೇಶದ ಒಂದು ಮಹತ್ವದ ಭಾಗ. ಭಾರತ ಇದೊಂದು ಪ್ರಚಂಡ ರಾಷ್ಟ್ರ. ಕರ್ನಾಟಕ ಅದರದೊಂದು ವಿಭಾಗ. ಆದುದರಿಂದ ನಾನು ಕರ್ನಾಟಕಸ್ಥನಿದ್ದಷ್ಟೇ ಭಾರತೀಯನೂ ಅಹುದು. ನಾನು ಹೊರದೇಶಕ್ಕೆ ಹೋದಾಗ ನಾನು ಕರ್ನಾಟಕಸ್ಥ ಎಂದು ಹೇಳಿದರೆ ಅರ್ಥವಾಗದು. ನಾನು ಭಾರತೀಯ – ಇಂಡಿಯನ್ ಎಂದು ಹೇಳಿದರೆ ತಟ್ಟನೆ ಹೊಳೆಯುವದು.

ಭಾರತ ಕೂಡಾ ಈ ಭೂಲೋಕದ ಒಂದು ಭಾಗ. ನಾನು ನಾಳೆ ಚಂದ್ರಲೋಕಕ್ಕೆ ಹೋದರೆ ನಾನು ಭೂಲೋಕದವನೆಂದು ಹೇಳಿದರೆ ಮಾತ್ರ ಗುರುತಾಗುವದು. ನಾನು ಕರ್ನಾಟಕದವ ಅಥವಾ ಭಾರತೀಯ ಎಂದು ಹೇಳಿದರೆ ಗೊತ್ತಾಗದು.

## ಜಗತ್ತು ನಮ್ಮದು

ಒಂದಾನೊಂದು ಕಾಲಕ್ಕೆ ನಮ್ಮ ಹಳ್ಳಿ, ನಮ್ಮ ತಾಲೂಕು,ನಮ್ಮ ಜಿಲ್ಲೆ ಇವುಗಳಾಚೆ ನಮ್ಮ ದೃಷ್ಟಿ ಸಹಸಾ ಹೋಗುತ್ತಿರಲಿಲ್ಲ. ಆದರೆ ಸಂಪರ್ಕ ಸಾಧನಗಳು, ಪ್ರವಾಸ ಸೌಕರ್ಯಗಳು ಹೆಚ್ಚಾಗುತ್ತ ಹೋದಂತೆ ನಮ್ಮ ದೃಷ್ಟಿ ವಿಶಾಲವಾಗುತ್ತ ಹೋಯಿತು. ನಮ್ಮ ಮನಸಿನ, ನಮ್ಮ ಬುದ್ಧಿಯ, ನಮ್ಮ ಚೈತನ್ಯದ ಸೀಮೆಯೂ ಹಿಗ್ಗುತ್ತ ಹೋಗಿ ಈಗ ಇಡೀ ಜಗತ್ತೇ ನಮ್ಮ ಕಣ್ಣೆದುರು ನಿಲ್ಲುವದು.

ಸಂತ ವಿನೋಬಾ ಕರ್ನಾಟಕದಲ್ಲಿಯೇ ಪಾದಯಾತ್ರೆ ನಡೆಸಿದಾಗ 'ಜಯ ಜಗತ್' ಎಂಬ ಮಂತ್ರವನ್ನು ಕಂಡರು. ಅವರ ದೃಷ್ಟಿ ಅಷ್ಟು ವಿಶಾಲವಾಗಿ ಬಿಟ್ಟಿತು. ಜಯ ಕರ್ನಾಟಕ, ಜಯಹಿಂದ್ ಎಂಬವುಗಳ ಮುಂದಿನ ಹೆಜ್ಜೆ ಅದು. ವಿಸ್ತೃತ ದೃಷ್ಟಿಯ, ವಿಕಸಿತ, ಆತ್ಮನ ಲಕ್ಷಣವೇ ಅದು. ಆದರೆ ಅದರ ಅರ್ಥ ಜಯ ಕರ್ನಾಟಕ, ಜಯ ಹಿಂದ ಇವು ನಷ್ಟವಾಗಿ ಹೋದವು ಎಂದಲ್ಲ. ಕರ್ನಾಟಕವನ್ನು, ಭಾರತವನ್ನು ಸಮಗ್ರ ಜಗತ್ತಿನ ಪಾರ್ಶ್ವಭೂಮಿಯಲ್ಲಿ ನೋಡುವ ದೃಷ್ಟಿ ಅದು ದೂರದೃಷ್ಟಿ

ನಾನೊಬ್ಬ ಕರ್ನಾಟಕಸ್ಥ ಎಂದು ಹೇಳುವಾಗ ನಾನು ನನ್ನ ಪಾರ್ಥಿವ ದೇಹದ ದೃಷ್ಟಿಯಿಂದ ಅಧಿಷ್ಠಾನವನ್ನು ಕಲ್ಪಿಸಿದೇನೋ ಏನೋ. ನಾನು ಕರ್ನಾಟಕಸ್ಥನಿದ್ದಷ್ಟೇ ಕನ್ನಡಿಗನೂ ಇರುವೆ. ಕರ್ನಾಟಕದಲ್ಲಿ ಖಾಯಂ ನೆಲೆಸಿದವರೆಲ್ಲ ಕನ್ನಡಿಗರಿರಲಾರರು. ೧೦೦ರಲ್ಲಿ ೭೫ರಷ್ಟು ಮಾತ್ರ ಕನ್ನಡಿಗರು, ಕನ್ನಡ ಮಾತೃಭಾಷೆ ಇದ್ದವರು ಇರುವರಂತೆ. ಉಳಿದವರು ಹಲವಾರು ವಿಧದ ಭಾಷೆಗಳನ್ನಾಡುವರು. ಆದರೆ ಅವರೂ ಕರ್ನಾಟಕಸ್ಥರು. ಕರ್ನಾಟಕದ ಆರ್ಥಿಕ, ಸಾಮಾಜಿಕ, ರಾಜಕೀಯ ಸಾಂಸ್ಕೃತಿಕ ಅಭ್ಯುದಯವನ್ನು ಸಾಧಿಸಲು ಅವರೂ ಕನ್ನಡಿಗರಷ್ಟೇ ಬಾಧ್ಯಸ್ಥರು. ಬದ್ಧರು. ಆ ಹೊಣೆಯನ್ನು ಅವರು ಅಲ್ಲಗಳೆಯಲಾರರು. ಹಾಗೆ ಅಲ್ಲಗಳೆದರೆ ಅದು ಅವರಿಗೆ, ಅವರ ಅಭಿವೃದ್ಧಿಗೆ ಬಾಧಕ

## ದೀಕ್ಷೆ ಪಡೆದ ಭಾಷೆ

ನಾನು ಕನ್ನಡಿಗ ಇದರ ಅರ್ಥವೇನು? ಕನ್ನಡ ಎಂಬುದು ನನ್ನ ಮಾತೃಭಾಷೆ, ನನ್ನ ತಾಯಿನುಡಿ. ನಾನು ಮೊಲೆಹಾಲಿನೊಡನೆ ದೀಕ್ಷೆ ಪಡೆದ ಭಾಷೆ ಅದು. ಆದುದರಿಂದ ನನ್ನ ಭಾವ ವಿಚಾರಗಳ ಸ್ವಾಭಾವಿಕ ಭಾಷೆ ಅದು. ಪ್ರಾಥಮಿಕ ಸಂಸ್ಕಾರಗಳೆಲ್ಲ ನನ್ನ ಮನಸ್ಸಿನ ಮೇಲೆ ಆದುದು ಕನ್ನಡದಲ್ಲಿ. ಆದರೆ ತಾಯ್‌ನುಡಿ ಮನೆಮಾತು ಕನ್ನಡವಿದ್ದರೂ ಮಕ್ಕಳು ನೆರೆಹೊರೆಯವರ ನುಡಿಗಳನ್ನು ಅದರ ಅರಿವು ಅಥವಾ ಶ್ರಮವಿಲ್ಲದೆ ಕಲಿತುಕೊಳ್ಳುವರು. ಸ್ವಲ್ಪ ದೊಡ್ಡವರಾದ ಬಳಿಕ ಸ್ವಭಾಷೆ – ಪರಭಾಷೆ ಎಂಬ ಭಾವ ಮೂಡುವದು. ನಾನು ಕನ್ನಡಿಗನಿದ್ದರೂ ಯಾವ ಶ್ರಮವೂ ಇಲ್ಲದೆ, ಶಾಲೆಗೆ ಹೋಗದೆ ಸ್ವಲ್ಪ ಹಿಂದುಸ್ತಾನಿ, ಹೆಚ್ಚು ಮರಾಠಿ ಕಲಿತುಕೊಂಡೆ. ಇಂಗ್ಲಿಷ್, ಸಂಸ್ಕೃತ ಶಾಲೆಯಲ್ಲಿ ಕಲಿತೆ. ಬಂಗಾಲಿ, ಗುಜರಾತಿ, ರವೀಂದ್ರರ ಗೀತಾಂಜಲಿಯನ್ನು ಮೂಲದಲ್ಲಿ ಓದಬೇಕೆನ್ನುವ ಹವ್ಯಾಸದಿಂದ, ಗಾಂಧೀಜಿಯವರ 'ನವಜೀವನ'ವನ್ನು ತಿಳಿದುಕೊಳ್ಳಬೇಕೆಂಬ ಲವಲವಿಕೆಯಿಂದ ಪರಿಶ್ರಮಪೂರ್ವಕವಾಗಿ ಕಲಿತುಕೊಂಡೆ. ಆದರೆ ಇವೆಲ್ಲವುಗಳ ಮೂಲಕ ನಾನು ಕನ್ನಡಿಗ ಎಂಬುದಕ್ಕೆ ಯಾವ ಬಾಧೆಯೂ ಬರಲಾರದು.

ಭಾಷೆ ಸಂಸ್ಕೃತಿಗೆ ಸಂಬಂಧಿಸಿದುದು. ವಿಚಾರ, ಭಾವವ್ಯಕ್ತಿ, ಚಿಂತನ – ಮಂಥನ, ತರ್ಕ, ಮನೋವಿಕಾಸ ಇವೆಲ್ಲವುಗಳಿಗೆ ಭಾಷೆಯೇ ಮಹಾಸಾಧನ. ಭಾಷೆ ಬರದವನ ಮಾನಸಿಕ ಶಕ್ತಿಗಳು, ಭಾವೋದ್ರೇಕಗಳು ಹೆಚ್ಚು ಬಲಿಯಲಾರವು, ಪಕ್ವವಾಗಲಾರವು. ಆದುದರಿಂದ ಅಕ್ಷರಾಭ್ಯಾಸ – ಭಾಷಾಭ್ಯಾಸ ಎಂಬುದು ಮಾನವನ ವಿಕಾಸಕ್ಕೆ ಅತ್ಯವಶ್ಯವಾದ ಸಾಧನವು. ನಮ್ಮ ದೇಶದಲ್ಲಿ ಈಗ ೩೮ ಕೋಟಿ ನಿರಕ್ಷರ ಕುಕ್ಷಿಗಳು ಇರುವರೆಂಬುದು ರಾಷ್ಟ್ರಕ್ಕೆ ಮಹಾಲಾಂಛನ. ಸಂವಿಧಾನದಲ್ಲಿ ಈ ಬಗ್ಗೆ ಸ್ಪಷ್ಟವಾದ ನಿರ್ದೇಶವಿದೆ. ಹತ್ತು ವರ್ಷಗಳಲ್ಲಿ ದೇಶದ ತುಂಬೆಲ್ಲ ಪ್ರಾಥಮಿಕ ಶಿಕ್ಷಣವು ಕಡ್ಡಾಯವಾಗಬೇಕೆಂದು ಸಂವಿಧಾನವು ಹೇಳಿದೆ.

ಕನ್ನಡಿಗರೆಲ್ಲರೂ ನನ್ನ ಭಾಷಾ ಬಾಂಧವರು. ಆದರೆ ಕರ್ನಾಟಕದಲ್ಲಿ ಇರುವವರೆಲ್ಲರೂ ನನ್ನ ದೇಶ ಬಾಂಧವರು – ಒಂದೇ ದೇಶದಲ್ಲಿ ಅಥವಾ ಪ್ರಾಂತದಲ್ಲಿ ಇರುವುದರಿಂದ. ಅವರ ಆರ್ಥಿಕ – ಸಾಮಾಜಿಕ ಇತ್ಯಾದಿ ಹಿತಾಸಕ್ತಿಗಳೂ ನನ್ನವೂ ಒಂದೇ ಇರುವುದರಿಂದ ಆ ಬಾಂಧವ್ಯ ಮಹತ್ವದ್ದು. ಅವರು ಬೇರೆ ಭಾಷೆ ಮಾತಾಡುತ್ತಿರಬಹುದು. ಆದರೆ ಅವರು ಕನ್ನಡವನ್ನೂ ಕಲಿಯಬೇಕಾಗಿ ಬರುವದು! ಅವರು ಕರ್ನಾಟಕದ ಚಿರನಿವಾಸಿಗಳು, ನಾನೂ ಇಲ್ಲಿಯ ಸ್ಥಿರ ನಿವಾಸಿ.

ಇಷ್ಟೇ ಅಲ್ಲ, ಕರ್ನಾಟಕ ಭಾರತದ ಒಂದು ಭಾಗ ಮಾತ್ರ. ಭಾರತ ಒಂದು ಮಹಾನ್ ರಾಷ್ಟ್ರ. ಈಗೊಂದು ಸ್ವತಂತ್ರ ರಾಷ್ಟ್ರ. ಕರ್ನಾಟವು ಅದರ ಒಂದು ದೇಶ ಅಥವಾ ರಾಜ್ಯ (ಸ್ಟೇಟ್) ನಾನು ಭಾರತೀಯನು ಎಂದು ಹೇಳುವಾಗ ಭಾರತಕ್ಕೆ ನಾನು ನನ್ನ ಮಾತೃಭೂಮಿ ಎಂದುಕೊಳ್ಳುವೆನು. ಇದು ಮಾತೃಭೂಮಿ– ಒಂದೇ ಮಾತರಂ – ಎಂದ ಬಳಿಕ ಇಲ್ಲಿ ಹುಟ್ಟಿ ಬೆಳೆದು ಬಾಳುವವರೆಲ್ಲರೂ ನನ್ನ ಸಹೋದರ ಸಹೋದರಿಯರು. ಅವರು ಮಾತಾಡುವ ಭಾಷೆಗಳೆಲ್ಲ ನನ್ನ ಭಾತೃಭಾಷೆಗಳು, ನನ್ನ ಅಣ್ಣ –ತಮ್ಮಂದಿರ ಭಾಷೆಗಳು. ಅವುಗಳಿಗೆ ನಾನು ಪರಕೀಯ ಭಾಷೆಗಳೆಂದು ಯಾವ ಬಾಯಿಂದ ಹೇಳಬಲ್ಲೆ? ಈ ರೀತಿಯ ನವಭಾವಗಳನ್ನು ಬೆಳೆಸಿಕೊಂಡು ಬಾರದಿದ್ದರೆ, ನನ್ನ ಭಾಷೆಯೊಂದನ್ನು ಬಿಟ್ಟು ಉಳಿದವುಗಳೆಲ್ಲ ಪರಭಾಷೆಗಳೆಂದು ನಾನು ಅವುಗಳನ್ನೂ, ಅವುಗಳನ್ನಾಡುವವರನ್ನು ಪರಕೀಯರೆಂದು ಕಾಣುತ್ತ ಹೋದರೆ, ನಮ್ಮ ಭಾವೈಕ್ಯ –, ನಮ್ಮ ಐಕ ರಾಷ್ಟ್ರೀಯತೆ ಮಣ್ಣುಗೂಡುವವು. ನವರಾಷ್ಟ್ರೋದಯದೊಡನೆ ನವಭಾವೋದಯವು ಅವಶ್ಯ. ನವ ಸ್ವಾತಂತ್ರ್ಯದೊಡನೆ ನವಸಂಯಮದ ಜನ್ಮವಾಗದೆ ಹೋದರೆ ಸ್ವಾತಂತ್ರ್ಯವು ಸ್ವೈರವೃತ್ತಿಯಲ್ಲಿ ಪರಿಣಮಿಸುವದು. ಸ್ವೈರವೃತ್ತಿ ಸಾವಿನತ್ತ ಒಯ್ಯುವದು!

## ದೇಹದ ಅಧಿಷ್ಠಾನ

ನನ್ನ ದೇಹದ ಅಧಿಷ್ಠಾನ ಕರ್ನಾಟಕ. ನನ್ನ ಮಾನಸಿಕ ಸಂಸ್ಕಾರಗಳ ಸಾಧನ ಹಾಗೂ ಮೂಲ ಅಧಿಷ್ಠಾನ ಕನ್ನಡ ನುಡಿ. ಆದರೆ ಇವೆಲ್ಲವುಗಳ ಸಮನ್ವಯ ಕೇಂದ್ರವಾದ ನನ್ನ ಜೀವಾತ್ಮನ ಅಧಿಷ್ಠಾನ ಯಾವುದು? ಆತ್ಮತತ್ವದ ವರ್ಣನೆ ಮಾಡುವಾಗ ಉಪನಿಷತ್ಕಾರರು "ಅಣೋರಣೀಯಾನ್ ಮಹತೋ ಮಹೀಯಾನ್" ಎಂದು ಹೇಳಿದ್ದಾರೆ. ಅದರ ಅಧಿಷ್ಠಾನವನ್ನೂ ವಾಸಸ್ಥಾನವನ್ನೂ ನಿರ್ದೇಶಿಸುವಾಗ, "ನಿಹಿತೋ ಗುಹಾಯಾಂ" ಎಂದಿದ್ದಾರೆ. ಹೃದಯಗುಹೆ ಎಂಬುದೊಂದು ಸ್ಥಾನವಿದೆಯೋ ಇರಬಲ್ಲದೇ ಅಥವಾ ಇದು ಸಾಂಕೇತಿಕ ಭಾಷೆಯೇ? ಒಬ್ಬ ಅಮೇರಿಕನ್ ಗ್ರಂಥಕರ್ತನು, ದೇಹದಲ್ಲಿ ಆತ್ಮನ ಸ್ಥಾನವೆಲ್ಲಿ ಎಂಬುವನ್ನು ವಿವರಿಸಿ ಬರೆದಿದ್ದಾನೆ. ಮಿದುಳಿನಲ್ಲಿಯ 'ಥಾಲಾಮಸ್' ಎಂಬ ಒಂದು ಸ್ಥಾನವನ್ನು ನಿರ್ದೇಶಿಸಿದ್ದಾನೆ. ಆದರೆ ಆತ್ಮತತ್ವವೆಂಬುದು ದೇಶ ಕಾಲಾತೀತವಿರುವುದೆಂದೇ ಎಲ್ಲೆಲ್ಲಿಯೂ ವರ್ಣನೆ ಇರುವುದು. ದೇಹದ ಮುಖಾಂತರ ಕಾರ್ಯ ನಡೆಯುವಾಗ ಯಾವ ಕೇಂದ್ರ ಮೊದಲು ಹಾಗೂ ಪ್ರಧಾನವಾಗಿ ಚಲಿಸುವುದೋ ಅದೇ ಆತ್ಮನ ಸ್ಥಾನ ಎಂದು ಹೇಳುವ ರೂಢಿ. ಶುದ್ಧ ಚೈತನ್ಯಮಯ ಆತ್ಮನು ದಿಕ್ಕಾಲಾತೀತನೆಂದೇ ಹೇಳಬೇಕಾಗುವದು. ಜೀವಾತ್ಮ

–► ನೆಯ ಪುಟಕ್ಕೆ





# ಸಂಗತಿಯ ಪರಿಣಾಮ!







# ಕಾವ್ಯದ ಛಂದಸ್ಸು ಹಾಗೂ ಶೈಲಿ

ವಿ.ಕೃ.ಗೋಕಾಕ

**ಛಾಂದಸಿಕ ದೇಹದಲ್ಲಿ ಸೂಕ್ಷ್ಮ ತಾಳಲಯವು ಉಸಿರು. ಅಂತಃಸ್ಫುರಣದಿಂದ ತಾಳಲಯವು ಹೊರಹೊಮ್ಮಿದಾಗ ಮಾತ್ರಾ ಗಣಗಳು ಮಂತ್ರವಾಗುತ್ತವೆ. ಶೈಲಿ ಸಹ ಅಂತಃಸ್ಫುರಣಕ್ಕಾಗಿ ಕಾಯಬೇಕು.**

ಇಂದು ರಚಿತವಾದ ಕೆಲವು ನವ್ಯ ಕವಿತೆಗಳಲ್ಲಿ ಪದ್ಯದ ತಾಳಲಯವೇ ಇರುವುದಿಲ್ಲ. ಸ್ವಚ್ಛಂದ ಛಂದವನ್ನೂ ಅಲ್ಲಿ ನಾವು ಕಾಣುವುದಿಲ್ಲ. ಸ್ವಚ್ಛಂದಛಂದದಲ್ಲಿ ಮಾತ್ರಾಗಣಗಳಿಲ್ಲದಿದ್ದರೂ ತನ್ನದೇ ಆದ ನಿಯಮಗಳನ್ನು ಅನುಸರಿಸುವ ತಾಳಲಯ ಅಲ್ಲಿ ಇದ್ದೇ ಇರಬೇಕಾಗುತ್ತದೆ. ಶ್ರೀ ಅರವಿಂದರು ಹೇಳುವಂತೆ ಮೆಕಾಲೆ ಕಿಪ್ಲಿಂಗ್‌ರ ಕಾವ್ಯದಲ್ಲಿ ಕಾಣುವ ಯಾಂತ್ರಿಕ ಛಂದಸ್ಸು ಅಷ್ಟೇನು ಪರಿಣಾಮಕಾರಿಯಲ್ಲ. ಕಥನಕಾವ್ಯಕ್ಕೆ ಇಂತಹ ಛಂದಸ್ಸು ಸರಿಹೋಗಬಹುದು.

## ಸೂಕ್ಷ್ಮ ತಾಳ ಲಯ

ಇನ್ನೊಂದು ತರಹದ ಛಂದಸ್ಸಿರುತ್ತದೆ. ಷಟ್ಪದಿ ಸಾಂಗತ್ಯ ಇಲ್ಲವೆ ಆಧುನಿಕ ಪದ್ಧತಿಯ ಶ್ಲೋಕಪ್ರಂದರ ವೈಕಟ್ಟನ್ನು ಆಯ್ದುಕೊಂಡು ಹಾಗೆಯೇ ಬರೆಯುತ್ತ ಸಾಗಬಹುದು. ಇದು ಸುಂದರ ಕಾವ್ಯವಾಗಬಹುದು. ಅಲ್ಲಿ ಕಲ್ಪಕತೆ ಹಾಗು ಭಾವನಾ ಪರವಶತೆ ತುಂಬಿಕೊಂಡು ಬರಬಹುದು. ಬೇಂದ್ರೆಯವರ ಮೇಘದೂತದ ಧಾಟಿಯಲ್ಲಿ ಬಂದ ಅನೇಕ ಕವಿಗಳ ಕೃತಿಗಳಲ್ಲಿ ಇದನ್ನು ನಾವು ಕಾಣುತ್ತೇವೆ. ಆದರೆ ಅದು ಶ್ರುತಿಮಧುರವಾದರೂ ಅದರಿಂದ ನಮ್ಮ 'ಕರ್ಣಸ್ಯ ಕರ್ಣ'ದ ಆಸೆ ತೃಪ್ತವಾಗುವುದಿಲ್ಲ. ಒಂದು ಸಲ ಕೇಳಿದ ಮೇಲೆ ಮತ್ತೆ ಕೇಳಬಯಸುವ ಮಾಂತ್ರಿಕತೆ ಅಲ್ಲಿರುವುದಿಲ್ಲ. ಬಾಹ್ಯಛಂದಸ್ಸಿನ ಗರ್ಭದಲ್ಲಿ ಒಳಗಿವಿಗೆ ಕೇಳಿಬರುವ ಇನ್ನೊಂದು ಸೂಕ್ಷ್ಮ ತಾಳಲಯವಿರಬೇಕಾಗುತ್ತದೆ. ವೃತ್ತ –ಷಟ್ಪದಿ – ಸಾಂಗತ್ಯ – ತ್ರಿಪದಿಗಳ ವೈಕಟ್ಟು ಏನೇ ಇರಲಿ, ಒಳಗೆ ಈ ಸೂಕ್ಷ್ಮ ತಾಳಲಯ ಸೇರಿದ್ದರೆ ಅದು ಈ ಛಂದಸ್ಸಿನ ಪ್ರಕಾರಗಳ ತಾಳಲಯದಲ್ಲಿಯೇ ಒಂದು ಕ್ರಾಂತಿಯನ್ನು ಸಾಧಿಸುತ್ತದೆ. ಪಂಪ – ರನ್ನ ಹರಿಹರ – ಕುಮಾರವ್ಯಾಸ – ರತ್ನಾಕರವರ್ಣಿ – ಸರ್ವಜ್ಞರ ಕಾವ್ಯದಲ್ಲಿ ಇದನ್ನು ನಾವು ಅನುಭವಿಸುತ್ತೇವೆ.

## ಛಂದಸ್ಸಿನ ಭಾನಸತನ

ಇನ್ನೂ ಒಂದು ಬಗೆಯ ಛಂದಸ್ಸಿದೆ. ಇಲ್ಲಿ ವಿವಿಧ ತಂತ್ರಗಳ ಪ್ರಭುತ್ವಪೂರ್ಣ ಪ್ರಯೋಗ ಕಂಡುಬರುತ್ತದೆ. ಹೊಸ ಸುಳಿಗಳನ್ನು ಕಂಡುಹಿಡಿಯಲು ಕವಿ ಹವಣಿಸುತ್ತಾನೆ. ಯತಿಯಿಸ್ಥಾನವನ್ನು ಜಾಣ್ಮೆಯಿಂದ ಬದಲಿಸುತ್ತಾನೆ; ಚಾತುರ್ಯದಿಂದ ಮಾತ್ರೆಗಳ ಚವಂಗವಾಡುತ್ತಾನೆ. ಅನೇಕ – ತಿರುವುಮುರುವುಗಳನ್ನೂ ಚಮತ್ಕಾರಗಳನ್ನೂ ಸಾಧಿಸುತ್ತಾನೆ. ಇದರಿಂದ ಒಂದು ವಿಧದ ಸಂತೋಷವಾದರೂ ಅದು ಯಾವಾಗಲೂ ಹೃದಯಸ್ಪರ್ಶಿಯಾಗುವದಿಲ್ಲ. ಅವುಗಳನ್ನೋದಿ ನಾವು ತಲೆದೂಗಬಹುದು; ಆದರೆ ಎದೆ ಕರಗುವದಿಲ್ಲ. ಸೂಕ್ಷ್ಮ ತಾಳಲಯ ಆ ಛಂದಸ್ಸಿನ ಗರ್ಭದಲ್ಲಿದ್ದರೆ ಮಾತ್ರ ನಮ್ಮ ಅಂತಃಕರಣದ ಸ್ಪಂದನವಾಗುತ್ತದೆ.

ಈ ಬಗೆಯ ಛಂದಸ್ಸಿನ 'ಭಾನತಸತನ'ವನ್ನು ನಾವು ಇಂದಿನ ಹಲವಾರು ನವ್ಯ ಕವಿತೆಗಳಲ್ಲಿ ಕಾಣುತ್ತೇವೆ. ಅಲ್ಲಿ ಕಲೆಯಿದೆ; ಜಾಣ್ಮೆಯಿದೆ; ಚಮತ್ಕಾರವಿದೆ. ಆದರೆ ಅಲ್ಲಲ್ಲಿ ಮಾತ್ರ ಈ ರಚನೆಗಳ ತಾಳಲಯ ನಮ್ಮ ಹೃದಯವನ್ನು ಮುಟ್ಟುತ್ತದೆ.

ವೃತ್ತ-ರಗಳೆ – ಷಟ್ಪದಿ – ಸಾಂಗತ್ಯ – ತ್ರಿಪದಿಗಳು ಹಳೆಯ ಪಡಿಯಚ್ಚುಗಳೆಂದು ನಾವು ಮೂಗು ಮುರಿಯುತ್ತೇವೆ. ಆಧುನಿಕ ಛಂದೋವಿಕಾಸದ ನಿಯಮಿತತೆ ಸಹ ತಮಗೆ ತೃಪ್ತಿಯನ್ನು ತರುವದಿಲ್ಲವೆಂದು ನವ್ಯರು ದೂರುತ್ತಾರೆ. ಇದರಲ್ಲಿ ಸತ್ಯಾಂಶವಿಲ್ಲದ ಇಲ್ಲ. ಒಂದು ಛಂದಸ್ಸು ಮಿತಿಮೀರಿದ ಬಳಕೆಯಿಂದ ರಸಹೀನವಾದಾಗ ಇನ್ನೊಂದು ರೀತಿಯಲ್ಲಿ ನಾವು ಅಳವಡಿಸಿಕೊಳ್ಳಬೇಕಾಗುತ್ತದೆ.

## ಹೃದಯದ ಮಿಡಿತ

ಆದರೆ ಬರಿ ಬಂಡಾಯದಲ್ಲಿಯೇ ವಿಮೋಚನೆ ಇಲ್ಲವೆಂದು ನಾವು ತಿಳಿಯುವದು ಅವಶ್ಯ. ವೃತ್ತ ಷಟ್ಪದಿಗಳೇ ಆಗಲಿ, ಆಧುನಿಕ 'ಛಾಂದಸಿಕ' ಪ್ರಕಾರಗಳೇ ಆಗಲಿ, ನವ್ಯರ ಪ್ರಯೋಗಗಳೇ ಇರಲಿ:ಇವು ಬರಿ ಛಾಂದಸಿಕ ದೇಹ ಮಾತ್ರ. ತಾಳಲಯ ಕರುಳಿರಿಯುವಂತೆ ಬರಬೇಕಾದರೆ ಆಯ್ದ ಪ್ರಕಾರದ ಗರ್ಭದೊಳಗೆ ಈ ಸೂಕ್ಷ್ಮ ತಾಳಲಯ ಇರಬೇಕಾಗುತ್ತದೆ. ಅದು ಬರಿ ಬುದ್ಧಿ ಇಲ್ಲವೆ ಗಣಿತದ ಕರಾಮತಿಯಿಂದ ಬರುವುದಿಲ್ಲ. ಬರಿ ಸೌಂದರ್ಯಪ್ರಜ್ಞೆಯಿಂದ ಉಗಮಿಸುವದಿಲ್ಲ. ಈ ಸೂಕ್ಷ್ಮ ತಾಳಲಯವು ತನ್ನ ಕೃತಿಗಳಲ್ಲಿರಬೇಕೆಂದ ಕವಿ ತನ್ನ ಹೃದಯದ ಮಿಡಿತವನ್ನೇ ಕೇಳಬೇಕಾಗುತ್ತದೆ; 'ಕರ್ಣಸ್ಯ ಕರ್ಣ'ವನ್ನು ಯಾವಾಗಲೂ ತೆರೆದಿಡಬೇಕಾಗುತ್ತದೆ. ಸ್ಫೂರ್ತಿಗಂಗೆಯಿಂದ ದರ್ಶನ ಹೇಗೆ ಚಿಮ್ಮುವುದೋ ಹಾಗೆಯೇ ಛಂದಸ್ಸೂ ಹೊಮ್ಮಬೇಕಾಗುತ್ತದೆ. ಮಾತ್ರೆ – ಗಣಗಳ ಗಣಿತದ ದೇಹವನ್ನು ಹೊಕ್ಕು ಅಂತಃಸ್ಫೂರ್ತಿಯ ಮಾಂತ್ರಿಕನು ಸೂಕ್ಷ್ಮ ತಾಳಲಯದ ಉಸಿರನ್ನು ತುಂಬಬೇಕಾಗುತ್ತದೆ. ಆಗ ಮಾತ್ರಾ – ಗಣಗಳು ಮಂತ್ರವಾಗುತ್ತವೆ.

## ಕಲಾ ತಪಸ್ಸು

ಈ ಪವಾಡ ಜರುಗಿದಾಗ ವೃತ್ತದಲ್ಲಿ ಪಂಪನೂ ರಗಳೆಯಲ್ಲಿ ಹರಿಹರನೂ ಭಾಮಿನಿ ಷಟ್ಪದಿಯಲ್ಲಿ ಕುಮಾರವ್ಯಾಸನೂ ವಾರ್ಧಿಕದಲ್ಲಿ ಲಕ್ಷ್ಮೀಶನೂ ಸಾಂಗತ್ಯದಲ್ಲಿ ರತ್ನಾಕರವರ್ಣಿಯೂ ತ್ರಿಪದಿಯಲ್ಲಿ ಸರ್ವಜ್ಞನೂ ಆಧುನಿಕ ಛಂದಸ್ಸಿನಲ್ಲಿ ಇಂದಿನ ಕವಿಗಳೂ ವಿವಿಧ ಪ್ರಯೋಗಗಳಲ್ಲಿ ನವ್ಯರೂ ಒಂದು ಶಾಶ್ವತ ಗೀತಮಯತೆಯನ್ನು ತರುವದು ಸಾಧ್ಯವಾಗುತ್ತದೆ. ಹಳೆಯದೆಲ್ಲ ಚಿನ್ನವಲ್ಲ; ಹೊಸದೂ ಅಲ್ಲ. ಈಗ ವಿವರಿಸಿದ ಛಂದಸ್ಸಿನ ಪ್ರಕಾರಗಳು ಕಾಲಾಂತರದಲ್ಲಿ ರೂಪಗೊಂಡ ಪ್ರಭೇದಗಳು. ಅವು ಹಳೆಯ ಇಲ್ಲವೆ ಹೊಸ ಬದುಕಲ್ಲದೆ ಒಳ್ಳೆಯ ಇಲ್ಲವೆ ಗುಣಹೀನ ಪ್ರಭೇದಗಳೆಂದು ವಿಂಗಡಿಸಲಾಗುವುದಿಲ್ಲ. ಹಳೆಯದಿರಲಿ ಹೊಸದಿರಲಿ ಅವು ಚೆನ್ನವಾಗುವದು ಅಂತಃಸ್ಫುರಣದಿಂದ ಆ ಸೂಕ್ಷ್ಮ ತಾಳಲಯ ಹೊರಹೊಮ್ಮಿದಾಗ. ಇವೆಲ್ಲ ಪ್ರಭೇದಗಳಿಗೂ ಅನ್ವಯಿಸುವ ಸಾಧನೆ ಒಂದೇ: ನಾದ – ಮಾತ್ರೆಗಳ ಜಮಣ ಬಳಕೆ. ಒಂದು ಮಾತ್ರೆಯಿಂದ ಸಾಧಿಸುವ ಕಾರ್ಯಕ್ಕಾಗಿ ಎರಡು ಮಾತ್ರೆಗಳನ್ನು ಯೋಜಿಸಬಾರದು. ವಿವಿಧ ತಂತ್ರ ವಿಧಾನಗಳ ಪ್ರಜ್ಞೆಯಿರಬೇಕು. ಆದರೆ ಅವುಗಳ ಬೌದ್ಧಿಕ ಪ್ರಯೋಗದಲ್ಲಿಯೇ ಸಿದ್ಧಿಯಿದೆಯೆಂದು ತಿಳಿಯಬಾರದು. ಒಂದೊಂದು ಶಬ್ದ ತಾಳಲಯದಲ್ಲಿ ಬ್ರಹ್ಮಸೃಷ್ಟಿಯಂತೆ ಹೊಂದಿಕೊಳ್ಳಲು ಕಲಾತಪಸ್ಸು ಬೇಕು. ಸ್ಫೂರ್ತಿಗಂಗೆಯ ಮೇಲೆ ಅದು ತೇಲಿ ಬರುವ ತನಕ ಅದಕ್ಕಾಗಿ ಕಾಯಬೇಕು. ಪ್ರತಿಯೊಂದು ಶಬ್ದದ ಅನನ್ಯ ಪ್ರಯೋಗದ ಮೇಲಿಂದ ಅದರ ಹಿಂದಿದ್ದ ಸ್ಫೂರ್ತಿಯ ನೈಜತೆಯನ್ನು ಅರಿಯಬಹುದು. ರಸನೆಯ ರಸನೆಯಿಂದ ಹೊರಟ ಶಬ್ದ ಸಂಗೀತ ಆಗ 'ಕರ್ಣಸ್ಯ ಕರ್ಣ'ವನ್ನು ಮುಟ್ಟುವುದು.

## ಶೈಲಿಪ್ರಭೇದಗಳು

ಶೈಲಿಯ ವಿಷಯವೂ ಹೀಗೆಯೇ. ಶ್ರೀ ಅರವಿಂದರು ಹೇಳಿದಂತೆ ಶೈಲಿಯ ಪಾರಮ್ಯ ಪಶ್ಯಂತೀ ವಾಣಿಯಲ್ಲಿ – ಕಣ್ಣಿದ್ದ ಶಬ್ದದಲ್ಲಿ – ಗೋಚರವಾಗುತ್ತದೆ. ಅದ್ವಿತೀಯವಾದ ಶಬ್ದವೇ ಆ ಮಣಿಗೆ ಪ್ರಮಾಣ. ಇಂತಹ ಶಬ್ದಗಳ ಗುಂಫನವೇ ಮಂತ್ರಶಕ್ತಿಯುಳ್ಳ ಕಾವ್ಯಶೈಲಿಗೆ ಕಾರಣವಾಗುತ್ತದೆ. ಅವು

ಶ್ರೀ [illegible] ಪ್ರಕಾರ[illegible] ಅಂತಃಸ್ಫುರಣದಿಂದ ಸಾಧ್ಯ.

ಕಾವ್ಯದಲ್ಲಿ ಅಭಿವ್ಯಕ್ತವಾಗುವ ವಸ್ತು ಇಲ್ಲವೆ ತಿರುಳಿನ ಅಭಿವ್ಯಕ್ತಿಯನ್ನು ನಾವು ಹೀಗೆ ವಿಂಗಡಿಸಬಹುದು. ಐಂದ್ರಿಯಕ ಸಂವೇದನೆ Sensation ವಾಗುವ ವಿಷಯ ಇಲ್ಲವೆ ಆಕಾಂಕ್ಷೆ; ಸಾಂಗತಿಕ ಕಥನ ಇಲ್ಲವೆ ವಿವರಣೆ; ಚಿಂತನೆ ಇಲ್ಲವೆ ಬೌದ್ಧಿಕ ವ್ಯಾಪಾರ ಇಲ್ಲವೆ ಅಭಿಪ್ರಾಯ; ಭಾವನೆ; ಹಾಗು ಪ್ರತಿಮೆ. ಇವುಗಳ ದ್ವಾರಾ ಕವಿಯ ದರ್ಶನ ಕಾವ್ಯದಲ್ಲಿ ವ್ಯಕ್ತವಾಗುತ್ತದೆ.

ಈ ಪಂಡಗಗಳನ್ನು ಸಮನ್ವಯಿಸಿ ಒಂದೊಂದು ರೀತಿಯ ಕಾವ್ಯಶೈಲಿ ನಿರ್ಮಿತವಾಗುತ್ತದೆ. ಹೀಗೆ ಸಿದ್ಧವಾದ ಕಾವ್ಯಶೈಲಿಯಲ್ಲಿಯೂ ನಾವು ಆರು ಪ್ರಕಾರಗಳನ್ನು ಗುರುತಿಸಬಹುದು. ಅನುರೂಪವಾದ ಇಲ್ಲವೆ ಯಥೋಚಿತವಾದ ಶೈಲಿ; ಅಲಂಕಾರಿಕ ಶೈಲಿ; ಕವಿ ನಿರ್ಮಿಸಿದ ಪಡೆನುಡಿ ಇಲ್ಲವೇ ಶಬ್ದವೊಂದರಿಂದ ಹೊಸ ದೃಷ್ಟಿಯನ್ನು ಕೊಡುವ ಶಬ್ದವುಳ್ಳ ಶೈಲಿ; ಅಂತಃಸ್ಫುರಣವುಳ್ಳ ಕಾಂತಿದೀಪ್ತಿಯುತ ಶೈಲಿ; ಹಾಗು ಈ ಯಾವ ಶೈಲಿ ಪ್ರಕಾರಗಳಲ್ಲಿಯೂ ಒಂದನ್ನು ಸೇರಿ ಅದ್ಭುತ ಆಳ ಇಲ್ಲವೆ ಅಗಲವನ್ನು ತೋರಿ ಮಂತ್ರದ ಅದ್ವಿತೀಯತೆಯನ್ನು ಪಡೆಯುವ ಶೈಲಿ.

ಈ ಆರು ಶೈಲಿಪ್ರಭೇದಗಳನ್ನು ಶ್ರೀ ಅರವಿಂದರು ತಮ್ಮ ವಿಮರ್ಶೆಯಲ್ಲಿ [illegible]ಸಿದ್ದಾರೆ. ಇವೆಲ್ಲವುಗಳನ್ನು ನಾವು ಪುರಾತನರಲ್ಲಿಯೂ ಆಧುನಿಕರಲ್ಲಿಯೂ ನವ್ಯರಲ್ಲಿಯೂ ನೋಡಬಹುದು. ಅಲ್ಲಲ್ಲಿ ಸೆಳೆಮಿಂಚಿನಂತೆ ಬಂದು ಕೆಲವು ಸಾಲುಗಳಲ್ಲಿ ಮಾತ್ರ ಅಂತಃಸ್ಫೂರ್ತ ಹಾಗು ಅದ್ವಿತೀಯ ಪ್ರಕಾರಗಳು ಕಾಣಿಸಿಕೊಳ್ಳಬಹುದು. ಇವು ಇನ್ನಿಷ್ಟು ಹೆಚ್ಚಾಗಿ ಕಾವ್ಯದಲ್ಲಿ ಸಂತತ ಸನ್ನಿಧಿಯಾಗಬೇಕಾಗಿದೆ. ರೊಮ್ಯಾಂಟಿಕ್ ಕವಿ ಹೆಚ್ಚಾಗಿ ನಾದಲೋಲುಪನಾಗಿದ್ದರೆ ನವ ಕವಿ ಆರ್ಥಿಕ ಮುಗ್ಗಟ್ಟಿನೊಳಗಿಂದ ಹಾಯ್ದು ಹೋಗುವ ಸಾಮಾಜಿಕನಂತೆ ಸ್ವಲ್ಪದರಲ್ಲಿಯೇ ಸ್ವಾರಸ್ಯವನ್ನು ಅನುಭವಕ್ಕೆ ನೀಡುವ ಕಲೆಯನ್ನು ಸಾಧಿಸುತ್ತಾನೆ. ಶಬ್ದದ ಅಂತಃಸ್ಫುರಣ ಶಕ್ತಿಯನ್ನು ರೊಮ್ಯಾಂಟಿಕ್ ಕವಿಯು ತನ್ನ ಭಾವನಾತಿರೇಕದಿಂದ ಕಡಮೆ ಮಾಡಿದರೆ ನವ್ಯನು ತನ್ನ ಬುದ್ಧಿಯ ಅತಿರೇಕದಿಂದ ಅದನ್ನು ಕಡಮೆಯಾಗಿಸುತ್ತಾನೆ.

ಭಾವನೆ, ಬುದ್ಧಿ, ಕಲ್ಪಕತೆ – ಇವುಗಳಲ್ಲಿ ಯಾವುದೂ ಕಾವ್ಯದ ಜೀವಾಳವಲ್ಲ; ದರ್ಶನವೇ ಅದರ ಜೀವಾಳ. ನೈಜ ದರ್ಶನವಿದ್ದರೆ ಎಲ್ಲ ಕಾವ್ಯಾಂಗಗಳಲ್ಲಿ ಅದರ ಜೀವಕಳೆ ಮಿನುಗುತ್ತದೆ. ಶೈಲಿಯಲ್ಲಿಯೂ ಅದರ ಇಂದ್ರಜಾಲದ ಪರಿಚಯವಾಗುತ್ತದೆ. ಶೈಲಿ ಸಹ ಅಂತಃಸ್ಫುರಣಕ್ಕಾಗಿ ಕಾಯಬೇಕು.

~

## ನಾನೊಬ್ಬ ಕರ್ನಾಟಕನ

( ೩ನೆಯ ಪುಟದಿಂದ )

ರೂಪದಲ್ಲಿ ಸಂಕುಚಿತ ಅಭಿವ್ಯಕ್ತಿಯ ಸಂದರ್ಭದಲ್ಲಿ ಅಂತರಾತ್ಮನೆನಿಸಬಹುದು. ವಿಶ್ವವ್ಯಾಪಿಯಾದ ವಿಶ್ವಾತ್ಮನೆಂಬ ಅಭಿದಾನ ಸಲ್ಲಬಹುದು. ಅಂತರಾತ್ಮ ವಿಶ್ವಾತ್ಮಗಳ ಸಮನ್ವಯವಾದಾಗ ದಿವ್ಯಾತ್ಮನ ದರ್ಶನವಾಗಬಹುದು. ಆಗ ಅಧಿಷ್ಠಾನಾದಿಗಳತ್ತತ್ತ ಎಂದು ಶಬ್ದಾತೀತ ವಾಙ್ಮನಕ್ಕಗೋಚರ ಎಂದು ಹೇಳಿ ಮೌನದಿಂದಿರಬೇಕಾಗುವದು. ಆ ಭೂಮಿಕೆಯಲ್ಲಿದ್ದು ಈ ದೇಹಮನಗಳ ಅಧಿಷ್ಠಾನಗಳಲ್ಲಿ 'ಆತ್ಮಕ್ರೀಡಾಃ ಆತ್ಮಾರತಿಃ ಕ್ರಿಯಾವಾನ್" ಎಂಬ ವರ್ಣನೆಗೆ ಸಲ್ಲುವವನೆ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನು ಎಂದು ಉಪನಿಷತ್ತು ಹೇಳುವದು. ಇವೆಲ್ಲ ಶಬ್ದಗಮ್ಯ ಮಾತುಗಳಲ್ಲಿ, ಕೇವಲ ಅನುಭವಗಮ್ಯವಾದವುಗಳೆಂದೇ ಹೇಳಬೇಕಾಗುವದು.

ನಾನು ಆತ್ಮನು. ಇನ್ನೊಬ್ಬನನ್ನು ನೋಡುವಾಗ ಅವನೂ ಆತ್ಮನೂ ಎಂಬ ಭಾವವೇ ಸರ್ವಾತ್ಮತ್ವದ ತಳಹದಿ. ಎಲ್ಲೆಲ್ಲಿಯೂ ಆತ್ಮನನ್ನೇ ಸಂದರ್ಶಿಸುವುದು ಸತ್ಯ ಸಾಕ್ಷಾತ್ಕಾರದ ಗುರುತು. ಅದೇ ಧನ್ಯಭಾವ ಸತ್ – ಚಿತ್ – ಆನಂದ ಎಂಬುದರಲ್ಲಿಯ ಆನಂದ ಭಾವವೂ ಅದೇ. ಅದನ್ನು ನೋಡಿ, ಇದನ್ನು ಬಿಡದೆ, ಇದನ್ನು ನೋಡಿ ಅದನ್ನು ಬಿಡದೆ. ಎರಡನ್ನೂ ಏಕಕಾಲಕ್ಕೆ ನೋಡಿ ನೇರವಾದ ದಾರಿಯಲ್ಲಿ ನಡೆಯುವುದೆ ಸಿದ್ಧಸ್ಥಿತಿ ಅದೇ "ನೃಣಾಂ ಏಕೋ ಗಮ್ಯಂ".



ಸಾವಂತ್ರಿಯ ಒಬ್ಬನೇ ಮಗನು ಬಿ. ಎ. ಪಾಸಾದ ಸಂಭ್ರಮವನ್ನು ಅವಳು, ತಾನು ಕೆಲಸ ಮಾಡುತ್ತಿರುವ ಮನೆಗಳಲ್ಲೆಲ್ಲ ಹಂಚಿಬಂದಳು.

"ನಿನ್ನ ದೈವ ತೆರೆಯಿತು ಸಾವಂತ್ರಿ! ಇನ್ನಾದರೂ ಈ ಕಸಮುಸುರೆಯ ಕೆಲಸವನ್ನು ಬಿಟ್ಟು ಹಾಯಾಗಿರು ನಮ್ಮವ್ವ! ರತ್ನದಂತಹ ಮಗನನ್ನು ಪಡೆದಿದ್ದೀ ತಾಯಿ! ನಿನ್ನ ನಸಿಬ ಬಹಳ ದೊಡ್ಡದು."

ದೇಶಪಾಂಡೆ ರಾಧಾಬಾಯಿ ಸಹಾನುಭೂತಿ ತೋರಿಸಿದಳು.

ಅಲ್ಲಿಯೇ ಆಕಳಸಗಣಿಯನ್ನು ತೆಗೆದುಕೊಂಡು ಹೋಗಲು ಬಂದ ಕುಲಕರ್ಣಿ ಸೋನೂಬಾಯಿ ಅಸಡ್ಡೆಯಾಗಿ ಹೇಳಿದಳು,

"ನೋಡ್ರೆವಾ! ರಾಧಾಬಾಯರ! ನಮ್ಮ ಹುಡುಗ ಮತ್ತ ನಾಪಾಸ ಆದ. ಈಗ ಬರೇ ಕಸಾಮುಸರೀ ಮಾಡೂವರ ಮಕ್ಕಳನ್ನ ಪಾಸ ಮಾಡತಾರಂತ! ದಿನಮಾನ ಎಲ್ಲಾ ಬದಲಾಗಿ ಹೋದು."

"ಅಂದ್ರ... ಬೇರೆ ಯಾರೂ ಶಾಣ್ಯಾರು ಇರಬಾರದೇನು ಹಂಗಾರ! ಸರಸ್ವತೀನ ಒತ್ತೀಇಟ್ಟು ಕೊಂಡೀರೇನ ನೀವು? ವಿದ್ಯಾದೇವಿಗೆ ದೇಶಪಾಂಡೇರೇನು, ಕುಲಕರ್ಣೀ ಅವರೇನು, ಮುಸುರಿ ತಿಕ್ಕೊ ಅವರೇನು? ಕೂಲಿಕುಂಬಳಿ ಮಾಡುವವರೇನು? ಆಕಿಗೆ ಎಲ್ಲಾರ ಮ್ಯಾಲೂ ಮಮತೆ ಇರತದರೆವಾ! ನಿನ್ನ ಮಗ ಅಭ್ಯಾಸ ಮಾಡದಿದ್ರ ಯಾರೇನು ಮಾಡಬೇಕು?"

"ಅಭ್ಯಾಸ ಮಾಡಿದ್ದಾ ಎಲ್ಲಾ ಮಾಡಿದ್ದಾ. ಆದರ ವಶೀಲಿ ಇಲ್ಲಾಂತ ನಪಾಸ ಮಾಡ್ಯಾರ?"

"ಪಾಸಿಗೂ ವಶೀಲಿಗೂ ಏನ ಸಂಬಂಧ ಅದನ್ರೀ ಸೋನೂಬಾಯಿ! ನೌಕರಿ ಕೊಡೂ ಮುಂದ ಹಾಂಗ ಮಾಡತಾರ ಅಂದ್ರ ನಂಬಿದರೂ ನಂಬಬಹುದು."

"ನಿಮಗೇನ ಗೊತ್ತದ ಸುಮ್ನ ಕೂಡ್ರಿ. ಈ ಸಾವಂತ್ರಿ ಮಗಾ ನಾಳೆ ಮುನುಸೂಫಾ, ಮಾಮಲೇದಾರ ಆಗಿ ಬರತಾನ."

"ಮತ್ತ ನಮಗೆಲ್ಲ ಸಂತೋಷ ಅಲ್ಲೇನು."

"ಹೌದ್ರೆವಾ! ಹೌದು!" ಎನ್ನುತ್ತ ಸೋನೂಬಾಯಿ ಸಗಣಿಯನ್ನು ಇನ್ನಷ್ಟು ಕೂಡಿಸಿಕೊಂಡು ಹೊರಟುಹೋದಳು.

"ಆಕಿ ಮಾತ ನೀಯೇನ ಹಚಿಕೋಬ್ಯಾಡ ಸಾವಂತ್ರಿ! ಅವರ ಸ್ವಭಾವ ಅಂದ್ರ ಹಿಂಗ ನೋಡು. ತನ್ನ ಮಗಾ ಪಾಸಾಗಲಿಲ್ಲ ಅಂತ ಸಿಡಿವರ ಮ್ಯಾಲ ಹರಿಹಾಯ್ತಾಳ. ಅದೆಲ್ಲಾ ಏನ ಮಾಡತೀ ಬಿಡು. ನಿನ್ನ ಮಗನಿಗೆ ಒಂದು ಮದುವಿ ಮಾಡಿ ಸೊಸಿ ಕೈಲೆ ಅಡಿಗೆ ಮಾಡಿಸಿಕೊಂಡು ಸುಖದಿಂದ ಇರು. ರಗಡ ಕಷ್ಟ ಬಟ್ಟೀದಿ."

ಬಡವಿ ಸಾವಂತ್ರಿಯ ಮಗ ಪುಟ್ಟಣ್ಣ ಪದವೀಧರನಾಗಿ ದೊಡ್ಡ ಅಧಿಕಾರಿಯಾದಾಗ ತಾಯಿಗೆ ಎಲ್ಲಿಲ್ಲದ ಸಂತಸ. ಹಳ್ಳಿಯ ಹೆಣ್ಣನ್ನು ಮದುವೆಯಾಗಲು ಕೇಳಿದ ತಾಯಿಯ ಮಾತನ್ನು ನಿರಾಕರಿಸಿದ ಪುಟ್ಟಣ್ಣ ತಾನು ಬಯಸಿದ ವಿದ್ಯಾವಂತ ಕನ್ಯೆಯೊಬ್ಬಳನ್ನು ವಿವಾಹವಾದ. ಮನೆಗೆ ಬಂದ ಸೊಸೆ ಅತ್ತೆಯನ್ನು ಹೊರದೂಡಿದಳು. ಪುನಃ ಅತ್ತೆ ಸೊಸೆ ಒಂದುಗೂಡದಾಗ ಪುಟ್ಟಣ್ಣ ಪ್ರಾಣಕ್ಕೆರವಾಗಿದ್ದ.



# ಕೈಸೆಯ ಬಿಟ್ಟಿತು

ಕೃಷ್ಣಮೂರ್ತಿ ಪುರಾಣಿಕ

೧

ಕೈತುಂಬ ಸಂಬಳ ತಂದುಕೊಡುವ ಮಗನ ಹೆಗ್ಗಳಿಕೆಯನ್ನು ಕಂಡ ಸಾವಂತ್ರಿಯ ಹಿಗ್ಗು ಹಿಡಿಸದಷ್ಟಾಯಿತು. ಪಟ್ಟಣದ ಚಿಕ್ಕದಾದರೂ ಚೊಕ್ಕ ಮನೆಯಲ್ಲಿ ಈ ತಾಯಿ ಸಂಸಾರ ಹೂಡಿ ಮಗನನ್ನು ಹೂವಿನಂತೆ ನೋಡಿಕೊಳ್ಳಹತ್ತಿದಳು. ಆ ದೀಪಗಳು, ಎಲ್ಲಿಬೇಕಾದಲ್ಲಿ ಕೊಳವೆಯ ನೀರು; ಯಾವುದಕ್ಕೂ ಕೊರತೆ ಇರಲಿಲ್ಲ.

ಮಗನಿಗೆ ಇನ್ನೂ ಮದುವೆಯ ಹೆಣ್ಣು ಬರಲಿಲ್ಲವೆಂಬುದೇ ಸಾವಂತ್ರಿಗೆ ಮುಖ್ಯ ಕೊರತೆಯಾಗಿತ್ತು.

ಇದನ್ನು ಆಗಾಗ ಆಡಿ ತೋರಿಸುತ್ತಿದ್ದಳು ತಾಯಿ. "ಈ ಮನೆಗೆ ಯಜಮಾನಿತಿ ಬರಬೇಕು ಮಗಾ!"

"ಆದರೆ ಹೊಸ ಯಜಮಾನಿ ಹಳೆಯ ಒಡತಿಯನ್ನು ಹೊರಗೆ ಓಡಿಸಿದರೆ ಏನು ಮಾಡುತ್ತೀ?"

"ಹಾಗೇಕೇ ಮಾಡುತ್ತಾಳೊ? ಅವಳೇನು ಹೆಣ್ಣು ಅಲ್ಲವೇನು?"

"ಸೊಸೆಯಾದವಳು ಹೆಣ್ಣೇ ಇರುತ್ತಾಳೆ ಬಿಡು."

"ನಾನು ಅತ್ತೆಯಾಗಿ ಅವಳನ್ನು ಕಾಡುವದಿಲ್ಲ ಸನ್ನಪ್ಪಾ! ನನಗೆ ನೀನೂ ಒಂದು ಕಣ್ಣು; ಅವಳು ಇನ್ನೊಂದು ಕಣ್ಣು. ಮುಖ್ಯ ನಿನಗೆ ಸುಖವಾಗಬೇಕು ಮಗಾ! ನಿನ್ನ ಸುಖಕ್ಕಾಗಿ ನಾನು ಏನು ಬೇಕಾದರೂ ಮಾಡುತ್ತೇನೆ."

ತಾಯಿಯ ಈ ಹೃತ್ಪೂರ್ವಕವಾದ ಮಾತುಗಳನ್ನು ಕೇಳಿ ಪುಟ್ಟಣ್ಣನ ಕಣ್ಣು ತುಂಬಿತು.

ಮತ್ತೆ ಎರಡು ತಿಂಗಳು ಕಳೆದವು.

ಆ ಭಾನುವಾರ ಮನೆಯ ಮುಂದೆ ಒಂದು ಕಾರು ಬಂದು ನಿಂತಿತು. ಕಾರಿನ ಒಳಗಿನಿಂದ ಮಾಲೆಗಳನ್ನು ಹಿಡಿದುಕೊಂಡ ಮಗ, ಇನ್ನೊಬ್ಬ ಮಾಲಾಧಾರಿಣಿಯೊಂದಿಗೆ ಇಳಿಯುತ್ತಿರುವದನ್ನು ಸಾವಂತ್ರಿ ನೋಡಿದಳು. ಸ್ಫುರದ್ರೂಪಿಯಾದ ಫ್ಯಾಶನೇಬಲ್ ಹೆಣ್ಣು. ಒಂದು ಕೈಯಲ್ಲಿ ವಾಚು. ಇನ್ನೊಂದರಲ್ಲಿ ಎರಡು ಚಿನ್ನದ ಬಿಲ್ವಾರಗಳು. ಕೊರಳ ಸೆರಗಿನ ಮೇಲೆ ಎದ್ದು ಕಾಣುವ ಹೊಚ್ಚ ಹೊಸ ಮಂಗಳಸೂತ್ರ.

ಸಾವಂತ್ರಿಗೆ ಈ ಹೆಣ್ಣನ್ನು ಕಂಡು ತುಸು ಭಯವಾಯಿತು. ಅವಳಿಗೆ ಕರಜೋಡಿಸಬೇಕೆನ್ನಿಸಿತು. ಆದರೆ ಏನೋ ಸಂದೇಹ ಬಂದು ಅವಳ ಮುಖ ಇಷ್ಟಗಲವಾಯಿತು. ಅವಳು ಅವರನ್ನು ನೋಡಿಯೂ ನೋಡದಂತೆ ಹಿಗ್ಗಿನಿಂದ ಒಳಗೆ ಸರಿದು ದೇವರ ಮುಂದೆ ಅಡ್ಡಬಿದ್ದಳು. ಕೆನ್ನೆ ತೊಯ್ದಿತು.

"ಅವ್ವಾ! ನಿನ್ನ ಸೊಸೆರಾಣಿ ಬಂದಿದ್ದಾಳೆ ನೋಡು"

"ನಿಮ್ಮ ಪುಣ್ಯದಿಂದ ಅದೂ ಆಗತದ ರಾಧಾಬಾಯಿಯಾ! ನಮ್ಮ ಹತ್ತಗಡೇ ಹೆಣ್ಣು ಬರಲಿಕ್ಕೆ ಹತ್ಯಾವ.""

"ಆದರ ನಿನ್ನ ಮಗಾ ಕಲ್ತಾವಾ. ಅಂಥಾ ಇಂಥಾ ಅಜ್ಞಾನಿ ಹುಡಿಗೀನ್ನ ಅವನ ಕೊಳ್ಳಿಗೆ ಕಟ್ಟಬ್ಯಾಡಾ."

"ಅವನೂ ನಿಮ್ಮಂಗ ಅಂತಾನ ಬಾಯಾರ! ತನ್ನ ಮದಿವಿ ತಾನ ಮಾಡಕೋತಾನಂತ. ಕಲ್ತಾಕಿ ಇರಬೇಕಂತ! ಚಂದ ಇರಬೇಕಂತ! 'ಫ್ಯಾಸಣಿ' ಇರಬೇಕಂತ!" ಆದರ ಫ್ಯಾಸಣಿ ಹೆಣ್ಣು ಒಗೆತನಾ ಮಾಡತಾಳೋ ಇಲ್ಲೊ ಯಾರಿಗೆ ಗೊತ್ತು. ನಮ್ಮ ಸುಂದ್ರಿಮಗಳು ಕೆಪಾಗ ರಂಜ ಆಗ್ಯಾಳು. ತೊಂಡೀ ಹಣ್ಣಿನಂಥ ತುಟಿ ಬಾಯಿ ಅದಾವು. ಆದರ ದನಕಾಯಿಯೂ ಹುಡುಗೀನ್ನ ಹ್ಯಾಂಗ ಮಾಡಿಕೊಳ್ಳೀ ಅಂತಾನು. ಆದರ ಹುಡುಗಿ ಭಾಳ ಪಸಂದ ಅದಾಳು."

"ನಿನ್ನ ಪಸಂದ ತಗೊಂಡು ಏನ ಮಾಡ್ತೀ. ಒಂದ್ನೋಗಿ ಒಂದಾದೀತು. ಆವಾ ಆರಿಸಿದ ಹುಡುಗಿನ ಮಾಡು."

"ನೌಕರಿ ಹತ್ತಿದ ಮ್ಯಾಕ ಮದಿವಿ ಮಾತಾ ಅಂತಾನು."

"ಅವನ ಮಾತೂ ಖರೇ ಅದ."

ಇಂಥ ಸಲಹೆಗಳನ್ನು ಕೇಳುವ ಸಂಭ್ರಮ ಸಾವಂತ್ರಿಯದಾಗಿತ್ತು. ಮಗನ ನೌಕರಿಯೂ ಮದುವೆಯೂ ತನ್ನ ಸುಖದ ಹಗಲುಗನಸುಗಳನ್ನು ಸವಿಯುತ್ತ ಸಾವಂತ್ರಿ ಹರಯ ಮರುಕಳಿಸಿದಂತೆ ಹೊಸ ವಾತಾವರಣದಲ್ಲಿ ತೇಲತೊಡಗಿದಳು.

ಪುಟ್ಟಣ್ಣನ ಸಂರಕ್ಷಣೆಯ ಭಾರವನ್ನು ವಹಿಸಿಕೊಟ್ಟು ಕಣ್ಣುಮುಚ್ಚಿದ ಪತಿರಾಯನನ್ನು ಸಾವಂತ್ರಿ ಈ ದಿನ ನೆನೆದಳು. ಕೂಲಿಯ ಕೆಲಸದಲ್ಲಿ ಮೈಮುರಿದು ದುಡಿದು ಹೆಂಡ ಕುಡಿದು ಸತ್ತುಹೋದ ಪತಿ ಈಗ ಬದುಕಿದ್ದರೆ ಪುಟ್ಟನ ತಂದೆಯಾಗಿ ದುಡಿಯದೇ ವಿಶ್ರಾಂತಿ ಪಡೆದು ಬದುಕಬಹುದಾಗಿತ್ತು. ಮಗನ ಸುಖವನ್ನು ಸುರಿದುಕೊಳ್ಳಬಹುದಾಗಿತ್ತು.

ಆ ದಿನ ಸಾವಂತ್ರಿ ಬಹಳ ಹೊತ್ತಿನ ವರೆಗೆ ತನ್ನ ತಗ್ಗು ಏರುಗಳಿದ್ದ ಧೂಳಿಧೂಸರಿನ ಮನೆಯಲ್ಲಿ ಹಾಗೆಯೇ ಕುಳಿತಿದ್ದಳು. ಅವಳಿಗೆ ಬೇರೆ ಮನೆಗಳಿಗೆ ಕೆಲಸ ಮಾಡಲು ಹೋಗುವ ಮನಸ್ಸೇ ಇರಲಿಲ್ಲ. ಬಿ. ಎ. ಮಗನ ತಾಯಿಯಾಗಿ ಕೆಲಸ ಮುಸುರೀ ಮಾಡಿ ಮಗನ ಮರ್ಯಾದೆ ಕಳೀಬ್ಯಾಡ ಸಾವಂತ್ರಿ ಅನ್ನುವ ಜನರಿಂದ ಅನ್ನಿಸಿಕೊಳ್ಳುವದು ಅವಳಿಗೆ ಬೇಡವಾಗಿತ್ತು.

"ಪಾಸಾದ ಕೂಡಲೇ ನೌಕರಿ ಸಿಕ್ಕಂಗ ಆಗಲಿಲ್ಲ ಅವ್ವಾ!"

"ಮತ್ತ ಒಂದನೇ ಆಗೀ ಅಂತಲಾ!"

"ಒಂದನೇ ನಂಬರು ಬರಲಿ, ಎರಡನೇ ನಂಬರು ಬರಲಿ ನೌಕರಿ ಏಕದಂ ಸಿಗೂದಿಲ್ಲವ್ವಾ!"

"ಹಿಂಗೇನು? ನನಗೇನು ಗೊತ್ತು ಮಣ್ಣು! ಮತ್ತ ಸುಂದ್ರಿ ಗಂಡ ಹೇಳಿ ಕಳಸ್ಯಾನ ಅವಗ ಏನ ಹೇಳಿ ಕಳಿಸಲಿ?"

"ನಾ ಮದಿವಿ ಮಾಡಕೊಂಬೂದಿಲ್ಲ ಅಂತ ಹೇಳಿ ಬಿಡು. ಕಗ್ಗ ಹಳ್ಳೀಹೆಣ್ಣ ಮಾಡಕೊಂಡು ನನಗ ಮಣ್ಣು ಮುಕ್ಕ ಅಂತೀ ಏನು?"

"ಬಾಳ ಚಂದಾ ಅದಾಳೋ ಪುಟ್ಟಣ್ಣ. ಕೆಲಸ ಬೊಗಸಿ ಪಸಂದ ಮಾಡತಾಳು. ಎಲ್ಲಾ ಅಡಗಿ ಮಾಡತಾಳು. ಈ ವಯಸ್ಸಿನಾಗ ಸಾವಗಿ ಎಳಿ ಸುದ್ದಾ ತೆಗೆತಾಳು. ಜಾಣ ಜಾಣ ಇದ್ದಾಳಪ್ಪಾ! ಮತ್ತ ಕಳ್ಳಬಳ್ಳೀ ಹೆಣ್ಣು ನನ್ನ ಹೊಟ್ಟಿ ನೆತ್ತಿ ನೋಡತಾಳು."

"ನಾ ಕಲ್ತಾಕೀನ್ನ ಮಾಡಕೋತೀನಿ ಅಂತ ಹೇಳಿಲ್ಲೇನು?

"ನಮ್ಮ ಜಾತಿ ಒಳಗ ಕಲ್ತಹೆಣ್ಣ ಸಿಗೂದಿಲ್ಲಪಾ!"

"ಬೇಕಾದಷ್ಟು! ಆದರ ನಮ್ಮ ಜಾತಿ ಒಳಗ ಮಾಡಕೋಬೇಕಂತ ಎಲ್ಲಿ ಹೇಳೇದ ಅವ್ವಾ!"

"ಭಾಳ ಶಾಣ್ಯಾ ಆದಿ ಬಿಡು. ಹಂಗಾರ ನೀ ಮಡ್ಡಮ್ಮನ ತರೂ ಅವಾ ಏನ ಹಂಗಾರ!"

"ಯಾರ ಬಂದರೂ ನಿನ್ನ ಮಣೀ ಮ್ಯಾಲ ಕೂಡ್ರಿಸಿ ಹಾಲು – ಸಕ್ರಿ ಕುಡುಸ್ತಾಳ ಆತಿಲ್ಲೋ?"

"ಕಲ್ತಾಕಿ ಸುದ್ದಾ?"

"ಕಲ್ತಾಕಿ ಸೊಸಿ ಅಲ್ಲೇನ? ಹೇಣ್ತಿ ಅಲ್ಲೇನ?"

"ನಾ ಯೇನ ಅತ್ತಿ ಹಾಂಗ ಸೊಸಿನ್ನ ನಡೆಸಿಕೊಳ್ಳೂದಿಲ್ಲಪ್ಪಾ! ಆಕಿನ್ನ ಕೈಯಾಗಿನ ಅರಗಿಣಿ ಹಂಗ ನೋಡಕೋತೀನಿ." ಎಂದ ಮಾತಿಗೆ ಪುಟ್ಟಣ್ಣ ಪುಷ್ಕಳವಾಗಿ ನಕ್ಕನು. ಮಗನ ನಗೆ ತೆರೆಗಳಲ್ಲಿ ಸಾವಂತ್ರಿ ತನ್ನ ನಗೆಬುಗ್ಗೆಗಳನ್ನು ತೇಲಿಬಿಟ್ಟು. ತನ್ನ ದೈನಂದಿನ ಕೆಲಸಕ್ಕಾಗಿ ಹೊರವಂಟಳು.

"ತಿಂಗಳೊಪ್ಪತ್ತಿನಾಗ ನೀ ಏನ ಮನೀ ಮನೀ ತಿರಗೂ ಕಾರಣ ಬೀಳೂದಿಲ್ಲ ಅವ್ವಾ!"

"ನಂಗೊತ್ತಿಲ್ಲೇನು ಬಾಳಾ!" ಎಂದಾಗ ಸಾವಂತ್ರಿಯ ಕಣ್ಣು ತುಂಬಿತ್ತು. ಇದು ಮಗನ ಬಗೆಗಿನ ಹೆಮ್ಮೆಯ, ಅಭಿಮಾನದ ಸಂಭ್ರಮದ ಗುರುತಾಗಿತ್ತು.

ಜೀವನದಲ್ಲಿ ಕಷ್ಟಬಟ್ಟ ಸಾವಂತ್ರಿಗೆ ಮಗನದೇ ತಂಪು ನೆರಳು. ಈ ತಂಪಿಗಾಗಿ ಅವಳು ಹಾರೈಸಿದ್ದಳು ಈಗ ಅವಳ ಹಾರೈಕೆ ಕೊಡುವ ಸಮಯ ಬಂದಿತ್ತು.

"ಆಂ? ನಿನ್ನ ಮದುವೆ ಯಾವಾಗ ಆಯಿತೋ ಬಾಳಾ!" ಸಾವಂತ್ರಿ ತಿದ್ದಿ ತೀಡಿ ಮಾತಾಡಿದಳು.

"ಇದೇ ಈಗ ಅದನ್ನು ಮುಗಿಸಿಕೊಂಡೇ ಬಂದೆವು. ನೋಂದಣಿ ಮದಿವಿ. ಏನೂ ಆಡಂಬರವಿಲ್ಲ."

"ಅಂದರ ಪೊಲ ಕೊಂಡಾಗ ಮಾಡತಾರಲಾ ರಜಿಸ್ಟ್ರಿ".

"ಹೆಣ್ಣು ತರುವಾಗೂ ಹಾಂಗ ಮಾಡಲಿಕ್ಕೆ ಬರತದ ಅವ್ವ!"

"ಅಂದ್ರ ಈ ಮದಿವಿ ಗಟ್ಟಿಗಟ್ಟಿ ಹೌದಲ್ಲೊ!"

"ಗಟ್ಟಿಮುಟ್ಟ. ಕೊಳ್ಳಾಗ ಗುಳದಾಳಿ ಕಾಣ ಸೂದಿಲ್ಲೇನು?"

"ಭಾಳ ಛಲೋ ಆತಪಾ! ಹೆಸರ ಹೇಳ್ರಿ ಈಗ" ಸಾವಂತ್ರಿ ಹೆದರುತ್ತ ಕೇಳಿದಳು.

"ಹೆಸರ ಹೇಳಬೇಕ?" ನವವಧು ನಗುತ್ತಲೇ ಕೇಳಿದಳು.

"ಅಥ್ಯಾಂಗ ಬಿಡತದ ಮತ್ತ?"

"ವಿಶಾಲಾಕ್ಷಿ!"

"ನಿಮ್ಮ ಹೆಸರಲ್ಲ ಬಾಯಾರ! ನಿಮ್ಮವರ ಹೆಸರ ಹೇಳ್ರೀ!"

"ಇದು ನನ್ನ ಮನಸ್ಸಿಗೆ ಬರೂದಿಲ್ಲ. ಹೆಸರ ಹೇಳಂದ್ರ ಇನ್ನೊಬ್ಬರ ಹೆಸರ ಹೇಳತಾರೇನು?"

"ಮಟ್ಟ ನಿನಗೆ ಇನ್ನೊಬ್ಬ ಹ್ಯಾಂಗ ಆದಾನು? ನಿನಗೆ ಗಂಡನ ಹೆಸರು ಹೇಳಲಿಕ್ಕೆ ನಾಚಿಕೆ ಬರತದೇನು?"

"ನಾಚಿಕೆ ಯಾಕ ಬರತದ?"

"ಮತ್ತ ಹೇಳ್ರಿ ಹಂಗಾರ!" ಸಾವಂತ್ರಿ ಸಂತೋಷದಿಂದ ಕೇಳಿದಳು.

"ಯುವರ್ ಓಲ್ಡ ಊಮನ್ ಈಜ ವ್ಹೆರಿ ಇಂಟರೆಸ್ಟಿಂಗ್ ಡಾರ್ಲಿಂಗ್!"

"ಇಂಗ್ಲೇಸದಾಗ ಒಗಟಾ ಹಾಕತೀಯೇನು?"

"ಹೋಗ್ರಿ ಸುಮ್ಮ! ಇವರ ಹೆಸರು ಪಿ. ಟಿ.ಎನ್ ರಾವ್!"

"ಆಂ?"

"ಪುಟ್ಟಣ್ಣ ಅಂತ ಇಂಗ್ಲಿಷನಾಗ ಹೇಳಿದಳು ಅಪ್ಪಾ!

ಮನೆತುಂಬಿದ ಸೊಸೆ ಮನ ತುಂಬದಿದ್ದರೂ ಸಾವಂತ್ರಿ ಅವಳೊಡನೆ ಪ್ರಯಾಸದಿಂದ ಏಗತೊಡಗಿದಳು. ಅವಳ ಕಿರುಕಳವನ್ನು ಮಗನ ಮುಂದೆ ತಪ್ಪಿ ಕೂಡ ಹೇಳುತ್ತಿರಲಿಲ್ಲ. ಇದರಿಂದ ಮಗನಿಗೆ ತೊಂದರೆಯಾಗುವದೆಂದು ತಿಳಿದ ತಾಯಿ ಹಾಲಾಹಲವನ್ನು ತಾನು ಕುಡಿದು ಅಮೃತವನ್ನೇ ಸೂಸತೊಡಗಿದಳು.

ವಿಶಾಲಾಕ್ಷಿ ಒಯ್ಯಾರದ ಹೆಣ್ಣು. ಟಾಯಿಪ್ ಪರೀಕ್ಷೆಯಲ್ಲಿ ಉತ್ತೀರ್ಣಳಾಗಿ ಪುಟ್ಟಣ್ಣನ ಆಫೀಸಿಗೆ ಚಾಕರಿ ಹಿಡಿದುಕೊಂಡು ಬಂದವಳು ಮೊದಲನೇ ನೋಟಕ್ಕೆಯೆ ಪುಟ್ಟಣ್ಣನನ್ನು ಸೆಳೆದಿದ್ದಳು. ಅವಳ ಕುಲಗೋತ್ರ ಯಾವುದನ್ನೂ ವಿಚಾರಿಸಲು ಪ್ರೇಮ ಮಾಡಗೊಡಲಿಲ್ಲ. ಒಂದು ಹೆಣ್ಣು; ಒಂದು ಗಂಡು. 'ಉತ್ತರ ಧ್ರುವದಿಂದ ದಕ್ಷಿಣ ಧ್ರುವಕೂ' ಬೀಸಿದ ಚುಂಬಕ ಗಾಳಿಯನ್ನು ಬಡಿಸಿಕೊಂಡು ಇವರು ಮದುವೆಯಾಗಲೇ ಬೇಕಾಯಿತು. ವಿಶಾಲಾಕ್ಷಿ ಚೆಂದೊಳ್ಳೆ ಹೆಣ್ಣು. ಆದರೆ ಅವಳಿಗೆ ಸ್ವಾತಂತ್ರ್ಯದ ವಿಪರೀತ ಕಲ್ಪನೆ ಇದ್ದಿತು. ತಾನು, ತನ್ನ ಗಂಡ ಈ ಸಂಬಂಧವನ್ನು ಬಿಟ್ಟರೆ ಉಳಿದವರೆಲ್ಲ ಪರಕೀಯರು, ಕಾಲ್ಕಸ ಎಂಬ ಭಾವನೆ ಅವಳದಾಗಿತ್ತು. ಅತ್ತೆಯ ಹಿರಿತನವನ್ನು ಅವಳು ಮನ್ನಿಸುವದು ಸಾಧ್ಯವಿರಲಿಲ್ಲ ಅವಳೊಂದು ತನಗಾಗಿ ದುಡಿಯಬೇಕಾದ ಅಂತಃಕರಣದ ಕತ್ತೆ ಎಂದು ಅವಳು ತಿಳಿದಿದ್ದಳು.

ಚಿಕ್ಕಪುಟ್ಟ ತನ್ನ ಕೆಲಸಗಳನ್ನು ಅವಳಿಂದ ಮಾಡಿಸಿಕೊಳ್ಳಹತ್ತಿದಳು.

"ಏ ಮುದುಕಿ ! ಈ ಕಸಾ ಹಂಗs ಅದ ಅಲ್ಲ. ಮತ್ತ ನನ್ನ ಹಾಸಿಗೆ ಯಾರ ಹಾಸಬೇಕು?" ಅಬ್ಬರಿಸಿ ಕೇಳಿದಳು ಮಗನ ಹೆಂಡತಿ.

"ನಾ ಎಲ್ಲಾ ಮಾಡತೇನ್ರಿ, ಆದರ ನನ್ನ ಮುದುಕಿ ಮುದುಕಿ ಅಂತ ಕರೀಬ್ಯಾಡ್ರಿ. ಅತ್ತೆ ಎಂದು ಕರೀರಿ. ತೊತ್ತಿನ ಹಾಂಗ ಕೆಲಸ ಮಾಡತೇನಿ" ಬಹುವಚನದಲ್ಲಿಯೇ ಮಾತಾಡಿದಳು ಅತ್ತೆ.

"ನಿನ್ನ ಮುದುಕೀ ಅಂತ ಕರೀದ ಹರೇದಾಕಿ ಆನಬೇಕೇನು? ಅತ್ತೆ ಎಂದು ಕರೆದು ನನ್ನ ಮರ್ಯಾದೆ ಕಡಿಮೆ ಮಾಡಿಕೊಳ್ಳಲೇನು? ನೀ ಕಸಾ ಮುಸುರೀ ಮಾಡದಿದ್ದರೆ......"

"ಮತ್ತ ಎಲ್ಲಾ ನಾನ ಮಾಡಿದರ ನೀ ಏನು ಮಾಡತೀದಿರಿ?"

"ಅದನ್ನ ತಗೊಂಡು ನೀ ಯೇನ ಮಾಡತೀದಿ?"

"ಇದು ಹ್ಯಾಂಗ ಬಗೀಹರಿದೀತವ್ವನವರ!"

"ಬಗೀಹರಿದಿದ್ದರರ ಹೋಗು. ನೀ ಕಸಾ ಮುಸುರಿ ಮಾಡೂವಾಕಿ ಅಂತಾ ಗೊತ್ತಿದ್ದರ ನಾ ಯಾಕ ನಿನ್ನ ಮಗನ್ನ ಮಾಡಕೋತಿದ್ದೆ. ಈಗ ಆರ ಏನ ಆತು. ಹೊರಟು ಹೊಗತೀನಿ."

"ಹ್ಯಾಂಗ ಹೋಗತೀದಿ. ಮದಿವಿ ಆಗಿಯಲಾ!"

"ಸೋಡಚೀಟಿ. ಡಾಯ್ವೋರ್ಸ ಇಲ್ಲೇನು?"

"ಅಂದ್ರ ನೀನು ಸೋಡಚೀಟಿ ಕೊಡೂ ಆಕಿ ಏನು?"

"ಪ್ರಸಂಗ ಬಂದ್ರ ಅದನ್ನೂ ಮಾಡಲಿಕ್ಕೆ ಬರತದ"

"ಅಂಥಾ ಪ್ರಸಂಗ ಏನು ಬಂದದರೀ ಈಗ?"

"ನೀ ಈ ಮನೀಯಾಗ ಇರೊದೇ ಒಂದು ದುರ್ಧರ ಪ್ರಸಂಗ."

"ನಾ ನಿನ್ನ ಗಂಡನ ತಾಯಿ. ಎಲ್ಲಿ ಹೋಗಲಿ?"

"ಯಾ ಸುಡುಗಾಡಕ್ಕಾರೇ ಹೋಗು. ಇಲ್ಲಿ ಇದ್ದು ನನ್ನ ಮರ್ಯಾದಿ, ನಿನ್ನ ಮಗನ ಮರ್ಯಾದಿ ಕಳೀಬ್ಯಾಡ."

"ಈ ಮಾತು ಪುಟ್ಟನೇ ಹೇಳಲಿ".

"ಅವರು ಹ್ಯಾಂಗ ಹೇಳತಾರ. ನಾ ಹೇಳಿದರ ಅವರು ಹೇಳಿದಂಗ ಆತು. ಈ ಮನ್ಯಾಗ ನೀ ಆರೇ ಇರಬೇಕು. ಇಲ್ಲಾ ನಾ ಆರೇ ಇರಬೇಕು. ಏನಂತೀದಿ?"

"ನಾಯಾಕ ಬ್ಯಾಡಾಗಿ ಇರಲೀ ನಮ್ಮವ್ವ. ನೀ ಚಂದಾಗಿ ಬಾಳೇ ಮಾಡಿಕೊಂಡು ಇರು. ಮತ್ತ ಬಾಣಂತಿತನಕ ಆರೇ ಕರಸತೀ ಇಲ್ಲೋ?"

ಗದ್ಗದ ಕಂಠದಿಂದ ಕೇಳಿದಳು ಸಾವಂತ್ರಿ.

"ಈ ಊರಾಗ ಹೆರಿಗೆ ಆಸ್ಪತ್ರೆ ಎಲ್ಲಾ ಸುಟ್ಟು ಹೊಗ್ಯಾವೇನ?"

ಸಾವಂತ್ರಿಗೆ ಸೊಸೆ ಹಸಿರು ಬಾವುಟ ತೋರಿಸಿದಳು. ಇದನ್ನು ಅನಿವಾರ್ಯವಾಗಿ ಪುಟ್ಟಣ್ಣ ಒಪ್ಪಲೇಬೇಕಾಯಿತು.

"ಪಾಪ! ಅವ್ವ ನನ್ನನ್ನು ಹಡೆಯಬಾರದಾಗಿತ್ತು". ಭಾರವಾದ ಧ್ವನಿಯಲ್ಲಿ ಗಂಡು ನುಡಿಯಿತು.

"ಅವರೇನು ನಿಮ್ಮನ್ನು ಹಡೆಯಬೇಕೆಂದು ಹೆತ್ತರೇನು? " ಚೆಲ್ಲಾಟದ ವ್ಯಂಗ್ಯದಲ್ಲಿ ಹೆಣ್ಣು ನುಡಿಯಿತು.

"ನಾಳೆ ನೀನೂ ಅತ್ತೆಯಾಗುವೆಯಲ್ಲ.

"ಯಾರಿಗೆ ಗೊತ್ತು?"

"ಗೊತ್ತಾಗುವ ದಿನ ಬಂದೇ ಬರುತ್ತದೆ. ನನಗೆ ಒಬ್ಬಳೇ ತಾಯಿ. ತಂದೆಯೂ ಆಗಿ ಸಂರಕ್ಷಿಸಿದಳು. ಕಂಡವರ ಮನೆಗೆಲಸಗಳನ್ನು ಮಾಡಿ ವಿದ್ಯೆ ಕಲಿಸಿದಳು. ತಾನು ಉಪವಾಸ ಬಿದ್ದು ನನಗೆ ಹೊಟ್ಟೆ ತುಂಬಾ ಉಣ್ಣಿಸಿದಳು. ಅಂಥ ತಾಯಿಯನ್ನು ಕಲಿತ ಅಸಂಸ್ಕೃತ ಅನಾಗರಿಕಳಾದ ನಿನ್ನ ಮಾತನ್ನು ಕೇಳಿ ದೂರ ಕಳಿಸಬೇಕು. ಇಲ್ಲವೇ ನಿನ್ನನ್ನು ದಬ್ಬಬೇಕು. ಆ ಶಕ್ತಿ ನನ್ನಲ್ಲಿ ಇಲ್ಲ... ನನ್ನ ತಾಯಿ ಮಾಡಿದ ಅನಂತ ಉಪಕಾರಗಳನ್ನು ಮರೆದರೆ......"

"ಅವೆಲ್ಲಾ ತಾಯಿ ಎನ್ನುವವಳು ಮಾಡುವ 'ರೂಟಿನ್' ಕೆಲಸಾರಿ. ಕೃತಜ್ಞತೆ, ಉಪಕಾರವೆಲ್ಲ ಭಾವನಾತ್ಮಕ. ನಮ್ಮ ಸ್ವತಂತ್ರಕ್ಕೆ......"

"ನಿನ್ನ ಸ್ವತಂತ್ರವೆಂದರೇನೇ?" ಎಂದು ಕೇಳಿದ ಪುಟ್ಟಣ್ಣ ಹೆಂಡತಿಯನ್ನು ತೀಕ್ಷ್ಣವಾಗಿ ನೋಡಿದನು.



ಈ ಮಾತಾಗಿ ದಿನಗಳು ಕಳೆಯುತೊಡಗಿದವು. ತಾಯಿಗೆ ಮಗನ ಮನೆಯಲ್ಲಿ ಪ್ರವೇಶ ಸಿಗದ್ದರಿಂದ ಪುಟ್ಟಣ್ಣನಿಗೆ ಹೃದ್ರೋಗ ಹತ್ತಿದಂತಾಯಿತು. ಮೊಮ್ಮಗನನ್ನು ನೋಡಲು ತಾಯಿ ಬಂದು ಒಂದೆರಡು ದಿನ, ಒಮ್ಮೊಮ್ಮೆ ಒಂದು ವಾರ ಇದ್ದು ಹೋಗ್ತಾ ಸಿಕೊಂಡು ಹೋಗುತ್ತಿದ್ದಳು. ಒಮ್ಮೆ ಮಾಡಿದ ತಪ್ಪನ್ನು ಮುಚ್ಚಿಕೊಳ್ಳಲು ವಿಶಾಲಾಕ್ಷಿ ಬೇರೆ ತಪ್ಪುಗಳನ್ನು ಮಾಡತೊಡಗಿದಳು.

ಒಮ್ಮೆ ಅಜ್ಜಿಯು ಮುದ್ದಿನಿಂದ ಒಳಗೆ ಬಂದ ಮಗು ತಾಯಿಯನ್ನು ಕೇಳಿತು.

"ಈ ಅಜ್ಜಿ ಯಾರು ಮಮ್ಮಿ! ಭಾಳ ಬಾಳ ಛಲೋ ಇದ್ದಾಳವಾ! ಈಕಿನ್ನ ಇಲ್ಲೆ ಇಟಗೋ."

"ಈ ಅಜ್ಜಿ ಒಂದು ಮುದುಕಿಯಪ್ಪಾ. ಅಜ್ಜಿ ಅನಬ್ಯಾಡ ಬಾಳಾ! ಮುದುಕಿ ಅನ್ನು."

"ಮತ್ತ ಅಪ್ಪ ಈ ಮುದುಕಿಗೆ ಅವ್ವಾ ಅಂತಾನಲಾ. ಮತ್ತ ಅಪ್ಪಗ ಅವ್ವಾ ಆದಾಕಿ... ..."

"ನಿನಗ ಏನೂ ಸಂಬಂಧಿಲ್ಲ ಹೋಗು."

ಮುದುಕಿಗೆ ಕಪಾಳಿಗೆ ಬಡೆದಂತಾಯಿತು. ಅವಳಿಗೆ ಅಲ್ಲಿ ನಿಲ್ಲಲಾಗಲಿಲ್ಲ.

ಮಗು ಬಾಲಭಾಷೆಯಲ್ಲಿ ನಡೆದುದನ್ನು ಹೇಳಿದಾಗ ಪುಟ್ಟಣ್ಣನಿಗೆ ಆದ ದುಃಖಕ್ಕೆ ಅಳತೆ ಇರಲಿಲ್ಲ.

"ಅವ್ವನನ್ನು ಹೊರಗೆ ಹಾಕಿದೆಯಾ ?"

"ಆರ್ಥಿಕ ಮುಗ್ಗಟ್ಟಿನ ಕಾಲದಲ್ಲಿ ಅನಾವಶ್ಯಕ ಜನರು ಏಕೆ ಇರಬೇಕು?

"ಏನು ನನ್ನ ತಾಯಿ ನಿನಗೆ ಅನಾವಶ್ಯಕ ವಸ್ತು ಆದಳೇನು?"

"ನಿನ್ನ ಮಗನಿಗಾಗಿ ಹೆಣ್ಣಾಳನ್ನು ನಿಯಮಿಸಿರುವೆಯಲ್ಲ! ಇದು ಅನಾವಶ್ಯಕವಲ್ಲವೇನು? ನಿನ್ನ ಕೂಳು ಕುಚ್ಚಲು ಉಡಿಯೇ ಹೆಂಗಸು ಏಕೆ ಬೇಕು? ಈ ಎರಡೂ ಕೆಲಸಗಳನ್ನು ......"

"......ನಿಮ್ಮ ತಾಯಿ ಹೇಗೆ ಮಾಡಿಯಾರು?"

"ನನ್ನ ತಾಯಿ ಕೂಲಿಯವಳೇನು?"

"ಅದನ್ನೇ ಹೇಳಿದ್ದು. ಕೂಲಿಯವರ ಮೇಲೆ ನನಗೆ ಅಧಿಕಾರವಿರುತ್ತದೆ. ನಿಮ್ಮ ತಾಯಿಯ ಮೇಲೆ ಅಧಿಕಾರ ಮಾಡಿದರೆ ನಿಮ್ಮ ಮೂಗು ಕೆಂಪಾಗುತ್ತದೆ. ಆದ ಸಂಗತಿಗಳನ್ನು ಏಕೆ ... ಕೆದಕುತ್ತೀರಿ...? ಮೊದಲೇ ಕೆಮ್ಮುತ್ತೀರಿ... ಆಗಲಿಲ್ಲ... ಹೋಗಲಿಲ್ಲ" ಎಂದು ಹೆಂಡತಿ ಕೈ ನೀಡಿರುವ ಹೊತ್ತಿಗೆ ಮಗು ಅಪ್ಪ ಬಾಯಿ ಹಾಕಿ ಕೇಳಿತು.

"ಅಪ್ಪಾ! ಅಜ್ಜಿ ಎಂದ ಬರತಾಳ?"

"ನಾ ಸತ್ತಿಂದ!"

"ನೀ ಎಂದ ಸಾಯುತೀದಿ?

"ಅದನ್ನು ನಿನ್ನ ಮಮ್ಮಿನ್ನ ಕೇಳಿ ತಿಳಕೊ."

"ನೀ ಲಗೂ ಸತ್ತರ ಅಜ್ಜಿ ಲಗೂ ಬರತಾಳೇನು?

"ಹೂಂ!"

"ಹುಗಾರ......

ವಿಶಾಲಾಕ್ಷಿ ಮಗನ ಕೆನ್ನೆಗೊಂದು ಫಳೀರನೆ ಕೊಟ್ಟು ಒಳಗೆ ಎಳೆದುಕೊಂಡು ಹೋದಳು.

೪

ಬಾಯಿಯಲ್ಲಿ ಬಿಸಿತುಪ್ಪ, ನುಂಗಲಾರ, ಹೊರಗೆ ಬಿಡಲಾರ. ಇದರಿಂದ ಪುಟ್ಟಣ್ಣ ಕೊರಗಿದನು. ರೋಗಗ್ರಸ್ತನಾದನು. ತಾಯಿಯ ಬಗ್ಗೆ ಅವನ ಎದೆಯೊಡೆಯಿತು. ಈ ಸೂಕ್ಷ್ಮವನ್ನು ಉದ್ಯೋಗಸ್ಥ ಮಹಿಳಾ ಹೆಂಡತಿ ಅರಿಯಲಿಲ್ಲ. ನಿರ್ಜೀವ ಯಂತ್ರದ ಮುಂದೆ ಕುಳಿತು ಟಪಟಪ ಬಡಿಯುವ ಈ ಮಾನವಯಂತ್ರ ಮಾನವೀಯತೆಯನ್ನು ಅರಿಯಲಿಲ್ಲ.

ಪತಿಗೆ ರೋಗವೆಂದು ತಿಳಿದ ಅವಳು, ಅದು ಹೃದ್ರೋಗವೆಂದು ಅರಿಯಲಿಲ್ಲ. ಅದು ಕ್ಷಯವೆಂದು ಅರಿತಳೇ ಹೊರತು ಅದರ ಕಾರಣ ಮೂಲವನ್ನು ತಿಳಿಯಲಿಲ್ಲ.

ಅಷ್ಟಷ್ಟು ಜ್ವರ, ಅಷ್ಟಷ್ಟು ಕೆಮ್ಮು. ನಿತ್ರಾಣ.

"ಅವ್ವನ್ನ ಕರೆಸ್ತಿಯೇನ್ನೋಡು ವಿಶಾಲಾ!"

"ಯಾಕೆ ಮಾಡುವದರಲ್ಲಿ ನಾಯೇನು ಕಡಿಮೆ ಮಾಡುತ್ತಿರುವೆನೇನು?"

"ಹಾಗೆನ್ನುವದಿಲ್ಲ. ಆದರೆ ಅವ್ವ ಬಂದಿದ್ದರೆ ನೆಟ್ಟಗಿತ್ತು. ಅವಳನ್ನು ನೋಡುವ ಹಾಗಾಗಿತ್ತು."

"ಒಬ್ಬ ಬೇನೆಯುವರಿಗೆ ಮಾಡುವದೇ ಸಾಕು; ರೋಗಸ್ಥ ಮುದುಕಿಯನ್ನು ಕೊರಳಲ್ಲಿ ಪೋಣಿಸಿಕೊಳ್ಳಲೇನು?"

"ಅವ್ವನಿಗೆ ರೋಗವೇ?" ಪುಟ್ಟಣ್ಣ ಅಸಾಧ್ಯವಾಗಿ ಕೆಮ್ಮತೊಡಗಿದನು.

ಈ ಕೆಮ್ಮು ಸ್ವಾಭಾವಿಕವಾದ ಕೆಮ್ಮು ಆಗಿರಲಿಲ್ಲ. ಇದು ವಿಶಾಲಾಕ್ಷಿಗೂ ಗೊತ್ತಿತ್ತು. ಅಂದು ತನ್ನ ಗೆಳೆಯ ಡಾಕ್ಟರನನ್ನು ಕರೆದು ತೋರಿಸಿಕೊಂಡಳು.

ಕಲ್ಯಾಣಧಾಮದಲ್ಲಿ ಕೆಲವು ದಿವ ಇದ್ದು ಬಂದರೆ ಗುಣವಾದೀತು ಎಂಬ ಸಲಹೆ ನೀಡಿದರು ಡಾಕ್ಟರ್.

ಈ ಮಾತನ್ನು ಕೇಳಿದ ಪುಟ್ಟಣ್ಣ ದೀರ್ಘವಾದ ನಿಟ್ಟುಸಿರು ಬಿಟ್ಟನು. ವಿಶಾಲಾಕ್ಷಿ ಗಂಭೀರಳಾದರೂ ಈ ಸಲಹೆಯನ್ನು ಕಾರ್ಯರೂಪದಲ್ಲಿ ತರಲು ನಿಶ್ಚಯಿಸಿದಳು.

ಪುಟ್ಟಣ್ಣನಿಗೆ ಈ ವಾರ ಜ್ವರ ನಿಲ್ಲಲೇ ಇಲ್ಲ. ಆಹೊತ್ತು ವಿರಿಕೆಯ ಜ್ವರ ಏನು ಮಾಡಿದರೂ ಕಡಿಮೆಯಾಗಲಿಲ್ಲ. ಬಡಬಡಿಕೆ ಹೆಚ್ಚಾಯಿತು. "ಅವ್ವಾ ...ಲಗೂ ಬಾ... ಅವ್ವ... ನಿನಗ ರೋಗ... ಮತ್ತ ...ನಾ...ಪಾ...ಪಿ... ಏನು ಮಾಡಲಿ ಅವ್ವಾ... ಅವ್ವಾ... ಅವ್ವಾ......"

ವಿಶಾಲಾಕ್ಷಿ ಮಂಚದ ಹತ್ತರ ಕುಳಿತು ಈ ಬಡಬಡಿಕೆಯನ್ನು ಕೇಳಿ ಮಳುಮುಳು ಅಳಹತ್ತಿದಳು. ಅತ್ತೆಯನ್ನು ಕರೆಸಬೇಕೆಂದು ನಿಶ್ಚಯಿಸಿದಳು. ಆ ದಯಾಭರಿತ ಮುಖವನ್ನು ನೆನೆದಳು......

ಆ ಹೊತ್ತಿಗೆ ಕಲ್ಯಾಣಧಾಮದ 'ಜೀಪ್' ಬಂದದ್ದರಿಂದ ಅವಳ ಯೋಚನೆಗಳೆಲ್ಲ ಕರಗಿ ಹೋದವು.

ಜನರಲ್ ವಾರ್ಡಿನ ಒಂದು ಮೂಲೆಯಲ್ಲಿ ವಿಚ್ಚರಪಿಲ್ಲದೆ ಬಿದ್ದು ಅ...ಅ... ಅವ್ವಾ ...ಅವ್ವಾ... ಎಂದು ಬಡಬಡಿಸುವ ಗಂಡನನ್ನು ನೋಡಿ ವಿಶಾಲಾಕ್ಷಿ ಹೌಹಾರಿದಳು. ಕಣ್ಣುಕುಣಿಕೆ ತುಂಬಿ ತುಂಬಿ ಸೂಸತೊಡಗಿದವು.

ಅಳುವ ತಾಯಿಯನ್ನು ನೋಡಿ ಮಗು ಕೇಳಿತು.

"ಅಪ್ಪನ ಅವ್ವ ಅಂದರ ಅಜ್ಜೀನೆ ಹೌದಲ್ಲೊ ಮಮ್ಮಿ!"

"ಹೂಂ!"

"ಮತ್ತ ಆಕೀ ಯಾವಾಗ ಬರತಾಳ?"

"ಬರತಾರ...... ಬರತಾರ......"

"ಅಪ್ಪ ಅಂದ ಅಂದಿದ್ದ...... ಅದಕ್ಕ ನೀ ಹೊಡೆದಿದ್ದಿ......"

ವಿಶಾಲಾಕ್ಷಿ ಮಗನ ಬಾಯ ಮೇಲೆ ಕೈಹಿಡಿದು ಅಂದಳು,

"ಅಂಥಾ ಮಾತು ಆಡಬಾರದು ಮಗೂ!"

"ಮತ್ತ ಅಜ್ಜಿ ಯಾವಾಗ ಬರತಾಳ ಹಂಗಾರ!" ಎಂದು ಮಗು ಕೇಳುವ ಹೊತ್ತಿಗೆ ಪುಟ್ಟಣ್ಣ ದೀರ್ಘವಾಗಿ ನರಳಿದನು.

ಆ ರಾತ್ರಿ ಪುಟ್ಟಣ್ಣನು ಕಾಟಿನ ಮೇಲೆ ಒಂದೇ ಸವನೆ ಹೊರಳಾಡುತ್ತಿದ್ದನು.

ಆ ಹಳ್ಳಿಯ ಮನೆಯಲ್ಲಿ,

ಸಾವಂತ್ರಿ ಕೂಡ ನಿದ್ದೆ ಹತ್ತದೆ ಒದ್ದಾಡುತ್ತಿದ್ದಳು. ಯಾವ ಯಾವ ಅಪಶಕುನಗಳೋ ಏನೋ ತಾಯಿ ಹೆದರಿದಳು. ಮಗನ ಕ್ಷೇಮವನ್ನು ಹೇಗಾದರೂ ತಿಳಿದುಕೊಂಡೇ ಬರಬೇಕೆಂದು ಮರುದಿನ ಅವಳು ಹೊರಟೇ ಬಿಟ್ಟಳು. ಅಲ್ಲಿ ಕೇಳಿದ ಸುದ್ದಿಯಿಂದ ಗಾಬರಿಯಾಗಿ ಅನ್ನ ನೀರುಗಳ ಪರಿವೆ ಇಲ್ಲದೆ ಕಲ್ಯಾಣಧಾಮಕ್ಕೆ ಧಾವಿಸಿದಳು. ಆದರೆ ಮಗನನ್ನು ಹೇಗೆ ಕಾಣಬೇಕು?

"ಏ ಮುದುಕಿ! ಯಾರು ಬೇಕು ನಿನಗೆ?" ಕಾಂತಾ ಶಿಸ್ಟರ್ ಕೇಳಿದಳು.

"ನನ್ನ ಮಗಾ!"

"ಏನ ಆಗೇದ ನಿನ್ನ ಮಗನಿಗೆ?" ಪ್ರೇಮಾ ಶಿಸ್ಟರ್ ಕೇಳಿದಳು.

"ಅದನ್ನ ತಿಳಕೋಬೇಕಾಗೇದ ಮಗಳ!"

"ಅವನ ಹೆಸರು, ದೆಶಿ, ಏನಾರ......

"ನನ್ನ ಮಗಾ ಪುಟ್ಟಣ್ಣ ಅಂತ ಹೇಳಿದೆನಲ್ಲ... ಅವನ ಹೇಣ್ತೀ......"

"ಓ! ವಿಶಾಲಾಕ್ಷಮ್ಮನವರ ಪತಿ ಇರಬಹುದು." ಇಂದಿರಾ ಶಿಸ್ಟರ್ ಊಹಿಸಿದರು.

"ಹೌದು ಹೌದು ಅವಳೇ......"

"ನನ್ನ ಗೂಡ ಬಾ!......"

"ಆದರ ಆಕಿ ಇದ್ದರ ಮಗನ ಮುಖಾ ತೋರಗೊಡೂದಿಲ್ಲ."

"ಹಿಂಗದೇನ ಸಮಾಚಾರ!" ಹಾಂಗಾರ ಆ ಮೂಲ್ಯಾಗ ಆದ ನೋಡು ಕಿಡಕಿ ಅಲ್ಲಿ ನಿಂದರು ಕಾಣಸ್ತದ ಮುಖ. ನಿನ್ನ ಮಗಂದು."

"ಆಕಿ........."

"ಈಗಿಲ್ಲ ಹೋಗು."

ಸಾವಂತ್ರಿ ಕಿಡಕಿ ಹತ್ತರ ಹೋಗಿ ನಿಂತಳು. ಕುರುಚಲು ಗಡ್ಡದ ತಗ್ಗುಬಿದ್ದ ಕೆನ್ನೆಯ ರೋಗಿಯನ್ನು ನೋಡಿ ಅವಳ ಎದೆ ಚುರ್ರೆಂದಿತು. ಮಗನನ್ನು ಅಪ್ಪಿಕೊಳ್ಳಬೇಕೆನಿಸಿತು. ಅವನ ಮೈಮೇಲೆ ಬಿದ್ದು ಹೊರಳಾಡಬೇಕೆನಿಸಿತು...... ಆದರೆ... ಅವಳು... ಬಂದರೆ,

ಸಾವಂತ್ರಿ ಹೆದರಿ ಹಿಂದೆ ಸರಿದಳು. ಸ್ಪೇಶಲ್ ವಾರ್ಡದ ಎದುರು ಕಟ್ಟೆಯ ಮೇಲೆ ಕುಳಿತು ಗಳಗಳ ಅತ್ತಳು.

ಮತ್ತೊಮ್ಮೆ ಜನರಲ್ ವಾರ್ಡಿಗೆ ಹೋದಾಗ ಎಲ್ಲರೂ ಹಚಾ! ಹಚಾ! ಅನ್ನುವಂತೆ ಬೆದರಿಸಿ ಹೊರಗೆ ಹಾಕಿದರು.

"ಏ! ಇಂದಿರಕ್ಕ ಶಿಸ್ಟರಾ! ನನ್ನ ಮಗನಿಗೆ ಏನಾಗೇದವಾ?"

"ಕೋಮಾ ಸ್ಥಿತಿಯಿಂದ ಈಗ ಹೊರಬರ ಹತ್ತಿದ್ದಾನೆ. ಆದರೆ ಭಾಳ ಸೀರಿಯಸ್!"

"ಶಾಮಣೆ ಆಗಿತ್ರೇನ ಹಂಗಾರ!"

ಆ ರಾತ್ರಿ ಸಾವಂತ್ರಿ ಹತ್ತು, ಹನ್ನೆರಡು ಬಾರಿಯಾದರೂ ಸೊಸೆಯ ಕಣ್ಣು ತಪ್ಪಿಸಿ ಕಿಡಕಿಯಿಂದ ಮಗನನ್ನು ನೋಡಿದಳು. ಮಮ್ಮಗನನ್ನು ನೋಡಿ ಅವಳ ಕರುಳು ಚುರ್ರೆಂದಿತು. ಕೊನೆಯ ಸಲ ನೋಡಿ ಓಡುತ್ತ, ಹೊರಗೆ ಬಂದು,

"ಏ! ಶಿಸ್ಟರಾ! ಅವನ ಮೂಗಿನಾಗ ಕೊಳವಿ ಯಾಕ ಹಾಕ್ಯಾರ ನಮ್ಮವ್ವಾ!"

"ಹೋಗು! ಹೋಗು...!

ಸಾವಂತ್ರಿ ದೂರ ಹೋಗಿ ಗಿಡದ ಬುಡಕ್ಕೆ ಮಲಗಿದಳು.

೫

ಸಾವಂತ್ರಿ ಚುಮುಚುಮು ನಸುಕಿನಲ್ಲೇ ಎದ್ದು ನಲ್ಲಿಯ ನೀರಿನಿಂದ ಮುಖ ತೊಳೆದುಕೊಂಡು ಹತ್ತರದ ಬಾವಿಯಲ್ಲಿ ಮಿಂದಳು. ಇಡೀ ವದ್ದೆಯಲ್ಲಿಯೇ ಮಾರುತಿಯ ದೇವಾಲಯಕ್ಕೆ ಹೋಗಿ ಐಳು ಪ್ರದಕ್ಷಿಣೆ ಹಾಕಿದಳು. ಪ್ರಸಾದವನ್ನು ಕಟ್ಟಿಕೊಂಡು ನೇರವಾಗಿ ಜನರಲ್ ವಾರ್ಡಿನ ಕಡೆಗೆ ನಡೆದಳು.

ಬಾಗಿಲ ಹತ್ತರ ನಿಂತು ಅಲ್ಲಿ ನಿಂತ ಶಿಸ್ಟರನ್ನು ಕರೆದು ಹೇಳಿದಳು.

ಈ ಪ್ರಸಾದವನ್ನು ನನ್ನ ಮಗನಿಗೆ ಹಚ್ಚು ಬದುಕುತ್ತಾನೆ. ನಿನ್ನ ಕಾಲ ಬೀಳತೀನಿ ಮಾರಾಯಳ! ಹಾಗೆ ನನ್ನನ್ನು ನೋಡಬ್ಯಾಡ! ಇದು ಮಾರುತೀ ಪ್ರಸಾದ ಕಾಂತಾ ಶಿಸ್ಟರ್!"

ಕಾಂತಾ ಶಿಸ್ಟರನಿಗೆ ಏನು ಹೇಳಬೇಕೋ ತಿಳಿಯದಾಯಿತು. ನೀರು ಇಳಿಯುತ್ತಿದ್ದ ಈ ಮುದುಕಿಯನ್ನು ಹೇಗೆ ಸಮಾಧಾನ ಮಾಡಬೇಕು ತಿಳಿಯದೆ,

"ನೀನೇ ಹಚ್ಚು ತಾಯಿ!"

"ಆದರ ಆಕಿ ಇದ್ದಾಳಲ್ಲ ನನ್ನ ಸೊಸಿ ಹಚ್ಚಿಸಿ ಕೊಡೂದಿಲ್ಲ."

"ಎಲ್ಲಾ ಹಚ್ಚಿಸಿಕೊಡತಾಳ ಹೋಗು.

"ಹಂಗಾರ ಹೋಗಲಾ?"

ಕಾಂತಾ ಆಸ್ಪತ್ರೆಯಲ್ಲಿ ಎಂದೂ ಕಣ್ಣು ತುಂಬಿಕೊಂಡಿರಲಿಲ್ಲ. ಸಾವಂತ್ರಿಯ ಪ್ರಶ್ನೆಗೆ ಅವಳು ಗೋಣು ಮಾತ್ರ ಹಾಕಿದಳು.

ಸಾವಂತ್ರಿ ಹೆದರಿ ಹೆದರಿ ಸಾಯುವಂತೆ ಅತ್ತ ಇತ್ತ ನೋಡುತ್ತ ರೋಗಿಗಳ ಮಂಚಗಳ ಮಧ್ಯ ಹೊರಟಳು. ಆದರೆ,

ಮಗನ ಮಂಚದ ಮೇಲೆ ಯಾರೂ ಮಲಗಿರಲಿಲ್ಲ. ಆ ಕಾಟು ಬರಿದಾಗಿತ್ತು.

"ಅಂ ? ನನ್ನ ಮಗಾ! ಏನಾತು ನನ್ನ ಕಂದಗ?"

ಸಾವಂತ್ರಿಯ ಕೈಯೊಳಗಿನ ಬದುಕುವ ಪ್ರಸಾದ ಮುಷ್ಟಿಯೊಳಗಿಂದ ಜಾರ ಹತ್ತಿತು. ಅವಳು ಥರ ಥರ ನಡುಗ ಹತ್ತಿದಳು.

"ನಿನ್ನ ಮಗನ ಕಥಿ ಮುಗಿತು ಹೋಗು... ಇದು ದವಾಖಾನೆ... ಅಳಬಾರದು. ಅಸ್ಪತ್ರ್ಯಾಗ? ......ನಡಿ ಮುದುಕವ್ವಾ!......"

ಸಾವಂತ್ರಿ ಬಲ ಅಂಗೈಯಿಂದ ಬಾಯಿ ಮುಚಿಕೊಂಡಳು.... ಸಿಸ್ಟರ್ ನೆರವಿನಿಂದ ಹೊರಗೆ ಬಂದಳು.

ಆ ಮೂಲೆಯಲ್ಲಿ ಒಂದು ಮಗು ಕುಳಿತುಕೊಂಡಿತ್ತು. ಗಂಟಿನ ಮೇಲೆ ಹೆಂಗಸೊಬ್ಬಳು ಕುಳಿತುಕೊಂಡಿದ್ದಳು.

ಮಗುವಿಗೆ ಏನು ನೆನಪಾಯಿತೋ ಸೊಂಡೆಯನ್ನು ಚಾಚಿ "ಅಪ್ಪ" ಎಂದು ಅಳಹತ್ತಿತು. ತಾಯಿ ಮಗುವನ್ನು ತಬ್ಬಿಕೊಳ್ಳುವಾಗ ಮಗು ಅಜ್ಜಿಯನ್ನು ನೋಡಿತು.

"ಮಮ್ಮಿ! ಅಜ್ಜಿ! ಅಜ್ಜಿ ಬಂದ್ಲು! ಅಪ್ಪ ಖರೇ ಮಾತಾಡಿದ್ದಾ ಮಮ್ಮಿ.........

"ಅಜ್ಜ! ಅಜ್ಜ......!" ಮಗು ತಾಯಿಯ ತೆಕ್ಕೆಯಿಂದ ಜೆಂಗನೆ ನೆಗೆದು ಓಡಿಬಂದು ಸಾವಂತ್ರಿಯನ್ನು ಅಪ್ಪಿಕೊಂಡು ಬಿಕ್ಕಿ ಬಿಕ್ಕಿ ಅಳಹತ್ತಿತು.

ವಿಶಾಲಾಕ್ಷಿ ಅತ್ತೆಯನ್ನು ನೋಡಿದಳು. ಅತ್ತೆ ಸೊಸೆಯನ್ನು ನೋಡಿದಳು.

ಫಳಕ್ಕನೆ ಚಿಮ್ಮಿದ ನೀರಿನಲ್ಲಿ ನೋಟ ಮಸುಕಾಯಿತು. ಹೃದಯ ಬಿಚ್ಚಿತು.

ಸಾವಂತ್ರಿಯ ಸೆರಗಿನಲ್ಲಿ ವಿಶಾಲಾಕ್ಷಿ ಬಿಕ್ಕಿ ಬಿಕ್ಕಿ ಅತ್ತಳು.



## ಮಲೆನಾಡಿನ ಒಂದು ಜಾನಪದ ಸಂಪ್ರದಾಯ

# ಅಂಟಿಗೆ ಪಂಟಿಗೆ

— ಡಾ. ಹಾ. ಮಾ. ನಾಯಕ್ -

ದೀಪಾವಳಿಯ ರಾತ್ರಿಗಳಲ್ಲಿ ಮನೆಮನೆಗೆ ದೀಪ ಒಯ್ಯುವ ಒಂದು ಸಂಪ್ರದಾಯ ಮಲೆನಾಡು ಪ್ರದೇಶದಲ್ಲಿ ವಿಶಿಷ್ಟವಾಗಿದೆ. ಈ ಸಂಪ್ರದಾಯ ನಾಡಿನ ಬೇರೆ ಯಾವ ಭಾಗಗಳಲ್ಲಿಯೂ ಕಂಡುಬರುವುದಿಲ್ಲ. ಇದು ಶಿವಮೊಗ್ಗ, ಚಿಕ್ಕಮಗಳೂರು ಹಾಗೂ ಕನ್ನಡ ಜಿಲ್ಲೆಗಳ ಕೆಲವು ಭಾಗಗಳಲ್ಲಿ ಈಗಲೂ ಪ್ರಚಲಿತವಾಗಿದೆ. ಕೊಪ್ಪ, ತೀರ್ಥಹಳ್ಳಿ ಪ್ರದೇಶದಲ್ಲಿ ಈ ಸಂಪ್ರದಾಯವನ್ನು "ಅಂಟಿಗೆ-ಪಂಟಿಗೆ"ಎಂದು ಕರೆಯುತ್ತಾರೆ. ಬೇರೆ ಕಡೆಗಳಲ್ಲಿ ಇದಕ್ಕೆ "ಜ್ಯೋತಿ ನೀಡುವುದು", "ದೀಪಕೊಡುವುದು", "ಹಬ್ಬಹಾಡುವುದು"–ಮುಂತಾದ ಹೆಸರುಗಳಿವೆ. ಈ ಸಂಪ್ರದಾಯ ಎಷ್ಟು ಪ್ರಾಚೀನವಾದುದೆಂದು ಖಚಿತವಾಗಿ ಹೇಳಲು ಬರುವುದಿಲ್ಲ. "ಸುಮಾರು ಕಳೆದ ನೂರೈವತ್ತು ವರ್ಷಗಳಿಂದಂತೂ ಈ ಪದ್ಧತಿ ನಡೆದುಕೊಂಡು ಬಂದಿದೆ" ಎಂದು ಶ್ರೀ ಕೆ.ವಿ. ಸುಬ್ಬಣ್ಣನವರು ಹೇಳುತ್ತಾರೆ. ಆದರೆ ಇದು ಇನ್ನೂ ಪ್ರಾಚೀನವಾದುದೆಂಬುದರಲ್ಲಿ ಸಂದೇಹವಿಲ್ಲ. ಈ ಜನಪದ ಸಂಪ್ರದಾಯ ಅನೇಕ ತಲೆಮಾರುಗಳಿಂದ ನಡೆದು ಬಂದಿದೆ.

ದೀಪಾವಳಿ ನಾಡಿನ ಬಹುದೊಡ್ಡ ಹಬ್ಬ. ಅದರ ಆವಧಿ ಆಚರಣೆಗಳು ತುಂಬ ವ್ಯಾಪಕವಾದವು. ವಾರ್ಷಿಕ ದುಡಿಮೆಯ ಶ್ರಮವೆಲ್ಲ ಮುಗಿದು ಇನ್ನೇನು ಅದರ ಫಲ ಕೈಗೆ ಬರುತ್ತದೆ ಎನ್ನುತ್ತಿರುವಾಗಲೆ ಈ ಬೆಳಕಿನ ಹಬ್ಬ ಬರುತ್ತದೆ. ಮಲೆನಾಡಿನಲ್ಲಿ ಈ ಹಬ್ಬವನ್ನು "ದೊಡ್ಡಹಬ್ಬ" ಎಂದೇ ಕರೆಯುತ್ತಾರೆ. ಬಲಿಪಾಡ್ಯಮಿ ದಿನದಿಂದ ಮೂರು ದಿನ ಈ ಹಬ್ಬದ ಉತ್ಸಾಹ-ವಿಜೃಂಭಣೆ. ಪಾಡ್ಯ, ಕರಿ, ವರ್ಷತೊಡಕು- ಈ ಮೂರು ದಿನಗಳ ರಾತ್ರೆಯಲ್ಲಿ ಮನೆಯಿಂದ ಮನೆಗೆ ದೀಪ ಮುಟ್ಟಿಸುತ್ತ ಹಾಡುತ್ತ ಹೋಗುವ ಪದ್ಧತಿ ಅಂಟಿಗೆ-ಪಂಟಿಗೆ. ಜನರು ಇದಕ್ಕಾಗಿಯೇ ದೀಪಾವಳಿಯನ್ನು ನಿರೀಕ್ಷಿಸುವ ಮಟ್ಟಿಗೆ ಇದರ ಸೊಗಸು-ಸ್ವಾರಸ್ಯ.

ಅಂಟಿಗೆ–ಪಂಟಿಗೆ ಜನಪದ ಹಾಡುಗಾರಿಕೆಯ ಒಂದು ಸಂಪ್ರದಾಯ. ಈ ಸಂಪ್ರದಾಯದ ಹಾಡುಗಾರರನ್ನು ಅಂಟಿಗೆ-ಪಂಟಿಗೆಯವರು ಎಂದು ಕರೆಯಲಾಗುತ್ತದೆ. ಈ ಹಾಡುಗಾರರು ಹಬ್ಬದ ಮೊದಲದಿನ ರಾತ್ರಿ ಊರ ದೇವಾಲಯದಲ್ಲೊ, ಬನದಲ್ಲೊ ಅಥವಾ ತುಳಸಿಕಟ್ಟೆಯ ಮುಂದೊ ಸೇರುತ್ತಾರೆ. ಅಲ್ಲಿ ಹಣತೆ ಹಚ್ಚುವ ಅಥವಾ ಜ್ಯೋತಿ ಹೊತ್ತಿಸುವ ಕೆಲಸ ನಡೆಯುತ್ತದೆ. ಅಲ್ಲಿ ದೇವರ ಮುಂದೆ ಹಣತೆ ಹೊತ್ತಿಸಿ ಅದರಿಂದ ಹಾಡುಗಾರರು "ಬತ್ತಿ ಕೊಳ್ಳು"ತ್ತಾರೆ. ಅಲ್ಲಿಂದಲೆ ಹಾಡು ಆರಂಭವಾಗುತ್ತದೆ. ಮೊದಲ ನಮನ ಈ ಹಣತೆಗೆ ಸಲ್ಲುತ್ತದೆ.

ಮಣ್ಣಲಿ ಹುಟ್ಟಿದೆ ಮಣ್ಣಲಿ ಬೆಳೆದೆ
ಎಣ್ಣೇಲಿ ಕಣ್ಣ ಬಿಟ್ಟದೆ
ಎಣ್ಣೇಲಿ ಕಣ್ಣ ಬಿಟ್ಟದೆ ಜಗಜ್ಯೋತಿ
ಸತ್ಯದಿಂದುರಿಯೇ ಜಗಜ್ಯೋತಿ

ಹಾಡುಗಾರರ ಸಂಖ್ಯೆಯ ಮೇಲೆ ತಂಡಗಳಾಗುತ್ತವೆ. ಹೆಚ್ಚು ಹೆಚ್ಚು ಹಾಡುಗಾರರಿದ್ದರೆ ಹೆಚ್ಚು ಹೆಚ್ಚು ತಂಡಗಳಾಗುತ್ತವೆ. ಅದರಿಂದ ಹೆಚ್ಚು ಹೆಚ್ಚು ಊರುಗಳನ್ನು ಸುತ್ತಬಹುದು. ಅನೇಕ ಸಂದರ್ಭಗಳಲ್ಲಿ ಒಂದೇ ತಂಡ ಹೊರಡುತ್ತದೆ. ಈ ಹಾಡುಗಾರರ ಜೊತೆಗೆ ದೀವಟಿಗೆಯವರು, ಸಂಭಾವನೆ ಹೊರುವವರು, ಉತ್ಸಾಹಿ ರಸಿಕರು, ಹಳ್ಳಿಯಹಾದಿಗಳನ್ನು ಬಲ್ಲ ಮಾರ್ಗದರ್ಶಿಗಳು ಇವರೆಲ್ಲರ ಗುಂಪಿರುತ್ತದೆ. ಗುಂಪು ದೊಡ್ಡದಿದ್ದಷ್ಟೂ ಹೆಚ್ಚು ಉತ್ಸಾಹ; ದಾರಿ ಬೇಗನೆ ಸವೆಯುತ್ತದೆ.

### "ದೀವ್ ದೀಪೋಳ್ಗೆ"

ಹೊತ್ತಿಸಿಕೊಂಡ ಹಣತೆ ಆರದಂತೆ ಅದಕ್ಕೆ ಅಡಿಕೆ ಹಾಳೆಯ ರಕ್ಷಣೆ ಕೊಟ್ಟು, ಅದನ್ನು ಹೊತ್ತ ದೀವಟಿಗೆಯವನನ್ನು ಮುಂದಿಟ್ಟುಕೊಂಡು ಅಂಟಿಗೆ-ಪಂಟಿಗೆ ತಂಡ ಹೊರಡುತ್ತದೆ. "ದೀಪ್ ದೀಪೋಳ್ಗಿ"ಎಂಬುದು ಅವರ ಗುಂಪುಕೂಗು. ಆ ಕೂಗು ನೀರವ ರಾತ್ರಿಗಳನ್ನು ಎಚ್ಚರಿಸುತ್ತದೆ. ಮಲೆನಾಡಿನ ಮಹಾರಣ್ಯಗಳು ಅದಕ್ಕೆ ಮರುದನಿ ಕೊಡುತ್ತವೆ. ಪಕ್ಕದ ಊರಿನ ಒಂಟಿ ನಾಯಿಗೆ ನಿದ್ರಾಭಂಗವಾಗಿ ಬೊಗಳಲು ಆರಂಭಿಸುತ್ತದೆ. ಅಂಟಿಗೆ-ಪಂಟಿಗೆಯವರ ಬರುವನ್ನೇ ನಿರೀಕ್ಷಿಸುತ್ತ ನಿದ್ದೆಹೋದ ಮನೆಮಂದಿಗೆಲ್ಲ ಎಚ್ಚರವಾಗುತ್ತದೆ. "ದೀಪ್ ದೀಪೋಳ್ಗಿ" ಕೂಗು ಅಂಟಿಗೆ ಪಂಟಿಗೆಯವರ ಆಗಮನದ ಸೂಚನೆ: ಅವರನ್ನು ಸ್ವಾಗತಿಸಲು ಸಿದ್ಧವಾಗುವಂತೆ ಆ ಕೂಗಿನ ಕರೆ. ಮೇಲಾಗಿ, ಎರಡು ತಂಡದವರು ಎದುರಾಗ ಬಾರದು. ಎರಡು ಜ್ಯೋತಿಗಳು ಎದುರಾಗಬಾರದು ಎನ್ನುವುದು ನಿಯಮ. ಆದ್ದರಿಂದ "ದೀಪ್ ದೀಪೋಳ್ಗಿ" ಕೂಗು ದಾರಿಸೂಚಕವೂ ಹೌದು. ಆಕಸ್ಮಾತ್ತಾಗಿ ಎರಡು ಗುಂಪು ಸೇರಬೇಕಾಗಿ ಬಂದಾಗ ಒಂದು ಗುಂಪು ಮರೆಯಲ್ಲಿ ಇದ್ದು, ಇನ್ನೊಂದು ಹೋದ ಮೇಲೆಯೆ ಹೊರಗೆ ಬರುತ್ತದೆ. "ದೀಪ್ ದೀಪೊಳ್ಗಿ" ಕೂಗಿಗೆ "ದಿಪ್ಪಡು" ಎಂದು ಹೆಸರು. "ದೀಪ್ ದೀಪೋಳ್ಗಿ" ಕೂಗಿಗೆ ಪ್ರಾಸಬದ್ಧವಾಗಿ ಎರಡನೆ ಸಾಲನ್ನು ತುಂಟ ಹುಡುಗರು ವಿನೋದಕ್ಕಾಗಿ ಸೇರಿಸುತ್ತಾರೆ. "ಜೋಳಿಗೆ ತುಂಬ ಹೋಳ್ಗಿ" ಎನ್ನುವುದು ಈ ಮರುಸಾಲು. "ಹಾರ‍್ರ ಮನೆ ಹೋಳಿಗೆ" ಎನ್ನುವುದು ಒಂದು ಪಾಠಾಂತರ!

ಅಂಟಿಗೆ-ಪಂಟಿಗೆಯವರು "ಬತ್ತಿಕೊಂಡು" ಹೊರಡುವ ಹೊತ್ತಿಗಾಗಲೇ ರಾತ್ರಿ ಸರಿಹೊತ್ತು ದಾಟಿರುತ್ತದೆ. ಅವರವರ ಮನೆಯಲ್ಲಿ ಹಬ್ಬದ ಕೆಲಸ ಳನ್ನೆಲ್ಲ ಮುಗಿಸಿ, ಊಟ ಪೂರೈಸಿ ಮೇಳದ ಸದಸ್ಯರು ಸೇರುವುದೇ ತಡವಾಗಿ ಹೋಗುತ್ತದೆ. ಕಾಲಕ್ಕೆ ಬೆಲೆಕೊಡದೆ, ವೀಳ್ಯಮೆದ್ದು ಕಾರ್ಯಕ್ರಮ ಚರ್ಚಿಸಿ, ಹಾಡುಗಾರರ ಅನುಭವ, ದನಿಗಳನ್ನು ಗಮನದಲ್ಲಿಟ್ಟು ತಂಡಗಳನ್ನು ಬೇರ್ಪಡಿಸಿ "ದೀಪ ದೀಪೋಳ್ಗಿ" ಕೂಗುಹಾಕಿ ಹೊರಡುವಹೊತ್ತಿಗೆ ನೆರೆಯೂರಿನ ತಂಡದವರ "ದಿಪ್ಪಡು" ಕಾಡ ಮೌನವನ್ನು ಸೀಳಿಕೊಂಡು ಬರುತ್ತದೆ. ಆಗ ಮೇಳದವರು ಎಚ್ಚರಾಗಿ ಗಡಿಬಿಡಿಯಿಂದ ಹೊರಡಲುವಾಗುತ್ತಾರೆ.

### "ಜ್ಯೋತ್ಯೆಮ್ಮನ ಕರಕೊಳ್ಳಿ"

ಅಂಟಿಗೆ–ಪಂಟಿಗೆಯವರು "ದಿಪ್ಪಡು"ಹಾಕುತ್ತಾ ಮನೆಯ ಬಳಿ ಬರುತ್ತಾರೆ. ಮನೆಯ ಎದುರಿನ ಅಂಗಳಕ್ಕೆ ಬರುತ್ತಲೇ ದಿಪ್ಪಡು ನಿಲ್ಲುತ್ತದೆ. ಹಾಡು ತೊಡಗುತ್ತದೆ. ಮನೆಯ ಬಾಗಿಲು ತೆರೆಸುವುದು ಮೊದಲನೆಯ ಕೆಲಸ. ಅದಕ್ಕಾಗಿ ಹಾಡಿನಲ್ಲೇ ಪ್ರಾರ್ಥಿಸುತ್ತಾರೆ.

ಬಾಗಿಲ ತೆಗಿರಮ್ಮಾ ಭಾಗ್ಯದ ಲಕ್ಷುಮ್ಮ
ಜ್ಯೋತ್ಯಮ್ಮನೊಳಗೆ ಕರಕೊಳ್ಳಿ
ಆ ಬಾಗಿಲೇನು ಸಾಮಾನ್ಯವಾದುದಲ್ಲ
ಬಾಗಿಲು ಬಾಗಿಲು ಚಂದ
ಈ ಮನೆಯ ಬಾಗಿಲು ಚಂದ
ಕದಕಿಂತ ಕದ ಚಂದ
ಈ ಮನೆಯ ಕದ ಚಂದ

ಬಾಗಿಲ ಮೇಲಣ ಚಿತ್ತಾರದ ವೈಭವವನ್ನು ಬಾಗಿಲು ತೆಗೆಸುವ ಹಾಡು ವರ್ಣಿಸುತ್ತದೆ. ಚಿನ್ನದ ಚಿಲುಕವನ್ನುಳ್ಳ ಆ ಬಾಗಿಲ ಮೇಲೆ ನವಿಲಿನ ಹಿಂಡು; ವಿಶದ ದಂಡು. ಎಷ್ಟು ಮನೆಗಳಿಗೆ ಈ ಪುಣ್ಯ? ಬಾಗಿಲು ತೆರೆಯಲು ಒತ್ತಾಯದ ಪ್ರಾರ್ಥನೆ ಮುಂದುವರಿಯುತ್ತದೆ: ದೀಪಕೊಳ್ಳುವವರ ಭಾಗ್ಯಗಳನ್ನು ಪಟ್ಟಿಮಾಡಿ ಹಾಡುತ್ತಾರೆ.

ಬಾಗಿಲು ತೆಗೆದ ಕೈಗೆ ಭಾಗ್ಯದ ಮಳೆ ಬಂದು
ದೀಪಕೊಂಡರಿಗೆ ದೊರೆಪದವಿ
ದೀಪಕೊಂಡರಿಗೆ ದೊರೆಪದವಿ ದೊರೆಯಲಿ
ದೀಪ ದೇವರ ಕರುಣೆರಲಿ

ತಾವು ಎಷ್ಟು ಶ್ರಮಪಟ್ಟು ಎಂಥ ಕಲ್ಲು ಮುಳ್ಳ ಕತ್ತಲ ಹಾದಿಯಲ್ಲಿ ದೀಪವನ್ನು ಉಳಿಸಿಕೊಂಡು ಬಂದಿದ್ದೇವೆಂಬುದನ್ನೂ ಅವರು ಹಾಡುತ್ತಾರೆ; ಗುಡ್ಡಬೆಟ್ಟವನ್ನು ಹತ್ತಿ ಇಳಿದ ಪ್ರಯಾಸವನ್ನು ವರ್ಣಿಸುತ್ತಾರೆ. ಆದರೆ ಈ ಸುಖದುಃಖವನ್ನು ಅವರು ಹೆಚ್ಚುಹೊತ್ತು ಹೇಳಿಕೊಂಡು ನಿಲ್ಲಬೇಕಾಗುವುದಿಲ್ಲ. "ಜ್ಯೋತ್ಯಮ್ಮನೊಳಗೆ ಕರಕೊಳ್ಳಿ"ಎಂಬ ಅವರ ಕರೆಗೆ ಮನೆಯ ಭಾಗ್ಯದ ಲಕ್ಷುಮ್ಮ ಕಿವುಡಾಗಿರುವುದು ಸಾಧ್ಯವಿಲ್ಲ. ಬಾಗಿಲು ತೆರೆಯುತ್ತದೆ. ಗುಂಪು ಹಾಡುತ್ತಲೆ ಮೆಟ್ಟಿಲೇರಿ ಒಳಗೆ ಬರುತ್ತದೆ. ಮಲಗಿದ್ದವರೆಲ್ಲ ಭಯಭಕ್ತಿಯಿಂದ ದಡಬಡನೆ ಎದ್ದು ಕಣ್ಣರಳಿಸಿ ಕೂರುತ್ತಾರೆ. ಮನೆಯ ತಾಯಿ ದೀವಟಿಗೆಯ ಎಣ್ಣೆ ತುಂಬಿ ಕಾಸುಹಾಕಿ ತನ್ನ ಹಣತೆಯನ್ನು ಹಚ್ಚಿಕೊಂಡು ಒಳಗೆ ತೆಗೆದುಕೊಂಡುಹೋಗಿ "ಅಗ್ನಿಗೂಡಿಸು"ತ್ತಾಳೆ. ಹಾಡುಗಾರರಿಗಾಗಿ ವೀಳ್ಯೆ ತಟ್ಟೆಯನ್ನು ಸಿದ್ಧಪಡಿಸುತ್ತಾಳೆ.

ಅಂಟಿಗೆ ಪಂಟಿಗೆಯವರ ಹಾಡು ಮುಂದುವರಿಯುತ್ತವೆ. ಪೀಠಿಕಾ ಪ್ರಸಂಗಗಳು ಕಳೆದ ಮೇಲೆ ಉತ್ತರದೇವಿ ಹಾಡು, ಕರ ಅಗಟುವ ಹಾಡು,

ಅರ್ಜುನಸ್ವಾಮಿ ಹಾಡು ಮುಂತಾದ ದೀರ್ಘ ಕಥನ ಗೀತಗಳನ್ನು ಹಾಡುತ್ತಾರೆ. ನಮ್ಮ ಜನಪದ ಸಾಹಿತ್ಯದ ಒಂದು ವಿಶಿಷ್ಟ ಭಾಗ ಈ ಅಂಟಿಗೆ-ಪಂಟಿಗೆ ಪದಗಳು. ಈ ಪದಗಳಲ್ಲಿ ನಮ್ಮ ಜನಪದ ಕವಿಗಳು ಕಂಡ ಪೌರಾಣಿಕ ಪ್ರಪಂಚವೇ ತೆರೆದಿರುತ್ತದೆ; ಶೃಂಗಾರ ವೀರ ಹಾಸ್ಯ ಕರುಣೆಗಳು ಅವುಗಳಲ್ಲಿ ತುಂಬಿ ತುಳುಕುತ್ತವೆ. ನಿರಾಡಂಬರ ನಿರೂಪಣೆ, ಕಣ್ಣಿಗೆ ಕಟ್ಟುವ ವರ್ಣನೆ, ವೈವಿಧ್ಯಪೂರ್ಣವಾದ ಪಾತ್ರ ನಿರ್ವಹಣೆ ಇವುಗಳಿಂದ ಈ ಪದಗಳಿಗೊಂದು ಸಹಜವಾದ ಆಕರ್ಷಣೆಯುಂಟು. ಹಾಡುಗಾರರ ಹಿಂದೆ ಓಮ್ಮೇಳದವರಿರುತ್ತಾರೆ. ಪಲ್ಲವಿ ಹೇಳುವುದಷ್ಟೆ ಅವರ ಕೆಲಸ. ಅವರೇನೂ ಅಂಥ ಪಳಗಿದ ಹಾಡುಗಾರರಲ್ಲ. ನಾಲ್ಕಾರು ವರ್ಷ ಪಲ್ಲವಿಯಲ್ಲಿ ಪಳಗಿದ ಮೇಲೆ ಅವರೂ ಹಾಡುಗಾರರಾಗಬಹುದು. ಕೆಲವು ಸಂದರ್ಭಗಳಲ್ಲಿ ಈ ಪದಗಳು ಸಂಭಾಷಣೆಯ ರೂಪದಲ್ಲೂ ಇರುತ್ತವೆ. ಅಂಟಿಗೆ ಪಂಟಿಗೆ ಪದಗಳು ಇಂದಿನ ಜನರಿಗೆ ಪರಿಚಯವಿಲ್ಲದ ಒಂದು ವಿಶೇಷ ಲೋಕವನ್ನೇ ಸೃಷ್ಟಿಸುತ್ತದೆ. ಈ ಕಥೆಯ ಹಾಡು:

"ದೀವಳಿಗೆಯ ಇರುಳಿನಲ್ಲಿ ದೀಪ ಹಿಡಿದು ಬರುವ ಆ ಜಾನಪದ ದೀಪಧಾರಿಗಳ ಮಾಯಕದ ಜೋಳಿಗೆಯಲ್ಲಿ ಅದೆಷ್ಟು ಚಿತ್ರ ವಿಚಿತ್ರವಾದ ಸರಕುಗಳಿರುತ್ತವೆ! ಒಂದು ಸೊಲ್ಲು ಎತ್ತಿ ಆ ಜೋಳಿಗೆಯ ದಾರವನ್ನು ಎಳೆದರಾಯಿತು, ಬಣ್ಣಬಣ್ಣದ ಯಕ್ಷಲೋಕವೇ ಕಣ್ಣೆದುರು ನಲಿಯತೊಡಗುತ್ತದೆ."

## "ಅಗ್ನಿಗೂಡಿಸುವುದು"

ಪದಗಳು ಅವುಗಳ ಉದ್ದಕ್ಕೆ ತಕ್ಕಂತೆ ಹಾಡುಗಾರರ ಉತ್ಸಾಹಕ್ಕೆ ತಕ್ಕಂತೆ ಮುಂದುವರಿದು ಮುಗಿಯುತ್ತವೆ. ಒಂದೊಂದು ಮನೆಯಲ್ಲಿಯೂ ಮೂರು ನಾಲ್ಕು ಪದಗಳನ್ನು ಹೇಳಲಾಗುತ್ತದೆ. ಮನೆಯ ಒಡೆಯನ ಶಕ್ತ್ಯಾನುಸಾರ ಅಂಟಿಗೆ ಪಂಟಿಗೆಯವರಿಗೆ ಸಂಭಾವನೆ ಸಲ್ಲುತ್ತದೆ. ಗುಂಪು ಕುಳಿತುಕೊಂಡು ವೀಳ್ಯ ಮೆಲ್ಲುತ್ತದೆ; ಅದೇ ಹೊತ್ತಿಗೆ ಲೋಕಾಭಿರಾಮವೂ ನಡೆಯುತ್ತದೆ. ಸರಿ, ಇನ್ನೆಲ್ಲೊ ಹೊಡೆದ "ದಿಪ್ಪಡು"ತೇಲಿ ಬರುತ್ತದೆ. ತಂಡದವರು ಏಳುತ್ತಾರೆ. ಮತ್ತೆ ಕೂಗು ಮೊಳಗುತ್ತದೆ: "ದೀಪ್-ದೀಪೊಳ್ಗಿ" ಹೊರಡುವ ಮುನ್ನ ವಂದನೆ ಸೂಚಿಸಿ ಅವರು ಹಾಡುತ್ತಾರೆ; ಮುಂದಿನ ವರ್ಷ ಮತ್ತೆ ತೆರೆಯಬೇಕಾದ ಬಾಗಿಲಿಗೇ ಅವರ ವಂದನೆಗಳು:

ಹೋಗಿ ಬರ್ತೀವಿ ಹೊಸಲೆ ಹೋಗಿ ಬರ್ತೀವಿ
ಬಾಗಿಲೆ
ನಾಗ ಸಂಪಿಗೆಯ ನಡುಮನೆ
ನಾಗ ಸಂಪಿಗೆಯ ನಡುಮನೆ ದೇವರ ಕೋಣೆ
ಇಂದ್ಹೋಗಿ ಮುಂದೆ ಬರುತೀವಿ.

ಮೂರು ದಿನಗಳು ಮುಗಿದ ಮೇಲೆ ಅಂಟಿಗೆ ಪಂಟಿಗೆಯವರು ತಮ್ಮ ಬತ್ತಿಯನ್ನು ಹತ್ತಿಸಿಕೊಂಡ ಜಾಗದಲ್ಲಿಯೇ "ಅಗ್ನಿಗೂಡಿಸು"ತ್ತಾರೆ; ಇಲ್ಲವೆ, ಹೆಬ್ಬಿನ ಮರದ ಕೊಂಬೆಯ ಮೇಲಿಟ್ಟು ಕೈ ಮುಗಿಯುತ್ತಾರೆ.

ಮನೆಮನೆಗೆ ತಿರುಗಿ ಸಂಗ್ರಹಿಸಿದ ಅಕ್ಕಿ ಬತ್ತ ಹಣ ಎಣ್ಣೆಗಳನ್ನು ಉಪಯೋಗಿಸಿ. ಅಂಟಿಗೆ ಪಂಟಿಗೆಯವರು ಊರವರನ್ನೆಲ್ಲ ಆಹ್ವಾನಿಸಿ ಒಂದು ದಿನ ಸಾಮೂಹಿಕ ಊಟವನ್ನೇರ್ಪಡಿಸುತ್ತಾರೆ. "ಅಂಟಿಗೆ ಪಂಟಿಗೆ ಊಂತ್ಲ" ನಮ್ಮ ಗ್ರಾಮಜೀವನದ ಒಂದು ಮಹತ್ವಪೂರ್ಣ ಸಮಾರಂಭ. ಅದಕ್ಕೆ ಬಳಸಿಯೂ ಹಣಕಾಸು ಉಳಿದರೆ ಅದು ಮುಂದಿನ ವರ್ಷ "ಊಂತ್ಲ"ಕ್ಕೆ ಮೀಸಲಾಗುತ್ತದೆ.

ಮಲೆನಾಡಿನ ಒಕ್ಕಲಿಗರಲ್ಲಿ ಪ್ರಚಲಿತವಾಗಿರುವ ಈ ಅಂಟಿಗೆ ಪಂಟಿಗೆ ಸಂಪ್ರದಾಯ ವಿವರಗಳಲ್ಲಿ ಊರಿಂದೂರಿಗೆ ಅಲ್ಪ ಸ್ವಲ್ಪ ಬೇರೆಯಾಗಿರುತ್ತದೆ; ಪದಗಳಲ್ಲಿ ಮಾತ್ರ ಬೇಕಾದಷ್ಟು ವ್ಯತ್ಯಾಸಗಳಿರುತ್ತವೆ. ಅಂಟಿಗೆ ಪಂಟಿಗೆ ಪದಗಳ ಸಂಗ್ರಹ. ಸಂಪಾದನೆ ಪ್ರಕಟಣೆಗಳ ಕೆಲಸ ಇನ್ನೂ ಆಗಬೇಕಾದ ಹಾಗೆ ಆಗಿಲ್ಲ. ಸಾಗರಪ್ರಾಂತದಲ್ಲಿ ಚಾಲ್ತಿಯಲ್ಲಿರುವ ಅಂಟಿಗೆ ಪಂಟಿಗೆ ಸಂಪ್ರದಾಯ ಕೆಲವು ಪದಗಳನ್ನು ಶ್ರೀ. ಕೆ.ವಿ. ಸುಬ್ಬಣ್ಣನವರು ವ್ಯಾಖ್ಯಾನ ಸಮೇತ "ಅವರು ನೀಡಿದ ದೀಪ" ಎಂಬ ಹೆಸರಿನ ಪುಸ್ತಕದಲ್ಲಿ ಪ್ರಕಟಿಸಿದ್ದಾರೆ. (ಅಕ್ಷರ ಪ್ರಕಾಶನ, ಸಾಗರ, ೧೯೭೮). ಕರಾತ್ಮ, ಕೆ.ವಿ.ಲಿಂಗಪ್ಪ ಹಾಗೂ ದೇವಂಗಿ ಚಂದ್ರಶೇಖರ ಅವರೂ ಕೆಲವು ಪದಗಳನ್ನು ಸಂಗ್ರಹಿಸಿದ್ದಾರೆ. ಪ್ರಸ್ತುತ ಲೇಖಕನ ಸಂಗ್ರಹವೊಂದು ಪ್ರಕಟವಾಗಬೇಕಾಗಿದೆ.

## ದಾಮೂ ವಿವಾಹವಾಗಲೂ ಒಪ್ಪುತ್ತಿರಲಿಲ್ಲ. ಆದರೆ ಈ ಮೀನೂ ಗಾಳದಲ್ಲಿ ಬಿತ್ತು. ಅದೇ ತುಂಬ ಸ್ವಾರಸ್ಯಕರವಾದುದು.

"ಇದೇನು ಛಂದೋ ದಾಮೂ ಲಗ್ನ ಆಗೂ ವಿಚಾರ ಇಲ್ಲ ಅಂತ ಹೇಳೂದು. ನಿನ್ನಷ್ಟ ವಯಸ್ಸಿಗೆ ನಮ್ಮ ಕೇಶವ ಲಗ್ನ ಆಗಿ ಎರಡು ಮಕ್ಕಳ ತಂದಿ ಆಗಿದ್ದ" ಎಂದು ರಂಗತ್ತ್ಯಾ ನನಗೆ ಅನ್ನ ಸಾರು ಬಡಿಸುವ [illegible] ಉಪದೇಶಾಮೃತ ಬಡಿಸಲಾರಂಭಿಸಿದಳು.

ನನ್ನ ಅತ್ತಾ ಜೀವನದಲ್ಲಿ ಇಟ್ಟುಕೊಂಡ ಎರಡು ಕನಸುಗಳಲ್ಲಿ ಒಂದು ಕಾಶೀಯಾತ್ರೆ ಮಾಡುವದು. ಇನ್ನೊಂದು ನಾನು ಲಗ್ನವಾಗಿ ಸಂಸಾರ ಹೂಡಿದ್ದನ್ನು ನೋಡುವದು. ಇವುಗಳಲ್ಲಿ ಮೊದಲನೆಯುದು ನನಗೆ ನೌಕರಿ ಹತ್ತಿದ ಕೂಡಲೇ ನನಸಾಗಿತ್ತು. ಆದರೆ ಅವಳ ಎರಡನೆಯ ಕನಸು ಕನಸಾಗಿಯೇ ಉಳಿಯುವದೆಂದು ಅವಳ ಭಾವನೆ:

"ಕಲಿಯುವದು ಮುಗಿಯಲಿ ಈಗ ಯಾಕೆ ಲಗ್ನ ಅಂತ ಹೇಳಿಕೋತ ಕೆಲ ವರ್ಷ ಬಂದಿ, ಅದು ಮುಗಿದ ಮ್ಯಾಲೆ ನೌಕರಿ ಹತ್ತದೆ ಲಗ್ನ ಆಗಿ ಸಂಸಾರ ನಡೆಸೊದು ಹ್ಯಾಂಗ ಅಂತ ಲಗ್ನ ಈಗ ಬ್ಯಾಡ ಅಂತ ಹೇಳಿದಿ. ಅದು ನನಗ ಛಂದ ಕಾಣದಿದ್ದರೂ ಮುಂದಿಗೆ ಸರಿ ಅನಿಸುವ ಮಾತಾಗಿತ್ತು. ಈಗ ನೌಕರಿ ಹತ್ತೇದ. ಸಾವಿರ ರೂ. ಸಂಬಳ ಬರತದಂತ ಮಂದೀ ಬಾಯಿಲೆ ಕೇಳೀನು. ಈಗೂ ಲಗ್ನ ಆಗೂ ವಿಚಾರ ಇಲ್ಲ ಅಂದರೆ ನಿನಗೆ ಏನು ಹೇಳಬೇಕು" ಎಂದು ಅತ್ತ್ಯಾ ಮತ್ತೂ ತನ್ನ ಮಾತನ್ನೇ ಮುಂದುವರಿಸಿದಳು.

ಅವಳು ಹಳೇ ವಿಚಾರದವಳು. ವಯಸ್ಸಿಗೆ ಬಂದ ಗಂಡು ಹೆಣ್ಣು ವಿವಾಹವಿಲ್ಲದೇ ಇರುವುದು ಒಂದು ಸಾಮಾಜಿಕ ಘೋರಪಾತಕ ಅಂತ ಅವಳ ಭಾವನೆ. ಆದರೆ ಬಂದ ಸಂಬಳ ನನ್ನೊಬ್ಬನಿಗೇ ಸಾಲದೆನಿಸುವಾಗ ವಿವಾಹವಾಗುವದು ಹೇಗೆ? ಈ ನನ್ನ ಸಮಸ್ಯೆಯ ಅರ್ಥ ಅವಳಿಗೆ ಹೇಗೆ ಆಗಬೇಕು?

ಅವಳಿಗೆ ಸಮಾಧಾನ ನೀಡುವ ಉತ್ತರ ಕೊಡದೆ ಅವಳ ಬಾಯಿ ನಿಲ್ಲಲಾರದೆಂಬುದು ನನಗೆ ಗೊತ್ತು. ಅಂತೆಯೇ ಅವಳಿಗೆ ಹೇಳಿದೆ "ನೋಡು ಅತ್ಯಾ, ನಿಮ್ಮ ಕಾಲದಾಗ ಲಗ್ನ ಅಂದರ ಹಿರಿಯರು ಒಂದು ಗಂಡು, ಒಂದು ಹೆಣ್ಣು ತಂದು ಅವರ ಸೆರಗಿಗೆ ಗಂಟು ಹಾಕುವದು ಅಂತ ತಿಳಿದುಕೊಂಡಿದ್ದರು. ಅಪರಿಚಿತ ಹುಡುಗಿಯೊಂದನ್ನು ಗಂಟು ಹಾಕಿಕೊಂಡರೆ ಅವರ ಸಂಸಾರದಲ್ಲಿ ಪ್ರೀತಿ ಎಲ್ಲಿಂದ ಬರಬೇಕು. ತಾನು ನೋಡಿ ಮೆಚ್ಚಿ ಕೈ ಹಿಡಿದವಳನ್ನು ಮನೆಗೆ ತರುವದಾದರೆ ಅದಕ್ಕೊಂದು ಸಾರ್ಥಕತೆ ಇದೆ" ಎಂದು ಹೇಳಿದೆ.

"ಅಲ್ಲೊ ದಾಮು ಲಗ್ನ ಆದ ಮ್ಯಾಲೆ ಪ್ರೀತಿನೂ ಹುಟ್ಟತದ ಮಕ್ಕಳು ಮರಿನೂ ಹುಟ್ಟತಾವ. ಈ ಮಾತು ನಿಜ ಹೌದೋ ಅಲ್ಲೋ ಅಂತ ನಿನ್ನ ತಾಯಿ ತಂದೆಯನ್ನು ಕೇಳು. ಲಗ್ನ ಆಗೂ ತನಕ ಅಪರಿಚಿತರು



# ಅಪರಿಚಿತೆ



ರಾವಬಹಾದ್ದೂರ

ಇರೋದು, ಲಗ್ನ ಆದ ಮ್ಯಾಲೆ ಎರಡು ದೇಹ ಒಂದು ಜೀವ. ಇದು ಎಂದಿನಿಂದ ನಡದು ಬಂದ ರೀತಿ. ಇಲ್ಲದ ಹುಡುಗಾಟಿಕೆ ಹಚ್ಚಬ್ಯಾಡ. ಕೇಶವನ ಪತ್ರ ಬಂದದ ಹುಡಿಗೆ ಕಲಿತಾಳಂತ. ಬಿ. ಎ. ಆಗ್ಯಾಳಂತ. ಮುಂಬಯಿಯಲ್ಲಿಯೇ ಇದ್ದಾಳಂತ. ಕುಂಡಲಿ ಕೂಡಿ ಬರತದಂತ ಕನ್ಯಾ ನೋಡಿ ಮನಸ್ಸಿಗೆ ಬಂದರೆ ತಿಳಿಸು ಅಂತ ಬರದಾನ. ಏನ ಉತ್ತರಾ ಕೊಟ್ಟ ನಿನ್ನ ತಂದೆಗೆ?" ಎಂದು ನೇರವಾದ ಪ್ರಶ್ನೆ ಹಾಕಿದಳು ರಂಗತ್ಯಾ.

"ಈಗ ಲಗ್ನ ಆಗುವ ವಿಚಾರ ಇಲ್ಲ. ಕನ್ಯಾ ನೋಡುವದರಲ್ಲಿ ಅರ್ಥವಿಲ್ಲ. ಅಂತ ಪತ್ರಾ ಹಾಕೀನು ಅತ್ಯಾ" ಎಂದು ಹೇಳಿದೆ. ಇದನ್ನು ಕೇಳಿ ಅತ್ಯಾ ಸಿಟ್ಟಿಗೆದ್ದರು.

"ಅದ್ಯಾವ ರಮಣಿ ಮ್ಯಾಲೆ ಮನಸಿಟ್ಟೀದಿ. ಅದನ್ನಾದರೂ ಹೇಳಿಬಿಡು. ಕೇಶವನಿಗೆ ಪತ್ರ ಬರೆದು ಕರೆಸಿಕೊಂಡು ಆಕೀನ್ನ ಹಿಡಿದು ಅಕ್ಕಿ ಕಾಳು ಹಾಕಿಸಿ ಈ ಮನಿ ಆಕಿಗೆ ಒಪ್ಪಿಸಿ ನಾನು ನಮ್ಮೂರಿಗೆ ಹೋಗಿ ರಾಮಾ ಕೃಷ್ಣಾ ಅಂತ ಇದ್ದ ಬಿಡತೀನು. ದಾಮೂ ನೀನು ನಿನ್ನ ಪರಿಚಿತಳನ್ನೇ ಮಾಡಿಕೋ. ನ್ಯಾ ಬ್ಯಾಡ ಅನ್ನೂದಿಲ್ಲ. ಆದರೆ ಒಂದು ವಾರದಾಗ ನೀನು ಒಂದು ನಿರ್ಧಾರಕ್ಕೆ ಬರಬೇಕು ನೋಡು. ನಾನು ಮುಂದಿನ ತಿಂಗಳು ಹೊರಟು ಹೋಗುವವಳು. ನಾನು ಹೋದ ಮ್ಯಾಲೆ ಖಾನಾವಳಿ ಕೂಳ ತಿಂದು, ಸಿನೇಮಾ, ನಾಟಕ ಅಂತ ಬೆಳತನಕಾ ಅಲೆದಾಡಿ ಬೆಳಗು ಮುಂಜಾನೆ ಮನೆಗೆ ಬಂದರೂ ಯಾರೂ ಯಾಕ ಹೀಂಗ ಅಂತ ನಿನಗೆ ಕೇಳುವವರು ಇರೂದಿಲ್ಲ" ಎಂದವಳೇ ರಂಗತ್ಯಾ ಆಕ್ಕಸದಿಂದ ಅನ್ನದ ಪಾತ್ರೆಯನ್ನು ನೆಲಕ್ಕೆ ಇಕ್ಕರಿಸಿದಳು.

"ಲಗ್ನಕ್ಕೆ ನಾನು ಮನಸಾ ಒಪ್ಪುವಂತ ಮೋಹಿನಿ ಮಂತ್ರ ಹಾಕುವ ಹುಡುಗಿ ನನ್ನ ಕಣ್ಣಿಗೆ ಬಿದ್ದರೆ ಒಂದು ತಿಂಗಳು ಯಾಕೆ ಒಂದು ವಾರ ತುಂಬುವದರೊಳಗೆ ಲಗ್ನ ಆಗಿ ಬಿಡತೀನಿ ಆಯಿತಿಲ್ಲೊ?" ಎಂದು ಅವಳಿಗೆ ಹೇಳಿದೆ.

ನನ್ನ ಮಾತಿನಿಂದ ಅತ್ಯಾಗೆ ಸಮಾಧಾನವೆನಿಸಿರಬೇಕು. "ನಿನ್ನ ಮನಸ್ಸಿನ್ಯಾಗಿನ ಮಾತು ಬಚ್ಚಿಟ್ಟುಕೊಳ್ಳದೆ ಹೇಳಿದರೆ ಯಾರು ಬ್ಯಾಡಾಂತರ ಹೇಳು. ನೀನು ಕನ್ಯಾ ನೋಡದೆ ಇದ್ದರೆ ಮೋಹಿನಿ ಮಂತ್ರಾ ಏನು ಗಾಳಿಗೆ ತೂರಿ ಬಿಟ್ಟರೆ ಸೈ" ಎಂದು ಅತ್ಯಾ ನಕ್ಕಳು.

ಅದೇ ಕಾಲಕ್ಕೆ ನನ್ನ ಬಾಲ್ಯ ಸ್ನೇಹಿತ ರಂಗ ಬಂದು. ಇಂದು ಶನಿವಾರ, ಮಹಾಲಕ್ಷ್ಮೀ ಪ್ರಸನ್ನವಾಗುವ ದಿನ ಇನ್ನೂ ಊಟ ಮುಗಿಸಿಲ್ಲ ಎಂದು ಕೇಳುತ್ತ ಒಳಗೆ ಬಂದು ಖುರ್ಚಿಯ ಮೇಲೆ ಕುಳಿತುಕೊಂಡನು.

ಕುದುರೆ ರೇಸು ನನ್ನ ಸಂಬಳದ ಬಹು ಭಾಗ ತಿನ್ನುವದಕ್ಕೆ ರಂಗನ ಭವಿಷ್ಯವಾಣಿಯಲ್ಲಿ ನನಗಿರುವ ವಿಶ್ವಾಸ ಕಾರಣವಾಗಿತ್ತು.

ಮಹಾಲಕ್ಷ್ಮೀಗೆ ಟ್ಯಾಕ್ಸಿಯಲ್ಲಿ ಬಂದಿಳಿದು ನಮ್ಮ ದೈವ ಪರೀಕ್ಷೆಗೆ ನಿಂತೆವು.

× × × ×

ಮಹಾಲಕ್ಷ್ಮೀ ಪ್ರಸನ್ನವಾಗಲಿಲ್ಲ. ರೇಸಿಗೆ ಹಚ್ಚಿದ ಹಣ ಇಟ್ಟದ್ದು ಇಟ್ಟಲ್ಲಿಯೇ ಮಟಾ ಮಾಯವಾಗಿತ್ತು. ಐದು ಕುದುರೆಗಳಲ್ಲಿ ಒಂದೂ ನಾನು ಹಾಕಿದ ಹಣ ಮರಳಿ ಬರುವ ಮಟ್ಟಿಗೆ ನೆರವಾಗಲಿಲ್ಲ. ಎಲ್ಲಾ ಕುದುರೆಗಳೂ ಕೈಕೊಟ್ಟವು. ಮೊದಲೇ ಕಪ್ಪಾದ ನನ್ನ ಮುಖ ನಿರಾಸೆಯಿಂದ ಇನ್ನೂ ಹೆಚ್ಚು ಬಣ್ಣ ತಳೆದಿತ್ತು.

ರಂಗ ಆಶಾವಾದಿ. ಈ ಸಲ ಜಯ ನಿಶ್ಚಿತವೆಂದು ನಂಬಿದವನಾಗಿ "ದಾಮೂ ಇದೊಂದು ಸಲ ದೈವ ಪರೀಕ್ಷೆ ಮಾಡಿ ಬಿಡುವಾ" ಅಂದನು.

"ಬ್ಯಾಡ ದೈವ ತೆರೆಯುವ ಯೋಗವಿದ್ದರೆ ಐದು ರೇಸುಗಳಲ್ಲಿ ತೆರೆಯಬಹುದಾಗಿತ್ತು. ಪ್ರತಿ ಸಲವೂ ನೀನು ಧೈರ್ಯ ತುಂಬಿ ಹಣ ಬಿಚ್ಚಲು ಹಚ್ಚುವಿ. ನಿನ್ನ ಮಾತು ಕೇಳಿ ನಾನು ಮಂಗನಾಗಿ ನಿಂತಿರುವೆ. ನೀನು ಮಾತ್ರ ರಂಗ ಹೋಗಿ ಶ್ರೀರಂಗನಾಗುವ ಆಸೆಗೆ ಇನ್ನೂ ಅಂಟಿಕೊಂಡಿರುವಿ"

"ದಾಮೂ, ನಿನಗೆ ಕೈತುಂಬ ಹಣ ಬರಲೇಬೇಕು ಜಾತಕಂತೀಯಾ? ನಿನಗೆ ಈಗೆ ನಡೆಯುವದು ಶುಕ್ರ ದೆಸೆ. ಧನಸ್ಥಾನಾಧಿಪ ಶುಕ್ರನು ನಿನ್ನ ಭಾಗ್ಯದಲ್ಲಿದ್ದಾನೆ. ಭಾಗ್ಯೇಶನು ಲಾಭದಲ್ಲಿದ್ದಾನೆ. ಲಾಭಾಧಿಪತಿ ಗುರುವಿನ ಪೂರ್ಣ ದೃಷ್ಟಿಯಲ್ಲಿದ್ದು ಲಗ್ನೇಶನೊಡನೆ ಅವನ ಮನೆಯಲ್ಲಿ ತಳವೂರಿದ್ದಾನೆ. ನಿನ್ನ ಕುಂಡಲಿ ನೋಡಿರದಿದ್ದರೆ ನಾನು ಈ ಮಹಾಲಕ್ಷ್ಮೀ ಕ್ರೀಡಾ ಭೂಮಿಗೆ ಕರೆ ತರುವ ಗೋಜಿಗೆ ಹೋಗುತ್ತಿರಲಿಲ್ಲ. ನನ್ನ ಕುಂಡಲಿಯಲ್ಲಿ ಪ್ರಬಲ ಯೋಗ ಒಂದೂ ಇಲ್ಲ. ಆದರೆ ದೊಡ್ಡವರ ಸ್ನೇಹದಿಂದ ಭಾಗ್ಯೋದಯ ಯೋಗ ಎಂದು ಜ್ಯೋತಿಷಿ ದೈವಜ್ಞ ಶಿರೋಮಣಿ ಹೋರಾಶಾಸ್ತ್ರಿಗಳು ಬರೆದಿಟ್ಟಿರುವದರಿಂದ ನಿನ್ನ ಭಾಗ್ಯ ತೆರೆದಾಗ ಅದರ ಲಾಭ ನನಗೂ ಉಂಟು ಎಂಬ ವಿಶ್ವಾಸದಿಂದ ನಿನಗೆ ಇಷ್ಟೊಂದು ಆಗ್ರಹಪೂರ್ವಕವಾಗಿ ಬಿನ್ನವಿಸಿಕೊಳ್ಳುವೆ" ಎಂದು ರಂಗ ತನ್ನ ಮಾತು ಮುಂದುವರಿಸಿದ.

ಜ್ಯೋತಿಷ್ಯದಲ್ಲಿ ಅವನಿಗೆ ಕೇಳಿಕೆಯ ಮೇಲೆ ಅಲ್ಪ ಸ್ವಲ್ಪ ಜ್ಞಾನವಿದೆ. ಜ್ಞಾನ ಎಷ್ಟೇ ಇರಲಿ ಬಿಡಲಿ. ಕುಂಡಲಿಯಲ್ಲಿ ಪ್ರತಿಯೊಬ್ಬರ ಹಣೆಬರಹ ಬರೆದಿರುವದು ಎಂಬ ಶ್ರದ್ಧೆ ಅವನಲ್ಲಿ ಅಚಲವಾಗಿರುವದಂತೂ ನಿಶ್ಚಿತ. ಅಂತೆಯೇ ಅವನ ಮಾತಿಗೆ ಕಟ್ಟು ಬಿದ್ದು ಈಗಾಗಲೇ ೧೦೦ರೂ. ಕಳೆದುಕೊಂಡ ಮೇಲೆ ನನಗೆ ಬುದ್ಧಿ ಬಂದಿತ್ತು.

"ರಂಗ ನೀನು ಏನೇ ಹೇಳು. ನನ್ನಿಂದ ಹಣ ಇನ್ನೂ ಈ ಜುಜ್ಜಾಟದಲ್ಲಿ ಹಾಳು ಮಾಡಿಕೊಳ್ಳುವ ಮನಸಿಲ್ಲ. ನಿನ್ನ ಭವಿಷ್ಯ ನಿಜವಾಗುವದಿದ್ದರೆ ಒಂದು ಲಾಟರಿ ತಿಕೀಟು ಕೊಂಡುಕೊಂಡರೆ ಆಗಬಹುದಲ್ಲ. ಈ ಹಾಳು ರೇಸಿನಲ್ಲಿ ಹಣ ಸುರಿ ಅಂತ ಹಟ ಹಿಡಿಯಬ್ಯಾಡ"

ಹೀಗೆ ಖಂಡಿತವಾಗಿ ನಾನು ಹೇಳಿದ್ದು ಕೇಳಿ ರಂಗ ತನ್ನ ನಾಲಿಗೆಯನ್ನು ಬಿಗಿ ಹಿಡಿಯುವನೆಂದು ನಾನು ಎಣಿಸಿದ್ದೆ. ಆದರೆ ಹಾಗಾಗಲಿಲ್ಲ.

ರಂಗ ತನ್ನ ಬಲಗೈಯನ್ನು ಜಗ್ಗಿ ತನ್ನ ಎಡಗೈಯಿಂದ ನನ್ನ ಬಲಹಸ್ತವನ್ನು ಬಿಚ್ಚಿ ಇಲ್ಲಿ ನೋಡು ನಿನ್ನ ಹಸ್ತರೇಖೆ ಅಶ್ವರೇಖೆಯ ಮೇಲೆ ಹಾಯ್ದು ಮುಂದೆ ಹೋಗಿರುವ ಈ ನಿನ್ನ ಧನರೇಖೆಯನ್ನು ನೋಡಿದಿ. ನಿನಗೆ ಅಲಭ್ಯಧನಪ್ರಾಪ್ತಿ ಅಶ್ವದ ಮೂಲಕ. ಲಾಟರಿಯಿಂದ ಧನಯೋಗ ರೇಖೆ ನಿನ್ನ ಹಸ್ತದಲ್ಲಿಯೇ ಇಲ್ಲ. ಲಾಟರಿಗೆ ಹಾಕಿದ ಹಣ ತಿರುಗಿ ಬರುವುದು ನಿನ್ನ ಹಣೆಬರಹದಲ್ಲಿ ಬರೆದಿಲ್ಲ. ವ್ಯರ್ಥ ಆ ನಾದಿಗೆ ಬೀಳಬ್ಯಾಡ. ನನ್ನ ಮಾತು ಕೇಳು. ನಿನ್ನ ಹಣಕ್ಕೆ ಈ ಸಲ ಒಂದಕ್ಕೆ ನೂರಾಗಿ ಈ ಕೈಗೆ ಬರುವದು" ಎಂದು ಮತ್ತೂ ತನ್ನ ಪುರಾಣವನ್ನು ಓದದೇ ಬಿಡಲಿಲ್ಲ.

"ಬರದಿದ್ದರೆ?" ಎಂದು ನಾನು ಅಪ್ರ ಪ್ರಶ್ನೆ ಹಾಕಿದೆ.

"ಬರದಿದ್ದರೆ ಮುಂದಿನ ತಿಂಗಳ ನನ್ನ ಸಂಬಳ ಬರಲಿ ಈಗ ನೀನು ಹಾಕಿದ ಹಣವನ್ನು ನಿನಗೆ ಮುಟ್ಟಿಸುವೆ."

ರೇಸಿನಲ್ಲಿ ನನಗೆ ಈ ಸಲ ಹಣ ಬಂದೇ ಬರುವದೆಂದು ಇಷ್ಟೊಂದು ಆತ್ಮವಿಶ್ವಾಸದಿಂದ ರಂಗನು ಹೇಳುವದಕ್ಕೆ ವಿಶೇಷ ಕಾರಣವೇನಿರಬಹುದು? ಈ ವಿಷಯ ನನ್ನ ತಲೆ ತಿನ್ನತೊಡಗಿತು.

"ಅಲ್ಲೊ ರಂಗಾ, ಕುದುರೆಯರೇಸಿನಲ್ಲಿ ಹಣ ಈ ಸಲ ಬಂದೇ ತೀರುವದೆಂದು ನೀನು ಜ್ಯೋತಿಷ್ಯ, ಹಸ್ತರೇಖಾ ಇವುಗಳನ್ನು ನೋಡಿ ಹೇಳಿದ್ದು ಇಂದೇ ಮೊದಲ ಸಲ ಅಲ್ಲ. ಐದೈದು ಸಲ ಪರೀಕ್ಷೆ ಮಾಡಿ ನೋಡಿದೆಯಲ್ಲ! ಒಂದು ಸಲವೂ ನೀನು ಹೇಳಿದಂತೆ ಗೆಲುವು ಬರಲಿಲ್ಲ. ಈ ಸಲ ಸಿಕ್ಕೇ ಸಿಗುವದೆಂದು ಯಾವ ಮಾತಿನಿಂದ ಭರವಸೆ ಹಿಡಿಯಲಿ?" ಎಂದು ಕೇಳಿದೆ.

"ವಿಶೇಷ ಕಾರಣ ಒಂದು ಇದೆ. ನಾನು ಅದನ್ನು ನಿನಗೆ ತಿಳಿಸಲಾರೆ. ತಿಳಿಸದಿದ್ದರೆ ನೀನು ನನ್ನ ಮಾತಿಗೆ ಬೆಲೆ ಕೊಡುವದಿಲ್ಲ. ಈ ಧರ್ಮ ಸಂಕಟದಿಂದ ಪಾರಾಗಲು ಒಂದೇ ಉಪಾಯ. ನಿನಗೆ ಕಾರಣ ತಿಳಿಸಿ ಬಿಡುವದೇ ಆಗಿದೆ"

"ಹಾಗಿದ್ದರೆ ಹೇಳಿ ಬಿಡು"

"ಹೇಳಲೇಬೇಕು ಎಂದು ನೀನು ಹಟ ಹಿಡಿದರೆ ಹೇಳುವೆ. ಆದರೆ ಅದನ್ನು ಕೇಳುವದರಿಂದ ಲಾಭದ ಮೊತ್ತ ತಗ್ಗುವದು. ನಾನು ದೇವಿಭಕ್ತ. ಭಕ್ತನಿಗೆ ದೇವಿಯು ಹೇಳಿದ್ದನ್ನು ಹೊಟ್ಟೆಯಲ್ಲಿಟ್ಟುಕೊಳ್ಳುವದು ಧರ್ಮ. ಆಗ್ರಹ ಪಡಿಸಿ ನನ್ನನ್ನು ನನ್ನ ಧರ್ಮದಿಂದ ಪರಾವೃತ್ತನನ್ನಾಗಿ ಮಾಡಿದರೆ ದೇವಿಯು ಸಿಟ್ಟಾಗಬಹುದು. ಇಷ್ಟು ಹೇಳುವೆ ದೇವಿಯು ಏನು ಹೇಳಿರುವಳೆಂಬುದನ್ನು ಕೇಳಬಯಸುವಿಯಾ?" ಎಂದು ರಂಗ ನನ್ನ ಮುಖ ನೋಡತೊಡಗಿದನು.

"ಇದೇನು ಹೊಸಾ ಮಾತು ಹೇಳಿ ನನ್ನ ಕಾಲಲ್ಲಿ ಹಾವು ಬಿಡುವ ತಂತ್ರ ಹೂಡಿರುವಿ. ನನಗೇನು ನಿನ್ನ ದೇವಿಯ ಭಯವಿಲ್ಲ. ದೇವಿ ಏನು ಹೇಳಿದ್ದಾಳೆ? ಹೇಳಿಬಿಡು"

"ನನಗೆ ಕಂಡ ದೃಶ್ಯದಲ್ಲಿ ನಿನ್ನ ಕೈಗೆ ಹಣ ಬಂದು ಪಾಕೀಟು ಕೊಡುವದು ಅದನ್ನು ನೀನು ಸ್ವೀಕರಿಸಿದ್ದೂ ನೋಡಿದೆ ಎಂದು ಹೇಳಿ ರಂಗ "ಐವತ್ತು ರೂ ನನಗೆ ಕೊಟ್ಟು ಬಿಡು ಈ ಚೀಟಿ ಎತ್ತು ರೇಸು ಪ್ರಾರಂಭವಾಗುವ ಹೊತ್ತು ಸನಿಹ ಬಿಸಿದೆ" ಎಂದು ಹೇಳಿ ಗಡಿ

ಟಿಪಿ ಮಾಡಿ ರೂಪಾಯಿ ಸನ್ನೀವೆ ಪಡೆದುಕೊಂಡು ಹೋದನು.

ರಂಗ ಚಪ್ಪಾಳೆ ತಟ್ಟಿದವನೇ ನನ್ನ ಬಳಿಗೆ ಸರಿದು "ಈ ತಿಕೇಟು ತಗೋ" ಎಂದು ಅದನ್ನು ನನ್ನ ಕೈಗೆ ಕೊಟ್ಟನು.

ಅಂದಿನ ರೇಸಿನಲ್ಲಿ ಒನೆಯ ನಂಬರಿನ ಕುದುರೆಗೆ ಹಣ ಕಟ್ಟಿದವರ ಸಂಖ್ಯೆ ಅತ್ಯಲ್ಪವಿತ್ತು. ಅದು ಗೆದ್ದಿತು. ೩ ಸಾವಿರದ. ಐದು ಕಂತೆಗಳು ನನ್ನ ಕೈಗೆ ಬಂದವು. ಎರಡು ಕಂತೆಗಳನ್ನು ರಂಗನ ಕೈಗಿತ್ತಾಗ "ದೇವಿಗೆ ಒಂದು, ನನಗೆ ಒಂದು. ಚಿತ್ರದಲ್ಲಿ ನಡೆದಂತೆ ನಡೆಯಿತು" ಎಂದು ರಂಗ ಹಲ್ಲುಕಿರಿದನು.

ನಾವು ಗೇಟಿನ ಹೊರಗೆ ಬಂದಾಗ ಪ್ಯಾಂಟು ಧಾರಿಯುವಕನೊಬ್ಬ ತನ್ನ ಪತ್ನಿಯೊಂದಿಗೆ ಕಾಲು ಎಳೆಯುತ್ತ ಬಸ್ ಸ್ಟಾಪಿನ ಕಡೆಗೆ ನಡೆದವನು ರಂಗನನ್ನು ನೋಡಿ "ರಂಗರಾವ್ ಗುಡ್ ಲಕ್" ಅಂದನು.

ಅವನು ರೇಸಿನಲ್ಲಿ ಸೋತು ಕಳೆಗುಂದಿದ ಮುಖ ತಾಳಿದ್ದ. "ದಾದರದ ವರೆಗೆ ಕಳಿಸಲು ಸಾಧ್ಯವೇ? ರಂಗರಾವ್" ಎಂದು ಕೇಳಿದ.

"ಅದರ ಚಿಂತೆ ಬಿಡು. ಮೊದಲು ಸಿಗರೇಟು ತಂದು ಆಮೇಲೆ ಟ್ಯಾಕ್ಸಿ ಹಿಡಿಯುವ ವಿಚಾರ ಮಾಡೋಣ" ಎಂದು ರಂಗ ಅವನೊಂದಿಗೆ ಸಿಗರೇಟು ಅಂಗಡಿಗೆ ಧಾವಿಸಿದ.

ಅವನ ಜೊತೆಗಿದ್ದ ಯುವತಿ ನನ್ನ ಕಡೆಗೆ ಎವೆಯಿಕ್ಕದೆ ನೋಡುತ್ತ ನಿಂತಿದ್ದಳು. ಅವಳ ಆ ನೆಟ್ಟ ನೋಟದಿಂದ ನನ್ನ ಅಭಿಮಾನ ಗರಿಗೆದರಿ ನಿಂತಿತ್ತು. ೧೫ ಸಾವಿರ ರೂ. ಗೆದ್ದ ಭಾಗ್ಯಶಾಲಿ ನಾನು. ಬಿಡಿಕಾಸು ಗೆದಿಯದೆ ಮರಳುವ ಭಾಗ್ಯಹೀನನಪತ್ನಿ ತಾನು ಎಂದು ತನ್ನನ್ನೇ ನೋಡುವಂತೆ ಎಂದು ಅವಳಿಗನಿಸಿದರೆ ಆಶ್ಚರ್ಯ ಏನು? ಎಂದು ನಾನು ಮನದಲ್ಲಿಯೇ ಉಬ್ಬಿ ಅವಳ ಮುಖಕಮಲವನ್ನು ನಿರ್ಲಜ್ಜನಂತೆ ನೋಡುವಲ್ಲಿ ನನ್ನ ದೊಡ್ಡಸ್ತನವನ್ನು ಪ್ರದರ್ಶಿಸಿದೆ.

ಅವಳು ನನ್ನನ್ನು ನೋಡುವದು ನನ್ನ ಮುಖ ಪರಿಚಯ ಅವಳಿಗೆ ಹತ್ತಿದ ಕಾರಣದಿಂದ ಎಂದು ನನಗೆ ಅವಳು ಮಾತನಾಡಿಸಿದ್ದರಿಂದ ತಿಳಿಯಿತು.

"ದಾಮೂ ಅಣ್ಣಾ, ನನಗೆ ನಿಮ್ಮ ಗುರುತೇ ಹತ್ತಲಿಲ್ಲ. ನೀವು ಇಲ್ಲಿ ಎಲ್ಲಿ ಮನೆ ಮಾಡಿದ್ದು?" ಎಂದು ಮಾತನಾಡಿದಳು.

ನನ್ನ ಹೆಸರುಗೊಂಡು ಇವಳು ಮಾತನಾಡಿಸಿದಳೆಂದ ಮೇಲೆ ಇವಳಿಗೆ ನನ್ನ ಪರಿಚಯ ಹತ್ತಿರಲು ಸಾಕು. ಆದರೆ ಇವಳು ಅಣ್ಣಾ ಅಂದಳಲ್ಲ! ಸೋದರಿ ಸಂಬಂಧ ಹೇಳುವವಳ ಹೆಸರು ಕೂಡ ನನಗೆ ತಿಳಿಯದು. ಮುಖಪರಿಚಯ ಕೂಡ ಇಲ್ಲ. ಇವಳು ನನಗೆ ಅಪರಿಚಿತೆ. ಮಾತನಾಡಿಸುವುದೆಂತು? ಅವಳು ಮಾತನಾಡಿಸಿರುವಾಗ ಅಪರಿಚಿತನಂತೆ ಸುಮ್ಮನೆ ಕುಳಿತರೆ ಅವಳ ಪತಿ ಏನೆಂದುಕೊಂಡಾನು. ಅಪರಿಚಿತನನ್ನು ಮಾತನಾಡಿಸಲು ನಾಚಿಕೆ ಬರಲಿಲ್ಲವೇ? ನಾಚಿಕೆ ಬಿಟ್ಟ ಹೆಣ್ಣ ಎಂದು.

"ಓ,ಹೋ ತಂಗೆಮ್ಮಾ ಯಾವಾಗ ನೀನು ಇಲ್ಲಿ ಬಂದದ್ದು? ನಾನು ಇಲ್ಲಿ ಇರುವದು ನಿನಗೆ ಯಾರು ಯಾವಾಗ ಹೇಳಿದರು?"

"ಸುಂದರಾ ಕಾಕು ಮೊನ್ನೆ ನನ್ನ ಲಗ್ನಕ್ಕೆ ಬಂದಾಗ ಹೇಳಿದರು. ಲೀಲಾ, ಮುಂಬೈಗೆ ನಿಂದೂ ಮನಿ ಆತೂ ನಮಗೆ ಮುಂಬೈಗೆ ಬಂದರೆ ಎರಡು ಮನಿ ಆಧಾಂಗಾತು ನಮ್ಮ ದಾಮೂ ಅದೆನ್ನೋ ಕೋಳಿವಾಡ ಅಂತ ನೋಡು. ಆ ಸ್ಟೇಷನ್ನಿಗೆ ಇಳಿದು ಸ್ವಲ್ಪ ನಡೆದು ಹೋದರೆ ಅಲ್ಲಿಯೇ ಅವನ ಮನಿ ಸಿಗತದಂತ ಹೇಳಿದ್ರು. ಇವರಿಗೆ ಹೇಳಿದೆ ಇದು ಮುಂಬಯಿ ಓಣಿ. ಮನಿನಂಬರು ಬ್ಲಾಕ್ ನಂಬರ್, ಹಿಂಗ ಪೂರಾ ಪತ್ತೆ ಇಲ್ದೆ ಯಾರು ಎಲ್ಲಿದ್ದಾರಂತ ಹುಡಕೂದು ಸಾಧ್ಯ ಇಲ್ಲ. ಅಂತ ಹೇಳಿ ಬಿಟ್ಟರು. ಇಂದು ಅನಾಯಾಸ ಇಲ್ಲಿ ಭೆಟ್ಟಿ ಆಯಿತು. ನೀನೇ ದಾಮೂ ಅಣ್ಣ ಇರಬೇಕು ಅನಿಸಿತು. ಆದರೆ ನೀನೇ ದಾಮೂ ಅಣ್ಣಾಂತ ಖಾತ್ರಿ ಮಾಡಿಕೊಳ್ಳೋದು ಹ್ಯಾಂಗ ಅಂತ ದಿಗಿಲು ಬಿದ್ದಿತು!"

ಇವಳು ಲೀಲಾ. ನಮ್ಮ ಜಹಗೀರದಾರರ ಗಡ್ಡಿಗೆ ಸೇರಿದ ನೂರಾರು ಕುಟುಂಬಗಳಲ್ಲಿಯ ಒಂದು ಕುಟುಂಬದಲ್ಲಿ ಹುಟ್ಟಿದವಳಾಗಿರಬೇಕು. ನಮ್ಮ ಊರಲ್ಲಿ ಇವಳ ತಾಯಿ – ತಂದೆ ಇದ್ದರೆ ಇವಳ ಪರಿಚಯವಿರುತ್ತಿತ್ತು. ಅವರೂ ನನ್ನಂತೆ ಊರು ಬಿಟ್ಟು ಯಾವದೇ ಶಹರವಾಸಿಗಳಾಗಿರಬಹುದು. ನನ್ನತಾಯಿ ನಾನು ಇಲ್ಲಿ ಇರುವ ಮಾಹಿತಿ ತಿಳಿಸಿದ್ದರಿಂದ ನನ್ನ ಹೆಸರು ಇವಳಿಗೆ ಗೊತ್ತಾಗಿರಬಹುದು. ಆದರೆ ನನ್ನ ಮುಖವನ್ನು ಎಂದಾದರೂ ನೋಡದೇ ನನ್ನನ್ನು ದಾಮೂಅಣ್ಣ ಎಂದು ಗುರುತಿಸುವುದೆಂತು? ಅವಳು ನನ್ನನ್ನು ನೋಡಿದ್ದರೆ, ನಾನು ಅವಳನ್ನು ನೋಡಿದ ನೆನಪು ಹಾರುವಷ್ಟು ಮರಗೂಳಿ ನಾನಲ್ಲ! ಅವಳಿಗೆ ಈ ತೊಡಕು ಬಿಡಿಸಲು ಕೇಳುವುದು ನೆಟ್ಟಗೆ ಎಂದು ಮನಸ್ಸಿನಲ್ಲಿ ವಿಚಾರಮಾಡಿ "ಲೀಲಾ, ನನ್ನ ಗುರುತು ಹಿಡಿದು ನೀನು ಮಾತನಾಡಿಸಿರದಿದ್ದರೆ ನನಗೆ ನೀನು ಲೀಲಾ ಅಂತ ಗುರುತು ಹತ್ತುವ ಸಂಭವವೇ ಇರಲಿಲ್ಲ. ನನ್ನ ಗುರುತು ನೀನು ಹಿಡಿದದ್ದು ಆಶ್ಚರ್ಯ ಹೌದೊ ಅಲ್ಲೋ?" ಎಂದು ಕೇಳಿದೆ.

"ದೀಪಾವಳಿ ಸಂಚಿಕೆಯಲ್ಲಿ ನಿನ್ನ ಫೋಟೋ ಬಂದದ್ದು ನಾನು ನೋಡಿದ್ದೆ. ಪತ್ರಿಕೆಯಲ್ಲಿಯೂ ಆಗಾಗ ನಿನ್ನ ಫೋಟೋ ಮೂಡಿಸಿ ಸುದ್ದಿ ಛಾಪಿಸಿರುತ್ತಾರಲ್ಲ. ಕರ್ನಾಟಕ ಸಂಘದಾಗ ಒಮ್ಮೆ ನಿನ್ನ ಭಾಷಣ ಇಟ್ಟಿದ್ದರು. ಆಗ ನನಗೆ ಬಂದು ಮಾತನಾಡಸಲಿಕ್ಕೆ ಆಗಲಿಲ್ಲ. ಆದರೆ ಕರ್ನಾಟಕ ಸಂಘದಲ್ಲಿ ನಿನ್ನ ಫೋಟೋ ನೋಡಿದ್ದೆ ಗುರುತು ಹತ್ತುವದಕ್ಕೆ ಇನ್ನೇನು ಬೇಕು?"

"ಇದಾಯಿತು ನಿನ್ನ ಯಜಮಾನರ ಪರಿಚಯ ಮಾಡಿಕೊಡಲಿಲ್ಲ?" ಎಂದು ಕೇಳಿದೆ.

ಅವಳು ನಾಚಿಕೆಯಿಂದ ತಲೆತಗ್ಗಿಸಿದಳು. ಅಷ್ಟರಲ್ಲಿ ಸಿಗರೇಟು ತರಲು ಹೋಗಿದ್ದ ರಂಗನು ಆ ಯುವಕನೊಡನೆ ನಾವು ನಿಂತಲ್ಲಿಗೆ ಬಂದನು.

"ಇವರು ಯಾರು ಗೊತ್ತೆ ನಿನಗೆ! ನನ್ನ ತಂಗಿ ಲೀಲಾ?" ಎಂದು ರಂಗನಿಗೆ ಅವಳ ಪರಿಚಯ ಮಾಡಿಕೊಟ್ಟೆ.

"ಓ ಕೃಷ್ಣರಾವ್ ಬರ್ರಿ ಇಲ್ಲಿ ಟ್ಯಾಕ್ಸಿಯಲ್ಲಿ ನಿಮ್ಮ ಮನೆಗೆ ಮುಟ್ಟಿಸುವೆವು. ನೀವು ಇವರ ಬೀಗರು" ಎಂದು ರಂಗ ಆ ಯುವಕನ ಪರಿಚಯ ಮಾಡಿಕೊಟ್ಟನು.

"ಕೃಷ್ಣರಾಯರ ಗುರುತು ನಿನಗೆ ಮೊದಲಿನಿಂದಲೂ ಉಂಟೇ ರಂಗಾ" ಎಂದು ಕೇಳಿದೆ.

ರಂಗ ಹೇಳಿದ

"ಕಾರಭಾರಿ ವಾಸುದೇವರಾಯರು ನಮ್ಮ ಯಜಮಾನರು. ನಾವು ಅವರ ಪುರೋಹಿತರು. ಕೃಷ್ಣರಾಯರು ಸಣ್ಣವರಿದ್ದಾಗಿನಿಂದಲೂ ತಮ್ಮ ಸೆಡವಿನಲ್ಲಿಯೇ ಯಾರ ಸಂಗಡ ಮಾತು ಇಲ್ಲ, ಕತೆಯೂ ಇಲ್ಲ. ಒಂಟಿಯಾಗಿ ಅಡ್ಡಾಡುವ ಸ್ವಭಾವದವರು. ಅಂತೆಯೇ ನಾವು ಇವರಿಗೆ "ಒಂಟಿ ಕೃಷ್ಣ" ಎಂದು ಅಂತ ಕರೆಯುತ್ತಿದ್ದೆವು. ನಮ್ಮ ಈ ಹುಡುಗಾಟಕೆಯನ್ನು ಕಿವಿಗೆ ಸಿಟ್ಟಿಗೆದ್ದಷ್ಟೂ ಪೀಡಿಸುತ್ತಿದ್ದೆವು. ಈಗ ಕಾರ್ಪೊರೇಷನನಲ್ಲಿ ಇಂಜನಿಯರ ಕೃಷ್ಣರಾಯರಾಗಿ ಬಿಟ್ಟರು. ನಾವು ಫ್ರೀ ಪ್ರೆಸ್ ಪೇಪರಿಗೆ ಸುದ್ದಿಗಾರ ರಂಗರಾವ ಅಂತ ಹೇಳಿಕೊಂಡು ಬಾಲಸುಟ್ಟ ಬೆಕ್ಕಿನಂತೆ ಊರ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಓಡಾಡುತ್ತಾ ಇದ್ದಿವು" ಎಂದು ಹೇಳಿ.

"ದಾಮೂ, ಟ್ಯಾಕ್ಸಿ ತರಿಸಲೋ, ಟಿಫಿನ್ ಮುಗಿಸಿ ಟ್ಯಾಕ್ಸಿ ಹತ್ತುವ ವಿಚಾರ ಇದೆಯೋ ಹೇಳು. ಪಾಪ, ನಿನ್ನ ತಂಗಿ ನಿಂತುಕೊಂಡು ಬೇಸತ್ತಿದ್ದಾಳೆ".

ರಂಗ ಇಷ್ಟು ಮಾತನಾಡಿದರೂ ಕೃಷ್ಣರಾಯ ಮಾತನಾಡುತ್ತಿರಲಿಲ್ಲ. ಕೃಷ್ಣರಾಯ ಟ್ಯಾಕ್ಸಿ ಹಿಡಿದು ಸಪತ್ನೀಕನಾಗಿ ಅದರಲ್ಲಿ ಕುಳಿತು 'ರಂಗರಾವ್ ನೀವೂ ಇಲ್ಲಿಯೇ ಬರ್ರಿ. ಹಾಗೆಯೇ ಮಾತನಾಡುತ್ತ ದಾದರವರೆಗೆ ಎಲ್ಲರೂ ಕೂಡಿ ಹೋಗುವ. ದಾದರದಲ್ಲಿ ಇಳಿದು ರಿಫ್ರೆಶ್‌ಮೆಂಟ್ ತೆಗೆದುಕೊಂಡ ಮೇಲೆ ನಿಮ್ಮ ಹಾದಿ ನಿಮಗೆ, ನಮ್ಮ ಹಾದಿ ನಮಗೆ" ಎಂದು ನುಡಿದನು.

ರಂಗರಾಯ ಕಾರಿನಲ್ಲಿ ಹತ್ತಿದರೂ ನಾನು ನಿಂತಲ್ಲಿಯೇ ನಿಂತದ್ದು ಕಂಡು ಕೃಷ್ಣರಾಯ ಹೆಂಡತಿಗೆ "ನಿನ್ನ ಅಣ್ಣನನ್ನು ಕರೆ" ಎಂದು ಆದೇಶ ಕೊಟ್ಟನು.

"ದಾಮೂ ಅಣ್ಣಾ, ಒಳಗೆ ಬರ್ರಿ" ಎಂದು ಲೀಲಾ ಕರೆದಳು.

ಟ್ಯಾಕ್ಸಿಯ ಹಿಂದಿನ ಸೀಟಿನಲ್ಲಿ ಕೃಷ್ಣರಾಯನ ಬದಿಗೆ ನಾನು ಹೋಗಿ ಕುಳಿತುಕೊಂಡೆ.

"ದಾಮೋದರರಾವ್, ನಿಮ್ಮನ್ನು ಕಾಣುವ ಬಗ್ಗೆ ಲೀಲಾ ನನಗೆ ಮೂರು ನಾಲ್ಕು ಸಲ ಹೇಳಿದ್ದಳು. ನಿಮ್ಮ ಅಡ್ರೆಸ್ ಅವಳಿಗೂ ಗೊತ್ತಿಲ್ಲ. ನನಗೂ ಗೊತ್ತಿಲ್ಲ. ಪರಸ್ಪರ ಪರಿಚಯವೂ ಇರಲಿಲ್ಲ. ನೀವು ಭೆಟ್ಟಿಯಾದದ್ದು ನೆಟ್ಟಗಾಯಿತು, ರವಿವಾರ ನಾವು ಒಂದೆಡೆ ಕೂಡಿ ಸಂತೋಷದಿಂದ ಕಾಲಕಳೆಯಬಹುದು."

"ಅದಕ್ಕೇನಂತೆ, ನಿಮ್ಮ ಮನೆಯೆಲ್ಲಿ?"

"ಬಾಂದ್ರಾ ಸ್ಟೇಷನ್ನಿನಿಂದ ಪೂರ್ವಕ್ಕೆ ಕಲಾನಗರ ಸರ್ಕಲಿಗೆ ಹೋಗಿ ಎಡಕ್ಕೆ ಹೊರಳಿ ಕೆಲ ಅಂತರ ಹೋದ ಮೇಲೆ ಬಸ್ಸು ಸ್ಟ್ಯಾಪ್ ಬರುವುದು. ಅದರ ಸಮೀಪದಲ್ಲೇ ನನ್ನ ಮನೆ".

"ನಾನು ಇರುವುದು ಸಾಯಿನದಲ್ಲಿ. ರಂಗರಾವ ನೀವು ಯಾವ ಕಡೆಗೆ ಹೋಗುವವರು?"

"ದಾದರ ಸ್ಟೇಷನ್ನಿಗೆ ಬಿಡ್ರಿ. ವ್ಹಿ.ಟಿ. ಗೆ ಹೋಗಿ ಅಲ್ಲಿಂದ ಆಫೀಸಿಗೆ ಹೋಗೂದು. ಆಫೀಸಿನಿಂದ ಚೆಂಬೂರು ಗಾಡಿ ಹತ್ತುವವ ನಾನು." ಎಂದು ರಂಗರಾಯ ತನ್ನನ್ನು ದಾದರದಲ್ಲಿ ಇಳಿಸುವ ಬಗ್ಗೆ ಹೇಳಿದ. ಟ್ಯಾಕ್ಸಿಯಲ್ಲಿ ನಾವು ಸಾಗಿದೆವು.

"ನೀವು ಡಬಲ್ ಡಿಗ್ರಿ ಪದವೀಧರರು. ಪತ್ರಿಕಾ ಪ್ರಪಂಚದಲ್ಲಿ ಹೆಸರಾದವರು. ಹೀಗಿದ್ದೂ ಲಗ್ನವಾಗುವ ವಿಚಾರ ಸದ್ಯಕ್ಕೆ ಇಲ್ಲಾಂತ ನಿಮ್ಮ ತಂದೆಯವರು ತಿಳಿಸಿದರು ಅಂತ ನಮ್ಮ ಮಾವನವರು ಪತ್ರ ಬರೆದು ನಿಮ್ಮನ್ನು ಕಂಡು ಈ ವಿಷಯವನ್ನು ಚರ್ಚಿಸಲು ತಿಳಿಸಿರುವರು. ಸದ್ಯಕ್ಕೆ ಲಗ್ನವೇ ಬೇಡ ಎಂಬ ಅಭಿಪ್ರಾಯ ನಿಮ್ಮದು ಇದ್ದರೆ ಅದರ ಕಾರಣ ತಿಳಿಸಬಹುದಲ್ಲ" ಕೃಷ್ಣರಾಯ ಒಳ್ಳೆಯ ಆತ್ಮೀಯರಾಗಿ ನನಗೆ ಈ ಪ್ರಶ್ನೆ ಕೇಳಿದರು. ಅವನ ಪ್ರಶ್ನೆಗೆ ಏನು ಉತ್ತರ ಕೊಡಬೇಕೋ ನನಗೆ ತಿಳಿಯಲಿಲ್ಲ. ಆದರೂ ಪ್ರಶ್ನೆಗೆ ಒಂದು

ಹಾರಿಕೆಯ ಉತ್ತರ ಕೊಡವೆ ಬಿಟ್ಟಿದ್ದೆಲ್ಲ ಎಂದು ಕೊಂಡು.

"ನೋಡಿ ಕೃಷ್ಣರಾವ್, ಅಡಿಗೆ ಮಾಡುವವರಿಗೆ ಅಡಿಗೆ ವಾಸನೆ ತಿಂದು ಊಟ ಬ್ಯಾಡ ಅನಿಸತದ್ಯ. ಅವನಿಗೆ ಈಗ ಊಟಕ್ಕೆ ಏಳು ಅಂದರೆ ಅವನು ಏನು ಹೇಳತಾನ. ಸದ್ಯಕ್ಕೆ ಊಟದ ಅಗತ್ಯ ಅನಿಸೋದಿಲ್ಲ. ಹಸಿವಿ ಆದಾಗ ತಾನೇ ಊಟಕ್ಕೆ ಎಲೆಹಾಕಲು ನಿಮಗೆ ಹೇಳತೀನಂತಾನಿಲ್ಲೋ. ಆ ಅಡಿಗಿಯವನ ಸ್ಥಿತಿ ಮುಂಬಯಿಯಲ್ಲಿರುವ ನಮ್ಮಂತಹವರಗಳ ಸ್ಥಿತಿ ಒಂದೇ ಆಗಿರುತ್ತದೆ."

"ದಾಮೂ ಅಣ್ಣಾ, ಇವರು ನಿನ್ನ ಹಾಂಗs ಸದ್ಯಕ್ಕೆ ಲಗ್ನ ಆಗುವ ವಿಚಾರ ಇಲ್ಲ ಅಂತs ಹೇಳತಿಮೂ?"

"ಹೌದು ನಿಮ್ಮಪ್ಪ ಬಲಿ ಹಾಕಿ ನಿನ್ನನ್ನು ನನಗೆ ತೋರಿಸುವವರೆಗೆ. ಅಂತಷ್ಟು ಅವರಿಗೆ ಹೇಳಿ ಬಿಡು" ಎಂದು ಕೃಷ್ಣರಾಯ ಪತ್ನಿಗೆ ಮೊಳಕೈಯಿಂದ ತಿವಿದು ಹೇಳಿದನು.

"ನಾಲ್ಕು ದಿನ ತವರು ಮನೆಗೆ ಹೋಗಿ ಬನ್ರೀ ಅಂದರೂ ಬಿಡುವುದಿಲ್ಲ ನೀವು. ಆಗ ಹಂಗ್ಯಾಕ ಅತಿ್ರಿ. ಈಗ ಹಿಂಗ್ಯಾಕ ಮಾಡ್ತೀರಿ". ಎಂದು ಲೀಲಾ ಗಂಡನತ್ತ ಓರೆ ನೋಟದ ಬಾಣ ಬೀಸಿದಳು.

"ಆಗ ಮಿಂಚಿನ ಬೆಳಕು ಕಣ್ಣಿಗೆ ಕತ್ತಲು ಗಟ್ಟಿಸುತ್ತಿತ್ತು. ಬೆಳಕು ಅಂದರೆ ಮಿಂಚು ಇದ್ಹಾಂಗ. ಅಂತ ಅವರ ದರ್ಶನಾನೇ ಬ್ಯಾಡ ಅನಸುತ್ತಿತ್ತು. ನೀನು ಭೆಟ್ಟಿಯಾಗಿ ಮಿಂಚು ಬೆಳದಿಂಗಳಲ್ಲ. ಬೆಳದಿಂಗಳ ಬೆಳಕು ಕಣ್ಣಿಗೆ ತಂಪು, ಮನಸ್ಸಿಗೆ ಸೊಂಪು ಮುಂದೆ ಹೆಜ್ಜೆ ಇಡಲಿಕ್ಕೆ ಹುರುಪು ಕೊಡುವಂತಾದ್ದು ಅಂತ ಮನಸಿಗೆ ಹಿಡಿಸಿತು. ಬೆಳದಿಂಗಳ ಕಂಡ ಕಣ್ಣಿಗೆ ಕತ್ತಲಿಯೊಳಗೆ ಇರೂದು ಅಂದರೆ ಭಯ ಅನಿಸುವುದೂ ಸಹಜ. ಈಗ ತಿಳಿತs ಆಗ ಹಾಂಗ ಅನ್ನೂದು ಯಾಕ, ಈಗ ಹಿಂಗ ನಡಕೊಂಬೋದು ಯಾಕ ಇದರ ಕಾರಣ?"

ಟ್ಯಾಕ್ಸಿ ದಾದರ ನಿಲ್ದಾಣದ ಹತ್ತಿರ ಬಂದು ನಿಂತಾಗ ಎಲ್ಲರಿಗೂ ಇಳಿಯಲು ಕೃಷ್ಣರಾವ ಆದೇಶ ಕೊಟ್ಟು ಸಮೀಪದ ರೆಸ್ಟೂರೆಂಟಿಗೆ ಎಲ್ಲರನ್ನೂ ಕರೆದೊಯ್ದನು.

ಲೀಲಾನೊಂದಿಗೆ ಕೃಷ್ಣರಾಯ ದಾದರ ನಿಲ್ದಾಣದತ್ತ ನಡೆದನು. ರಂಗನೂ ನಾನೂ ಸೆಂಟ್ರಲ್ ರೇಲ್ವೆ ಹಿಡಿಯಲು ಹೊರಡುವಾಗ ಕೃಷ್ಣರಾಯನ ಹಸ್ತಲಾಘವ ಮಾಡಿ ನಿರೂಪವಡೆದೆವು.

ನಾವು ನಾಲ್ಕು ಹೆಜ್ಜೆ ಹೋಗಿರಬಹುದು.

"ದಾಮೋದರರಾವ" ಎಂದು ಕೃಷ್ಣರಾಯರು ನನ್ನನ್ನು ಕರೆದರು. ...

"ಯಾಕೆ ಕರೆದಿರಿ?" ಎಂದು ಅವರ ಬಳಿಗೆ ಹೋಗಿ ಕೇಳಿದೆ.

""ನಾಳೆ ರವಿವಾರ. ಕನ್ಯಾ ತೋರಿಸುವ ಕಾರ್ಯಕ್ರಮವಿದೆ ಮನೆಯಲ್ಲಿ. ಕೆಲ ಸಾಮಾನು ತಗೊಂಡು ಬರುವೆ. ಇವಳು ಒಬ್ಬಳೇ ಇಲ್ಲಿ ನಿಲ್ಲಬೇಕಾಗುವದು. ನಾನು ಬರುವ ವರೆಗೆ ನೀವು ಇವಳ ಜೊತೆ ಮಾತನಾಡುತ್ತ ನಿಲ್ಲುವದು ಸಾಧ್ಯವೇ ಎಂದು ಕೇಳಬೇಕೆಂದು ಕೂಗಿದೆ. ನಿಮಗೆ ಸಮಯಾನುಕೂಲವಿಲ್ಲದಿದ್ದರೆ ಅವಳನ್ನು ಕರೆದುಕೊಂಡು ಹೋಗುವೆ. ಈ ಗದ್ದಲದಲ್ಲಿ ಬರಲಾರೆ. ಇಲ್ಲಿಯೇ ಕೆಲ ನಿಮಿಷ ನಿಮ್ಮ ದಾರಿಕಾಯುತ್ತ ನಿಂತರೆ ಆಗದೆ? ಎಂದು ಅವಳು ಹೇಳಿದಳು. ನೀವು ಅವಳ ಜೊತೆ ಮಾತನಾಡುತ್ತ ನಿಂತರೆ ನನ್ನ ಚಿಂತೆ ಬಿಟ್ಟಂತೆಯೂ ಆಗುವದು. ನಿಮ್ಮ ತಂಗಿಯ ಮನಸ್ಸಿಗೆ ಸಮಾಧಾನವೂ ಆಗುವುದು ಎಂದು ಕರೆದೆ" ಎಂದು ಹೇಳಿದನು.

"ನಾಳಿನ ದಿನ ಆಫೀಸಿಗೆ ರಜೆ. ಮನೆಗೆ ಹೋಗುವ ಅವಸರವೇನೂ ಇಲ್ಲ. ನೀವು ನಿಶ್ಚಿಂತರಾಗಿ ಹೋಗಿ ಬನ್ನಿ. ನಾನು ಅವಳ ಜೊತೆ ಇಲ್ಲಿ ಇದ್ದೇ ಇರುವೆನು" ಎಂದು ಹೇಳಿದೆ.

ಕೃಷ್ಣರಾಯ ಹೂ, ಹಣ್ಣು ಕಾಯಿ ತರುವುದಾಗಿ ಹೇಳಿ ಹೋದವನು ಅರ್ಧತಾಸು ಕಳೆದರೂ ಬರಲಿಲ್ಲ! ಲೀಲಾ ಚಡಪಡಿಸಹತ್ತಿದಳು. "ನಾವು ಮನೆಗೆ ಹೋದ ಮೇಲೆ ಕನ್ಯಾ ನೋಡಲು ಬರುವ ವರ ಪಕ್ಷದವರಿಗೆ ಹೇಳಿ ಬರಲು ಅವರ ಮನೆಗೆ ಹೋಗುವ ಕಾರ್ಯಕ್ರಮವನ್ನಿಟ್ಟುಕೊಂಡಿದ್ದರು. ಇಷ್ಟು ಹೊತ್ತಾದರೂ ಬರಲಿಲ್ಲವೆಂದಮೇಲೆ ಅವರ ಮನೆಗೇನಾದರೂ ಹೋದರೋ ಏನೋ. ನೀನು ನನ್ನ ಬಳಿ ಇರುವವರಿಂದ ಅವರು ನನ್ನ ಬಗ್ಗೆ ನಿಶ್ಚಿಂತರಾಗಿರುವರು. ನಾವು ಇಲ್ಲಿ ನಿಲ್ಲುವದಕ್ಕಿಂತ ಮನೆಗೆ ಯಾಕೆ ಹೋಗಬಾರದು?" ಎಂದು ಕೇಳಿದಳು.

ನನಗೂ ಅವಳ ಸೂಚನೆ ಸಮಂಜಸವೇ ಎಂದು ತೋರಿತು. ಆಗಲೇ ಕತ್ತಲೆ ವ್ಯಾಪಿಸಿತ್ತು. ಕೃಷ್ಣರಾಯ ನೇರವಾಗಿ ತನ್ನ ಮನೆಗೆ ಹೋಗಿ ಬಿಟ್ಟರೆ ನಾವು ಸರಿರಾತ್ರಿ ವರೆಗೆ ನಿಂತರೂ ಏನು ಪ್ರಯೋಜನ? ಲೀಲಾನನ್ನು ಮನೆಗೆ ಮುಟ್ಟಿಸಿ ಹೋದರಾಯಿತು. ಎಂದುಕೊಂಡು ಅವಳೊಂದಿಗೆ ಗಾಡಿ ಹತ್ತಿ ಬಾಂದ್ರಾ ನಿಲ್ದಾಣಕ್ಕೆ ಬಂದಿಳಿದೆ.

ಕಲಾನಗರಕ್ಕೆ ಹೋಗುವ ಬಸ್ ಹಿಡಿದು ಸರ್ಕಲ್ ವರೆಗೆ ಬಂದು ಬಸ್ಸು ಇಳಿದೆವು. ಕೃಷ್ಣರಾಯರ ಮನೆ ನನಗಂತೂ ಗೊತ್ತಿಲ್ಲ. ಲೀಲಾ ತನಗೂ ಸರಿಯಾದ ಪತ್ತೆ ಗೊತ್ತಿಲ್ಲ. ಇಲ್ಲಿಯೇ ಈ ಸಂದಿಯಲ್ಲಿ ಹಾಯ್ದು ಮುಂದೆ ನರಸ್ತೆ ದಾಟಿ ಆಚೆಯ ಸಂದಿಯಲ್ಲಿ ಎಲ್ಲಿಯೋ ಇದೆ ನಡೆ ಅಂದಳು. ಅವಳು ಮುಂದೆ ನಾನು ಹಿಂದೆ ತಾಸು ಬೀದಿಯಲ್ಲಿ ಸುತ್ತಾಡಿ ದಣಿದೆವು. ರಾತ್ರಿ ಹತ್ತು ಹೊಡೆಯಿತು.

ಕಾರಭಾರಿ ಕೃಷ್ಣರಾಯರ ಮನೆ ಯಾವುದು? ಎಂದು ಎಲ್ಲೆಲ್ಲಿಯೂ ಕೇಳಿದೆವು. ತಮಗೆ ಗೊತ್ತಿಲ್ಲವೆಂದೇ ಎಲ್ಲರೂ ಹೇಳುವ ಉತ್ತರ ಕೇಳಿ ಲೀಲಾ ಗಾಬರಿಯಾದಳು. ನಾವು ಆ ಸಂದಿಯಲ್ಲಿ ಹೊರಳಿದ್ದು ಸರಿಯಲ್ಲ ಕಾಣತದೆ ಅಂದಳು. ಮತ್ತೆ ಅರ್ಧತಾಸು ಸುತ್ತಾಡಿ ಕೊನೆಗೆ "ಮನೆ ಕತ್ತಲಲ್ಲಿ ಸಿಗುವ ಸಂಭವ ಕಡಿಮೆ. ಜನರ ಸಂಚಾರ ನಿಂತಿದೆ. ಬಾಗಿಲು ತಟ್ಟಿ ಜನರನ್ನು ಎಬ್ಬಿಸಿ ಕೇಳಿ ಛೀ ಅನ್ನಿಸಿಕೊಳ್ಳುವದು ಸರಿಯಲ್ಲ. ಈಗ ನಮ್ಮ ಮನೆಗೆ ಹೋಗುವಾ. ಅಲ್ಲಿ ನನ್ನ ಅಕ್ಕ ದಾರಿ ಕಾಯುತ್ತ ಕೂತಿರಬಹುದು. ಬೇಗನೇ ಹೋಗದಿದ್ದರೆ ಅಲ್ಲಿ ಅವಳು ರಂಭಾಟ ಹೂಡಬಹುದು" ಎಂದು ಲೀಲಾನ ಮುಂದೆ ನನ್ನ ವಿಚಾರ ಮಂಡಿಸಿದೆ. ಅವಳು ಅದಕ್ಕೆ ಒಪ್ಪಿದಳು. ಒಂದು ಟ್ಯಾಕ್ಸಿ ಮಾಡಿಕೊಂಡು ಅಲ್ಲಿಂದ ಸಾಯನದಲ್ಲಿಯ ನಮ್ಮ ಮನೆಗೆ ಬಂದಿಳಿದೆವು.

ನಮ್ಮ ಬ್ಲಾಕಿನಲ್ಲಿ ಎಂಟು ಕುಟುಂಬಗಳು ವಾಸವಾಗಿದ್ದರೂ ಎಲ್ಲರೂ ಆಗಲೇ ಮಲಗಿ ನಿದ್ರೆ ಹೋಗಿದ್ದರು.

ಲೀಲಾನೊಂದಿಗೆ ನಾನು ಇಷ್ಟು ರಾತ್ರಿ ಮಾಡಿ ಬಂದದ್ದು ನೋಡಿ ಅವಳಿಗೆ ಆಶ್ಚರ್ಯವಾಯಿತು. ಅಪರಿಚಿತ ಯುವತಿಯೊಂದಿಗೆ ಅವಿವಾಹಿತ ಯುವಕನೊಬ್ಬ ಮಧ್ಯರಾತ್ರಿ ಸುಮಾರಿಗೆ ಮನೆಗೆ ಬಂದರೆ ಅವಳು ಏನೆಂದುಕೊಳ್ಳಬಹುದೋ ಅದನ್ನು ಮನಸಿನಲ್ಲಿ ಅಂದುಕೊಂಡಳು.

"ಇದೇನು ಧಂದೋ ದಾಮು. ನಾಳೆ ಬೆಳಗಾದರೆ ಕನ್ಯಾ ನೋಡಲಿಕ್ಕೆ ಹೋಗುವವ. ನೀನು ಹೀಗ ನಡುರಾತ್ರಿ ವರೆಗ ಊರ ತುಂಬಾ ಅಲೀತಿ ಅಂತ ನಾಳೆ ಅವರ ಕಿವಿಗೆ ಸುದ್ದಿ ಮುಟ್ಟಿದರೆ ಅವರು ಏನೆಂದುಕೊಂಡಾರು?" ಎಂದು ಒಟಗುಟ್ಟ ತೊಡಗಿದಳು.

"ಲಗ್ನ ಆಗುವ ವಿಚಾರ ಇಲ್ಲ ಅನ್ನುವ ನೀವು ಕನ್ಯಾ ನೋಡುವವರಿದ್ದೀರಾ?" ಎಂದು ಲೀಲಾ ಕೇಳಿದಳು.

"ಯಾಕ? ಅವನು ಕನ್ಯಾ ನೋಡಿದರೆ ನಿನ್ನದೇನು ಗಂಟ ಹೋಗುತದ? ಲಗ್ನದ ವಿಚಾರ ಬಿಟ್ಟು ಹೀಂಗ ನಿನ್ನ ಜಾಲಾಗಾಸಿ ಆಗಿ ತಿರುಗಲಿ. ಅಂದರ ನನಗೆ ಚಕ್ಕಂದ ಆಡಲಿಕ್ಕೆ ಮೋಕಳೀಕ ಆಗತದ ಅಂತ ತಿಳಕೊಂಡಿ ಏನ ಗಯ್ಯಾಳೀ" ಎಂದು ನನ್ನ ಅತ್ಯಾ ಬಾಯಿ ಬಿಟ್ಟರು.

ಲೀಲಾನ ಕಣ್ಣಲ್ಲಿ ನೀರು ಬಂದವು. ...

"ಇವರು ನನ್ನ ಅಣ್ಣ. ನಾನು ಬಂದದ್ದು ನನ್ನ ಅಣ್ಣನ ಮನೆಗೆ" ಅಂತ ಗದ್ಗದ ಸ್ವರದಿಂದ ಹೇಳಿದಳು.

"ಇವಳು ಲೀಲಾ. ನಮ್ಮ ಕೇಶೂ ಕಾಕಾನ ಮಗಳು. ಏನರೆ ಮುಟ್ಟಿ ಹಾಂಗ ಮಾತಾಡಿದಿ. ಆಕಿ ಮನಸ್ಸಿಗೆಷ್ಟು ನೋವಾಯಿತು. ಇದರ ಕಲ್ಪನಾ ಅದ ಏನು ನಿನಗೆ?" ಎಂದು ನಾನು ಸಿಡಿಮಿಡಿಗೊಳ್ಳಲು ತಾನು ಆಡಬಾರದ ಮಾತು ಆಡಿದ್ದು ತಪ್ಪು ಎಂದು ಅತ್ಯಾಗೆ ಅನಿಸಿತು.

"ಇರಲಿ ಬಿಡು. ನೀನು ಅಪರಿಚಿತೆ. ಲೀಲಾ ಕೇಶವನ ಮಗಳು ಅಂತ ನನಗೇನು ಕನಸ ಬೀಳಬೇಕ? ಹರೇದ ಹೆಣ್ಣು ಮಗಳು ಸರಿರಾತ್ರಿ ಹಿಂದಿಲ್ಲ ಮುಂದಿಲ್ಲ ಧುತ್ತಂತ ಬಂದು ಎದುರಿಗೆ ನಿಂತರೆ ಬಾರದ್ದಾ, ಬಾಡದೆ ಬಂದೀದಿ ಕಾಂತನ. ಕೂಡು. ಅಂತ ಉಪಚಾರ ಮಾಡುವವರು ನಮ್ಮ ಮನೆತನದಾಗೆ ಯಾರೂ ಹುಟ್ಟಿಲ್ಲ" ಎಂದು ತನ್ನ ಮಾತನ್ನು ಸಮರ್ಥಿಸಿಕೊಂಡಳು.

ನಮ್ಮಿಬ್ಬರಿಗೂ ಬಿಸಿ ಅನ್ನ ಮಾಡಿ ಊಟಕ್ಕೆ ಬಡಿಸಿದಳು.

ಅದೇ ಹೊತ್ತಿಗೆ ನಮ್ಮ ಬ್ಲಾಕಿನಲ್ಲಿರುವ ಇನ್ನೊಂದು ಮನೆಯಲ್ಲಿ ಭಾರೀ ಜಗಳ ಪ್ರಾರಂಭವಾಗಲು ಅತ್ಯಾ ಆ ಜಗಳ ಬಿಡಿಸಲು ಹಿರಿಮನುಷ್ಯಳಾಗಿ ಹೊರಗೆ ಹೋದಳು.

ದಾಜೀ ಸಾಹೇಬ ಎಂಬ ಮರಾಠಾ ಗೃಹಸ್ಥನಿಗೂ ಅವನ ಹೆಂಡತಿ ಜೀಜಾಬಾಯಿಗೂ ಬಾಯಿಗೆ ಬಾಯಿ ಹತ್ತಿ ಇಡೀ ಬ್ಲಾಕಿನ ಎಲ್ಲ ಮನೆಗಳಲ್ಲಿ ಜನರು ಎಚ್ಚತ್ತಿದ್ದರು. ನಮ್ಮ ಅತ್ಯಾ ಜೀಜಾಬಾಯಿ ಪಕ್ಷವಹಿಸಿ "ಗಂಡಸರಿಗೆ ಮನೆಗೆ ಯಾವಾಗ ಬರಬೇಕು ಅಂಬೂ ಎಚ್ಚರ ಇರಬೇಕಪಾ. ಮಕ್ಕಳು ಮಲಗಿ ನಿದ್ರೆ ಹೋದ ಮ್ಯಾಲೆ ಆಕಿ ಎಷ್ಟು ಹೊತ್ತು ಅಂತ ನಿದ್ದಿ ಕಟ್ಟಿ ಈಗ ಬರತಾರ ಈಗ ಬರತಾರಂತ ಕೂಡಬೇಕು ಹೇಳು. ೧೨-೩೦ ಹೊಡೆದರೂ ಮನೆಗೆ ಬರದಂಥಾ ಕೆಲಸಬಿದ್ದಿದ್ರೆ ಫೋನ ಮಾಡಿ ತಿಳಿಸಬೇಕಿತ್ತು. ನಮ್ಮ ಹುಡುಗನೂ ಇದೇ ಈಗ ಮನೆಗೆ ಬಂದಾ. ನಿಮ್ಮಲ್ಲಿ ಹಾಂಗೇ ನಮ್ಮಲ್ಲಿಯೂ ದೊಡ್ಡ ಜಗಳ ಆಗೂದೇ ಇತ್ತು"

"ಅಜ್ಜೀ, ನಿಮಗೇನ ಹೇಳೂದು. ಪೋಲೀಸ ಖಾತೇದ ನೌಕರಿ ನುಖ. ಮನೆಗೆ ಹೊಂಟ ನಿಂತಿದ್ನಿ ಫೋನ ಬಂತು. ಒಬ್ಬ ಹೆಣಮಗಳು ದಾದರಿನ್ಯಾಗಿನ

ದಾಗ ನಿಂತಿದ್ಲು. ಆಕಿ ಗಂಡ ಹೊವು ಹಣ್ಣುಕಾಯಿ ತ...ಂಡು ಬರ...ಯು ಆಗ್ಯಾಳ. ಬಾಂದ್ರಾದೊಳಗೆ ಆಕಿ ಗಂಡನ ಮನೆಗೆ ಹೋಗಿಲ್ಲ. ಆಕಿನ್ನ ಯಾರಾದರೂ ಓಡಿಸಿಕೊಂಡು ಹೋಗಿರಬೇಕು. ಇದರ ಶೋಧ ಹಚ್ಚರಿ ಅಂತಫೋನ ಬಂತು. ಆ ಕೆಲಸ ಮಾಡಿ ಮನಿಗೆ ಹೋಗು ಅಂತ ಸಾಹೇಬರ ಆರ್ಡರ ಮಾಡಿದರು. ಇಷ್ಟು ತಿರುಗಿದರೂ ಏನೂ ತಪಾಸ ಹತ ಲಿಲ್ಲ. ಅಲ್ಲೆ ಒಂದು ಹೆಂಗಸಿನ ತಪಾಸ ಹಚ್ಚೊದಾಗ ಲಿಲ್ಲ ನಿನಗೆ ವಾಲಾಯುಖ ಅಂತ ಸಾಹೇಬನಿಂದ ಬೈಸಿಕೊ ಬೇಕು. ಇಲ್ಲಿ ಮನಿಗೆ ಬಂದರೆ ಹೆಣ್ಣಿನ ಬೆನ್ನು ಹತ್ತಿ ಸರಿರಾತ್ರಿ ಮಟಾ ತಿರಗತೀ ಅಂತ ಈಕಿಕಡಿಂದ ಬೈಸಿ ಕೋ ಬೇಕು".

"ಏನ ಬೈಸ್ಕೋ ಬ್ಯಾಡ ನಿನಗೆ ಬೇಕಾದ ಹೆಣ್ಣು ಮಗಳು ಮನೆತನಸ್ಥ ಹುಡುಗಿ. ನಮ್ಮ ಊರ ಹುಡಗಿ. ಗಂಡನ ಮನೆಯು ಪತ್ತಾ ಹತ್ತಲಿಲ್ಲಂತ ನಮ್ಮ ಮನಿಗೆ ನಮ್ಮ ಹುಡುಗ ಕರ್ಕೊಂಡು ಬಂದಾನ" ಎಂದು ಅತ್ಯಾ ಅವನಿಗೆ ಸಮಾಧಾನ ಹೇಳಿದಳು. ಇದನ್ನು ಕೇಳಿ ಜೇಜಾಬಾಯಿ ಸಿಟ್ಟು ಇಳಿದು ಮಾರಿಮ್ಯಾಲೆ ನಗಿ ಮೂಡಿತು.

ಜಮಾದಾರ ದಾಜೀಸಾಹೇಬ ನಮ್ಮ ಊಟ ಆಗೂ ಪುರಸೊತ್ತಿಲ್ಲದೆ ನಮ್ಮ ಅತ್ಯಾನಿಗಿಂತ ಮೊದ ಲೇ ನಮ್ಮ ಮನಿಗೆ ಬಂದು ಬಾಗಿಲು ಬಡಿದ. ಅತ್ಯಾ ನೇ ಬಂದಿರಬೇಕು ಅಂತ ಲೀಲಾ ನೋಡಲು ಹೋ ದಾಗ ಅವಳ ಎದುರಿಗೇ ಪೋಲೀಸ ನಿಂತದ್ದು ಕಂಡು ಓಡಿ ಬಂದು ನನಗೆ ತಿಳಿಸಿದಳು.

ನಡೆದ ಸಂಗತಿ ತಿಳ್ಕೊಂಡ ನಂತರ ಜಮಾದಾರ ದಾಜೀಸಾಹೇಬ ಹೇಳಿದ.

"ಈ ಹೆಣ್ಣುಮಗಳ ಗಂಡನು ಪೋಲೀಸರಿಗೆ ತನ್ನ ಹೆಂಡತಿಯನ್ನು ಯಾರೋ ಓಡಿಸಿಕೊಂಡು ಹೋಗಿ ಬಿಟ್ಟಿರುವ ಸಂಭವವಿದೆ. ತಪಾಸ ಆಗಬೇಕು ಅಂತ ಫಿರ್ಯಾದಿ ಕೊಟ್ಟಾನ. ಈಗಿಂದೀಗ ನೀವು ಅವಳನ್ನು ಗಂಡನ ಮನೆಗೆ ಕರೆದೊಯ್ದು ಮುಟ್ಟಸದಿದ್ದರೆ ಒಂದು ರಾತ್ರಿ ಅವಳನ್ನು ಬಚ್ಚಿಟ್ಟ ಆರೋಪವಿಟ್ಟು ಪೋಲೀ ಸರು ನಿಮ್ಮ ಮೇಲೆ ಖಟ್ಲೆ ಹಾಕಬೇಕಾಗುವದು. ಈಗ ಮೊದಲು ಅವಳನ್ನು ಮುಟ್ಟಿಸಿ ಬರುವ ನಡೆಯಿರಿ" ಎಂದು ನಮ್ಮಿಬ್ಬರನ್ನು ಮುಂದೆ ಹಾಕಿಕೊಂಡು ದಾದರ ಪೋಲೀಸ ಸ್ಟೆಷನ್ನಿಗೆ ಒಯ್ದು ಹಾಜರಪಡಿಸಿದನು.

ನನ್ನ ಹೆಸರು ವಿಳಾಸ ಬರಕೊಂಡ ನಂತರ ಕೃಷ್ಣ ರಾಯನ ಮನೆಗೆ ಹೋಗಿ ಲೀಲಾನ್ನ ಅವರಿಗೆ ಒಪ್ಪಿಸಿ ವರದಿ ಮಾಡಲು ದಾಜೀಸಾಹೇಬನಿಗೆ ಆರ್ಡರ ಕೊಟ್ಟು ನಮ್ಮೊಡನೆ ಅಟ್ಟಿದರು.

ಲೀಲಾನ ಮುಖ ದರ್ಶನದಿಂದ ಕೃಷ್ಣರಾಯನ ಮುಖ ಅರಳಿತು.

"ನಾ ಹೇಳಿಧಾಂಗ ಕೇಳಲಿಲ್ಲ. ಫಲ ಉಂಡಿ ಇಲ್ಲೋ" ಎಂದು ಕೃಷ್ಣರಾಯ ನಗೆಯಾಡಿದ.

"ಥೂ, ನಿಮ್ಮ ಮಾತು ಕೇಳಿದ್ದಕ್ಕೆ ಜನ್ಮ ಜನ್ಮಾಂತರ ನೆನಪು ಉಳಿಯೂ ಹಾಂಗ ಆಯಿತು. ಇನ್ನು ನೀವು ಏನು ಬೇಕಾದ್ದು ಹೇಳಿದರೂ ನಿಮ್ಮ ಮಾತು ಕೇಳಬಾರದು ಅಂತ ಆಣಿ ಮಾಡೀನು" ಎಂದು ಲೀಲಾ ಒಳಗೆ ಹೋದಳು.

"..., ದಾ... ...ಗರರಾವ, ನನ ... ...ದು ಸಣ್ಣ ತಪ್ಪಿಸಿ... ಸಿ... ಪೋಲೀಸ ಠಾಣೆ ಹೋಗುವ ಪ್ರಸಂಗ ಬಂತು. ಕ್ಷಮಿಸಿ" ಎಂದು ಕುರ್ಚಿಯ ಮೇಲೆ ಕೂಡಿಸಿದ "ಜಮಾದಾರ ಸಾಹೇಬ, ನೀವು ಕೂತು ಕೊಳ್ಳಿ" ಎಂದು ಹೇಳಿದ.

"ನಿಮ್ಮ ತಪ್ಪು ಏನಿದೆ ಇದರಲ್ಲಿ? ಅಪರಿಚಿತ ಹೆಣ್ಣು ಮಗಳ ಪರಿಚಯ ಆದೆ ಅಂತ ನಟಿಸಿ ಅವ ಳೊಡನೆ ಮಾತಾಡ ಬಯಸಿದ್ದಕ್ಕೆ ದೇವರು ನೆನಪು ಉಳಿಯೂ ಹಾಂಗ ಮಾಡಿದಾ" ಎಂದು ಹೇಳಿದೆ.

"ಅಪರಿಚಿತರೊಡನೆ ಪರಿಚಯ ಇದ್ದವರ್ಹಾಂಗ ನಟಿಸುವ ಪ್ರಸಂಗ ನಿಮಗೆ ಬರಬಾರದು ಅಂತ ನಿಮ್ಮ ನ್ನು ನಮ್ಮ ಮನೆಗೆ ಕರೆಕೊಂಡು ಹೋಗಲು ಲೀಲಾಗೆ ಹೇಳಿ ನಾನು ಮಾರಿತಪ್ಪಿಸಿ ಅವಳಿಗೆ ಒಪ್ಪಿಸಿದ ಈ ಕೆಲಸ ಮಾಡಲು ನೆರವಾದೆ".

"ತಂಗೀ, ಮೋಹಿನಿ. ರಾಯರಿಗೆ ಚಹಾ ತಂದು ಕೊಡು" ಎಂದು ಕೃಷ್ಣರಾಯ ಆದೇಶವಿತ್ತು, "ನನ್ನ ತಂಗಿ ಮೋಹಿನಿ ಬಿ. ಎ. ಪಾಸ ಮಾಡಿದವಳು. ನಿಮ್ಮನ್ನು ಚೆನ್ನಾಗಿ ಬಲ್ಲವಳು. ಆದರೂ ನಿಮಗೆ ಅವಳು ಅಪರಿ ಚಿತೆ. ಅವಳ ಪರಿಚಯ ಮಾಡಿಕೊಡಲು ನಿಮ್ಮನ್ನು ನಮ್ಮ ಮನೆಗೆ ಬರುವಂತೆ ಮಾಡುವದು ಅಗತ್ಯವಿತ್ತು. ನೀವು ಲಗ್ನದ ವಿಚಾರ ಸದ್ಯಕ್ಕಿಲ್ಲ ಅನ್ನುವದು ನನ್ನ ಮಾವನಿಂದ ಬಂದ ಪತ್ರದಿಂದ ತಿಳಿದಿತ್ತು. ಈಗ ಮೋಹಿನಿಯ ಪರಿಚಯವಾದ ಮೇಲೆ ನಿಮ್ಮ ವಿಚಾರ ಅವಳಿಗೇ ನೇರವಾಗಿ ತಿಳಿಸಬಹುದು. ನಿಮ್ಮನ್ನು ವಿವಾ ಹಕ್ಕೆ ಮನ ಒಲಿಸುವ ಹೊಣೆಯಿಂದ ನಾನು ಈ ಕ್ಷಣದಿಂದ ಮುಕ್ತನಾದೆ" ಎಂದು ಮಾತು ಮುಗಿಸುವ ಹೊತ್ತಿಗೆ ಮೋಹಿನಿ ಚಹಾ ಟ್ರೇ ಸಮೇತ ಪದಾರ್ಪಣ ಮಾಡಿದಳು.

ಮಿಂಚು ಅಲ್ಲ. ಬೆಳದಿಂಗಳು. ;ನನ್ನ ಹೃದಯ ವನ್ನು ಬೆಳಗಿತು.

ಚಹಾ ಕುಡಿದು ದಾಜೀಸಾಹೇಬ ಎದ್ದು "ಸ್ತ್ರೀ ಅಪಹಾರದ ಅಪರಾಧಿ ನೀವು. ನಾಳೆ ಕೋರ್ಟಿಗೆ ಹಾಜ ರಾಗಲು ಮರೆಯಬೇಡಿ" ಎಂದು ಹೇಳಿ ಹೊರಟು ಹೋದನು.

ಸ್ತ್ರೀ ಅಪರಾಧಿ! ಅಲ್ಲ. ಕನ್ಯಾಪಹಾರಿ ಎಂದು ಆಜನ್ಮ ಶಿಕ್ಷೆಗೆ ನಾನು ಸಿದ್ಧ ಎಂದು ನನ್ನ ಮನಸ್ಸು ಹೇಳಿತು.ಆದರೆ ಮನಸ್ಸು ಹೇಳಿದ್ದನ್ನು ನಾಲಿಗೆ ಆಡಲು ಹಿಂಜರಿಯುತ್ತಿತ್ತು. ಕಾರಣ ಮೋಹಿನಿ ಅಪರಿ ಚಿತೆ.

ಮೌನದ ಗೋಡೆಗೆ ಬಿರುಕು ಬೀಳುವಂತೆ ಮಾ ಡಿದ ಶ್ರೇಯಸ್ಸು ಲೀಲಾಳಿಗೆ ಸಲ್ಲಬೇಕು.

"ಅಣ್ಣಾ, ನೀವು ನಮ್ಮ ಬೀಗರು ಅಂತ ಇವರು ಉಪಚಾರ ಮಾಡಿ ಹಾಟೆಲಿನಲ್ಲಿ ಮಾತನಾಡಿಸಿದ್ರು. ಈಗ ಹಾಂಗೆ ಹೇಳ್ರಿ. ಅಂತ ಹೇಳು. ಏನು ಹೇಳತಾರ ನೋಡೋಣ"

ಹೀಗೆ ಲೀಲಾ ನುಡಿದದ್ದು ಕೇಳಿ ಕೃಷ್ಣರಾಯ

"ನಿನ್ನ ಅಣ್ಣ ಅಂದ ಮ್ಯಾಲೆ ನನಗೆ ಬೀಗ. ಆ ಅರ್ಥದಲ್ಲಿ ಈಗಲೂ ನೀವು ನನ್ನ ಬೀಗರು ಅಂತ ಉಪ ಚರಿಸುವೆ. ಆದರೆ" ಎಂದು ನಾಲಿಗೆ ತಡವರಿಸಿದನು.

"ನೀವು ಅನ್ನುವುದಾದರೂ ಏನು? ನಮ್ಮ ಅಣ್ಣ ಒಪ್ಪಿದರೆ ಮೋಹಿನಿಯ ಜನ್ಮ ಸಾರ್ಥಕ ಅಂತ ಹೇಳ ತಿದ್ದಿರಿ. ಈಗ ಅಪಸ್ವರ ಯಾಕ ಬಂತು?"

"ಅಪಸ್ವರ ಅಂತ ನೀನು ಅನ್ನಬಹುದು. ನಾಳೆ ಕೋರ್ಟಿನಲ್ಲಿ ವಿವಾಹಿತ ಹೆಣ್ಣು ಮಗಳನ್ನು ... ಕೊಂಡು ಹೋದ ಅಪರಾಧ ಸಿದ್ಧವಾಗಿ ಶಿಕ್ಷೆಯಾ ದರೆ ಇಂಥ ಚಾರಿತ್ರಹೀನನು ನನ್ನ ಬೀಗನಾಗಬೇಕೆಂದು ನಾನು ಖಂಡಿತ ಬಯಸಲಾರೆ"

"ನನ್ನ ಅಣ್ಣನ ಹೆಸರಿಗೆ ಕಲಂಕ ಹಚ್ಚುವಂಥ ನಾಟಕ ಹೂಡಿದವರು ನೀವು. ನಿಮ್ಮ ನಾಟಕದಲ್ಲಿ ಪಾತ್ರಧಾರಿಯಾಗಿ ನಮ್ಮ ಮನೆಯ ಪತ್ತೆ ನನಗೆ ಗೊತ್ತಿಲ್ಲದಂತೆ ನಟಿಸಿ ತನ್ನ ಮನೆಗೆ ಕರೆದೊಯ್ಯಲು ಅವನನ್ನು ಪ್ರೇರೇಪಿಸಿದವಳು ನಾನು. ಇದು ನಿಮಗೆ ಗೊತ್ತಿತ್ತು. ಅವನಿಗೆ ಕೆಟ್ಟ ಹೆಸರು ಕೊಡುವವರಾರು? ಅದನ್ನು ನಂಬುವವರಾರು?"

"ನಾನು ನೀನು ಅವನು ಅಂಥ ಅಪರಾಧಿ ಅಲ್ಲ ಅಂದರೆ ಯಾರು ಕೇಳುವರು? ನಾಳೆ ಕೋರ್ಟು ಶಿಕ್ಷೆ ವಿಧಿಸಿದರೆ ರಂಗಪ್ಪ ಇವರ ಫೋಟೋ ಹಾಕಿ ಸ್ತ್ರೀ ಅಪಹಾರ ಮಾಡಿದ ಆಧುನಿಕ ರಾವಣ ಎಂದು ಶೀರ್ಷಿಕೆ ಕೊಟ್ಟು ಸುದ್ದಿ ಪ್ರಕಟಿಸಿದರೆ ಇವನನ್ನು ಎಲ್ಲರೂ ಆಧುನಿಕ ರಾವಣನೆಂದೇ ಗುರುತಿಸುವರು. ಇದು ನನ್ನ ತಲೆತಿನ್ನುವ ಪ್ರಶ್ನೆ ಈಗ"

"ರಂಗಪ್ಪ ಈಗ ಆಫೀಸಿನಲ್ಲಿಯೇ ಇರಬಹುದು. ಅವನಿಗೆ ಫೋನ ಮಾಡಿ ಇಲ್ಲಿಗೆ ಬರಲು ಹೇಳಿರಿ. ಅವನಿಗೆ ಸುದ್ದಿ ಪ್ರಕಟಿಸಕೂಡದೆಂದು ಈಗಲೇ ಹೇಳಿ ಬಿಟ್ಟರೆ?"

ರಂಗಪ್ಪನು ಆಫೀಸಿನಲ್ಲಿ ಇದ್ದ. ಈಗ ಬರು ವುದಾಗಿ ಕೃಷ್ಣರಾಯನ ಫೋನಿಗೆ ಉತ್ತರ ಕೊಟ್ಟ. ಅವನ ದಾರಿಕಾಯುತ್ತ ನಾವು ಹಳೇ ವೃತ್ತ ಪತ್ರಿಕೆ ಓದುತ್ತ ಗಂಭೀರ ಮೌನತಾಳಿ ಕುಳಿತಿದ್ದೆವು.

ರಂಗಪ್ಪ ಬಂದ. ಇಂದಿನ ಪತ್ರಿಕೆಯಲ್ಲಿ ವಿವಾ ಹಿತ ಸ್ತ್ರೀಯ ಕಣ್ಮರೆ ಎಂಬ ಶೀರ್ಷಿಕೆಯಲ್ಲಿ ಸುದ್ದಿ ಪ್ರಕಟವಾದುದನ್ನು ತಿಳಿಸಿದಾಗ ನನ್ನ ಕೈಕಾಲೇ ಹೋದವು.

"ಅಲ್ಲೋ, ರಂಗಪ್ಪಾ, ದೇವಿ ಈ ಅನಾಹುತದ ಬಗ್ಗೆ ಏನೂ ಹೇಳಲಿಲ್ಲವೆ?" ಎಂದು ಕೇಳಿದೆ.

"ಕುದುರೆಯಿಂದ ಭಾಗ್ಯೋದಯ ಎಂದು ತಿಳಿ ಸಲು ಕುದುರೆ ರೇಸಿನಲ್ಲಿ ಧನಲಾಭ. ಅಪರಿಚಿತ ಹುಡುಗೆಯ ಕೈಹಿಡಿದು ಗೃಹಸ್ಥನಾದ ಚಿತ್ರ ತೋರಿ ಸಿದಳು."

"ಆ ಅಪರಿಚಿತ ಹುಡುಗಿ ಇವಳಷ್ಟು ಸುಂದರ ಳಿದ್ದಳೇ" ಎಂದು ಕೇಳಿದೆ.

"ಇವಳೇ ಆ ಚಿತ್ರದಲ್ಲಿ ನನ್ನ ದೃಷ್ಟಿಗೆ ಬಿದ್ದ ವಳು" ಎಂದು ರಂಗಪ್ಪ ನಗಹತ್ತಿದ.

"ದೇವಿಯು ಇಚ್ಛೆ ಸುಳ್ಳಾಗುವುದಿಲ್ಲ ಅಲ್ಲವೆ?" ಎಂದು ಕೇಳಿದೆ.

"ಅದು ತ್ರಿಕಾಲಕ್ಕೆ ಸುಳ್ಳಾಗದು" ಎಂದು ರಂಗ ಪ್ಪ ಹೇಳಿದಾಗ "ಕೋರ್ಟಿನ ತೀರ್ಪು ಏನಾದರೂ ಚಿಂತೆ ಇಲ್ಲ. ಮೋಹಿನಿ ನನ್ನವಳಾದರೆ ನನ್ನ ಭಾಗ್ಯೋ ದಯ ಅನ್ನುವಿಯಾ" ಎಂದು ಕೇಳಿದೆ.

"ಕೋರ್ಟು ತೀರ್ಪು ಕೊಟ್ಟಿದೆ. ಮೋಹಿನಿಯ ದಾಸನಾಗಬೇಕು" ಎಂದು ಹೇಳಿ ಕೃಷ್ಣರಾಯ ನಗ ಹತ್ತಿದ. "ನನ್ನ ನಾಟಕದ ಯಶಸ್ಸಿಗೆ ನಿಮ್ಮ ತಂಗಿಗೆ ಕಳಸಗಿತ್ತಿ ಸೀರಿ ಉಡಿಸಲು ಮರೆಯಬೇಡಿ" ಎಂದು ಹೇಳಿದ. ●

* * * * * * * * * * * * * *

**ನೂರು ವರುಷಗಳ ಹಿಂದೆ ಉತ್ತರ ಕರ್ನಾಟಕದಲ್ಲಿ ಕನ್ನಡದಲ್ಲಿ ಕನ್ನಡವನ್ನು ಕೇಳುವವರೇ ಇರಲಿಲ್ಲ. ಕನ್ನಡ ಶಾಲೆಗಳು ಇರಲಿಲ್ಲ. ತುಂಬ ದಯನೀಯವಾದ ಪರಿಸ್ಥಿತಿ ಇತ್ತು. ಆದರೆ ಓರ್ವ ಆಂಗ್ಲ ಅಧಿಕಾರಿ ಮುಂದೆ ಬಂದು ಇದನ್ನು ಸುಧಾರಿಸಿದ ಬಗೆ ಅಚ್ಚರಿಯದು.**

# ಉತ್ತರ ಕರ್ನಾಟಕದಲ್ಲಿ ಶತಮಾನ ಹಿಂದೆ ಕನ್ನಡ ಶಿಕ್ಷಣ

ಶಾ. ಯ. ಧಾರವಾಡಕರ

ಗುಜರಾಥ ಮಹಾರಾಷ್ಟ್ರಗಳೊಂದಿಗೆ ತುಲನೆ ಮಾಡಿನೋಡಿದಾಗ, ಬೆಳಗಾವ-ಧಾರವಾಡ ವಿಭಾಗದಲ್ಲಿ ಶಿಕ್ಷಣಸೌಕರ್ಯ ಬಹಳ ತಡವಾಗಿಯೇ ಪ್ರಾರಂಭವಾಯಿತು. ಶೈಕ್ಷಣಿಕವಾಗಿ ತುಂಬಾ ಹಿಂದುಳಿಯಬೇಕಾಯಿತು. ಅಲ್ಲದೆ, ಇಲ್ಲಿ ಶಿಕ್ಷಣಸೌಕರ್ಯ ಪ್ರಾರಂಭವಾದಾಗಲೂ ಕೂಡ, ಜನರ ಮಾತೃಭಾಷೆಯಾದ ಕನ್ನಡದಲ್ಲಿ ಆ ಸೌಕರ್ಯ ಒದಗದೆ, ಕಲಿಸುವವರಿಗೆ ಮಾತ್ರ ಗೊತ್ತಿದ್ದಂಥ ಮರಾಠಿಯಲ್ಲಿ ಪ್ರಾರಂಭವಾಯಿತು. ಧಾರವಾಡ ವಿಭಾಗವು "Southern Maratha Country"; ಇಲ್ಲಿ ಓಡಾಡುವ ರೈಲು "Madras and Southern Maratha Railway ಎಂಬ ಕಲ್ಪನೆ ರೂಢಮೂಲವಾಗಿತ್ತು.

ಧಾರವಾಡ ಹುಬ್ಬಳ್ಳಿಗಳಲ್ಲಿ ಮೊಟ್ಟಮೊದಲಿಗೆ ಪ್ರಾರಂಭವಾದುದು ಮರಾಠಿ ಶಾಲೆಗಳು. "೧೮೨೬ರಷ್ಟು ಮೊದಲಿಗೆ ಎರಡು ಮರಾಠಿ ಶಾಲೆಗಳು ಒಂದು ಧಾರವಾಡದಲ್ಲಿ, ಮತ್ತೊಂದು ಹುಬ್ಬಳ್ಳಿಯಲ್ಲಿ ಪ್ರಾರಂಭವಾದವು". (ಮುಂಬಯಿ ಗೆಝೆಟಿಯರ್.) ಅನಂತರ ೯ ವರುಷಗಳ ನಂತರ, ೧೮೩೫ರಲ್ಲಿ ಇಲ್ಲಿ ಕನ್ನಡ ಶಾಲೆಗಳು ಪ್ರಾರಂಭವಾದವು. ರಾಣೆಬೆನ್ನೂರ ಕನ್ನಡಶಾಲೆ ೧೮೩೬ರಲ್ಲಿ ಪ್ರಾರಂಭವಾಯಿತು. ಪಾದ್ರಿಗಳೂ ಕರ್ನಾಟಕಕ್ಕೆ ಬಂದಂದಿನಿಂದ ಅನೇಕ ಹಾಯಸ್ಕೂಲುಗಳನ್ನು ತೆಗೆದರು. ಬೆಳಗಾವಿಯ ಬೆನನ್‌ಸ್ಮಿಥ್ ಹಾಯ್‌ಸ್ಕೂಲು ೧೮೩೨ರಲ್ಲಿ ಪ್ರಾರಂಭವಾಯಿತು. ವನಿತಾ ವಿದ್ಯಾಲಯವೂ ಅದೇ ಸುಮಾರಿಗೇ ಪ್ರಾರಂಭವಾಯಿತು. ೧೮೮೪ರ ಸುಮಾರಿಗೆ ಹುಬ್ಬಳ್ಳಿಯ ಬಾಸೆಲ್ ಮಿಶನ್ ಗಂಡುಮಕ್ಕಳ ಶಾಲೆಯಲ್ಲಿ ೬೩ ವಿದ್ಯಾರ್ಥಿಗಳು ಅಭ್ಯಾಸಮಾಡುತ್ತಿದ್ದರು. ಹುಬ್ಬಳ್ಳಿ, ಜರ್ಮನಿಯ ಬಾಸೆಲ್‌ಮಿಶನ್ನಿನ ಮುಖ್ಯ ಕೇಂದ್ರಸ್ಥಳವಾಗಿದ್ದಿತು. ಧಾರವಾಡ ಮಿಶನ್ ಕೇಂದ್ರವು ೧೮೩೭ರಲ್ಲಿ ಪ್ರಾರಂಭವಾಗಿ, ಅದಕ್ಕೆ ಚೋಡೆಹಳ್ಳಿ ಉಪಕೇಂದ್ರವನ್ನು ಸೇರಿಸಲಾಗಿತ್ತು. ಹುಬ್ಬಳ್ಳಿ ಮಿಶನ್ ಕೇಂದ್ರ ೧೮೩೯ರಲ್ಲಿ ಪ್ರಾರಂಭವಾಗಿ ಅದಕ್ಕೆ ಉಣಕಲ್ ಮತ್ತು ಹೆಬಸೂರು ಉಪಕೇಂದ್ರಗಳನ್ನು ಸೇರಿಸಲಾಗಿದ್ದಿತು. ಗದಗ-ಬೆಟಗೇರಿ ಮಿಶನ್ ೧೮೪೧ರಲ್ಲಿ ಪ್ರಾರಂಭವಾಗಿ ಅದಕ್ಕೆ ಶಾಗೋಟಿ ಮತ್ತು ಮಲ್ಲಸಮುದ್ರ ಉಪಕೇಂದ್ರಗಳನ್ನು ಸೇರಿಸಲಾಗಿದ್ದಿತು. ೧೮೫೧ರಲ್ಲಿ ಪ್ರಾರಂಭವಾದ ಗುಳೇದಗುಡ್ಡದ ಮಿಶನ್ನಿಗೆ ಹತ್ತು ಉಪಕೇಂದ್ರಗಳಿದ್ದವು. ಈ ಪಾದ್ರಿ ಕೇಂದ್ರಗಳಲ್ಲಿ ಅನೇಕ ಕೇಂದ್ರಗಳು ಕನ್ನಡದ ಅಭ್ಯಾಸಕ್ಕೆ ಸೌಕರ್ಯವನ್ನು ಕಲ್ಪಿಸಿದವು. ಉತ್ತರ ಕರ್ನಾಟಕದಲ್ಲಿ ಕನ್ನಡವನ್ನು ಉಳಿಸಿದ ಶ್ರೇಯಸ್ಸು ೧೮೬೭ರ ಸುಮಾರು ಈ ವಿಭಾಗದ ಎಜುಕೇಶನಲ್ ಇನಸ್ಪೆಕ್ಟರರಾಗಿದ್ದ ಮೆ.ರಸೆಲ್‌ಸಾಹೇಬರಿಗೆ ಸೇರುತ್ತದೆಂದು ಹೇಳಿದರೆ ಅತಿಶಯೋಕ್ತಿಯಲ್ಲ. ಈ ಭಾಗದ ಮಾತೃಭಾಷೆ ಕನ್ನಡವೆಂದು ಮೊದಲು ಅರಿತುಕೊಂಡವರು ರಸೆಲ್ ಅವರು. ಅದಕ್ಕಾಗಿ ಇಲ್ಲಿಯ ಶಿಕ್ಷಣ ಸರಿಯಾಗಿ ಮುಂದುವರಿಯಬೇಕೆಂಬ ದೃಷ್ಟಿಯಿಂದ ಧಾರವಾಡದವರೂ, ಕನ್ನಡ ಬಲ್ಲವರೂ ಆದ, ಶ್ರೀ ಚನಬಸಪ್ಪನವರನ್ನು ಡೆಪ್ಯುಟಿ ಇನಸ್ಪೆಕ್ಟರರನ್ನಾಗಿ ನಿಯಮಿಸಿದರು. ಶಾಲೆಗಳ ಪರೀಕ್ಷಣಕ್ಕೆ ಹೋಗುವ ಅಧಿಕಾರಿಗಳನ್ನಾಗಿ ಕನ್ನಡ ಬಲ್ಲವರನ್ನೇ ನಿಯಮಿಸಿದರು. ಕನ್ನಡ ಬಾರದಿದ್ದ ಮರಾಠಿ ಮತ್ತು ಇತರ ಅಧಿಕಾರಿಗಳು ಮೇಲ್ವಿಚಾರಣೆ ನಡೆಸುವಷ್ಟು ಕನ್ನಡ ಕಲಿಯಬೇಕೆಂದು ಆಜ್ಞೆ ಮಾಡಿದರು. ಶೈಕ್ಷಣಿಕವಾಗಿ ಹಿಂದುಳಿದ ಇಲ್ಲಿಯ ಜನ ಪುಣೆಗೆ ಹೋಗಿ ಅಲ್ಲಿಯ ನಾರ್ಮಲ್ ಸ್ಕೂಲಿನಲ್ಲಿ ಅಭ್ಯಾಸ ಮಾಡುವ ಯೋಜನೆ ಮಾಡಿದರು. ಸ್ತ್ರೀ ಅಭ್ಯರ್ಥಿಗಳಿಗೆ ಶಿಷ್ಯವೇತನಕೊಟ್ಟು ಮುಂಬಯಿ ತರಬೇತಿ ಕಾಲೇಜಿಗೆ ಹೋಗುವಂತೆ ಪ್ರೋತ್ಸಾಹಿಸಿದರು. ಕೇವಲ ಬ್ರಾಹ್ಮಣರು ಮಾತ್ರವಲ್ಲದೆ, ಒಕ್ಕಲುತನ ವ್ಯಾಪಾರಗಳಲ್ಲಿ ತೊಡಗಿದವರ ಮಕ್ಕಳೂ ಇಂಗ್ಲಿಷ ಶಿಕ್ಷಣ ಕೈಕೊಳ್ಳುವಂತೆ ಅವಕಾಶ ಕಲ್ಪಿಸಿದರು. ಲಿಂಗವಂತ ವಿದ್ಯಾರ್ಥಿಗಳಿಗಾಗಿ ಬೆಳಗಾವಿಯಲ್ಲಿ ಒಂದು ಊಟ - ವಸತಿಗಳ ಹಾಸ್ಟೆಲ್ಲಿನ ವ್ಯವಸ್ಥೆ ಮಾಡಲಾಯಿತು. ಟ್ರೇನಿಂಗ್ ಕಾಲೇಜುಗಳಲ್ಲಿ ಸಂಸ್ಕೃತವನ್ನು ಕಲಿಸಲು ಅವಕಾಶ ಕಲ್ಪಿಸಿಕೊಡಲಾಯಿತು. ಹೀಗಾಗಿ, ಕನ್ನಡ ಇಲ್ಲಿ ಸ್ಥಿರವಾಗಿ ನೆಲೆಸುವಂತೆ ಆಯಿತು. ರಸೆಲ್‌ರ ಸೇವೆಯ ಬಗ್ಗೆ "ಇಂಡಿಯನ್ ಎಜುಕೇಶನ್"ದಲ್ಲಿ ವೆಲ್ಸನ್ ಫ್ರೇಜರ್ ಅವರು ೧೯೧೨ರಲ್ಲಿ ಹೀಗೆ ಬರೆದಿದ್ದಾರೆ : "ಕರ್ನಾಟಕದಲ್ಲಿರುವ ಸದ್ಯದ ಪರಿಸ್ಥಿತಿಗೆ ಸರಕಾರವು ಒಂದು ಬಗೆಯಲ್ಲಿ ಜವಾಬ್ದಾರವಾಗಿದೆ. ೧೮೫೮ರಲ್ಲಿ ಮಿ.ಕ್ರ. ಆರ್. ಹೋಪರ್ ಅವರಿಂದ ಮಾತೃಭಾಷಾ ಶಿಕ್ಷಣ ವ್ಯವಸ್ಥೆಯಾದ ನಂತರ ದಕ್ಷಿಣ ವಿಭಾಗಕ್ಕೆ ಬಂದ ಮೊದಲ ಇಬ್ಬರು ಎಜ್ಯುಕೇಶನಲ್ ಇನ್ಸ್‌ಪೆಕ್ಟರರು ಸೈನಿಕ ಅಧಿಕಾರಿಗಳಾಗಿದ್ದರು.. ಮಿ. ರಸ್ಸೆಲ್ ಅವರು ಈ ವಿಭಾಗದ ಆಡಳಿತವಹಿಸಿಕೊಂಡಾಗ, ನಿಜವಾದ ಅಸ್ತವ್ಯಸ್ತತೆ ಇಲ್ಲಿ ತುಂಬಿತ್ತು. ಜನತೆಯ ಭಾಷೆ ಕನ್ನಡವಾಗಿತ್ತು. ಆದರೆ ಶಾಲೆಗಳಲ್ಲಿ ಮಾತೃಭಾಷೆಯ ಬದಲಾಗಿ ಮರಾಠಿಯನ್ನು ಬೋಧಿಸಲಾಗುತ್ತಿತ್ತು.. ಮಿ. ರಸ್ಸೆಲ್‌ರು ಮುಂದಡಿಯಿಟ್ಟು ಜನತೆಗೆ ಜನತೆಯ ಭಾಷೆಯನ್ನೇ ಬೋಧಿಸಬೇಕೆಂದು ಹೇಳಿದರು."

ಶಿಕ್ಷಣ ಸೌಕರ್ಯದ ವಿಷಯ ಹೀಗಾಗಿದ್ದರೆ, ಶಿಕ್ಷಣಕ್ರಮ ಈ ಕಾಲದಲ್ಲಿ ಅಂದರೆ ೧೮೬೬-೬೭ರ ಸುಮಾರು ಹೇಗೆ ರೂಪುಗೊಳ್ಳುತ್ತಿತ್ತೆಂಬುದೂ ಮನೋರಂಜಕವಾಗಿದೆ. ಅಂದಿದ್ದ ಸಮಸ್ಯೆಗಳನ್ನು ಗಮನಿಸಿದಾಗ ಆ ಸಮಸ್ಯೆಗಳು ಇಂದಿಗೂ ಇವೆಯೆನಿಸುತ್ತದೆ. ಸಮಸ್ಯೆಗಳನ್ನು ಆ ಕಾಲದ ಅಧಿಕಾರಿಗಳು ಹೇಗೆ ಪರಿಹರಿಸಿದರೆಂಬುದನ್ನು ಗಮನಿಸುವುದೂ ಒಂದು ಶೈಕ್ಷಣಿಕ ತರಬೇತಿಯೇ ಆಗಿದೆ. ಒಳ್ಳೆಯ ಅಧಿಕಾರಿಗಳಿಗೆ ಹೆಚ್ಚಿನ ಸ್ವಾತಂತ್ರ್ಯವಿದ್ದ ಕಾಲವದು. ಪ್ರಜಾಪ್ರಭುತ್ವದ ಇಂದಿನ ಕಾಲದಲ್ಲಿ ಬಹುಶಃ ಆ ದಕ್ಷತೆ ಇಳಿಮುಖವಾಗುತ್ತಿದೆಯೇನೋ ಎಂಬ ಕಲ್ಪನೆಯೂ ಬಾರದಿರದು. ಪ್ರಸ್ತುತ ಲೇಖನದ ಉದ್ದೇಶ ಮರಾಠಿಯ ಬದಲು ಕನ್ನಡಕ್ಕೆ ಯೋಗ್ಯವಾದ ಸ್ಥಾನ ಹೇಗೆ ಕಲ್ಪಿತವಾಯಿತು ಎಂಬುದನ್ನು ಹೇಳುವದಕ್ಕಿಂತ ಶಿಕ್ಷಣ ಪದ್ಧತಿ-ಧಾರವಾಡ ಹುಬ್ಬಳ್ಳಿ ಪರಿಸರದಲ್ಲಿ ಹೇಗೆ ರೂಪುಗೊಂಡಿತು ಎಂಬುದನ್ನು ತಿಳಿಸುವದಾಗಿದೆ.

## ವಿದ್ಯಾರ್ಥಿಗಳ ಸೇರ್ಪಡೆ

ಈ ಕಾಲಕ್ಕೆ ವಿದ್ಯಾರ್ಥಿಗಳನ್ನು ಒಂದು ಕ್ಲುಪ್ತ ಕಾಲಕ್ಕೆ ಮಾತ್ರ ಶಾಲೆಗಳಲ್ಲಿ ಸೇರಿಸಿಕೊಳ್ಳದೆ, ಅವರು ಬಂದಬಂದ ಹಾಗೆ ಸೇರಿಸಿಕೊಳ್ಳಲಾಗುತ್ತಿತ್ತು. ಇದರಿಂದ ಅಭ್ಯಾಸದಲ್ಲಿ ಹಲವು ವಿದ್ಯಾರ್ಥಿಗಳು ಮುಂದೂ ಹಲವು ವಿದ್ಯಾರ್ಥಿಗಳು ಹಿಂದೂ ಆಗುತ್ತಿದ್ದರು. ಅದರಿಂದ ೧೮೬೬ ಅಗಸ್ಟ ೯ರಂದು ಈ ಪರಿಪತ್ರ ಹೊರಡಿಸಲಾಯಿತು:

"ಅಭ್ಯಾಸಕ್ಕಾಗಿ ಸರಕಾರದ ಶಾಲೆಗಳಲ್ಲಿ ಬರುವ ವಿದ್ಯಾರ್ಥಿಗಳನ್ನು ಆಗಾಗ್ಗೆ ಕರಕೊಂಬುವದು ವಿಧ್ಯಮಾನದಲ್ಲಿ ವಾಡಿಕೆಯಾಗಿ ಸಾಗುತ್ತಾ ಇದೆ. ಆದರೆ ಅದರಿಂದ ಅಪಕ್ರಮ ಉಂಟಾಗಿ, ಎರಡು ವರ್ಗಗಳಿಂದ ಸಾಗುವಲ್ಲಿ, ನಾಲ್ಕು ವರ್ಗಗಳನ್ನು ಮಾಡಿ ಪಂತರುಗಳಿಗೆ ನಿರರ್ಥಕವಾಗಿ ಹೊತ್ತುಗಳೆಯಬೇಕಾಗುತ್ತದೆ. ಇಷ್ಟೇ ಮಾತ್ರವಲ್ಲ, ವಿದ್ಯಾರ್ಥಿಗಳ ಅಭ್ಯಾಸವು ಸಹ ವರ್ಧಿಸದೆ ಹೋಗುವದು. ಆದ್ದರಿಂದ ಆ ವಾಡಿಕೆ ನಿಲ್ಲಿಸಿ ಬಿಟ್ಟದೆ.... ೨ನೇ ವರ್ಗದ ಅಂಗ್ಲೋವ್ಹರ್ನ್ಯಾಕ್ಯುಲರ ಸಾಲಿಗಳಲ್ಲಿ ಇಂಗ್ಲಿಷ್ ಅಭ್ಯಾಸಗೋಸ್ಕರವಾಗಿ ಕರಕೊಳ್ಳತಕ್ಕ ವಿದ್ಯಾರ್ಥಿಗಳನ್ನು ಒಂದು ವರುಷಕ್ಕೆ ಎರಡಾವರ್ತಿ. ಅಂದರೆ, ಜಾನೆವರೀ ಹಾಗೂ ಜುಲೈ ತಿಂಗಳುಗಳ ಆರಂಭದಲ್ಲಿ ಕರಕೊಳ್ಳಬೇಕು."

# ಅಪ್ಪಣೆ ಪಡೆಯದೆ ಕೆಲಸದಿಂದ ಗೈರಹಾಜರಿ

ಕಚೇರಿಯ ಶಿಸ್ತಿನ ಕ್ರಮ (office discipline) ಹೇಗೆ ರೂಪುಗೊಳ್ಳುತ್ತಿತ್ತೆಂಬುದನ್ನು ಮೇ ೧೮೭೭ರ ಈ ಕೆಳಗಿನ ಪರಿಪತ್ರದಿಂದ ಕಾಣುತ್ತೇವೆ:

"ಧಾರವಾಡ ಜಿಲ್ಲೆದೊಳಗಿನ ಯಾವತ್ತು ಸರಕಾರಿ ಶಾಲೆಗಳ ಮಾಸ್ತರರಿಗೆ–

ಕಸಬಾ ಹಾನಗಲ ಶಾಲೆಯೊಳಗಿನ ಮೊದಲನೇ ಮದತನೀಸ ಸಿದ್ದಪಾ ಬಿನ (ಶಂ) ಕರಲಿಂಗಪ್ಪಾ ಯವರು, ಬಿಗರ ಹುಕುಮಿನಿಂದಾ ಕೆಲಸವನ್ನು ಬಿಟ್ಟು ಹೊರಟುಹೋದ ತಪ್ಪಿಸ ದಶಿಯಿಂದಾ, ಅವರಿಗೆ ೨ ರೂಪಾಯಿ ದಂಡಮಾಡೋಣದರಲ್ಲಿ ಬಂದಿರುತ್ತದೆ. ಇದನ್ನು ನೆನಪಿನಲ್ಲಿಟ್ಟು, ಜಿಲ್ಹಾ ಮಜಕೂರದೊಳಗಿನ ಯಾವತ್ತು ಪಂತರುಗಳು ಮದತನೀಸ ಮೊದಲಾದವರು ಇತ್ತಲಾಗಿನ ಅಪ್ಪಣೆಯು ಹೊರ್ತು ಕೆಲಸ ಬಿಟ್ಟು ಹೋಗದ ಹಾಗೆ ತಜವೀಜ ಇಡಬೇಕು." ಇದರಂತೆ, ನಂದಗಡ ಸಾಲೆಯ ಹೆಡಮಾಸ್ತರ ವಿನಾಯಕ ತೋರೇಶ್ವರ ಕಾಟಣಕರ ಅವರು ತಮ್ಮ ಮನಸ್ಸಿಗೆ ಬಂದಾಗ ಬೆಳಗಾವಿಗೆ ಹೋಗಿ ತಿರುಗಿ ಮನಸ್ಸಿಗೆ ಬಂದಾಗ ನಂದಗಡಕ್ಕೆ ಹೋದದ್ದರ ಮೂಲಕವೂ ಶಿಕ್ಷಕರ ಪಗಾರ ಕೊಡುವದರಲ್ಲಿ ಧಾಂದಲೆ ಮಾಡಿದ ಮೂಲಕವೂ ಅವರನ್ನು ಕೆಲಸದಿಂದ ಕಡಿಮೆ ಮಾಡಲಾಯಿತು.

# ಕೆಲಸದ ನಿರ್ಲಕ್ಷ್ಯ-ಫೀ ಹಣ ದುರುಪಯೋಗ

ಫೀ ಹಣವನ್ನು ಒಂದು ನಿರ್ದಿಷ್ಟ ಮೊತ್ತದಕಿಂತ ಹೆಚ್ಚು ತಮ್ಮಲ್ಲಿ ಇಟ್ಟುಕೊಳ್ಳಬಾರದೆಂದೂ ಎಲ್ಲ ಹಣವನ್ನು ಸರಕಾರಕ್ಕೆ ಭರಣಾ ಮಾಡಬೇಕೆಂದೂ ಅಪ್ಪಣೆ ಇದ್ದಿತು. ಅದಕ್ಕೆ ವ್ಯತಿರಿಕ್ತವಾಗಿ ವರ್ತಿಸಿದ್ದಕ್ಕಾಗಿ ೨೬ ನವಂಬರ ೧೮೭೭ರ ಈ ಪರಿಪತ್ರ.

"ಕಸಬಾ ನಿಡಗುಂದಿ ತಾಲೂಕ ಮನಗೋಳಿಯಲ್ಲಿಯ ಹೆಡ್ಡಮಾಸ್ತರನಾದ ಅನಂತ ಗಣೇಶ ಇವನು ಹಾಜರಿ ರಜಿಷ್ಟರ ಮುಂತಾದ್ದರ ಬರಿಯೋಣ ಯಷ್ಟೋ ತಿಂಗಳ ಮಟ್ಟಿಗೆ ಬಿಟ್ಟೇಬಿಟ್ಟು ಫೀ ಹಣ ಖಜಾನಿಗೆ ಭರಣಾ ಮಾಡದೆ ತನ್ನ ಸ್ವಕಾರ್ಯಕ್ಕೆ ಬಳಸಿಕೊಂಡನು. ಹಾಂಗು ಇತ್ತ ಕಡೆಗೆ ಬರತಕ್ಕಂಥಾ ಕಾಗದಪತ್ರಗಳು ಏನೇನೂ ಕಳುಹಿಸಲಿಲ್ಲ. ಆದ ಕಾರಣಾ ಮೇಹರಬಾನ ಇ.ಇನಸ್ಪೆಕ್ಟರ ಸಾಹೇಬ ಬಾಪದ್ದೂರ ದಕ್ಷಿಣಭಾಗ ಇವರು ಸದರಿ ಇಸಮಿಗೆ ಶಾಖಾಖಾತೆದೊಳಗಿಂದ ಬರತರ್ಫಮಾಡಿದರು. ಈ ವೃತ್ತಾಂತವನ್ನು ಸರ್ವರಿಗೆ ತಿಳಿಯೋದರಕೋಸ್ಕರ ಪ್ರಸಿದ್ಧ ಮಾಡಲ್ಪಟ್ಟಿದೆ."

# ಠಕ್ಕತನ-ವಂಚನೆ

ರಸೆಲ್ ಸಾಹೇಬರು ಇಸಳೂರೆ ಶಾಲೆಗೆ ಸಂದರ್ಶನವಿತ್ತಾಗ, ಅಲ್ಲಿಯ ಮಾಸ್ತರರೊಬ್ಬರು ತಪ್ಪು ಮಜಕೂರ ಹೇಳಿ ... ಬಗ್ಗೆ ಅವನಿಗೆ ೩ ರೂಪಾಯಿ ದಂಡ ... ಬಗ್ಗೆ ಜುಲೆ ೧೮೭೭ರ ಪರಿಪತ್ರ...

"ಡೆಪುಟಿಬಾನ ಇಜ್ಯುಕೇಶನಲ್ ಇನಸ್ಪೆಕ್ಟರ್ ಸಾಹೇಬರವರು ೭೮೮ ತಾಲೂಕ ಪೈಕಿ ಕಸಬಾ ಇಸಳೂರ ಸಾಲೆಯ ವಾರ್ಷಿಕ ಪರೀಕ್ಷೆಕ್ಕೆ ಹೋದಾಗ್ಯೆ ಅಲ್ಲಿ ಹುಡುಗರಿಗೆ ಶುದ್ಧ ಬರಿಯಲಿಕ್ಕೆ ಹೇಳಿ ಆ ಪಾಟಿಗಳನ್ನು ತಪಾಸಲಿಕ್ಕೆ ಅಲ್ಲಿ ಮಾಸ್ತರ ನಾರಾಯಣ ಗೋವಿಂದ ಪಾಣೆಕರ ಇವರಿಗೆ ಹೇಳಿದರು. ಪರಂತು ಅವರು ಅದರಲ್ಲಿರುವ ವಾಸ್ತವಿಕ ತಪ್ಪುಗಳನ್ನು ಠಕ್ಕತನದಿಂದ ತೆಗಿಯದೇ ಇದ್ದದ್ದನ್ನು ಕಂಡು ಅವರಿಗೆ




## ಬೆಳಕು

ನಿನ್ನ ಕೃಪಾ ದೃಷ್ಟಿಯಿಂದ
ಹೃದಯ ದೀವಿಗೆ ಬೆಳಗಿತು!
ಈ ದೀವಿಗೆಯಿಂದಲೇ
ಈ ಲೋಕ ಬೆಳಕು ಕಂಡಿತು!

– ಪಂಚಾಕ್ಷರಿ ಹಿರೇಮಠ

(೩) ರೂಪಾಯಿ ದಂಡವನ್ನು ಕಟ್ಟಿದರು. ಈ ಮಾತು ಮಿಕ್ಕಾದ ಮಾಸ್ತರರು ಚನ್ನಾಗಿ ಲಕ್ಷದಲ್ಲಿಟ್ಟು ನಡೆದಾರೆಂದು ನಾವು ನಂಬುತ್ತೇವೆ."

# ಜನತೆಯ ಅಭಿಪ್ರಾಯ

ಎಷ್ಟೋ ಸಲ ಅನೇಕ ಶಿಕ್ಷಕರು ತಿಂಗಳಾನುಗಟ್ಟಲೆ ರಜೆಯ ಮೇಲೆ ಹೋಗುತ್ತಿದ್ದರು. ಇದರಿಂದ ಶಾಲೆಯ ಅಭ್ಯಾಸಕ್ಕೆ ಹಾನಿಯುಂಟಾಗಿ, ಜನತೆಯಲ್ಲಿಯೂ ಕೆಟ್ಟ ಅಭಿಪ್ರಾಯ ಉಂಟಾಗುತ್ತಿತ್ತು. ೬-೪-೧೮೭೭ರ ಈ ಪರಿಪತ್ರ ಇದನ್ನು ಪ್ರತಿಬಂಧಿಸಿದೆ:–

"ಹೆಡಮಾಸ್ತರರಿಗೆ ಹಕ್ಕಿನ ರಜೆ ಒಂದು ತಿಂಗಳಕ್ಕಿಂತಲೂ ಹೆಚ್ಚಿಗೆ ಕೊಟ್ಟರೆ ಸಾಲೆಯು ಬಹೀದೆಯಾಗಿ ಊರವರು ಖುಷಿ ಇರುವದಿಲ್ಲಾ ಆದರಿಂದ ಒಂದು ತಿಂಗಳಕ್ಕಿಂತಲೂ ಹೆಚ್ಚಿಗೆ ರಜೆ ಕೊಡಬಾರದೆಂಬುದಾಗಿ ಮೆಹರಬಾನ ಇಜ್ಯುಕೇಶನಲ್ ಇನಸ್ಪೆಕ್ಟರ ಸಾಹೇಬ ಬಾಹದ್ದೂರ ದಕ್ಷಿಣಭಾಗ ಇವರು ಠರಾವು ಮಾಡಿರುತ್ತಾರೆ. ಇದನ್ನು ಲಕ್ಷದೊಳಗೆ ಇಟ್ಟುಕೊಂಡು, ಮಾಸ್ತರರು ನಮ್ಮ ಕಡಿಗೆ ರಜೇದ ಸಲುವಾಗಿ ಅರ್ಜಿಮಾಡುತ್ತಾ ಹೋಗಬೇಕು, ತಿಳಿಯುವದು."

# ಪುರಸ್ಕಾರ-ತಿರಸ್ಕಾರ

ದುಷ್ಟನಿಗ್ರಹ, ಶಿಷ್ಟಪರಿಪಾಲನಗಳು ಕೇವಲ ತತ್ವಜ್ಞಾನದ ಮಾತುಗಳಲ್ಲ. ಯಾವ ಶಾಸನದಲ್ಲಿಯೂ ತೇಜಸ್ಸುಳಿಯಬೇಕಾದರೆ, ದುಷ್ಟರ ನಿಗ್ರಹ, ಶಿಷ್ಟರ ಪುರಸ್ಕಾರ ಆಗಲೇಬೇಕು. ಇಲ್ಲವಾದರೆ, ಬಾಲ ಇದ್ದವುಗಳನ್ನೆಲ್ಲ ಕೊಟ್ಟಿಗೆಯಲ್ಲಿ ಕಟ್ಟು ಎಂದರೆ, ಕತ್ತೆ ಕುದುರೆಗಳೆರಡನ್ನೂ ಕೂಡಿಸಿಯೇ ಕಟ್ಟಬೇಕಾದೀತು.

ಅದೂ ಅಲ್ಲದೆ, ಹಲವೊಂದು ಸಲ ಒಳ್ಳೆಯ ಕೆಲಸದ ಸಲುವಾಗಿ ತನಗೆ ಪುರಸ್ಕಾರ ಸಿಕ್ಕಿದೆಯೆಂದು ತಿಳಿದ ವ್ಯಕ್ತಿ, ಕಾಲಕ್ರಮದಲ್ಲಿ ತನ್ನ ದಕ್ಷತೆಯನ್ನು ಕಳೆದುಕೊಳ್ಳುವದುಂಟು. ಎಷ್ಟೋ ಸಲ ಜನ ದಿನದಿನಕ್ಕೆ ತಮ್ಮ ದಕ್ಷತೆಯನ್ನು ಬೆಳೆಸಿಕೊಳ್ಳುವ ಬದಲು, ತಮ್ಮ ಕೀರ್ತಿಯ ಹಳೆಯ ಬಂಡವಲ ಮೇಲೆಯೇ ಜೀವಿಸುವದುಂಟು. ಹೀಗೆ ಪುರಸ್ಕಾರ-ದಂಡನೆ-ಎರಡಕ್ಕೂ ತುತ್ತಾದ ಒಬ್ಬ ವ್ಯಕ್ತಿಯ ಉಲ್ಲೇಖ ೯-೨-೧೮೭೭ರ ೧೫ನೆಯ ಪರಿಪತ್ರದಲ್ಲಿ ಬರುತ್ತದೆ:

"ಅಜಂ ಹಣಮಂತ ಬಾಳಾಜಿ ತಾಳಿಕೋಟಕರ ಯಿವರು ನರೆಗಲ್ಲ ಸಾಲಿಯ ಕೆಲಸಾ ವಳ್ಳೆ ರೀತಿಯಿಂದಾ ನಡಸಿದ್ದರಿಂದಾ ಅವರನ್ನು ಕಳದ ಆಗಸ್ಟ ತಿಂಗಳಲ್ಲಿ ಧುಂಡಶಿಗೆ ಬಡತಿ ಸಂಬಳ ಮ್ಯಾಲೆ ನೇಮಿಸಿತ್ತು.ತಾ॥ ೮ನೇ ಪೆಬ್ರೂವರಿ ದಿವಸಾ ಮೆಹರ್ಬಾನ್ ಯಿ॥ಯಿ॥ ಧೊರೆಗಳು ಹಾಂಗು ನಾವು ಶಾಲೆ ಪರೀಕ್ಷೆ ಧುಂಡಶಿಗೆ ಹೊದಾಗ್ಯೆ ಸದರಿ ಮಾಸ್ತರರು ತಮ್ಮ ಕೆಲಸದ ಕಡೆ ಯೇನೇನು ಲಕ್ಷ್ಯವನ್ನು ಕೊಟ್ಟಿಲ್ಲಾ ಹಿಂಗ ತೋರಿಬಂತು. ವಟ್ಟ ಸರಕ್ಯಾಲರದಂತೆ ಸಾಲಿಯೊಳಗೆ ವೇಳಾಪತ್ರಿಕೆ ಹಚ್ಚಿ ಅದರಂತೆ ಅಭ್ಯಾಸವನ್ನು ನಡ್ಸಲಿಲ್ಲಾ. ಮತ್ತು ನಾಲ್ಕು ದಿವ್ಸದ ಹಜರಿ ತುಂಬಿದ್ದಿಲ್ಲಾ. ಯಿದರ ದಶಿಂದಾ ಅವರಿಗೆ ೮ರೂಪಾಯಿ ದಂಡವಾಡಿರತವೆ. ಯಿದರ ಕಡಿಗೆ ನಮ್ಮ ತಾಬೆದೊಳಗಿನ ಯಾವತ್ತು ಮಾಸ್ತರರು ಚನ್ನಾಗಿ ಲಕ್ಷ್ಯಕೊಟ್ಟರು, ಹಿಂಗ ಅಪೇಕ್ಷಿಸುತ್ತೇವೆ."

# ಅ-ನೀತಿ ವರ್ತನೆ

ನಾನ್ಯಪಿ: ಕುರುತೇಕಾವ್ಯಮ್ ಅಂದಹಾಗೆ, ನಾನ್ಯಷೀ ಗುರುರ್ಭವತಿ ಎಂಬುದೂ ಅಷ್ಟೇ ಸತ್ಯವೆಂದು ಕಾಣುತ್ತದೆ. ವಿದ್ಯಾರ್ಥಿಗಳು ಉಪಾಧ್ಯಾಯರಿಂದ ಶಾಲೆಯ ಒಳಗೆ ಕಲಿಯುವದಕ್ಕಿಂತ, ಶಾಲೆಯ ಹೊರಗೇ ಹೆಚ್ಚು ಕಲಿಯುತ್ತಾರೆ. ಆದ್ದರಿಂದ, ಉಪಾಧ್ಯಾಯರಾಗಿದ್ದವರ ಸ್ವಭಾವ ನಿಷ್ಕಲ್ಮಷವಾಗಿರಬೇಕು; ಮೃದುವಾಗಿರಬೇಕು; ಸೌಜನ್ಯಪೂರ್ಣವಾಗಿರಬೇಕು; ಅಂತಃಕರಣಭರಿತವಾಗಿರಬೇಕು. ಇದಿಲ್ಲದವನು ಶಿಕ್ಷಣ ಕ್ಷೇತ್ರಕ್ಕೆ ಬರುವ ಕಾರಣವಿಲ್ಲ.

ಈ ಚಾರಿತ್ರ್ಯದ ಬಗೆಗೆ ಜಾಗರೂಕನಾಗಿರ

ಬೇಕಾಗುತ್ತದೆ. ಬೇಲಿಯೇ ಹೊಲ ಮೇಯ್ದರೆ, ರಕ್ಷಕರೆಲ್ಲಿ? ಮುನ್ನೀರ್ ಬೆನ್ನೀರ್ ಎನೆ ಬೆರಸಲ್ ಅಣ್ಣ, ತಣ್ಣೀರ್ ಒಳವೆ?.... ಇಂಥ ಒಂದು ಘಟನೆ ಡಿಸೆಂಬರ ೧೮೭೮ರ ಸುಮಾರಿಗೆ ನಡೆಯಿತು. ಈ ಬಗ್ಗೆ ಡೆಪ್ಯುಟಿ ಚನಬಸಪ್ಪನವರು ಹೊರಡಿಸಿದ ಪರಿಪತ್ರ ಹೀಗಿದೆ:-

"ಬೆಳಗಾವಿ ಜಿಲ್ಹೇದೊಳಗಿನ ಯಾವತ್ತೂ ಸ್ಕೂಲಮಾಸ್ತರರಿಗೆ ತಿಳುಹಿಸುವದೇನಂದರೆ— ಬೆಳಗಾವೀ ತಾಲೂಕಿನಲ್ಲಿರುವ ಬಾಗೋಡಿ ಸಾಲಿಯ ಹೆಡಮಾಸ್ತರನಾದ ರಾಘವೇಂದ್ರ ಅಪ್ಪಾಜಿ ಈತನು ಪ್ರಸಿದ್ಧರೀತಿಯಿಂದ ಹೆಂಗಸನ್ನು ಇಟ್ಟುಕೊಂಡದ್ದು ತಿಳಿಯಬಂದ ಕಾರಣಾ ನಾವು ಮೆಹರ್ಬಾನ ಇನಸ್ಪೇಕ್ಟರಸಾಹೇಬರವರ ಕಡಿಗೆ ಸದರಿ ಮಾಸ್ತರನ ಬಡತರ್ಫ ಮಾಡಬೇಕೆಂದು ಬರಿಯಲಾಗಿ ಸಾಹೇಬರು ನಾವು ಬರದಂತೆ ಮಂಜುರಮಾಡಿದ ಕಾರಣಾ ಸದರಿ ರಾಘವೇಂದ್ರ ಅಪ್ಪಾಜಿಯನ್ನು ಬರತರ್ಫ ಮಾಡಿದೆ. ಆದರೆ ಇದರ ಕಡಿಗೆ ಮಾಸ್ತರ ಜನರು ವಿಶೇಷ ಲಕ್ಷ್ಯಕೊಡಬೇಕು. ತಿಳಿಯುವದು. ತಾರೀಖು ೭ನೇ ಮಾಹೆ ದಿಶಂಬರ ಸಂನ ೧೮೭೮ ಇಸವಿ ಮೊಕಾಮ ಹುಂಚಿಹೊಳಿ ತಾಲೂಕ ನವಲಗುಂದ ಜಿಲ್ಹಾ ಧಾರವಾಡ"

## ಶಾಲೆಗಳಿಗೆ ಅತಿಥಿಗಳ ಭೆಟ್ಟಿ

ಶಾಲೆಗಳಿಗೆ ಅನೇಕ ಬೇರೆ ಬೇರೆ ಇಲಾಖೆಯ ಅಧಿಕಾರಿಗಳು, ಊರ-ಪರವೂರ ಪ್ರತಿಷ್ಠಿತರು ಸಂದರ್ಶನ ಕೊಡುತ್ತಿದ್ದುದುಂಟು. ಆಗ ಎಷ್ಟೋ ಜನ ತಮ್ಮ ಕೈಖರ್ಚುಮಾಡಿ ಮಕ್ಕಳಿಗೆ ಮಿಠಾಯಿ ಯನ್ನೋ ಸ್ಲೇಟ್ ಪೆನ್ಸಿಲುಗಳನ್ನೋ ಕೊಡುತ್ತಿದ್ದುದುಂಟು. ಆದರೆ, ಎಷ್ಟೋ ಸಲ ಪಂತೋಜಿಗಳು ಪ್ರತಿಸಂದರ್ಶನದ ಕಾಲಕ್ಕೂ ಅಪೇಕ್ಷಿಸುತ್ತಿದ್ದಂತೆ ಕಾಣುತ್ತದೆ. ಇದರಿಂದ ವಿದ್ಯಾಪ್ರೇಮಿಗಳಾದ ಸಂದರ್ಶಕರಿಗೆ ಶಾಲೆಗೆ ಹೋಗಲು ಸಂಕೋಚವೆನಿಸುತ್ತಿತ್ತು. ಈ ಬಗ್ಗೆ ಮಿ. ರಸೆಲ್ ಸಾಹೇಬರು ೧-೧-೧೮೭೭ ದಿವಸ ಹೊರಡಿಸಿದ ೧೧೧೮ನೆಯ ನಂಬರಿನ ಪರಿಪತ್ರ ಹೀಗಿದೆ:-

"ಬೇರೆ ಖಾತೆಗಳ ಅಧಿಕಾರಿಗಳು ಸಮಯಾನುಸಾರ ನಮ್ಮ ಶಾಲೆಗಳನ್ನು ಪರೀಕ್ಷಿಸುವದಕ್ಕೆ ಬಂದಾಗ ಮಾಸ್ತರರು, ಅಥವಾ ವಿದ್ಯಾರ್ಥಿಗಳು ಇನಾಮು, ಮಿಠಾಯಿ, ಅಥವಾ ಯೇನಾದರೂ ಬಕ್ಷಿಸ ಕೊಡಬೇಕೆಂದು ಅವರಿಗೆ ಬೇಡುತ್ತಾರೆಂತ ನಮಗೆ ತಿಳಿದದೆ. ಈ ವಿಧವಾಗಿ ಕೆಲವು ಅಧಿಕಾರಿಗಳು ನಮ್ಮ ಶಾಲೆಗಳನ್ನು ನೋಡುವದಕ್ಕೆ ಅಡ್ಡಿಯುಂಟಾಗುತ್ತದೆ. ....ಆದ್ದರಿಂದ ನಮ್ಮ ಮಾಸ್ತರರಲ್ಲಿಯೂ, ವಿದ್ಯಾರ್ಥಿಗಳಲ್ಲಿಯೂ ನಡತೆಯನ್ನು ಪ್ರತಿಬಂಧಿಸತಕ್ಕದ್ದು. ಹೊರಗಿನ ಗೃಹಸ್ಥರು ಶಾಲೆಯೊಳಗೆ ಬಂದ ಸಮಯದಲ್ಲಿ ಮಾಸ್ತರರಾಗಲಿ, ವಿದ್ಯಾರ್ಥಿಗಳಾಗಲಿ ಯಾವ ತರದ ಬಕ್ಷೀಸನ್ನು ಅವರಿಗೆ ಬೇಡಬಾರದು, ಅಥವಾ ಅವರಿಂದ ಸಿಕ್ಕುವದೆಂದು ಅಪೇಕ್ಷಿಸಬಾರದು."

## ಶಾಲೆಯ ಪರಿಸರ ಸ್ವಚ್ಛವಿರಬೇಕು

ಈ ಬಗ್ಗೆ ಚನಬಸಪ್ಪನವರು ೨೭ನೇ ಫೆಬ್ರುವರಿ ೧೮೭೮ರ ದಿವಸ ಹೀಗೆ ಪರಿಪತ್ರ ಹೊರಡಿಸಿದ್ದಾರೆ:

"ನಾವು ವಾರ್ಷಿಕ ಪರೀಕ್ಷೆ ತೆಗೆದುಕೊಂಬುವದಕ್ಕೆ ಕೆಲವು ಸ್ಥಳಗಳಲ್ಲಿ ಹೋದಾಗ್ಯೆ ಸಾಲೆಯ ಹತ್ತರ ಅತಿಶಯ ಹೊಲಸು ಇರುವದರಿಂದ ಸಾಲಿಯಲ್ಲಿ ದುರ್ಗಂಧವಾಸ ಬರುತ್ತಿದ್ದರೂ, ಆ ಮಾಸ್ತರರು ನಮ್ಮ ಕಡಿಗೆ ರಿಪೋರ್ಟ ಮಾಡಿ ತಜವಿಜ ಮಾಡಲಿಲ್ಲ. ಇದು ಬಹಳ ಮುಗ್ಗಲಗೇಡಿತನವು.- ಇನ್ನು ಮುಂದೆ ಈ ಪ್ರಕಾರ ಆಗದಂತೆ ಮಾಸ್ತರರು ಎಚ್ಚರಿಕೆಯನ್ನು ಇಡಬೇಕು."

## ಬಿಸಲಿನ ಕಾವು

೨೭-೩-೧೮೭೭ರ ಪರಿಪತ್ರ ಹೀಗಿದೆ:

"ಈ ವರ್ಷ ಜಿಲ್ಹಾ ಮಜಕೂರಿನಲ್ಲಿ ಬಿಸಲಿನ ಕಾವು ಬಹಳ ಆಗುತ್ತ ನಡಿದದೆ. ಇದರ ದಶಿಯಿಂದಾ ಶಾಲೆಯೊಳಗಿನ ಬರುವ ಹೋಗುವ ವಿದ್ಯಾರ್ಥಿಗಳಿಗೆ ಬಹಳ ಶ್ರಮ ಆಗುತ್ತಿದ್ದೀತು. ಹೀಗೆ ತಿಳಿದು ಮೆಹರಬಾನ ಇನಸ್ಪೆಕ್ಟರ ಸಾಹೇಬ ಬಾಹದ್ದೂರ ದಕ್ಷಿಣಭಾಗ ಇವರ ಮಂಜೂರಿ ಮೇಲಿಂದಾ ಜೂನ ಸಂನ ೧೮೭೭ ನೇ ಯಿಸವಿ ಮುಗಿಯುವವರಿಗೂ ಪ್ರಾತಃಕಾಲದಲ್ಲಿ ೭ಘಂಟೆ ಹಿಡಿದು ೯ ಘಂಟೆವರಿಗೂ, ಮತ್ತ ಮಧ್ಯಾಹ್ನದಲ್ಲಿ ೨ಘಂಟೆ ಹಿಡಿದು ೫॥ ಘಂಟೆವರಿಗೂ, ಈ ಪ್ರಕಾರಾ ಸಾಲಿಯ ವೇಳೆಯಲ್ಲಿ ಹೆಚ್ಚು ಕಮಿ ಮಾಡಲ್ಪಟ್ಟದೆ."

## ಹೊಸ ಹುಬ್ಬಳ್ಳಿಯ ೨ನೇ ನಂಬರ ಶಾಲೆಯತೊಂದರೆ

ಹೊಸ ಹುಬ್ಬಳ್ಳಿ ೨ನೆ ನಂಬರ ಶಾಲೆ ಆದೇ ಆಗ ೧.೯.೧೮೭೭ರಂದು ಪ್ರಾರಂಭವಾಗಿತ್ತು. ಶಾಲೆ

ಯಲ್ಲಿ ಸುಮಾರು ೧೧೫ ಹುಡುಗರು ಪ್ರಾರಂಭದಲ್ಲಿಯೇ ಸೇರಿದ್ದರು. ಸ್ಥಳಸಂಕೋಚ ಮತ್ತು ಸಹಾಯಕ ಶಿಕ್ಷಕರ ಅವಶ್ಯಕತೆಯನ್ನು ಕುರಿತು ಆ ಶಾಲೆಯ ಹೆಡ್‌ಮಾಸ್ತರರು ೨೦.೧೧.೧೮೬೭ರಂದು ಹೀಗೆ ಬರೆದುಕೊಂಡರು:

"ಕಸಬಾ ಹೊಸ ಹುಬ್ಬಳ್ಳಿ ತಾ॥ ಹುಬ್ಬಳ್ಳಿ ಇಲ್ಲಿಯ ಕನ್ನಡ ಸಾಲಿಯ ನಂಬರ ೨ನೇ ಹೆಡ್ಡ ಮಾಸ್ತರ ಇವರ ಕಡಿಯಿಂದಾ ತಿಳೀಸುವದೇನಂದರೆ, ಈ ಸಾಲಿಯೂ ಹೊಸದಾಗಿ ತಾರೀಖು ೧ನೇ ಸಪ್ಟಂಬರ ದಿವಸಾ ಸ್ಥಾಪಿಸಲ್ಪಟ್ಟಿತು. ಆದರೆ ಇವತ್ತಿನ ವರಿಗೂ ಈ ಸಾಲಿಯಲ್ಲಿ ೧೧೫ ಹುಡುಗರು ಕೂಡಿ ಇರುತ್ತವೆ. ಹಾಜರು ೮೦/೮೫ ಇರುತ್ತವೆ. ಆದರೂ ಈ ಸಾಲಿಯೂ ಕೂಡ್ರುವದಕ್ಕೆ ಬಹಳ ಇಟಕರವಾಗುತ್ತದೆ. ಕಾರಣಾ ಸಾಲಿ ಲಗತ ವಾರಕಾರ ಶಿದ್ದಪ್ಪನವರ ಮನಿ ಇರುತ್ತದೆ. ಅವರ ಮನಿಯಲ್ಲಿ ೪೮ ಹುಡುಗರಿಗೆ ಕುಡ್ರಲಿಕ್ಕೆ ಬರುವ ಹಾಂಗೆ ಇಂಬವಾದ ಜಾಗಾ ಉಂಟು. ಅಲ್ಲಿಯೂ ೨೫/೩೦ ಹುಡುಗರನ್ನು ಕುಡ್ರಿಸಿ ಅಲ್ಲಿ ಶಿಕ್ಷಕನಂನು ಕುಡ್ರಿಸಿ ಅಭ್ಯಾಸ ಮಾಡಸು ತಜವೀಜ ಇಟ್ಟು ಇದೆ. ಆದರೂ ಈ ಸಾಲೆಯಲ್ಲಿ ಅರವತ್ತು ಹುಡುಗರಿಗೆ ನಂಮ ಒಬ್ಬರ ಕಡಿಂದಾ ಅಭ್ಯಾಸ ಮಾಡಸಬೇಕಾದರೆ ಬಹಳ ಶ್ರಮವಾಗುತ್ತದೆ. ಆದಕಾರಣ ಈ ಸಾಲಿಕಡಿಗೆ ಯರ್ಡನೇ ಶಿಕ್ಷಕನಂನು ನೇಮಿಸುವ ತಜವೀಜ ಮಾಡುವಲ್ಲಿ ನಂಮ ಖಾತ್ಯದ ಮುಖ್ಯ ಅಧಿಕಾರಿಗಳು ಲಕ್ಷಕೊಟ್ಟರೆ ಒಳ್ಳೇದಾದೀತು. ಮುಂದಿನ ಕ್ವಾಟರಿನಲ್ಲಿ ಯರ್ಡನೆ ಶಿಕ್ಷಕನ ನೇಮಣೂಕವಾಧಿತೆಂಬದಾಗಿ ತೋರತ್ರೇವೆ.

ಈ ಸಾಲಿಯೂ ಅರಂಭವಾಗಿ ಒಂದ ತಿಂಗಳ ಒಳಗಾಗಿ.... ಈ ಸಾರಿಯ ಕಮೀಟಿದಾರರಾದಾ ರಾಜಮಾನ್ಯ ರಾಜಶ್ರೀ ಕಬಾಡಿ ಸಂಣಯಲ್ಲಪ್ಪ ಎಂಬುವಂಥವರು ನಿಕ್ಕಾಲಿಸಪೋತು ಒಂದು ಹಾಂಗು ಭೋಧಕಥಾಮೃತ ಎಂಬುದು ಒಂದು ಗ್ರಂಥವು ರಾಮಜಿ ಡಾಕ್ತರ ಮುಂಬಾಯಿ ಇವರು ಮಾಡಿದ್ದು ಪುಸ್ತಕ ಒಂದು ಹಾಂಗು ಕನ್ನಡ ಭೂಗೋಲ ವರ್ಣನೆ ಕಂನಡ ಛಾಪಿಶಿದ್ದು ಹಾಂಗು ದುರ್ವ್ಯಸನ ನಿಷೇಧ ಬೋಧ' ಮರಾಟಿ ಇಪ್ರಕಾರ ಮೂರು ಪುಸ್ತಕಗಳು ಒಂದು ಮೋಜು ಸಾಲಿ ಕಡಿಗೆ ಬಕ್ಷಿಸ ದಾಖಲ ಕೊಟ್ಟಿರುತ್ತಾರೆ." ಇತ್ಯಾದಿ.

## ಶ್ರೇಷ್ಠ ಶಾಲೆಗಳು

ಈ ಕಾಲಕ್ಕ ಅಂದರೆ ೧೮೬೭ರಲ್ಲಿ "ಧಾರವಾಡ ಜಿಲ್ಹೆಯಲ್ಲಿ ಆ್ಯಂಗ್ಲೊವರ್ನಾಕ್ಯೂಲರ ಶಾಲೆಗಳಲ್ಲಿ..... ಹುಬ್ಬಳ್ಳಿಯ ಶಾಲೆ ಶ್ರೇಷ್ಠವಾದದ್ದು. ಈ ದಕ್ಷಿಣ ಭಾಗದಲ್ಲೆಲ್ಲ ಈ ಶಾಲೆಯು ಶ್ರೇಷ್ಠವಾದದ್ದೆಂದು ನೋಡಿ ಇನಸ್ಪೆಕ್ಟರರು ಈ ಶಾಲೆಯ ಮಾಸ್ತರರಿಗೆ ೫ರೂ. ತಲಬು ಹೆಚ್ಚಿಸಿದರು- ಧಾರವಾಡ, ಹಾನಗಲ್ಲು, ಮೊರಬ, ನರಗುಂದ, ಗರಗ, ಧುಂಡಶಿ, ಕಲಘಟ್ಟಗಿ, ನರೇಗಲ್ಲು, ಕರ್ಜಗಿಗಳಲ್ಲಿಯ ಶಾಲೆಗಳು ಸರಸವಾಗಿರುತ್ತವೆ."

ಕಲಾದಗಿ ಜಿಲ್ಹೆಯಲ್ಲಿ ಈ ಕಾಲಕ್ಕೆ ೪೬ ಶಾಲೆಗಳಿದ್ದವು. ಈ ಜಿಲ್ಹೆಯಲ್ಲಿ ೪ ಆಂಗ್ಲೋವರ್ನಾಕ್ಯುಲರ ಶಾಲೆಗಳಿದ್ದು, ಅವುಗಳಲ್ಲಿ "ಬಾಗಲಕೋಟೆಯ ಶಾಲೆ ಶ್ರೇಷ್ಠವು".

"ಇನಸ್ಪೆಕ್ಟರರು ಕೆಲವು ಶಾಲೆಗಳಲ್ಲಿ ಬಹುಶಃಯಲ್ಲ ಲಿಂಗವಂತರ ಹುಡುಗರನ್ನೇ ನೋಡಿ, ರೈತ ಜನರಲ್ಲಿ ವಿದ್ಯೆಯ ಅಭಿರುಚಿಯು ಹುಟ್ಟುತ್ತ ನಡೆದದೆಂದು ಬಹುಸಂತೋಷಿಗಳಾದರು."

ಈ ಸಮಯಕ್ಕೇ ವಿಷಯ ಸಂಗ್ರಹಕ್ಕಾಗಿ ಬಂದ ಅನೇಕ ಮಹನೀಯರಿಗೂ ಪುಸ್ತಕ ಬರೆಯಬೇಕೆಂದು ಅನೇಕ ಲೇಖಕರಿಗೂ ಕನ್ನಡ ಶಾಲಾ ಮಾಸ್ತರರು ವಿಷಯಗಳನ್ನು ಒದಗಿಸಿ ಸಹಾಯ ಮಾಡಿದರು. ಅವರಲ್ಲಿ ಗುಳೇದಗುಡ್ಡದಲ್ಲಿ ಪಾದ್ರಿಗಳಾಗಿದ್ದ ರೆವರಂಡ್ ರೀಚ್ ಎಂಬವರು ಬರೆಯ ಬಯಸಿದ ಪುಸ್ತಕಕ್ಕು, ವೆಂಕಟ ರಂಗೊ ಕಟ್ಟಿಯವರು ಬರೆಯಲಿದ್ದ ಕರ್ನಾಟಕ ದೇಶದ ವರ್ಣನೆ ಎಂಬ ಇತಿಹಾಸ ಪುಸ್ತಕಕ್ಕೂ ಸಹಾಯಮಾಡಿದ ಉಲ್ಲೇಖಗಳಿವೆ. ಅಂದಿನ ಡಿ. ಪಿ. ಆಯ್.ರವರಾದ ಪಿ.ಪೀಲಿ ಅವರ ಕೂಡ ಸುಪ್ರಸಿದ್ಧ ವಿದ್ವಾಂಸರಾದ ಡಾ. ಬುಹ್ಲರ ಅವರು ಈ ಭಾಗಕ್ಕೆ ಭೆಟ್ಟಿಕೊಟ್ಟ ಉಲ್ಲೇಖವಿದೆ.

ಅದೂ ಅಲ್ಲದೆ, ಶಿಕ್ಷಣಕ್ರಮದಲ್ಲಿಯೂ ಹಲವಾರು ಸುಧಾರಣೆಗಳು ಈ ಕಾಲದಿಂದಲೇ (ಅಂದರೆ ೧೮೬೭ರ ಸುಮಾರಿಗೇ) ಪ್ರಾರಂಭವಾದವು. ಇಲ್ಲಿಯ ವಿದ್ಯಾರ್ಥಿಗಳಿಗೆ ಶಾರೀರಿಕ ಶಿಕ್ಷಣದ ಅವಶ್ಯಕತೆ ಇದೆಯೆಂದು ವರದಿ ಸಲ್ಲಿಸಿದರು, ಮಿಸ್. ಕಾರ್ಪೆಂಟರ್ ಎನ್ನುವ ಹೆಣ್ಣುಮಗಳು. ಆ ಮೂಲಕ ರಸೆಲ್ ಅವರು ಶಾಲೆಗಳಲ್ಲಿ ಶಾರೀರಿಕ ಶಿಕ್ಷಣದ ಏರ್ಪಾಡಾಗುವಂತೆ ಮಾಡಿದರು.

ವಿದ್ಯಾಬೋಧನೆಗಾಗಿ ಚಿಕ್ಕ ಮಕ್ಕಳನ್ನು ದೈಹಿಕವಾಗಿ ದಂಡಿಸಬಾರದೆಂಬ ಹೊಸ ವಿಚಾರ ೧೮೬೭ರಲ್ಲಿಯೇ ಪ್ರಾರಂಭವಾಯಿತು. ಈ ವಿಚಾರವನ್ನು ಎಲ್ಲ ಶಾಲಾಮಾಸ್ತರರಿಗೂ ತಿಳಿಸಿದಾಗ, ಹುಲಗೂರ ಶಾಲೆಯ ಪಂತೋಜಿಗಳಾಗಿದ್ದ ಹಣಮಂತ ಜವಾಜಿ ಅವರು ಹೀಗೆ ಬರೆದರು:

"ತಾವು.... ಶಿಕ್ಷಣ ಪದ್ಧತಿಯಲ್ಲಿ ವಿದ್ಯಾ ಕಲಿಸೂದರಗೊಸ್ಕರ ಹೊಡಿಯಬಾರದೆಂಬೊ ಮಾತು ಸಮವದೆ. ವಿದ್ಯಾಕಲಿಸೊದರಗೊಸ್ಕರ ಹುಡುಗರಂನು ಹೊಡಿಯಲಿಕ್ಕೇನು ಕಾರಣವಿಲ್ಲಾ. ಅದರಿಂದಾ ಸಾಲಿಯಲ್ಲಿ ದಿವಾಣಿ ಮತ್ತು ಪ್ಹೊಜದಾರಿ ವೊದಲಾದ ಖಟ್ಲೆಗಳು ಆಗತಾವೆ. ಯಿಂಥಾ ಖಟ್ಲೆಗಳಂನು ಮಾಡಿದವರಿಗೆ ಯಿಂಥಾ ಶಿಕ್ಷಾ ಅಂತಾ ನೇಮಿಶಿದರ ಅವರು ಬಯಿಸ್ತರಾಗಿ ಒಳ್ಳೆ ನಡಾವಳಿಯಿದ್ದು ಮುಂದ ಧೊಡವರಾದ ಬಳಿಕು ವಳ್ಳೆ ನಡತೆಯಿಂದ ನಡದಾರು. ವಿದ್ಯಾದ ದಸಿಯಿಂದ ಹೊಡಿಬೇಕೆಂಬ ಮಾತು ಮುಢರೆ ಮಾತ್ರ ಅಂಗಿಕಾರ ಪಡುತ್ತಾರೆ. ಹೊರ್ತು ತಾವು ಬರದಂತಾ ಮಾತು ಬಹಳ ಸಮಂಜಸವದೆ..."

ಈ ರೀತಿ ಕಳೆದ ಶತಮಾನದ ಮಧ್ಯಕಾಲಕ್ಕೆ ಪ್ರಾಥಮಿಕ ಶಿಕ್ಷಣ ಈ ಭಾಗದಲ್ಲಿ ಹೇಗೆ ಪ್ರಾರಂಭವಾಯಿತೆಂಬುದನ್ನೂ, ಅದರ ಬೆಳವಣಿಗೆ ನಡೆದ ರೀತಿಯನ್ನು, ಅದು ಕ್ರಮಬದ್ಧವಾಗಿ ಶಿಸ್ತಿಗೆ ಒಳಗಾಗುತ್ತ ನಡೆದುದನ್ನೂ, ಅದರಲ್ಲಿ ಮಾಡಿದ ಹಲವಾರು ಸುಧಾರಣೆಗಳನ್ನೂ ನಾವು ಹಿಂದಿನ ಪರಿಪತ್ರಗಳನ್ನು ಓದುವಾಗ ಕಾಣುತ್ತೇವೆ.

ಕ್ರಿ.ಶ. ೧೮೬೭ರಲ್ಲಿ ಅಂದಿನ ಮುಂಬಯಿ ಗವರ್ನರರು ಮುಂಬಯಿ ವಿಶ್ವವಿದ್ಯಾಲಯದ ಸಭೆಯೊಂದರಲ್ಲಿ ಆಡಿದ ಮಾತುಗಳು ಮನನೀಯವಾಗಿವೆ:

"ಕೇವಲ ಹಣದಿಂದ ಶಿಕ್ಷಣೆಯು ಆಗತಕ್ಕ ಹಾಗೆ ಆಗುವದಿಲ್ಲ. ವಿದ್ಯೆ ಕಲಿಸುವದು ನಿಸರ್ಗತಃ ಬಹು ಪವಿತ್ರವಾದ ಕೆಲಸವು. ಕೇವಲ ಧನಲೋಭದಿಂದ ಇದನ್ನು ಸ್ವೀಕರಿಸಬಾರದು. ಈ ಕೆಲಸವು ಬಹು ಪುಣ್ಯಕರವಾದದ್ದೂ, ಪ್ರತಿಷ್ಠೆಯುಳ್ಳದ್ದೂ ಯೆಂದು ತಿಳಿದು ಉಲ್ಲಾಸದಿಂದ ಅದನ್ನು ಕೈಕೊಂಡರೆ ತಕ್ಕ ಫಲವಾಗುತ್ತದೇ ಹೊರ್ತು ಧನಲೋಭದಿಂದಲ್ಲ. ಆದಾಗ್ಯೂ ಈ ಕೆಲಸ ಮಾಡುವವರ ಉದರ ನಿರ್ವಾಹವು ಧನವಿಲ್ಲದೆ ಆಗದೆಂಬುದು ನಿಜವು. ಅದರಿಂದ ಅವರಿಗೆ ಹಣಕೊಡುವದು ಅಗತ್ಯವಾಗಿರುತ್ತದೆ..."

ಈಗ ಒಂದುನೂರು ವರುಷಗಳ ಹಿಂದೆ ಮುಂಬಯಿ ಗವರ್ನರರು ಹೇಳಿದ ಮಾತು ಇಂದು ನಿನ್ನೆ ಹೇಳಿದಂತೆಯೇ ಇದೆಯಲ್ಲವೆ? ಇದು ವಿದ್ಯಾ ಚಕ್ರ ●

ಹರಪುರಹಳ್ಳಿಯ ಪಾಳೆಯಗಾರ ದಾದಯ್ಯನಾಯಕ ಬಸವಪಟ್ಟಣದ ಕೊಂಗಣ ನಾಯಕನನ್ನು ಸೋಲಿಸಿ, ಚಿತ್ರದುರ್ಗದ ದೊರೆ ಚಿಕ್ಕಣ್ಣನಾಯಕನ ಪ್ರಾಣ ರಕ್ಷಿಸಿದ. ದಾದಯ್ಯನ ಶೌರ್ಯ ಸಾಹಸ ಮೆಚ್ಚಿ, ಚಿಕ್ಕಣ್ಣನಾಯಕ ಆತನಿಗೆ ತನ್ನ ಮಗಳು ಹೊನ್ನಾಯಿಯ ಮದುವೆ ಮಾಡಿ ಧಾರೆಯಿತ್ತುದಲ್ಲದೆ ಹರಿಹರ ಪ್ರದೇಶವನ್ನು ವರದಕ್ಷಿಣೆಯಾಗಿತ್ತು. ಅಳಿಯನ ಬೇಡಿಕೆಯಂತೆ ಹುಚ್ಚಂಗಿ ದುರ್ಗವನ್ನು ಆತನ ವಶಕ್ಕೊಪ್ಪಿಸಿದ. ಆದರೆ ದಾದಯ್ಯನಾಯಕ ಪ್ರಬಲನಾಗಿ ಸುತ್ತಮುತ್ತಲಿನ ಚಿಕ್ಕ ಪುಟ್ಟ ಪಾಳೆಯಗಾರರೊಂದಿಗೆ ಸಖ್ಯ ಹಾಗು ರಕ್ತಸಂಬಂಧ ಬೆಳೆಸುವುದು ಚಿಕ್ಕಣ್ಣ ನಾಯಕನಿಗೆ ಸಹನೆಯಾಗಲಿಲ್ಲ. ಚಿಕ್ಕ ಪಾಳೆಯಗಾರನಾದ ದಾದಯ್ಯನಾಯಕನನ್ನು ಹತೋಟಿಗೆ ತರಲು ಮಗಳೊಂದಿಗೆ ಸಂಚು ಹೂಡಿ ಹುಚ್ಚಂಗಿ ದುರ್ಗದ ಮೇಲೆ ದಾಳಿಯಿಟ್ಟ. ಪರಿಣಾಮವಾಗಿ ಮಗಳು ಮತ್ತು ದುರ್ಗ ಎರಡೂ ಕಳೆದುಕೊಂಡ.

ಕೊಳ್ಳುವ ದಿನ ಬೇಗನೆ ಬರಲಿದೆ. ಇಂಥ ಸಮಯದಲ್ಲಿ ಜಾತಿಬಾಂಧವ್ಯವನ್ನು ಮರೆತು ಕೊಂಗಣ ನಾಯಕ ನಮ್ಮಲ್ಲಿಯೇ ಒಳಜಗಳ ಬೆಳಸುತ್ತಿದ್ದಾನಲ್ಲ?" ಎಂದ. ದಳವಾಯಿ ವೀರಪ್ಪ ಈಗ ಮಾತನಾಡಿದ.

"ಸುಲ್ತಾನರ ಆಳ್ವಿಕೆ ಬರುವವರೊಳಗಾಗಿ ಆದಷ್ಟು ಹೆಚ್ಚು ಕ್ಷೇತ್ರದಲ್ಲಿ ತನ್ನ ಬಲ ಬೆಳೆಸಿಕೊಳ್ಳಬೇಕೆಂಬ ಆಕಾಂಕ್ಷೆ ಇದ್ದೀತು ಪ್ರಭು! ಒಮ್ಮೆ ನಾವು ಬಿಜಾಪುರದ ರಕ್ಷಣೆಗೆ ಒಳಪಟ್ಟರೇ ನಮ್ಮನ್ನು ತಡವಿಕೊಳ್ಳುವುದು ಸುಲಭವಲ್ಲ. ಕೊಂಗಣ್ಣ ನಾಯಕ

# ನಾರಿಯೋ ಧಾರುಣಿಯೋ?

ಜಯತೀರ್ಥ ರಾಜಪುರೋಹಿತ

ಮಾಯಕೊಂಡದ ಕೋಟೆಯ ಅರಮನೆಯಲ್ಲಿ. ಅದೇ ಆಗ ಭೋಜನಪೂರ್ವದ ಮದ್ಯಪಾನ ಆರಂಭವಾಗಿತ್ತು. ಹರಪುರಹಳ್ಳಿಯ ಪಾಳೆಗಾರ ದಾದಯ್ಯನಾಯಕನಿಗೆ ಚಿತ್ರದುರ್ಗದ ಪಾಳೆಗಾರ ಕಾಮಗೇಟಿ ಚಿಕ್ಕಣ್ಣ ನಾಯಕನ ಮಗಳನ್ನು ಕೊಟ್ಟು ಮದುವೆಮಾಡಿದ ಸಂದರ್ಭ ಆದಾಗಿತ್ತು. ಸುತ್ತಲಿನ ಪಾಳೆಯಗಳ ನಾಯಕರೆಲ್ಲರೂ ನೆರೆದಿದ್ದರು. ಅರಮನೆಯ ದೊಡ್ಡ ಭಜಾರದಲ್ಲಿ ಗೋಡೆಗುಂಟ ಪಂಜುಗಳನ್ನು ಸಿಕ್ಕಿಸಿ ಬೆಳಕು ಮಾಡಿದ್ದರು. ನಡುವೆ ದೊಡ್ಡ ಗುಡಾರಗಳ ಮೇಲೆ ಬಿಳಿಯ ಬಟ್ಟೆಯನ್ನು ಹಾಸಿ ಸಾಲು ಸಾಲಾಗಿ ತಟ್ಟೆಗಳಲ್ಲಿ ಖಾದ್ಯಗಳನ್ನು ತಂದಿಡತೊಡಗಿದ್ದರು. ನಡುನಡುವೆ ದೊಡ್ಡ ದೊಡ್ಡ ಬೆಂದ ಮಾಂಸದ ಮುದ್ದೆಗಳ ತಟ್ಟೆಗಳು ಪ್ರಧಾನವಾಗಿ ಕಾಣುತ್ತಿದ್ದವು. ಅಲ್ಲಲ್ಲಿ ಬೇಡ ನಾಯಕರು ತಮ್ಮ ತಮ್ಮ ಮಿತ್ರರೊಂದಿಗೆ ಹರಟೆಹೊಡೆಯುತ್ತಾ ಆಗಲೇ ಮದ್ಯಪಾನದಲ್ಲಿ ಮಗ್ನರಾಗಿದ್ದುದು ಹಜಾರದಲ್ಲಿ ಕಾಣುತ್ತಿತ್ತು. ಅರಮನೆಯ ಹೊರಗಡೆಯ ಬಯಲಿನಲ್ಲಿ ಸೈನಿಕರಿಗೆ ಸಾಮೂಹಿಕ ಭೋಜನದ ವ್ಯವಸ್ಥೆಯಾಗಿತ್ತು. ಅಲ್ಲಿ ಆಗಲೇ ಕುಡಿತ ಹೆಚ್ಚಾಗಿ ಅಮಲೇರಿದ ಸೈನಿಕರ ಕೇಕೆ ಕೂಗಾಟಗಳು ಹಜಾರದಲ್ಲಿದ್ದವರಿಗೆ ಸಣ್ಣಾಗಿ ಕೇಳಿಸುತ್ತಿದ್ದವು.

ಹಜಾರದಲ್ಲಿಯ ನಾಯಕರ ಗುಂಪುಗಳು ಮಾತ್ರ ಪಿಸುಮಾತಿನಲ್ಲಿ ಹಾಸ್ಯ ವಿನಿಮಯ ಮಾಡಿಕೊಳ್ಳುತ್ತಾ, ಮೆತ್ತಗೆ ತೂಗಾಡುತ್ತಾ ನಿಧಾನವಾಗಿ ಕುಡಿಯತೊಡಗಿದ್ದರು. ಹಜಾರದ ಒಂದು ಪಾರ್ಶ್ವ ಖಾಲಿ ಇತ್ತು. ಯಾವುದೋ ಒಂದು ಹುಡುಗಿ ಬಂದು ವಾದ್ಯಮೇಳಕ್ಕೆ ಸರಿಯಾಗಿ ಯಾಂತ್ರಿಕವಾಗಿ ನೃತ್ಯ ಮಾಡಿ ಹೋದಳು. ಕುಡಿತದ ಅಮಲೇರಿದಂತೆ ಗುಂಪುಗಳು ಒಂದೊಂದು ಸ್ಥಾನ ಹಿಡಿದು ಆಹಾರದ ತಟ್ಟೆಗಳ ಹತ್ತಿರ ಕುಳಿತು ಹರಟೆಗಾರಂಭಿಸಿದರು. ಹಜಾರದ ಮೇಲ್ಬದಿಗೆ ಸ್ವಲ್ಪ ಎತ್ತರದ ಕಟ್ಟೆಯ ಮೇಲೆಯೂ ವಿಶಿಷ್ಟವಾಗಿ ಸಿಂಗರಿಸಿದ ಹಾಸಿಗೆಯ ಮೇಲೆ ದಿಂಬುಗಳಿಗೆ ಆತು ಕುಳಿತು ಮೂವರು ಕುಡಿಯುತ್ತ ಹರಟುತ್ತಿದ್ದರು.

"ಮಹಾನಾಯಕಾಚಾರ್ಯ ಕಾಮಗೇಟಿ ಚಿಕ್ಕಣ್ಣ ನಾಯಕರು ಕ್ಷಮಿಸಬೇಕು.. ನೀವು ಈ ಸಲ ಗೆದ್ದು ಪಾರಾಗಿರುವಿರಾದರೂ ಬಸವಪಟ್ಟಣದವರಿಂದ ಇನ್ನು ಮೇಲೆ ಜಾಗರೂಕರರಾಗಿಯೇ ಇರಬೇಕು" ಎಂದ ದಳವಾಯ ವಿರುಪಣ್ಣ.

"ಇದರಲ್ಲಿ ಕ್ಷಮಿಸುವದೇನಿದೆ ದಳವಾಯಿಗಳೇ! ಈ ಗೆಲುವು ನಮ್ಮದಲ್ಲ. ನಮ್ಮ ಹರಪುರ ಹಳ್ಳಿಯ ದಾದಯ್ಯ ನಾಯಕರದು. ಅವರು ಸಮಯಕ್ಕೆ ಸರಿಯಾಗಿ ಮಾಯಕೊಂಡದಲ್ಲಿ ನಮ್ಮನ್ನು ಮುತ್ತುವರೆದ ವೈರಿಗಳಮೇಲೆ ಹಿಂದಿನಿಂದ ದಾಳಿಮಾಡಿರದಿದ್ದರೆ ನಾವು ಸಂಭ್ರಮದದಿನ ನೋಡುವ ಭಾಗ್ಯವನ್ನೇ ಕಾಣುತ್ತಿರಲಿಲ್ಲ" ಎಂದ ಚಿಕ್ಕಣ್ಣನಾಯಕ.

"ನಾನು ಶೃಂಗಾರ ತೋಟದಲ್ಲಿದ್ದೆ. ಇನ್ನೇನು ಹರಪುರ ಹಳ್ಳಿಗೆ ಹೊರಡಬೇಕು. ಅಲ್ಲಿಯ ಬುರುಜುಗಳ ಮೇಲೆ ತೋಪು ಸಾಗಿಸುವ ಕೆಲಸವಿತ್ತು. ಆ ಹೊತ್ತಿಗೆ ನಿಮ್ಮ... ಹರಿಕಾರ "ಮೇದ" ಧಾವಿಸಿ ಬಂದು ಸಂದೇಶ ತಲುಪಿಸಿದ. ಮಾಯಕೊಂಡದ ಕೋಟೆಯೊಳಗೆ ನೀವು. ಸುತ್ತ ಬಸವಪಟ್ಟಣದ ಸೈನ್ಯ. ನನಗೆ ಗಂಡಾಂತರದ ಅರಿವಾಯಿತು. ಕೂಡಲೇ ಕಾದಿಟ್ಟ ದಳದೊಂದಿಗೆ ಹೊರಟೆ. ಆಮೇಲಾದುದು ತಿಳಿದೇ ಇದೆ. ಆದರೆ ಈ ಬಸವಪಟ್ಟಣದ ಕೊಂಗಣ ನಾಯಕನ ರೀತಿ ನೀತಿಗಳೇ ಅರ್ಥವಾಗುತ್ತಿಲ್ಲವಲ್ಲ?" ಎಂದ ದಾದಯ್ಯ ನಾಯಕ. ಚಿಕ್ಕಣ್ಣ ಹೇಳಿದ, "ರೀತಿ ಏನು ನೀತಿ ಏನು? ಸಂತೆಬೆನ್ನೂರು, ಹೊಳಲಕೆರೆ, ಆಣಜಿ, ಜಗಳೂರು ಮಾಯಕೊಂಡಗಳ ಮೇಲೆ ಅವರದು ಯಾವಾಗಲೂ ಕಣ್ಣಿದೆ. ಅನಂತಪುರದಿಂದ ಮಾಯಕೊಂಡದವರೆಗೆ, ಹರಿಹರದಿಂದ ತರೀಕೆರೆಯವರೆಗೆ ಅವರ ಓಡಾಟ ನಡೆದಿದೆ." ದಾದಯ್ಯ ಸ್ವಲ್ಪ ಯೋಚನಾಪರನಾಗಿ "ನರಪತಿಗಳ ಕಾಲ ಆಯಿತು. ವಿಜಯನಗರ ಹಾಳಾಯಿತು. ಅವರೇ ನಮ್ಮೆಲ್ಲರ ಪಾಳೇಗಾರಿಕೆಯನ್ನು ಒಪ್ಪಿ ನಮ್ಮ ಸೀಮೆಗಳನ್ನು ನಮ್ಮ ಪಾಡಿಗೆ ಬಿಟ್ಟಿದ್ದಾರೆ. ನಾವು ನಾಮಕಾರ್ಥ ಸ್ವತಂತ್ರರಂತಿದ್ದರೂ ಬಾಚು ಅನ್ನದೇ ಬಿಜಾಪುರದ ಸುಲ್ತಾನರಿಗೆ ಕಪ್ಪಕೊಟ್ಟು ಆತ್ಮರಕ್ಷಣೆ ಮಾಡಿ

ಮಹಾಧೂರ್ತ. ಅದಲ್ಲದೆ ಅವನಿಗೊಂದು ಛಲವೆ. ಕಾಮಗೇಟಿ ಮನೆತನದ ಮೂಲಪುರುಷ ತಿಮ್ಮಣ್ಣ ನಾಯಕನೇನೊ ತನ್ನ ಸಂಗಡಿಗರೊಂದಿಗೆ ಹೊಟ್ಟೆ ಹೊರೆಯಲು ಬಂದು ಬಸವಪಟ್ಟಣದ ದೊರೆಗಳಲ್ಲಿ ಆಶ್ರಯ ಪಡೆದಿದ್ದನಂತೆ. ಆ ಮೇಲೆ ಮಟ್ಟಿಯಲ್ಲಿ ಇದ್ದ ಆತನ ಪ್ರೀತಿಯ ಒಂದು ಹೆಣ್ಣಿನ ಕಾರಣವಾಗಿ ಇವರೊಂದಿಗೆ ಜಗಳವಾಗಿ ಮಾಯಕೊಂಡಕ್ಕೆ ಹೋಗಿ ನೆಲಸಿದ್ದನಂತೆ. ಇದನ್ನು ಅವರು ಮರೆತಿಲ್ಲವಾಗಿ ಕಾಣುತ್ತದೆ" ಎಂದ. ಚಿಕ್ಕಣ್ಣ ತನ್ನ ಬಟ್ಟಲಿಗೆ ಮತ್ತೊಂದಿಷ್ಟು ಮದ್ಯ ಸುರುವಿಕೊಂಡು ಎದುರಿನವರ ಬಟ್ಟಲಿಗೂ ಸುರುವಿದ. ಹತ್ತಿರದೇ ಹರಿವಾಣದಲ್ಲಿ ಇಟ್ಟಿದ್ದ ಮಾಂಸದ ದೊಡ್ಡ ತುಂಡೊಂದನ್ನು ಕೈಗೆತ್ತಿಕೊಂಡು ಹಲ್ಲಿನಿಂದ ಜಗಿಯುತ್ತ ಹೇಳಿದ.

"ಅದರ ಮುಂದಿನ ಕಥೆಯನ್ನು ಅವರು ಮರೆಯಬಾರದಲ್ಲ ದಳವಾಯಿಗಳೇ? ಮಾಯಕೊಂಡದಲ್ಲಿ ಅಡಗಿದ ಆ ಹುಲಿ, ನಮ್ಮ ತಿಮ್ಮಣ್ಣ ನಾಯಕ ಹೊರಗೆ ಬರಬೇಕಾದರೆ ಈ ನಮ್ಮ ಹರಪುರ ಹಳ್ಳಿ, ಬಸವಪಟ್ಟಣ, ನಿಡುಗುಂದಿ ಪಾಳೇಯಗಾರರೆಲ್ಲ ಸೇರಿದರೂ ಆಗದೇ ಕಡೆಗೆ ವಿಜಯನಗರದ ಸೈನ್ಯ ತರಬೇಕಾಯಿತು. ಆದರೆ ಆ ಹುಲಿ ರಾತೋರಾತ್ರಿ ನರಪತಿಯ ಬಿಡಾರಕ್ಕೆ ನುಗ್ಗಿ ಕುದುರೆಯ ಪಾಗಾದಲ್ಲಿ ಮಲಗಿ, ಎಚ್ಚರಾದ ಸರದಾರ ಬಂದು ಬಚ್ಚಿದ ಕುದುರೆ ನೋಡಿ, ಇನ್ನೊಂದು ಗೂಟವನ್ನು ಕತ್ತಲಲ್ಲಿ ಮಲಗಿದ್ದ ತಿಮ್ಮಣ್ಣ ನಾಯಕನ ಅಂಗೈಯಲ್ಲಿ ಬಡೆದರೂ ಚಿಟ್ ಎನ್ನದೇ ಆ ಮೊಳೆ ಅಂಗೈಯನ್ನೇ ಕತ್ತರಿಸಿ ಪಟ್ಟದಕುದುರೆಯನ್ನು ಹಾರಿಸಿಕೊಂಡು ಹೋದನಲ್ಲ ಶೂರ? ಅದನ್ನು ಮರಿಯಬೇಕೇನು? ಈ ಸುದ್ದಿ ಕೇಳಿ ನರಪತಿಗಳು ಆತನನ್ನು ಕರೆಸಿಕೊಂಡು ಗೌರವಿಸಿ ಹೊಳಲಕೆರೆ ಜಾಗಿರಿ ಕೊಟ್ಟರು. ಅದೇ ಬೆಳೆದು ಚಿತ್ರದುರ್ಗವಾಯಿತು. ನಾವು ಯಾರ ಉಪಕಾರದಲ್ಲಿಯೂ ಇಲ್ಲ ಎಂಬುದು ತಿಳಿಯಬಾರದೇನು?" ಎಂದಾಗ ನಾಯಕ ಉದ್ರಿಕ್ತನಾಗಿದ್ದ.

ದಾವಯ್ಯ ಕುಳಿತಲ್ಲಿಯೇ ತೂಗಾಡುತ್ತ ಹೇಳ ತೊಡಗಿದ: "ನಾಯಕರೇ ನಮ್ಮ ಪಾಳೆಗಾರಿಕೆಗಳು ಬಾಹುಬಲ, ಸಾಹಸಗಳಿಂದ ಬಂದುವು. ಅವು ನಿಂತಿರುವುದು ಅದರ ಮೇಲೆಯೆ. ಕೇಂದ್ರ ಪ್ರಭುತ್ವದವರು ಅಕ್ಕ ಪಕ್ಕದವರು ದುರ್ಬಲ ಆದಾಗಲೆಲ್ಲ ನಾವು ಕಾಲು ಚಾಚುತ್ತಾ ಬಂದೀವಿ. ಮೊಟ್ಟ ಮೊದಲು ನಾವೆಲ್ಲ ತುಡುಗರು, ದಂಗೆಕೋರರು. ನಮ್ಮ ಪೀಡೆ ತಾಳದೆ ಜನ ಹೆದರಿ ನಮ್ಮನ್ನು ನಾಯಕ ಎಂದು ಕೈ ಮುಗಿದರು. ನಮ್ಮ ಕಾಡು ಧೈರ್ಯವನ್ನು ಬಳಸಿಕೊಳ್ಳುವದಕ್ಕಾಗಿ ನರಪತಿಗಳು ನಮ್ಮನ್ನು ಪಾಳೇಗಾರರು ಅಂದರು. ನಮಗೂ ನಿಲ್ಲಲಿಕ್ಕೆ ನೆಲೆ ಬೇಕಿಲ್ಲ. ಇವನ್ನೆಲ್ಲ ಒಪ್ಪಿಕೊಂಡು ಸಂಭಾವಿತರಂತೆ ಇದ್ದೀವಿ. ಆದರೂ ಕಳ್ಳರ ಭೇದ ಕಳ್ಳನೆ ಬಲ್ಲ ಎಂಬಂತೆ ಒಬ್ಬರ ಕುತ್ತಿಗೆ ಒಬ್ಬರು ಕೊಯ್ಯಲಿಕ್ಕೆ ತಯಾರಾಗುತ್ತೀವಿ".

ದಳವಾಯಿ ವೀರಪ್ಪ ಮದ್ಯಸೇವಿಸುತ್ತ ಹೇಳಿದ "ಛೆ. ಛೆ! ದಾದಯ್ಯ ನಾಯಕರೆ! ಇಂದು ನಿಮ್ಮ ಮದುವೆಯಾಗಿದೆ. ಇಂಥ ಶುಭ ಸಂಧರ್ಭದಲ್ಲಿ ಇಂಥ ಅಮಂಗಳ ಮಾತು ಏಕೆ ಆಡುತ್ತೀರಿ? ಎಲ್ಲವೂ ಆನಂದದಲ್ಲಿ ಕೊನೆಗೊಂಡಿದೆ. ಆಯಿತು. ಇಂದು ಜಯಶ್ರೀ ನಿಮಗೆ ಹೊನ್ನಾಯಿ ನಾಯಕಿಯ ರೂಪದಲ್ಲಿ ದೊರಕಿದ್ದಾಳೆ" ಎಂದ. ಚಿಕ್ಕಣ್ಣ ಮೃದುವಾಗಿ ಹೇಳಿದ.

"ದಾದಯ್ಯ! ಹೊನ್ನಾಯಿ, ನನ್ನ ಅಂತಃಕರಣದ ಭಾಗವಾಗಿ ಬೆಳೆದ ಮಗಳು. ಇಪ್ಪತ್ತು ವರ್ಷ ನನ್ನೊಂದಿಗೆ ಅವಳು ಇದ್ದರೂ ನಾಳೆ ಹೋಗುವಳಲ್ಲ ಎಂಬ ವಿಚಾರ ಬಂದರೆ ನನ್ನದೇನೋ ಹೋಯಿತೆನಿಸುತ್ತಿದೆ. ನನ್ನ ರಾಜ್ಯದ ಒಂದು ಭಾಗ ಹೋದರೂ ನನಗೆ ಚಿಂತೆ ಇಲ್ಲ" ಎಂದಾಗ ಆತನ ಕಣ್ಣು ಹನಿಗೂಡಿದ್ದವು.

"ಆದಕ್ಕೆಂದೆ ಹರಿಹರದ ಹತ್ತಿರದ ಪ್ರದೇಶವನ್ನು ಅಳಿಯುದೇವರಿಗೆ ವರದಕ್ಷಿಣೆಯಾಗಿ ಒಪ್ಪಿಸಿದುದು. ಹರಪುರಹಳ್ಳಿಗೆ ಅದು ಹೊಂದಿಯೂ ಇದೆಯಲ್ಲವೆ?" ಎಂದ ದಳವಾಯಿ.

"ನಿಮ್ಮ ಮಗಳನ್ನೂ ನೀವಿತ್ತ ನೆಲವನ್ನು ನನ್ನಲ್ಲಿ ಇಟ್ಟಿರುವ ನಿಮ್ಮ ಸ್ವತ್ತೆಂದೇ ರಕ್ಷಿಸುವೆ ಮಾವನವರೆ !" ಎಂದ ದಾದಯ್ಯನಾಯಕ.

"ನಿಮಗೊಪ್ಪಿಸಿದ ಮೇಲೆ ನಮ್ಮ ಸ್ವತ್ತಲ್ಲ. ಅಳಿಯಂದಿರೇ! ಅವು ನಿಮ್ಮವೇ ಎಂದು ಅನುಭವಿಸತಕ್ಕದ್ದು. ನಮ್ಮ ನಿಮ್ಮ ನಡುವೆ ಉಳಿಯುವದು ಬಂಧುತ್ವದ ಬೆಸುಗೆ ಮಾತ್ರ ಎಂದ ಚಿಕ್ಕಣ್ಣ.

"ನಿಮ್ಮ ಅಭೀಷ್ಟದಂತೆ ಆಗಲಿ" ಎಂದು ದಾದಯ್ಯ ನಾಯಕ ಸುಮ್ಮನಾದ.

ಒಳಮನೆಯಲ್ಲಿ ಎಲ್ಲ ಸಿದ್ಧತೆ ಆಗಿದೆಯೆಂದೂ, ಹಿರಿಯ ನಾಯಕಿ ಕರೆಯುತ್ತಿರುವಳೆಂದೂ ಆಳೊಬ್ಬ ಬಂದು ತಿಳಿಸಿದ. ಚಿಕ್ಕಣ್ಣನಾಯಕ ಅಳಿಯ ದಾದಯ್ಯನನ್ನು ಎಬ್ಬಿಸಿಕೊಂಡು ಹೊರಟ. ಪಂಜಿನವರು ಮುಂದೆ ನಡೆದಂತೆ ಇವರು ಹಿಂಬಾಲಿಸಿ ಅರಮನೆಯ ಹೆಂಗಸರ ವಿಭಾಗದಲ್ಲಿ ಸೇರಿದರು.



× × ×

ಹೊನ್ನಾಯಿನಾಯಕಿಯನ್ನು ಕರೆದುಕೊಂಡು ಬಂದ ದಾದಯ್ಯನಾಯಕ ಇನ್ನೂ "ಶೃಂಗಾರ ತೋಟ" ದಲ್ಲಿಯೇ ನೆಲೆಸಿದ್ದ. ಬಾಗಳೀ, ನೀಲಗುಂದ ನಾಡುಗಳಿಗೆ ಈಗ ಹರಿಹರದ ಭಾಗಸೇರಿದುದು ಯುವಕ ದೊರೆ ದಾದಯ್ಯನಲ್ಲಿ ಆತ್ಮವಿಶ್ವಾಸವನ್ನು ಹೆಚ್ಚಿಸಿತ್ತು. ಹರಪುರಹಳ್ಳಿಯ ಕೋಟೆಯ ನಿರ್ಮಾಣ ಕಾರ್ಯ ಮುಗಿಯುತ್ತ ಬಂದಿದ್ದರೂ ಅಲ್ಲಿ ತನ್ನ ವಾಸಕ್ಕೆ ತಕ್ಕ ಅರಮನೆಯ ನಿರ್ಮಾಣ ಇನ್ನೂ ಪೂರ್ತಿಯಾಗಿರಲಿಲ್ಲ.

ಚಿತ್ರದುರ್ಗದ ದೊರೆಯ ನೆರವಿಗೆ ಹೋದುದೂ, ಬಸವಪಟ್ಟಣದ ಕೆಂಗಣನಾಯಕನನ್ನು

ಸೋಲಿಸಿದುದೂ ದಾದಯ್ಯನಾಯಕನ ಪ್ರತಿಷ್ಠೆಯ ಹೆಚ್ಚಳಕ್ಕೆ ಕಾರಣವಾಗಿತ್ತು. ಪ್ರಾಣಾಂತಿಕ ಅಪಾಯ ದಿಂದ ತನ್ನನ್ನು ಪಾರುಮಾಡಿದ ದಾದಯ್ಯನ ಉಪ ಕಾರವನ್ನು ಚಿತ್ರದುರ್ಗದ ಚಿಕ್ಕಣ್ಣ ನಾಯಕ ಮಗ ಳನ್ನು ಕೊಟ್ಟು ತೀರಿಸಿದನೆಂದು ಎರಡೂ ಪಾಳೆಯದ ಜನ ಅಂದುಕೊಂಡರು. ಮಗಳೊಂದಿಗೆ ಹರಿಹರದ ಪ್ರದೇಶವನ್ನು ಅಳಿಯನಿಗೆ ಕೊಟ್ಟು ರಕ್ತಸಂಬಂಧಕ್ಕೆ ರಾಜ್ಯಸಂಬಂಧದ ಬೆಸುಗೆಮಾಡಿಕೊಂಡನೆಂದು ಮುತ್ಸ ದ್ದಿಗಳು ಹೊಗಳಿದರು.

ಶ್ರೀಮಂತ ಪಾಳೆಯಗಾರನ ಮಗಳು ಹೊನ್ನಾಯಿನಾಯಕಿಯೂ ದಾದಯ್ಯನಾಯಕನ ಧೀರತನವನ್ನು ಮೆಚ್ಚಿದ್ದಳು. ೨೮–೩೦ರ ಹರೆಯದ ನಾಯಕ ಅವಳಿಗೆ ಸರ್ವವಿಧದಲ್ಲಿಯೂ ಅನುರೂಪ ನಾದ ಪತಿಯಾಗಿದ್ದ. ಆದರೆ ಆ ಶೃಂಗಾರ ತೋಟ, ಹರಪುರಹಳ್ಳಿ, ಬಾಗಳಿಗಳು ಅವಳಿಗೆ ಬಹು ಚಿಕ್ಕವಾಗಿ ಕಂಡವು.

ಒಂದು ಸಾಯಂಕಾಲ ದಾದಯ್ಯ, ಹೊನ್ನಾಯಿ ನಾಯಕಿ ಶೃಂಗಾರ ತೋಟದ ತಮ್ಮ ಮನೆಯ ಅಟ್ಟದ ಮೇಲೆ ನಿಂತು ಅದೇ ಆಗ ಉದಯಿಸುತ್ತಿರುವ ಹುಣ್ಣಿಮೆಯ ಚಂದ್ರನನ್ನು ನೋಡುತ್ತಿದ್ದರು. ದೂರ, ಬಲುದೂರ, ದಿಗಂತದಲ್ಲಿ ಕೆಂಪುಚಂದ್ರ ಬಿಂಬ ಮೆಲ್ಲನೆ ಮೇಲೇರುತ್ತಿತ್ತು. ದಾದಯ್ಯ ಹೊನ್ನಾಯಿಯ ತೋಳುಗಳು ಹೆಣೆದುಕೊಂಡು ಬೆರಳು ಗಳು ಒಂದಕ್ಕೊಂದು ತೊಡರಿಕೊಂಡಿದ್ದವು. ಇನ್ನೊಂದು ತೋಳಿನಿಂದ ನಾಯಕಿಯ ಸೊಂಟವನ್ನು ಬಳಸಿ ದಾದಯ್ಯ ನಿಂತಿದ್ದ.

"ಈ ನೋಟವನ್ನು ನಮ್ಮ ಚಿತ್ರದುರ್ಗದ ಕೋಟೆಯ ಅರಮನೆಯ ಮಾಳಿಗೆಯಿಂದ ನೋಡ ಬೇಕು. ದಿಗಂತದವರೆಗೆ–ಚಂದ್ರಕಾಣುವವರೆಗೆ ನಮ್ಮ ದೇ ಸೀಮೆ." ಎಂದಳು ಹೊನ್ನಾಯಿನಾಯಕಿ. ದಾದಯ್ಯ ಮೆಲುನಗೆಯಲ್ಲಿ ಹೇಳಿದ.

"ಅದಕ್ಕೆಂದೇ ನನ್ನ ಅರಮನೆಯನ್ನು ಅಂಥ ಎತ್ತರದಲ್ಲಿ ಕಟ್ಟಿಸಲಿಲ್ಲ ನಾಯಕಿ! ನಮ್ಮದಲ್ಲದ ಭೂಮಿಯ ಮೇಲೆ ನಮ್ಮ ದೃಷ್ಟಿ ಹಾಯದಿರಲೆಂದು.

ಹೊನ್ನಾಯಿ ಪತಿಯನ್ನೊಮ್ಮೆ ಕಣ್ಣಲ್ಲಿ ಕಣ್ಣಿಟ್ಟು ನೋಡಿದಳು. ಸ್ವಲ್ಪ ತಿರುಗಿ ಪತಿಗೆ ಸಮನಾಗಿ ಎದೆಗೆ ಎದೆಯೊತ್ತಿ ನಿಂತು ಅವನ ಮುಂಗು ರುಳುಗಳಲ್ಲಿ ಬೆರಳು ತೂರಿಸುತ್ತ.

"ನನ್ನ ದೊರೆಗೆ ಆನೆಯನ್ನು ಅಪ್ಪಿ ಸೆಣ ಸಾಡುವ ಹಂಗಾಮುವೀಗ. ಇಂಥ ವಯಸ್ಸಿನಲ್ಲಿ ಅಲ್ಪತೃಪ್ತಿಯೆಂದರೇನು?" ಎಂದಳು ವೈಯ್ಯಾರದ ಬಿಂಕದಿಂದ. ದಾದಯ್ಯ ನಾಯಕ ಎರಡೂ ಬಾಹು ಗಳಿಂದ ಪರಿಪುಷ್ಟಗಾತ್ರದ ಹೊನ್ನಾಯಿನಾಯಕಿ ಯನ್ನು ಬಿಗಿದಪ್ಪಿಕೊಂಡು ಚುಂಬಿಸಿದ.

"ನನ್ನ ಅಪ್ಪುಗೆಗೆ ಈ ಮರಿ ಆನೆ ಸಾಕು ನಾಯಕಿ. ಇದೂ ಮದಕರಿಗಳ ಕೂಸೇ ಅಲ್ಲವೇ?" ಎಂದ. ನಾಯಕಿಯ ಗಲ್ಲ ನಾಚಿಕೆಯಿಂದ ಕೆಂಪೇರಿತು. ದಾದಯ್ಯನಾಯಕನ ಗಲ್ಲವನ್ನು ಮೃದುವಾಗಿ ಹಿಂಡಿ ನಾಯಕಿ ಹೇಳಿದಳು

"ಸರಿ. ನಾನು ಸ್ವಲ್ಪಸುಖದ ವೈಯ್ಯವಳು. ನಿಮಗೆ ಆನೆಯಾಗಿ ಕಂಡೆ. ನಾನು ಹೇಳಿದುದು ಮಹತ್ವಾಕಾಂಕ್ಷೆಯ ವಿಚಾರ. ಶೌರ್ಯಕ್ಕೆ, ಯೌವ್ವನಕ್ಕೆ ಮಹತ್ವಾಕಾಂಕ್ಷೆ ಯಾವಾಗಲೂ ಜೋಡಲ್ಲವೆ?"

ದಾದಯ್ಯ ಚಂದ್ರನತ್ತ ನೋಡುತ್ತಲೇ ಹೇಳಿದ.

"ಚಂದ್ರ ಉದಿಸುವ ದಿಗಂತವನ್ನು ನೋಡುತ್ತ, ನಡುವಿನ ಭೂಮಿಯೆಲ್ಲ ನನ್ನದೆಂಬ ಮಹತ್ವಾಕಾಂಕ್ಷೆ ಹೊತ್ತು ಸಾಗುವದೇನು ಕ್ಷೇಮವಲ್ಲ ನಾಯಕಿ! ಎತ್ತರದಿಂದ ಕಾಣುವ ನೋಟ ಕಣ್ಣಿಗೆ ಹರವು ಕೊಟ್ಟಂತೆ ಮನಸ್ಸಿಗೂ ವೈಶಾಲ್ಯವನ್ನು ಕೊಟ್ಟರೆ ಚೆನ್ನು".

ಹೊನ್ನಾಯಿ ಮೂಗು ತುಟಿ ಸೊಟ್ಟಮಾಡಿ ಹೇಳಿದಳು.

"ಏನೋ ವೇದಾಂತ ಮಾತಾಡ್ತೀರಿ... ಎತ್ತರ ದಲ್ಲಿ ಕೋಟೆ, ಅರಮನೆ ಇದ್ದರೆ ರಕ್ಷಣೆಗೆ ಒಳ್ಳೇ ದಲ್ಲವಾ? ನಮ್ಮ ಹುಚ್ಚಂಗಿದುರ್ಗವೊ ನನಗೆ ತುಂಬ ಇಷ್ಟ. ಅಲ್ಲಿಯೂ ಮೇಲೆ ನಿಂತು ನೋಡಿದರೆ ಸುತ್ತಲೆಲ್ಲ ನಮ್ಮ ಸೀಮೆ." ದಾದಯ್ಯನಿಗೆ ಕ್ಷಣ ಏನೋ ಹೊಳೆಯಿತು. ಆದರೂ ಕೂಡಲೇ ಮಾತ ನಾಡಲಿಲ್ಲ. ಆ ಮೇಲೆ ನಸುನಗುತ್ತ ಅವಳ ಟೊಂಕ ವನ್ನು ಬಳಸಿದ ಕೈಯಿಂದ ಸ್ವಲ್ಪ ಅಮುಕಿದ. ಹೊನ್ನಾ ಯಿ ಬೆಚ್ಚಿ–ನಗುತ್ತ

"ಇದೇನು ಅಂದ್ರೆ?. 'ಮಕ್ಕಳ ಹಾಗೆ ಕಚಕುಳಿ" ಎಂದಳು. ದಾದಯ್ಯ ನಗೆಚಾಟಿಕೆಯಲ್ಲಿಯೇ

"ನಿಮ್ಮ ಎತ್ತರದ ರಾಜ್ಯದಿಂದ ಸ್ವಲ್ಪ ನಮ್ಮ ರಾಜ್ಯಕ್ಕೆ ಬರುವಿಯೋ ಇಲ್ಲವೋ? ಈಗ ನಿನ್ನೆದು ರಿಗೆ ಇರುವವ ಕೆಳಗಿನ ಕೋಟೆಯ ದಾದಯ್ಯನಾಯಕ. ಈ ಆನೇಮರಿಯನ್ನು ಬಲಿಹಾಕಿ ಹಿಡಿದು ಕೆಳಗಿಳಿಸಿ ತಂದಿದ್ದಾನೆ." ಎನ್ನುತ್ತ ಅವಳೊಂದಿಗೆ ಮಲಗುವ ಕೋಣೆಗೆ ನಡೆದ.

× × ×

ನಾಲ್ಕಾರು ದಿನಗಳಿಂದ ದಾದಯ್ಯ ನಾಯಕ ಮತ್ತು ಆತನ ದಳವಾಯಿಯ ಏಕಾಂತ ಸಾಗಿಯೇ ಇತ್ತು. ಹೊನ್ನಾಯಿ ಸಹಜವಾಗಿ ಸೂಚಿಸಿದ ಎತ್ತರ ಪ್ರದೇಶದ ಕೋಟೆಯ ಅವಶ್ಯಕತೆ ದಾದಯ್ಯನಿಗೆ ಅನೇಕ ಸಲ ಅನಿಸಿತ್ತು. ಆತನ ದಳವಾಯಿಯೂ ಹುಚ್ಚಂಗಿದುರ್ಗದಂಥ ಒಂದು ಸ್ಥಳವಾದರೂ ಅಂಥ ವಿಪ್ಲವದ ದಿನಗಳಲ್ಲಿ ತಮಗೆ ಇರುವದು ಅಗತ್ಯವೆಂದು ಅನೇಕ ಸಲ ಸೂಚಿಸಿದ್ದ. ಆದರೆ ದಾದಯ್ಯನ ಪಾಳೆಯದ ಸೀಮೆಯಲ್ಲಿ ಅಂಥ ಆಯಕಟ್ಟಿನ ಗುಡ್ಡವಾಗಲಿ, ದುರ್ಗವಾಗಲೀ ಇರಲಿಲ್ಲ. ಅದಕ್ಕೆಂದೆ ಹರಪುರಹಳ್ಳಿಯನ್ನು ಸ್ಥಾಪಿಸಿ ಅಲ್ಲಿಯೇ ಬಯಲಲ್ಲಿ ಕೋಟೆ ಕಟ್ಟಿಸಿದ್ದ. ಈಗ ಹೊನ್ನಾಯಿ ನಾಯಕಿ ಹುಚ್ಚಂಗಿದುರ್ಗದ ಮಾತೆತ್ತಿದ ನಂತರ ದಾದಯ್ಯ, ದಳವಾಯಿಗಳ ಹಳೆಯ ಕಲ್ಪನೆಗಳಿಗೆ ಮತ್ತೆ ಚಾಲನೆದೊರೆಯಿತು. ಸುದೈವದಿಂದ ಹುಚ್ಚಂಗಿದುರ್ಗದ ಆಸುಪಾಸಿನ ಪ್ರದೇಶವು ಈಗ ಮಾವನಾದ ಚಿತ್ರ ದುರ್ಗದೊರೆಯಿಂದ ತಾನಾಗಿಯೇ ದಾದಯ್ಯ ನಾಯ ಕನ ವಶಕ್ಕೆ ಬಂದಿತ್ತು. ಆದರೆ ಹುಚ್ಚಂಗಿದುರ್ಗ ಮಾತ್ರ ಇನ್ನೂ ಚಿತ್ರದುರ್ಗದವರ ಅಧೀನದಲ್ಲಿಯೇ ಇತ್ತು.

ದಳವಾಯಿಯ ಹುಲುಸಾದ ಮಿದುಳು ಕೆಲಸ ಮಾಡತೊಡಗಿತು. ಇದ್ದಕ್ಕಿದ್ದಂತೆ ಒಂದು ರಾತ್ರಿ ದಾದಯ್ಯ ನಾಯಕನಿಗೆ ಕನಸು ಬಿತ್ತು. ಕನಸಿನಲ್ಲಿ ಸಾಕ್ಷಾತ್ ಹುಚ್ಚಂಗೆಮ್ಮನೇ ಬಂದು ಹರಪುರ ಹಳ್ಳಿಯ ಪಾಳೆಯದ ಯಶಸ್ಸಿಗಾಗಿ ಹೊನ್ನಾಯಿ ನಾಯಕಿಯ ಹಿತಕ್ಕಾಗಿಯೂ ಮಾವನಿಂದ ಹುಚ್ಚಂಗಿ ದುರ್ಗವನ್ನು ಪಡೆಯಬೇಕೆಂದು ಹೇಳಿದಳು. ಈ ಹೇಳಿ ಕೆಯ ಗುರುತಾಗಿ ಮರುದಿನ ಮುಂಜಾನೆಯೇ ಅರ ಮನೆಯ ಮುಂದಿನ ಹುಣಸೇಮರ ಬೀಳುವದೆಂದು ಸಹ ಹೇಳಿದಳು. ದಾದಯ್ಯನಾಯಕ ಕನಸಿನ ಸಮಾ ಚಾರವನ್ನು ಪತ್ನಿ ಹೊನ್ನಾಯಿಗೆ ಹೇಳಿದ. ಆಕೆಗೂ ಆಶ್ಚರ್ಯ. ಮರುದಿನ ಬೆಳಗಿನಲ್ಲಿ ಹುಣಸೇಮರ ಬೀಳುವದನ್ನು ನಿರೀಕ್ಷಿಸುತ್ತ ದಂಪತಿಗಳು ಕುಳಿತರು. ಪಾಳೆಯದ ಜನಕ್ಕೆಲ್ಲ ಸೋಜಿಗ. ಅಗೋ! ನೂರಾರು ವರ್ಷದಿಂದ ನಿಂತಿದ್ದ ಬಲಿಷ್ಠವಾದ ಹುಣಸೇಮರ, ಯಾವ ವ್ಯಕ್ತ ಕಾರಣವೂ ಇಲ್ಲದೆ ಉರುಳಿ ಬಿತ್ತು. ಕನಸಿನ ಸುಳ್ಳಾಗಬಲ್ಲದೆ? ಹೊನ್ನಾಯಿಗೆ ವಿಚಿತ್ರ

ವಾಗಿತ್ತು. ಸಂಪತ್ತಿಗೆಳಿಂದ ಚಿತ್ರದುರ್ಗದ ದೊರೆಗೆ ಈ ಪ್ರಸನ್ನ ಮತ್ತು ಪವಾಡದ ಸಮಾಚಾರ ತಿಳಿಯಿತು. ಆತನಿಗೂ ಆಕಸ್ಮಿಕವಾದ ಈ ದೈವೀಪ್ರೇರಣೆಯ ಆಶ್ಚರ್ಯವಾದರೂ ನಿರಾಕರಿಸುವ ಧೈರ್ಯ ಸಾಲಲಿಲ್ಲ. ಆತನೂ ಹುಚ್ಚಂಗಿದುರ್ಗಕ್ಕೆ ಸೇವಕರನ್ನು ಕಳಿಸಿ ಹುಚ್ಚಂಗೆಮ್ಮನಿಗೆ ಸೇವೆ ಮಾಡಿಸಿ ಪೂಜಾರಿಯ ಹೇಳಿಕೆಯನ್ನು ಕೇಳಲಾಯಿತು. ಅಲ್ಲಿಯೂ ಇದೇ ಸೂಚನೆ. ಚಿಕ್ಕಣ್ಣನಾಯಕನಿಗೆ ಇದೆಲ್ಲ ದೈವಾನುಗ್ರಹವೆಂದು ಖಚಿತವಾಯಿತು. ಹರಿಹರ ಪ್ರದೇಶವನ್ನೇ ಕೊಟ್ಟ ಮೇಲೆ ಹುಚ್ಚಂಗಿದುರ್ಗವೇನು ಮಹಾ? ಅದರಲ್ಲಿ ಮಗಳು ಅಳಿಯನಿಗೆ ಅನುಕೂಲವೂ ಇದೆಯೆಂಬ ವ್ಯವಹಾರವೂ ಅರ್ಥವಾಯಿತು. ಸಂತೋಷದಿಂದ ಹುಚ್ಚಂಗಿ ದುರ್ಗವನ್ನು ದಾದಯ್ಯನಾಯಕನ ಅಧಿಕಾರಕ್ಕೆ ಒಪ್ಪಿಸಲಾಯಿತು. ಹೊನ್ನಾಯಿ ನಾಯಕಿಗೆ ಎತ್ತರದಿಂದ ತನ್ನ ಪಾಳೆಯ ಪ್ರದೇಶವನ್ನು ನೋಡುವ ಅವಕಾಶ ಲಭಿಸಿತು.'

× × ×

ದಾದಯ್ಯನಾಯಕ ಹುಚ್ಚಂಗಿದುರ್ಗವನ್ನು ಬಲಪಡಿಸತೊಡಗಿದ. ಗುಡ್ಡದ ಒಂದು ಪಾರ್ಶ್ವಕ್ಕೆ ತೀರ ನಿಡಿದಾದ ಹಾಸುಬಂಡೆ ಗೋಡೆಯಂತೆ ಎದ್ದು ನಿಂತುದು ಆಯಕಟ್ಟಿನ ದೃಷ್ಟಿಯಿಂದ ನೈಸರ್ಗಿಕ ರಕ್ಷಣೆಯಾಗಿ ಈ ದುರ್ಗದ ವೈಶಿಷ್ಟ್ಯವನ್ನು ಹೆಚ್ಚಿಸಿತ್ತು. ಗುಡ್ಡದ ತುದಿ ನೆಲದಿಂದ ಸಾವಿರಾರು ಅಡಿ ಎತ್ತರವಿದ್ದುದಲ್ಲದೆ ಮೇಲೆ, ಅರಮನೆ, ಶಸ್ತ್ರಾಗಾರ, ಕಾದಿಟ್ಟ ದಳಗಳ ಮತ್ತು ಅಧಿಕಾರಿಗಳ ವಸತಿಗಳಿಗೆ ಸಾಕಾಗುವಷ್ಟು ಪ್ರಸ್ಥಭೂಮಿಯೂ ಇತ್ತು. ಗುಡ್ಡದ ನಡುವಣ ಸ್ತರಗಳಲ್ಲಿಯೂ ಜನವಸತಿ ಹಾಗೂ ಕೆಳಕೋಟೆ ಗೋಡೆಗಳ ನಿರ್ಮಿತಿಗೆ ಅವಕಾಶವಿತ್ತು. ಆಗಲೆ ಕೆಲವು ಭಾಗ ಕಟ್ಟಿದ್ದ ಈ ದುರ್ಗದಲ್ಲಿ ಅನೇಕ ಹೊಸ ಕಟ್ಟಡಗಳನ್ನು ದಾದಯ್ಯ ನಾಯಕ ಕಟ್ಟಿಸಿದ. ಒಂದೆರಡು ವರ್ಷಗಳಲ್ಲಿ ಹುಚ್ಚಂಗಿ ದುರ್ಗ ಅತ್ಯಂತ ವಿಶ್ವಾಸಿಕ ಯೋಧರಿಂದ ಸುಸಜ್ಜಿತವಾಗಿ ಅಭೇದ್ಯವಾದ ಕೋಟೆಯಾಯಿತು. ಹೊನ್ನಾಯಿ ನಾಯಕಿ ಹೆಚ್ಚಾಗಿ ಇಲ್ಲಿಯೇ ವಾಸಿಸುತ್ತಿದ್ದಳು. ದಾದಯ್ಯನಾಯಕ ಹರಪುರಹಳ್ಳಿಯಲ್ಲಿ ಪಾಳೆಯದ ಆಡಳಿತದ ಮುಖ್ಯ ಕಚೇರಿಯನ್ನು ನಡೆಸುತ್ತಿದ್ದ. ಆಗಾಗ ಇಲ್ಲಿಗೆ ಬಂದುಹೋಗುತ್ತಿದ್ದ.

ಸಮರ್ಥ ಸಮ್ರಾಟರಿಲ್ಲದ ಕಾಲವದು. ಪಾಳೆಯಗಾರರ ಆಳಿಕೆಗೆ ಒಳಪಟ್ಟ ಪ್ರದೇಶದಲ್ಲಿ ಸದಾ ಪಾಳೆಯಗಾರರು ಜಾಗರೂಕರಾಗಿ ಇರಬೇಕಾಗುತ್ತಿತ್ತು. ಅಕ್ಕಪಕ್ಕದ ಪಾಳೆಯಗಾರರ ಒತ್ತಡಗಳನ್ನು, ಲೂಟಿ, ದರೋಡೆಮಾಡುವ ಪುಂಡರ ತಂಡಗಳನ್ನೂ ನಿಯಂತ್ರಿಸಲು ಯಾವಾಗಲೂ ಪಾಳೆಯಗಾರರೂ ಅವರ ದಳವಾಯಿಗಳೂ ತಮ್ಮ ಪ್ರದೇಶದ ಗಡಿ ಭಾಗಗಳಲ್ಲಿ ಸುತ್ತಬೇಕಾಗುತ್ತಿತ್ತು.

ಬೇಡರ ನಾಯಕರ ವಿಶೇಷ ಪ್ರೀತಿಯ ಹವ್ಯಾಸವೆಂದರೆ ಬೇಟೆ. ದಾದಯ್ಯನಾಯಕನಿಗೂ ಬೇಟೆಯ ಅಭಿರುಚಿಯಿತ್ತು. ಸಂಡೂರು, ಗುಡೇಕೋಟೆ ಓಬಲಗುಂಡಿಗಳ ಅರಣ್ಯದಲ್ಲಿ ಹುಲಿ, ಚಿರತೆ, ಕಾಡುಹಂದಿಗಳ ಬೇಟೆಗೆ ಆಗಾಗ ಹೋಗುತ್ತಿದ್ದ. ಜಿಂಕೆ ಮುಂತಾದ ಹಗುರಗಾಲಿನ ಬೇಟೆ ಬೇಕಾದರೆ ಜರಮಾಲಿ, ಬಿಳಿಚೋಡು ಪ್ರದೇಶಗಳ ಮೈದಾನುಗಳಲ್ಲಿ ತಿರುಗಾಡಿ ಬರುತ್ತಿದ್ದ. ಈ ಬೇಟೆಯ ನೆಪದಿಂದ ಗಡಿರಕ್ಷಣೆಯ ಜೊತೆಗೆ ನೆರೆಯ ಪಾಳೆಯಗಾರರ ಸಂಪರ್ಕವೂ ಆಗುತ್ತಿರುತ್ತಿತ್ತು.

ಚಿತ್ರದುರ್ಗದ ಚಿಕ್ಕಣ್ಣನಾಯಕನ ಬಂಧುತ್ವವಾಗಿ ಹುಚ್ಚಂಗಿದುರ್ಗದ ಒಡೆಯ ದಾದಯ್ಯನಾದ ಮೇಲೆ ಅವನ ಹೆಸರು ನಾಲ್ಕೂ ಕಡೆಗೆ ಪಸರಿಸಿತ್ತು. ಬಸವಪಟ್ಟಣದ ಕೊಂಗಣನಾಯಕನನ್ನು ಸೋಲಿಸಿ ಓಡಿಸಿದ ಧೀರಯುವಕನೆಂದು ಅನೇಕ ಚಿಕ್ಕ ಪುಟ್ಟ ಪಾಳೆಯಗಾರರು ಈತನ ಸ್ನೇಹ, ಪರಿಚಯಕ್ಕಾಗಿ ಹಾತೊರೆಯುತ್ತಿದ್ದರು. ದಾದಯ್ಯನೂ ಸ್ನೇಹಪರ ಸ್ವಭಾವದವನೆ ಆಗಿದ್ದ. ಹಿರಿಯರಲ್ಲಿ ಗೌರವ ತೋರಿಸುತ್ತಿದ್ದಂತೆ ಓರಿಗೆಯವರೊಂದಿಗೆ ಜಂಭವಿಲ್ಲದ ಸಲುಗೆಯಿಂದ ಇರುತ್ತಿದ್ದ. ಆ ದಿನಗಳಲ್ಲಿ ಪಾಳೆಯಗಾರರೆಲ್ಲ ಒಂದಾಗಿ ಸ್ನೇಹಪರರಾಗಿ ಇರುವದರಲ್ಲಿಯೇ ಕ್ಷೇಮವಿದೆಯೆಂದು ದಾದಯ್ಯ ನಂಬಿದವನಾಗಿದ್ದ. ಆಗಾಗ ಬೇಟೆಯ ನಿಮಿತ್ತ ಹೋದಾಗ ಭೆಟ್ಟಿಯಾಗುವ ಜರಮಾಲಿ, ಬಿಳಿಚೋಡು, ಗುಡೇಕೋಟೆ ಪಾಳೆಯಗಾರರೊಂದಿಗೆ ಈ ವಿಚಾರವಾಗಿ ಅನೇಕಸಲ ಬಿಚ್ಚುಮನಸ್ಸಿನಿಂದ ಚರ್ಚಿಸಿಯೂ ಇದ್ದ. ದಾದಯ್ಯನ ಕಳಕಳಿಗಾಗಿ ಅವರು ಮೆಚ್ಚಿದ್ದರು.

ಇಂಥ ಒಂದು ಸಂಚಾರದಲ್ಲಿಯೇ ಬೇಟೆ ಮುಗಿಸಿಕೊಂಡು ಹೋಗಿ ದಾದಯ್ಯ ನಾಯಕ ಜರಮಾಲಿಯ ಪಾಳೆಯಗಾರನ ಅತಿಥಿಯಾಗಿ ತಂಗಿದ್ದ. ಬಹುದಿನಗಳಿಂದ ಆಪ್ತ ಹಿರಿಯನೆಂದು ಆ ಪಾಳೆಯಗಾರನನ್ನು ದಾದಯ್ಯ ಗೌರವದಿಂದ ಕಾಣುತ್ತಿದ್ದ. ಆ ದಿನ ಸಾಯಂಕಾಲ ಸಂಗೀತ ವ್ಯವಸ್ಥೆಗಾಗಿ ದಾದಯ್ಯನ ಅನುಮತಿಯನ್ನು ಪಾಳೆಯಗಾರ ಕೇಳಿದ.

"ಬಾಳಿನಲ್ಲಿ ಒಳ್ಳೆಯದನ್ನು ಬೇಡ ಅನ್ನುವಷ್ಟು ಅರಸಿಕ ನಾನಲ್ಲ ಯಜಮಾನರೇ" ಎಂದಿದ್ದ ದಾದಯ್ಯ ನಾಯಕ ನಸುನಗುತ್ತ.

ಹದಿನೆಂಟು ವರ್ಷದ ಚೆಲುವೆ ಜಂಪಾನಾಗತಿ ಆ ವಿಶಿಷ್ಟ ಅತಿಥಿಗಳೆದುರಿಗೆ ಸುಶ್ರಾವ್ಯವಾಗಿ ಆ ಸಂಜೆ ಹಾಡಿದಳು. ಹಾಡಿಯೇ ಹಾಡಿದಳು. ದಾದಯ್ಯ ನಾಯಕ ತಲೆದೂಗಿದ. ನೋಡಿಯೇ ನೋಡಿದ. ಕಣ್ಣಲ್ಲಿ ಹಿಡಿದ. ಮನಸ್ಸಿನಲ್ಲಿ ಇಳಿಸಿದ. ಆಮೇಲೆ ತಿಳಿಯಿತು. ಜಂಪಾನಾಗತಿ ಜರಮಾಲಿಯ ಪಾಳೆಯಗಾರನ ಮಗಳೆಂದು. ಅಚಾತುರ್ಯವೇನಾದರೂ ತನ್ನ ನಡತೆಯಲ್ಲಿ ಘಟಿಸಿತೇನೋ ಎಂದು ಪಾಳೆಯಗಾರನಿಗೆ ಕ್ಷಮೆ ಕೇಳಿಕೊಂಡ.

"ಹಾಗೇನೂ ಇಲ್ಲ- ಆ ಚೆಲುವಿನ ರಕ್ಷಣೆಯೇ ಈಗ ನನ್ನ ಚಿಂತೆಯಾಗಿದೆ ದಾದಯ್ಯ! ಈ ದಾಳಿ, ಲೂಟಿ, ನಾಶ, ಆಕ್ರಮಣದ ದಿನಗಳಲ್ಲಿ ಇಂಥ ಚೆಲುವು ಎಂಥ ಗಂಡಾಂತರಕಾರಿಯಾದೀತೆಂದು ಹೇಳುವ ಅವಶ್ಯವಿಲ್ಲ. ಈ ಚೆಲುವು ಕೇವಲ ಶೂರಯೋಗ್ಯವಾದುದು" ಎಂದ ಪಾಳೆಯಗಾರ. ದಾದಯ್ಯನಿಗೆ ಅರ್ಥವಾಯಿತು. ಸ್ವಲ್ಪ ಆಲೋಚಿಸುವ ಸಮಯ ಕೊಡಿರೆಂದು ಹೇಳಿ ಹೊರಟುಬಂದ.

ಜಂಪಾನಾಗತಿಯ ರೂಪವನ್ನು ನೆನಪಿನಿಂದ ಅಳಿಸುವದು ಅಸಾಧ್ಯವಾಗಿತ್ತು. ಅವಳ ತಂದೆಯ ಮಾತೂ ಕಿವಿಯಲ್ಲಿ ನಿನದಿಸುತ್ತಿದ್ದವು. ಜರಮಾಲಿ ಹರಪುರಹಳ್ಳಿ ಪಾಳೆಯಕ್ಕೆ ಹೊಂದಿದ ಪಾಳೆಯ. ಈ ಸಂಬಂಧದಿಂದ ಒಳ್ಳೆಯ ನೆರೆ, ಒಳ್ಳೆಯ ಮಡದಿ ಎರಡೂ ಸಾಧಿಸಬಹುದೆಂದು ಯೋಚಿಸಿದ. ಆದರೆ ಹೊನ್ನಾಯಿ?

ತವರೂರಿಗೆ ಹೋಗಿದ್ದ ಹೊನ್ನಾಯಿ ತಿರುಗಿ ಬಂದು ನಾಲ್ಕು ದಿನವಾಗಿತ್ತು. ಒಂದು ಸಂಜೆ ಸಮಯ ನೋಡಿ ಹೊನ್ನಾಯಿಯ ಮುಂದೆ ಪ್ರಸ್ತಾಪ ಮಾಡಿದ.

"ರಾಜರ ಪ್ರೇಮದಲ್ಲಿ ಇರುವ ಗಂಡಾಂತರವೆ ಇದು" ಎಂದು ಮುಖ ಚಿಕ್ಕದು ಮಾಡಿದಳು ಹೊನ್ನಾಯಿ.

"ಹಾಗೇಕೆ ತಿಳಿಯುವಿ ರಾಣಿ? ಪ್ರೇಮ ಬೇರೆ, ರಾಜಕೀಯ ಬೇರೆ... ಅದಕ್ಕಾಗಿಯೇ ಆಳುವವನಿಗೆ ಹತ್ತು ಹೆಣ್ಣುಗಳು ಎನ್ನುವದು... ನಿನಗೇನು ರಾಜಕೀಯ ಗೊತ್ತಿಲ್ಲವೆ?" ಎಂದ ದಾದಯ್ಯ.

"ನನಗೆ ರಾಜಕೀಯ ಗೊತ್ತು ದೊರೆ. ಆದರೆ ಅದು ಯಾರ ಮದುವೆಯಲ್ಲಿದೆಯೆಂದರಂಬುದೇ ತಿಳಿಯದಾಗಿದೆ. ಈಗಾಗಲೇ ಆದ ನನ್ನ ಮದುವೆಯಲ್ಲಿತ್ತೋ? ಅಥವಾ ಇನ್ನು ಮುಂದಾಗುವ ಮದುವೆಗಳಲ್ಲಿದೆಯೊ?" ಎಂದಳು.

"ಯಾಕೆ? ನನಗೆ ಇನ್ನೂ ಎಷ್ಟು ಮದುವೆ ಮಾಡಿಸಬೇಕೆಂದಿರುವಿ? ನಿನ್ನೊಂದಿಗಂತೂ ಆಗಿ ಹೋದ ವಿಷಯ" ಎಂದ ನಾಯಕ.

ಹೊನ್ನಾಯಿ ಸ್ವಲ್ಪ ಚಿಂತೆಯಲ್ಲಿಯೇ ಹೇಳಿದಳು.

"ನಾನು ಮೊನ್ನೆ ತವರಿಗೆ ಹೋದಾಗ ಕೆಲವು ಸಮಾಚಾರ ಕೇಳಿದ್ದೆ. ನಿಮಗೂ ತಿಳಿದಿರಬಹುದು."

"ಇಲ್ಲವಲ್ಲ? ಏನದು?" ಎಂದು ಚಕಿತನಾಗಿ ಕೇಳಿದ ದಾದಯ್ಯನಾಯಕ.

"ಚಿತ್ರದುರ್ಗದ ಅರಮನೆಯ ಹೆಂಗಸರಲ್ಲಿ ಕೇಳಿದ ಸಮಾಚಾರದ ಪ್ರಕಾರ ಬಿಳಿಚೋಡಿನ ಪಾಳೇಗಾರ ತನ್ನ ಮಗಳು ಹನುಮಾನಾಗತಿಯನ್ನು ನಿಮಗೆ ಕೊಡಲು ಯೋಚಿಸಿ ಪುರೋಹಿತರಿಗೆ ಕೆಲಸ ಒಪ್ಪಿಸಿರುವನಂತೆ. ಇಂದೋ ನಾಳೆಯೋ ಅವರು ನಿಮ್ಮ ಕಡೆಗೆ ಬರಬಹುದು. ತಂದೆಯವರು ಇನ್ನೊಂದು ಸಮಾಚಾರ ಹೇಳಿದರು." ಎಂದಳು.

"ಅದೇನು?" ಎಂದ ನಾಯಕ ಇನ್ನಷ್ಟು ಕುತೂಹಲದಿಂದ.

"ಗುಡೇಕೋಟದ ಪಾಳೇಗಾರರು ತಮ್ಮ ಮಗಳು ಭರಮಾನಾಗತಿಯನ್ನು ನಿಮಗೆ ಕೊಟ್ಟು ಸ್ನೇಹ ಬೆಳೆಸಬೇಕೆಂದು ನಿರ್ಧರಿಸಿದ್ದಾರೆಂದು ನಮ್ಮ ತಂದೆಯವರಿಗೆ ಬಂದ ವರದಿ. ಅದು ಸಾಲದೆಂಬಂತೆ ನೀವೀಗ ಜರಮಾಲಿಯ ಸಮಾಚಾರ ಹೇಳುತ್ತಿದ್ದೀರಿ" ಎಂದು ಉಸುರ್ಗರೆದಳು.

ದಾದಯ್ಯ ನಾಯಕನಿಗೆ ಒಂದು ಕ್ಷಣ ಹೆಮ್ಮೆಯೆನಿಸಿತಾದರೂ, ತಮಾಷೆಯೂ ಅನಿಸಿ ನಸುನಕ್ಕ.

"ಸರಿ. ನೀನಲ್ಲದೆ ಮೂರು ಹುಡುಗಿಯರಾದಂತಾಯಿತು. ಆದರೆ ನಿಮ್ಮ ತಂದೆ ಏನೆಂದರೆಂಬುದನ್ನೇ ಹೇಳಲಿಲ್ಲವಲ್ಲ ನಾಯಕಿ?" ಎಂದ.

"ಅವರೇನೂ ವಿಶೇಷ ಹೇಳಲಿಲ್ಲ. ಈ ಕನ್ಯಾಪಿತೃಗಳ ಪಾಳೆಯಗಳಿಗೆಲ್ಲ ನೀವು ಆಗಾಗ ಹೋಗುತ್ತಿರುವದು ಸಮಾಚಾರವೆಲ್ಲ ಅವರಿಗೆ ತಿಳಿದಂತಿದೆ. ಬಹುಶಃ ನನ್ನ ಭವಿಷ್ಯದ ಬಗ್ಗೆ ಚಿಂತೆಯಾಯಿತೇನೊ? 'ನಿನಗೊಂದು ಗಂಡುಮಗುವಾಗಿದ್ದರೆ ಚಿಂತೆ ಇರಲಿಲ್ಲ ಮಗಳೇ' ಎಂದರು" ಎಂದಳು ಹೊನ್ನಾಯಿ ನಾಯಕಿ.

ದಾದಯ್ಯ ನಾಯಕ ವಿಚಲಿತನಾಗಿ ಹೇಳಿದ.

"ನಾನು ಗುಡೇಕೋಟೆ, ಜರಮಾಲಿ, ಬಿಳಿಚೋಡುಗಳಿಗೆ ಹೋಗುತ್ತಿರುವದು ನಿಜವಾದರೂ ನಾನು ನೋಡಿದುದು ಜರಮಾಲಿಯ ಹುಡುಗಿಯನ್ನು ಮಾತ್ರ. ಉಳಿದವರ ಸಮಾಚಾರ ನನಗೇನೂ ತಿಳಿದಿಲ್ಲ. ಅಂತೂ ನಿಮ್ಮಪ್ಪ ನನ್ನ ಚಲನವಲನಗಳ

ಮೇಲೆ ಬಹಳ ಕಣ್ಣಿಟ್ಟಿರುವಂತಿದೆ ನಾಯಕಿ?" ಹೊನ್ನಾಯಿಗೆ ಚುರುಕು ತಾಗಿದರೂ ಅಳುಕಲಿಲ್ಲ.

"ಹೆಣ್ಣು ಕೊಟ್ಟವರು ಅಷ್ಟೂ ಲಕ್ಷ್ಯವಿಡಬಾರದೆ?" ಎಂದಳು.

"ಇದರಲ್ಲಿ ಮಗಳ ಮಮತೆಗಿಂತ ಹೆಚ್ಚು ಪ್ರಬಲವಾದ ರಾಜಕೀಯವಂತೂ ಇರಲಿಕ್ಕಿಲ್ಲವಲ್ಲ" ಎಂದ ನಾಯಕ ಸಂಶಯದಿಂದ. ಹೊನ್ನಾಯಿ ಏನೋ ಯೋಚಿಸಿದಂತೆ ಮಾಡಿ,

"ಪ್ರೇಮ, ಮಮತೆ, ರಾಜಕೀಯ, ಇವನ್ನು ನಮ್ಮನಿಮ್ಮಂಥವರ ಬಾಳಿನಲ್ಲಿ ತೊಡಕಾಗದಂತೆ ಇಡಲಾದೀತೆ?" ಎಂದಳು ಚಾಣಾಕ್ಷೆ ಹೊನ್ನಾಯಿ.

"ಯಾಕಾಗಬಾರದು? ನಾಯಕಿ? ನೀನೇನು ಮುದುಕಿಯಾದೆಯಾ?... ಮದುವೆಯಾದ ಎರಡೇ ವರ್ಷಗಳಲ್ಲಿ ಇಂಥ ವೈರಾಗ್ಯ ಬರಬೇಕೆ? ನನಗೆ ಮಹತ್ವಾಕಾಂಕ್ಷೆಯ ಉಪದೇಶ ಮಾಡಿದಾಕೆ ನೀನು. ನೀನೇ ಹೀಗೆ ನಿನ್ನ ತರುವಾಯ ಬರುವ ಹೆಣ್ಣಿಗೆ ಹೆದರಬೇಕೆ? ಪ್ರೇಮದಲ್ಲಿ ನಂಬಿಕೆ ಬೇಡವೆ? ನ್ಯಾಯ ದೊರಕಿಸಲು ನಾನಿಲ್ಲವೆ?" ಎಂದ ಕಳಕಳಿಯಿಂದ ನಾಯಕ.

"ಹೆದರುವ ಪ್ರಶ್ನೆಯಲ್ಲ ದೊರೆ. ಹಂಚಿಕೊಳ್ಳುವ ಪ್ರಶ್ನೆ. ಅದು ಪ್ರೇಮದಲ್ಲಿಯೂ ದುಸ್ಸಹ. ರಾಜಕೀಯದಲ್ಲಿಯೂ ಕಷ್ಟಕರವಾದುದು." ಎಂದಳು ಹೊನ್ನಾಯಿ. ದಾದಯ್ಯನಾಯಕ ಬಗೆಹರಿಯದ ವಾದದಲ್ಲಿ ಸಿಲುಕಿದೆನೆಂದುಕೊಂಡ. ಹೊನ್ನಾಯಿಯನ್ನು ಸಂತೈಸುವಂತೆ ತಲೆನೇವರಿಸುತ್ತ,

"ಅಂತೂ ಈ ವಿಚಾರವಾಗಿ ಆಗಲೇ ಸಾಕಷ್ಟು ತಲೆಕಾಯಿಸಿಕೊಂಡಿರುವಿಯೆಂದಾಯಿತು.. ನಡೆ ನಡೆ... ಹೆಂಗಸರಿಗೆ ಇಷ್ಟು ದೀರ್ಘಯೋಚನೆ ಹಿತಕರವಲ್ಲ" ಎಂದು ವಿರಮಿಸಿದ.

× × ×

ಚಿತ್ರದುರ್ಗದಲ್ಲಿ ಘಟನೆಗಳು ವೇಗದಿಂದ ಚಲಿಸತೊಡಗಿದ್ದವು. ಹುಚ್ಚಂಗಿದುರ್ಗ ಬಲಗೊಂಡ ನಂತರ ಹರಪುರಹಳ್ಳಿಯ ದಾದಯ್ಯನ ಪ್ರಭಾವ ವ್ಯಾಪಕವಾಗಿ ಹಬ್ಬತೊಡಗಿತ್ತು. ಚಿತ್ರದುರ್ಗದ ದೊರೆಗಳನ್ನೇ ಉಳಿಸಿದವನೆಂಬ ಕೀರ್ತಿಬಂದಿತ್ತಾದರೂ ಅಪ್ರತ್ಯಕ್ಷವಾಗಿ ಅದು ಚಿತ್ರದುರ್ಗದ ದೊರೆಗಳ ತೇಜೋಭಂಗವಾದಂತಾಗಿತ್ತು. ಹಿಂದೊಮ್ಮೆ ಇತರ ಪಾಳೇಗಾರರೊಂದಿಗೆ ಸೇರಿ ವಿಜಯನಗರದ ಸೈನ್ಯಬಲದೊಡನೆ ತಿಮ್ಮಣ್ಣನಾಯಕನ ಮೇಲೆ ದಾಳಿ ಮಾಡುವಲ್ಲಿ ಹರಪುರಹಳ್ಳಿಯ ನಾಯಕರ ಮುಂದಾಳ್ತನವೂ ಇತ್ತೆಂಬುದನ್ನು ಚಿತ್ರದುರ್ಗದ ಪಾಳೇಗಾರರು ಮರೆತಿರಲಿಲ್ಲ. ಆದರೂ ತತ್ಕಾಲದ ಸಹಾಯಕ್ಕೆ ಪ್ರತಿಯಾಗಿ ಮಗಳನ್ನು ಕೊಟ್ಟು ಬಂಧುತ್ವ ಬೆಳೆಸಿ ತಮ್ಮ ಘನತೆಗೆ ತಾವೇ ಗೌರವಿಸಿಕೊಂಡಂತೆ ಮಾಡಿದ್ದರು. ಉಪಾಯದಿಂದ ದಾದಯ್ಯ ನಾಯಕ ಹುಚ್ಚಂಗಿದುರ್ಗವನ್ನು ತಮ್ಮಿಂದ ಪಡೆದನಲ್ಲ ಎಂಬ ಅಳುಕೂ ಇತ್ತು. ಈ ನಡುವೆ ದಾದಯ್ಯ ನಾಯಕನ ಸುತ್ತ ಸಣ್ಣ ಪುಟ್ಟ ಪಾಳೆಯಗಾರರು ನಾ ಮುಂದೆ ತಾ ಮುಂದು ಎಂದು ನೆರೆಯುವದೂ, ಆತನ ಸ್ನೇಹಕ್ಕಾಗಿ ಹಾತೊರೆಯುವದೂ ಚಿತ್ರದುರ್ಗದ ಪಾಳೇಗಾರರ ಪ್ರತಿಷ್ಠೆಗೆ ಅಷ್ಟಾಗಿ ಹಿಡಿಸಿರಲಿಲ್ಲ. ದಾದಯ್ಯನ ಚಟುವಟಿಕೆಗಳ ಮೇಲೆ ನಿಗಾ ಇಡಲು ತಮ್ಮ ಜನರನ್ನು ಬಿಟ್ಟಿದ್ದರು. ಚಿತ್ರದುರ್ಗಕ್ಕೆ ತೀರ ಹತ್ತಿರದ ಬಿಳಿಚೋಡು ಪಾಳೇಗಾರನೇ ತನ್ನ ಮಗಳನ್ನು ದಾದಯ್ಯನಿಗೆ ಕೊಡಲಿದ್ದಾನೆಂಬ ವಾರ್ತೆಯಿಂದ ಚಿಕ್ಕಣ್ಣನಾಯಕನ ಪರಿವಾರದಲ್ಲಿ ಕಳವಳವುಂಟಾಗಿತ್ತು. ಗುಡೇಕೋಟಾ, ಜರಮಾಲಿಯ ಸಮಾಚಾರ ತಿಳಿದ ಮೇಲಂತೂ ಚಿತ್ರದುರ್ಗದ ನಾಯಕರ ಸಂಶಯ ದೃಢಪಟ್ಟಿತು. ದಾದಯ್ಯನಾಯಕ ಬಲ ಬೆಳೆಸಿಕೊಂಡು ತಮ್ಮ ಪ್ರತಿಸ್ಪರ್ಧಿಯಾಗಲಿದ್ದಾನೆಂದು ಬಗೆದರು. ದಾದಯ್ಯ ಅಳಿಯನಾದರೂ, ತಮಗಿಂತ ಹೆಚ್ಚಿನ ಪ್ರತಾಪಶಾಲಿ ಅಳಿಯನಾಗಬೇಕೆಂದು ಬಹುಶಃ ಅವರು ಬಯಸಿರಲಿಲ್ಲ. ದಾದಯ್ಯ ಎಷ್ಟೇ ಶೂರನಿದ್ದರೂ ಅವನು ಎಂದಿಗೂ ಸಣ್ಣ ಪಾಳೆಯಗಾರ-ಚಿತ್ರದುರ್ಗದ ಸಮಾನನಲ್ಲವೆಂಬ ಗ್ರಹಿಕೆ. ಸಮಾನನಾಗಬಾರದೆಂಬುದೇ ಆಶಯ.

ಹೊನ್ನಾಯಿ ನಾಯಕಿ ತವರಿಗೆ ಹೋದಾಗಲೇ ಚಿತ್ರದುರ್ಗದ ಅರಮನೆಯಲ್ಲಿ ಬಹಳ ತುರ್ತಿನ ಚರ್ಚೆಯಾಗಿತ್ತು. ದಾದಯ್ಯ ನಾಯಕನ ಬೆಳೆಯುತ್ತಿರುವ ಪ್ರಾಬಲ್ಯವೇ ಮುಖ್ಯ ವಿಷಯವಾಗಿದ್ದರೂ ಹೊನ್ನಾಯಿ ನಾಯಕಿಗೆ ಇಂಥ ಮದುವೆಗಳಿಂದ ಒದಗಬಹುದಾದ ಅನಾನುಕೂಲದ ಬಗ್ಗೆಯೂ ವಿಚಾರ ವಿನಿಮಯ ನಡೆದಿತ್ತು. ದಾದಯ್ಯನ ಬಲವರ್ಧನೆಗೆ ಕಾರಣವಾದ ಹುಚ್ಚಂಗಿದುರ್ಗವನ್ನೇ ವಾಪಸು ಪಡೆದು ಅವನನ್ನು ಹತೋಟಿಯಲ್ಲಿ ಇಡಬೇಕೆಂಬ ಸೂಚನೆಯೂ ಬಂದಿತ್ತು. ಆದರೆ ಹಾಗೆ ಮಾಡಲು ಬಲವಾದ ಕಾರಣಗಳು ಸಿಕ್ಕಿರಲಿಲ್ಲ. ಇಷ್ಟೆಲ್ಲ ಸಮಾಚಾರ ಹೊನ್ನಾಯಿಗೆ ತಿಳಿದಿದ್ದರೂ ದಾದಯ್ಯನ ಮುಂದೆ ಹೇಳಬೇಕಾದ್ದಷ್ಟನ್ನೇ ಹೇಳಿದ್ದಳು.

ಹುಚ್ಚಂಗಿದುರ್ಗದ ಅರಮನೆಯಲ್ಲಿ ನಾಲ್ಕು ದಿನಗಳಿಂದ ಶಾಂತಿ ಇರಲಿಲ್ಲ. ಹೊನ್ನಾಯಿ ಅಷ್ಟಕ್ಕಷ್ಟೇ ಮಾತಾಡಿ ದೂರದೂರ ಇದ್ದಳು. ದಾದಯ್ಯ ನಾಯಕನಿಗೆ ನೆಮ್ಮದಿ ಇರಲಿಲ್ಲ. ಅವನ ತಲೆಯಲ್ಲಿ ನೂರೆಂಟು ವಿಚಾರಗಳ ತಳಮಳ. "ಪಾಳೇಗಾರರಲ್ಲಿ ಬಹುಪತ್ನೀತ್ವವೇನೂ ಹೊಸದಲ್ಲ? ಅದಕ್ಕೆ ಇಷ್ಟು ಚರ್ಚೆಯಾಗಬೇಕೆ? ನಮ್ಮ ಬೀಗರಿಗೆ ನಮ್ಮ ಮೇಲೆ ಇಷ್ಟು ನಿಗಾ ಏಕೆ" ಎಂದೆಲ್ಲ ಯೋಚಿಸತೊಡಗಿದ. ಹರಪುರಹಳ್ಳಿಯ ಗಡಿಯನ್ನು ಪ್ರವೇಶಿಸುವವರನ್ನು ಚಿತ್ರದುರ್ಗದ ಆಳುಗಳು ತಡೆದು ಪ್ರಶ್ನಿಸುತ್ತಿದ್ದಾರೆಂದು ವರದಿಗಳು ಬರತೊಡಗಿದವು. ಬಿಳಿಚೋಡು ಪಾಳೇಗಾರನ ಪತ್ರದೊಂದಿಗೆ ಹೊರಟ ಪುರೋಹಿತನನ್ನು ಚಿಕ್ಕಣ್ಣ ನಾಯಕನ ಜನರು ಹಿಡಿದು ಒಯ್ದಿರುವರೆಂದು ತಿಳಿಯಿತು. ಚಿತ್ರದುರ್ಗದವರು ನಿಷ್ಕಾರಣವಾಗಿ ಪ್ರಕೋಪಕಾರಕ ಕೃತಿಗಳನ್ನೆಸಗುತ್ತಿದ್ದಾರೆಂದು ದಾದಯ್ಯ ಕಿಡಿಕಿಡಿಯಾದ. ಜರಮಾಲಿ ನಾಯಕರಿಗೆ ಜಂಪಾನಾಗತಿಯ ಬಗ್ಗೆ ಏನು ಉತ್ತರ ಕೊಡಬೇಕೆಂದು ದಾದಯ್ಯನಾಯಕ ಆಲೋಚಿಸಿ ನಿರ್ಧಾರಕ್ಕೆ ಬರುವದರೊಳಗಾಗಿ ಚಿಕ್ಕಣ್ಣನಾಯಕನಿಂದ ದಾದಯ್ಯನಿಗೆ ಪತ್ರ ಬಂದಿತು. ಪತ್ರ ತಂದ ಚಿತ್ರದುರ್ಗದ ಸವಾರನನ್ನು ಹೊರಗಿರಲು ಹೇಳಿ ದಾದಯ್ಯ ದಳವಾಯಿಯನ್ನು ಕರೆಸಿದ. ಪತ್ರವನ್ನು ಓದಿಸಿದ.

"ಮಹಾನಾಯಕಾಚಾರ್ಯ ಮುಂತಾದ ಬಿರುದಾಂಕಿತರಾದ ಚಿತ್ರದುರ್ಗದ ಹಿರಿಯ ಪಾಳೆಯಗಾರರ ಬಳಗದಲ್ಲಿ ಸೇರಿದ ನೀವು ನಮ್ಮ ಸಮಾನರಲ್ಲದ ಸಣ್ಣ ಪಾಳೇಗಾರರ ಒಡನಾಟವನ್ನು ಮತ್ತು ಅವರ ಬಂಧುತ್ವಕ್ಕೆ ಮನಸ್ಸುಕೊಟ್ಟಿರುವಿರೆಂದು ಕೇಳಿ ನಮಗೆ ವಿಷಾದವಾಗಿದೆ. ಇದು ವೈಯಕ್ತಿಕವಾಗಿಯೂ, ರಾಜಕೀಯವಾಗಿಯೂ ಯಾರಿಗೂ ಶ್ರೇಯಸ್ಕರವಲ್ಲವೆಂದು ನಮ್ಮ ಅಭಿಮತ. ನಮ್ಮದೇ ಒಂದಂಶದಂತಿದ್ದ ಹೊನ್ನಾಯಿನಾಯಕಿಯ ಭವಿತವ್ಯದ ಘನತೆಗೆ ಕಾರಣರಾಗಬೇಕಾದವರು ನೀವೆಂಬ ಅಭಿಮಾನ ಹೀಗೆ ಬರೆಯಲು ಪ್ರಚೋದಿಸಿದೆ. ಇಂದು ನಿಮ್ಮ ಬಲ ಮತ್ತು ಪ್ರತಿಷ್ಠೆಗಳ ಗುರುತಾದ ಈ ಹುಚ್ಚಂಗಿದುರ್ಗದ ನಾಡನ್ನೂ, ನನ್ನ ಮಗಳನ್ನೂ ನೀವು ತಮ್ಮ ಸ್ವತ್ತೆಂದು ರಕ್ಷಿಸುವ ಮಾತಾಡಿದ್ದಿರೆಂಬುದನ್ನು ಈ ಸಮಯದಲ್ಲಿ ಸ್ಮರಣೆಗೆ ತರಬಯಸುವೆ.." ದಳವಾಯಿ ಪತ್ರ ಓದುತ್ತಿದ್ದಂತೆ ದಾದಯ್ಯನಾಯಕನ ಕಣ್ಣು ಕೆಂಪಾದವು. ಸಿಟ್ಟಿನಿಂದ ತುಟಿ ಅದುರತೊಡಗಿದವು.

"ಅರ್ಥವಾಯಿತೇ ದಳವಾಯಿಗಳೇ? ಇವರ ಮಗಳನ್ನು ಮಾಡಿಕೊಂಡ ಕೂಡಲೇ ನಮ್ಮ ಸ್ವಾತಂತ್ರ್ಯವನ್ನೇ ಕಳೆದುಕೊಂಡೆವೆಂದು ತಿಳಿದರೋ ಏನೊ" ಎಂದ ದಾದಯ್ಯ.

"ಅಪ್ರತ್ಯಕ್ಷವಾಗಿ ಹುಚ್ಚಂಗೀದುರ್ಗವನ್ನೂ ತಾವು ಕೊಟ್ಟ ಪ್ರದೇಶವನ್ನೂ-ಇನ್ನೂ ತಮ್ಮ ಸ್ವತ್ತೆಂದು ಕೇಳುವಂತಿದೆ ಪ್ರಭು!" ಎಂದ ದಳವಾಯಿ. ದಾದಯ್ಯನಾಯಕನ ಕೈಮುಷ್ಟಿ ಬಿಗಿಯಾದವು. ಹೇಳಿದ.

"ಸುಮ್ಮನೇ ಕೇಳಿದರೆ ಕೊಡುತ್ತಿದ್ದೆವಲ್ಲ? ಇಷ್ಟೆಲ್ಲ ಸುತ್ತು ಬಳಸು, ಬೆದರಿಕೆ ಏಕೆ?.. ಆಗಲಿ ಬರೆಯಿಸಿರಿ ದಳವಾಯಿಗಳೇ. ಅವರಿಗೆ ಸರಿಯಾದ ಉತ್ತರ ಕೊಡೋಣ. ಅವರ ಪತ್ರ ತಂದವನ ಕೈಯಲ್ಲಿಯೇ ಕೊಟ್ಟು ಕಳಿಸೋಣ. ದಿನದಿನದ ಕಿರುಕುಳಕ್ಕಿಂತ ಒಮ್ಮೆ ಖಂಡತುಂಡವಾದರೂ ಆಗಿ ಹೋಗಲಿ"

ದಳವಾಯಿ ಲೇಖನ ಸಾಮಗ್ರಿಗಳೊಂದಿಗೆ ಕರಣಿಕನನ್ನು ಕರೆಸಿದ. ದಾದಯ್ಯ ಹೇಳತೊಡಗಿದ.

"ಅವರ ಬಿರುದುಬಾವಲಿಗಳನ್ನೆಲ್ಲ ಬರೆದು ನಮ್ಮ ಔಪಚಾರಿಕ ನಮಸ್ಕಾರಗಳನ್ನೂ ಬರೆಯಿರಿ" ಎಂದ. ಕರಣಿಕ ಬರೆಯತೊಡಗಿದ.

"ನಿಮ್ಮ ಪತ್ರದಿಂದ ನಮಗೆ ಆಶ್ಚರ್ಯವೂ ಆಯಿತು ನಗುವೂ ಬಂದಿತು. ನಾನೊಮ್ಮೆ ಹೇಳಿದ್ದೆ ನೆನಪಿದ್ದೀತು. ಪಾಳೆಯಗಾರರೆಲ್ಲ ಮುಂಡರು ತುಡುಗರು ಎಂದು. ಮುಂಡತನದಲ್ಲಿ ಶ್ರೇಷ್ಠತೆ ಕನಿಷ್ಠತೆಯೇನು ಬಂತು? ಆದಕಾರಣ ನೀವು ದೊಡ್ಡವರು ನಾನು ಅಥವಾ ಜರಮಾಲಿ, ಬಿಳಿಚೋಡದವರು ಸಣ್ಣವರು ಎಂಬ ಮಾತಿಗೆ ಅರ್ಥವಿಲ್ಲ. ನಿಮ್ಮ ಪತ್ರದಲ್ಲಿ ಹಲವು ತಪ್ಪುಗಳನ್ನು ಕಂಡೆ. ನಾನಾಗಿ ನಿಮ್ಮ ಬಳಗದಲ್ಲಿ ಸೇರಲು ಬಂಧುತ್ವವನ್ನು ಯಾಚಿಸಿ ಬಂದಿರಲಿಲ್ಲ; ನೀವಾಗಿ ಕೃತಜ್ಞತೆಯಿಂದ ನನಗೆ ನಿಮ್ಮ ಮಗಳನ್ನು ಯಾವ ಭವಿತವ್ಯದ ಕರಾರೂ ಇಲ್ಲದೆ ನನಗೆ ಕೊಟ್ಟು ಬಳಗದಲ್ಲಿ ಸೇರಿಸಿಕೊಂಡಿರಿ. ನೀವು ಕೊಟ್ಟೆವೆಂದು ಹೇಳುವ ಹುಚ್ಚಂಗಿದುರ್ಗ ಮತ್ತು ಆ ಪ್ರದೇಶ ನನ್ನ ಕಡೆಗೆ ಇಲ್ಲದಾಗಲ್ಲವೇ ನಾನು ನಿಮ್ಮ ಜೀವವನ್ನು ಉಳಿಸುವ ಬಲ ಮತ್ತು ಪ್ರತಾಪವನ್ನು ತೋರಿದ್ದು? ಮರೆತಿರೇನು? ದುರ್ಗವೂ ಮತ್ತು ಹೊನ್ನಾಯಿಯೂ ಈಗ ನನ್ನ ಸ್ವತ್ತು. ಹಾಗೆಂದು ನೀವೇ ಹೇಳಿ ಅನುಭವಿಸಲು ಒಪ್ಪಿಸಿದ್ದೀರಿ. ಅನುಭವಿಸುತ್ತಿದ್ದೇನೆ. ಇಂಥ ವಿಚಾರಗಳಲ್ಲಿ ಮರುವಿಚಾರ ಸಾಧುವೂ ಅಲ್ಲ. ನನ್ನಲ್ಲಿಯಂತೂ ಅದಕ್ಕೆ ಅವಕಾಶವೂ ಇಲ್ಲ. ಇನ್ನು ಹೊಸ ಸಂಬಂಧಗಳ ವಿಚಾರ. ಯಾವ ಪಾಳೆಯಗಾರರೂ ಮಾಡಲಾರದುದನ್ನು ನಾನೇನು ಮಾಡಹೊರಟಿಲ್ಲ. ವೈಯಕ್ತಿಕ ಸಂಬಂಧದಲ್ಲಿ ರಾಜಕೀಯ ತೊಡಗಿಸಿ

ಕೊಳ್ಳುವದು ಹಿತಕರವಲ್ಲವೆಂಬುದು ನನ್ನ ಅಭಿಮತ-ಇತಿ......

ಪತ್ರವನ್ನು ಸುಭುಳಿಮಾಡಿ, ಮೊಹರ್‌ಮಾಡಿ, ಚಿತ್ರದುರ್ಗದಿಂದ ಬಂದ ಸವಾರನಿಗೆ ಒಪ್ಪಿಸಿದರು. ಅರಮನೆಯ ಒಳಗಡೆ ಹೋಗಿ ಊಟ ಮಾಡಿ ಮರಳಿ ಹೋಗಲು ಆಜ್ಞಾಪಿಸಿದರು. ಸವಾರ, ಹೆಂಗಸರ ವಿಭಾಗದಲ್ಲಿ ಹೋಗಿ ಹೊನ್ನಾಯಿ ನಾಯಕಿಯನ್ನು ಕಂಡ. ಊಟ ಮಾಡಿ ಚಿತ್ರದುರ್ಗಕ್ಕೆ ಮರಳಿದ.

ದಾದಯ್ಯನಾಯಕನ ಪತ್ರ ಚಿತ್ರದುರ್ಗದಲ್ಲಿ ಗೊಂದಲವನ್ನುಂಟುಮಾಡಿತು. ಚಿಕ್ಕಣ್ಣನಾಯಕ ಕ್ರೋಧತಪ್ತನಾದ. ದಳವಾಯಿಗಳು ದಾದಯ್ಯನ ಔದ್ಧತ್ಯವನ್ನು ಟೀಕಿಸಿದರು. ಇನ್ನಷ್ಟು ಹದಮೀರುವ ಮುಂಚೆಯೇ ಅವನನ್ನು ಹಿಡಿತದಲ್ಲಿ ತರುವುದು ವಿಹಿತವೆಂದು ಅಭಿಪ್ರಾಯಪಟ್ಟರು. ಒಂದು ತಿಂಗಳೊಳಗಾಗಿ ಹುಚ್ಚಂಗಿದುರ್ಗವನ್ನು ಚಿತ್ರದುರ್ಗದ ಸೈನ್ಯ ವಶಪಡಿಸಿಕೊಳ್ಳಬೇಕೆಂದು ತೀರ್ಮಾನವಾಗಿ ಯೋಜನೆ ಹಾಕಲಾಯಿತು. ಸಿದ್ಧತೆಗಳು ನಡೆದವು. ಗಡಿಯೊಳಗೆ ಅಲ್ಲಲ್ಲಿ ಗೂಢಚಾರರು ನುಗ್ಗಿದರು. ದಾದಯ್ಯನಾಯಕನಿಗೂ ಈ ಸಮಾಚಾರ ತಲುಪಿತು. ಆತನೂ ತನ್ನ ಪತ್ರದ ಪರಿಣಾಮ ಈ ರೀತಿಯಾಗಬಹುದೆಂದೇ ನಿರೀಕ್ಷಿಸಿದ್ದ. ಚಿತ್ರದುರ್ಗದವರಿಗೆ ತಾವು ದೊಡ್ಡವರೆಂಬ ಅಭಿಮಾನವಿದ್ದುದೆಯೆಂಬುದನ್ನು ಹೊನ್ನಾಯಿ ನಾಯಕಿಯ ಪ್ರತಿಮಾತಿನಲ್ಲಿ ಕಂಡಿದ್ದ. ಈಗ ಆ ಅಭಿಮಾನ ರಕ್ಷಣೆಗಾಗಿಯಾದರೂ ಹೋರಾಟ ಅನಿವಾರ್ಯವೆಂದು ಊಹಿಸಿದ್ದ. ಹುಚ್ಚಂಗಿ ದುರ್ಗದಲ್ಲಿ ಆಹಾರ ಸಂಗ್ರಹ, ನೀರಿನ ವ್ಯವಸ್ಥೆ ಮದ್ದು ಗುಂಡು, ಶಸ್ತ್ರಾಸ್ತ್ರಗಳ ಶೇಖರಣೆಯೆಲ್ಲ ಮಾಡಿ ಮತ್ತಷ್ಟು ಕಾವಲನ್ನು ಭದ್ರಪಡಿಸಿ ಒಳಗೆ ಆಯ್ದ ಯೋಧರನ್ನೂ-ಸಾಕಷ್ಟು ಬೆಂಗಾವಲಿನ ಸೈನಿಕರನ್ನೂ ಇಟ್ಟುಕೊಂಡು ಮಾವನ ಸೈನ್ಯದ ಬರವಿಗಾಗಿ ದಾರಿ ಕಾಯುತ್ತ ಕುಳಿತ. ಈ ನಡುವೆ ಗುಡೇಕೋಟಾ, ಜರಮಾಲಿ, ಬಿಳಿಚೋಡಿನ ಪಾಳೇಗಾರರಿಗೆ ಸಂದೇಶ ಕಳಿಸಿದ. ಸಹಾಯದ ಆಶ್ವಾಸನೆಗಳೂ ಬಂದವು. ಮತ್ತಷ್ಟು ಸೈನ್ಯವನ್ನು-ಹರಪುರ ಹಳ್ಳಿಯ ಕೋಟೆಯಲ್ಲಿ ಇಟ್ಟು ಶತ್ರುಗಳನ್ನು ಹಿಂದಿನಿಂದ ಮುತ್ತುವ ವ್ಯವಸ್ಥೆ ಮಾಡಿದ.

ಮನೆಯಲ್ಲಿ ವಿಚಿತ್ರಶಾಂತಿಯಾವರಿಸಿತ್ತು. ಹೊನ್ನಾಯಿ ನಾಯಕಿ ಏನೂ ಉದ್ವೇಗವಿಲ್ಲದ ರೀತಿಯಲ್ಲಿ ನಡೆದುಕೊಳ್ಳತೊಡಗಿದ್ದಳು. ದಾದಯ್ಯನಾಯಕನೂ ಆಕೆಗೆ ತನ್ನ ನಿಲುವನ್ನು ಸ್ಪಷ್ಟಪಡಿಸಿದ್ದ ತನ್ನ ಮತ್ತು ಆಕೆಯ ನಡುವಿನ ಪ್ರೀತಿಗೆ ಚ್ಯುತಿಯಿಲ್ಲವೆಂಬುದನ್ನು ತಿಳಿಸಿದ್ದ. ಅದನ್ನು ಮನಗಾಣಿಸಲು ಆಕೆಯನ್ನು ಜೊತೆಯಲ್ಲಿಯೇ ಕರೆದುಕೊಂಡು ಕೋಟೆಯ ಒಳಗೆ, ಹೊರಗೆ, ಆಯಕಟ್ಟಿನ ಸ್ಥಳಗಳಲ್ಲೆಲ್ಲ ತಿರುಗಾಡಿ ತಾನು ಮಾಡಿಕೊಂಡ ಹೋರಾಟದ ಸಿದ್ಧತೆಗಳನ್ನು ತೋರಿಸಿ ವಿವರಿಸಿದ್ದ. ಅವಳೂ ವಿಶ್ವಾಸವನ್ನು ವ್ಯಕ್ತಪಡಿಸಿದ್ದಳು. ಒಂದೆಡೆಗೆ, ಪತಿ, ಇನ್ನೊಂದೆಡೆಗೆ ತಂದೆ. ಇವರಿಬ್ಬರ ವೈರದಲ್ಲಿ ಅವಳು ತನ್ನ ಅಸಹಾಯಕತೆಗಾಗಿ ಚಡಪಡಿಸುವದು ಇತರರಿಗೆ ಕಂಡಿತು. ಇದೆಲ್ಲ ದಾದಯ್ಯನಾಯಕನ ಸೋಲು ಶರಣಾಗತಿಯಲ್ಲಿ ಕೊನೆಗೊಂಡು ನಮ್ರನಾದ ದಾದಯ್ಯನೊಂದಿಗೆ ತನ್ನ ಸಂಸಾರ ಸಾಗುವದೆಂದು ಹೊನ್ನಾಯಿ ಎಣಿಸಿದ್ದಳೇನೋ!

ಚಿತ್ರದುರ್ಗದ ಸೈನ್ಯ ಹುಚ್ಚಂಗಿದುರ್ಗವನ್ನು ಮುತ್ತಿತು. ಭದ್ರವಾದ ಮುತ್ತಿಗೆ ಎರಡು ವಾರ ಯಾರೊ ಕದಲಲಿಲ್ಲ. ಶತ್ರುಗಳು ಕೋಟೆಗೋಡೆಯ ಹತ್ತಿರ ಬರದಂತೆ ದಾದಯ್ಯ ನಾಯಕನ ಸೈನಿಕರು ಎಚ್ಚರಾಗಿದ್ದರು. ಗುಡ್ಡದ ಒಂದು ಭಾಗವಂತೂ ಕೆರಗೆ ಹೊಂದಿದ ಕಡಿದಾದ ಕಲ್ಲುಬಂಡೆಯಿಂದ ನೈಸರ್ಗಿಕ ಗೋಡೆಯಂತಿತ್ತು. ಹದಿನೈದು ದಿನಗಳ ಮುತ್ತಿಗೆಯಲ್ಲಿ ಚಿತ್ರದುರ್ಗದ ಸೈನ್ಯದಲ್ಲಿ ಬೇಸರ ಆತುರ ಹೆಚ್ಚಿತು. ಹರಪುರಹಳ್ಳಿಯಿಂದ ಸೈನ್ಯ ಹೊರಟ ಸಮಾಚಾರವೂ ಮತ್ತು ಗುಡೇಕೋಟೆ, ಜರಮಾಲೀ ಪಾಳೆಯಗಳ ಸೈನಿಕರ ಚಟುವಟಿಕೆಗಳ ಸುಳಿವೂ ಚಿಕ್ಕಣ್ಣ ನಾಯಕನಿಗೆ ಹತ್ತಿತು. ಬೇಸತ್ತು ಮುತ್ತಿಗೆ ತೆಗೆಯುವರೆಂಬ ಭರವಸೆ ಕೋಟೆಯೊಳಗಿನವರಿಗೆ ಬಂದಿತ್ತು. ಹೊರಗಿನ ಸೈನ್ಯ ಹಿಂದಿನಿಂದ ಬಂದರೆ ಕೋಟೆಯೊಳಗಿನ ಸೈನ್ಯ ಪಟಾತ್ತನೇ ಮೇಲೆ ಬೀಳಬಹುದೆಂಬ ಹೆದರಿಕೆ ಚಿತ್ರದುರ್ಗದವರಿಗಿತ್ತು.

ಈ ಸ್ಥಿತಿಯಲ್ಲಿ ಹದಿನಾರನೆಯ ದಿನ ಬೆಳಗಿನ ಜಾವದಲ್ಲಿ ಕೆಳಕೋಟೆಗೋಡೆಯ ದಕ್ಷಿಣ ಬದಿಯ

ಕಳ್ಳಬಾಗಿಲನ್ನು ಯಾರೋ ತೆರೆದು ಕೋಟೆ ಊದೆ ತೊಡಗಿದರು. ಕೂಡಲೇ ಪಾಳೆಯದ ಸೈನಿಕರು ಬಾಗಿಲು ತೆರೆದವನನ್ನು ಎಳೆದು ದೇಶಕ್ಕೆ ಅರ ಮನೆಯತ್ತ ಎಳೆದೊಯ್ದರು. ತೆರೆದ ಕಳ್ಳಬಾಗಿಲಿನಿಂದ ಚಿತ್ರದುರ್ಗದ ಸೈನಿಕರು ಒಬ್ಬೊಬ್ಬರಾಗಿ ನುಗ್ಗ ಹತ್ತಿದರು. ಅವರಿಗೂ ಒಳಗಿನ ಸೈನಿಕರಿಗೂ ಕೈಗೆ ಕೈಹತ್ತಿತು. ಬಾಗಿಲು ಕಿರಿದಾಗಿದ್ದ ಕಾರಣ ಹೆಚ್ಚು ಸೈನಿಕರು ಒಮ್ಮೆಲೇ ನುಗ್ಗಿ ಬರುವಂತಿರಲಿಲ್ಲ.

ಮರುಕ್ಷಣದಲ್ಲಿ ಬಾಗಿಲು ತೆರೆದ ಅಪರಾಧಿ ಸೈನಿಕ ದಾದಯ್ಯನಾಯಕನ ದಳವಾಯಿಯ ಮುಂದೆ ನಿಂತಿದ್ದ. ನಾಲ್ಕು ಚಬಕದ ಸೆಳೆತದಿಂದ ಬಾಯಿಬಿಟ್ಟ. ಒಂದು ತಿಂಗಳ ಹಿಂದೆ ಚಿತ್ರದುರ್ಗದ ದೊರೆಯಿಂದ ಪತ್ರ ತಂದ ಸವಾರನೇ ತಾನೆಂದೂ, ಊಟ ಮಾಡಲು ಅಂತಃಪುರದೊಳಗೆ ಹೋದಾಗ ಹೊನ್ನಾಯಿ ನಾಯಕಿ ರಾಜಮುದ್ರೆಯನ್ನು ಕೊಟ್ಟಿದ್ದಳೆಂದೂ ಅದರ ಸಹಾಯದಿಂದ ಮೊದಲೇ ಬಂದು ಕೋಟೆಯೊಳಗೆ ಅಡಗಿದ್ದು ಈ ಕೆಲಸ ಮಾಡಿದನೆಂದೂ ಹೇಳಿದ. ಕೂಡಲೇ ದಾದಯ್ಯ ನಾಯಕನೆದುರಿಗೆ ಒಯ್ದು ಮತ್ತೊಮ್ಮೆ ವಿಚಾರಿಸಲಾಯಿತು. ಆ ಸವಾರನನ್ನೂ ಆತ ಗುರುತಿಸಿದ.

ಒಡನೆಯೇ ಕೋಟೆಯ ಮಹಾದ್ವಾರಗಳನ್ನೆಲ್ಲಾ ತೆರೆದು ಸರ್ವಶಕ್ತಿಯೊಂದಿಗೆ ಶತ್ರುಸೈನ್ಯದ ಮೇಲೆ ಎರಗಲು ದಾದಯ್ಯ ದಳವಾಯಿಗೆ ಆಜ್ಞಾಪಿಸಿದ. ಸ್ವತಃ ಚಿಕ್ಕಣ್ಣನಾಯಕನೇ ಎದುರಾದರೂ ತುಂಡರಿಸಿಬಿಡಬೇಕೆಂದು ಕೂಗಿ ಕೂಗಿ ಸೈನಿಕರಿಗೆ ಹೇಳಿದ.

ಹೊನ್ನಾಯಿನಾಯಕಿ ಮಾಡಿದ ದ್ರೋಹದ ಸಂಚು ಬಯಲಾಗಿತ್ತು. ಸೊಂಟದಲ್ಲಿ ನೇತಾಡುವ ಖಡ್ಗವನ್ನು ಹಿರಿದ. ಒಂದು ಕ್ಷಣ ಮನದ ಹೊಯ್ದಾಟದ ಒಳದನಿಯ ಕೂಗು ಕೇಳಿಸಿತು. "ಹೊನ್ನಾಯಿ! ನಾನು ಹತ್ತು ಹುಡುಗಿಯರನ್ನು ಲಗ್ನವಾಗಿದ್ದರೂ ಪ್ರೀತಿಸಿದ್ದು ಮಾತ್ರ ನಿನ್ನನ್ನೇ... ನೀನೇಕೆ ಹೀಗೆ ಮಾಡಿದೆ...ಈಗ ನಾನೇನು ಮಾಡಲಿ? ಒಂದು ಕಡೆಗೆ ನನ್ನ ನಾಡು, ನೆಲ, ಇನ್ನೊಂದು ಕಡೆಗೆ ನೀನು... ಯಾವುದನ್ನು ಆರಿಸಿಕೊಳ್ಳಲಿ? ನಾರಿಯೋ... ಧಾರುಣಿಯೋ?... ನಾರೀ... ಮಾರಿಯಾದಿ"...

ಹುಚ್ಚನಂತೆ ದಾದಯ್ಯನಾಯಕ ಅರಚಿದ "ಹೊನ್ನಾಯೀ! ನಾಯಕೀ" ಅರಮನೆಯೊಳಗಿನಿಂದ ನಾಯಕಿ ಓಡಿಬಂದಳು. ಹಿರಿದ ಖಡ್ಗದ ಕೈಯ್ಯ ನಾಯಕನನ್ನು ಕಂಡಳು. ಬೆಚ್ಚಿದಳು. ಅವನ ಹತ್ತಿರವೇ ನಿಂತಿದ್ದ ಚಿತ್ರದುರ್ಗದ ಸವಾರನ ಗುರುತೂ ಸಿಕ್ಕಿತು. ಅವಳ ಮುಖ ವಿವರ್ಣವಾಯಿತು. "ಅವನೂ ನಿಮ್ಮವನೇ... ನಿಮ್ಮಪ್ಪ ಬಿಟ್ಟಿದ್ದ ಗಂಡು ಗೂಢಚಾರ. ನಿನ್ನ ಸಮಾಚಾರವನ್ನು ನಿಮ್ಮವರಿಗೆ ಮುಟ್ಟಿಸಲು ಕಾದಿದ್ದಾನೆ...ಬಾ! ಯುದ್ಧ ಕೆರಳಿದೆ. ನಮ್ಮ ಸೈನಿಕರು ನುಗ್ಗಿದರು-ನಿಮ್ಮವರೂ ಹೋರಾಡುತ್ತಿದ್ದಾರೆ. ಬಾ! ಗುಡ್ಡದ ತುದಿಯ ಎತ್ತರದಿಂದ ನೋಡೋಣ ಬಾ ನಾಯಕಿ" ಎಂದು ನಾಯಕಿಯ ಕೈಹಿಡಿದು ಎಳೆದುಕೊಂಡು ನಡೆದ,

ಕಡಿದಾದ ಹಾಸುಬಂಡೆಯಿರುವ ಪೆಂಗ್ರಲಿಗೆ ತುಟ್ಟತುದಿಗೆ ಬಂದು ನಿಂತರು. ಕೆಳಗೆ ಸಾವಿರಾರು ಅಡಿಕೆಳಗೆ ಕೆರೆ, ಅದರ ದಂಡೆಯ ಮೇಲೆ ಹೋರಾಟ ನಡೆದಿತ್ತು.

"ಅಲ್ಲಿ ನೋಡು! ನಾಯಕೀ ನಿಮ್ಮವರು... ದೊಡ್ಡವರು...ಎತ್ತರದವರು....ಎತ್ತರದಿಂದ ನೋಡು. ಎನ್ನುತ್ತ ಹೊನ್ನಾಯಿ ನಾಯಕಿಯನ್ನು ಇನ್ನೂ ತುದಿಗೆ ಎಳೆದು ನಿಲ್ಲಿಸಿದ. ಹೊನ್ನಾಯಿಗೆ ತನ್ನ ಅಂತ್ಯ ತಿಳಿದಿತ್ತೆಂಬಂತೆ ಗಂಭೀರಳಾಗಿ ಅವನು ಎಳೆದತ್ತ ಹೋಗಿನಿಂತಳು.

"ನೋಡು ನಾಯಕಿ! ನೋಡು-ನಿಮ್ಮವರೊಂದಿಗೆ ಕೂಡು" ಎಂದು ನಾಯಕ ಅವಳನ್ನು ಅಲ್ಲಿಂದ ಜೋರಾಗಿ ನೂಕಿಬಿಟ್ಟ. ಆ ಬಂಡೆಗುಂಟ ಉರುಳಿ ಉರುಳಿ ಜಜ್ಜಿ ವಿಕಾರವಾದ ಹೊನ್ನಾಯಿಯ ಶವ ಸಾವಿರಾರು ಅಡಿ ಕೆಳಗಿನ ಪ್ರಪಾತದ ಕೆರೆಯಲ್ಲಿ ಬಿತ್ತು. ಆದರೆ ಅದನ್ನು ನೋಡಲು ದಾದಯ್ಯ ನಾಯಕ ಕಾದಿರಲಿಲ್ಲ.

ಬಲು ತುರುಸಿನ ಕಾಳಗವಾಯಿತು. ದಾದಯ್ಯ ನಾಯಕ ಈರ್ಷೆಯಿಂದಲೇ ಹೋರಾಡಿದ. ಚಿತ್ರದುರ್ಗದ ಸೈನ್ಯ ಬಹಳ ಸಾವು ನೋವುಗಳಿಗೀಡಾಗಿ ಸೋತುಹೋಯಿತು. ಹುಚ್ಚಂಗಿದುರ್ಗ ದಾದಯ್ಯನ ವಶದಲ್ಲಿಯೇ ಉಳಿಯಿತು. ಆದರೆ ಆ ಕಡಿದಾದ ಬಂಡೆ ಮತ್ತು ಪ್ರಪಾತದ ಕೆಳಗಿನ ಕೆರೆಗಳಿಗೆ ಮಾತ್ರ ಹೊನ್ನಾಯಿಯ ಹೆಸರಾಯಿತು.





# ಬಿರುಕು



ಮುಖದ ನಲ್ಮೆಯ ಹೊಳಪು
ಪಾರದರ್ಶಕವಾಗಿ, ಹಿರಿದು ಹಾಯಾಗಿ,
ತಾನಾಗಿ ನಯವಾಗಿ, ಒಲವೇ ಕನ್ನಡಿಯಾಗಿ
ಪ್ರತಿಬಿಂಬ ಮೂಡಿರಲು
ಎಲ್ಲೋ ಹುಡಿ ಹಾರಿ
ಚಿತ್ರಭಿತ್ತಿಗೆ ಹರಳು
ಠಪ್ಪೆಂದು ಬಡಿದುಕೊಂಡಾಗ
ಅಲ್ಲಿ ಒಂದಿಷ್ಟು ಬಿರುಕು

ನನ್ನವಳ ನೇಹದಾಗರದೊನಪು
ಸಪ್ತವರ್ಣದ ಲೋಕ, ಒಂದಾಗಿ,
ಸ್ವಪ್ನ ನೆನಸಾಗಿ. ಸುಖಕೆ ಮುನ್ನುಡಿಯಾಗಿ
ಪ್ರತಿದಾನವಾಗಿರಲು

ಎಲ್ಲೋ ನುಡಿ ಜಾರಿ
ಸೂಕ್ಷ್ಮವೇದನೆಯಾಗಿ
ಅಪಸ್ವರದ ಶ್ರುತಿ ಕೇಳಿಕೊಂಡಾಗ
ಅಲ್ಲಿ ಒಂದಿಷ್ಟು ಬಿರುಕು

ಪ್ರೇಕ್ಷಣೀಯದ ನೋಟ ಸಾಕಾರ
ಜಗದ ಚಮತ್ಕಾರದ ಹಿಗ್ಗು ಹೊನಲಾಗಿ
ಸಗ್ಗದಾಟವೇ ಅಗಿ, ಸನಿಯ ವಾಣ್ಮುಡಿಯಾಗಿ,
ಪ್ರತಿಹಾಸವಾಗಿರಲು
ಎಲ್ಲೋ ನಡೆ ತಪ್ಪಿ
ಕಂಪನದ ಅಲೆ ಎದ್ದು
ಸರಿಯಲಾರದ ಕಾಲು ತತ್ತರಿಸಿಕೊಂಡಾಗ
ಅಲ್ಲಿ ಒಂದಿಷ್ಟು ಬಿರುಕು

–ಸುಂದರ ನಾಡಕರ್ಣಿ



# ಅಶೋಕದ ಶೋಕ

ದೇವೇಂದ್ರಕುಮಾರ ಹಕಾರಿ

ಕಪ್ಪು ಹಸಿರಿನ ದಟ್ಟ ಕಾಡೊಳಗೆ ಸಂಗೀತ
ಹಾಲು ಹಾದಿಯ ಹೊಳೆ
ಅಲ್ಲಿ ಚಂಗನೆ ನೆಗೆದು ಮುಗಿಲು ಮುಟ್ಟುವ ಹುಕಿಯ.
ಚಿಕ್ಕಮಕ್ಕಳ ಚಿಟ್ಟೆ ಚಿಟ್ಟೆ ತಂಡ,
ತರುಮರದ ಮೈಮೇಲೆ ಕುಸುಮ ರೋಮಾಂಚನ!
ಇದ್ದಕ್ಕಿದ್ದಂತೆಯೇ ಮೈಲು ಮೈಲುದ್ದಕ್ಕೂ
ತನ್ನ ಕೆನ್ನಾಲಿಗೆಯ ಚಾಚಿ ನೆಕ್ಕುತ್ತಿರುವ
ತೇಕು ರಕ್ಕಸ ಬಳ್ಳಿ—;
ತಾಯಿ, ಮುದುಮಕ್ಕಳು
ಹಸೆಹಾಡು, ಮದರಂಗಿ, ಕಣ್ಣು ಕಾಡಿಗೆ
ಬಣ್ಣ ಕಚಕುಳಿಯ ಬದುಕು;
ಎಲ್ಲವನ್ನೂ ಕೊಚ್ಚಿ ಕೊಚ್ಚಿ ಬೀಸಿತ್ತು—
ಕಪ್ಪು ಬಿರುಗಾಳಿ
ನೆಲದಿ ನೆತ್ತರ ಚಿಲುಕು;
ನೆತ್ತರಿನ ವಾಸನೆಯು
ಹಗಲ ಬಿಸಿಲಲಿ ಬೆರೆತು;
ಬಿಸಿಲುಗುದುರೆಯ ಬೆನ್ನನೇರಿ
ಹಾರುವ ಗಾಳಿಯಲ್ಲಿ ಕೇಳಿತ್ತು
ಪಿಸುಮಾತು;.........
"ಏಳು ಸೋದರ ನಾವು ಹೋಗೋಣ
ಹೊಲಗಳನು ಉತ್ತಿ ಬಿತ್ತಿ ........."
ಆ ಪ್ರತಿಧ್ವನಿ ದೂರ ಬಾನಾಚೆಯಲಿ ಅಲೆವ
ತಾಯೆದೆಯ ತಟ್ಟಿತ್ತು.
ಸುಟ್ಟುಳಿದ ಹಸಿರೆಲೆಯ ಪೊದೆಯಲ್ಲಿ ಒಮ್ಮೆ;
ಬಾನೆತ್ತರಕು ಬೆಳೆದ ಹೊಗೆಗುಂಪು—
ಗಳದಾಟ ಹೊಳೆ ಹೊಳೆವ ನಕ್ಷತ್ರ ಬಳಗದಲಿ ಮತ್ತೊಮ್ಮೆ,
ಕೆನ್ನೀರ ಹೊತ್ತು, ಕತ್ತಕತ ಕುದಿದೆದ್ದ
ಹೊಳೆ ಹಳ್ಳ ತೊರೆಗಳಲಿ ಇನ್ನೊಮ್ಮೆ; ಹೀಗೆ:
ಅಲೆದಲೆದು ನಲುನಲುಗಿ
ಕುಸಿದು ಕುಪ್ಪಳಿಸಿದಳು
ತಾಯಿ.........ಆ ತಾಯಿ.........
ಎದುರಿಗೇ ಧುತ್ತೆಂದು ಬಂದು ನಿಂತಿದ್ದನವ......
'ಬೇರೆ ಯಾರೂ ಅಲ್ಲ; ಪಾಪ ಮಗು' ಅನ್ನಿಸಿತು.
ಆ ತಾಯಿಗೆ
ತನ್ನ ಸೆರಗನು ಸರಿಸಿ, ತೊರೆಯಾಗಿ ಹಾತೊರೆವ
ಹಾಲ ಕಳದಿಂದ, ತಾಯಿ ಕರೆದಳು 'ಮಗೂ'
ವಿಶ್ವದಸ್ತಿತ್ವವೇ ಕರಗಿ ನಿಂಡಿಯಿತು

'ನಿನಗೀಗ ಹಸಿವು; ಬಾಗು ಮಗು
ಹಾಲು ಕುಡಿ;'
'ನಾನೀಗ ನಿನ್ನೆತ್ತರಕೆ ಬೆಳೆದೆ,
ಯಾರು ಮಗು? ಹಾಲಂತೆ?'
'ಹೇಳು ಮಗು ನಿನಗೀಗ ಬೇಕಾದುದನೆ
ಕೊಡುವೆ; ನೀರಡಿಕೆಯೆ?'
'ಅಲ್ಲಲ್ಲ ನನಗೀಗ ನೆತ್ತರಡಿಕೆ'
ಕುಸಿದಿತ್ತು ಕ್ಷಿತಿಜ;
ಬಾತಿತ್ತು ಬಾನು.
ತಾಯ ಎದೆ ತೆರೆದಿತ್ತು;
ಚೂರಿ ಸರ್ರನೆ ಎರಗಿ
ಹಾಕಿತ್ತು ಸೀಳಿ,
ತಾಯ ಕಣ್ಣಿನ ಹಾಳಹಗೆಯಲ್ಲಿ
ಇಣುಕಿತ್ತು ನಗೆ ತುಣುಕು ತುಣುಕು
ಅಷ್ಟರಲ್ಲಿಯೆ ಅಲ್ಲಿ ರಕ್ತಬೀಜದ ತಂಡ
ಗುಂಪುಗಟ್ಟಿ, ಹಾಕಿ ರಣಕೇಕೆ
ತಿಂದು ತೇಗಿ,
ಮದವುಕ್ಕಿ ಸ್ವೇಚ್ಛೆಯಲಿ ಮುನ್ನಡೆಯಿತು;
ಹಸಿದ ನಾಯಿಗಳೆರಡು
ಹಿಂದೆ ಬೆಂಬಲಕಿದ್ದು
ಅಸ್ತಿತ್ವದಸ್ತಿಯನೆ ಕಡಿ ಕಡಿಯುವಂತೆಯೇ
ತೋಡುತಿದ್ದವು ತಮ್ಮ ತಮ್ಮ ಕುಣಿಗಳನು.
ಕಾಲವುರುಳಿತು ಬಾನ ತಲೆಯ ಮೇಲಿಂದ.
ಬಸಿದ ರಕ್ತದಿ ತೊಯ್ದ ಧ್ವಜವ ಕೈಯಲಿ ಹಿಡಿದು
ತಾಯಿ, ಸುತ್ತು ಒಮ್ಮೆ ಓಡಿಸಿರೆ ಕಣ್ಣು;
ಹಿಮರತ್ನಗಂಬಳಿಯ ಮೇಲೆ
ನೆತ್ತರ ಕುಸುರು ಹೂ ಕಸೂತಿಯ
ಬಿಡಿಸಿ ಅರಳುತ್ತಿತ್ತು; ಮತ್ತೆ ನರಳುತಿತ್ತು.
ನೆಲದಿಂದ ನೇಲೆದ್ದ ನೆತ್ತರಿನ ಮೋಡ;
ಒಡಲಲ್ಲಿ ಸಿಡಿಲು—ಗುಡುಗುಗಳ ಮೊಳಗು!
'ಏನಾದರೂ ನನ್ನ ಮಕ್ಕಳೇ ಮರೆಯದಿರಿ......
ಮರೆಯದಿರಿ ನನ್ನ!!
ಪಕ್ಕದಲ್ಲಿಯೇ ನಿಂತ......
ಅಶೋಕವೃಕ್ಷದ ಹೃದಯ
ನರಳುಗಿತ್ತು ಶೋಕದಲಿ
ತುಳುಕಿತ್ತು ರಕ್ತತೆರೆ
ಸೂಜಿಪರ್ಣದ ಮೈಲಿ

(ಬಂಗ್ಲಾದೇಶದ ಕ್ರಾಂತಿಯ ಹಿನ್ನೆಲೆಯಲ್ಲಿ)

# ಫಾರಿನ್ ರಿಟರ್ನ್ಡ್ ಮಿಸ್ಟರ ಚಂದು ಮತ್ತವನ ಜೋಕು

ಅರವಿಂದ ನಾಡಕರ್ಣಿ

ಅವ್ನೂ ಬಂದ ಇವ್ನೂ ಬಂದ
ಯುರೋಪ್ ಇಂಗ್ಲಂಡ್ ಸ್ಟೇಟ್ಸ್‌ನಿಂದ
ಮುರಿದ ಸಂಕ್ದಡಿಗೆ ಬತ್ತಲೆ ಮಿಂದು
ಪುಟಿಯುತ್ತ ಬಂದ ಮಿಸ್ಟರ್ ಚಂದು.
ವಿಮಾನ ನಿಂತಿತು. ಇವಗೋ ಗೊಂದಲ
ಬೂಟುಕಾಲಿಡಲು ಎಲ್ಲಿದೆ ಚೆಲೋ ನೆಲ?
ಏ ಬಸವಾ, ಕತ್ತೆ, ಕೋಣಾ, ಎಲಾ ಎಲಾ
ಬನ್ರೋ ಏರ್‌ಸ್ರೋ, ಹಸಿ ಹಸಿ ಮಾಲೆ
ನಿನ್ಮೊಕಾ ನೋಡಲವಗೆಲ್ಲಿದ ವೇಳೆ?
ನೆಲಕೇ ತಾಕದು ವಿದೇಶಿ ಕಾಲು
ಕಣ್ಣೋ ಕಾಣವು ಕೋಡಗ ಸಾಲು
ತನ್ರೋ ಡಾಜು ಹೊಸ ಇಂಪಾಲಾ
ರಂಭಾ ಮೇನಕೆ ಹಿಡಿ ಹೊಸ ಮಾಲಾ.
ಹೋಗ್ರೋ ಆಚೆಗೆ ಮರ್ಕಟ ಗೋಲೆ
ಕ್ಲಾರ್ಕು ಗೀರ್ಕು ಸರ್ಕಾರಿ ನವಿಲೇ.
ಸಣ್ಣ ಪಗಾರದ ಕುಪ್ಪುವ ಕಪ್ಪೇ
ಅಲ್ಪಪದವಿ ಮೆರೆದಾಡುವ ಬೆಪ್ಪೇ.
ಹೋಗಿರೆಂದರೂ ನಿಂತೇಬಿಟ್ಟರು.
ಥೂಥೂ ಮಯವಿಲ್ಲದ ಎಡವಟ್ಟರು.
ರೀತಿನೀತಿ ಏನೊಂದೂ ಇಲ್ಲಾ
ಇದ್ದರೆ ಬಂದೇ ಗೂಳಿಯ ಬಲಾ
ಮೇಯ್ಸಿ ತರಬೇಕು ಸ್ಟೇಟ್ಸಿನ ಹೊಲಾ.
ಇಂಥಲ್ಲಿಗೆ ನಾ ಬಂದೆನಲಾ!
ನೋ ನೋ ಎಂದನು ಮಿಸ್ಟರ್ ಚಂದು
ಜೋರ್ನಲ್ಲಾಡಿಸಿ ಕ್ಯಾಪಿನ ಚಂಡು
ನೋ ನೋ ನಿಜ ನಿಜ ಇದೆಂಥಾ ಕಂಟ್ರೀ
ಜನಾ ದನಾ ಬಿಟ್ರೆ ಇಲ್ಲೇನುಂಟ್ರೀ?
ಎಲ್ಲಿದೆ ಕಾರಿಗೆ ಒಳ್ಳೇ ರಸ್ತೆ?

ಭಾರೀ ಪದವಿಗೆ ವ್ಯತ್ತಿವ್ಯವಸ್ಥೆ?
ಕುಕಿಂಗ್ ರೇಂಜು ವಾಶಿಂಗ್ ಮಶೀನು
ನಿಂತ್ರೆ ರಿಪೇರಿಗೆಲ್ಲಿದೆ ದುಕಾನು?
ಹಾಯ್ ಹಾಯ್ ಬಾಯ್ ಬಾಯ್ ಹೇಳಲು ಬಾರ
ಎಂಥಾ ಜನಾ ಈ ಭೂಮಿಗೂ ಭಾರ.
ಉಗುಳುಭಟ್ರವರು ಪುಚುಪುಚು ಪೀಕು
ಹಾದೀ ಗಾದೀ ಯಾವದೂ ಸಾಕು.
ಇವ್ರಿಗೆಲ್ಲಿದ ವಿಜ್ಞಾನದ ಥ್ರಿಲ್ಲು?
ವ್ಯಾಕೌಂಟ್ ನೋಡಲು ನಿಲ್ದಾಣದಿ ಗುಲ್ಲು!
ನೋ ನೋ ಹಿಂದಕೆ ನಡೆವುದೆ ವಾಪಿ
ಇಲ್ಲೆಲ್ಲೋದ್ರೂ ಜನದನ ನೊಣ ನುಸಿ
ಈ ತೆರೆ ಯೋಚಿಸಿ ನಿಂತಿರೆ ತೆಪ್ಪಗೆ
ಅಪ್ಪನೋ ಇಪ್ಪನೊ ಎಂದಿತ್ತೆನು ಅಪ್ಪುಗೆ.
ಕೈ ಝಾಡಿಸಿ ದಿಟ್ಟಿಸಿ ಕೆಳಕೆಳಕೆಳಗೆ
ಶಿಖರದಿಂದಲೇ ನೋಡುವ ಹಾಗೆ
ಜೋಕುಹಾರಿಸಿದ ಬುಲೆಟ್ಟನಂತೆ
" ನೀ ಆಯಾಕರ ಎಕ್ಸಪರ್ಟು ಅಂತೆ
ಕೇಸು ಚಲಾಯಿಸು ಅಷ್ಟೇ ಸಾಕು
ದೊಡ್ ದೊಡ್ ವಿಷಯಾ ನಮ್ಮಡೆ ನೂಕು.
ಸಣ್ ಸಣ್ ಬುರುಡೆಗೆ ಅವೆಲ್ಲ ಯಾಕೆ?
ನವಿಲಿನ ಗರಿಯೂ ಕಾಗೆಗೆ ಬೇಕೆ? ... "

ವಾಹವಾ ವಾಹವಾ ಎಂಥಾ ಜೋಕು!
ಹೊಟ್ಟೆಗುಡಾಣದ ಜನ ನಗಬೇಕು
ನಕಲೀ ಹಲ್ಲುಗಳುದುರುವ ಹಾಗೆ.
ಕೂತಿಹ ಖುರ್ಚಿಗಳುರುಳುವ ಹಾಗೆ
ಹೀರೋ ನಗೆಯಲಿ ನಿಂತನು ಚಂದು
ವಿದೇಶಿ ಸಂಸ್ಕೃತಿ ಮೆರೆದಿತ್ತೆಂದು





# ಅ. ನ. ಕೃ. ಸತ್ತಾಗ

ಟಿ. ಮಹಾಬಲೇಶ್ವರ ಭಟ್ಟ, ಸಾಗರ

ಅ. ನ. ಕೃ. ಸತ್ತಾಗ
ನನಗೆ ನಲವತ್ತನಾಲ್ಕರ ಪ್ರಾಯ.
ಅಂದು ನಾನು ನನ್ನ ಹೊಸ ಅಡಿಕೆ ತೋಟದಲ್ಲಿದ್ದೆ.

ಬಣ್ಣದಲಿ ಹಾಯಾಗಿ ಕುಳಿತು,
ಕಾಲು ನೀಡಿ -
ಹೊಸದಾಗಿ ಬಿಟ್ಟಿರುವ
ಗೊನೆಯ ನೋಡಿ,
ಮನದಲ್ಲಿ ಸಂತಸವ ಪಡುತಲಿದ್ದೆ.

ಸದ್ದಿರದೆ, ಸುದ್ದಿಯಲಿ -
ಸತ್ತಸುದ್ದಿಯ ಹೊತ್ತು ತಂದ -
ಪತ್ರಿಕೆ ಓದಿ.
ಕಿರುಚಿ, ಅಯ್ಯೋ ಎಂದು ಕೂಗಿದೆ,

ಆಳು ತಿಮ್ಮ, ಓಡಿಬಂದು,
ಏನು ಸ್ವಾಮಿ, ಏನಾಯಿತು?
ದೆವ್ವ ಬಡಿಯಿತೆ? ಹಾವು ಕಡಿಯಿತೆ?
ಅಯ್ಯೋ ಏನಾಯಿತು?

ಕೆಸರ ಕಾದಿಗೆಯಲ್ಲಿ ಮಣ್ಣ ಕಡಿದು
ಮೈ ಎಲ್ಲ ಕೆಸರಾದ, ತಿಮ್ಮ, ಗಾಬರಿಯಿಂದ -
ಅವನೂ, ಕಿರುಚಿದ, ಗೋಳೋ ಎಂದು ಅತ್ತ
ಅ. ನ. ಕೃ. ಸತ್ತರಂತೆ
ವೃತ್ತಪತ್ರಿಕೆ ತಂದ ಸುದ್ದಿ ಇದು,
ಊರೆಲ್ಲ ಅತ್ತರಂತೆ,
ಅನ್ನಪೂರ್ಣ ಶೂನ್ಯವಂತೆ,
ಇದಕಾಗಿ ನನಗೂ ಚಿಂತೆ.

ಕಳೆದ ಎರಡು ದಶಕದ ಮಿತ್ರ,
ನಿಲುವಂಗಿ, ದಗಲೆ ಪಯಿಜಾಮು
ಕೆದರಿದ ಕೂದಲು,
ಭಾವುಕ, ರಸಿಕ,
ಸಂಗೀತಪ್ರಿಯ -
ಮನೆತುಂಬ ಮಕ್ಕಳು, ಹೆಂಡತಿ,
ಇವರ ಪಾಡೇನು?

ಯಜಮಾನರೇ —
ಅವರು ಯಾರು ಸ್ವಾಮಿ.
ಪಾಪ ಅನಗೇನು ಗೊತ್ತು?

ಅ. ನ. ಕೃ. ಅಲ್ಲ, -
ಗಾಂಧಿ ಗೊತ್ತೇನು?
ನೆಹರೂ ಗೊತ್ತೇನು?
ಇಂದಿನ ಪ್ರಧಾನಿ ಗೊತ್ತೇನು?
ಗಂಟೆಗಟ್ಟಲೆ ಅವಗೆ -
ಹೇಳಿದರೆ, ತಿಡಿದರೆ, ತಿದ್ದಿದರೆ -
ಅವಗೇನು ಗೊತ್ತು
ಹುಂಜಪಡೆಯನು ಬಿಟ್ಟು -
ಕೋಣಹೊಡೆಯುವ ಪದ,
ಅವನ ಗುಡಿಸಲ ಕಡ
ಕೋಳಿ, ನಾಯಿ, ಇದೇ ಅವನ ಜನಪದ.
ಅ. ನ. ಕೃ. ನನಗೆ ಸಿಕ್ಕಾಗಲೆಲ್ಲ

ನನ್ನ ಯೋಗಕ್ಷೇಮವ ಕೇಳಿ
ಮೊನ್ನೆ ಪತ್ರಿಕೆಯಲ್ಲಿ ನಿಮ್ಮ ಕಂಡಿದ್ದೆನೆಂದು ಹೇಳಿ,
ಬಲಭುಜವ ತಟ್ಟಿ,
ನನ್ನ ಬಿಚ್ಚಿರುವ

ಜಾಕೀಟ ಗುಂಡಿಯ ಹಾಕಿ
ತಲೆಯಿಂದ ಕೆಳತನಕ ನೋಡಿ,
ನಾನು ಹಿಂದೊಮ್ಮೆ ಇಷ್ಟೇ ಚೆಂದವಾಗಿದ್ದೆ
ಎಂದು, ನಕ್ಕುನಗುವವರು, ಮತ್ತೆ ಭುಜ ತಟ್ಟುವರು,
ಕನ್ನಡದ ಬಗ್ಗೆ ಮಾತನಿಳಿಸಿ

ನಿಮ್ಮ ಊರಿಗೆ ಬರಬೇಕೆಂದಿದ್ದೇನೆ ಎಂದು ಹೇಳುವರು
ವರ್ಷ ಕಳೆದಂತೆಲ್ಲ ಅನುಭವದ ಫಲ
ಸುಕ್ಕು, ಬಿದ್ದರು, ಕಪ್ಪುಕೂದಲ ಮುಖ
ರಸ್ತೆಯಲಿ ಹೆಜ್ಜೆ ಇಡುವಾಗ -
ತಪ್ಪಿಡದ ಹೆಜ್ಜೆ.

ಹಿಂದೆ ಹತ್ತಾರು ಜನ,
ಮುಂದೆ ಕೆಂಪುಬಸ್ಸುಗಳ ಕಾಟ,
ಆ ನಡುವೆ ಹತ್ತಾರು ವಿಷಯಗಳ
ಆ ಮಾತು, ಈ ಮಾತು,
ಆದರೂ ಎಲ್ಲವೂ ಕನ್ನಡದ ಕುರಿತು.

ಸದಾ, ನನಗೆ ಅದೇ ನೆನಪು,
ಆದರೆ ಅದು ಇನ್ನಿಲ್ಲ,
ನಾನೂ, ಕೂಡ ಕಂಡಾಗ
ಕೈಯ್ಯ ಮುಗಿದಿದ್ದೇನೆ
ಅವರ ಕೈಯಲ್ಲಿರುವ ಪತ್ರಿಕೆಯ ಓದಿದ್ದೇನೆ.
ಕೊಟ್ಟ ಸಿಗಾರ, ಸೇದಿದ್ದೇನೆ.
ಮುಂದಿನ ಕೃತಿ ಯಾವುದು ಎಂದು ಕೇಳಿದ್ದೇನೆ.

ಒಂದಲ್ಲ, ಎರಡಲ್ಲ, ಹತ್ತಾರು ಹೆಸರು
ಹಾಗೆಯೇ ಮನೆಯತ್ತ ಬರಲು
ಅಲ್ಲಿ ಕಾಫಿ ಕುಡಿದಿದ್ದೇನೆ.

ಹತ್ತಾರು ಊಟ ಮಾಡಿದ್ದೇನೆ -
ಇದೆಲ್ಲವೂ ಇನ್ನಿಲ್ಲ,
ಆದರೂ ಅ. ನ. ಕೃ. ಸತ್ತಿಲ್ಲ,
ಅದ ನಾನು ನಂಬುವುದಿಲ್ಲ.

* * * * * * *



# ದಾಸರ ತಿಥಿ

ಇಟಗಿ ರಾಘವೇಂದ್ರ

ಕೇಳನೋ ಹರಿ ತಾಳನೋ......
—ಗೊಗ್ಗರ ದನಿಯಲ್ಲಿ ದಾಸರ ಪದ ಭೋರ್ಗರೆಯುತ್ತಿತ್ತು!

ಚಿಕ್ಕ ಹಾಲು- ಅದರಲ್ಲಿ ಮುಕ್ಕಾಲುಪಾಲು ಕಪಾಟು, ಕುಂಟ ಮೇಜು, ನಡುಗುವ ಬೆಂಚು - "ವೇದಿಕೆ", ಅಲ್ಲಲ್ಲಿ ಚದುರಿ ಕುಳಿತ ಸಭಿಕರು. ಮೂಲೆಯಲ್ಲಿ ಸ್ಟೂಲಿನ ಮೇಲೆ ಒಂಟಿಗಾಲಿನಲ್ಲಿ ನಿಂತಂತೆ ಪುರಂದರದಾಸರ ಫೋಟೋ; ತಂಬೂರಿ, ತಾಳ ಕೈಯಲ್ಲಿ, ಗೆಜ್ಜೆ ಕಾಲಲ್ಲಿ,- ಕಂಬಕ್ಕೆ ಬಿಗಿಸಿ ಕೊಂಡವನ ಅವಸ್ಥೆ ದಾಸರಿಗೆ......

"ವೇದಿಕೆ,"ಯ ಮೇಲಿನ ಗಾಯಕರು ದಾಸರ ಕಡೆ ನೋಡಿ ಕೈ ಮುಗಿದರು. "ಪುರಂದರ ವಿಠ್ಠಲ" ಎಂದರೇನೋ ದಾಸರು- ಸಭಿಕರತ್ತ ಮುಖಮಾಡಿ ಗಾಯಕರು ಹಾಡತೊಡಗಿದರು! ಕೇಳನೋ ಹರಿ ತಾಳನೋ.... ದಂಭಕದ ಕೂಗಾಟ, ತಾಳ ಮೇಳ ರಾಗ ಭಾವರಹಿತ ಹೀನ ಸಂಗೀತಕ್ಕೆ ದಾಸರ ಹೊಟ್ಟೆ ತೊಳಸತೊಡಗಿತು.- ಶ್ರೀಹರೀ, ಪಂಡರೀನಾಥ, ಪುರಂದರ ವಿಠ್ಠಲ-ಎಂದು ಮೊರೆ ಇಡತೊಡಗಿದರು.

ಆದರೇನು? ಪುರಂ... ವಿಠ್ಠಲ ಯಾವಾಗಲೂ ಬಂದಂತೆ, ಈ ಸಲ ದಾಸರ ಸಹಾಯಕ್ಕೆ ಬರಲಿಲ್ಲ; ಹಾಡುವ ಗಾಯಕರಿಗೆ ಶಾರೀರವನ್ನೇನೂ ಒದಗಿಸಲಿಲ್ಲ. ಗೊಗ್ಗರ ದನಿಯಲ್ಲಿ ನಡುನಡುವೆ ಖೇ-ಖೇಖರಿಸುತ್ತ ಒಂದರ ಮೇಲೆ ಒಂದರಂತೆ ದಾಸರ ಪದಗಳನ್ನು ತಮ್ಮ ಸಂಗೀತಖಡ್ಗದಿಂದ ತರಿಯತೊಡಗಿದರು: ಚಿಂತೆ ಏತಕೋ ಬಯಲ ಭ್ರಾಂತಿ ಏತಕೋ..... ದಾಸರ ತಾಪ ಹೆಚ್ಚತೊಡಗಿತು; ತಹತಹಿಸತೊಡಗಿದರು....... ಕೃಷ್ಣ ಎನಬಾರದೇ ನರಜನ್ಮ ಬಂದಾಗ, ನಾಲಿಗೆ ಇರುವಾಗ... ಎಂದು ಗಾಯಕರು ಆರಂಭಿಸಿದಾಗ, ನರಜನ್ಮಕೊಟ್ಟು, ಈ ನರನಿಗೆ ನಾಲಿಗೆ ಕೊಟ್ಟು ಮೇಲೆ ಗಾಯನ ಹುಚ್ಚು ಕೊಟ್ಟು ನನ್ನ ಕೊಲ್ಲುತ್ತಿರುವ ಕೃಷ್ಣನ ಮೇಲೆ ಕೋಪ ಬಂತು. ಕೃಷ್ಣ ಎಂದು ಇನ್ನುಮೇಲೆ, ಮುಂದೆ ಅವತಾರವೆತ್ತಿದಾಗ, ಅನ್ನುವುದಿಲ್ಲ; ಅಂದರೂ ಹಾಡುವುದಿಲ್ಲ ಎಂದು ಆ ಕೂಡಲೇ ಶಪಥತೊಟ್ಟರು. ಈ ದಾಸ ಹೀಗೆಯೇ ಮಾಡಿಬಿಟ್ಟರೆ ಆಗ ನನ್ನ ಗತಿ ಏನು ಎಂದು ಅಂದುಕೊಂಡೋ ಏನೋ ಪುರಂದರದಾಸರು ಮತ್ತೆ ಅವತರಿಸಲು ಅವಕಾಶನೀಡದೇ ಆ ಶ್ರೀಕೃಷ್ಣ ಪರಮಾತ್ಮ ಅವರಿಗೆ ನೇರ ಮುಕ್ತಿಯನ್ನೇ ದಯಪಾಲಿಸಿರಬೇಕು. ಇಲ್ಲವಾದರೆ ನಾಲ್ಕು ನೂರು ವರುಷ ಕಳೆದು, ಚೆಲ್ಲಿದ ಹಾಲು ಹರಿದು ಇಂಗಿ ಹೋಗುವಂತೆ, ಉರುಳಿಹೋದರೂ ಮತ್ತೊಬ್ಬ ಪುರಂದರದಾಸರು ಹುಟ್ಟಬಾರದೆಂದರೆ?......

...ಏನು ಗತಿಯೋ ನನಗೆ ರಂಗ-ಎಂದು ಗಾಯಕರು ಶುರುಮಾಡಿದಕೂಡಲೇ ಏನು ಗತಿ ಏನು ಗತಿ ನನಗೆ- ಎಂದು ದಾಸರು ಕಷ್ಟದಿಂದ ತಮ್ಮೊಳಗೆ ಅಂದುಕೊಳ್ಳುವಷ್ಟರಲ್ಲಿ, - ಇದೇ ಗತಿ, ಸಾಹಿತ್ಯ ಸಂಗೀತ ಎಂದು ಹಾರಾಡಿದ್ದಕ್ಕೆ- ಕುಳಿತಲ್ಲಿ ಪದ, ನಿಂತಲ್ಲಿ ಪದ, ತಕ್ಕೋ ಅದರ ಪ್ರತಿಫಲ ಎಂದು ಅಣಕಿಸಿ ವಿಟ್ಠಲ ಕಿಸಕ್ಕನೆ ನಕ್ಕಂತಾಯಿತು, ದಾಸರಿಗೆ!..... ಆರು ಹಿತವರು ನಿನಗೆ ಈ ಮೂವರೊಳಗೆ...

ಗಾಯಕರೋ, ಗಡಗಡಿಸುವ ಒಡಕು ಗಂಟಲಿನ ಸ್ಪೀಕರೋ, (ಇಲ್ಲ ಮುಂದಿನ ಸಾಲಿನಲ್ಲಿ ಕಿವಿ ಮುಚ್ಚಿಕೊಂಡು ಕುಳಿತ) ಬಾಲಕರೋ- ವಿಠ್ಠಲದಾಸರ ಮುಂಡಾಸ ತಿವಿದು ಕೆಣಕಿ ಕೇಳಿದ.- ಬಂಧುಗಳು ಎನಗಿಲ್ಲ-ಇಲ್ಲಿ ಬಂದಿಯಾಗಿರುವೆನಲ್ಲ. ಎಂದು ಗೋಳಾಡುತ್ತಿದ್ದ ದಾಸರಿಗೆ ಈ ತಿವಿತ, ಈ ಕೆಣಕುಗಳು ಮನಸ್ಸಿಗೆ ಬರಲಿಲ್ಲ. ಸ್ವಲ್ಪ ಮುನಿಸಿನಿಂದ- ಲೋ, ಪುರಂದರ ವಿಠ್ಠಲ, ಈ ರೀತಿ ಛೇಡಿಸುವುದು ತರವಲ್ಲ, ಎಚ್ಚರಿಕೆ. ಎಂದು ಬೆದರಿಸಿದರು ಪಿಸುದನಿಯಲ್ಲಿಯೇ... -ಇಷ್ಟು ಹೊತ್ತಿಗೆ ಗಾಯಕರು ಗಾನ ಮುಗಿಸಿದರು- ಹಾ ಎಂದು ಉಸಿರುಬಿಡುವಷ್ಟರಲ್ಲಿಯೇ, ಮಾತು ಆರಂಭಿಸಿದರು:-

"ರಸಿಕರು" ಕ್ಷಮಿಸಬೇಕು, ಒಂದೆರಡು ಪದ ಹೆಚ್ಚಿಗೆ ಹೇಳಿದೆ. ದಾಸರ ಸೇವೆ, ಏನೋ ಆವೇಶ ಬಂತು, ದಾಸರೇ ಬದಿಗೆ ನಿಂತು ಇನ್ನೊಂದೆರಡು ಹೇಳು ಮಹಾನುಭಾವ ಎಂದ ಹಾಗಾಯಿತು, ದಾಸರ ತೃಪ್ತಿಗೋಸ್ಕರ......" ಕಿವಿ ಮುಚ್ಚಿಕೊಂಡು ಗಾಯನ ಕೇಳುತ್ತಿದ್ದ ಬಾಲಕರ ತೆರಪಿಲ್ಲ ಕೈ ಬಿಡುಗಡೆ ಪಡೆದಿದ್ದವಾದ್ದರಿಂದ ಚಪ್ಪಾಳೆ ರಪರಪ ಬೀಳತೊಡಗಿದವು- ಗಾಯಕರ ಮಾತು ನಿಂ...ಗಿಯಿತು, ಕಥೆಯೂ ಮುಗಿಯಿತು.

ಈಗ ದಾಸರ ಸೇವೆಗೆ ಗಾಯಕಿಯೊಬ್ಬಳು ಬಂದಳು. ದಾಸರು ನವಕೋಟಿ ಭಂಡಾರ ತೊರೆದು ಹಿಂದಿರುಗಿ ಸಹ ನೋಡದೆ ಹೋಗಿದ್ದರೂ, ಹರಿ ಸಂಕೀರ್ತನೆಯ ಮೋಹ ತೊರೆದಿರಲಿಲ್ಲ ತಾನೇ. ಆದರಿಂದಾಗಿ ಅವರಿಗೆ ತಮ್ಮ ಪದಗಳ ಮೋಹ ಪೂರ್ತಿಯಾಗಿ ಅಳಿದಿರಲಿಲ್ಲ. ನಾನ್ನೂರು ವರುಷಗಳಿಂದ ಅವರ ಭಕ್ತಾದಿಗಳು-ಗಾಯಕರು, ನಾಯ

ದಾಸರು ತಮ್ಮ ತಿಥಿಯ ಆರ್ಚನೆಯಲ್ಲಿ ಒಮ್ಮೆ ಸಿಲುಕಿ ನರಳಿ ಒದ್ದಾಡಿದರು. ಆಗ ಅವರು ಪಟ್ಟ ಪಾಡು-ಬವಣೆ ಎಂಥದು. ಅದು ನಿಜವಾಗಿ ಯಾರಿಗೂ ಬರಬಾರದು. ದಾಸರು ಅದರಿಂದ ಪಾರಾಗಲು ಯತ್ನಿಸಿದಾಗ ....ಅವರ ಅನುಭವ ಅರಿಯಬೇಕು.

■

ಕರು, ಸಾಹಿತ್ಯ ನಾಯಕರು ಅವರ ಈ ಮೋಹ ಅಳಿಸಲು ಯತ್ನಿಸುತ್ತಿದ್ದಾರೆ. ಆದರೂ ಅದು ಅಳಿದಿಲ್ಲ- ಎಂದ ಮೇಲೆ ಎಷ್ಟು ಗಾಢ, ಎಂಥ ಘನ ಇರಬೇಕು ಅದು. ತಮ್ಮ ಮುಂಡಾಸ ಮೇಲೆ ಹೊದಿಸಿದ್ದ ವಸ್ತ್ರದ ಅಂಚನ್ನು ನಸುವೆ ಓಸರಿಸಿ ದಾಸರು ಗಾನಕ್ಕಾಗಿ ಕಿವಿದೆರೆದರು. ಅದೇ ಪ್ರಮಾದವಾಯಿತು; ಕಲ್ಯಾಣಿ ರಾಗದ ಅಟ್ಟತಾಳದಲ್ಲಿ ದಾರಿ ಯಾವುದಯ್ಯ ವೈಕುಂಠಕ್ಕೆ-ಎಂಬ ಪದ, ವೇಧೆಯಾಗಿ ದಾಳಿಇಡತೊಡಗಿತು. ಸರಕ್ಕನೆ ವಸ್ತ್ರದಿಂದ ಕಿವಿಮುಚ್ಚಿಕೊಂಡು ಬೇವು ತಿನ್ನತೊಡಗಿದರು.... ಕೈಮೀರಿ ಹೋದ ಮಾತಿಗೆ ಮರುಕಾಡಬಾರದು ಎಂಬ ಹಾಡು ದಾಸರಿಗೆ ಸಮಾಧಾನ ಸಂದೇಶವಾಗಿ ಬಂತು. "ಏನು ಮಾಡಿದರೇನು ಭವ ಹಿಂಗದು" ಎಂಬ ಮುಖಾರಿ ರಾಗಕ್ಕೆ ಮೊಗದಿರುವತೊಡಗಿದರೇನು ಫಲ, ಜೀವನ್ನು ಬಿಟ್ಟಾಗ-ಅಲ್ಲ ಅಲ್ಲ- ಬೆಲ್ಲದಲ್ಲಿ ಜೀವನ್ನು ಇಟ್ಟದ್ದಾಗಿದೆ. ಈಗ ಕೊರಗಿದರೇನು ಫಲ! ರಾಗಕ್ಕೂ ತಾಳಕ್ಕೂ ಭಾವಕ್ಕೂ ಮೇಳವಿಲ್ಲದೆ ಚಳಿಗಾಲದಲ್ಲಿ ಎಂಟರ ಥಳಿಯುವರು ಮಾಘಸ್ನಾನ ಮಾಡಿ ನಡುಗುವಂತೆ. ನಡುಗುವ ಧ್ವನಿಯಲ್ಲಿ ಹಾಡುತ್ತಿರುವಾಗ ವಿಠ್ಠಲನಿಗೂ ದಾಸರ ಮೇಲೆ ಕನಿಕರ ಉಂಟಾಯಿತು. ಆದರೂ ಕೀಟಲೆಯ ಗೀಳು, "ದಾಸರೇ, ಹೇಗಿದೆ ಪ್ರಕೃತಿ? ಎಲ್ಲ ಸ್ವಸ್ಥವೇ?' -ಎಂದು ಒಂದು ನಗೆ ಮುಕ್ಕ "ಅರಿಯರು, ಮನುಜರರಿಯರು"........

..... ಕುಳಿತ ಸಭಿಕರು 'ಪಾಪ ಮನುಜರು. ಅವರಿಗೆ ಹೇಗೆ ಅರಿವಾಗಬೇಕು 'ದಾಸರ ಗೋಳು. ಹಾಡುವ ಗಾಯಕಿ ತಲ್ಲೀನಳಾಗಿ ಹಾಡುತ್ತಿದ್ದಳು, ಅಲ್ಲ-ಹಾಡಾಡುತ್ತಿದ್ದಳು."ಮಿ ಮಿ ಕ್ರಿ"ಯೆಂದು ಹುಡುಗರು ಉತ್ಸುಕತೆಯಿಂದ ನಗುತ್ತ ಆಕೆಯ ಹಾಡನ್ನು ಕೇಳುತ್ತಿದ್ದರು. ಹುಡುಗರ ಮೋಜಿನಲ್ಲಿ ಹಿರಿಯರೂ ಬೆರೆತಿದ್ದರು. ದಾಸರು ಮಾತ್ರ ಬವೆತಿದ್ದರು.... "ನಮ್ಮಯ್ಯ ಸಾಕು ಮಾಡಮ್ಮ ಮಹಾತಾಯೀ!" "ಯಾರಿಗೆ ಯಾರು ಎರವಿನ ಸಂಸಾರ......."

ಅಂತೆಯೇ ಗಾಯಕಿ ಯಾವ ಗಲಭೆಗೂ ಕಿವಿಗೊಡದೆ ಹಾಡುತ್ತಿದ್ದಳು. ಆಕೆಯ ಹಾಡು ಆಕೆಗೆ ಎಂದು ಕೂಡಿದ ಭಕ್ತರು, ರಸಿಕರು- ಬಂದದ್ದೇ ಹೆಚ್ಚು ಎಂಬ ಮನೋಭಾವದ ಜನ ಅವರು.-

ಕೊನೆಯ ಹಾಡು ಎಂದು ಹೇಳಿ "ಯಾಕೆನ್ನ ಈ ರಾಜ್ಯ ಕೆಳಿತಂದ್ಯೋ ಹರಿಯೇ?" ಎಂದು ಆಲಾಪಿಸತೊಡಗಿದಳು. ದಾಸರಿಗೆ ದಾಹ ಹೆಚ್ಚಾಗಿ ಆತ್ಮಸಾಕ್ಷಾತ್ಕಾರವಾಗತೊಡಗಿತು. ಫೋಟೋ ಠಳ್ಳೆಂದು ಒಡೆದ ಸದ್ದು. ಸಭೆ ಚದರಗಾಗುವಂತೆ ತಂಬೂರಿ ಬಿದ್ದು ಒಡೆದ ಸದ್ದು, ಗೆಜ್ಜೆಕಾಲು ಸರಸರ ಓಡುವ ಸದ್ದು, ಪಿಸುಕಿರಿಸ ಸದ್ದು- ಎದ್ದೆನೋ ಬಿದ್ದೆನೋ ಎಂದು ದಾಸರು ಓಡಿಹೋದರು.....

ಸರಸರ ಪರಪರ...ಸದ್ದು! ಎಂಥ ಸದ್ದು ಇದು.. ಎಲ್ಲರಿಗೂ ಗಾಬರಿ-ಚದರಗು.... ಹಾವು ಎಂದು ಯಾರೋ ಪಿಸುಗುಟ್ಟಿದರು. ಕೂಡಲೇ ಎಲ್ಲರೂ ಚೀರುತ್ತ, ಹಾರುತ್ತ ಸಭಾ ಭವನದ ಹೊರಗೆ ಓಡಿದರು. ಇಲ್ಲದ ಹಾವು ಎಲ್ಲಿಂದ ಬರಬೇಕು?... ನಮ್ಮ ಸಮಸೆಗಳೇ ಹೀಗೆ. ಚದರಗಿನಲ್ಲಿಯೋ ಭೀತಿಯಲ್ಲಿಯೋ, ದೈವಕ್ಕೆ ಜನ್ಮವಿತ್ತಂತೆ. ಸಮಸ್ಯೆಗೂ ಜನ್ಮ ನೀಡುತ್ತೇವೆ. ಭೂತಾಕಾರವಾಗಿ ಅದು ಬೆಳೆಯುವಂತೆ ಪಾಲಿಸು

ತ್ತೀವೆ. ಆಮೇಲೆ ಆಲಾಪಿಸುತ್ತೇವೆ. ಮನುಷ್ಯನಿಗೆ ಬುದ್ಧಿ ... ಕೊಟ್ಟ ದೇವರು ... ತಪ್ಪು ಮಾಡಿದ... ಆದಿರಲಿ, ಈಗ ಮುಂದೆ ಗತಿ? "ಯಾರಿಗೆ, ದಾಸರಿಗೋ, ನಮಗೋ"

"ಛೀ, ಹಾಸ್ಯ ಸಾಕು, ಅಗೋ ಅಲ್ಲಿ ನೋಡಿ ದಾಸರ ಫೋಟೋ....

ಚೌಕಟ್ಟು ಹಾಗೆಯೇ ಇದೆ. ಫಳಫಳನೆ ಹೊಳೆಯುವ ಗಾಜು ಮಾತ್ರ ಉದ್ದ ಸೀಳಿದೆ. ಆದರೆ ಒಳಗಿನ ಚಿತ್ರ ಮಾತ್ರ ಮಟಮಾಯ.... ದಾಸರು ಏನಾದರು?""-ತಲೆಗೊಬ್ಬರು ಮಾತಾಡುವಾಗ ಒಬ್ಬರು, "ವೈಕುಂಠಕ್ಕೆ ಹೋಗಿರಬೇಕು"-ಎಂದರು., ಸಭಿಕರ ವಿಸ್ಮಯದ, ಭಯದ ವಾತಾವರಣದಲ್ಲಿಯೂ ಯಾರದೋ ಇಂಥ ಅಪಹಾಸ್ಯ.




"ಸುಮ್ಮನಿರ್ರೀ ಸಾಕು. ಎಲ್ಲಾವ್ರಾಗೂ ಒಂದಕಿ ... ಬಗೀತಾನೆ ಇರ್ತೀರಿ."

"ಅಷ್ಟ್ಯಾಕ ಸಿಟ್ಟು ಮಾಡಿಕೊಳ್ತೀರಿ. ದಾಸರು ಇಲ್ಲಿ ಇಲ್ಲ ಅಂದಮೇಲೆ ಇನ್ನೆಲ್ಲಿಗೆ ಹೋಗ್ತಾರಂತೆ ವೈಕುಂಠಕ್ಕೆ ಹೋಗಿರಬೇಕು. ಎಂದರೆ ; ಸುಳ್ಳೇನು?"

"ಬಾಯಿಮುಚ್ಚಿರಿ ಸಾಕು. ನಮ್ದು ನಮಗೆ ಭ್ರಮಾ ಆಗೇದ. ಮ್ಯಾಲೆ ಇವರ ಚದುರು ಬ್ಯಾರೆ"

"ಸಮಾರಂಭದ ನಡವಳಿಕೆಯೊಳಗೆ ಏನಾದರೂ ಅಪಚಾರ ಆಗೇದೇನು?

"ಯಾರೋ ಸಂದೇಹ ಎತ್ತಿದರು.

"...ದೊ- ಅಂಥಾದ್ದೇನೂ ಆಗಿಲ್ಲ ಬಿಡ್ರಿ ನಾ... ...ನಲ್ಲ- ಅಂಥ ಅಪಚಾರ ನಾ ... ಕಾಣೆಸ್ರೀಲಾ!" ಎಂದು ಮುದುಕರೊಬ್ಬರು

ಏಳೆದು ನುಡಿದರು. ಆದರೂ ಎಲ್ಲರಿಗೂ ಏನೋ ಸಂಶಯ, ಗಾಬರಿ.

......ಪಾರಾದೆ ಶ್ರೀಹರಿ! ಮುಯ್ಯಕ್ಕೆ ಮುಯ್ಯ ತೀರಿಸಿಕೊಳ್ಳದೇ ಹೋದರೆ ನಾನು ದಾಸಯ್ಯನೇ ಅಲ್ಲ. ನನ್ನ ಏನೂ ಅಂತ ತಿಳಿದಿರುವಿ.- ದಾಸ ಸಾರ್ವಭೌಮ-ಎಂದು ದಾಸರು ವೈಕುಂಠದ ಬಾಗಿಲ ಮುಂದೆ, ಆಕಸ್ಮಿಕವಾಗಿ ಆಗಮಿಸುವ ಅತಿಥಿಗಳಿಗೆಂದು ಹಾಕಲಾದ ಹಾಲುಗಲ್ಲಿನ ಆಸನದ ಮೇಲೆ ಕೂಡುತ್ತ ಗೊಣಗಿದರು. ಜಯವಿಜಯರು ಇವರ ಬಡಬಡಿಕೆ ಕೇಳಿ, ಪಕಪಕ ನಗತೊಡಗಿದರು.

"ಏನು ದಾಸರು ಹೀಗೆ ಅನಾಮತ್ತಾಗಿ ಬಂದು ಆರಾಮ ಪಡೆಯುತ್ತಿದ್ದಿರಿ. ಶ್ರೀಮನ್ನಾರಾಯಣ ದರ್ಶನಾರ್ಥವೋ ಅಥವಾ ಅಮ್ಮಾ ಅವರಾದ

ಆದಿಮಾತೆ ಲಕ್ಷ್ಮೀದೇಯಮ್ಮಣ್ಣಿಯವರ ಅನುಗ್ರಹಾರ್ಥವೋ- ತಾವು ಆಗಮಿಸಿದ್ದು," ಎಂದು ಹಾಸ್ಯ ಮಾಡಿ ನಗತೊಡಗಿದರು, ಈ ದ್ವಾರಪಾಲಕದ್ವಯರು.

ಗಡಬಡಿಸಿಕೊಂಡೆದ್ದ ದಾಸರು ಕೋಪದಿಂದ- "ಯಾರೆಂದು ತಿಳಿದು ಹೀಗೆ ಲಘುವಾಗಿ ನುಡಿಯುತ್ತಿದ್ದೀರಿ. V.I.P. ಸಾಲಿನಲ್ಲಿ ನನ್ನದು ವಿಶಿಷ್ಟ ಸ್ಥಾನ ನನ್ನದು- ಗೊತ್ತೊ- ಹೂ" ಎಂದು ಹೂಂಕರಿಸಿದರು.

"ತಾವು"

"ಹ್ಹ, ನಾವು ನಿಮ್ಮ ಶ್ರೀಮನ್ನಾರಾಯಣನನ್ನು ...ನೋಡಲು......" ಏನೋ ನೆನಪಾಗಿ ನಾಲಿಗೆ ಕಚ್ಚಿಕೊಂಡು ಸುಮ್ಮನಾದರು ದಾಸರು,

"ಹಹ್ಹಹ್ಹ.... ಏನು ದಾಸರೇ, ನಾರದರ ಹಾಗೆ ಮಾತಾಡುತ್ತೀರಲ್ಲ..

-ಆಗ ದಾಸರಿಗೆ ಸ್ಮರಣೆ ಉಂಟಾಯಿತು- ಅಯ್ಯೊ ಪೂರ್ವೋತ್ತರ! ಕೂಡಲೇ ನಾರದರೂಪ ತಾಳಿ ಹಾಡತೊಡಗಿದರು. ಜಯ ವಿಜಯರು ತೆಪ್ಪಗಾದರು. ಬಿಜ್ಜುಗಣ್ಣಿನಿಂದ ಅವರನ್ನು ಅವಲೋಕಿಸತೊಡಗಿದರು. ಕ್ಷಮೆ ಕೇಳಲು ಅವಕಾಶ ಪಡೆಯಲು ಕಾದು ನಿಂತರು. ಹಾಡುತ್ತಾ, ಹಾಡುತ್ತಾ, ದಾಸರು (ನಾರದರು ಈಗ) ಹೆಬ್ಬಾಗಿಲಿನತ್ತ ಧಾವಿಸಿದರು. ಅರಿವಿಲ್ಲದಂತೆ ಜಯ ವಿಜಯರ ಕೈಗಳು ಬಾಗಿಲು ತೆರೆದು ಸಲ್ಯೂಟ್ ಹೊಡೆದವು. ನಾರಾಯಣ ಎನ್ನುತ್ತ ದಾಸರು ಒಳ ಹೊಕ್ಕರು... ನೇರ ವಿಷ್ಣುವಿನ ಶೇಷಾಕಾರದ ಖಾಸ ಅಂತಃಪುರದೊಳಗೂ ಹೋದರು. ತಮ್ಮ ವೈಮರೆವಿಗಾಗಿ ಅಲ್ಲಲ್ಲಿ ಡ್ಯೂಟಿ ಮೇಲಿದ್ದ ಚೇಟಿ, ಕಂಚುಕಿಯರು ಕೈ ಕೈ ಹಿಚುಕಿಕೊಂಡರು. ಒಳಗೆ ವಿಷ್ಣು-ಲಕ್ಷ್ಮಿಯರು ಅಂದೇ ಹೊಸದಾಗಿ ಬಂದ ಚಿಕ್ಕದಾದ ಚೊಕ್ಕ ಡೈನಿಂಗ ಟೇಬಲ್ಲಿನ ಬಳಿ ಎದುರು ಬದುರು ಕುಳಿತು ಭೋಜನಾನಂದದಲ್ಲಿ ತಲ್ಲೀನ ರಾಗಿದ್ದರು. ಲಕ್ಷ್ಮೀದೇವಿ ಪ್ರೀತಿಯಿಂದ ಒಂದು ಗರಂ "ಮಿರ್ಚಿ"ಯನ್ನು ವಿಷ್ಣುವಿನ ಬಾಯಲ್ಲಿ ಇಡುವುದಕ್ಕೆ ಸರಿಯಾಗಿ-

"ನಾರಾಯಣ, ನಾರಾಯಣ" ಎಂದರಚಿದರು ದಾಸರು, ಕಣ್ಣು ಮುಚ್ಚಿ ಭಕ್ತಿಪರವಶರಾಗಿ. ಅವಸರದಲ್ಲಿ ಖಾರದ ಆ ಮಿರ್ಚಿ ತಿಂದ ವಿಷ್ಣು ತಾನೂ ಗರಂ ಆಗಿ-

"ಏನಯ್ಯ, ಹೊತ್ತಿಲ್ಲದ ಹೊತ್ತಿನಲ್ಲಿ ಹೀಗೆ ಇಲ್ಲಿಗೆ ಬರಬಹುದೇನಯ್ಯ".

"ನಾರಾಯಣ"

"ಅಷ್ಟೂ ತಿಳಿಯುವುದಿಲ್ಲವೇ? ಅಂತಃಪುರದ ಶಿಷ್ಟಾಚಾರ ಗೊತ್ತಿಲ್ಲವೊ?"

"ನಾರಾಯಣ" ಎಂದು ಗೊಣಗಿ, ದನಿ ಎತ್ತರಿಸಿ ದಾಸರು ಹೇಳಿದರು-

"ಶ್ರೀಹರಿ, ಹೀಗೆ ಹೀಯಾಳಿಸಬೇಡ. ನೀನು ಮಾತ್ರ ಯಾವಾಗ ಅಂದರೆ ಆವಾಗ ನಮ್ಮ ಅಂತರಂಗದಲ್ಲಿ ಬಂದು ಕೋಲಾಹಲ ಎಬ್ಬಿಸಬಹುದು. ನಾವು ಮಾತ್ರ ಬರಬಾರದೋ?-ಅಲ್ಲವೇನಮ್ಮ ತಾಯಿ?"

—ಲಕ್ಷ್ಮಿಗೆ ಮೋಜೆನಿಸಿತು. ಹೌದು ಎಂಬಂತೆ ತಲೆ ಅಲ್ಲಾಡಿಸಿದಳು. ಆಕೆಯ ಸಮ್ಮತಿಗೆ ಉತ್ತೇಜಿತರಾದ ದಾಸರು-

"ನಾರಾಯಣ, ಈ ತಾಯಿ ನೋಡು. ನಿನ್ನ ಹಾಗೆ ತಿರುಗಲ ತಿಪ್ಪೆ ಅಲ್ಲ. ಕರೆದರೂ ಬರುವುದಿಲ್ಲ. ಮೊರೆದರೂ ಬರುವುದಿಲ್ಲ. ಭೂಲೋಕವಂತೂ ಈ ತಾಯಿ ಬಂದಾಳೇ ಎಂದು ತುದಿಗಾಲ ಮೇಲೆ ನಿಂತು ನಿರೀಕ್ಷಿಸುತ್ತದೆ. ಭೂಮಿಯು ಒಳಗಿಂದ ಬರುವಳೆಂದು ಅಗೆದು ನೋಡುತ್ತದೆ. ಆದರೂ ತಾಯಿ ಬರುವುದಿಲ್ಲ. ನೀನೋ ಹೇಳದೆ ಕೇಳದೆ ಹಾಜರು. ಲೆಕ್ಕ ಹಾಕೋಣ ನೀನೆಷ್ಟು ಸಲ ಬಂದಿರುವಿ. ಭೂಮಿಯ ಪೃಷ್ಠೆ ಬಗೆಹರಿದಿದೆಯೇ. ಬರುತ್ತೀ. ಯುದ್ಧ ಸಾರುತ್ತೀ. ಧರ್ಮದ ಹೆಸರಿನಲ್ಲಿ ನಿನಗೆ ಬೇಡದವರ ಸಂಹಾರ ಮಾಡುತ್ತೀ. ಇದನ್ನೇ ಅವತಾರ ಎನ್ನುತ್ತೇವೆ- ನಾವು ಮೂರ್ಖರು! ಇದರಿಂದ ಏನು ಪ್ರಯೋಜನ, ಅದೇ ಅಮ್ಮ ಲಕುಮಿ ಒಮ್ಮೆ

ಬರಲಿ. ಆಗ ನೋಡು ಭೂಲೋಕ ಹೇಗೆ ನಗು-ನಗುತ್ತಿರುತ್ತದೆ. ಅಲ್ಲವೇ ತಾಯಿ!.... ನಾರಾಯಣ...." ದಾಸರ (ನಾರದರ) ಈ ಮಾತು ವಿಷ್ಣುವಿಗೆ ಕಹಿ, ಲಕ್ಷ್ಮಿಗೆ ಸಿಹಿ ಎನ್ನಿಸಿತು. ಕಹಿಯಾದ ಮಾತನ್ನು ಹೇಗೋ ಪೆಪ್ಪರಮೆಂಟಿನಂತೆ ಚಪ್ಪರಿಸಿಕೊಳ್ಳುತ್ತ, "ಆಯಿತು, ಈಗ ಆದದ್ದೇನು?"

–"ಆದದ್ದೇನೇ? ನೋಡಿದೆಯಾ ತಾಯಿ!! ಮಾಧವನ ಮರೆವೆಯನ್ನು. ಇಷ್ಟು ಹೊತ್ತು ನನ್ನನ್ನು ಹೀನಸಂಗೀತ ಮಾರಿಗೆ ಬಲಿಕೊಟ್ಟು ಮೋಜು ನೋಡಿದ ಈತ ಈಗ ಏನೂ ಗೊತ್ತಿಲ್ಲದವರಂತೆ ಮಾತಾಡುತ್ತಾನಲ್ಲ".

ಲಕ್ಷ್ಮೀದೇವಿ ಮತ್ತೊಮ್ಮೆ ಮುಗುಳುನಕ್ಕಳು. ವಿಷ್ಣು ಗಹಗಹಿಸಿ ನಕ್ಕ- ಹೆಂಡತಿಯ ಮುಂದೆ ಅವಮಾನ ಆಡಿದ ನಾಲಗೆ ಈಗ ಅಸಹಾಯವಾಗಿ ಆಲಾಪಿಸುವುದನ್ನು ಕೇಳಿ...ಆಗ ಹಾಟ್ ಲೈನ್‌ನ ಮೇಲೆ ಕೆಂಪುಬೆಳಕಿನ ಗೀರು ಕೂರೆಯತೊಡಗಿತು. ಏನೋ ವಿಪ್ಲವ ಸಂಗತಿ– ಎಂದು ವಿಷ್ಣು ಆತುರದಿಂದ ಮಾತಾಡಲು ಒಳಗೆ ಹೋದ. ಇದೇ ಸಂಧಿ ಸಾಧಿಸಿದ ದಾಸರು ಲಕ್ಷ್ಮಿಯನ್ನು ಒಳಗೆ ಹಾಕಿಕೊಂಡು ವಿಷ್ಣುವಿಗೆ ಬುದ್ಧಿ ಕಲಿಸಲು ಹಂಚಿಕೆ ಹಾಕಿದರು.

....................

–ಹಾಗಾದರೆ ಇದರ ರಹಸ್ಯವೇನು? ಕೂಡಿದ ಹಿರಿಯರು ಗಡಿಬಿಡಿಗೊಂಡರು. ಗಾಜು ಸೀಳಿದೆ. ದಾಸರ ಚಿತ್ರ ಅಳಿಸಿಹೋಗಿದೆ. ಹೀಗಾಗುವುದೆಂದರೆ ಯಾವುದೋ ಕೆಟ್ಟದು ಕಾದಿದೆ.! ಈಗ ಏನು ಮಾಡಬೇಕು? ಇದಕ್ಕೆ ಪರಿಹಾರವೇನು? ಏನು?...ಹಾ ಇದಕ್ಕೆ ಪರಿಹಾರವೆಂದರೆ- ಒಂದು ಸಪ್ತಾಹ ದೇವರ ಭಜನೆ ಮಾಡುವುದು. ದಾಸರ ಜಾಗದಲ್ಲಿ ಪಾಂಡುರಂಗನ ಫೋಟೋ ಇಡುವುದು- ಅದರಡಿಯಲ್ಲಿ ದಾಸರ ಚಿತ್ರ ಇಟ್ಟರೂ ಆಯಿತು, ಬಿಟ್ಟರೂ ಆಯಿತು- ದಾಸರ ಪುಣ್ಯ, ಬಿಟ್ಟದ್ದೇ ಆಯಿತು. ಕೊನೆಗೆ ಪಾಂಡುರಂಗನ ಫೋಟೋ ಇಡುವಾಗ ಹತ್ತಾರು ಕತ್ತೆಶಾರೀರದವರು- ಎನಗೂ ಆಣೆ ರಂಗ ನಿನಗೂ ಆಣೆ ಎಂದು ಕಿರುಚಿ-ಕಿರುಚಿ ಹಾಡುತ್ತ ಭಜನೆ ಮಾಡತೊಡಗಿದರು. ಸೀತೆ ಲಕ್ಷ್ಮಣರೇಖೆಯನ್ನೇನೋ ದಾಟಿದಳು- ವಿನಾಶಕಾಲ ಪ್ರಾಪ್ತವಾಗಿ; ವಿಮೋಚನಾ ಕಾಲದಲ್ಲಿ ಈ ವಿಪರೀತ ಬುದ್ಧಿ ಕೆಲಸಕ್ಕೆ ಬರುವುದಿಲ್ಲ- ಅಂತೆಯೇ ಪಾಂಡುರಂಗ ತನ್ನ ಹೆಸರಿನ ಮೇಲಿಟ್ಟ ಆಣೆಯಿಂದ ಹೊರಗೆ ಬರಲಾರದೆ ಹೋದ. ತಾಳಗೆಟ್ಟು, ಮತಿಗೆಟ್ಟು, ತಲೆಚಿಟ್ಟು ಹಿಡಿಯುವ ಭಜನೆಯ ಹೊಡೆತಕ್ಕೆ ವಿಲಿವಿಲಿ ಒದ್ದಾಡಿದ. ಬಿಟ್ಟು ಓಡಿ ಹೋಗಬೇಕೆಂದರೆ ಆಣೆ ಇಟ್ಟುಕೊಂಡಿದ್ದಾರೆ. ಈ ಭಜನೆಯೋ ಭರ್ಚಿಯಂತೆ ತಿವಿಯುತ್ತಿದೆ. ಗಾಬರಿಯಾದವರು ಕಿರಚುವಂತೆ ಎಲ್ಲರೂ ಜೋರಾಗಿ "ಜೈ ಪುರಂದರ– (ಇನ್ನೇನು ವಿಠ್ಠಲ ಅನ್ನಬೇಕು,) ಭಗವಂತನು ತ್ವೇಷದಿಂದ–ದಾಸ ಎಂದು ಕಿರುಚಿಕೊಂಡ. ಮರೆಯಲ್ಲಿದ್ದುಕೊಂಡು ಭಗವಂತನಿಗೆ ಆಗುತ್ತಿದ್ದ ಹಿಂಸೆಯನ್ನು ನೋಡಿ ನಗುತ್ತಿದ್ದ ದಾಸರು, ಮಂತ್ರವಾದಿಯ ಕರೆಗೆ ಬರುವ ಭೂತದಂತೆ ಹೊರಟರು. ದೇವರೇ ಕೂಗಿದ ಮೇಲೆ ಬರದಿರಲು ಹೇಗೆ ಸಾಧ್ಯ? ಬಡಾ ಬಾಸ್ ಕಾಲ್ ಅದು. ಹೋದರೆ ತನ್ನ ಗತಿ ಏನೋ- ಆ ಭಜನೆಯ ಪೆಟ್ಟುಗಳನ್ನು ಹೇಗೆ ಸಹಿಸುವುದು. ಮೊದಲಿನ ಹಾಡುಗಳ ತಿವಿತ ಎಷ್ಟೋ ಮೇಲು. ಏನೂ ತಿಳಿಯದೆ ಬೆಪ್ಪಾಗಿ- ತಪ್ಪಾಯಿತು ಎಂಬಂತೆ ಲಕ್ಷ್ಮೀದೇವಿಯ ಕಾಲಿಗೆ ಬಿದ್ದು ಬೇಡಿಕೊಳ್ಳತೊಡಗಿದರು–ತಮ್ಮ ನಾರದ ರೂಪ ತೊರೆದು! ಪಾಪ- ಎನ್ನುತ್ತ ಲಕ್ಷ್ಮಿ ದಾಸರಿಗೆ ಅಭಯ ಹೇಳಿ ಭೂಲೋಕಕ್ಕೆ ಅವರೊಂದಿಗೆ ಬಂದಳು. ಭಾಗ್ಯದ ಲಕ್ಷ್ಮಿ ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತ ಬರುತ್ತಿರಲು ಗೆಜ್ಜೆಯ ಘಿಲ್ಲುರಿ ಜನರನ್ನು ಸ್ತಬ್ದಗೊಳಿಸಿತು. ಅವರು ದಾಸರನ್ನು, ದೇವರನ್ನು ಮರೆತರು. ಆಕೆಯ ಸೌಂದರ್ಯ, ಸೊಬಗು, ಬೆಡಗು, ಬಿನ್ನಾಣಗಳಿಗೆ ಬೆಪ್ಪಾಗಿ ಹಾಡು ಮರೆತರು. ಬಂಗಾರವೇ ತರೆತೆರೆಯಾಗಿ ಹರಿದು ಬರುತ್ತಿರುವಂತೆಯೂ, ಒಂದೊಂದು ತೆರೆಯನ್ನು ತಾವು ಎತ್ತಿಕೊಳ್ಳುವಂತೆಯೂ ಅವರಿಗೆ ಭಾಸವಾಯಿತು. ಹಾಡನ್ನಂತೂ ಮರೆತರು. ಮಾತು ಮರೆತರು.-ತೆರೆದ ಬಾಯಿ ತೆರೆದಂತೆ ಮೂಕರಾಗಿ ಬಿಟ್ಟರು. ಈ ಸ್ತಬ್ಧತೆಯಿಂದ ದಾಸರೂ ವಿಷ್ಣುವೂ ಶಾಪ ವಿಮೋಚನೆ ಪಡೆದವರಂತೆ-ಹಗುರವಾದರು. ಸದ್ಯ ಬದುಕಿದೆವೆಂದು ದಾಸರು-ದೇವರು, ಒಬ್ಬರೊಬ್ಬರನ್ನು ನೋಡಿ ಮುಗುಳುನಕ್ಕರು. ಉಭಯರ ಚಿತ್ತಕ್ಷೋಭೆ ತೊಲಗಿ, ಪ್ರಸನ್ನರಾಗಿದ್ದರು. ದಾಸರು ಲಕ್ಷ್ಮೀದೇವಿಯ ಪಾದಗಳಲ್ಲಿ ಹೊರಳಾಡುತ್ತ– ಇನ್ನು ಈ ಜನ ನನ್ನ ತಿಥಿ ಮಾಡುವುದು ಬೇಡ– ಅವರಿಗೆ ಬುದ್ಧಿಯನ್ನು ಕೊಡಬೇಡ ತಾಯಿ –ಎಂದು ವರ ಕೇಳಿ, ಕುಸಿಬಿದ್ದರು,



ಸರೂ ಹೊರಗಿನಿಂದ ಅವನನ್ನು ಜಗ್ಗುತ್ತಿದ್ದರೆ ಕಾಂತಾ ಹೃದಯ ಬ್ಬಿಟ್ಟುಕೊಂಡಿದ್ದಳು. ಆ ಮಮತೆ, ಮಾರ್ದವತೆಗೆ ಅವನೂ ಶರಣಾಗಿದ್ದ. ಆ ಪರಿಮಳದ ಸುಳಿಯಲ್ಲಿ ಸಿಲುಕಿದ್ದ. ಅದು ಅವನ ಬಾಳಿನ ಬುತ್ತಿಯಾಗಿತ್ತು.




ಆಫೀಸಿಗೆ ತಡವಾಗಿತ್ತು. ನನ ಕಾರು ಕೆಟ್ಟು ರಿಪೇರಿಗೆ ಹೋಗಿದ್ದರಿಂದ ಬಸ್ಸು ಹಿಡಿಯಲು ಸ್ಟಾಪಿಗೆ ನಡೆಯಬೇಕಾಗಿತ್ತು. ನಾಲ್ಕಾರು ದಿನ ಗೆಳೆಯ ರಮೇಶ ತನ್ನ ಸ್ಕೂಟರ್ ಮೇಲೆ ಕರೆದೊಯ್ದಿದ್ದ. ಇಂದು ಅವನೂ ಊರಲ್ಲಿರಲಿಲ್ಲ. ಅವಸರದಲ್ಲಿ ಟೈ ಗಂಟು ಹಾಕುತ್ತಿದ್ದೆ.

"ಇವತ್ತು ಸ್ವಲ್ಪ ಲಗೂನ ಬರ್ರಿ ಆಫೀಸಿನಿಂದ" ಸರೂ ಹೇಳಿದಳು.

"ಯಾಕ ಏನರೆ ಕೆಲಸ ಅದ ಏನು?"

"ಮರತಬಿಟ್ಟರೇನು ಹದಿನೈದು ದಿವಸಾತು ಹೇಳ್ತೀನಿ 'ಆರಾಧನಾ' ಸಿನಿಮಾಕ್ಕ ಹೋಗೋಣ ಅಂತ" ಅಸಮಾಧಾನ ಹೊರಚೆಲ್ಲಿದಳು ದನಿಯಲ್ಲಿ.

"ಕಾರು ಬರಲಿಯಲ್ಲ, ರಿಪೇರಿಗೆ ಹೋಗೇದ" ಪ್ರೋಗ್ರಾಂ ಮುಂದೂಡುವ ವಿಚಾರದಿಂದ ಹೇಳಿದೆ.

"ಕಾರಿನ ಸಲುವಾಗಿ ಕಾಯ್ದರ ಸಿನಿಮಾ ಹೋಗಿಬಿಡತದ. ಇವತ್ತ ಹೋಗಲಿಕ್ಕ ಬೇಕು" ಮೆಟ್ಟಲ ಮೇಲೆ ನಿಂತು ಹೇಳಿದಳು ಸರೂ.

"ಹೂಂ" ಎಂದೆ ನಾನು. ಗೇಟು ಹಾಕುತ್ತ ಮನೆಯ ಕಡೆಗೆ ನೋಡಿದೆ. ಅಲ್ಲಿ ಸರೋಜ ಇರಲಿಲ್ಲ. ಸಮಾಧಾನವಾಯಿತು. ನಿಟ್ಟುಸಿರು ತಾನೇ ಬಾಯಿಂದ ಹೊರಬಿತ್ತು. ಸ್ಕೂಲಿಗೆ ಹೋಗುವ ಹುಡುಗನೊಬ್ಬ ನನ್ನನ್ನೇ ದಿಟ್ಟಿಸಿ ನೋಡಿದ್ದರಿಂದ ಎಚ್ಚರಗೊಂಡೆ. ಸಿನಿಮಾಕ್ಕೆ ಸರೂಳ ಜೊತೆ ಹೋಗಲು ಒಪ್ಪಿಕೊಳ್ಳಲೇಬೇಕಾಗಿತ್ತು. ಒಪ್ಪದಿದ್ದರೆ ಮುಂದಿನ ಪರಿಣಾಮ ಏನೆಂಬುದನ್ನು ಅವಳ ಸಹವಾಸದ ಮೂರು ವರ್ಷಗಳ ಅವಧಿಯಲ್ಲಿ ಅರಿತೇ ಇದ್ದೆ. ಮದುವೆಯಾದ ಹೊಸದರಲ್ಲಿ ಸರೂಳ ಸಿನೇಮಾ ಹುಚ್ಚನ್ನು ಉತ್ಸಾಹದಿಂದಲೇ ಪ್ರೋತ್ಸಾಹಿಸಿದ್ದೆ. ಅವಳು ಹಳಬಳಾದಂತೆ ಅವಳ ಸಿನಿಮಾ ಹುಚ್ಚು ಅಸಹನೀಯವಾಗಿತ್ತು ನನಗೆ. ಮೂರು ತಾಸು ಥೇಟರಿನಲ್ಲಿ ವೇಳೆ ಕಳೆದು ಹಣ ಹಾಳುಮಾಡಿಕೊಳ್ಳುವುದು ನನಗಿಷ್ಟವಿಲ್ಲ ಎಂದು ಅವಳಿಗೆ ಸ್ಪಷ್ಟವಾಗಿಯೇ ಹೇಳಿಬಿಟ್ಟೆ. ನಿನಗೆ ಬೇಕಾದರೆ ಹೋಗಿ ನೋಡಬಹುದು ಎನ್ನುವಷ್ಟು ಸ್ವಾತಂತ್ರ್ಯ ಕೊಟ್ಟೆ. ಎರಡು ದಿನ ಜಗಳವಾಡಿ ಮಾತು ಬಿಟ್ಟರೂ ಆಮೇಲೆ ನೆರೆಮನೆಯ ಗೆಳತಿಯೊಡನೆ ಹೋಗಿ ಸಿನಿಮಾ ನೋಡಿಬಂದಳು. ಅಲ್ಲಿಯ ಸಮತಾವಾದ ಅವಳಿಗೆ ಹಿಡಿಸಲಿಲ್ಲ. ಅವಳ ಮಾಜೀ ಮುಸುರೆ ತಿಕ್ಕುವವಳು ಅವಳ ಪಕ್ಕದಲ್ಲೇ ಕುಳಿತಿದ್ದಳಂತೆ. ಮನೆಗೆ ಬಂದು ನನ್ನ ಹತ್ತಿರ ತನ್ನ ಗೌರವ ಮುಕ್ಕಾದುದನ್ನು ತೋಡಿಕೊಂಡಳು. ಹೋಗಲಿ, ದುಡ್ಡು ಖರ್ಚಾದರೂ ಚಿಂತೆಯಿಲ್ಲ ಲೇಡೀಜ ಸೀಟು ಬಿಟ್ಟು ಬಾಲ್ಕನಿಗೆ ಹೋಗು ಎಂದು ಸಲಹೆ ಮಾಡಿದೆ. ಜೊತೆಗೆ ಯಾರೂ ಸಿಕ್ಕದೆ ಒಮ್ಮೆ ಒಬ್ಬಳೇ ಬಾಲ್ಕನಿಗೆ ಕುಳಿತುಕೊಳ್ಳಲು ಹೋದಾಗ ಭಯಂಕರ ಸುದ್ದಿ ತಂದಳು. ಪಕ್ಕದಲ್ಲಿ ಕುಳಿತ ಸಭ್ಯ(!) ತರುಣ ಕತ್ತಲಾದಾಗ ಅವಳ ಕೈ ಹಿಚುಕಿದನಂತೆ. ಮತ್ತೊಮ್ಮೆಯಂತೂ ಭುಜದ ಮೇಲೆ ಕೈ ಹಾಕಲು ಬಂದನಂತೆ. ಹೆಂಡತಿಯ ಮಾನ ಕಾಯುವದು, ಮನೆಯ ಶಾಂತಿ ಕಾಯುವುದು ಗಂಡನ ಧರ್ಮವಲ್ಲವೇ? ಸರಿ. ಆಮೇಲೆ ಅವಳು ಹೇಳಿದ ಸಿನಿಮಾಕ್ಕೆ ಅವಳ ಬಾಡಿಗಾರ್ಡ ಆಗಿ ಹೋಗಿಬರತೊಡಗಿದೆ. ಎರಡು ತಾಸು ಚೆನ್ನಾಗಿ ನಿದ್ರೆಮಾಡುತ್ತಿದ್ದವನನ್ನು ಆಗಾಗ ಜೋರಾಗಿ ಹಾಡಿದ ಪ್ರಣಯ ಗೀತೆಗಳು ಎಚ್ಚರಿಸುತ್ತಿದ್ದವು. ನನ್ನ ಅವಸ್ಥೆಯನ್ನು ಕಂಡೂ ಅವಳಿಗೆ ನನ್ನ ಮೇಲೆ ಕನಿಕರ ಬರಲಿಲ್ಲ. ಒಮ್ಮೆಯೂ, ನಿಮಗೆ ಸಿನಿಮಾ ಹಿಡಿಸದಿದ್ದರೆ ಹೋಗುವದು ಬಿಡೋಣ ಎನ್ನಲಿಲ್ಲ ಮಹರಾಯತಿ.

ನಿಧಾನವಾಗಿದ್ದ ನಡಿಗೆಯನ್ನು ಜೋರು ಮಾಡಿದೆ. ಬಸ್ಸು ಬರಲು ಇನ್ನೂ ಸಮಯವಿತ್ತು. ಅಲ್ಲಿ ನಿಂತಿದ್ದ ಹೆಚ್ಚಿನ ಜನ ಒಬ್ಬರಿಗೊಬ್ಬರು ಪರಿಚಿತರಿದ್ದರೂ ದಿನವೂ ಕಾರಿನಲ್ಲಿ ಹೋಗುವ ನನಗೆ ಅವರೆಲ್ಲ ಅಪರಿಚಿತರೇ. ಅವರಲ್ಲೇ ಒಬ್ಬರು "ನಮಸ್ಕಾರ" ಎಂದರು. "ನಿಮ್ಮ ಸುರೇಶ ನನ್ನ ಕ್ಲಾಸಮೇಟ. ನಾನು ಆಗಾಗ ನಿಮ್ಮ ಮನೆಗೆ ಬರುತ್ತಿದ್ದೆ. ನೀವು ಮರೆತಿದ್ದೀರಿ" ಎನ್ನುತ್ತ ನಕ್ಕರು. ಒಬ್ಬ ಪರಿಚಯದವರಾದರೂ ಸಿಕ್ಕರಲ್ಲ ಎನ್ನುವ ಸಮಾಧಾನದಿಂದ ಮಾತಿಗೆ ತೊಡಗಿದೆ. ಸುರೇಶನ ಯೋಗಕ್ಷೇಮ ವಿಚಾರಿಸಿದರು. ರಾಂಚಿಯಲ್ಲಿ ಇಂಜನಿಯರ ಆಗಿದ್ದ ಸುರೇಶ ವರುಷದ ಹಿಂದೆ ಬಂದಾಗ ಅವನಿಗೂ ಅವನ ಹೆಂಡತಿಗೂ ಸರೂ ತೋರಿದ ಅನಾದರ ಕಂಡು ಈ ಸಲ ಅವನಿಗೆ ಆಮಂತ್ರಣ ಕೊಡುವ ಧೈರ್ಯ ಮಾಡಿರಲಿಲ್ಲ ನಾನು. ಆಗೀಗ ಪತ್ರ ಬರೆಯುತ್ತಿದ್ದ. ನೂರಾರು ಮೈಲು ದೂರದಲ್ಲಿದ್ದರೇನಾಯಿತು? ಅಣ್ಣ – ತಮ್ಮಂದಿರು ಸುಳ್ಳೇ? ಕರುಳು ಮಿಡಿಯುತ್ತಿತ್ತು. ಇದನ್ನೆಲ್ಲ ಅವರ ಮುಂದೆ ಹೇಗೆ ಹೇಳುವುದು? "ಬಸ್ಸು ಬಂತು ಸರ್" ಎಂದರು.

ಟೇಬಲ್ಲಿನ ಮೇಲೆ ಕಾಗದಪತ್ರಗಳ ರಾಶಿ ಬಿದ್ದಿತ್ತು. ಕೆಲಸ ಕೈ ಮಾಡಿ ಕರೆಯುತ್ತಿತ್ತು. ಬೆಲ್ ಬಾರಿಸಿ ಒಳಗೆ ಬಂದ ಪ್ಯೂನನಿಗೆ ಸ್ಟೆನೋನ ಕರೆಯಲು ಹೇಳಿ ಕಣ್ಣು ಮುಚ್ಚಿದೆ.

ಹೌದು ನಾನು ಕಾಂತಾಳನ್ನು ನೋಡುವದೆ ಮುಂದೆ ಯಾವ ಹೆಸರು ಹಿಡಿದು ಕರೆಯುವದಿಲ್ಲ ಅವಳು ಅದೇ ಹೊಸದಾಗಿ ಕೆಲಸಕ್ಕೆ ಸೇರಿದಾಗಿನ ಮಾತು. ನನ್ನ ಸೆಕ್ರೆಟರಿ ಪಾಟೀಲ ಆರೋಗ್ಯ ಚೆನ್ನಾಗಿಲ್ಲವೆಂದು ಆರು ತಿಂಗಳು ರಜೆ ಹಾಕಿದ್ದ. ಹೆಡ್‌ಕ್ಲಾರ್ಕ್ ಅವಳನ್ನು ನನ್ನ ರೂಮಿಗೆ ಕರೆತಂದಾಗ ಬೆಚ್ಚಿ ನಾನೇ ಎದ್ದು ನಿಂತೆ. ಅವಳು ಕಣ್ಣೆತ್ತಿ ಸುಮ್ಮನೆ ನನ್ನನ್ನು ನೋಡುತ್ತಿದ್ದಳು ಅಷ್ಟೇ. ಆ ನೋಟದಲ್ಲೇನು ಹೇಳಿಯಿತ್ತೋ. ನಾನು ಏನೂ ಮಾತನಾಡದೆ ಗಂಭೀರವಾಗಿ ಸುಮ್ಮನೆ ಕುಳಿತೆ. ಹೆಡ್‌ಕ್ಲಾರ್ಕ್ ಪರಿಚಯದ ಶಾಸ್ತ್ರ ಮಾಡಿ ಹೊರಗೆ ಹೋದ ಮೇಲೆ ಮೂಕನಾಗಿ ಅವಳಿಗೆ ಕುಳಿತುಕೊಳ್ಳಲು ಸನ್ನೆ ಮಾಡಿದೆ.

"ನನ್ನನ್ನು ಇಲ್ಲಿ ನೋಡಿ ನಿಮಗೆ ಆಶ್ಚರ್ಯ ಆಗೇದ ಅಲ್ಲ"

"ಹೌದು, ಆಶ್ಚರ್ಯ ಅಷ್ಟೇ ಅಲ್ಲ, ಗಾಬರಿಯೂ ಆಗೇದ. ನಿಮಗೆ ಮದುವೆ ಆಯಿತು ಅಂತ ಸರೂ ಹೇಳಿದ್ದಳು"

"ಅಂತೂ ನನ್ನ ನೆನಪು ಅದ ನಿಮಗ".

"ನಿಮ್ಮನ್ನು ಮರೆಯೋದು ಎಂದರೆ ಅದು ಹ್ಯಾಂಗೆ ಸಾಧ್ಯ" ಕಾಂತಾಳ ಮುಖ ಕೆಂಪೇರಿದ್ದನ್ನು ನೋಡಿ ನಾನೇ ಮಾತು ಮುಂದುವರಿಸಿದೆ "ನನ್ನ ಹೆಂಡತಿಯ ಬಾಲ್ಯದ ಗೆಳತಿ ಅಲ್ಲ ನೀವು?"

ಸಮಾಧಾನದ ಉಸಿರು ಬಿಟ್ಟು ಕಾಂತಾ ಹೇಳಿದಳು. "ನನ್ನ ಮ್ಯಾಟ್ರಿಕ್ ಮುಗಿದ ಮೇಲೆ ಮದುವೆ ಆಯ್ತು. ಯಜಮಾನರು ಹಾದೀಬೋರ್ಡಿನೊಳಗೆ ಕೆಲಸ ಮಾಡ್ತಾರ. ಮಗಳೂ ಹುಟ್ಯಾಳ. ಅವರ ಸಂಬಳ ಸಂಸಾರಕ್ಕೆ ಸಾಲದು ಅಂತ ನನ್ನ ಈ ಕೆಲಸಕ್ಕೆ ಕಳಿಸಿದರು"ಎಂದಿದ್ದಳಾಕೆ. ಅಂದರೆ ತನ್ನ ಇಷ್ಟದಿಂದಲೇ ದುಡಿಯಲು ಬಂದಿಲ್ಲ ಎಂದು ಅರ್ಥವಾಯಿತು. ಒಂದು ಗಳಿಗೆ ಸಮಾಧಾನವಾಯಿತು. ಅದೇಕೋ ಹೆಣ್ಣು ಮಕ್ಕಳು ಹೊರಗೆ ದುಡಿಯಲು ಹೋಗುವದು ನನಗಿಷ್ಟವಿಲ್ಲದ ಮಾತು. ಆದರೆ ಇಲ್ಲಿ ಕಾಂತಾ ತನ್ನ ಗಂಡನ ಇಷ್ಟದಂತೆ ನಡೆಯಬೇಕಲ್ಲ.

"ಟೈಪಿಂಗ ಯಾವಾಗ ಕಲಿತಿರಿ?"



"ಕೆಲಸಕ್ಕೆ ಸೇರಲೇಬೇಕು ಅನ್ನೊ ನಿರ್ಧಾರ ಮಾಡಿದಮ್ಯಾಲೆ ಟೈಪು ಕಲಿತು ಪರೀಕ್ಷೆಯನ್ನೂ ಪಾಸಾದೆ".

"ಮಗಳನ್ನು ಜೋಕಿ ನೋಡಿಕೊಳ್ಳೋರು ನೀವಿಬ್ಬರೂ ಕೆಲಸಕ್ಕ ಹೋದಾಗ?"

"ನಮ್ಮ ತಂದಿ ತೀರಿಕೊಂಡ ಮ್ಯಾಲೆ ತಾಯಿ ಇಲ್ಲೇ ಇದ್ದಾರೆ ನನ್ನ ಹತ್ತಿರ" ಆಯಿತು, ಕೇಳುವ ಪ್ರಶ್ನೆಗಳೆಲ್ಲ ಮುಗಿದುವಲ್ಲ, "ಸರಿ ಒಂದು ಲೆಟರ ಡಿಕ್ಟೇಟು ಮಾಡ್ತೀನಿ ಬರಕೊಳ್ರಿ..." ಎಂದೆ......

"ನಾನು ಸಿದ್ಧವಾಗಿ ಕುಳಿತು ಬಹಳ ಹೊತ್ತಾಯಿತು ಸರ್" ಎಂದಳು ಕಾಂತಾ. ಕಣ್ಣು ತೆರೆದು ನೋಡಿದೆ. ಡಿಕ್ಟೇಶನ್‌ಗೆ ಕಾಂತಾ ಸಿದ್ಧವಾಗಿದ್ದಳು. ಆದರೆ ನಾನು ಸಿದ್ಧನಾಗಿರಲಿಲ್ಲ. ನನ್ನ ಮೌನ ನೋಡಿ "ಯಾಕ ಸಪ್ಪಗಿದ್ದೀರಿ, ಆರಾಮ ಇಲ್ಲೇನು?" ಎಂದಳು ಮೆಲುದನಿಯಲ್ಲಿ, ನನಗಷ್ಟೇ ಕೇಳಿಸುವಂತೆ.

"ಕಾಂತಾ, ನಿನ್ನ ಮಗಳು ಹ್ಯಾಂಗ ಅದಾಳ ಜ್ವರಾ ಕಡಿಮಿ ಆಗ್ಯಾವೇನು?" ಈ ಐದಾರು ತಿಂಗಳ ಅವಧಿಯಲ್ಲಿ ಏಕವಚನದಲ್ಲಿ ಮಾತನಾಡುವಷ್ಟು ಕಾಂತಾ ನನ್ನ ಹತ್ತಿರ ಬಂದಿದ್ದಳು. ಅವಳು ಮುಡಿಯುತ್ತಿದ್ದ ಮಲ್ಲಿಗೆಯ ಪರಿಮಳ ದಿನವೂ ನನ್ನ ಸುತ್ತ ಸುಳಿದಾಡುತ್ತ ಮನಸ್ಸನ್ನು ಪ್ರಸನ್ನಗೊಳಿಸುತ್ತಿತ್ತು.

"ಇವತ್ತ ಆರಾಮ ಇದ್ದಾಳ ವೀಣಾ. ನಾನು ಆಫೀಸಿಗೆ ಬರೂ ಮುಂದ ೧೦೦ ಡಿಗ್ರಿ ತನಾ ಜ್ವರಾ ಇದ್ದವು" ಕಾಂತಾಳ ಧ್ವನಿಯಲ್ಲಿ ಕೃತಜ್ಞತೆ ತುಂಬಿತ್ತು. "ನಿನ್ನೆ ಬಹಳ ಹೆದರಿ ಬಿಟ್ಟಿದ್ದೆ" ಎಂದಾಗ ನನ್ನ ಮನಸ್ಸು ನಿನ್ನೆಗೋಡಿತ್ತು. ಹಿಂದಿನ ದಿನ ಕಾಂತಾ ಫೈಲು ಹಿಡಿದು ನನ್ನ ಹತ್ತಿರ ಬಂದಾಗ ಅವಳ ಕಣ್ಣು ಮುಖ ನೋಡಿಯೇ ತಿಳಿದುಕೊಂಡೆ ಇವಳು ದಿನದಂತೆ ಇಲ್ಲವೆನ್ನುವದು. ಅವಳು ಟೇಬಲ್ಲಿನ ಹತ್ತಿರ ಬಂದಾಗ ನನಗೆ ತಡೆಯುವದಾಗಲಿಲ್ಲ. ಉದ್ವೇಗದಿಂದ ಅವಳ ಕೈ ಹಿಡಿದು ಕಾರಣ ಕೇಳಿದೆ.

"ನನ್ನ ವೀಣಾಗ ಜ್ವರಾ ಬಹಾಳ ಬಂದಾವ. ನಾನು ಬರೂಮುಂದ "ಅವ್ವಾ "ಅವ್ವಾ" ಅಂತ ಕರೀತಿದ್ದಳು. ಆಕಿನ್ನ ಬಿಡಲಾರದ ಬಿಟ್ಟು ಆಫೀಸಿಗೆ ಬಂದೆ"

"ನಿನ್ನ ಯಜಮಾನರು ಊರೊಳಗ ಇಲ್ಲೇನು?"

"ಇಲ್ಲಾ ಅವರು ಟೂರಿಗೆ ಹೋಗಿ ಮೂರು-ನಾಲ್ಕು ದಿವಸಾದವು. ತಾಯಿ ಒಬ್ಬಾಕೀನ ಇದ್ದಾಳ ಮನೀಯೊಳಗ. ವೀಣಾನ ಮುಖಾನ ಕಣ್ಣ ಮುಂದ ಕಟ್ಟಿದಾಂಗ ಆಗೇದ" ಕಾಂತಾಳ ಕಣ್ಣಿನಿಂದ ಪಟಪಟನೆ ಹನಿ ಉದುರಿದವು. ನನಗೆ ಬೇಸರವಾಯಿತು.

"ರಜಾ ಹಾಕಿ ಮನಿಯೊಳಗ ಇರಬೇಕಾಗಿತ್ತು. ಅವಳನ್ನ ಯಾಕ ಬಿಟ್ಟು ಬಂದಿ?" ಎಂದೆ.

"ಹೋದ ತಿಂಗಳು ಅವ್ವನ ಕಾಲಿಗೆ ನೋವಾತು ಅಂತ ರಜಾ ತೊಗೊಂಡೆ. ನನ್ನ ರಜಾ ಎಲ್ಲಾ ತೀರಿ ಹೋಗ್ಯಾವ". ಕಾಂತಾ ಬಿಕ್ಕಿದಳು.

"ಇರಲಿ ಈಗ ಮನೆಗೆ ಹೋಗು. ಇವತ್ತಿನ ಕೆಲಸಾ ನಾನು ಮಾಡಿಸಿಕೋತೀನಿ. ನಾಳೆ ವೀಣಾಗೆ ಆರಾಮ ಇದ್ದರೆ ಮಾತ್ರ 'ಆಫೀಸಿಗೆ ಬಾ" ಎಂದೆ. ಅಳುತ್ತ ಬಗ್ಗಿದ್ದ ಅವಳ ತಲೆ ನೇವರಿಸಿದ್ದೆ.

ಇಂದು ಅವಳೇ ಖುಶಿಯಿಂದ ಮಗಳು ಚೆನ್ನಾಗಿದ್ದಾಳೆಂದು ಹೇಳುವ ವರೆಗೆ ನನ್ನ ಮನಸ್ಸು ತಳಮಳಿಸುತ್ತಿತ್ತು. ಅವಳು ನನಗೇನೂ ಆಗಬಾರದು. ಹೊರಗಿನವರ ಕಣ್ಣಿಗೆ ಅವಳೊಬ್ಬ ಟೈಪಿಸ್ಟು ಅಷ್ಟೆ. ಆದರೂ ಅವಳ ಸಣ್ಣ ದುಃಖಕ್ಕೆ ನನ್ನ ಮನ ಅಳುತಿತ್ತು. ಇದಾವ ಜನ್ಮದ ನಂಟೋ ದೇವರಿಗೇ ಗೊತ್ತು.

"ಸರ್" ಎಂದಳು ಕಾಂತಾ ಮತ್ತೆ. ಯಾಕೆ ಎನ್ನುವಂತೆ ನೋಡುತ್ತಿದ್ದೆ.

"ನಿಮಗೆ ಆರಾಮ ಇದ್ದಾಂಗ ಕಾಣೂದಿಲ್ಲ. ಜ್ವರಾ ಗಿರಾ ಬಂದಾವೇನು. ಮುಖಾ ಬಾಡೇದ"

"ಇಲ್ಲಾ ಏನಿಲ್ಲಾ ಆರಾಮ ಇದ್ದೀನಿ. ಬಿಸಲಾಗ ಬಸ್ಸಿಗೆ ಕ್ಯೂ ನಿಂತು ಬಂದೆ. ಅದಕ್ಕ ಹಾಂಗ ಅನಿಸೇದ ನಿನಗ."

"ತಡೀರಿ ಕಾಫಿ ಹೇಳ್ತೇನಿ" ಹೊರಗೆ ಹೋದಳು ಕಾಂತಾ. ಅವಳ ಧ್ವನಿಯಲ್ಲಿ ಪ್ರೀತಿ, ಅನುಕಂಪ, ಆತ್ಮೀಯತೆ ಎಲ್ಲವೂ ಇದ್ದವು. ನನಗೆ ತಲೆನೋವೇನೋ ಹಿಂದಿನ ದಿನ ರಾತ್ರಿಯಿಂದಲೇ ಸುರುವಾಗಿತ್ತು, ಸರೂನ ಗೊರಕೆಯಿಂದ ಬೇಗ ನಿದ್ದೆಯೂ ಬಂದಿರಲಿಲ್ಲ.

ಬಾಗಿಲು ಕಿರ್ರೆಂದಿತು. ಆಳು ಕಾಫಿಯೊಡನೆ ಎರಡು ಆಪಾಸಿನ್ ಗುಳಿಗೆ ತಂದಿಟ್ಟು ಹೋದ. ಹಿಂದಿನಿಂದ ಕಾಂತಾ ಬಂದಳು. ಅವಳು ಬರುವುದನ್ನು ನೋಡುತ್ತಿದ್ದರೂ ಮನಸ್ಸು ಬೇರೇನೋ ಯೋಚಿಸುತಿತ್ತು. ಇವಳು ಹೊರಗಿನಿಂದ ಬರಲು ನನ್ನನ್ನು ಬಿಟ್ಟು ಯಾವಾಗ ಹೋಗಿದ್ದಳು. ಯಾವಾಗಲೂ ನನ್ನಲ್ಲೇ ಇರುವವಳು ಹೊರಗೆ ಹೇಗೆ ಬಂದಳು. ಭುಜ ಹಿಡಿದು ಅಲುಗಿಸಿದಂತಾಯಿತು. ಮುಖವೆತ್ತಿದೆ. ಅದೇ ಪರಿಚಿತ ಮುಖ. ಎರಡು ಗುಳಿಗೆ ಅಂಗೈಯಲ್ಲಿಟ್ಟು ಕೈ ಮುಂದೆ ಮಾಡಿದಳು. ನುಂಗಿದೆ. ಕಾಫಿಕಪ್ ಬಾಯಿಗೆ ಹಿಡಿದಳು. ಅವಳ ಕೈ ಹಿಡಿದುಕೊಂಡೇ ಗುಟುಕರಿಸಿದೆ. ಗುಟುಕು ಹೊಟ್ಟೆಗೆ ಇಳಿದಂತೆ ಮನಸ್ಸು ತುಂಬಿ ಬಂದಿತು. ಎರಡು ಹನಿ ಕಣ್ಣೀರು ಕಾಫಿ ಕಪ್ಪಿಗೆ ಉರುಳಿದವು. 'ಸದಾ' ಎಂದು ನನ್ನ ತಲೆಗೂದಲ ಮೇಲೆ ಕೈಯಾಡಿಸಿ ಹಣೆ ಸವರಿದಳು ಕಾಂತಾ. ಹಾಯೆನಿಸಿತು. ಅದುವರೆಗೆ ಮನದಲ್ಲಿ ಕುದಿಯುತ್ತಿದ್ದ ಕಹಿಯನ್ನು ಹೊರಗೆ ಹಾಕಿದೆ.

"ಕಾಂತಾ, ನನಗ ಇಲ್ಲಿಂದ ವರ್ಗ ಆಗೂ ಸಂಭವ ಅದ." ಕಾಂತಾ ಏನೂ ಉತ್ತರ ಕೊಡಲಿಲ್ಲ. "ನನಗ ಪ್ರೊಮೋಶನ್ ಕೊಡತಾರಂತ" ಎಂದೆ.

"ಸಂತೋಷ"

"ನಾನು ದೂರ ಹೋಗೂದು ನಿನಗ ಸಂತೋಷ ಅದೇನು?" ಆಗಲೂ ಅವಳಿಂದ ಉತ್ತರ ಬರಲಿಲ್ಲ. ಸುಮ್ಮನೆ ಮುಖವೆತ್ತಿ ನನ್ನನ್ನು ನೋಡಿದಳು ಅಷ್ಟೆ. ಕಣ್ಣು ತುಂಬಿ ಹನಿ ಹೊರಗೆ ಉರುಳುತ್ತಿತ್ತು. "ಕಾಂತಾ, ಈ ಮಾತು ನಿನಗ ಸಂತೋಷ ಕೊಡೂದಿಲ್ಲ ಅನ್ನೂದು ನನಗ ಗೊತ್ತ ಇತ್ತು. ಆದರೂ ನನಗಾದ ದುಃಖದಿಂದ ಹಿಂಗ ಮಾತಾಡಿದೆ. ಕ್ಷಮಿಸು ನನ್ನ. ಆದರ ನಾವೀಗ ಅಗಲತೀವಿ ಅಂತ ನೀನು ಅಳಬಾರದು. ಖರೇನ ಹೇಳಬೇಕೆಂದರ ನಮ್ಮ ಲಗ್ನದಾಗ ಸರೂ ಮೊದಲನೇ ಸಾರಿ ನಿನ್ನ ನನಗ ಗುರ್ತಾ ಮಾಡಿಕೊಟ್ಟ ದಿನದಿಂದ ನೀನು ನನಗ ಆತ್ಮೀಯಳಾದಿ. ಇದು ಒರೇ ಪ್ಯಾರಿನ ಮಾತಲ್ಲ. ಆತ್ಮೀಯ ಅಂದರ ನನ್ನ ಆತ್ಮಕ್ಕೆ ಅಷ್ಟು ಸಮೀಪದವಳಾದಿ. ಆವಾಗಿಂದ ನೀನು ಇಲ್ಲಿಗೆ ಬರೂವರೆಗೂ ನಾನು ನಿನ್ನ ಮರೆತಿದ್ದೇ ಇಲ್ಲ"

"ನನ್ನಲ್ಲಿ ಏನು ನೋಡಿ ಇಷ್ಟು ನನ್ನ ಹಚ್ಚಿಕೊಂಡಿರಿ?"

"ನೀನು ಸರೂನಷ್ಟು ಛಂದ ಇಲ್ಲದಿದ್ರೂ. ನಿನ್ನ ಕಣ್ಣೊಳಗಿನ ಒಂದು ಶಕ್ತಿ ನನ್ನನ್ನ ಆಕರ್ಷಿಸಿತು. ನನ್ನದೇ ಒಂದು ಭಾಗ ನೀನು ಅಂತ ನನ್ನ ಮನಸ್ಸಿಗೆ ಗಟ್ಟಿಮಾಡಿಕೊಂಡೇನಿ. ನೀ ಇಲ್ಲಿ ಬಂದಾಗಿನಿಂದ ನಿನ್ನ ಹೆಜ್ಜಿ ಸಪ್ಪಳ ನಿನ್ನ ಬಳಿಯ ಕಿಣಿಕಿಣಿನಾದ ನಿನ್ನ ಧ್ವನಿ ಎಲ್ಲಾನು ಇಲ್ಲೇ ನನ್ನ ಮೈಯೊಳಗ, ನನ್ನ ಮನಸ್ಸಿನೊಳಗ ಬೇರೂರಿಬಿಟ್ಟಾವ. ಅದು ಎಷ್ಟು ಆಳವಾಗಿ ಬೇರೂರೇದ ಅಂದರೆ ನೀನು ಪ್ರತ್ಯಕ್ಷ ಇಲ್ಲದಿದ್ದರೂ ನಡೀತದ" ಬಡಬಡ ಎಲ್ಲ ಮಾತುಗಳನ್ನು ಹೇಳಿ ಭಿಡಿಗೊರೆಸಿಕೊಂಡೆ.

ಕಾಂತಾ ಕಣ್ಣೊರೆಸುತ್ತ, ಕಪ್ಪುಬಿಡೆ ಅತ್ತಿತ್ತ ಹೊಯ್ದಾಡುವಂತೆ ಬಳುಕುತ್ತ ಅವಸರದಿಂದ ನಡೆದು ಹೊರಗೆ ಹೋದಳು.

ಆಫೀಸಿನಿಂದ ಮನೆಗೆ ಬರುವಾಗ ತಲೆನೋವು ಪೂರ್ತಿ ಮರೆಯಾಗಿತ್ತು. ಗೇಟಿಗೆ ಬಂದೆ. ಬಾಗಿಲಲ್ಲಿ ಸರೂ ನಿಂತಿದ್ದಳು. ಅಡಿಯಿಂದ ಮುಡಿಯ ವರೆಗೆ ಅಲಂಕಾರ ಮಾಡಿಕೊಂಡು. ಅಪರಿಚಿತನಂತೆ ಅವಳನ್ನೇ ದಿಟ್ಟಿಸಿದೆ.

"ಗುರ್ತ ಹತ್ತಲಿಲ್ಲದು. ಮರೆತು ಬ್ಯಾರೆ ಯಾರದರೆ ಮನೀಗೆ ಬಂದೀರೇನು? ಸದಾನಂದ ಕುಲಕರ್ಣಿಯವರ ಮನೀ ಇದ ಹೌದೇನು?"

"ನಿಮ್ಮದೊಂದು ಚ್ಯಾಷ್ಟೀನ . ಸಿನಿಮಾಕ್ಕ ಹೊತ್ತಾಗತದ ನಡೀರಿನ್ನ ತಯಾರಾಗರಿ ಲಗೂನ" ಒಳಗೆ ನಡೆದಳು ಸರೂ.

ನಾನು ಕುರಿಯಂತೆ ಹಿಂಬಾಲಿಸಿದೆ.

× × × ×

ಬೆಳಗಿನ ಸೂರ್ಯಕಿರಣಗಳು ಅದೇ ತಾನೇ ಮನೆಯ ಮುಂದಿನ ಅಂಗಳವನ್ನು ತುಂಬುತ್ತಿದ್ದವು. ಚಹಾ ಕುಡಿದು ಬಂದು ಪಾರಿಜಾತ ಗಿಡದ ಕೆಳಗೆ ಬೆತ್ತದ ಕುರ್ಚಿ ಹಾಕಿ ಕುಳಿತುಕೊಂಡೆ. ಕಂಪೌಂಡಿನಲ್ಲಿಯ ಗಿಡ ಕಂಟಿಯ ಮೇಲೆಲ್ಲ ಹೊಂಗಿರಣಗಳು ಮೂಡಿ ಪ್ರತಿಫಲಿಸುತ್ತಿದ್ದವು. ಅರಳಿದ ಪಾರಿಜಾತ ಹೂವು ಒಂದೊಂದಾಗಿ ಗಿಡದಿಂದ ಉದುರಿ ಉದುರಿ ನೆಲದ ಮೇಲೂ ಹರಡುತ್ತಿದ್ದವು. ವಿಶ್ರಾಂತಿ ವೇತನ ಪಡೆಯುತ್ತ ಮಾಡಲು ಏನೂ ಕೆಲಸವಿಲ್ಲದೆ ಸೋಮಾರಿಯಂತೆ ಕುಳಿತಿದ್ದ ನನ್ನನ್ನೂ ಚೇತರಿಸಿತು ಆ ಆಹ್ಲಾದಕರ ವಾತಾವರಣ. ನನ್ನ ಉಡಿಯ ಮೇಲೆಯೇ ಬಿದ್ದ ಪಾರಿಜಾತ ವನ್ನೆತ್ತಿ ಮೂಗಿಗೊಯ್ದೆ. ಎಷ್ಟೊ ಸ್ವಲ್ಪ ಕಂಪು. ಮೃದುವಾದ ಪಕಳೆಗಳು, ಹವಳದ ಬಣ್ಣದ ದೇಟು ನೋಡಲು ಆಕರ್ಷಕ, ಸುಂದರ, ಆದರೂ ಕಂಪು ಜೀವದ ಈ ಸೌಂದರ್ಯ ಕ್ಷಣಿಕ. ಬಿದ್ದು ಹರಡಿದ ಈ ಹೂವುಗಳು ಇನ್ನೊಂದು ತಾಸಿನಲ್ಲಿ ಬಾಡಿ ಹುಡಿಗೂಡಿಹೋಗುವವು. ಕೈಯಲ್ಲಿದ್ದ ಪಾರಿಜಾತವನ್ನು ಹಾಗೆಯೇ ತಿರುಗಿಸುತ್ತಿದ್ದೆ.

"ನೀರು ಕಾಯ್ದು ಆರಿ ಹೋಗ್ತಾವ ಇನ್ನ ನಿಮ್ಮ ಅಜ್ಜಗ ಸ್ನಾನಕ್ಕ ಏಳೂಂತ ಹೇಳೋ ರವೀ" ಸರೂ ಒಳಗಿಂದ ಕೂಗಿದಳು. ಅಡಿಗೆಮನೆಯಿಂದ ಕೋಣೆಯಲ್ಲಿದ್ದ ರವಿಗೆ ಹೇಳಿದ ಅವಳ ಮಾತು ಅಂಗಳದಲ್ಲಿದ್ದ ನನ್ನನ್ನು ಸಹಜವಾಗಿ ಸೇರಿತ್ತು. ಅವಳ ಗಂಟಲು ಅಷ್ಟು ದೊಡ್ಡದು. ಇಷ್ಟು ಬೇಗ ಸ್ನಾನ ಮಾಡಲು ಮನ ಒಪ್ಪದೆ ನಾನು ಕುಳಿತ ಕುರ್ಚಿಯಲ್ಲಿಯೇ ಮಿಸುಕಾಡಿದೆ. ಆ ಸುಂದರವಾದ ಅಂಗಳದಲ್ಲಿದ್ದ ಸ್ವಾತಂತ್ರ್ಯವನ್ನು ಬಿಟ್ಟುಕೊಟ್ಟು ಮನೆಯ ಗೋಡೆಗಳ ಒಳಗೆ ಬಂಧಿತನಾಗುವದು ನನಗೆ ಆಗ ಇಷ್ಟವಿರಲೂ ಇಲ್ಲ. ಕೇಳಲು ಬಂದ ರವಿಗೆ ಅದನ್ನೇ ಹೇಳಿದೆ. ಅವನು ಒಳಗೆ ಹೋಗಿ ಅಜ್ಜಿಗೆ ವರದಿ ಒಪ್ಪಿಸಿದ.

"ನನಗೆ ಗೊತ್ತ ಅದ. ಸ್ನಾನಾ, ದೇವರ ಪೂಜಿ ಅಂದರ ಅವರಿಗೆ ಅಷ್ಟ ಪ್ರೀತಿ. ಇಷ್ಟು ವರ್ಷ ಸಂಸಾರ ಮಾಡಿದರೂ ಒಂದ ದಿನಾನೂ ಮನಸಾ ತಾವ ದೇವರ ಪೂಜಿ ಮಾಡಲಿಲ್ಲ ಅವರು. ಶಕೂ, ನನ್ನದು, ನಿನ್ನದು ಸ್ನಾನ ಆಗೇದ ಅಂತ ಹೇಳಿ ವಿಜಯನ್ನರೇ ಎಬ್ಬಿಸು. ಅವನಿಗೆ ಆಫೀಸಿಗೆ ಹೊತ್ತಾಗತದ ಚಹಾ ಕುಡಿದು ಸ್ನಾನಾ ಊಟ ಮಾಡಲಿ. ಅವರಿಗೇನು ಕೆಲಸ ಇಲ್ಲಾ ಬೊಗಸಿ ಇಲ್ಲಾ ಕೂತಿರವಲ್ಲರ್ಯಾಕ ಇನ್ನಷ್ಟ ಹೊತ್ತು ಹಾದ್ಯಾಗ ಹೋಗೋವರನ್ನ ಬರವರನ್ನ ನೋಡಿಕೋತ" ಇವೆಲ್ಲವೂ ನನಗೆ ಕೇಳಿಸಿತ್ತು. ಇಂಥ ಮಾತು ನನ್ನ ಕಿವಿಗಳಿಗೆ ರೂಢಿಯೂ ಆಗಿತ್ತು. ಆತ್ಮೀಯ ಪೂರ್ಣವಿರಾಮವಿಲ್ಲದ ಮಾತು ಶಕೂಗೂ ಅಭ್ಯಾಸವಾಗಿರಬೇಕು. ಅವಳ ಮಾತಿನ ನಡುವೆ ಎರಡು ಸಲ ಅಡಿದ ಶಕೂತ

ಮೆತ್ರಗಿನ ಮಾತು ಅವಳ ಕಿವಿಗೆ ಬೀಳದೆ ಹೋಯಿತು.

ಅಪರು ಲಗೂನ ಎದ್ದು ಚಹಾ ಕುಡಿದು ಸ್ಟೇಶನ್ನಿಗೆ ಹೋಗ್ಯಾರ. ಯಾರೋ ಗೆಳೆಯರು ಊರಿಗೆ ಹೋಗುತಿದ್ದರಂತ. ಅವರನ್ನು ಕಳಿಸಲಿಕ್ಕೆ ಹೋಗ್ಯಾರ" ಕೊನೆಗೊಮ್ಮೆ ಶಕೂ ವಿಜಯ ಸ್ನಾನಕ್ಕೆ ಬಾರದ ಕಾರಣ ಹೇಳಿದಳು.

"ಅಯ್ಯ ಆವಾಗಿನಿಂದ ವಿಜಯನ್ನ ಕರಿ, ವಿಜಯನ್ನ ಕರಿ ಅಂದ ಅಂತೇನಿ. ನೀನರೆ ಹೇಳಬಾರದ ಮನ್ಯಾಗಿಲ್ಲ ಅಂತ. ಸುಮ್ಮನ ಆದೀಯಲ್ಲ" ಸೊಸೆಯೊಡನೆ ಮಾತು ಮುಂದುವರೆಯಿತು. ವಿಜಯ ಹುಟ್ಟಿ ಸ್ವಲ್ಪ ದೊಡ್ಡವನಾಗುವ ವರೆಗೆ ಸರೂನ ಮಾತಿಗೆ ಏಕಮಾತ್ರ ಗುರಿ ನಾನೇ ಆಗಿದ್ದೆ. ಅದೇ ದಿನಗಳಲ್ಲಿ ನಾನು ಹೆಚ್ಚು ಹೊತ್ತು ಆಫೀಸಿನಲ್ಲಿ ಕೆಲಸ ಮಾಡಿ ದಕ್ಷ ಕೆಲಸಗಾರ ಅನ್ನಿಸಿಕೊಂಡೆ. ಸಾಕಷ್ಟು ಪರಿಚಿತರನ್ನು ಗೆಳೆಯರನ್ನು ಸಂಪಾದಿಸಿಕೊಂಡೆ. ಅವಳ ಬಾಯಿಗೆ ನಾನಾಗ ತುಂಬಾ ಹೆದರುತ್ತಿದ್ದೆ. ಆದರೆ ಈಗ ಅವಳ ಗಂಟಲು ಎಷ್ಟೇ ದೊಡ್ಡದಾದರೂ ತಮಾಷೆ ಮಾಡಿ ಕೊಂಡಿರುತ್ತೇನೆ. ಮನೆಯಲ್ಲಿ ವಿಜಯ, ಶಕೂ ರವಿ ಇದ್ದಾರೆ. ಅವಳ ಮಾತಿಗೆ ಪ್ರತ್ಯುತ್ತರ ಕೊಡುತ್ತಾರೆ ಹೊಂಗುಟ್ಟುತ್ತಾರೆ. ನನ್ನ ಮನಸ್ಸಿಗೆ, ಕಿವಿಗೆ ಎಷ್ಟೋ ಮಟ್ಟಿಗೆ ವಿರಾಮ ಸಿಕ್ಕು ಹಾಯಾಗಿದ್ದೇನೆ. ಮನೆಯಲ್ಲೇ ಇದ್ದು ನನ್ನ ಸ್ವಂತ ಮನೆಯಮುಂದಿನ ಕೈತೋಟದಲ್ಲಿ ಕೆಲಸ ಮಾಡಲು, ಅಡ್ಡಾಡಲು ಇಷ್ಟಪಡುತ್ತೇನೆ. ಮೊಮ್ಮಗನಿಗೆ ಕಥೆ ಹೇಳಲು, ಮಾತುಬಾರದ ಮೊಮ್ಮಗಳೊಡನೆ ಆಟವಾಡಲು ಇಚ್ಛಿಸುತ್ತೇನೆ. ಒಟ್ಟಾರೆ ಹೊಮಸಿಕ್ ಆಗಿದ್ದೇನೆ. ಆದರೆ ನನ್ನ ಸ್ನೇಹಿತರು ಹೇಳಿಕೊಳ್ಳುವದೇ ಬೇರೆ. ಸದಾನಂದ ನಿವೃತ್ತಿ ಪಡೆದ ಮೇಲೆ ಬದುಕಿನಲ್ಲಿ ನಿರಾಶೆಗೊಂಡು ತತ್ತ್ವಜ್ಞಾನಿಯಾಗಿದ್ದಾನೆ ಎಂದೆಲ್ಲ ಹೇಳ್ತಾರೆ. ಆದರೆ ಅದೆಲ್ಲ ಶುದ್ಧ ಸುಳ್ಳು. ನಾನು ಈಗಲೇ ಬದುಕನ್ನು ಚೆನ್ನಾಗಿ ಹೆಚ್ಚಾಗಿ ಪ್ರೀತಿಸುತ್ತಿದ್ದೇನೆ. ಹೀಗೆ ಶಾಂತವಾಗಿ ಯಾವ ಚಿಂತೆಯೂ ಇಲ್ಲದೆ, ಕಣ್ಣುಮುಚ್ಚಿಕೊಂಡು ಗಿಡದ ಕೆಳಗೆ ಕುಳಿತು ಕಳೆದು ಹೋದ ಜೀವನದ ನೆನಹುಗಳನ್ನು ಜ್ಞಾಪಿಸಿಕೊಳ್ಳುತ್ತ, ವೇಳೆ ಕಳೆಯುತ್ತಿದ್ದರೆ, ಹೊತ್ತು ಕಳೆದದ್ದೇ ಗೊತ್ತಾಗುವದಿಲ್ಲ.

"ಏನ್ರೀ ಖುರ್ಚಿಯ ಮ್ಯಾಲೆ ಕೂತು ನಿದ್ದೀ ಮಾಡ್ತೀರಿ. ಪೇಪರು ಎದಿ ಮ್ಯಾಲೆ ಇಟಕೊಂಡು ನಿದ್ದೀ ಮಾಡೂ ಬದಲೀ ಇಷ್ಟನ್ನಷ್ಟು ಹಾಸಿಗಿಯೊಳಗ ಮಲಗಿರಬೇಕಾಗಿತ್ತು. ನಿಮ್ಮದರೇ ಏನು ಕೆಲಸದ ಈಗ" ಸರೂ ಹತ್ತಿರವೇ ಬಂದು ನಿಂತಿದ್ದಳೀಗ. ನನ್ನ ಕಿವಿಯಲ್ಲಿ ಕಹಳೆಯೂದಿದಂತಾಯಿತು. ನೆನಪಿನ ಹಕ್ಕಿಗಳೆಲ್ಲ ಹಾರಿಹೋದವು. ಇಂಥ ಬೇಟೆಗಾರ ಸನಿಹದಲ್ಲಿದ್ದಾಗ ಅವು ತಿರುಗಿ ಬರುವುದೂ ಸಾಧ್ಯವಿರಲಿಲ್ಲ.

"ಹೊತ್ತು ಭಾಳ ಆತೇನು?" ಏನಾದರೂ ಮಾತನಾಡಬೇಕೆಂದು ಕೇಳಿದೆ.

"ಹೂಂ. ಹನ್ನೊಂದು ಹೊಡೀಲಿಕ್ಕೆ ಬಂತು. ಲಗೂನ ಸ್ನಾನಾ, ಪೂಜಿ, ಊಟಾ ಮುಗಿಸಿದರ ನಾವೂ ಸ್ವಲ್ಪ ಹೊತ್ತು ವಿಶ್ರಾಂತಿ ತೊಗೋತೀವಿ. ಸಂಜೀಮುಂದ ನಾನು, ಶಕೂ ಸಿನಿಮಾಕ್ಕ ಹೋಗ್ತೇವಿ. ರವಿ, ಪಾಪುನೂ ಬರ್ತಾರೆ. ಕುಕ್ಕರ ಇಟ್ಟ ಹೋಗ್ತೇವಿ. ನೀವ ಇಳಿಸಿ ಬಿಡ್ರಿ. ವಿಜಯ ಎಲ್ಲೋ ಡಿನ್ನರಿಗೆ ಹೋಗ್ತಾನಂತ"

"ಹೋದ ವಾರ ಯಾವ ಸಿನಿಮಾಕ್ಕೋ ಹೋಗಿದ್ರಿ ಮತ್ತ......"

"ಹೌದ್ರಿ ಮಾರಾಯ್ರ ಹೋಗಿದ್ವಿ. ಈಗ ಹೊಸಾದು ಬಂದದ. ಭಂಡವಂತ ಪಿಪುಶರ್ಮಾನೂ ಓದಿ ಹೇಳ್ಯಾಳ ಶಕೂ. ಅದಕ್ಕ ಹೋಗ್ತೇವಿ. ನಿಮಗೊಂದು ನೋಡೂ ಆಸೆ ಇರದಿದ್ರ ಬಿಡ್ರಿ. ನಾವಾದ್ರೂ ಹೋಗ್ತೇವಿ"

"ಹೋಗಿ ಬರ್ರಿ, ಬೇಖುಶಾಲ್ ಹೋಗಿಬರ್ರಿ. ನಾ ಯಾವಾಗ ಬ್ಯಾಡ ಅಂದೇನಿ" ಸ್ನಾನದಕೋಣೆಯತ್ತ ಹೋಗುತ್ತಲೇ ಹೇಳಿದೆ. ಇಷ್ಟು ವರ್ಷಗಳು ಕಳೆದರೂ ಸರೂನ ಸಿನಿಮಾದ ಹುಚ್ಚು ಇನ್ನೂ ಹಚ್ಚ ಹಸುರಾಗಿತ್ತು. ಈಗ ಮಗ ಸೊಸೆಯರ ಬೆಂಬಲ ಬೇರೆ. ಇಷ್ಟು ದೀರ್ಘಾವಧಿಯ ನಂತರವೂ ಅವಳು ಇದ್ದಲ್ಲಿಯೇ ಇದ್ದಳು. ಅವಳನ್ನೂ ಜೊತೆಗೆ ಕರೆದುಕೊಂಡು ಮುನ್ನುಗ್ಗಬೇಕೆಂದ ನನಗೆ ಯಶ ಸಿಕ್ಕಿರಲಿಲ್ಲ. ಕೊನೆಗೆ ನಿರ್ವಾಹವಿಲ್ಲದೆ ಒಬ್ಬಂಟಿಗನಾಗಿ ಮುಂದುವರೆದಿದ್ದೆ. ಅಂತರಿಕವಾಗಿ ಎಷ್ಟೇ ಹೋರಾಟ ನಡೆಸಿದರೂ ಹೊರಗಿನ ಬದುಕಿನಲ್ಲಿ ಒಳ್ಳೆಯ ಪತಿಯಾಗಿರಲು ಶ್ರಮಪಟ್ಟು ಸಾಧಿಸಿದ್ದೆ. ಎಷ್ಟೇ ಕಠಿಣಪ್ರಸಂಗದಲ್ಲಿಯೂ ತಾಳ್ಮೆ ಸಂಯಮ ತಂದುಕೊಂಡಿದ್ದೆ. ಹೊರಗೆ ನೋಡುವವರ ಕಣ್ಣಿಗೆ ಆದರ್ಶ ಸಂಸಾರವೆನ್ನುವಂತೆ ನಡೆದುಕೊಂಡಿದ್ದೆ. ಅಧಿಕಾರ, ಅಂತಸ್ತು, ಆಸ್ತಿ, ಮಕ್ಕಳು ನೆಮ್ಮದಿಯ ಜೀವನ ಎಲ್ಲವೂ ಇತ್ತು, ನನಗೆ. ಒಳಗೆ ಅಂತರಿಕವಾಗಿ ನಾನು ಪ್ರೀತಿಸುವ ವ್ಯಕ್ತಿಯ ಪ್ರೇಮದ ಬೆಂಬಲವಿತ್ತು. ಒಟ್ಟಿನಲ್ಲಿ ಎಲ್ಲವೂ ಬಹಳ ಸುಂದರವಾಗಿತ್ತು. ದೇವರ ಕೋಣೆಯಲ್ಲಿ ಕುಳಿತಾಗ ಅಂತರ್ಮಥನ ನಡೆಯುತ್ತಿತ್ತು.

"ಅದೇನೋ ಇವತ್ತು ಎಷ್ಟು ಹೊತ್ತು ಪೂಜಿ ಮಾಡ್ತೀರಲ್ರಿ. ಯಾವ ದೇವರು ಬುದ್ಧಿ ಕೊಟ್ಟಾ. ಈಗೇನು ಪ್ರಮೋಶನ್ ಇಲ್ಲಾ ಗಿಮೋಶನ್ ಇಲ್ಲಾ. ಅಂದ ಮ್ಯಾಲೆ ಇಷ್ಟೊತ್ಯಾಕೆ ದೇವರ ಧ್ಯಾನಾ ಅಂತೀನಿ" ಸರೂ ತನ್ನ ಕತ್ತಿವರಸೆ ತೋರಿಸಿದಳು. ಪ್ರಮೋಶನ್‌ಗಾಗಿ ದೇವರ ಪೂಜೆ ಮಾಡುವವನು ನಾನು ಅಲ್ಲ ಅನ್ನೋದನ್ನ ನನ್ನ ಹೆಂಡತಿಯೇ ತಿಳಿದುಕೊಂಡಿರದಿದ್ದುದಕ್ಕೆ ಮನಸ್ಸಿಗೆ ವ್ಯಥೆಯಾಯಿತು. ಸುಮ್ಮನೆ ಎದ್ದು ಊಟದ ಮನೆಗೆ ಬಂದೆ.

"ಚಪಾತಿ ಜೋಡಿ ಮಡಕಿಕಾಳು ಉಸಳಿ ರುಚಿ ಆಗೂದಿಲ್ಲಾ ಅಂತ ಎಷ್ಟ ಸಾರೆ ಹೇಳತೇನಿ ಮತ್ತೂ ಅದನ್ನ ಮಾಡ್ತೀಯಲ್ಲ" ಧ್ವನಿಯನ್ನು ಎಷ್ಟು ಹಿಡಿತದಲ್ಲಿಟ್ಟುಕೊಳ್ಳಬೇಕೆಂದರೂ ಕಾವು ಏರಿತ್ತು.

"ನಿಮಗ ಸೇರತಿರಲಿಕ್ಕಿಲ್ಲಾ. ನಮಗ ಸೇರತದ ಅಂತ ಮಾಡಿದೆ, ಬೇಕಾದರ ಊಟಾ ಮಾಡಿರಿ. ಬ್ಯಾಡಾದರ ಮೊಸರು ಚಟ್ನಿ ಹಾಕ್ಕೊಂಡು ತಿನ್ರಿ" ದನಿಯಲ್ಲಿ ಅಸಡ್ಡೆಯಿತ್ತು.

"ನೀ ಮಾಡಿದ್ದು ಊಟಾ ಮಾಡೂದಂತೂ ಆದ ಅದ. ಇಷ್ಟು ವರ್ಷಾತು ನನಗ ಯಾವದು ಪ್ರೀತಿ ಯಾವದು ಇಲ್ಲಾ ಅನ್ನೂದು ಎಂದರೆ ಕೇಳಿ ಏನು ನೀನು?"

"ಹೌದು, ಹೌದು ನಿಮಗ ಬೇಕಾದ್ದ ಆಗಬೇಕು ಎಲ್ಲಾ. ನಮ್ಮ ರುಚಿಗೆ ಆಸೇಕ ಬೆಲೇನ ಏನೂ ಇಲ್ಲಾ. ನಿಮಗೇನು ಮನ್ಯಾಗ ಸಿಗದಿದ್ದರ ಹೊರಗ ಹೋಟಲ್ಲಿನಾಗರೆ ತಿಂದು ಬರ್ತೀರಿ. ನಮಗೆಲ್ಲಿ ಅದ ಅಷ್ಟು ಸ್ವಾತಂತ್ರ್ಯ. ಒಂದು ಮನಿ ಯಜಮಾನಿ ಆಗಿ, ಸೊಸಿ ಬಂದು ಮೊಮ್ಮಕ್ಕಳನ್ನು ಕಂಡರೂ ನನಗ ಬೇಕಾದ್ದು ಅಡಿಗಿ ಮಾಡೂ ಸ್ವಾತಂತ್ರ್ಯಾನ ಇಲ್ಲಾ ಹೋಡಿ ಹೆಣ್ಣಿನ ಜನ್ಮಾನ ಇಷ್ಟು" ಸರೂ ಮುಖಕ್ಕೆ ಸೆರಗು ಹಚ್ಚಿದಳು.

ಅವಳು ಸೊಸಿ ಮೊಮ್ಮಕ್ಕಳು ಎಂದೊಡನೆ ಎಚ್ಚರಾದೆ. ಇನ್ನೂ ಬದುಕಿ ಬಾಳುವ ಆ ಪುಟ್ಟಜೀವಿಗಳ ಮುಂದೆ ನಮ್ಮ ಬಾಳಿನ ವಿರಸವನ್ನು ತೋರಗೊಡಬಾರದೆಂದು ಸುಮ್ಮನೆ ಊಟ ಮಾಡಿದೆ. ಎದ್ದು ಬರುವಾಗ ಸರೂಸೊಡನೆ ಸರಸವಾಡಲೂ ಪ್ರಯತ್ನಿಸಿದೆ.

"ನೀನು, ಶಕೂ ಊಟಕ್ಕ ಕೂಡ್ರಿ ಇನ್ನ ನಾನು ನೀಡ್ತೇನಿ. ನನಗರೆ ಏನು ಕೆಲಸದ. ಹ್ಯಾಂಗೂ ಪೆನ್ಶನ್ ಆಗೇದ. ನಿನ್ನ ಕೈಯ್ಯಾಗ ಅಸಿಸ್ಟಂಟ ಆಗ್ತೇನಿ."

"ಸುಮ್ಮಗೆ ಹೊರಗೆ ಹೋಗ್ರಿ. ಎಲಿ ಅಡಿಕಿ ತಂದು ಕೊಡ್ತಾನ ರವಿ ಹಾಕ್ಕೊಳ್ರಿ" ಗೆದ್ದ ಖುಶಿ ಯಿಂದ ನಕ್ಕಳು ಸರೂ. ಮಲಗುವ ಕೋಣೆಗೆ ಬರುವ ಮೊದಲು ಅಂಗಳಕ್ಕೆ ಹಾಯ್ದೆ. ಪಾರಿಜಾತ ಬಾಡಿ ಬಸ ವಳಿದು ಬಿದ್ದಿದ್ದವು. ನಿಟ್ಟುಸಿರು ಬಿಟ್ಟು ಬಂದು ಹಾಸಿಗೆ ಯಲ್ಲಿ ಅಡ್ಡಾದೆ.

× × × ×

ನಾನು ಎಚ್ಚರವಾದಾಗ ಎಲ್ಲರೂ ಸಿನಿಮಾಕ್ಕೆ ಹೋಗಿದ್ದರು. ಥರ್ಮಾಸಿನಲ್ಲಿದ್ದ ನನ್ನ ಪಾಲಿನ ಚಹ ಕುಡಿದು ಅಂಗಳಕ್ಕೆ ಬಂದೆ. ತೋಟದಲ್ಲಿ ಅಡ್ಡಾಡುತ್ತ ಮನೆಯ ಹಿಂಭಾಗಕ್ಕೆ ಬಂದೆ. ಸೊಂಪಾಗಿ ಬೆಳೆದು ನಳ ನಳಿಸುತ್ತಿದ್ದ ಮಲ್ಲಿಗೆಬಳ್ಳಿಯ ಕೆಳಗಿನ ಕಲ್ಲಿನ ಮೇಲೆ ಕುಳಿತೆ. ಬೆಳಗಿನ ಹಾಗೆಯೇ ಸಂಜೆಯ ಸೃಷ್ಟಿಯೂ ಆನಂದದಾಯಕವಾಗಿತ್ತು. ಈ ಮಲ್ಲಿಗೆಬಳ್ಳಿಯ ಕೆಳಗೆ ಕುಳಿತಾಗಲಂತೂ ನನ್ನ ಆನಂದ ಉಕ್ಕಿ ಹರಿಯುತ್ತದೆ. ಅದೇನು ಕಾರಣವೋ ತಿಳಿಯದು. ಆ ಸುಖಾನುಭವ ದಿಂದ ಕಣ್ಣು ಮುಚ್ಚಿದೆ. "ಅಪ್ಪಾ" ಎಂದ ವಿಜಯ. "ನಾನು ಡಿನ್ನರಿಗೆ ಹೊರಟೇನಿ ಬರೂದ ತಡಾ ಆಗ್ತದ. ಬಾಗಿಲಾ ಹಾಕ್ಕೊಳ್ರಿ"ಸೊಗಸಾದ ಸೂಟು ಟೈಗಳಿಂದ ಅಲಂಕೃತನಾಗಿ ಸೆಂಟಿನ ಪರಿಮಳ ಬೀರುತ್ತಿದ್ದ ವಿಜಯ ಹೋಗುವುದನ್ನೇ ನೋಡುತ್ತಿದ್ದೆ. ಎರಡು ಮಕ್ಕಳ ತಂದೆಯಾದರೂ ಒಳ್ಳೇ ಮದುವಣಿಗನಂತೆ ಕಾಣುತ್ತಿದ್ದ. ಮೊದಲಿನಿಂದಲೂ ಶೋಕಿ ಹುಡುಗ. ಬುದ್ಧಿವಂತನೂ ಕೂಡ. ಸರೂ ಆಗಾಗ ಹಾಸ್ಯ ಮಾಡುತ್ತಾಳೆ. ವಿಜಯ ತನ್ನ ಹಾಗಿದ್ದಾನೆಂದು. ಅವಳ ಮುಣ್ಯಾಕ್ಕೆ ಅವನು ನನ್ನನ್ನು ಹೋಲಲಿಲ್ಲವಂತೆ. ವಿಜಯ ಶೋಕಿಯಲ್ಲೇನೋ ಅವಳ ಹಾಗಿರಬಹುದು. ಆದರೆ ಬುದ್ಧಿಯಲ್ಲಿ ಅಲ್ಲವೆನ್ನುವದು ನನಗೆ ಗೊತ್ತಿದೆ. ಸರೂನ ಬುದ್ಧಿ ಇಷ್ಟು ವರ್ಷಗಳಲ್ಲಿ ಸಾಕಷ್ಟು ಸುಪರಿಚಿತವಾಗಿದೆ. ವಿಜಯನ ವಯಸ್ಸಿನಲ್ಲಿ ನಾನಿದ್ದಾಗ ಅಂದರೆ ಇನ್ನೂ ಯುವಕನಾಗಿದ್ದಾಗ ಸರೂನಲ್ಲಿ ಏನನ್ನು ಕಂಡು ಮೆಚ್ಚಿಕೊಂಡೆ ಎನ್ನುವುದನ್ನು ನಾನೀಗ ಹೇಳಲು ಸಾಧ್ಯವಿಲ್ಲ. ಆಗಿನ ಸರೂನನ್ನು ನಮ್ಮ ಮದುವೆಯನ್ನು ನೆನೆಯುತ್ತ ಸುಮ್ಮನೆ ಕುಳಿತಿದ್ದೆ.

ಕಾಂತಾ ನನ್ನ ಬಾಳಿನಲ್ಲಿ ಪ್ರವೇಶ ಮಾಡಿದ್ದು ನಮ್ಮ ಮದುವೆಯ ದಿನದಿಂದಲೇ ಎನ್ನಬೇಕು. ಒಂದು ವಿಧ ದಲ್ಲಿ ಸರೂ, ಕಾಂತಾ ಇಬ್ಬರೂ ಒಂದೇ ದಿನ ಬಂದರು. ಕಾಂತಾ ನನ್ನ ಟೈಪಿಸ್ಟ ಆಗಿದ್ದಾಗ ಒಮ್ಮೆ ವಿಜಯನ ಹು ಟ್ಟುಹಬ್ಬದ ಆರತಿಗೆಂದು ನಮ್ಮ ಮನೆಗೆ ಬಂದಿದ್ದಳು. ಹೆಂಗಳೆಯರ ಹಾಡಿನ ಸಂಭ್ರಮದಲ್ಲಿ ಅವಳೂ ಹಾಡಲೇ ಬೇಕೆಂದು ಒತ್ತಾಯ ಬಂದಾಗ ಅವಳು ಹಾಡಿದ್ದು ಒಂದು ದಾಸರ ಪದ 'ಸದಾ ಎನ್ನ ಹೃದಯದಲ್ಲಿ ವಾಸ ಮಾಡೋ ಶ್ರೀಹರಿ' ಎನ್ನುವದು. ಮರುದಿನ ಆಫೀ ಸಿನಲ್ಲಿ ನಾನು ಚೇಷ್ಟೆಗೆ ಕೇಳಿದೆ "ಶ್ರೀಹರಿ ನಿನ್ನ ಹೃದಯ ದೊಳಗ ಬಂದ್ನೇನು." ತಟ್ಟನೆ ಬಂದಿತು ಉತ್ತರ "ನನ್ನ ಹೃದಯದಲ್ಲಿ ವಾಸ ಮಾಡಿದ್ದು ಶ್ರೀಹರಿ ಅಲ್ಲ; ಸದಾ" ಅಂತ. ಪುಳಕಿತನಾದೆ. ಮರುಕ್ಷಣದಲ್ಲಿ ಕಾಂತಾ ಅಲ್ಲಿರಲೇ ಇಲ್ಲ. ನಾವು ಆ ಊರು ಬಿಟ್ಟು ಬಂದರೂ ಸರೂಗೆ ಅವಳು ಬರೆಯುತ್ತಿದ್ದ ಕಾಗದಗಳಿಂದ ಅವಳ ಯೋಗ ಕ್ಷೇಮ ತಿಳಿಯುತ್ತಿದ್ದೆ. "ಸರೂ, ನಾನೀಗ ಕೆಲಸ ಬಿಟ್ಟು ಬಿಟ್ಟೆ. ನನ್ನ ಯಜಮಾನರಿಗೆ ಪ್ರಮೋಶನ್ ದೊರಕಿತು. ಈಗ ನಾನು ದುಡಿಯುವ ಆವಶ್ಯ ಕತೆಯೂ ಅಷ್ಟಾಗಿಲ್ಲ. ಅಲ್ಲದೇ ಇನ್ನೊಂದು ಮುಖ್ಯ ಕಾರಣವೂ ಇದೆ. ನಿನ್ನ ಯಜಮಾನರಂತಹ ಒಳ್ಳೆಯ ಅಧಿಕಾರಿಯ ಕೆಳಗೆ ಕೆಲಸ ಮಾಡಿದ ನನಗೆ ಬೇರೆಯವರ ಕೈಕೆಳಗೆ ದುಡಿಯುವದು ಸರಿ ಕಾಣಲಿಲ್ಲ. ನೀನು ಪುಣ್ಯ ವಂತೆ ಸರೂ" ಎಂದು. ಅವಳಿಂದ ಕಾಗದ ಬಂದ ದಿನ ಸರೂ ಊಟದಲ್ಲಿ ನನಗೆ ಹೆಚ್ಚಾಗಿ ಉಪಚಾರ ಮಾಡಿ ದಂತೆ ಕಂಡುಬಂದಿತು. ನಾನಂತೂ ನೆಲದ ಮೇಲೆ ಇರಲಿಲ್ಲ.

ಗೇಟಿನ ಸದ್ದು ನನ್ನ ಯೋಚನೆಗಳನ್ನು ಕಡಿದು ಹಾಕಿತು. ಹಾಲಿನವ ಬಂದಿದ್ದ. ಹಾಲು ಕಾಯಿಸಿ ಕೆಳಗಿಳಿಸಿದ ಮೇಲೆ ತುಂಬಿ ತಯಾರಾಗಿದ್ದ ಪ್ರೆಶ್ಶರ ಕುಕ್ಕರ ಸ್ಟೋವ್ ಮೇಲಿಟ್ಟು ಅದರ ಸಿಳ್ಳು ಕೇಳು ವಂತೆ ಅಡುಗೆಮನೆಯ ಕಿಟಕಿ ತೆರೆದಿಟ್ಟು ಮತ್ತೆ ಬಳ್ಳಿಯ ಕೆಳಗೆ ಬಂದು ಕುಳಿತೆ.

ಹಾಲಿನಂತಿದ್ದ ಕಾಂತಾನ ಸಂಸಾರಕ್ಕೆ ವಿಧಿ ಹುಳಿ ಹಿಂಡಿತ್ತು. ಅವಳ ಗಂಡ ಆಕಸ್ಮಿಕವಾಗಿ ಚಿಕ್ಕ ಹೆಂಡತಿ ಯನ್ನು ಪುಟ್ಟ ಮಗಳನ್ನೂ ಬಿಟ್ಟು ತೀರಿ ಹೋಗಿ ದ್ದರು. ಸರೂ ಈ ಸುದ್ದಿ ಹೇಳಿದ ದಿನ ನನ್ನ ಮನಸ್ಸು ಎಷ್ಟು ನೊಂದಿತು, ಬೆಂದಿತು ಎನ್ನುವದು ನನಗೇ ಗೊತ್ತು. ಬೇರೊಬ್ಬರಿಗೆ ಅದನ್ನು ತಿಳಿಯಪಡಿಸು ವದು ವಿವೇಕದ ಮಾತಾಗಿರಲೂ ಇಲ್ಲ. ಸರೂ ಅವಳಿಗೆ ಸಾಂತ್ವನಪರ ಕಾಗದ ಬರೆದು ಪೋಸ್ಟ ಮಾಡಲು ನನ್ನ ಕೈಗೆ ಕೊಟ್ಟಾಗ ಮಾತ್ರ ಜೀವ ತಡೆಯಲಿಲ್ಲ. ಯಾವದೇ ರೀತಿಯಿಂದ ನನ್ನ ದುಃಖವನ್ನು ಹೊರ ಗೆಡಹಬೇಕಾಗಿತ್ತು. ಎರಡು ಸಾಲು ಬರೆದು ಸಹಿ



ಮಾಡುವಾಗ ಕಣ್ಣೀರಿನಿಂದ ಅಕ್ಷರಗಳು ಕಲಸಿ ಹೋಗಿದ್ದವು. ಮುಂ ಕೆಲವು ತಿಂಗಳು ಕಳೆದ ಮೇಲೆ ಕಾಂತಾ ಉಪಾಧ್ಯಾಯಿನಿಯಾಗಿ ಮಗಳನ್ನೂ, ತಾಯಿಯನ್ನೂ ಸಾಕಲು ದುಡಿಯುತ್ತಿದ್ದಾಳೆ ಎನ್ನುವ ಸುದ್ದಿ ಕೇಳಿದ್ದೆ. ಸರೂನ ತಮ್ಮನ ಮದುವೆಗೆ ಅವಳ ತವರುಮನೆಗೆ ಹೋದಾಗ ಸರೂನೊಡನೆ ಕಾಂತಾನ ಮನೆಗೂ ಭೇಟಿ ಕೊಟ್ಟಿದ್ದೆ. ಗೆಳತಿಯ ಗಂಡನೆಂದು ಆದರಿಸಿದ ಅವಳೊಡನೆ ಯೋಗಕ್ಷೇಮ ವಿಚಾರಿಸಿದ್ದೆ. ಬದುಕಿನ ಕಷ್ಟ ಅವಳ ಮುಖದ ಮೇಲೆ ಆಳವಾಗಿ ಗೆರೆಗಳನ್ನೆಳೆದಿತ್ತು. ಕಪ್ಪುಕೂದಲು ಅಲ್ಲಲ್ಲಿ ಬಿಳಿಯದಾಗುತ್ತಿತ್ತು. ಆದರೂ ಕಣ್ಣುಗಳಲ್ಲಿ ಮಾತ್ರ ಇನ್ನೂ ಚುಂಬಕ ಶಕ್ತಿಯಿತ್ತು. ಅದಕ್ಕೇ ನಾನು ಮಾರುಹೋಗಿದ್ದೆ. ಅಗ ಕೊಟ್ಟ ನನ್ನ ಹೃದಯವನ್ನು ಇನ್ನು ತಿರುಗಿ ಪಡೆಯುವುದು ಸಾಧ್ಯವಾಗಲಿಲ್ಲ.

ಮತ್ತೆ ಗೇಟಿನ ಸದ್ದಾಯಿತು. ಯಾರೋ ಹಿಂಭಾಗಕ್ಕೆ ನಡೆದು ಬರುತ್ತಿರುವದು ತಿಳಿಯಿತು. ಹೆಜ್ಜೆ ಸಪ್ಪಳ ಕೇಳಿ ನನ್ನೆದೆ ಡವಡವ ಎಂದಿತು. ಕಾಂತಾ ಮೆಲ್ಲಗೆ ನಾನು ಕುಳಿತಿದ್ದೆಡೆಗೆ ನಡೆದು ಬರುತ್ತಿದ್ದಳು. ಉಮಾ ಲಗ್ನವಾಗಿ ಗಂಡನ ಮನೆಗೆ ಹೋದ ಮೇಲೆ ಕಾಂತಾಗೆ ಇದೇ ಊರ ಶಾಲೆ ವರ್ಗವಾಗಿತ್ತು. ಆಗಾಗ ನಮ್ಮ ಮನೆಗೆ ಬರುತ್ತಿದ್ದಂತೆ ಇಂದೂ ಬಂದಿದ್ದಳು.

"ಬರ್ರಿ ಬರ್ರಿ ಭಾಳ ತಡಾ ಮಾಡಿದ್ರೆಲ್ಲಾ" ನಗುತ್ತ ಕೇಳಿದೆ.

"ಮತ್ತ ಯಾಕ ಸುರು ಮಾಡಿದ್ರಿ ಈ ಬಹುವಚನಾ" ಹುಸಿಕೋಪದಿಂದ ಕೇಳಿದಳು ಕಾಂತಾ. ಕೊನೆಯ ಪಕ್ಷ ನಾವಿಬ್ಬರೇ ಇದ್ದಾಗಲಾದರೂ ಉಪಚಾರದ ಮಾತು ಬೇಡವೆಂದಿದ್ದಳು, ಅವಳು.

"ಓ ಮರತ ಬಿಟ್ಟಿದ್ದೆ. ಸರೂ ಶಕೂ ಎಲ್ಲಾರೂ ಸಿನಿಮಾಕ್ಕ ಹೋಗ್ಯಾರ."

"ಹೌದೇನು? ಮನೀ ಬಾಗಿಲಾ ಹಾಕಿದ್ದು ನೋಡಿದಾಗ ಅನ್ನಿಸಿತ್ತು ನನಗ ಯಾರೂ ಇಲ್ಲಾ ಅಂತ. ಆದರೂ ಹಿಂದ ಯಾರೋ ಇದ್ದಾರಂತ ನನ್ನ ಮನಸ್ಸು ಹೇಳಿತು.. ಅದಕ್ಕ ಹಿಂದ ಬಂದೆ."

"ಎಷ್ಟು ಕತ್ತಲಿ ಆಯ್ತಲ್ಲ ಬರಲಿಕ್ಕ?"

"ಹೌದ್ರೀ ಲಗೂನ ಹೊರಟಿದ್ದೆ. ಟ್ಯೂಶನ್ನದ ಹುಡುಗಿಯರು ಬಂದರು, ತಡಾ ಆಯಿತು. ಉಮಾ ಹೆರಿಗೀಗೆ ಬಂದಾಳ. ಅದಕ್ಕ ನಾವೆಲ್ಲಾ ಕೂಡಿ ಒಮ್ಮೆ ಸೀ ಊಟಾ ಮಾಡಬೇಕು ಅಂತ ಅನಿಸ್ತು. ಈ ಬರೂ ಆದಿತ್ಯವಾರ ನೀವೆಲ್ಲಾ ಸರೂ, ಶಕೂ ವಿಜಯ ಎಲ್ಲರೂ ಊಟಕ್ಕ ಬರಬೇಕು. ವಿಜಯಗ ತಪ್ಪಸಬ್ಯಾಡಾ ಅನ್ರಿ. ಅವನ ಸಲುವಾಗಿ ಆದಿತ್ಯವಾರಾ ಕರದೇನಿ."

"ನಾನೂ ಬರಬೇಕೇನು? ನನ್ನ ಹೆಸರು ಹೇಳಲಿಲ್ಲಾ" ಕಾಂತಾನ ಎದುರು ನನ್ನ ವಯಸ್ಸನ್ನು ಮರೆತು ಹುಡುಗನಂತಾಡುತ್ತಿದ್ದೆ.

"ಅವತ್ತು ಅಡಿಗೀ ಏನು ಮಾಡ್ತಿ?"

"ನಿಮಗ ಪ್ರೀತೀದು. ಖೀರು ಪುರಿ, ಮಸಾಲಿ ಅನ್ನ" ಕಾಂತಾಳ ಮುಖದ ಕೆಂಪು ಇನ್ನೂ ಕಡಿಮೆಯಾಗಿರಲಿಲ್ಲ. ನನ್ನ ಹೃದಯ, ನನ್ನ ರುಚಿ, ನನ್ನ ಸಂತೋಷವನ್ನೇ ಬಯಸುವ ಆ ಜೀವಕ್ಕೆ ನಾನು ಕೊಟ್ಟಿದ್ದೇನು ಎಂದು ನೆನೆಸಿಕೊಂಡೆ. ಮನಸ್ಸು ಖಿನ್ನವಾಯಿತು.

"ಮಲ್ಲಿಗೀಹೂವು ಎಷ್ಟು ವಾಸನಿ ಬರ್‍ತಾವ ಅಲ್ಲ" ಕತ್ತೆತ್ತಿ ಬಳ್ಳಿ ನೋಡುತ್ತ ಕಾಂತಾ ಕೇಳಿದಳು. ತಟ್ಟನೆ ಎದ್ದವನೇ ಹೂವು ತೆಗೆದು ಅವಳ ಕೈಗೆ ಕೊಟ್ಟೆ. ಇಬ್ಬರೂ ಎಷ್ಟೋ ಹೊತ್ತು ಸುಮ್ಮನೆ ಕುಳಿತಿದ್ದೆವು. ಮಾತು ಇಬ್ಬರಿಗೂ ಬೇಕಿರಲಿಲ್ಲ. ತನ್ನ ಕೈಯಲ್ಲಿಯ ಒಂದೆರಡು ಹೂವನ್ನು ನನ್ನ ಕೈಗಿತ್ತು ಕಾಂತಾ ಹೇಳಿದಳು "ನಾನಿನ್ನು ಬರ್‍ತೀನೀ"

ಗೇಟಿನ ಸದ್ದಿನ ಜೊತೆಗೆ ಸರೂ, ಶಕೂನ ಮಾತೂ ಕೇಳಿ ಬಂದವು. ಎದ್ದು ಮನೆಯ ಮುಂಭಾಗಕ್ಕೆ ಬಂದೆ. ರವಿಯ ಕೈ ಹಿಡಿದು ಮನೆಯೊಳಕ್ಕೆ ಅವರನ್ನು ಹಿಂಬಾಲಿಸಿದೆ. ಜೇಬಿನಲ್ಲಿದ್ದ ಮಲ್ಲಿಗೆಯ ಪರಿಮಳ ನನ್ನ ಜೊತೆಗೇ ಬಂದಿತ್ತು ●

ಮಾಡಲು ಲಾಯಖ್ ನೋಡು"–ವಿನೋದಿ ಶೀನು ಟೀಕೆ ಮಾಡಿದ.

ಲಕ್ಷ್ಮಣನ ಅರಸಿಕತೆಯನ್ನು ಕಂಡು ನಾವೆಲ್ಲರೂ ನಕ್ಕೆವು. "ಲಕ್ಷ್ಮಣ ಅವಳನ್ನು ಕಂಡಿಲ್ಲ ಕಣ್ರೋ; ಅದಕ್ಕೇ ಹೀಗೆ ಮಾತಾಡ್ತಾ ಇದ್ದಾನೆ. ಒಂದು ಸಲ, ಒಂದೇ ಒಂದು ಸಲ ಅವಳು ಇವನ ದೃಷ್ಟಿಗೆ ಬೀಳಲಿ, ಅರಸಿಕ ಲಕ್ಷ್ಮಣ ಕೂಡ ಕವಿಯಾದಾನು, ಹುಚ್ಚನಾದಾನು!" ಎಂದು ನಕ್ಕು ನುಡಿದ ರಮೇಶ.

ಲಕ್ಷ್ಮಣನ ಮುಖ ಸ್ವಲ್ಪ ಬಾಡಿತು. ಅದನ್ನು ಕಂಡು ರಮೇಶ ಸಹಾನುಭೂತಿಯಿಂದ ಅವನ ಹೆಗಲ ಮೇಲೆ ಕೈ ಹಾಕಿ– "ನಿನಗೆ ಅವಳ ಹೆಸರು ಬೇಕು ಎಂದೆಯಲ್ಲ– ಲಾಲಿತ್ಯದ ಮೂರ್ತಿಯಾದ ಅವಳ ಹೆಸರೂ ಕೂಡ ಅನ್ವರ್ಥಕವಾಗಿ ಲಲಿತೆ!"

"ಭೇಷ್, ಭೇಷ್! ರಮೇಶ, ಚೆನ್ನಾಗಿ ಹೇಳಿದೆ. ಲಕ್ಷ್ಮಣನಿಗೆ ಅವಳದೊಂದು ಫೋಟೋ ತೋರಿಸಿಯೇ ಬಿಡೋ–ಅವನಿಗೂ ಖಾತ್ರಿಯಾಗಲಿ" ನಾನು ಹೇಳಿದೆ.

"ಒಂದು ಫೋಟೋ!" ಶೀನು ಉದ್ಗರಿಸಿದ. "ಆ ಟ್ರಂಕು ತುಂಬಿ ಹೋಗಿದೆ ಕೇವಲ ಅವಳ ಫೋಟೋಗಳಿಂದಲೇ."



"ದೊಡ್ಡ ದೊಡ್ಡ ಕಣ್ಣುಗಳು! ಗುಲಾಬಿ ಗಲ್ಲ, ಚಂದುಟಿ! ಕೃಷ್ಣಸರ್ಪದಂಥ ನೀಳ ಜಡೆಗಳು!......"

ರಮೇಶ ಇನ್ನೂ ಹೀಗೆಯೇ ಕಾವ್ಯಮಯವಾಗಿ ಮುಂದುವರಿಯುವವನಿದ್ದ. ಆದರೆ ನಡುವೆಯೇ ಲಕ್ಷ್ಮಣ ಬ್ರೇಕ್ ಹಾಕಿದ:

"ಏನೋ ರಮೇಶ? ಇದೇನು ಕಾವ್ಯೋನ್ಮಾದವೋ? ಪ್ರೇಮೋನ್ಮಾದವೋ"?

"ಎರಡೂ ಅಲ್ವೋ, ಪೆಚ್ಚೆ!"–ನಾನು ನಡುವೆ ವಿವರಿಸಿದೆ. "ಅವನು ವರ್ಣಿಸುತ್ತಿರುವುದು ವಸ್ತುಸ್ಥಿತಿ! ಹಾಗೆ ನೋಡಿದರೆ ಕವಿ, ಪ್ರಣಯಿ, ಹುಚ್ಚ –ಈ ಮೂವರೂ ಒಂದೇ ಸಾಲಿನಲ್ಲಿ ಬರುತ್ತಾರೆಂದು ಮಹಾಕವಿ ಶೇಕ್ಸಪಿಯರ್ ಹೇಳಿಲ್ವೆ?"

"ಸಾಗಲಿ ಹಾಗಾದರೆ"– ಲಕ್ಷ್ಮಣ ಹಸಿರು ಸಿಗ್ನಲ್ ತೋರಿಸಿದ.

"ಕಂತನ್ನೋ ಕೋಗಿಲೆಯನ್ನೂ ನಾಚಿಸುವಂಥವಳು ಅವಳ ನಡಿಗೆ ನೋಡಿ ನವಿಲು ಕೂಡ ಚಕಿತಗೊಂಡು ತಲೆದೂಗುವದು"–ಇಷ್ಟು ನುಡಿದು ರಮೇಶ ಮತ್ತೆ ರಡು ಗುಟುಕು ಬಿಸಿ ಕಾಫಿ ಹೀರಿದ. ಅವನ ಮುಖ ಹಿಗ್ಗಿನಿಂದ ಇಷ್ಟಗಲವಾಗಿತ್ತು.

"ಇಂಥವಳು ಯಾವುದೋ ಕಾಲ್ಪನಿಕ ಕಾವ್ಯದ ಅಥವಾ ನಾಟಕದ ನಾಯಿಕೆ ಮಾತ್ರ ಇರುವುದು ಸಾಧ್ಯ" ಸಂದೇಹಿ ಲಕ್ಷ್ಮಣ್ ತನ್ನ ಸ್ವಭಾವದಂತೆ ಮತ್ತೆ ನುಡಿದ.

ಈಗ ರಸಿಕ ರಮೇಶನ ಮುಖ ಕೂಡಲೇ ಕೋಪದಿಂದ ಕೆಂಪಗಾಯಿತು. "ನಿನ್ನಂಥ ಅರಸಿಕ ಜಗತ್ತಿನಲ್ಲಿ ಇನ್ನೊಬ್ಬನಿಲ್ಲ ನೋಡು, ಲಕ್ಷ್ಮಣ್! ನಾನು ಇದೀಗ ಬಣ್ಣಿಸಿದ್ದು ಯಾವುದೇ ಕಾಲ್ಪನಿಕ ಗಂಧರ್ವ ಲೋಕದ ಹೆಣ್ಣನ್ನಲ್ಲ; ಪ್ರತ್ಯಕ್ಷವಾಗಿ ಇದೇ ಜಗತ್ತಿನಲ್ಲಿ, ಇದೇ ಊರಿನಲ್ಲಿ ಇದ್ದಾಳೆ ಅವಳು. ಈಗಲಾದರೂ ಸಮಾಧಾನವಾಯಿತೇ?" ಎಂದವನು ಕೇಳಿದ.

"ಅವಳ ಹೆಸರು? ಇರುವುದು ಎಲ್ಲಿ?" ಪ್ರಶ್ನಿಸಿದ ಲಕ್ಷ್ಮಣ.

"ಲಕ್ಷ್ಮಣ್ ಪೋಲೀಸ್ ಇಲಾಖೆಯಲ್ಲಿ ನೌಕರಿ

ರಮೇಶ ಅಭಿಮಾನದಿಂದ ಟ್ರಂಕ್ ತೆರೆದು ಫೋಟೋಗಳ "ಅಲ್ಬಮ್" ಒಂದನ್ನು ತೆಗೆದು ಲಕ್ಷ್ಮಣನ ಕೈಗಿತ್ತ. ಅದರ ತುಂಬಾ ಲಲಿತೆಯ ವಿವಿಧ ಭಂಗಿಯಲ್ಲಿಯ ಫೋಟೋಗಳೇ ಇದ್ದುವು. ಲಕ್ಷ್ಮಣ ಒಂದೊಂದಾಗಿ ಫೋಟೋ ನೋಡುತ್ತಿದ್ದಂತೆ, ರಮೇಶ ಆನಂದ –ಅಭಿಮಾನಗಳಿಂದ ಸಿಗರೇಟ್ ಎಳೆದು ಅದರ ಹೊಗೆಯ ವರ್ತುಳಗಳನ್ನು ಆಕಾಶದಲ್ಲಿ ನಿರ್ಮಿಸುತ್ತಿದ್ದ.

ಉಳಿದ ನಾವೆಲ್ಲ ಮಿತ್ರರೂ ರಮೇಶನ ಪ್ರಿಯತಮೆ ಲಲಿತೆಯ ಫೋಟೋಗಳನ್ನು ಅನೇಕ ಸಲ ನೋಡಿದ್ದೆವು. ನಿಜವಾಗಿ ಹೇಳಬೇಕೆಂದರೆ, ಲಲಿತೆ ಅಂಥ ದಿವ್ಯಸುಂದರಿ ಏನಲ್ಲ. ಚೆಲುವೆ ಎಂದೇನೋ ಹೇಳಬಹುದಾಗಿತ್ತು. ಆದರೆ ರಮೇಶನ ಕಣ್ಣಿಗೆ ಅವಳು ಗಂಧರ್ವ ಕನ್ಯೆಯಾಗಿ ಕಂಡಿದ್ದಳು. "ಪ್ರೇಮವು ಕುರುಡು" ಎಂಬ ಸನಾತನ ಸತ್ಯಕ್ಕೆ ಮತ್ತೊಂದು ಉದಾಹರಣೆಯಾಗಿತ್ತು, ರಮೇಶನ ದೃಷ್ಟಿ. ಹೀಗೆ ಭಾವಿಸಿದ ನಾವೆಲ್ಲ ಅವನ ಮನಸ್ಸನ್ನು ನೋಯಿಸಲು ಸಿದ್ಧರಿರಲಿಲ್ಲ. ರಮೇಶನ ತಂದೆ ಭಾರೀ ಜಮೀನ್ದಾ

# ನಾಟಕ ತಂದ ಸಾವಿತ್ರಿ

**ಅವನು ಕಾಲೇಜ್ ರಂಗಭೂಮಿಯಲ್ಲಿ ಉತ್ತಮ ಅಭಿನಯ ನೀಡಿದ್ದ. ಜೀವನ ರಂಗಭೂಮಿಯಲ್ಲೂ ಅದೇ ತರಹದ ಅಭಿನಯ ನೀಡಲು ಹೋದ. ಆದರೆ ಆದದ್ದೇನು ?**

ಪ್ರೊ. ಜಿ. ಡಿ. ನಾಡಕರ್ಣಿ

ರಲಿ: ಇಂಥ ಶ್ರೀಮಂತ ಹಾಗೂ ರಸಿಕ ಮಿತ್ರನ ಪ್ರೇಮ ಸಫಲವಾಗಿ ರಮೇಶ ತಾನು ಮೆಚ್ಚಿದ ಲಲಿತೆಯನ್ನೇ ಮದುವೆಯಾಗಿ ಸುಖವಾಗಿರಲಿ ಎಂಬುದೇ ನಮ್ಮ ಮಿತ್ರಮಂಡಳಿಯ ಸದುದ್ದೇಶವಾಗಿತ್ತು.

ಆದರೆ ಪ್ರೇಮದ ದಾರಿ ಹೂವಿನ ದಾರಿಯಾಗಿರದೆ, ಮುಳ್ಳಿನ ದಾರಿ ಎಂಬುದು ಸುಳ್ಳಲ್ಲ. ಇದು ಬರಿ ಕಾವ್ಯ ನಾಟಕಗಳಲ್ಲಿ ಮಾತ್ರವಲ್ಲ, ನಿಜ ಜೀವನದಲ್ಲಿ ಕೂಡ ಸತ್ಯವಾದದ್ದು. "ಶ್ರೇಯಾಂಸಿ ಬಹು ವಿಘ್ನಾನಿ". ಒಳ್ಳೇಯ ಕೆಲಸಕ್ಕೆ ಅನೇಕ ಅಡ್ಡಿಗಳಲ್ಲವೆ? ಹಾಗೆಯೇ ರಮೇಶ–ಲಲಿತೆಯರ ಒಲುಮೆಯ ದಾರಿಯಲ್ಲಿಯೂ ಬಂಡೆಗಲ್ಲೊಂದು ಅನಿರೀಕ್ಷಿತವಾಗಿ ಎದುರಾಯಿತು.

ಒಂದು ಸಂಜೆ ರಮೇಶ ಜೋಲುಮೋರೆ ಹಾಕಿಕೊಂಡು ನನ್ನ ರೂಮಿಗೆ ಬಂದ. ಯಾವಾಗಲೂ ನುಣ್ಣಗಿರುವ ಅವನ ಮುಖದ ಮೇಲೆ ಕುರುಚಲು ಗಡ್ಡ ಬೆಳೆದಿದೆ; ಎಣ್ಣೆಯಿಲ್ಲದೆ ಕೆದರಿ ಹೋಗಿರುವ ತಲೆಗೂದಲು; ಕಣ್ಣುಗಳು ನಿಸ್ತೇಜವಾಗಿವೆ; ಮುಖದ ಮೇಲೆ ಅತಿವಿಷಾದದ ಕಳೆ. ಅವನು ಯಾವಾಗಲೂ ಉತ್ಸಾಹದಿಂದ ಪುಟಿಯುವ ವ್ಯಕ್ತಿ: ಇಂಥ ದೀನ ಸ್ಥಿತಿಯಲ್ಲಿ ಅವನನ್ನು ಕಂಡು ನನಗೆ ಕನಿಕರವೆನಿಸಿ ಅವನ ಹೆಗಲಮೇಲೆ ಮಮತೆಯಿಂದ ಕೈಹಾಕಿ ಅವನ ಈ ದುಃಖಕ್ಕೆ ಕಾರಣವನ್ನು ವಿಚಾರಿಸಿದೆ.

ರಮೇಶ ಒಂದು ದೀರ್ಘ ನಿಟ್ಟುಸಿರು ಬಿಟ್ಟು ಮೆಲ್ಲಗೆ ಕೇಳಿದ: "ರೋಮಿಯೋ-ಜ್ಯುಲಿಯೆಟ್ ನಾಟಕ, ಲೈಲಾ-ಮಜನು ನಾಟಕ ನೀನು ನೋಡಿರಬಹುದು ಅಥವಾ ಅವುಗಳ ಕಥೆ ನೀ ಕೇಳಿರಬಹುದಲ್ಲ?"

ನನಗೆ ಅರ್ಥವಾಯಿತು. ಪ್ರೇಮದ ಪಾಶದಲ್ಲಿ ಬಿದ್ದು ವಿಘ್ನಗಳು ಎದುರಾದಾಗಿನ ಕಥಾನಾಯಕನ ವಿಷಣ್ಣ ಮನಃಸ್ಥಿತಿಯೇ ಈ ರಮೇಶನ ಪ್ರತ್ಯಕ್ಷ ಸ್ಥಿತಿಯಾಗಿತ್ತು. ಇಂಥ ಪ್ರಸಂಗಗಳಲ್ಲಿ ಸಿನೇಮಾಗಳಲ್ಲಿ ಮಾಡುವ "ಮೇಕ್ ಅಪ್"ದ ಹಾಗೆಯೇ ಇತ್ತು ರಮೇಶನ ವೇಷ-ಭೂಷಣ. ಅವನು ಸಹಜವಾಗಿ ನಿಂತ ರೀತಿ, ಕೆಳಗೆ ಹಾಕಿದ ಮುಖ, ದುಃಖದಿಂದ ಭಾರವಾದ ಧ್ವನಿ, ಎಲ್ಲವೂ ಯಾವುದೇ ಚಲಚ್ಚಿತ್ರ ಕಂಪೆನಿಯ ಡಾಯರೆಕ್ಟರರನ್ನೂ ತೃಪ್ತಿಪಡಿಸಬಹುದಾಗಿತ್ತು ಎಂದುಕೊಂಡೆ ನಾನು ಮನಸ್ಸಿನಲ್ಲಿ.

"ಅಂತೂ ರಮೇಶ, ಭಗ್ನಪ್ರಣಯಿ ರೋಮಿಯೋ, ಮಜನು ಇವರ ಹಾಗೆಯೇ ಆಗಿದೆ ಏನು ನಿನ್ನ ಸ್ಥಿತಿ. ಪಾಪ! ನನಗೆ ನಿಜವಾಗಿಯೂ ವ್ಯಸನವೆನಿಸುತ್ತದೆ. ಏನಾಗಿದೆ ಸ್ವಲ್ಪ ಬಿಡಿಸಿಹೇಳಲ್ಲ. ನನ್ನಿಂದೇನಾದರೂ ಸಹಾಯ ಸಾಧ್ಯವಿದ್ದರೆ ಅವಶ್ಯ ಮಾಡುವೆ. ಮೊದಲು ಸ್ವಲ್ಪ ಬಿಸಿಕಾಫಿ ಕುಡಿ." ಎಂದು ಹೇಳಿ ನಾನು ಸ್ಟೋವ್ ಹೊತ್ತಿಸಿದೆ.

ರಮೇಶ ಮೂಕನಾಗಿ ಈಸಿಚೇರಿನಲ್ಲಿ ಕುಳಿತ. ಕಾಫಿ ಕುಡಿದ ಮೇಲೆ ಒಂದು ಪತ್ರವನ್ನು ನನ್ನ ಕೈಗಿತ್ತ.

"ಲಲಿತಾಳ ಪತ್ರವೇನೋ? ಖಾಸಗೀ ಪತ್ರ ನಾನ್ಹೇಗೆ ಓದಲಿ?" ಎಂದು ನಾನು ಹೇಳಿದ್ದಕ್ಕೆ ಅವನು ವಿಷಾದದಿಂದ ನುಡಿದ:

"ಅಲ್ಲೋ, ಗುರಣ್ಣ. ಇದು ನನ್ನ ತಂದೆ-ತಾಯಿ, ನನ್ನ ಜನ್ಮದಾತರು ಬರೆದ ದಿವ್ಯ ಪತ್ರ. ಇದನ್ನೋದು – ಎಂದರೆ ನಿನಗೇ ಎಲ್ಲವೂ ಅರ್ಥವಾಗುತ್ತದೆ."

ಪತ್ರ ನಾನು ಓದಿ ಮುಗಿಸಿದೆ. ಅದರಲ್ಲಿ ರಮೇಶನ ತಂದೆ ಮದುವೆಯ ವಿಚಾರ ಪ್ರಸ್ತಾಪಿಸಿ, ಅವನಿಗಾಗಿ ಒಂದು ಉತ್ತಮ ಮನೆತನದ ಹೆಣ್ಣನ್ನು ನೋಡಿರುವುದಾಗಿಯೂ, ಮನೆಯಲ್ಲಿ ತಾಯಿ ಹಾಗೂ ಎಲ್ಲರೂ ಈ ಸಂಬಂಧಕ್ಕೆ ಒಪ್ಪಿರುವುದಾಗಿಯೂ ಬರೆದಿದ್ದರು. ಕಾರಣ, ಕೂಡಲೇ ರಮೇಶ ಬರಬೇಕೆಂದೂ ಕನ್ಯೆಯನ್ನು ನೋಡಿ ತನ್ನ ಸಮ್ಮತಿಯನ್ನು ವ್ಯಕ್ತಪಡಿಸಬೇಕೆಂದೂ, ತಮಗಿರುವ ಒಬ್ಬನೇ ಮಗನು ತಮ್ಮ ಮಾತನ್ನು ಈ ವಿಷಯದಲ್ಲಿ ಮೀರುವದಿಲ್ಲವೆಂಬ ಭರವಸೆ ತಮಗಿರುವುದಾಗಿಯೂ ಬರೆದಿದ್ದರು.

"ನೀನು ನೋಡದೇನೇ ಇರುವ ಕನ್ಯೆಯನ್ನು ಅದ್ಹೇಗಪ್ಪಾ ಈಗ ಒಪ್ಪಿಕೊಂಡಿರೋದು?"–ನಾನು ಪೃಚ್ಛಿಸಿದೆ.

"ನನ್ನ ತಂದೆ-ತಾಯಿ ಬಹಳ ಹಳೆಯ ಸಂಪ್ರದಾಯದವರು, ಗುರಣ್ಣ, ಉಳಿದ ಎಲ್ಲಾ ವಿಷಯಗಳಲ್ಲಿ ನನಗೆ ಸ್ವಾತಂತ್ರ್ಯ ಕೊಟ್ಟಿದ್ದರೂ, ನನ್ನ ಮದುವೆಯ ವಿಚಾರದಲ್ಲಿ ಮಾತ್ರ ಅವರದೇ ಮಾತು ನಡೆಯಬೇಕು. ಹೀಗಿದೆ ನೋಡು, ನನ್ನ ತಂದೆ-ತಾಯಿಯ ಹಟ."

"ಆದರೂ, ರಮೇಶ, ನೀನು ನಿಮ್ಮ ತಂದೆಯವರಿಗೆ ಹೇಳಿನೋಡು. ನಿನ್ನಂಥ ಒಬ್ಬನೇ ಮಗನ ವಿವಾಹದ ವಿಷಯದಲ್ಲಿ ಅವರು ಅನ್ಯಾಯ ಮಾಡಲಾರರು ಎಂದು ನನಗನ್ನಿಸುತ್ತದೆ."

"ನಿನಗೆ ಗೊತ್ತಿಲ್ಲ, ಗುರಣ್ಣ. ಇದೊಂದು ವಿಷಯದಲ್ಲಿ ಅಪ್ಪ-ಅಮ್ಮ ತಮ್ಮ ಹಟವನ್ನೇ ಸಾಧಿಸುವರೇ ಹೊರತು ನನ್ನ ಮಾತಿಗೆ ಬೆಲೆಕೊಡಲಾರರು. ಇದು ಖಂಡಿತ" ಎಂದು ಸ್ಪಷ್ಟವಾಗಿ ಹೇಳಿದ ರಮೇಶ.

ಈಗ ನನಗೆ ರಮೇಶನ ಸಂಕಟದ ಪೂರ್ಣ ಕಲ್ಪನೆಯಾಯಿತು. ಸಾಯಂಕಾಲ ಉಳಿದ ಮಿತ್ರರಿಗೂ ಈ ಸಮಸ್ಯೆಯನ್ನು ವಿವರಿಸಿದೆ. ಎಲ್ಲರೂ ವಿಚಾರ ಮಾಡುತ್ತಿರುವಾಗ ಒಮ್ಮೆಲೆ ಶೀನು ಖುರ್ಚಿಯಿಂದ ಪುಟಿದೆದ್ದು–

"ಹೊಳೆಯಿತು, ಪ್ಲ್ಯಾನ್ ಹೊಳೆಯಿತು" ಎಂದ.

"ಏನೋ, ಅದು?"– ನಾನು ತುಸು ಬೇಸರದಿಂದಲೇ ಕೇಳಿದೆ.

"ರಮೇಶ ಹೇಗೂ ಉತ್ತಮ ನಟನೆ ಮಾಡುತ್ತಾನೆ. ಕಾಲೇಜ್ ಗ್ಯಾದರಿಂಗ್ ನಾಟಕದಲ್ಲಿ ಅತ್ಯುತ್ತಮ ಅಭಿನಯ ಮಾಡಿ ತೋರಿಸಲಿಲ್ಲವೆ?"

"ಅದಕ್ಕೂ ಇದಕ್ಕೂ ಸಂಬಂಧವೇನೋ?" ನಾನು ಕೇಳಿದೆ.

"ಈ ನಾಟಕದಲ್ಲಿಯೂ ಅವನು ಉತ್ತಮ ಅಭಿನಯ ತೋರಿಸಬೇಕು. ಈ ಸಲ ಹುಚ್ಚನ ಅಭಿನಯ!"

"ಏನೋ ಹಾಗೆ ಒಗಟಿನಲ್ಲಿ ಮಾತನಾಡಿದರೆ?" -ಲಕ್ಷ್ಮಣ ಕೇಳಿದ.

"ಅಯ್ಯೋ, ಮಂಕುಗಳೆ! ಇಷ್ಟೂ ತಿಳಿಯಲಿಲ್ಲ? ರಮೇಶನು ಅವರ ತಂದೆಯ ಪತ್ರದ ಪ್ರಕಾರ ಕನ್ಯೆಯನ್ನು ನೋಡಲು ಹೋಗಬೇಕು. ಕನ್ಯೆಯ ಮನೆಗೆ ಹೋದೊಡನೆಯೆ ಹುಚ್ಚುಚ್ಚಾಗಿ ವರ್ತಿಸಬೇಕು. ಎಷ್ಟು ಭ್ರಾಂತನಂತೆ ನಟಿಸಬೇಕು ಎಂದರೆ



"ಪ್ಯಾಟನ್ ಟ್ಯಾಂಕ್, ಸೇಬರ್ ಜೆಟ್ ಎಲ್ಲವನ್ನೂ ಪಾಕಿಸ್ತಾನದವರು ಕೊಂಡು ಹೋದರು.
ನಿಮಗಾಗಿ ಜಂಬೂಜೆಟ್ ಇರಿಸಿಕೊಂಡಿದ್ದೇವೆ."

ಆ ಕನ್ಯೆಯ ತಾಯಿ-ತಂದೆ, ಆ ಕನ್ಯೆ ಎಲ್ಲರೂ ತಾವಾಗಿಯೇ ಈ ವಿವಾಹಕ್ಕೆ ಅಸಮ್ಮತಿಸಬೇಕು, ಹಾಗೆ. ಆದರೆ ಈ ಗಂಡಾಂತರ ತಾನಾಗಿಯೇ ದಾಟಿ ಹೋಗುತ್ತದೆ. ಮತ್ತು ಇಂಥ ಅಭಿನಯ ರಮೇಶ ಮಾಡಬಲ್ಲ"- ವಿಜಯದ ನಗೆಯೊಡನೆ ಶೀನು ವಿವರಿಸಿದ.

ನಾವೆಲ್ಲರೂ ಈ ಯೋಜನೆಯನ್ನು ಕೂಲಂಕಷವಾಗಿ ವಿಚಾರಿಸಿದೆವು. ಇದು ವಿಚಿತ್ರ ಪ್ಲಾನ್ ಅನ್ನಿಸಿದರೂ ಮಾಡಿನೋಡಲು ಅಡ್ಡಿಯಿಲ್ಲ, ಎಂದು ಎಲ್ಲರಿಗೂ ಅನಿಸಿತು. ರಮೇಶನಿಗೆ ಹೇಳಿದಾಗ ಅವನೂ, ಬೇರೆ ಉಪಾಯ ಹೊಳೆಯದ್ದರಿಂದ ಈ ಯೋಜನೆಗೆ ಒಪ್ಪಿಕೊಂಡ.

ತನ್ನೊಡನೆ ತನ್ನ ಊರಿಗೆ ಬರಲು ರಮೇಶ ನನಗೆ ತುಂಬಾ ಒತ್ತಾಯಮಾಡಿದ. ಉಳಿದ ಸ್ನೇಹಿತರೂ ಬಲವಂತ ಮಾಡಿದ್ದರಿಂದ ನಾನೂ ರಮೇಶ ಕೂಡಿ ಅವನ ಊರಿಗೆ ಹೋದೆವು. ರಮೇಶನ ತಾಯಿ-ತಂದೆಗೆ ಅವನು ತೀವ್ರ ಬಂದದ್ದನ್ನು ಕಂಡು ಸಂತಸವಾಯಿತು; ನನ್ನನ್ನೂ ಅವರು ಅಕ್ಕರೆಯಿಂದ ಕಂಡರು. ರಮೇಶನ ತಂದೆ ಕನ್ಯೆಯ ಮನೆಗೆ ಹೇಳಿ ಕಳಿಸಿದರು. ಕೂಡಲೇ ಕನ್ಯಾಪಿತೃ ಕೃಷ್ಣರಾಯರು ಮನೆಯವರೆಗೂ ಬಂದು, ಬೇರೆ ಊರಿನಲ್ಲಿ ಕಲಿಯುತ್ತಿದ್ದ ಮಗಳನ್ನು ತಂತಿಕೊಟ್ಟು ಕರೆಯಿಸಿದ್ದಾಗಿ ಹೇಳಿದರು. ಅಲ್ಲದೆ ಮರುದಿನ ಮಧ್ಯಾಹ್ನ ನಾಲ್ಕು ಘಂಟೆಗೆ ಕನ್ಯೆಯನ್ನು ನೋಡಲು ಬರಬೇಕಾಗಿ ವಿನಯದಿಂದ ವಿನಂತಿಸಿಕೊಂಡು ಹೋದರು.

ಸರಿ; ನಾವೆಲ್ಲರೂ ಮರುದಿನ ಕನ್ಯೆಯ ಮನೆಗೆ ಹೋದೆವು. ಒಳ್ಳೇ ಪೋಕ್ಾಗಿ ಹೊರಟ ರಮೇಶ ಅವರ ಮನೆಯ ಹೊಸ್ತಿಲಲ್ಲಿ ಕಾಲಿಡುತ್ತಲೇ "ಹುಚ್ಚ"ನಾದ. ವಿಚಿತ್ರವಾಗಿ ನಗುತ್ತ, ತಾನು ಧರಿಸಿದ್ದ ಬೂಟುಗಳನ್ನು ಬಿಚ್ಚಿ, ನಡುಮನೆಯ, ಮಧ್ಯದಲ್ಲಿ ಶುಭ್ರವಾದ ಟೇಬಲ್ ಕ್ಲಾತ್‌ದಿಂದ ಅಲಂಕೃತವಾದ ಟೀಪಾಯಿ ಮೇಲೆ ಇಟ್ಟ. ಆಂಜನೇಯನ ಫೋಟೋಕ್ಕೆ ಹಾಕಿದ ಹೂಮಾಲೆಯನ್ನು ತೆಗೆದುಕೊಂಡು ತನ ಭಾವೀ ಮಾವನ ಕೊರಳಲ್ಲಿ ಹಾಕಿದ! ಅವರಿಗೆ ಏನು ಮಾಡಬೇಕೆಂಬುದು ತಿಳಿಯದೆ ದಿಗ್ಭ್ರಾಂತರಾಗಿ ನಿಂತರು. ಮನೆಯಲ್ಲಿಯ ಮತ್ತೊಬ್ಬ ಹಿರಿಯರು ಎಲ್ಲರನ್ನೂ ಒಳಗೆ ಕರೆದು "ಕೂಡಿರಿ" ಎಂದು ಹೇಳುತ್ತಿರಲು ರಮೇಶ ಟೇಬಲ್ ಮೇಲೆ ಜಿಗಿದು ನಿಂತು-"ಇಂದು ದೇಶಕ್ಕೆ ಅತ್ಯಂತ ಅವಶ್ಯವಾಗಿರುವುದು ಉಳ್ಳಾಗಡ್ಡಿ; ಅದನ್ನೇ ನಾವೆಲ್ಲರೂ ಬೆಳೆಯಬೇಕು; ಅದನ್ನೇ ಅಮೇರಿಕೆಗೆ ಕಳಿಸಿಕೊಡಬೇಕು. ಅಂದರೆ ಅವರು ಪ್ರತಿಯಾಗಿ ತತ್ತಿಗಳನ್ನು ಕಳಿಸುವರು. ಇಲ್ಲಿಯ ಉತ್ಪತ್ತಿಯೇ ಹೋಗಿ ಅಲ್ಲಿ ತತ್ತಿಯಾಗಿದೆ" ಎಂದು ಸಿಕ್ಕಾಪಟ್ಟೆ ಮಾತನಾಡಹತ್ತಿದನು. ಆಗ ನಾನು ಹೋಗಿ ರಮೇಶನನ್ನು ಬಲವಂತದಿಂದ ಕರೆದುಕೊಂಡು ಒಂದು ಆರಾಮ ಖುರ್ಚಿಯಲ್ಲಿ ಕೂಡಿಸಿದೆ. ಸ್ವಲ್ಪ ಹೊತ್ತಿನಲ್ಲಿಯೇ ಅವನು ಶಾಂತನಾಗಿ ಗೊರಕೆ ಹೊಡೆಯಹತ್ತಿದನು. ಆದರೆ ಅವನ ಅಭಿನಯ ಮಾತ್ರ ತುಂಬಾ ಸಹಜವಾಗಿತ್ತು, ನಿಜಕ್ಕೂ ಮೆಚ್ಚುವಂಥದಿತ್ತು. ಅವನ ಜೀವನ ನಾಟಕದಲ್ಲಿಯ ಅತ್ಯಂತ ವಿಷಮ ಪ್ರವೇಶವಲ್ಲವೆ ಅದು?

ಇದನ್ನೆಲ್ಲ ಕಂಡು ದುಃಖದಿಂದ ಮೂಕರಾದವರೆಂದರೆ ರಮೇಶನ ತಾಯಿ ಹಾಗೂ ತಂದೆ. ತಾಯಿ ಕಣ್ಣೀರನ್ನು ಕರೆಯಲು ಪ್ರಾರಂಭಿಸಿದಳು; ತಂದೆ ಒಂದು ರಮೇಶನ ಮೈಮೇಲೆ ಕೈಯಾಡಿಸತೊಡಗಿದರು. ಈ ಪ್ರಸಂಗಕ್ಕೆ ಅತಿಥಿಗಳಾಗಿ ಬಂದ ಹಿರಿಯರು ಹಾಗೂ ಮಿತ್ರರು ತಮ್ಮ ತಮ್ಮಲ್ಲಿ ನಗುತ್ತ ಗುಸುಗುಸು ಮಾತನಾಡಲು ಪ್ರಾರಂಭಿಸಿದರು; ಒಬ್ಬೊಬ್ಬರು ನಗುತ್ತ ಹೊರಗೆ ಹೊರಟೇ ಹೋದರು. "ಪಿತ್ತಪ್ರಕೋಪವಿರಬೇಕು" ಎಂದು ಒಬ್ಬರು ಮೆಲ್ಲಗೆ ನುಡಿದರೆ, ಮತ್ತೊಬ್ಬರು ನಗುತ್ತ-"ಛೇ! ಇದು ಪಿತ್ತವಲ್ಲ. ಕಣ್ಣು, ಮುಖಾ ನೋಡಿದ್ರಿಲ್ಲೊ? ಎಂಥಾ ದಾವು? ಇದು ಕೇವಲ ಹುಚ್ಚು. ಇಂಥ ಹುಚ್ಚನಿಗೆ ನಮ್ಮ ಕೃಷ್ಣರಾಯರು ಮಗಳನ್ನು ಕೊಡುವದು ಸಾಧ್ಯವೇ?" ಎಂದು ಆಡಿದರು. ಅದರಂತೆ ಕೃಷ್ಣರಾಯರು ಸಿಟ್ಟಿಗೆದ್ದು ಇಂಥವನಿಗೆ ತಮ್ಮ ಮಗಳನ್ನು ತೋರಿಸಲು ಕೂಡ ಒಪ್ಪಲಿಲ್ಲ. ಆಗ ಪುರೋಹಿತರು ನಡುವೆ ಬಂದು-"ರಾಯರೇ, ಗೃಹಸ್ಥರು ಕನ್ಯೆ ನೋಡಲು ತಮ್ಮ ಮನೆಗೆ ಬಂದಾರ, ಕನ್ಯೆ ತೋರಿಸುವ ಶಾಸ್ತ್ರ ಅಷ್ಟು ಮಾಡಿರಿ. ಆ ಮೇಲೆ ನೀವು ಎಲ್ಲಾ ವಿವರವಾಗಿ ವಿಚಾರಿಸಿಕೊಳ್ಳಬಹುದು" ಎಂದು ನುಡಿದು ಬಲವಂತದಿಂದ ಕೃಷ್ಣರಾಯರನ್ನು ಹೇಗೋ ಒಪ್ಪಿಸಿದರು. ಆ ಮೇಲೆ ಕನ್ಯೆಯು ಕೆಳಮುಖಮಾಡಿಕೊಂಡು ಕಣ್ಣೀರು ಒರಸಿಕೊಳ್ಳುತ್ತ ಪ್ರವೇಶಿಸಿದಳು. ಹಿರಿಯರೊಬ್ಬರು ಅವಳನ್ನು ಒಂದು ಕುರ್ಚಿಯಮೇಲೆ ಕೂಡಲು ಹೇಳಿದರು. ನಾನು ತಲೆ ಎತ್ತಿ ಆ ಕಡೆಗೆ ನೋಡಿದೆ! ಆಶ್ಚರ್ಯದಿಂದ ನನ್ನ ಕಣ್ಣುಗಳನ್ನು ನಾನೇ ನಂಬಲಾರದೆ ಹೋದೆ ಇಷ್ಟರಲ್ಲಿಯೇ ಕಣ್ಣು ತೆರೆದ ರಮೇಶನೂ ಕನ್ಯೆಯ ಕಡೆ ನೋಡಿದ; ಮೆಟ್ಟಿಬಿದ್ದ, ಸ್ತಂಭಿತನಾದ! ಏಕೆಂದರೆ ಆ ಕನ್ಯೆಯು ಮತ್ತಾರೂ ಆಗಿರದೆ ರಮೇಶನು ಪ್ರೀತಿಸಿದ ಲಲಿತೆಯೇ ಆಗಿದ್ದಳು!

ಪೂರ್ವ ಬಂಗಾಲದಲ್ಲಿಯ ನರಹತ್ಯೆ ಯಾರ ಕರುಳನ್ನೂ ಮಿಡಿಯುವುದು! ಅಲ್ಲಿಯ ಸ್ವೈರವೃತ್ತಿ ಯಾರನ್ನೂ ಕಂಗೆಡಿಸುವುದು. ಆ ಹಿನ್ನೆಲೆಯಲ್ಲಿ ರೂಪಗೊಂಡ ದಾರುಣ ಚಿತ್ರ ಇದು. . . . . . . . .



ಹಿರೇಮಠ

ಬೀದಿಯಲ್ಲಿ ಬಿದ್ದಿತ್ತೊಂದು ಹೆಣ! ಸಂಚರಿಸುವ ಜನ ಕಣ್ಣೆತ್ತಿ ನೋಡಲು ಅಂಜುತ್ತಿದ್ದರು. ಅವರು ಶವವನ್ನು ಸಮೀಪಿಸಿದಾಗ ತಲೆಯನ್ನು ತಗ್ಗಿಸಿ ತ್ವರಿತ ಗತಿಯಲ್ಲಿ ಹೆಜ್ಜೆಗಳನ್ನಿಡುತ್ತಿದ್ದರು.

ಬಂಗ್ಲಾದೇಶದ ಜನರಿಗೆ ಶಾಂತಿಯನ್ನು ಪ್ರದಾನ ಮಾಡಿತ್ತು ಯಾಹ್ಯಾಖಾನರ ಲಷ್ಕರಿ ಆಡಳಿತ. ಮಡಿದು ಬಿದ್ದವನನ್ನು ಕಣ್ಣು ತುಂಬ ನೋಡಿ ಅನುಕಂಪದ ಬಿಸಿಯುಸಿರೊಂದನ್ನು ಹೊರಚೆಲ್ಲಿ ಕಂಬನಿಯನ್ನು ಮಿಡಿದು ಊರಿನ ಶಾಂತವಾತಾವರಣವನ್ನು ಹದಗೆಡಿಸದಂತೆ ಜಾಗ್ರತೆವಹಿಸಿದ್ದರು [illegible] ಸೇನೆಯ ಕಟ್ಟಾಳುಗಳು. ಬೈನೆಟ್ಟು ಸಿಕ್ಕಿದ ಬಂ[illegible]ಕವನ್ನು ಹೆಗಲಮೇಲೇರಿಸಿದ ದಂಡಾಳುಗಳಿಬ್ಬರು ಹೆಣದ ಆಚೆ ಈಚೆ ನಿಂತು ಶಾಂತಿಭಂಗವಾಗದಂತೆ ನೋಡಿಕೊಳ್ಳುತ್ತಿದ್ದಾರೆ.

ಬೀದಿಯಲ್ಲಿ ಮಡಿದು ಬಿದ್ದವನು ಪ್ರೌಢ ವಯಸ್ಕನೇನೂ ಅಲ್ಲ. ಹನ್ನೆರಡು ವರ್ಷದ ಹಾಲುಗಲ್ಲದ ಬಾಲಕನವನು. ಬೈನೆಟ್ಟುಗಳ ಇರಿತದಿಂದ ಬೆನ್ನು, ಎದೆ, ಮೊಗಗಳ ಮೇಲೆ ಹತ್ತೆಂಟು ಗಾಯಗಳಾಗಿವೆ. ಆತ ತೊಟ್ಟ ಜುಬ್ಬ ಎದೆಯಿಂದ ಚಿಮ್ಮಿದ ರಕ್ತಸ್ರೋತದಲ್ಲಿ ನಾದಿ ಕೆಂಬಣ್ಣವನ್ನು ತಳೆದಿದೆ. ಹಣೆಯಲ್ಲಾದ ಗಾಯದಿಂದ ಹರಿದ ನೆತ್ತರು ಎಡಗಲ್ಲಕ್ಕೆ ಮೆತ್ತಿದೆ. ಮುಷ್ಟಿಪ್ರಹಾರದ ಆಘಾತದಿಂದ ಆತನ ಬಲಗೆನ್ನೆ ಊದಿ ಹಸಿರುಗೊಂಡಿದೆ. ಮೂಗು ಜಜ್ಜಿ ಹೋಗಿದೆ. ಮೇಲ್ದುಟಿ ಒಡೆದು ಒಸರಿದ ರಕ್ತ ಹೆಪ್ಪುಗಟ್ಟಿ ಕಪ್ಪುಬಣ್ಣಕ್ಕೆ ತಿರುಗಿದೆ. ಆತ ತೆರೆದ ಎವೆಗಳನ್ನು ಮುಚ್ಚಿಲ್ಲ. ಆತನ ನೀಲವರ್ಣದ ಅಚಲಂಕ ನೇತ್ರಗಳಲ್ಲಿ ಭೀತಿಯ ಛಾಯೆಯು ಸುಳಿವಿಲ್ಲ. ದೇಹದ ಪ್ರಾಣಚೈತನ್ಯ ಆರಿಹೋದರೂ ಆ ಕಣ್ಣುಗಳಲ್ಲಿ ಉರಿದೆದ್ದ ಕ್ರೋಧದ ವಿಸ್ಫುಲಿಂಗ ನಂದಿ ಹೋಗಿಲ್ಲ.

"ಯಾರೀ ಹಸುಳೆ? ಅವನೇಕೆ ಮಡಿದು ಬೀದಿಯಲ್ಲಿ ಬಿದ್ದಿದ್ದಾನೆ?" ಈ ಪ್ರಶ್ನೆಗಳನ್ನು ನೀವು ಕೇಳಬೇಡಿ. ಹಸುಳೆಯ ಮರಣದ ಕತೆಯನ್ನು ಉಸುರಲಾಗದು. ಅದು ಲಷ್ಕರಿಆಡಳಿತ ಸ್ಥಾಪಿಸಿದ ಶಾಂತಿಯನ್ನು ಭಗ್ನಗೊಳಿಸೀತು. ಆದುದರಿಂದ ಅದು ರಾಜದ್ರೋಹ. ಚಕ್ರವ್ಯೂಹವನ್ನು ಭೇದಿಸಲು ಹೊರಟ ಅಭಿಮನ್ಯು ಆತ ಎಂಬುದನ್ನು ನೀವು ಅರಿತರೆ ಸಾಕು.

ಮಾರ್ಗದ ಆಚೆ ಪುಟ್ಟದೊಂದು ತೋಟ. ಆ ತೋಟದಲ್ಲಿದ್ದ ತೆಂಗುಕಂಗುಗಳು ಹಸುಳೆಯ ಅದಟನ್ನು ಮೆಚ್ಚಿ ಆತನ ವೀರಮರಣಕ್ಕೆ ಮೌನಶೋಕವನ್ನು ಸೂಸುವಂತೆ ತಲೆಬಾಗಿರುವವು. ಕಾಯವನ್ನು ಕಳೆದು ವೀರಸ್ವರ್ಗವನ್ನಡರಿದ ಕಲಿಗೆ ಬಾಷ್ಪಾಂಜಲಿ ಸಲ್ಲಿಸುವಂತೆ ಎಲೆಗಳ ಮೇಲೆ ನೆಲೆಗೊಂಡ ಮಳೆಹನಿಗಳು ಪಟಪಟನೆ ಉದುರಿದುವು. ಹಚ್ಚಹಸುರಿನ ಬಯಲಿನಾಚೆಗೆ ಇಳಿಯತೊಡಗಿದ್ದ ರವಿ ತನ್ನನ್ನು ಮುಸುಕಿದ ಮುಗಿಲುಜವನಿಕೆಯನ್ನು ಓಸರಿಸಿ, ವೀರಬಾಲಕನನ್ನೆತ್ತಿ ತನ್ನ ಎದೆಗೆ ಅಪ್ಪಿಕೊಳ್ಳಬೇಕೆಂಬ ಉತ್ಕಟಾಕಾಂಕ್ಷೆಯಿಂದ ಸುವರ್ಣವರ್ಣದ ಲಲಿತ ಹಸ್ತಗಳನ್ನು ಚಾಚಿ ಶಸ್ತ್ರಾಘಾತದಿಂದ ವಿದೀರ್ಣವಾದ ಬಾಲಕನ ಮೈ ಕೈಗಳನ್ನು ನೇವರಿಸಿದ. ಮಾವಿನಮರದ ಕೊಂಬೆಯೊಂದರಲ್ಲಿ ನೆಲೆಗೊಂಡ ಕೋಗಿಲೆ ದನಿ ಎತ್ತಿ ಕುಹೂ ಕುಹೂ ಎಂದು ವೀರಗಾಥೆಯನ್ನು ಹಾಡಿತು. ಬೀಸಿ ಬಂದ ತಂಗಾಳಿ ಕ್ಷಣಕಾಲ ಹೆಜ್ಜೆ ಮುರಿದು ನಿಂತು, ಕೋಗಿಲೆ ಮಂದಸ್ವರದಲ್ಲಿ ಹಾಡುತ್ತಿದ್ದ ಶೋಕಗೀತೆಯನ್ನು ಆಲಿಸಿ, "ಅದನ್ನು ಮರಗಿಡಗಳಿಗೆ, ಮೃಗಪಕ್ಷಿಗಳಿಗೆ ಹೇಳುವೆನು. ಭೀತಿಯಿಂದ ಮಾನವನು, ಹೇಳಲು ಹಿಂಜರಿದ ಸಂಗತಿಯನ್ನು ನಾನು ಲೋಕಕ್ಕೆ ಸಾರುವೆನು" ಎಂದುಕೊಳ್ಳುತ್ತ ಮುಂದೆ ಸಾಗಿತು. ಅದು ತನಗೆ ಇದಿರಾದ ಮರಗಿಡಗಳನ್ನು ಹಿಡಿದು ಮೆಲ್ಲನೆ ಅಲುಗಿಸಿ, "ಬಾಲಕನ ವೀರಮರಣವನ್ನು ಕಂಡು ನೀವೇಕೆ ಕಣ್ಣೀರು ಕರೆಯುದಿರುವಿರಿ?" ಎಂದು ಆಕ್ಷೇಪಿಸಿತು.

"ಯಾರು ಈ ಬಾಲಕ? ಅವನ ಕಲಿತನದ ಕತೆಯೇನು?" ಎಂದು ಪ್ರಶ್ನಿಸಿತು, ಮಾವಿನ ಮರ.

"ಕಲಿತನದ ಬೆಳೆ ತೆಗೆಯಲೆಂದು ಮೈಯ ನೆತ್ತರನ್ನು ಬಸಿದು ನೆಲಕ್ಕೆ ಸೇಚಿಸಿದ ಅದಟನೀತ" ಎಂದಿತು ಮೆಲುಗಾಳಿ.

"ಗುಂಡುಗಳ ಹೊಗೆಯಿಂದ ಕಂದಿ ಹೋಗಿದ್ದೇನೆ. ಬಾಂಬುಗಳ ಗರ್ಜನೆ ಕೇಳಿ ಮುರುಟಿ ಹೋಗಿದ್ದೇನೆ" ಮಾವಿನ ಮರವನ್ನು ಅಪ್ಪಿ ಹಿಡಿದಿದ್ದ ಮಲ್ಲಿಗೆ ಬಳ್ಳಿ ಬಾಗುತ್ತಾ ದನಿ ಎತ್ತಿತು. 'ಆ ಶೌರ್ಯಸಂಜೀವನದ ಪಾನದಿಂದ ನಾನು ಭೀತಿಮುಕ್ತಳಾಗಿ ಕೊನರಿ ಹೊಸ ದಾಂಗುಡಿಗಳನ್ನು ಬಿಟ್ಟೇನು. ಮೈಯ ಕಂದನ್ನು ಕಳೆದು ಹೊಸ ಮೊಗ್ಗುಮಲರುಗಳನ್ನು ತಾಳಿಯೇನು".

"ಕಿವಿಗೊಟ್ಟು ಕೇಳಿರಿ. ನಾನು ಸತ್ಯಕತೆಯನ್ನು ಹೇಳುತ್ತಿದ್ದೇನೆ" ಎಂದಿತು ಮಂದಾನಿಲ.

"ನಿಸರ್ಗಶ್ರೀಯ ತೂಗುದೊಟ್ಟಿಲು ಬಂಗ್ಲಾದೇಶ ನದಿ, ಕಾಲುವೆಗಳು ಭೂರಮೆಯ ಮೈಯನ್ನು ತೊಳೆಯುತ್ತಿವೆ. ಒಲಿದು ವರದ ಹಸ್ತವನ್ನು ಎತ್ತಿನಿಂತ ಭೂದೇವಿ ಮಾನವನಿಗೆ ಸಿರಿಸಂಪದಗಳನ್ನು ಕರುಣಿಸಿದ್ದಾಳೆ. ಆಕೆ ನೀಡಿದ ವರಗಳನ್ನು ಅನುಭವಿಸುವ ಸೌಭಾಗ್ಯವಿಲ್ಲ ಆಕೆಯ ಪುತ್ರರಿಗೆ. ನೆಲದವ್ವನ ಮಕ್ಕಳು ಪಶ್ಚಿಮದ ಒಡೆಯರ ಕಣಜಗಳನ್ನು ತುಂಬುವ ಜೀತದಾಳುಗಳಾಗಿದ್ದಾರೆ. ಅವರ ಮೈಯ ನೆತ್ತರೆಲ್ಲಾ ಬೆವರಾಗಿ ಸೋರಿತು. ಆದರೆ ಅವರ ಒಡಲನ್ನು ತುಂಬಲು ಕೂಳಿಲ್ಲ. ಮೈಯನ್ನು ಮುಚ್ಚಲು ಅರಿವೆಯಿಲ್ಲ: ಅವರು ತಮ್ಮ ಮನೆಯಲ್ಲಿಯೇ ಊಳಿಗದವರಾಗಿದ್ದಾರೆ, ಈ ಬಗೆಯ ದುಡಿತ, ನವೆತಗಳಲ್ಲಿ ಸಂದುವು ಇಪ್ಪತ್ತು ವರ್ಷಗಳು.

ಬಂಗ್ಲಾಜನರ ಎದೆಯೊಳಗಿನ ಆಶೆ ಆಕಾಂಕ್ಷೆಗಳು ಮತ್ತು ಬೇಕು ಬಯಕೆಗಳು ಸಾಕಾರ ರೂಪಪಡೆದಂತೆ ಜನತೆಯ ಮಧ್ಯದಿಂದ ಹಿರಿಯ ವ್ಯಕ್ತಿಯೊಬ್ಬ ಎದ್ದು ಬಂದ. ಆತನೇ ವಂಗಬಂಧು. ಆತ ಮಂಕು ಕವಿದ ಬುದ್ಧಿಯ ಮುಂದೆ ಉರಿವ ಪಂಜನ್ನು ಎತ್ತಿ ಹಿಡಿದ. "ನಮ್ಮ ಕಷ್ಟ, ಸಂಕಟ, ನೋವು, ನರಳಿಕೆಗಳಿಗೆ ನಾವೇ ಕಾರಣರು. ಬಾಗಿದ ಬೆನ್ನನ್ನು ನೇರಾಗಿರಿಸಿ ಹೆಗಲ ಮೇಲಿನ ದೆವ್ವವನ್ನು ಕಳಚಿ ಬಿಸಾಡಿರಿ. ಧೈರ್ಯದಿಂದ ತಲೆ ಎತ್ತಿ ಒಂದಾಗಿ ನಿಲ್ಲಿರಿ" ಎಂದಾತ ಹೇಳಿದ,

ಆತನ ನುಡಿ ಬಿದ್ದಿದ್ದ ಜನತೆಯಲ್ಲಿ ನವಚೇತನವನ್ನು ತುಂಬುವ ಅಮೃತವರ್ಷವಾಯಿತು. ಸೊರಗಿದ್ದ ತೋಳುಗಳಿಗೆ ಭೀಮಬಲ ಬಂತು. ಅವರು ಎದ್ದು ನಿಂತು ಪಶ್ಚಿಮದ ಪಾಳೆಯಗಾರರಿಗೆ ಹೇಳಿದರು: "ನಿಮಗೋಸುಗ ರಕ್ತಬೆವರುಗಳನ್ನು ಹರಿಸುವ ಜೀತದ ಈ ಬಾಳು ಸಾಕು, ನಮಗಿನ್ನು ಬೇಕು ಸಮ ಪಾಲು. ಆಳಾಗಿ ದುಡಿಯಲೊಲ್ಲೆವು. ಸೋದರರಾಗಿ ಬಾಳಬಯಸುವೆವು"

ಪ್ರತಿರೋಧವಾಣಿಯನ್ನು ಕೇಳಿ ಪಶ್ಚಿಮದ ಪಾಳೇಗಾರರಿಗೆ ಸೊರಗಿದ ಈ ಮೈಗಳಿಗೆ ಧೈರ್ಯವೆಲ್ಲಿ ಬಂತೆಂದು ಸೋಜಿಗವಾಯಿತು. ಅವರು ಗುಡುಗಿದರು: "ನೀವು ಮಾಡುತ್ತಿರುವುದು ರಾಷ್ಟ್ರದ್ರೋಹ. ರಾಷ್ಟ್ರದ ಐಕ್ಯತೆ ಉಳಿಸಲು ನೀವು ಜೀತದಾಳುಗಳಾಗಿಯೇ ಉಳಿಯಬೇಕು, ದುಡಿಯಬೇಕು".

"ಒಲ್ಲೆವು! ಜೀತದಾಳುಗಳ ಬಾಳು ನಮಗಿನ್ನು ಬೇಡ" ಬಂಗ್ಲಾಜನ ಗರ್ಜಿಸಿದರು: "ನಮ್ಮ ಕೊರಳ ಮೇಲಿನ ನೊಗವನ್ನು ನೀವಾಗಿಯೇ ತೆಗೆಯುವುದು ಲೇಸು. ಇಲ್ಲದಿದ್ದರೆ ಅದನ್ನು ಕಳಚಿ ನಿಮ್ಮ ಮೊಗದ ಮೇಲೆ ಒಗೆಯುವೆವು",

ಅಳಾದವನೂ ಎದುರು ಮಾತನಾಡುವುದು ಹೇವರೇನು? ಪಶ್ಚಿಮದ ಪಾಳೇಗಾರರ ಒಡಿಯ ಯಾಹ್ಯಾಖಾನ ಕಿಡಿಕಿಡಿಯಾದ. ಆತ, "ಈ ಜನ ಮರೆತು ನಮಗೆ ಇದಿರು ನಿಲ್ಲುವುದೆಂದರೇನು? ಇದೆಲ್ಲ ಆ ವಂಗಬಂಧುವಿನ ಕಿತಾಪತಿ. ಅವನು ಈ ಜನರನ್ನು ನಮ್ಮ ಮೇಲೆ ಎತ್ತಿಕಟ್ಟಿದ್ದಾನೆ. ಇವರನ್ನು ತುಳಿದು ಬುದ್ಧಿ ಕಲಿಸದಿದ್ದರಾಗದು" ಎಂದು ಗುಡುಗುಡಿಸಿ ಸಿಡಿದೆದ್ದ.

"ಆ ಕತೆಯನ್ನು ನಾವು ಬಲ್ಲೆವು." ಗಾಳಿ ಹೇಳಿದ ವೃತ್ತಾಂತವನ್ನು ಆಲಿಸಿದ ಅಡಕೆಮರ ತಲೆದೂಗುತ್ತ ಹೇಳಿತು; "ಆತ ಮೃತ್ಯುದೇವತೆಯನ್ನು ಬಂಗ್ಲಾ ಜನರ ಮೇಲೆ ಹರಿಯಬಿಟ್ಟುದನ್ನು ಕಣ್ಣಾರೆ ಕಂಡಿದ್ದೇನೆ. ಊರು ಮಸಣವಾಯಿತು. ಕಾಲುವೆಗಳೆಲ್ಲ ರಕ್ತದ ತೊರೆಗಳಾದುವು. ಅಗೊ, ಅಲ್ಲಿ ಮುರಿದು ಬಿದ್ದ ನನ್ನಿಬ್ಬರು ಸೋದರರು ನಿನಗೆ ಕಾಣಿಸುವುದಿಲ್ಲವೆ? ಅವರು ವಿಮಾನದಲ್ಲಿ ಬಂದು ಬಾಂಬುಗಳನ್ನು ಒಗೆದರು. ಆ ಬಾಂಬುಗಳು ಸಿಡಿದಾಗ ಅದೆಂತಹ ಭಯಂಕರ ಧ್ವನಿ! ಆ ನನ್ನ ಸೋದರರು ಬಾಂಬೊಂದರ ಆಘಾತಕ್ಕೆ ಸಿಕ್ಕಿ ಮುರಿದುಬಿದ್ದರು. ಇಲ್ಲಿ ನೋಡು, ನನ್ನ ಸೋಗೆಗಳೆರಡು ಬೆಂಕಿಯ ಉರಿಗೆ ಸಿಲುಕಿ ಸೀದುಹೋಗಿವೆ. ಆದರೆ ಅದಕ್ಕೂ ನೀನು ಹೇಳುವ ಕತೆಗೂ ಏನು ಸಂಬಂಧ?"

"ಅದೇ ಈ ಮುಟ್ಟ ರುದ್ರನಾಟಕಕ್ಕೆ ನಾಂದಿ!" ಗಾಳಿ ಹೇಳಿತು: "ನೀನು ದಂಡಾಳುಗಳನ್ನು ನೋಡಿರುವೆ ತಾನೆ?"

"ನೋಡದುಂಟೆ?" ಮೌನವಾಗಿ ಕೇಳುತಿದ್ದ ತೆಂಗಿನಮರ ತಲೆಯಾಡಿಸಿತು; "ಈ ದಿನಗಳಲ್ಲಿ ಅವರಲ್ಲದೆ ಬೇರೆ ಯಾರೂ ನನಗೆ ಕಾಣಿಸುವುದಿಲ್ಲ. ಕುರುವಾಯಿ ಹುಳುವೊಂದು ನನ್ನ ಮೈಯನ್ನು ಕೊರೆದು ಒಳಹೊಕ್ಕು ಚಿತ್ರಹಿಂಸೆಯನ್ನು ನೀಡುತ್ತಲಿದೆ. ಅದನ್ನು ತೆಗೆದು ನನ್ನ ಸಂಕಟವನ್ನು ನಿವಾರಿಸುವ ನನ್ನ ಪೋಷಕ ಯಾವಾಗ ಬಂದಾನೆಂದು ಇದಿರು ನೋಡುತ್ತಿದ್ದೇನೆ."

"ಅವನು ಬರುವುದೆಲ್ಲಿ?" ಮಾವಿನಮರ ಸುಯ್ಗುಟ್ಟಿತು;

ಮೊನ್ನೆ ಸಂಜೆ ನೀನು ನಿದ್ರೆಮಾಡುತಿದ್ದೆ. ಹದಿನೈದು ಇಪ್ಪತ್ತು ದಿನಗಳಿಂದ ನೀರಿಲ್ಲದೆ ಕಂಗು ಗಿಡಗಳು ಬಡವಾಗುವುದನ್ನು ಕಂಡು ಆತನಿಗೆ ಮರುಕ ಹುಟ್ಟಿತು. ಹಗಲು ಹೊತ್ತು ದಂಡಾಳುಗಳ ಕಾಟ. ಆದುದರಿಂದ ಆತ ಮನೆಯಿಂದ ಹೊರಗೆ ಕಾಲಿಕ್ಕುತ್ತಿರಲಿಲ್ಲ. ಆದರೂ ಗಿಡಗಳು ನೀರಿಲ್ಲದೆ ಬಾಡುವುದನ್ನು ಕಂಡು ಆತನಿಗೆ ಸಹಿಸಲಾಗದ ಪರಿತಾಪ. ಮೊನ್ನೆ ಇರುಳು ಹೊತ್ತು 'ಗಿಡಗಳಿಗೆ ನೀರುಣಿಸುವೆನು. ದಂಡಾಳುಗಳು ಕಾಣಲಾರರು' ಎಂದು ಧೈರ್ಯ ತಂದುಕೊಂಡು ಕೈಯಲ್ಲಿ ಬಿಂದಿಗೆ ಹಿಡಿದು ಬಂದ. ಅವನು ಬಿಂದಿಗೆಯನ್ನು ಕೊಳದಲ್ಲಿ ಅದ್ದುತಿದ್ದಾಗ ಆದ ಗುಳು ಗುಳು ಸದ್ದು ಬೀದಿಯಲ್ಲಿ ಗಸ್ತು ತಿರುಗುತಿದ್ದ ದಂಡಾಳುಗಳಿಗೆ ಕೇಳಿಸಿತು. ಅವರು ಅವನಿದ್ದೆಡೆಗೆ ಬಂದರು. ಪಾಪ, ನಮ್ಮ ಯಜಮಾನ, ನನ್ನ ಕಾಂಡದ ಮರೆಯಲ್ಲಿ ಹುದುಗಿ ಜೀವ ಉಳಿಸಿಕೊಳ್ಳಲು ಪ್ರಯತ್ನಿಸಿದ. ಆದರೆ ಬೆನ್ನಟ್ಟಿ ಬಂದ ಸೈನಿಕರಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಅವರು ಅವನಿದ್ದೆಡೆಗೆ ಬಂದು ಹಿಡಿದರು. "ನೀನು ಮುಕ್ತಿ ಫೌಜಿನ ಬೇಹುಗಾರ. ನಮ್ಮ ಗುಟ್ಟನ್ನು ತಿಳಿಯಲು ಬಂದಿದ್ದೀಯೆ" ಎಂದು ಅವನ ತೋಳು ಹಿಡಿದು ಗದರಿಸಿದರು. ನಮ್ಮ ಯಜಮಾನ, "ಅಲ್ಲ, ಕಂಗು ಗಿಡಗಳಿಗೆ ನೀರುಣಿಸಲು ಬಂದಿದ್ದೇನೆ. ನಾನು ಹಗೆಯಲ್ಲ" ಎಂದು ಹೇಳಿದ. ಆದರೆ ಅವರು ಆತನ ಮಾತನ್ನು ನಂಬಲಿಲ್ಲ. "ನೀನು ಸುಳ್ಳು ಹೇಳುತ್ತೀಯೆ. ನೀನೊಬ್ಬ ಬೇಹುಗಾರ. ನಿಜ ಹೇಳು" ಎಂದು ಬಂದೂಕದ ತುದಿಯಲ್ಲಿದ್ದ ಬೈನಟ್ಟಿನಿಂದ ಅವನ ಪೃಷ್ಠವನ್ನು ತಿವಿದರು. ಆತ ವೇದನೆಯನ್ನು ತಾಳಲಾಗದೆ, "ನಿಜ ಹೇಳುತಿದ್ದೇನೆ" ಎಂದು ಅರಚುತ್ತಾ ಅವರ ಪಾದಗಳ ಮೇಲೆ ಹೊರಳಾಡಿದರೂ ಬಿಡಲಿಲ್ಲ. ಅವರು ಆತನ ಕಣ್ಣು, ಮೂಗು ಮತ್ತು ಬಾಯಿಗಳನ್ನು ಬೈನೆಟ್ಟುಗಳಿಂದ ಇರಿದು, ಕೊನೆಗೆ ಗುಂಡಿಕ್ಕಿ ಕೊಂದರು. ಅದನ್ನು ನೆನೆದಾಗ ಈಗಲೂ ನನಗೆ ನಡುಕ ಉಂಟಾಗುತ್ತೆ."

"ಅಯ್ಯೋ, ತಮಗೆ ನೀರುಣಿಸಿ ಕಾಪಾಡುವ ತಂದೆ ಇಲ್ಲವಾದನೆ?" ಕಂಗುಮರ ಕಂಬನಿ ಮಿಡಿಯಿತು.

"ನಾಲ್ಕು ದಿನಗಳ ಹಿಂದೆ ನಡೆದ ಆ ಘಟನೆ ಸ್ಮರಿಸಿಕೊಂಡರೆ ನನ್ನ ಕರುಳು ಕಿತ್ತು ಬರುವಂತಾಗುತ್ತೆ." ಕಂಗುಮರವನ್ನು ಹಿಡಿದಪ್ಪಿಕೊಂಡಿದ್ದ ಸೊರಗಿದ ಎಲೆಬಳ್ಳಿ ದನಿ ಎತ್ತಿತು.

"ಏನದು?" ಉತ್ಸುಕತೆಯಿಂದ ಪ್ರಶ್ನಿಸಿತು, ಮೆಲುಗಾಳಿ.

"ಅದನ್ನು ಹೇಳಲು ನನಗೆ ನಾಚಿಕೆಯಾಗುತ್ತೆ". ಎಲೆ ಬಳ್ಳಿ ಸಂಕೋಚಗೊಂಡು ಮೈಕುಗ್ಗಿಸಿ ಹೇಳಿತು. "ನಾನು ಸಂಜೆವೇಳೆ, ಕಂಗನ್ನು ಬಿಗಿದಪ್ಪಿ ತೂಕಡಿಸುತಿದ್ದೆ. ಮಧ್ಯಾಹ್ನದ ಬಿಸಲಿನ ಝಳ ಪ್ರಖರವಾಗಿದ್ದುದರಿಂದ ನನಗೆ ಜೊಂಪು ಹತ್ತಿತ್ತು. ಒಮ್ಮಿಂದೊಮ್ಮೆ ಸಿಡಿದೆದ್ದ ಆಕ್ರಂದನ ನನ್ನನ್ನು ಬಡಿದೆಬ್ಬಿಸಿತು. ನಾನು ಮೈ ಮುರಿದು ಎಚ್ಚತ್ತು ನೋಡಿದೆ. ಆ ಬಿದಿರಿನ ಮೆಳೆಯ ಅಡಿಯಲ್ಲಿ ನಾನು ಕಂಡ ನೋಟ ನನ್ನ ಮೈಯನ್ನು ನಡುಗಿಸಿತು."

"ನನಗೂ ನೆನಪಾಯಿತು." ಮಾವಿನಮರ ನಿಡುಸುಯ್ಲೊಂದನ್ನು ಹೊರಚೆಲ್ಲಿ ನುಡಿಯಿತು. "ಈಗಲೂ ನಾನು ತೂಕಡಿಸುವಾಗ ಆ ದುರಂತದ ಕನಸನ್ನು ಕಂಡು ಬೆಚ್ಚಿಬಿದ್ದು ಎಚ್ಚರಗೊಳ್ಳುತ್ತೇನೆ. ಕಳೆದ ಮೂರು ನಾಲ್ಕು ದಿನದಿಂದ ನನಗೆ ಸರಿಯಾದ ನಿದ್ದೆಯೇ ಬರುತ್ತ ಇಲ್ಲ."

"ಶುದ್ಧ ರಾಕ್ಷಸರು!" ಎಲೆ ಬಳ್ಳಿ ಉಸುರಿತು. "ಅನುಕಂಪ ದಯೆ" ಎಂಬುದು ಅವರಿಗೆ ಇಲ್ಲವೇ ಇಲ್ಲ. ಎರಡುದಿನಗಳ ಹಿಂದೆ ಹೆಣ್ಣುಮಗಳೊಬ್ಬಳು ಕೊಳೆವಸ್ತ್ರಗಳನ್ನು ತೊಳೆದು, ಮಿಂದು ಮಡಿಯಾಗಲು ಬಂದಳು. ಅಗೋ ಅಲ್ಲೊಂದು ಕೊಳ ಕಾಣಿಸುತ್ತಿದೆಯಲ್ಲ; ಅಲ್ಲಿಗೆ ಬಂದಳು. ಹದಿನೆಂಟು ಇಪ್ಪತ್ತು ವರ್ಷಗಳ ಜವ್ವನಗಾರ್ತಿ ಅವಳು. ಚಲುವೆಯೂ ಹೌದು. ನಾನು ಕಂಗುಮರಗಳ ಸಂದಿನಿಂದ ಇಣುಕಿನೋಡಿದೆ. ಅವಳು ಮೊಣಕಾಲು ಆಳದ ನೀರಿಗಿಳಿದು ಒಂದು ಕಾಲನ್ನೆತ್ತಿ ಮೆಟ್ಟಿಲ ಮೇಲಿಟ್ಟು ವಸ್ತ್ರಗಳನ್ನು ನೀರಿನಲ್ಲಿ ಅದ್ದಿ ಒಗೆಯುತಿದ್ದಳು. ಅವಳು ಅರಿವೆಗಳನ್ನು ತೊಳೆದು ಮುಗಿಸಿದ ಮೇಲೆ, ಕೊಳಕ್ಕಿಳಿದು ಒಂದು ಸುತ್ತು ಈಜಿ, ದಂಡೆಯ ಬಳಿಗೆ ಬಂದು ಸೊಂಟ ಆಳದ ನೀರಿನಲ್ಲಿ ನಿಂತು, ಸೀಗೆಪುಡಿಯಿಂದ ಮೈಕೈಗಳನ್ನು ಉಜ್ಜಿ ಕೊಳೆ ತೆಗೆಯುತ್ತಿದ್ದಳು. ಅವಳುಟ್ಟ ಸೀರೆ ತೊಯ್ದು ಮೈಗಂಟಿಕೊಂಡು ಅಂಗಾಂಗಗಳು ಸ್ಫುಟವಾಗಿ ಕಾಣಿಸುತ್ತಿದ್ದುವು. ಆಕೆಯ ಉಬ್ಬಿದ ಎದೆ ತೀವ್ರಗತಿಯಲ್ಲಿ ಏರಿ ಇಳಿಯುತಿತ್ತು. ಸೊಂಟವನ್ನು ಸೋಂಕುತಿದ್ದ ಉದ್ದನೆಯ ಕೇಶರಾಜಿಯಿಂದ ನೀರ ಹನಿಗಳು ತೊಟ್ಟಿಕ್ಕುತಿದ್ದುವು. ಆಕೆ ಮೊಗಕ್ಕೆ ಸೀಗೆ ಪುಡಿಯನ್ನು ಉಜ್ಜಿ, ತೊಳೆಯಲೆಂದು ಬಾಗಿದಳು. ಕೊಳದ ನೀರು ಅಲುಗಾಡದೆ ಸ್ವಚ್ಛವಾಗಿತ್ತು. ಅವಳಿಗೆ ಕೊಳದಲ್ಲಿ ತನ್ನ ಪ್ರತಿಬಿಂಬ ಕಾಣಿಸಿತು. ಅವಳು

ತನ್ನ ವಿಣ್ಣೆಗೆಂಪಿನ ಮೋರೆಯನ್ನು, ಕಾಬ್ಬುಗಳ ಕೊರಳನ್ನು, ಅಗಲವಾದ ನೀಲನೇತ್ರಗಳನ್ನು ಮತ್ತು ಯೌವನದ ವಿಜಯಕಲಶಗಳನ್ನು ಎತ್ತಿ ಹಿಡಿದ ಎದೆಯನ್ನು ಕಂಡು ತನ್ನ ರೂಪಶ್ರೀಗೆ ತಾನೇ ಮನಸೋತು ನಿಟ್ಟುಸಿರತೊಡಗಿದಳು."

"ಮುಂದೇನಾಯಿತು?" ಮೆಲುಗಾಳಿಯ ದನಿಯಲ್ಲಿ ಉತ್ಸುಕತೆ ತುಂಬಿತ್ತು.

"ಕವಿಗಳು ಮಂಗಳ ಬೆಳೆಯ ಮೇಲೆ ಇಂಗಳದ ಮಳೆ ಸುರಿದಂತಾಯಿತು ಎಂದು ಹೇಳುತ್ತಾರಲ್ಲ, ಹಾಗಾಯಿತು." ಎಲೆ ಬಳ್ಳಿ ಮೇರುಸಿರೊಂದನ್ನು ಹೊರಚೆಲ್ಲಿ ಹೇಳಿತು; "ಅಷ್ಟರಲ್ಲಿ, ಅಗೋ, ಆ ಹೆದ್ದಾರಿಯಲ್ಲಿ ಜೀಪೊಂದು ಧಾವಿಸಿಬಂತು. ಅದರಲ್ಲಿ ನಾಲ್ವರು ದಂಡಾಳುಗಳಿದ್ದರು. ಅವರ ದೃಷ್ಟಿ ಕೊಳದಲ್ಲಿ ಮೀಯುತಿದ್ದ ತರುಣಿಯ ಕಡೆಗೆ ಹರಿದಿತು. ಅವರು ಒಡನೆ ಜೀಪು ನಿಲ್ಲಿಸಿ ಇಳಿದರು. ಅವರ ಕಣ್ಣುಗಳಿಂದ ತೃಷ್ಣೆಯ ಕಿಡಿಗಳು ಉದುರಿದವು. ಅವರು ಆಕೆಯ ಸನಿಹಕ್ಕೆ ಸರಿದು ಕೈಚಾಚಿ, 'ಇಲ್ಲಿ ಬಾ' ಎಂದು ಕರೆದರು. ಬಾರದಿದ್ದರೆ ಇರಿದುಕೊಲ್ಲುವೆವೆಂದು ಬೈನೆಟ್ಟನ್ನು ತೋರಿಸಿದರು. ಸೈನಿಕರನ್ನು ಕಂಡು ಭೀತಳಾದ ತರುಣಿ, 'ಅಯ್ಯೋ!' ಎಂದು ಚೀರಿ ಕೊಳಕ್ಕೆ ಜಿಗಿದು ಪಾರಾಗಲು ಹವಣಿಸಿದಳು. ಅನಿತರಲ್ಲಿ ಒಬ್ಬ ಸೈನಿಕ ಆಕೆಯ ಎದೆಯ ಮೇಲಿಂದ ಜಾರಿದ ಸೆರಗನ್ನು ಹಿಡಿದೆಳೆದ. ಉಳಿದ ಇರ್ವರು ರಟ್ಟೆಗಳನ್ನು ಹಿಡಿದು ಆಕೆಯನ್ನು ಕೊಳದಿಂದ ಮೇಲಕ್ಕೆತ್ತಿದರು. ನಾಲ್ಕನೆಯವನು ಕಾಲನ್ನು ಹಿಡಿದ. ನಾಲ್ವರೂ ಆಕೆಯನ್ನು ಬಿದಿರ ಮರೆಗೆ ಎಳೆದುಕೊಂಡು ಹೋದರು. ಮುಂದಿನದನ್ನು ಹೇಳಲು ನಾಚಿಕೆಯಾಗುತ್ತೆ. ಆ ನಾಲ್ವರೂ ಒಬ್ಬರ ಅನಂತರ ಇನ್ನೊಬ್ಬರಂತೆ ಆ ತರುಣಿಯ ಶೀಲವನ್ನು ಹರಣ ಮಾಡಿ ಮಹಾಕಾರ್ಯವನ್ನು ಸಾಧಿಸಿದವರಂತೆ ಕೇಕೆ ಹಾಕಿ ನಗುತ್ತ, ಜೀಪನ್ನು ಹತ್ತಿ ಹೊರಟು ಹೋದರು."

ಅಯ್ಯೋ ಪಾಪ!" "ಮೆಲ್ಲೆಲರು ಮರುಕದ ದನಿಯೆತ್ತಿತು: "ಆ ಹೆಣ್ಣಿನ ಗತಿ ಏನಾಯಿತು?"

"ನಾಲ್ವರು ಧಾಂಡಿಗರ ಹಿಂಸೆಗೆ ಮೈಯೊಪ್ಪಿಸಿದ ಹೆಣ್ಣು ಬದುಕುವುದುಂಟೆ? ಆಕೆಯ ಮೈಯಿಂದ ನೆತ್ತರು ಸೋರುತಿತ್ತು: ಯಾವ ಗೃಹಿಣಿ ತಾನೇ ಮಾನವನ್ನು ಕಳೆದುಕೊಂಡ ಮೇಲೆ ಜೀವಂತವಾಗಿ ಉಳಿಯಲು ಬಯಸುವಳು? ಅವಳು ತಾನುಟ್ಟ ಸೀರೆಯನ್ನೇ ಕೊರಳಿಗೆ ಸುತ್ತಿ ಆ ಹಲಸಿನಮರಕ್ಕೆ ನೇಣುಹಾಕಿಕೊಂಡಳು. ದಿನವೆಲ್ಲ ಹೆಣ ಕೊಂಬೆಯಲ್ಲಿ ತೂಗಾಡುತಿತ್ತು."

ಹೌದೆಂಬಂತೆ ಬಿದಿರಮೆಳೆ ಆ ದುರಂತವನ್ನು ನೆನೆದು ಸುಯ್ಯೆಂದು ನಿಟ್ಟುಸಿರನ್ನು ಚೆಲ್ಲಿತು.

"ಈ ದಿನಗಳಲ್ಲಿ ಬಂಗ್ಲಾದೇಶದ ಪ್ರತಿಯೊಂದು ಮನೆಯಲ್ಲಿಯೂ ಒಂದೊಂದು ದುರಂತ ನಡೆದೇ ಇದೆ." ಮೆಲುಗಾಳಿ ಸುಯ್ದು ಹೇಳಿತು; "ಬಂಗ್ಲಾದೇಶದ ದನಕರು ಮತ್ತು ಮರಗಿಡಗಳಿಗೆಲ್ಲ ತಣ್ಣೀರಿನ ಅಭಿಷೇಕ. ಟಿಕ್ಕಾಖಾನರ ಪಡೆಯಾಳುಗಳಿಗೆ ಮತ್ತು ರಣಹದ್ದುಗಳಿಗೆ ಮಾತ್ರ ಆನಂದ. ಪಡೆಯಾಳುಗಳು ಜನರ ಮಾನಪ್ರಾಣಗಳನ್ನು ಭಕ್ಷಿಸುತ್ತಾರೆ. ರಣಹದ್ದುಗಳು ಜೀವಕಳೆದುಕೊಂಡ ದೇಹಗಳನ್ನು ಕಿತ್ತು ತಿನ್ನುತ್ತವೆ."

"ಆ ಹುಡುಗನ ಕತೆ ಹೇಳುವೆನೆಂದೆಯಲ್ಲ?"



ಬಾಂಗ್ಲಾ ನಿರಾಶ್ರಿತೆ : "ತೆಪ್ಪಗಿರ್ರೊ "ಅವಪ್ಪಾ ಕೊಡೇ... ಕೊಡೇ" ಅಂತ ಯಾಕ ಅರಚಿಕೋತಿಯಾ! ಕೊಡೆ ಹಿಡ್ಕೊಂಡ್ ಯಾವ್ನೋ ಯಾಪ್ಯಾ ಕಡೇವ್ನ ಬರ್ತಿದಾನೆ"

ಕಂಗುಮರ ಮಂದಾನಿಲವನ್ನು ಎಚ್ಚರಿಸಿತು; "ಆ ಕತೆಯನ್ನೇ ಹೇಳು."

"ಅದು ಸಹ ಕಣ್ಣೀರಿನ ಕತೆ." ಮೆಲುಗಾಳಿ ನುಡಿಯಿತು; "ಅದರಲ್ಲಿ ಕರುಣೆ ಮಾತ್ರವಲ್ಲ ಪೌರುಷದ ಕಾವೂ ಇದೆ."

ಕಂಗುಮರ, ಅದನ್ನಪ್ಪಿಕೊಂಡ ಎಲೆಬಳ್ಳಿ, ಮಾವು, ಅದರ ಕೊಂಬೆಗಳನ್ನು ತನ್ನ ದಾಂಗುಡಿಗಳಿಂದ ಬಿಗಿಹಿಡಿದ ಮಲ್ಲಿಗೆಯ ಬಳ್ಳಿ, ಬಾಳೆಯ ಗಿಡ, ಹಲಸಿನ ಮರ, ತೆಂಗು, ದೂರದಲ್ಲಿ ನಿಂತಿದ್ದ ಬಿದಿರುಮೆಳೆ, ಹೀಗೆ ಆ ಪುಟ್ಟತೋಟದಲ್ಲಿದ್ದ ಸಸ್ಯಾವಳಿಯೆಲ್ಲ ಅಲುಗಾಡದೆ ಮಿಲುಗಾಳಿ ಹೇಳಲಿರುವ ಕತೆಯನ್ನು ಉತ್ಸುಕತೆಯಿಂದ ಆಲಿಸಿದುವು.

"ಗೋಪಾಲಗಂಜೆಂಬುದೊಂದು ಹಳ್ಳಿ." ಮಂದಾನಿಲ ಕತೆಯನ್ನು ಆರಂಭಿಸಿತು; "ಅದು ಪದ್ಮಾ ನದಿಯ ದಂಡೆಯಲ್ಲಿದೆ. ಹಿಂದೊಮ್ಮೆ ಆ ನದಿಯಲ್ಲಿ ಅಸಂಖ್ಯಾತ ದೋಣಿಗಳು, ಬೋಟುಗಳು ಓಡಾಡುತಿದ್ದುವು. ನದಿಯ ಇಕ್ಕೆಡೆಗಳಲ್ಲಿ ಹಚ್ಚನೆಯ ಹಸಿರು. ಬತ್ತದ ಮತ್ತು ಸೆಣಬಿನ ಪೈರುಗಳನ್ನು ಹೊತ್ತ ವಿಸ್ತಾರವಾದ ಬಯಲು. ಅಲ್ಲಲ್ಲಿ ಶ್ಯಾಮಲವರ್ಣ ರಂಜಿತವಾದ ವಿಪಿನರಾಜಿ ತೆಂಗು, ಕಂಗು, ಹಲಸು ಮತ್ತು ಬಾಳೆಯ ಗಿಡಗಳು. ಹಮೀದ ಚೌಧರಿ ಎಂಬಾತ ಊರಿನ ಅನುಕೂಲವಂತರಲ್ಲೊಬ್ಬ. ಅವನಿಗೆ ಸಾಕಷ್ಟು ಗದ್ದೆ ಮತ್ತು ತೋಟಗಳಿವೆ. ಅವನಿಗೆ ಮೂವರು ಮಕ್ಕಳು. ಹಿರಿಯವಳು ಆಯೇಷ, ಎರಡನೆಯವಳು ಖತೀಜ.ಕೊನೆಯವ ಮಗ ರಸೂಲ್. ಆಯೇಷಳಿಗೆ ಇಪ್ಪತ್ತು ವರ್ಷ; ಖತೀಜಳಿಗೆ ಹದಿನೆಂಟು. ರಸೂಲ್ ಹನ್ನೆರಡು ವರುಷದ ಹಾಲುಗಲ್ಲದ ಹುಡುಗ. ಚೌಧರಿ ಹಿರಿಯ ಮಗಳನ್ನು ಅಬ್ದುಲ್ ಹಕ್ ಎಂಬ ತರುಣನಿಗೆ ಇಂಜನಿಯರ ಈ ಬೇಸಿಗೆಯಲ್ಲಿ ನೀಕಾಮಾಡಿಕೊಡಲು ನಿಶ್ಚಯಿಸಿದ್ದರು. ಹುಡುಗ ರಸೂಲ್ ಹೈಸ್ಕೂಲಿನ ಮೊದಲನೆಯ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದ. ಅವರದು,

ಚಂದದ ಸಂಸಾರ. ಹಣಕಾಸುಗಳ ತಾಪತ್ರಯವಿಲ್ಲ. ಚೌಧರಿಗಳ ಮನೆಯೆಂದರೆ ಸುಖಸಂತೋಷಗಳ ಆಗರ."

ಮೆಲುಗಾಳಿ ಹೇಳುತಿದ್ದ ಕತೆಯನ್ನು ನಿಲ್ಲಿಸಿ ಸ್ಫೂರ್ತಿಯನ್ನು ಪಡೆಯಲೆಂದು ಸಂಪಿಗೆ ಮೊಗ್ಗುಗಳ ಸೌರಭವನ್ನು ಮೂಸಿತು.

"ಕತೆ ಮುಂದುವರಿಸು." ಕಂಗು ತಲೆಯನ್ನಲುಗಾಡಿಸಿ ಹೇಳಿತು.

"ಊರಿಗೆ ಬಂದ ಮಾರಿ ಮನೆಯನ್ನು ಹೊಗದಿರುವುದುಂಟೆ?" ಮಂದಾನಿಲ ಕತೆ ಮುಂದುವರಿಸಿತು: "ಬಂಗ್ಲಾದೇಶವನ್ನು ಕಾರ್ಮೋಡ ಮುಸುಕಿತು. ಅವಾಮಿ ಲೀಗಿನವರು ಪಾಕಿಸ್ತಾನವನ್ನು ಒಡೆದು, ಅನಾಯಕತ್ವ ಎಬ್ಬಿಸತೊಡಗಿದ್ದಾರೆಂದು ಅಧ್ಯಕ್ಷ ಯಾಹ್ಯಾಖಾನ ಬಂಗ್ಲಾದೇಶದಲ್ಲಿ ಲಷ್ಕರೀ ಆಡಳಿತವನ್ನು ಜಾರಿಗೆ ತಂದ. ಶಾಸನಕರ್ತ ಟಿಕ್ಕಾಖಾನ ಅವಾಮಿ ಲೀಗಿನ ಸೊಕ್ಕು ಮುರಿದು ಯಾವ ಬಗೆಯಲ್ಲಿ 'ಶಾಂತಿಸ್ಥಾಪನೆ' ಮಾಡುತ್ತಿದ್ದಾನೆಂಬುದನ್ನು ನೀವು ಕಣ್ಣಾರೆ ಕಂಡಿದ್ದೀರಿ. ಅವರ ಫೌಜು ಗೋಪಾಲಗಂಜನ್ನೂ ಹೊಕ್ಕು ಸ್ವಾಧೀನಪಡಿಸಿಕೊಂಡಿತು. ಶಾಂತಿಗೆ ಭಂಗತಂದವರ ಮನೆಗಳೆಲ್ಲ ಧಗಧಗನೆ ಉರಿದುವು. ಬೀದಿಗಳಲ್ಲಿ ಹೆಣಗಳು ಉರುಳಿದುವು. ಹದ್ದು, ಕಾಗೆ ಮತ್ತು ನರಿಗಳಿಗೆ ಭೂರಿ ಔತಣವಾಯಿತು. ದಂಡಿನ ಪೌರುಷವನ್ನು ಕಂಡು ಬೆದರಿದ ಗಲಭೆಕೋರರು ನಾಡನ್ನು ಬಿಟ್ಟೋಡಿದರು. ಟಿಕ್ಕಾಖಾನನ ಪಡೆ ಊರಿಗೆ ಶಾಂತಿಯ ಅಮೃತಧಾರೆಯನ್ನು ಮಳೆಗರೆದಿತು.

"ಚೌಧರಿ ಊರು ಬಿಡಲಿಲ್ಲ. ಅವರು ಯಾವ ಗೊಂದಲಕ್ಕೂ ಕೈ ಹಾಕಿದವರಲ್ಲ. ಕಳೆದ ಚುನಾವಣೆಯಲ್ಲಿ ಅವರು ಅವಾಮಿ ಲೀಗಿನ ಪಕ್ಷಪಾತಿಗಳಾಗಿ ನಿಂತು ಆ ಪಕ್ಷದ ಹುರಿಯಾಳುವಿನ ಗೆಲುವಿಗೆ ಕಾರಣರಾಗಿದ್ದರು. ಈಗ ಆಯೇಷಳನ್ನು ನಿಕಾಹಮಾಡಿಕೊಳ್ಳಲಿದ್ದ ಅವರ ಭಾವಿ ಅಳಿಯ ಮುಕ್ತಿಫೌಜಿಗೆ ಸೇರಿ ಹೋರಾಡುತಿದ್ದ. ಈ ಸಂಗತಿಯನ್ನು ಬೇರೆ ಯಾರು ತಿಳಿಯದಿದ್ದರೂ, ಅವಾಮಿ ಲೀಗಿನ ಪ್ರತಿಸ್ಪರ್ಧಿಯಾದ ಮುಸ್ಲಿಮ್ ಲೀಗಿನ ನೂರ್ ಅಮೀನ್ ತಿಳಿದಿದ್ದ. ಆತ ಊರಲ್ಲಿ ಲಷ್ಕರೀ ಶಾಸನಕರ್ತರಿಗೆ ಬೆಂಬಲಿಗನಾಗಿದ್ದ. ಶಾಂತಿಸ್ಥಾಪನೆಗೆಂದು ಊರಲ್ಲಿ ರಜಾಕರ ಪುಟ್ಟ ದಳವೊಂದನ್ನು ಕಟ್ಟಿದ್ದ. ದಂಡು ಊರನ್ನು ವಶಪಡಿಸಿಕೊಂಡು ತನ್ನ ಅಧೀನಕ್ಕೆ ತೆಗೆದುಕೊಂಡ ಹತ್ತೆಂಟು ದಿನಗಳಲ್ಲಿ ನೂರ್ ಅಮೀನ್, ಹಮೀದ್ ಚೌಧರಿಯ ಮನೆಗೆ ಬಂದು, "ಹಮೀದ ನೀನು ಇದಿರು ಪಕ್ಷದವನೆಂದು ನಾನು ಬಲ್ಲೆ. ಆದರೆ ಲಷ್ಕರೀ ಶಾಸನಕರ್ತರಿಗೆ ತಿಳಿಸಿ ಸೇಡು ತೀರಿಸಿಕೊಳ್ಳುವ ಹವ್ಯಾಸದ ಸಣ್ಣ ಮನಸ್ಸಿನ ಮನುಷ್ಯ ನಾನಲ್ಲ. ನಾವಿಬ್ಬರೂ ಒಬ್ಬನೇ ಆದ ಖುದಾನ ಮಕ್ಕಳು. ಒಂದೇ ನೆಲದಲ್ಲಿ ಹುಟ್ಟಿ ಬೆಳೆದವರು. ನಿನಗೆ ಕೇಡೊದಗದಂತೆ ನೋಡಿಕೊಳ್ಳಬೇಕಾದುದು ನನ್ನ ಧರ್ಮ. ಜೋಕೆ, ನೀನು ಅವಾಮಿ ಲೀಗಿನ ಸಂಪರ್ಕ ಕಡಿದುಕೊಂಡುಬಿಡು. ಅದು ನಿನಗೆ ಆಪತ್ತು ತಂದೀತು," ಎಂದು ಹಿತೋಕ್ತಿಯನ್ನಾಡಿದ.

"ನೂರ್ ಅಮೀನ್ ಮಾವ," ಚೌಧರಿ ಆತನನ್ನು ಆದರಿಸಿ ಕುಳ್ಳಿರಿಸುತ್ತ ಹೇಳಿದರು; "ನಾನು ಅಷ್ಟು ತಿಳಿಗೇಡಿಯೆ? ನನ್ನದು ಹೋರಾಡುವ ಪ್ರಾಯವೆ? ಒಂದು ಸಂಸಾರದ ಹೊರೆ ನನ್ನ ನೆತ್ತಿಯ ಮೇಲಿದೆ. ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನು ದಿಕ್ಕುಗೇಡಿಗಳನ್ನಾಗಿ ಮಾಡಲು ಯಾವ ತಂದೆ ಹೊರಟಾನು?"

"ನೀನು ವಿವೇಕಿಯೆಂಬುದನ್ನು ಬಲ್ಲೆ." ಮೆಚ್ಚಿದವನಂತೆ ತಲೆದೂಗುತ್ತ ಮಾರ್ನುಡಿದ ನೂರ್ ಅಮೀನ್; "ಮೇಜರ್ ಅಸದ್‌ಖಾನ್‌ರಿದ್ದಾರಲ್ಲ. ಗೋಪಾಲಗಂಜಿನ ತುಕ್ಕುಡಿ ಅವರ ಅಧೀನದಲ್ಲಿದೆ. ಅವರು 'ಹಮೀದ ಚೌಧರಿ ಅವಾಮಿಲೀಗಿನ ಪಕ್ಷಪಾತಿಯಲ್ಲವೆ?' ಎಂದು ನನ್ನನ್ನು ಕೇಳಿದರು."

ಈ ಸುದ್ದಿಯನ್ನು ಕೇಳಿದಾಗ ಹಮೀದ ಚೌಧರಿಯ ಎದೆ ನಡುಗಿತು. ಅವರ ಮೋರೆ ಬಿಳುಪೇರಿದುದನ್ನು ನೂರ್ ಅಮೀನ್ ಕಾಣದೆ ಇರಲಿಲ್ಲ. ಅವರು ಚೌಧರಿಯ ಮೋರೆಯನ್ನೇ ದಿಟ್ಟಿಸಿ ನೋಡಿದರು.

"ಹಮೀದ, ನಾನು ಈ ಸುದ್ದಿಯನ್ನು ಅವರ ಕಿವಿಗೆ ಹಾಕಿದೆನೆಂದು ನಿನಗೆ ಅನುಮಾನವೆ?" ನೂರ್ ಅಮೀನನ ತುಟಿಗಳ ಮೇಲೆ ನಗೆಯ ಮುಗುಳೊಂದು ಅರಳಿತು. "ಬೆನ್ನ ಹಿಂದೆ ಬಂದು ಇರಿಯುವ ಕೆಟ್ಟ ಚಾಳಿ ನನಗಿಲ್ಲ. ಹಾಗಿದ್ದರೆ ಎಚ್ಚರಿಕೆ ಕೊಡಲು ನಿನ್ನ ಮನೆಗೆ ನಾನೇಕೆ ಬರುತಿದ್ದೆ? ಲಷ್ಕರೀ ಆಡಳಿತದ ದಂಡಾಳುಗಳಷ್ಟು ಜಾಣರು ಬೇರೆ ಯಾರೂ ಇಲ್ಲ. ಅವರು ಎಲ್ಲವನ್ನೂ ಬಲ್ಲರು. ಮೇಜರ್ ಅಸದಖಾನರ ವಶದಲ್ಲಿರುವ ಕಪ್ಪುಪಟ್ಟಿಯಲ್ಲಿ ನಿನ್ನ ಹೆಸರೂ ಇದೆ. ನನ್ನ ಸಹಾಯಹಸ್ತ ಇಲ್ಲದಿದ್ದರೆ ನಿನ್ನ ಮನೆ ಇಷ್ಟರಲ್ಲಿ ಬೆಂದು ಬೂದಿಯಾಗುತ್ತಿತ್ತು. ನಾನು ಮೇಜರ್‌ಸಾಹೇಬರಿಗೆ 'ಚೌಧರಿ ಹಿಂದೇನೋ ಅವಾಮಿ ಲೀಗಿನ ಬಾಲ ಹಿಡಿದಿರಬಹುದು; ಆದರೆ ಆತ ಗಲಭೆ ಒಳಸಂಚುಗಳಿಗೆ ಕೈಹಾಕುವ ಆಸಾಮಿಯಲ್ಲ; ಅವನು ತುಂಬ ಸಭ್ಯಸ್ಥ,' ಎಂದು ಹೇಳಿದೆ."

"ಮಾವ, ನಾನು ನಿಮ್ಮನ್ನು ಏನೋ ಎಂದು ಭಾವಿಸಿದ್ದೆ." ಚೌಧರಿ ಸಮಾಧಾನದ ಉಸಿರನ್ನೆಳೆದರು. "ನನ್ನನ್ನು ದಯವಿಟ್ಟು ಕ್ಷಮಿಸಿ. ನಿಮ್ಮಿಂದ ದೊಡ್ಡ ಉಪಕಾರವಾಯಿತು."

"ಉಪಕಾರವೇನು ಬಂತು? ಒಬ್ಬ ಮುಸ್ಲಿಮ್ ಇನ್ನೊಬ್ಬನಿಗೆ ಆಪತ್ಕಾಲದಲ್ಲಿ ಸಹಾಯಮಾಡದಿದ್ದರೆ ಹೇಗಾದೀತು? ಹಮೀದ, ನಾನೊಂದು ಬುದ್ಧಿಯ ಮಾತನ್ನು ಹೇಳುತಿದ್ದೇನೆ. ಊರಿಗೆ ಬೆಂಕಿ ಬಿದ್ದಾಗ, ಅದನ್ನು ನಂದಿಸಲು ಹೊರಡುವ ಬದಲು, ತನ್ನ ಮನೆ ಸುಡದಂತೆ ನೋಡಿಕೊಳ್ಳುವುದು ಜಾಣತನ. ನೀನು ಫೌಜಿನ ಆಡಳಿತಗಾರರಿಗೆ ಅಲ್ಪ ಸ್ವಲ್ಪ ಸಹಾಯ ಮಾಡುತ್ತಿರು. ಮುಂದೆ ಅದು ಅಸಲಿಗಿಂತ ಹತ್ತುಪಾಲು ಹೆಚ್ಚು ಬಡ್ಡಿ ತಂದೀತು."

"ಆಗಲಿ ಮಾವ." ಚೌಧರಿ ಮನಸ್ಸಿನೊಳಗೇ ಚಿಂತಿಸುತ್ತ ಹೇಳಿದರು; "ನೀವು ನನ್ನ ಹಿತಚಿಂತಕರೆಂಬುದು ನಂಬುಗೆಯಾಗಿದೆ. ನಿಮ್ಮ ಸಲಹೆಯನ್ನು ನೆನಪಿನಲ್ಲಿಡುತ್ತೇನೆ."

"ತನ್ನನ್ನು ಕಂಡರೆ ಆಗದವರಿಗೂ ಲೇಸನ್ನು ಬಯಸುವ ದೊಡ್ಡ ಮನಸ್ಸಿನವರು ನೂರ್ ಅಮೀನ್" ಮೆಚ್ಚಿಕೆಯ ದನಿಯಲ್ಲಿ ಅಂದಿತು ತೆಂಗಿನ ಮರ.

"ನನಗೇಕೋ ಆತನ ಮಾತುಗಳಲ್ಲಿ ಗಸ್ನಕತಕದ ದುರ್ವಾಸನೆ ತೋರುತ್ತದೆ." ಎಂದಿತು ಮಾವಿನ ಮರಕ್ಕೆ ಹಬ್ಬಿದ ಮಲ್ಲಿಗೆ ಬಳ್ಳಿ, ತನ್ನ ದಾಂಗುಡಿಯನ್ನು ಆಡಿಸುತ್ತ ಹೇಳಿತು.

"ನೂರ್‌ಅಮೀನ್ ಚೌಧರಿಯ ಮನೆಯಲ್ಲಿ ಚಹಾ ಕುಡಿದು, ಹುಕ್ಕ ಎಳೆದು ಮರಳಿದ" ಮಂದಾನಿಲ ಕತೆಯನ್ನು ಮುಂದುವರಿಸಿತು. ಲಷ್ಕರಿ ಆಡಳಿತ ಪ್ರಾರಂಭವಾದಂದಿನಿಂದ ಅವರ ಎದೆ ಭೀತಿಯ ಮಡುವಾಗಿತ್ತು. ಆಡಳಿತಗಾರರಿಗೆ ಆಗದವರು ತಾನು ಅವಾಮಿ ಲೀಗಿನ ಪಕ್ಷಪಾತಿಯೆಂದು ತಿಳಿಸಿದರೆ ತನಗೆ ವಿಪತ್ತಿನ ಸಿಡಿಲು ಬಡಿಯುವುದು ಖಂಡಿತ ಎಂದು ಅವರು ನಂಬಿದ್ದರು. ಭೂಮಿ ಕಾಣಿಕೆಗಳ ಮೋಹ ಅವರನ್ನು ಹುಟ್ಟಿದೂರಿಗೆ ಕಟ್ಟಿ ಹಾಕಿತ್ತು. ನೂರ್ ಅಮೀನ್ ಲಷ್ಕರೀ ಆಡಳಿತದಲ್ಲಿ ಪ್ರಭಾವಶಾಲಿಯಾದ ವ್ಯಕ್ತಿ. ಲೆಫ್ಟಿನೆಂಟ್, ಕ್ಯಾಪ್ಟನ್ ಮತ್ತು ಮೇಜರರ ಮುಂದೆ ಅವನ ಮಾತು ನಡೆಯುತ್ತದೆ. ಅಂತಹನು ತನ್ನ ಸಹಾಯಕ್ಕೆ ನಿಲ್ಲುವೆನೆಂದು ಭರವಸೆ ಕೊಟ್ಟುದರಿಂದ ಅವರ ಮನಸ್ಸು ಸ್ವಲ್ಪ ಹಗುರವಾಯಿತು.

ನೂರ್‌ಅಮೀನ್ ಹಮೀದ ಚೌಧರಿಯ ಮನೆಗೆ ಬಂದು ಹೋಗುವುದು ಹೆಚ್ಚಿತು. ಚೌಧರಿ ಆತನನ್ನು ತನ್ನ ಹಿತಚಿಂತಕನೆಂದೇ ನಂಬಿದರು. ಆದರೆ ಅವರ ಮಗ ಹನ್ನೆರಡು ವರ್ಷದ ರಸ್ಸೂಲ್ ಅಕ್ಕ ಆಯೇಷಳ ಸಂಗಡ "ದೀದಿ, ಅಮೀನ್ ಸಾಹೇಬರು ದಿನ ನಿತ್ಯ ಏಕೆ ಬರುತಿದ್ದಾರೆ? ಅವರು ಹೋಗುತ್ತಿರುವ ಮನೆಗೆ ಕೇಡು ತಪ್ಪಿದ್ದಲ್ಲ," ಎಂದು ಹೇಳಿದ.

"ತಮ್ಮ, ಈಗ ಗಂಡಾಂತರದ ಕಾಲ." ಆಯೇಷ ಸೋದರನ ನೆತ್ತಿಯನ್ನು ಸವರುತ್ತ ಹೇಳಿದಳು:

## ಬಣ್ಣದ ಲುಂಗಿ

ಹುಡುಗಿಯರು ಸುತ್ತಿದರು ಬಣ್ಣದಾ ಲುಂಗಿ
ನೇಲೆ ಹಾಕಿದರು ತರ ತರಹದ ಅಂಗಿ
ಬಾಬು ಕಟ್ಟನ ತಲೆಗೆ ರಿಬ್ಬನ್ನು ಸುತ್ತಿ
ಕೆಣಕಿದರೆ ಸಾಕು ಹಿಡಿಯುವರು ಕುಸ್ತಿ.

ಎಂ. ಗೋವಿಂದ.

"ಅವರ ಸಹಾಯವಿಲ್ಲದೆ ನಾವು ಊರಲ್ಲಿ ಬದುಕುವುದು ಕಷ್ಟ."

"ದೀದಿ, ಅವರ ಬೆಕ್ಕಿನ ಕಣ್ಣುಗಳನ್ನೊಮ್ಮೆ ನೋಡು. ಅವರ ತುಟಿಗಳಲ್ಲಿ ಆಗಾಗ ಮಿಂಚುತ್ತಿರುವ ಕೊಂಕು ನಗುವನ್ನು ಕಂಡಿದ್ದೀಯಾ?" ರಸ್ಸೂಲ್ ಹೇಳಿದ; "ನನಗೇಕೋ ಅವರನ್ನು ಕಂಡರೆ ಆಗುವುದಿಲ್ಲ."

"ಏಕೆ ರಸ್ಸೂಲ್?" ಸೋದರಿಯ ದನಿಯಲ್ಲಿ ಕಾರಣವನ್ನು ತಿಳಿಯುವ ಉತ್ಸುಕತೆ ತುಂಬಿತ್ತು.

"ಅವರು ಲಷ್ಕರೀ ಆಡಳಿತಗಾರರಿಗೆ ಚಾಡಿ ಹೇಳಿ ನೂರಾರು ಜನರನ್ನು ಕೊಲ್ಲಿಸಿದರಂತೆ!"

ತಮ್ಮನ ನುಡಿಯನ್ನು ಕೇಳಿ ಆಯೇಷ ಬೆಚ್ಚಿಬಿದ್ದಳು. ಅವಳು ಕಂಪಿತ ಸ್ವರದಲ್ಲಿ, "ಈ ಸಂಗತಿಯನ್ನು ಯಾರು ಹೇಳಿದರು?" ಎಂದು ಪ್ರಶ್ನಿಸಿದಳು.

ರಸೂಲನಿಗೆ ತಾನೆಸಗಿದ ಪ್ರಮಾದದ ಅರಿವಾಯಿತು. ಅವನು ಹಲ್ಲುಗಳಿಂದ ಕೆಳತುಟಿಯನ್ನು ಕಚ್ಚಿ ಹೇಳಿದ: "ನನ್ನ ತರಗತಿಯಲ್ಲಿ ಓದುತಿದ್ದ ರಶೀದ ಇದ್ದಾನಲ್ಲ; ಆತ ಹೇಳಿದ".

"ರಸೂಲ್ ಅದೆಲ್ಲ ಸುಳ್ಳು ಸುದ್ದಿ. ನೀನು ದೊಡ್ಡವರ ಬಗ್ಗೆ ಹಾಗೆಲ್ಲ ಮಾತಾಡಬಾರದು."

ಎರಡು ದಿನಗಳು ಉರುಳಿದುವು. ಮೂರನೆಯ ದಿನ ಎಂದಿನಂತೆ ಚೌಧರಿಯ ಮನೆಗೆ ನೂರ್ ಅಮೀನನ ಸವಾರಿ ಬಂತು. ರೂಢಿಯಂತೆ ಚಹಾಪಾನ ಮುಗಿಸಿ, ಬೀಡವನ್ನು ಜಗಿದು, ಆಳು ಸರಿಪಡಿಸಿಕೊಟ್ಟ ಹುಕ್ಕವನ್ನು ಸೇದುತ್ತ ನೂರ್ ಅಮೀನ್ ಉಸುರಿದ: "ಒಂದು ಮಹತ್ವದ ಸುದ್ದಿಯನ್ನು ತಿಳಿಸಲು ನಾನು ಓಡಿ ಬಂದೆ."

"ಏನು ಮಾವ ಅದು?" ಕುತೂಹಲ ಬೆರೆತ ದನಿಯಲ್ಲಿ ಕೇಳಿದರು ಚೌಧರಿ.

"ಮತ್ತೇನೂ ಅಲ್ಲ." ನೂರ್ ಅಮೀನ್ ಬಾಯಲ್ಲಿ ತುಂಬಿದ ಹುಕ್ಕದ ಹೊಗೆಯನ್ನು ಬಿಡುತ್ತ ಹೇಳಿದ; "ನೀನು ಮೇಜರ್ ಅಸದ್‌ಖಾನರನ್ನು ಮನೆಗೆ ಮೇಜವಾನಿಗೆ ಆಹ್ವಾನಿಸುವುದು ಒಳ್ಳೆಯದು"

"ಬಿರ್ದೂಟಕ್ಕೆ!" ಚೌಧರಿಯ ಕಣ್ಣುಗಳಿಂದ ಭಯ, ವಿಸ್ಮಯಗಳ ಕಿಡಿಗಳು ಉದುರಿದುವು.

"ನಿನಗೇಕೆ ಇಷ್ಟೊಂದು ಗಾಬರಿ?" ನೂರ್ ಅಮೀನನ ತುಟಿಗಳಲ್ಲಿ ವಕ್ರಹಾಸ್ಯವೊಂದು ಮಿನುಗಿತು.

"ಔತಣಕ್ಕಾಗಿ ಹತ್ತೋ ಐವತ್ತೋ ರೂಪಾಯಿಗಳನ್ನು ವೆಚ್ಚಮಾಡಲು ನಾನು ಹಿಂಜರಿಯುವುದಿಲ್ಲ. ಆದರೆ ಜನ ಅವರ ಬಗ್ಗೆ ಏನೇನೋ ಆಡಿಕೊಳ್ಳುತಿದ್ದಾರೆ. ಹೆಂಗಸರು ಮಕ್ಕಳುಳ್ಳ ಮನೆಗೆ ಅವರನ್ನು ಆಮಂತ್ರಿಸುವುದಾದರೂ ಹೇಗೆ?"

"ಆದರೆ ಅದು ಆಗದವರು ಆಡುವ ಮಾತು." ನೂರ್ ಅಮೀನ್ ಹುಕ್ಕವನ್ನು ಕೈಯಲ್ಲಿ ಹಿಡಿದು ಹೇಳಿದ; " ಆ ಅಂತೆ-ಕಂತೆಗಳನ್ನೆಲ್ಲ ನೀನು ನಂಬಬೇಡ. ಮೇಜರ್‌ಸಾಹೇಬರು ಹಗೆಗಳ ಪಾಲಿಗೆ ಸೈತಾನನೇ ಸರಿ. ಆದರೆ ಅವರು ಬಹಳ ಇಜ್ಜತ್ತಿನ ಮನುಷ್ಯ. ನಂಬಿದವರಿಗೆ ತಮ್ಮ ಪ್ರಾಣವನ್ನೇ ಕೊಟ್ಟಾರು. ಹಮೀದ, ಅವರ ಪರಿಚಯವನ್ನು ಬೆಳೆಸಿಕೊಳ್ಳುವುದರಿಂದ ನಿನಗೇ ಲಾಭ."

"ಲಾಭವೇ?" ವಿಸ್ಮಯ ಸ್ವರವೆತ್ತಿದರು ಚೌಧರಿ.

"ಹೆದರಿ ನಾಡುಬಿಟ್ಟು ಓಡಿಹೋದರಲ್ಲ ಆ ಕಾಫರರು. ಲಷ್ಕರಿ ಆಡಳಿತದವರು ಅವರ ಆಸ್ತಿಪಾಸ್ತಿಗಳನ್ನು ರಾಷ್ಟ್ರಭಕ್ತಿಯುಳ್ಳ ಮುಸಲ್ಮಾನರಿಗೆ ಹಂಚಿಕೊಡುವ ಆಲೋಚನೆಯಲ್ಲಿದ್ದಾರೆ. ಮೇಜರ್ ಸಾಹೇಬರ ಕೃಪೆ ನಿನ್ನ ಮೇಲೆ ಬಿದ್ದರೆ ನಿನಗೂ ಎರಡು ಬಿಘಾ ಗದ್ದೆ ಮತ್ತು ತೋಟಗಳು ಸಿಕ್ಕಿಯಾವು."

"ಮಾವ, ಅವರ ಆಸ್ತಿಪಾಸ್ತಿಗಳನ್ನು ನಾವು ಕಸಿದುಕೊಳ್ಳುವುದೆ?" ಚೌಧರಿ ತಮ್ಮ ವಿಸಮ್ಮತಿಯನ್ನು ಸೂಚಿಸಿದರು. "ಪಾಪ, ನಾಳೆಯ ದಿನ ಅವರು ನಮ್ಮ ನಾಡಿಗೆ ಮರಳಿದಾಗ, ಆಸ್ತಿಪಾಸ್ತಿಗಳನ್ನು ಕಳೆದುಕೊಂಡ ಗತಿಗೇಡಿಗಳಾಗುವರಲ್ಲ?"

"ಹಮೀದ, ನೀನು ಭೋಳೇ ಸ್ವಭಾವದವನು. ಬೆಳ್ಳಗಿರುವುದೆಲ್ಲ ಹಾಲೆಂದು ನಂಬುತ್ತಿ. ಆ ಮುಜೀಬರ್ ರಹಮಾನರನ್ನು ಯಾಹ್ಯಾಖಾನರ ವಿರುದ್ಧ ಎತ್ತಿಕಟ್ಟಿದ ಸೈತಾನನ ಮಕ್ಕಳು ಅವರು. ಪಾಕಿಸ್ತಾನವನ್ನು ಒಡೆಯಬೇಕೆಂದು ಅವರು ಹೂಡಿದ ಕುತಂತ್ರವನ್ನು ನೀನೇನು ಬಲ್ಲೆ? ಅವರ ಕೈ ಮೇಲಾಗಿದ್ದರೆ ಇಷ್ಟರಲ್ಲಿ ಇಂಡಿಯಾದ ದಂಡು ನಮ್ಮ ದೇಶದೊಳಗೆ ನುಗ್ಗುತಿತ್ತು. ಕರುಣಾಳು ಖುದಾ ಟಿಕ್ಕಾಖಾನರ ತೋಳುಗಳಿಗೆ ಅವರನ್ನು ಸದೆ ಬಡಿಯುವ ಶಕ್ತಿಯನ್ನು ಕೊಟ್ಟು ನಾಡನ್ನು ಕಾಪಾಡಿದ."

ಚೌಧರಿ ಮಾರುಲಿಯದೆ ನೂರ್ ಅಮೀನ್ ಉಸುರಿದ ಸಂಗತಿಯನ್ನು ಮನಸ್ಸಿನಲ್ಲಿಯೇ ಮೆಲುಕು ಹಾಕಿದರು. ಅವರಿಗೆ ಅದನ್ನು ನುಂಗುವುದು ಪ್ರಯಾಸವೆನಿಸಿತು.



"ಹಮೀದ, ಏನು ಆಲೋಚಿಸುತ್ತಿ?" ನೂರ್ ಅಮೀನ್ ಚೌಧರಿಯ ಮನಸ್ಸಿನಲ್ಲಿ ಆಂಜಿಕೆಯ ಬೀಜವನ್ನು ಬಿತ್ತಿದ; "ನಿನ್ನ ಕ್ಷೇಮವನ್ನು ಚಿಂತಿಸಿ ನಾನು ಈ ಹಿತೋಕ್ತಿಯನ್ನು ಆಡಿದೆ. ಇನ್ನು ನಿನ್ನ ಇಷ್ಟ. ಮೇಜರ್ ಸಾಹೇಬರ ಅಪ್ರೀತಿಗೊಳಗಾದರೆ ವಿಪತ್ತು ಕಟ್ಟಿಟ್ಟ ಗಂಟು."

"ಚೌಧರಿ ಆ ಸುಟ್ಟ ಮೋರೆಯ ಮೇಜರನನ್ನು ಆಹ್ವಾನಿಸಿದರೆ?" ಎಲೆ ಬಳ್ಳಿ ನಡುವೆ ಬಾಯಿಹಾಕಿತು.

"ನನಗೇಕೋ ಚೌಧರಿ ಆಪತ್ತಿನ ತೆಕ್ಕೆಗೆ ಒಳಗಾಗುತ್ತಿದ್ದಾರೆ. ಅನಿಸುತ್ತೆ." ಮಲ್ಲಿಗೆ ಬಳ್ಳಿ ದಾಂಗುಡಿಯ ತೋಳನ್ನು ಬೀಸಿ ಹೇಳಿತು.

"ನಡುವೆ ಬಾಯಿ ಹಾಕಿ ಹೇಳುತ್ತಿರುವ ಕತೆಯ ಓಟಕ್ಕೆ ಭಂಗ ತರಬೇಡಿ." ಮಂದಾನಿಲ ಗದರಿಸಿತು.

ಆ ಪುಟ್ಟ ತೋಟದಲ್ಲಿದ್ದ ಸಸ್ಯಾವಳಿ ಸದ್ದು ಗದ್ದಲಗಳನ್ನು ನಿಲ್ಲಿಸಿ ಕತೆಯನ್ನು ಆಲಿಸತೊಡಗಿತು.

"ಚೌಧರಿ ವ್ಯವಹಾರವನ್ನು ಬಲ್ಲ ಮನುಷ್ಯರು." ಮೆಲುಗಾಳಿ ಕತೆ ಮುಂದುವರಿಸಿತು " ಫೌಜಿನ ಅಧಿಕಾರಿಗಳ ಅಪ್ರಸನ್ನತೆ ಗಳಿಸಿಕೊಂಡರೆ ಅದು ಅಪಾಯ; ಈಗಾಗಲೇ ತಮ್ಮ ನೆತ್ತಿಯ ಮೇಲೆ ಬಿಚ್ಚುಗತ್ತಿ ತೂಗುತಿದೆ ಎಂಬುದನ್ನು ಬಲ್ಲರವರು. ಒಂದು ಹೊತ್ತು ಬಿರ್ದೂಟ ಹಾಕಿದರೆ ತಮ್ಮ ಸಂಪತ್ತೇನೂ ಅರೆಯಾಗುವುದಿಲ್ಲ. ಆ ಮೇಜರ್ ಬಂದು ಉಂಡು ಹೋಗಲಿ; ತನ್ನ ತಂಟೆಗೆ ಬರದಿದ್ದರೆ ಸಾಕು ಎಂಬ ತೀರ್ಮಾನಕ್ಕೆ ಅವರು ತಲುಪಿದರು.

ಚೌಧರಿ ಆ ಇರುಳು ನಮಾಜುಮಾಡಿ ಊಟಕ್ಕೆ ಕುಳಿತಾಗ "ನಾಳೆ ನಾಲ್ಕು ಜನಕ್ಕೆ ಬಿರ್ದೂಟ ತಯಾರಿಸಬೇಕು." ಎಂದರು.

"ನೆಂಟರು ಯಾರಾದರೂ ಬರುತ್ತಾರೆಯೇ?" ಮೇಲಿನ ಸಾರನ್ನು ಬಡಿಸುತಿದ್ದ ಮಡದಿ ಪತಿಯ ಮೋರೆಯನ್ನು ನೋಡಿದಳು.

"ನೆಂಟರೇನೂ ಅಲ್ಲ."

"ಮತ್ತೆ ಯಾರು ದಾದಾ?" ಚೌಧರಿಯ ಬಲ ಪಾರ್ಶ್ವದಲ್ಲಿ ಕುಳಿತಿದ್ದ ಖತೀಜ ತಟ್ಟೆಯಿಂದ ಕಣ್ಣೆತ್ತಿದಳು.

ಬರುವವರು ಯಾರೆಂದು ಮನೆಯವರಿಗ ಅರುಹಲು ಚೌಧರಿಗೆ ಸಂಕೋಚ. ಅವರ ಮನಸ್ಸು 'ನೀನು ತಪ್ಪುಮಾಡುತ್ತಿರುವೆ' ಎಂದು ಅವರನ್ನು ಕುಟುಕಿತು. ಅವರು ಒಮ್ಮೆ ಕೆಮ್ಮಿ ಗಂಟಲು ಸರಿಪಡಿಸಿಕೊಂಡು "ಮೇಜರ್ ಅಸದ್‌ಖಾನರು ಇದ್ದಾರಲ್ಲ; ಅವರು ನಾಳೆ ನಮ್ಮ ಮನೆಗೆ ಊಟಕ್ಕೆ ಬರುವೆನೆಂದು ಹೇಳಿಕಳುಹಿಸಿದ್ದಾರೆ" ಎಂದು ಹೇಳಿದರು.

"ಆ ದಪ್ಪ ಮೀಸೆಯ ಆರಡಿ ಎತ್ತರದ ಧಾಂಡಿಗನೆ?" ಎಡಬದಿಯಲ್ಲಿ ಕುಳಿತಿದ್ದ ಆಯೇಷ ಬಾಯ್ಬಿಟ್ಟರೆದಳು. "ಆತ ಜೀಪಿನಲ್ಲಿ ಕುಳಿತು ಓಡಾಡುವುದನ್ನು ನಾನು ಕಿಟಿಕಿಯಿಂದ ನೋಡಿದ್ದೇನೆ."

"ಆ ಇಬ್ಲೀಸನನ್ನು ಮನೆ ಮೆಟ್ಟಲು ಹತ್ತಿಸುವುದೇ ದಾದಾ?" ಖತೀಜ ಆಕ್ಷೇಪಿಸಿದಳು.

"ನಾನೇನೂ ಸಂತೋಷದಿಂದ ಅವರನ್ನು ಊಟಕ್ಕೆ ಕರೆಯುತ್ತಿಲ್ಲ." ಚೌಧರಿ ಹೊರಬಾಗಿಲಿನ ಕಡೆಗೊಮ್ಮೆ ನೋಡಿ ತಗ್ಗಿದ ಸ್ವರದಲ್ಲಿ ನುಡಿದರು; "ಗಂಡಾಂತರದ ದಿನಗಳು. ನನ್ನೊಬ್ಬನ ಬಗ್ಗೆ ಚಿಂತಿಸುವುದಿಲ್ಲ. ನಿಮ್ಮೆಲ್ಲರ ಮಾನಪ್ರಾಣಗಳೆರಡನ್ನೂ ಕಾಪಾಡಬೇಕು. ದಯಾಮಯನಾದ ಅಲ್ಲಾನ ಕರುಣೆ ನಮ್ಮ ಮೇಲಿರಲಿ."

ಯಾರೂ ಪ್ರತಿ ಹೇಳಲಿಲ್ಲ. ಚೌಧರಿಯ ಎದುರು ಕುಳಿತಿದ್ದ ರಸೂಲ್ ಕಲಸಿದ ತುತ್ತನ್ನು ಕೈಯಲ್ಲಿ ಹಿಡಿದು ಅಗಲಿಸಿದ ಕಣ್ಣುಗಳಿಂದ ತಂದೆಯ ಮುಖವನ್ನೇ ನೋಡಿದ. ಖತೀಜ ತಮ್ಮನ ನೇತ್ರಗಳಲ್ಲಿ ಮಿಂಚಿ ಮಾಯವಾದ ಭಾವವೇನೆಂಬುದನ್ನು ಆಲೋಚಿಸುತ್ತ ಎಡಗೈಯಿಂದ ತಲೆಕೆರೆದುಕೊಂಡಳು.

ಮರುದಿನ ಚೌಧರಿ ನೂರ್ ಅಮೀನ್ ಸಂಗಡ ಸೇನಾಶಿಬಿರಕ್ಕೆ ತೆರಳಿ ಮೇಜರ್ ಅಸದ್‌ಖಾನರಿಗೆ ಔತಣದ ಆಮಂತ್ರಣವನ್ನು ಕೊಟ್ಟರು. ಆ ಸಂದರ್ಭ ಚೌಧರಿಗೆ ಹರ್ಷವನ್ನು ತರಲಿಲ್ಲ. ಜತೆಯಲ್ಲಿ ನೂರ್ ಅಮೀನನಿದ್ದುದರಿಂದ ಕಾವಲಿನ ದಂಡಾಳುಗಳು ಅವರನ್ನು ತಡೆಯದೆ ಪಾಳೆಯದೊಳಗೆ ಬಿಟ್ಟರು. ಊರ ಮಾಧ್ಯಮಿಕಶಾಲೆಯೇ ಸೇನಾಶಿಬಿರದ ಕಾರ್ಯಾಲಯ. ಚೌಧರಿ ಕಾಣಲು ಹೋದಾಗ ಅಸದ್‌ಖಾನ ಕುರ್ಚಿಯ ಮೇಲೆ ಕುಳಿತು ಸಿಗಾರೊಂದನ್ನು ಸೇದುತಿದ್ದ. ಮೇಜದ ಮೇಲೆ ವ್ಹಿಸ್ಕಿ ತುಂಬಿದ ಗ್ಲಾಸೊಂದಿತ್ತು. ನೂರ್ ಅಮೀನ್ "ಇವರೇ

ಹಮೀದ್ ಚೌಧರಿಯವರು. ನಮ್ಮ ಊರಿನ ಗಣ್ಯ ವ್ಯಕ್ತಿಗಳು." ಎಂದು ಪರಿಚಯಮಾಡಿಕೊಟ್ಟ.

ಅಸದ್‌ಖಾನ್ ಮಾತನಾಡಲಿಲ್ಲ. ತನ್ನ ದಪ್ಪ ಮೀಸೆಯ ಮೇಲೊಮ್ಮೆ ಬೆರಳಾಡಿಸಿ ಕೆಂಗಣ್ಣುಗಳಿಂದ ಚೌಧರಿಯನ್ನೊಮ್ಮೆ ದಿಟ್ಟಿಸಿ ನೋಡಿದ. ಕಾದ ಸರಳನ್ನು ಮೈಮೇಲೆ ಆಡಿಸಿದಂತಾಯಿತು ಚೌಧರಿಗೆ. ಅವರು ಆತನ ಉರಿಗಣ್ಣುಗಳನ್ನು ಎದುರಿಸಲಾಗದೆ ತಲೆ ತಗ್ಗಿಸಿದರು. ಅಸದ್‌ಖಾನ್ ತುಟಿಗಳ ನಡುವೆ ಇದ್ದ ಸಿಗಾರನ್ನು ತೆಗೆದು ಎಡಗೈಯ ಬೆರಳ ಸಂದಿನಲ್ಲಿ ಹಿಡಿದು "ನಾವು ಅವಾಮಿಲೀಗಿನ ಪಕ್ಷಪಾತಿಯೆಂದು ಕೇಳಿದ ಹಮೀದ ಚೌಧರಿ ತಾನೇ?" ಎಂದು ಅಲಕ್ಷ್ಯ ಸ್ವರದಲ್ಲಿ ಪ್ರಶ್ನಿಸಿದ.

ಮೇಜರನ ಕರ್ಕಶಸ್ವರವನ್ನು ಕೇಳಿದಾಗ ಚೌಧರಿಯ ಮೈಗೆ ಮುಳ್ಳುರಿದಂತಾಯಿತು. ಅವರು ಮಾರ್ನುಡಿಯದೆ ಮೌನವನ್ನವಲಂಬಿಸಿದರು. ಮೇಜರ್ ಕುರ್ಚಿಗಳಿದ್ದರೂ 'ಆಸೀನರಾಗಿ' ಎಂದು ಹೇಳುವ ಸೌಜನ್ಯವನ್ನು ಸಹ ತೋರಲಿಲ್ಲ. ನೂರ್ ಅಮೀನ್ ಚೌಧರಿಯ ನೆರವಿಗೆ ಬಂದು "ಮೇಜರ್ ಸಾಹೇಬ, ಚೌಧರಿಗೆ ತಾನು ಮಾಡಿದ ಅಪರಾಧದ ಅರಿವಾಗಿದೆ. ಬಂದಿದ್ದಾರೆ." ಎಂದು ಹೇಳಿದ.

"ಏನೋ ತಿಳಿಯದೆ ವಂಗಬಂಧುವಿಗೆ,-ಅಲ್ಲ ಮುಜೀಬರ್‌ರಹಮಾನರಿಗೆ ಸಹಾಯಮಾಡಿದೆ." ಚೌಧರಿ ತೊದಲುದನಿಯಲ್ಲಿ ಉಸುರಿದರು; "ಅಷ್ಟಲ್ಲದೆ ನಾನು ಬೇರಿನ್ನಾವ ಅಪರಾಧವನ್ನು ಮಾಡಿಲ್ಲ ತಾವು ದೊಡ್ಡಮನಸ್ಸು ಮಾಡಿ ಕ್ಷಮಿಸಬೇಕು".

"ಮೇಜರ್ ಸಾಹೇಬ, ಚೌಧರಿಗೆ ತಮ್ಮ ಮುಂದೆ ಹೇಳಿಕೊಳ್ಳಲು ಸಂಕೋಚ" ನೂರ್ ಅಮೀನ್ ನಡುವೆ ಬಾಯಿಹಾಕಿದ.

"ಏನದು?" ಮೇಜರ್ ಮೇಜದ ಮೇಲಿದ್ದ ಗ್ಲಾಸನ್ನೆತ್ತಿ ಒಂದು ಗುಟುಕು ಮದ್ಯವನ್ನು ಹೀರುತ್ತ ಪ್ರಶ್ನಿಸಿದ.

"ತಾವು ಈ ಪ್ರದೇಶದ ಜನರಿಗೆ ರಕ್ಷಣೆಯನು ಒದಗಿಸಿ ಬಂಡುಗಾರರಿಂದ ಕಾಪಾಡಿದಿರಿ." ನೂರ್ ಅಮೀನರೇ ಚೌಧರಿಯ ಪರವಾಗಿ ಮಾತಾಡಿದ. "ಚೌಧರಿ ಆ ಬಗ್ಗೆ ತಮಗೆ ಕೃತಜ್ಞತೆಯನ್ನು ಸಲ್ಲಿಸಲು ಆಲೋಚಿಸುತಿದ್ದಾರೆ."

"ಮೇಜರ್‌ಸಾಹೇಬ, ತಾವು ಈ ಬಡವರ ಮನೆಗೆ ಬಂದು ಆತಿಥ್ಯವನ್ನು ಸ್ವೀಕರಿಸಲು ಕೃಪೆ ಮಾಡಬೇಕು." ಚೌಧರಿ ಬೆನು ಬಾಗಿಸಿ ವಿನಮ್ರ ಸ್ವರದಲ್ಲಿ ವಿನಂತಿಸಿದರು.

"ಈ ಬಂಗಾಲಿಗಳು ಶುದ್ಧ ಹಲ್ಕಟಜನ. ನಾಡನ್ನು ಕಾಪಾಡಿದ ಸೇನಾಧಿಕಾರಿಗಳನ್ನು ಹೇಗೆ ಗೌರವಿಸಬೇಕೆಂದು ತಿಳಿಯದು." ಅಸದ್‌ಖಾನ ಇನ್ನೊಂದು ಗುಟುಕು ವ್ಹಿಸ್ಕಿಯನ್ನು ಹೀರಿ ಒದರಿದ: "ನಾವು ಎರಡು ವಾರಗಳಿಂದ ಇಲ್ಲಿ ಇದ್ದೇವೆ. ವೈರಿ ಸೈನ್ಯರನ್ನು ಹರಿಸಿ ಊರನ್ನು ಬಂಡಾಯಗಾರರಿಂದ ಕಾಪಾಡುತಿದ್ದೇವೆ. ಯಾವನೇ ಒಬ್ಬ ಅನುಕೂಲವಂತ ಬಂಗಾಳಿ ಬಂದು ಒಂದು ಹೊತ್ತು ಮನೆಗೆ ಬನ್ನಿ ಎಂದು ಆಮಂತ್ರಿಸಿದನೆ?"

"ಮೇಜರ್ ಸಾಹೇಬ, ಈಗ ಚೌಧರಿ ನಿಮ್ಮನ್ನು ಆಮಂತ್ರಿಸುತಿದ್ದಾರಲ್ಲ." ನೂರ್ ಅಮೀನ್ ಬಾಯ್ದೆರೆದ: "ಅವರ ಕರೆಯನ್ನು ಒಪ್ಪಿಕೊಳ್ಳುವ ದೊಡ್ಡಮನಸ್ಸು ಮಾಡಬೇಕು."

"ಆಗಲಿ. ನಾವು ಇಂದೇ ಮಧ್ಯಾಹ್ನ ಬರುತ್ತೇವೆ. ಆದರೆ ಜೋಕೆ! ಔತಣದ ಆಮಿಷಕ್ಕೆ ಬಲಿಬಿದ್ದು ನಾವು ಕರ್ತವ್ಯವನ್ನು ಮರೆಯುವವರಲ್ಲ."

"ಮೇಜರ್ ಸಾಹೇಬ, ನಾನು ದೊಡ್ಡ ತಪ್ಪನ್ನೇನೂ ಮಾಡಲಿಲ್ಲ." ಚೌಧರಿ ವಿನೀತಸ್ವರದಲ್ಲಿ ಇನ್ನೊಮ್ಮೆ ಅರಿಕೆಮಾಡಿದ. "ತಾವು ನನ್ನ ಮನೆಯಲ್ಲಿ ಕಾಲಿರಿಸಿದರೆ ರಕ್ಷಣೆಯ ಭರವಸೆ ಲಭಿಸಿದ ಹಾಗೆ.!

"ಆಗಲಿ. ನಾವು ಇಂದೇ ಬರುವೆವು."

"ಹಮೀದ, ನಿನಗಿನ್ನೇನು ದಿಗಿಲು ಬೇಡಾ." ನೂರ್ ಅಮೀನ್ ಚೌಧರಿಗೆ ಬಂಗಾಳಿ ಭಾಷೆಯಲ್ಲಿ ಹೇಳಿದ. "ಇನ್ನು ಮೇಲೆ ನೀನು ಮೇಜರ್ ಸಾಹೇಬರ ಕೃಪೆಗೆ ಒಳಗಾದೆ ಎಂದೇ ತಿಳಿ."

ಅಸದಖಾನನ ಕೋಣೆಯಿಂದ ಹೊರಗೆ ಬಂದಾಗ, ಹುಲಿಯ ಗವಿಯಿಂದ ಹೊರಬಿದ್ದಂತೆ ಭಾಸವಾಯಿತು ಚೌಧರಿಗೆ. ಆತನ ಮೋರೆಯನ್ನು ನೋಡಿದಾಗ, ಮಾತುಗಳನ್ನು ಕೇಳಿದಾಗ, ಆತ ದಯೆ ದಾಕ್ಷಿಣ್ಯಗಳಿಲ್ಲದ ಕ್ರೂರವ್ಯಕ್ತಿ ಎಂದು ಅವರಿಗೆ ತೋರಿತು. ಆಳುದ್ದದ ದೇಹವನ್ನು ಗೇಣುದ್ದಮಾಡಿ ಆತನ ಮುಂದೆ ಕುಸಿದಾಗ ತಮ್ಮ ಆತ್ಮಗೌರವವೇ ಜರಿಯಿತೆಂದು ಅವರ ಮನಸ್ಸು ಕೊರಗಿತು.

ಹೇಳಿದ ವೇಳೆಗೆ ಸರಿಯಾಗಿ ಮೇಜರ್ ಅಸದ್ ಖಾನ್ ತನ್ನ ಸಂಗಡ ಕ್ಯಾಪ್ಟನ್ ಹುಸೇನ್ ಮತ್ತು ಲೆಫ್ಟಿನೆಂಟ್ ಉಸ್ಮಾನ್ ಎಂಬಿಬ್ಬರು ಅಧಿಕಾರಿಗಳನ್ನು ಕರೆದುಕೊಂಡು ಚೌಧರಿಯ ಮನೆಗೆ ಆಗಮಿಸಿದ. ನೂರ್ ಅಮೀನನೂ ಆಮಂತ್ರಿತನಾಗಿದ್ದ. ಸೇನಾಧಿಕಾರಿಗಳನ್ನು ಸತ್ಕರಿಸಲೆಂದು ಚೌಧರಿ ಯಾರನ್ನೋ ಕಾಡಿಬೇಡಿ ಎರಡು ಶೀಷೆ ಬ್ರಾಂಡಿಯನ್ನು ಸಂಪಾದಿಸಿದ್ದರು. ಅವರು ಮದ್ಯಪಾನ ಚಟವಿಲ್ಲದವರಾಗಿದ್ದರೂ ಅತಿಥಿಗಳ ಸಲುವಾಗಿ ಶ್ರಮವಹಿಸಿ ಅದನ್ನು ತಂದಿದ್ದರು. ಅತಿಥಿಗಳು ಜೀಪಿನಿಂದ ಇಳಿದು ಮೆಟ್ಟಲುಗಳನ್ನೇರಿ ಬಂದು ಹಜಾರದಲ್ಲಿ ಉಪವಿಷ್ಟರಾದೊಡನೆ ಚೌಧರಿ ನೂರ್ ಅಮೀನನ ಸೂಚನೆಯಂತೆ ಬ್ರಾಂಡಿ ಶೀಷೆ, ಸೋಡಾ ಬಾಟ್ಲಿ ಮತ್ತು ನಾಲ್ಕು ಗ್ಲಾಸುಗಳನ್ನು ತಂದು ಮೇಜದ ಮೇಲಿರಿಸಿದರು. ಅತಿಥಿಗಳು ಬಿದರೂಟವನ್ನು ಮೆಲ್ಲಲು ಪ್ರಚೋದಕವಾಗಲೆಂದು ಬ್ರಾಂಡಿಯನ್ನು ಗ್ಲಾಸುಗಳಿಗೆ ಬಸಿದು ಸೋಡಾ ಜಲವನ್ನು ಬೆರಸಿ ಎರಡೆರಡು ಸುತ್ತು ಹೀರಿದರು. ಅವರು ಮದ್ಯಪಾನವನ್ನು ಮುಗಿಸಿದಾಗ ಕಣ್ಣುಗಳು ಕಾದ ಕಬ್ಬಿಣದ ಗೋಲಿಗಳಂತೆ ಕೆಂಪಾದುವು.

ಅಡುಗೆಯವನು ಮೇಜದ ಮೇಲೆ ತಟ್ಟೆಗಳನ್ನು ಹಾಕಿ ಬಡಿಸಿದ. ಎಲ್ಲರೂ ಕೈತೊಳೆದು ತಟ್ಟೆಗಳ ಮುಂದೆ ಕುಳಿತು ಉಣಲಾರಂಭಿಸಿದರು. ಅಸದ್‌ಖಾನ ಚಪಾತಿಯನ್ನು ಮುರಿದು ಕೋಳಿಮಾಂಸದ ಸಾರಿನಲ್ಲಿ ಅದ್ದುತ್ತ ತಟ್ಟೆಯಿಂದ ಕಣ್ಣುಗಳನ್ನು ಮೇಲೆತ್ತಿ "ಚೌಧರಿ, ನಿಮ್ಮ ಮನೆಯಲ್ಲಿ ಹೆಂಗಸರೇ ಕಾಣಿಸುವುದಿಲ್ಲ. ಹೆಂಗಸರು ಮಕ್ಕಳನ್ನೆಲ್ಲ ಬುರುಖಾದ ಮರೆಯಲ್ಲಿ ಕೂಡುಹಾಕಿದ್ದೀರಾ?" ಎಂದು ಕೇಳಿದ.

"ನಮ್ಮ ಚೌಧರಿ ಸುಧಾರಿಸಿದ ಮನುಷ್ಯರು." ಬಾಯೊಳಗೆ ತುಂಬಿದ ತುತ್ತನ್ನು ನುಂಗುತ್ತ ನೂರ್ ಅಮೀನ್ ಮಾರ್ನುಡಿದ: "ಅವರ ಇಬ್ಬರು ಹೆಣ್ಣುಮಕ್ಕಳು ರಾಜಶಾಹಿಯ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದರು."

"ಹಾವೆ?" ಕ್ಯಾಪ್ಟನ್ ಹುಸ್ಸೇನ್ ಪ್ರತಿಕ್ರಿಯಿಸಿದ; "ಹೆಣ್ಣುಮಕ್ಕಳು ಕಾಲೇಜಿಗೆ ಹೋಗಿ ಕಲಿಯುವುದು ದೊಡ್ಡ ತಪ್ಪು. ಬಂಗಾಳದ ವಿನಾಶಕ್ಕೆ ಹೆಣ್ಣುಮಕ್ಕಳ ವಿದ್ಯೆಯೇ ಕಾರಣ. ಮನೆಯೊಳಗಿನ ಆಗುಹೋಗುಗಳನ್ನು ನೋಡಿಕೊಳ್ಳುವುದು. ಮಕ್ಕಳುಮರಿಗಳನ್ನು ಪೋಷಿಸುವುದು ಇವೇ ಹೆಣ್ಣುಮಕ್ಕಳು ಕಲಿಯಬೇಕಾದ ವಿದ್ಯೆ. ಕಲಿತ ಹೆಣ್ಣುಗಳು ಗಂಡಸರ ತಲೆಯೊಳಗೆ ದುರ್ವಿಚಾರಗಳನ್ನು ತುಂಬುವರು."

"ಕ್ಯಾಪ್ಟನ್ ಸಾಹೇಬ, ನೀವು ಹೇಳುವುದು ಸರಿ." ನೂರ್ ಅಮೀನ್ ಅನುಮೋದಿಸಿದ; "ಹೆಂಗಸರು ಕಾಲೇಜು ವಿದ್ಯೆ ಕಲಿಯುವುದರಿಂದ ಇಸ್ಲಾಮ್ ಧರ್ಮದಲ್ಲಿರುವ ಭಕ್ತಿವಿಶ್ವಾಸಗಳು ಸಡಿಲುಗೊಳ್ಳುತ್ತವೆ."

"ಚೌಧರಿ" ಅಸದ್‌ಖಾನ ಬಾಯ್ದೆರೆದ: "ನೀವು ಹೇಗೂ ಹೆಣ್ಣುಮಕ್ಕಳನ್ನು ಕಾಲೇಜಿಗೆ ಕಳುಹಿಸಿ ಓದಿಸಿದವರು. ಅಲ್ಲಿ ನೂರಾರು ಜನ ಗಂಡುಹುಡುಗರು ಮತ್ತು ಲೆಕ್ಚರರು ನಿಮ್ಮ ಮಗಳಂದಿರ ಅಂದಚೆಂದಗಳನ್ನು ನೋಡಿ ಆನಂದಿಸಿದ್ದಾರೆ. ಇಲ್ಲಿ ನಾವು ಅವರನ್ನು ನೋಡುವುದರಿಂದ ಪ್ರಮಾದವೇನೂ ಆಗದು."

ಚೌಧರಿಯ ಎದೆಗೆ ಕಿಚ್ಚಿನ ಕೊಳ್ಳಿಯಿಂದ ತಿವಿದಷ್ಟು ವೇದನೆಯಾಯಿತು. ಅವರು ಬಾಯಲ್ಲಿ ತುಂಬಿದ ತುತ್ತನ್ನು ನುಂಗಲಾರದೆ ತಲೆ ತಗ್ಗಿಸಿದರು

"ಚೌಧರಿ, ಏಕೆ ಅನುಮಾನಿಸುತ್ತೀರಿ?" ಕ್ಯಾಪ್ಟನ್ ಹುಸೇನರ ಕೊರಳಿನಿಂದ ಗಡಸುದನಿ ಹೊರಟಿತು: "ಮೇಜರ್‌ಸಾಹೇಬರು ಅಪ್ಪಣೆ ಮಾಡಿದುದು ಕೇಳಿಸಲಿಲ್ಲವೆ?"

"ಆಯೇಷಾ, ಖತೀಜ, ನೀವೊಮ್ಮೆ ಇಲ್ಲಿ ಬನ್ನಿ." ಚೌಧರಿ ವಿಹ್ವಲಸ್ವರದಲ್ಲಿ ಮಗಳಂದಿರನ್ನು ಕೂಗಿದರು.

ಆಯೇಷ ಮತ್ತು ಖತೀಜ ಒಳ ಹಜಾರದಲ್ಲಿ ಮರೆಯಲ್ಲಿ ನಿಂತು ಊಟದ ಮನೆಯಲ್ಲಿ ನಡೆಯುತಿದ್ದ ಸಂಭಾಷಣೆಯನ್ನು ಆಲಿಸುತಿದ್ದರು. ಅತಿಥಿಗಳು ಉರ್ದುಭಾಷೆಯಲ್ಲಿ ಮಾತಾಡುತಿದ್ದುದರಿಂದ, ಆ ಸಂವಾದ ಅವರಿಗೆ ಅರ್ಥವಾಗಲಿಲ್ಲ. ಆದರೆ ಅತಿಥಿಗಳು ತಮ್ಮ ಕುರಿತೇ ಮಾತಾಡುತಿದ್ದಾರೆಂಬುದನ್ನು ಅವರು ಗ್ರಹಿಸಿದರು. ಅವರ ಮೈಗೆ ಚೇಳು ಕುಟುಕಿದಂತಾಯಿತು. ಖತೀಜ "ಆಯೇಷ ಏನು ಮಾಡುವುದು?" ಎಂದು ಅಕ್ಕನ ಮೋರೆಯನ್ನು ನೋಡಿದಳು.

"ಆಯೇಷ, ಖತೀಜ, ಇಲ್ಲೊಮ್ಮೆ ಬನ್ನಿ", ತಂದೆ ಎರಡನೆಯ ಸಲ ಕೂಗಿದರು.

"ಮಕ್ಕಳೆ", ಅಡುಗೆ ಮನೆಯಲ್ಲಿದ್ದ ತಾಯಿ ಅಂದಳು; "ತಂದೆ ಕರೆಯೋದು ಕೇಳಿಸೋದಿಲ್ವೆ? ನೀವು ಹೋಗಿ ಮೋರೆ ತೋರಿಸದಿದ್ದರೆ ಮೇಜರ್ ಸಾಹೇಬರಿಗೆ ಸಿಟ್ಟು ಬಂದೀತು. ಪಲಾವು ಮತ್ತು ಗೊಜ್ಜು ಬಡಿಸುವ ನೆಪದಲ್ಲಿ ಮುಖ ತೋರಿಸಿ ಬನ್ನಿ."

ಎಂದುಲಿದ ತಾಯಿ ಪಲಾವು ಮತ್ತು ಗೊಜ್ಜುಗಳ ಪಾತ್ರೆಗಳನ್ನೆತ್ತಿ ತರುಣಿಯರ ಕೈಗೆ ಕೊಟ್ಟಳು. ಅವರು ನಡುಗುತ್ತಿರುವ ಕೈಗಳಿಂದ ಪಾತ್ರೆಗಳನ್ನೆತ್ತಿಕೊಂಡು ಊಟದ ಮನೆಗೆ ಹೆಜ್ಜೆ ಹಾಕಿದರು. ಆಯೇಷ ಪಲಾವು ಬಡಿಸಿದಳು; ಖತೀಜ ಗೊಜ್ಜನ್ನಿಕ್ಕಿದಳು.

ಮೇಜರ್ ಅಸದಖಾನ ಮತ್ತು ಕ್ಯಾಪ್ಟನ್ ಹುಸೇನ, ಇವರ ದೃಷ್ಟಿ ಊಟದ ತಟ್ಟೆಗಳ ಮೇಲೆ ನೆಲೆಗೊಳ್ಳಲಿಲ್ಲ. ಅವರು ಕಣ್ಣುಗಳನ್ನೆತ್ತಿ ಲಜ್ಜೆ

ತೊರೆದು ಆ ಇಬ್ಬರು ಯುವತಿಯರನ್ನು ನುಂಗಿ ಬಿಡುವಂತೆ ನೋಡಿದರು. ರಕ್ತವರ್ಣ ತಳೆದ ನೇತ್ರಗಳಲ್ಲಿ ಅಂಕುರಿಸಿದ ಪಾಶವೀತೃಷ್ಣೆಯ ಬೆಂಕಿಯ ಬಳ್ಳಿ ದಾಂಗುಡಿಗಳನ್ನು ಚಾಚಿ ಅವರ ಮೈಯನ್ನು ಬಳಸಿತು. ಅವರ ಕಣ್ಣುಗಳು ಆ ಚೆಲುವೆಯರ ಮೊಗಮೈಗಳನ್ನು ನೆಕ್ಕಿ ಎಂಜಲಿಸಿದುವು. ಆಯೇಷಳ ಮನಸ್ಸಿನಲ್ಲಿ ಲಜ್ಜೆ ಕೋಪಗಳ ತರಂಗಗಳೆದ್ದು ಹೊಯ್ದಾಡಿದುವು. ಖತೀಜಳಿಗೆ ಗೊಜ್ಜಿನ ಪಾತ್ರೆಯನ್ನೆತ್ತಿ ಮೇಜರನ ನೆತ್ತಿಗೆ ಬಡಿಯಬೇಕೆಂದೆನಿಸಿತು. ಬಡಿಸಿ ಮುಗಿದೊಡನೆಯೇ ಅವರು ಚಿಗುರೆಗಳಂತೆ ಒಳ ಮನೆಗೋಡಿದರು.

"ತುಂಬ ಚೆಲುವೆಯರು!" ಮೇಜರ್ ಅಸದ್ ಖಾನ ಉದ್ಗಾರವೆತ್ತಿದ: "ನಾವೇನು ನುಂಗಿ ಬಿಡುವುದಿಲ್ಲ. ಬೆದರಿದ ಚಿಗುರೆಗಳಂತೆ ಓಡಿದರಲ್ಲ!"

"ಮೇಜರ್‌ಸಾಹೇಬ," ನೂರ್ ಅಮೀನ್ ಕಣ್ಣು ಮಿಟುಕಿಸಿ ಹೇಳಿದ: "ಆಗದವರು ಸೇನಾಧಿಕಾರಿಗಳ ಬಗ್ಗೆ ಏನೇನೋ ಕತೆಕಟ್ಟಿ ಹೇಳುತಿದ್ದಾರೆ. ಆ ಹುಡುಗಿಯರು ಆ ಕತೆಗಳನ್ನು ಕೇಳಿ ಹೆದರಿ ಹೋಗಿದ್ದಾರೆ."

"ಆಗದವರ ಪಾಲಿಗೆ ನಾನು ಸೈತಾನನೆಂಬುದು ನಿಜ." ಮೇಜರ್ ಪಡಿನುಡಿದ: "ಆದರೆ ನಂಬಿದವರ ಪಾಲಿಗೆ ನಾನು ದೇವದೂತ".

"ಅದನ್ನು ಚೌಧರಿಗೆ ತಿಳಿಸಿದ್ದೇನೆ ಸಾಹೇಬ." ನೂರ್‌ಅಮೀನ್ ನಕ್ಕ.

ಕೊನೆಗೊಮ್ಮೆ ಊಟ ಮುಗಿಯಿತು. ಅತಿಥಿಗಳೇನೋ ಪುಷ್ಕಳವಾಗಿ ಭೋಜನ ಮಾಡಿದರು. ಆದರೆ ಚೌಧರಿಗೆ ಉಂಡ ನಾಲ್ಕು ತುತ್ತು ಮೈಗೆ ಹಿಡಿಸಲಿಲ್ಲ. ಅವರುಂಡ ಒಂದೊಂದು ತುತ್ತೂ ನಂಜಿನ ಪಿಂಡದಂತೆ ಕಹಿಯಾಗಿತ್ತು.

ಅತಿಥಿಗಳು ಬೀಡಗಳನ್ನು ಮೆದ್ದು ಹುಕ್ಕವನ್ನು ಸೇದಿ ವಿಶ್ರಮಿಸಿಕೊಂಡ ಅನಂತರ ಶಿಬಿರಕ್ಕೆ ಹೊರಡಲು ಅಣಿಯಾದರು. ಮೇಜರ್ ಅಸದ್‌ಖಾನ "ಚೌಧರಿ, ನೀವು ಬಿರ್ದೂಟ ಇಕ್ಕಿದುದರಿಂದ ನಿಮ್ಮ ಕೆಲಸ ಮುಗಿಯಿತೆಂದು ಭಾವಿಸಲಾಗದು. ನೀವು ನಮ್ಮ ಸ್ನೇಹವಿಶ್ವಾಸಗಳನ್ನೂ ಬೆಳೆಸಿಕೊಳ್ಳಲು ಪ್ರಯತ್ನಿಸಬೇಕು." ಎಂದು ಆಜ್ಞಾಪಿಸುವ ಸ್ವರದಲ್ಲಿ ಹೇಳಿದ.

ಅಷ್ಟರಲ್ಲಿ ಅಲೆದಾಡಲಿಕ್ಕೆ ಹೋದ ಮಗ ರಸೂಲ್ ಮನೆಗೆ ಮರಳಿ ಬಂದ. ಚೌಧರಿ "ಬೇಟ ರಸೂಲ್, ಎಲ್ಲಿ ಹೋಗಿದ್ದ?" ಎಂದು ಮಗನನ್ನು ಪ್ರಶ್ನಿಸಿದರು.

"ಯಾರೀತ?" ಕ್ಯಾಪ್ಟನ್ ಹುಸೇನ್ ಸಂಶಯ ಬೆರೆತ ದೃಷ್ಟಿಯಿಂದ ಹುಡುಗನನ್ನು ನೋಡಿದ.

"ನನ್ನ ಮಗ ರಸೂಲ್" ಎಂದು ಚೌಧರಿ.

"ಎಲ್ಲಿಗೆ ಹೋಗಿದ್ದ?" ಮೇಜರ್ ಅಸದ್ ಖಾನ್ ಕೂರನೋಟದಿಂದ ಹುಡುಗನನ್ನು ಇರಿಯುತ್ತಾ ಪ್ರಶ್ನಿಸಿದ.

ಏನು ಹೇಳಬೇಕೆಂದು ಚೌಧರಿಗೆ ಹೊಳೆಯಲಿಲ್ಲ.

"ನಾನು ಮೀನು ಹಿಡಿಯಲೆಂದು ಹೋಗಿದ್ದೆ." ರಸೂಲ್ ದಿಟ್ಟ ಸ್ವರದಲ್ಲಿ ಉತ್ತರಿಸಿದ; ಅವನು ಬೆನ್ನ ಹಿಂದಿನಿಂದ ತನ್ನ ಬಲಗೈಯನ್ನು ತೆಗೆದು ಮುಂದೆ ಚಾಚಿದ. ಆ ಕೈಯಲ್ಲಿ ದಾರದಲ್ಲಿ ಪೋಣಿಸಿದ ಗೇಣುದ್ದದ ಎರಡು ಮೀನುಗಳಿದ್ದವು.

ಸೇನಾಧಿಕಾರಿಗಳು ಜೀಪನ್ನೇರಿ ಶಿಬಿರಕ್ಕೆ ತೆರಳಿದರು. ಚೌಧರಿ ಪೀಡೆಯೊಂದು ಕಳೆಯಿತೆಂದು ಸಮಾಧಾನದ ನಿಟ್ಟುಸಿರು ಬಿಟ್ಟರು.

ಮೆಲುಗಾಳಿ ಒಂದು ಕ್ಷಣ ಕತೆ ಹೇಳುವುದನ್ನು ನಿಲ್ಲಿಸಿತು. ಗಿಡಬಳ್ಳಿಗಳು ಕೇಳಿದ ಕತೆಯನ್ನು ಮೆಲಕು ಹಾಕಿದುವು. ಕತೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳದ ತುಂಬೆಗಿಡ "ಕತೆ ಮುಗಿದು ಹೋಯಿತೆ?" ಎಂದು ಕೇಳಿತು.

"ಕತೆ ಮುಗಿಯುವುದೆ?" ಕಂಗುಮರವನ್ನು ಸುತ್ತಿದ ಎಲೆಬಳ್ಳಿ ಅಣಕಿಸುವ ಧ್ವನಿಯಲ್ಲಿ ಉಲಿಯಿತು: "ನೀನೇನು ತೂಕಡಿಸುತಿದ್ದೆಯಾ?"

"ಗಾಳಿಯಣ್ಣ, ಮುಂದೇನಾಯಿತು ಹೇಳು." ಮಾವಿನಮರ ತೋಟದಲ್ಲಿ ತುಂಬಿದ್ದ ನೀರವತೆಯ ಮಡುವಿಗೊಂದು ಕಲ್ಲೆಸೆಯಿತು.

"ಹೇಳುತ್ತೇನೆ ಕೇಳು. ಪುಟ್ಟ ರಸೂಲನಿಗೆ ತನ್ನ ಅಕ್ಕಂದಿರು ಸೇನಾಧಿಕಾರಿಗಳಿಗೆ ಮೊಗತೋರಿಸಿದರು ಎಂಬ ಸುದ್ದಿ ಕೇಳಿದಾಗ ಮುನಿಸು ಬಂತು.

ಅವನು "ದೀದಿ. ನೀನು ಆ ಇಬ್ಲಿಸರಿಗೆ ಹೆದರಬೇಕೆ ಕುಳಿತಿರುವುದೆ? ಎಂತಹ ಅಪಮಾನ!" ಎಂದು ಅಸಂತೋಷದ ಉದ್ಗಾರವೆತ್ತಿದ.

"ಒತ್ತಾಯಪಡಿಸಿದಾಗ ಏನು ಮಾಡುವುದು?" ಖತೀಜ ತಮ್ಮನನ್ನು ಸಾಂತ್ವನಗೊಳಿಸುವ ಧನಿಯಲ್ಲಿ. ಹೇಳಿದಳು: "ಅವರು ಸೊಂಟದ ಬೆಲ್ಟುಗಳಿಗೆ ಸಿಕ್ಕಿಸಿದ ಪಿಸ್ತೂಲುಗಳನ್ನು ನೋಡಿದೆಯಲ್ಲ?"

"ಕಮಾಲ್ ದಾದ ಹೇಳುವ ಮಾತು ನಿಜ." ರಸೂಲ್ ನುಡಿದ: "ನಾವು ಅಂಜಿ ತಲೆತಗ್ಗಿಸುವುದರಿಂದಲೇ ಅವರು ನಮ್ಮನ್ನು ಮೆಟ್ಟಿ ತುಳಿಯುತಿದ್ದಾರೆ."

"ರಸೂಲ್, ಕಮಾಲ ಎಂದರೆ ಯಾರು?" ಹಿರಿಯಕ್ಕ ಆಯೇಷ ಪ್ರಶ್ನಿಸಿದಳು.

ತುಟಿ ಮೀರಿ ಬಂದ ಮಾತನ್ನು ನೆನೆದು ರಸೂಲ ನಾಲಗೆ ತುದಿಯನ್ನು ಕಚ್ಚಿದ. ಅವನು "ದೀದಿ, ಅವನು ನನ್ನ ತರಗತಿಯಲ್ಲಿದ್ದ ಒಬ್ಬ ಹುಡುಗ." ಎಂದು ಬಾಯಿ ಹಾರಿಸಿದ. "ರಸೂಲ್, ಈಗ ನಮ್ಮ ದೇಶಕ್ಕೆ ಕೆಟ್ಟ ದಿನಗಳು ಬಂದಿವೆ." ಆಯೇಷ ಅಂದಳು; "ನೀನು ಹಾಗೆಲ್ಲ ಲಂಗುಲಗಾಮಿಲ್ಲದೆ ಮಾತಾಡಬೇಡ. ತಟ್ಟೆ ಹಾಕಿ ಬಡಿಸುತ್ತೇನೆ. ಊಟಕ್ಕೇಳು."

"ನೋಡು, ದಂಡಿನವರು ನಿನ್ನನ್ನು ಎಳೆದು ಕೊಂಡು ಹೋದಾರು?" ಖತೀಜ ತಮ್ಮನನ್ನು ಅಂಜಿಸಲು ಯತ್ನಿಸಿದಳು.

"ನಾನೇನೂ ಹೆದರೋದಿಲ್ಲ." ರಸೂಲ್ ಬಲ್ಲವನಂತೆ ಆತ್ಮಸ್ವರದಲ್ಲಿ ನುಡಿದ: "ಭೀತಿ ಎಂಬುದು ನಮ್ಮ ದೊಡ್ಡ ಶತ್ರು. ನಾನು...... " ಏನೊ ಹೇಳಬೇಕೆಂದಿದ್ದ ಮಾತನ್ನು ನುಂಗಿಕೊಂಡ. ರಸೂಲ್.

ಆ ಇರುಳು ನಡುರಾತ್ರಿಯ ಮಳೆ ಚೌಧರಿ ತಮ್ಮ ಕೋಣೆಯಲ್ಲಿ ಮಂಚದ ಮೇಲೆ ಮಲಗಿ ನಿದ್ರಿಸುತಿದ್ದರು. ಹಿತ್ತಲ ಬಾಗಿಲನ್ನು ಬಡಿದ ಕಟ-ಕಟ ಎಂಬ ಸದ್ದು ಅವರನ್ನು ನಿದ್ದೆಯಿಂದ ಎಚ್ಚರಿಸಿತು. ಅವರು ಮಂಚದ ಮೇಲೆ ಎದ್ದುಕುಳಿತು ಮೈ ಮುರಿದು ಆಕಳಿಸಿದರು. ಅವರ ಮನಸ್ಸು ಬಳಲಿಕೆಯನ್ನು ನೀಗಿಸಿಕೊಂಡಿರಲಿಲ್ಲ. ಕಟ-ಕಟ-ಕಡ ಎಂಬ ಸಪ್ಪಳ ಮರಳಿ ಕೇಳಿಸಿತು. ಆ ಧ್ವನಿಯಲ್ಲಿ ಏನೋ ಒಂದು ಸಂಕೇತ ಅಡಗಿರುವಂತೆ ತೋರಿತು. ಮಲಗಿದ್ದ ರಸೂಲ್ ಸಟಕ್ಕನೆ ಎದ್ದು ಆ ಸಂಕೇತಧ್ವನಿಯನ್ನು ಕಿವಿಗೊಟ್ಟು ಆಲಿಸಿದ. ಅವನು ಹಾಸಿಗೆಯಿಂದ ಎದ್ದು ಹಿತ್ತಲ ಬಾಗಿಲಕಡೆ ಹೆಜ್ಜೆ ಹಾಕಿದ.

"ಎಲ್ಲಿಗೆ ರಸೂಲ್?" ತಂದೆ ಕೇಳಿದರು.

"ದಾದ, ಹಿತ್ತಲ ಬಾಗಿಲು ತೆರೆಯಲು."

"ಜೋಕೆ, ಅವರು ದಂಡಿನ ಪಡೆಯಾಳುಗಳಾಗಿದ್ದಾರು?"

"ದಾದ, ಇರುಳು ಹೊತ್ತು ಶಿಬಿರವನ್ನು ಬಿಟ್ಟು ಹೊರಬರಲು ಅವರಿಗೆಲ್ಲಿ ಧೈರ್ಯವಿದೆ? ಬಂದವರು ನಮ್ಮವರು."

ರಸೂಲ್ ಉರಿಯುತಿದ್ದ ಲಾಂದ್ರದ ಬತ್ತಿಯನ್ನು ಹಿರಿದಾಗಿಸಿ ಧೈರ್ಯದಿಂದ ಹೋಗಿ ಹಿತ್ತಲ ಬಾಗಿಲು ತೆರೆದ. ಮೂವತ್ತು ವಯಸ್ಸಿನ ತರುಣನೊಬ್ಬ ಮನೆಯೊಳಗೆ ನುಗ್ಗಿದ. ಕಪ್ಪುಗಡ್ಡ ಆತನ ಮೋರೆಯನ್ನು ಆವರಿಸಿದೆ. ಬೆಳೆದ ಮೀಸೆಯ ತಳದಲ್ಲಿ ನಸುದೆರೆದ ತುಟಿಗಳು ಗೋಚರಿಸುತ್ತಿವೆ. ದುಂಡಗಿನ ಮೋರೆಯಲ್ಲಿ ಉದ್ದನೆಯ ಮೂಗು ಕಾಣಿಸುತಿದೆ. ಉಜ್ವಲನೇತ್ರಗಳು ದೃಢತೆಯ ಮಿಂಚನ್ನು ಮುಕ್ಕುಳಿಸುತ್ತಿವೆ. ಅಗಲವಾದ ಹಣೆಯ ಮೇಲೆ ಒಂದೆರಡು ಮುಂಗುರುಳು ಲಾಸ್ಯವಾಡುತ್ತಿವೆ. ಬಲಿಷ್ಠವಾದ ಬಾಹುಗಳು ಮತ್ತು ವಿಶಾಲವಾದ ವಕ್ಷ ಕೆಚ್ಚಿನ, ಕಲಿತನದ ಪ್ರತೀಕಗಳಂತಿವೆ. ಆತನು ಚಲ್ಲಣವೊಂದನ್ನು ತೊಟ್ಟು ಜುಬ್ಬ ಹಾಕಿಕೊಂಡಿದ್ದಾನೆ. ನೆತ್ತಿಯ ಮೇಲೆ ಕಪ್ಪು ಕುಲಾವಿ. ಆತ ಬಲಗೈಯಲ್ಲೊಂದು ಪಿಸ್ತೂಲ್ ಮತ್ತು ಎಡಗೈಯಲ್ಲೊಂದು ಚಾಕು ಹಿಡಿದಿದ್ದಾನೆ.

ಚೌಧರಿ ಆತ ಯಾರೆಂದು ಗುರುತಿಸಿದರು. ಅವರು ಜಗ್ಗನೆ ಮಂಚದಿಂದ ಎದ್ದು ಕೋಣೆಯಿಂದ ಹೊರಗೆ ಬಂದು "ಕಮಾಲ್ ಸಾಹೇಬ, ನಡುರಾತ್ರಿಯಲ್ಲಿ ನೀವು ನಮ್ಮ ಮನೆಗೆ ಬಂದಿರಲ್ಲ?" ಎಂದು ವಿಸ್ಮಯ, ವಿಹ್ವಲಸ್ವರದಲ್ಲಿ ಕೇಳಿದರು.

"ಹುಂ, ನಿಮ್ಮನ್ನು ಎಚ್ಚರಿಸಲು ನಾನೇ ಬರಬೇಕಾಯಿತು." ಕಮಾಲ ಅಪ್ರಸನ್ನ ಸ್ವರದಲ್ಲಿ ಮಾರ್ನುಡಿದ: "ಹಗಲು ಹೊತ್ತು ಟಿಕ್ಕಾಖಾನರ ಆಡಳಿತವಾದರೆ, ಇರುಳುಹೊತ್ತು ನಮ್ಮ ಆಡಳಿತ."

ಆತನ ಹೆಸರು ಕಮಾಲ. ಮುಕ್ತಿಫೌಜಿನ ಗೆರಿಲ್ಲಾ ದಳವೊಂದರ ನಾಯಕ. ಅವನು ಬೆಂಚೊಂದರ ಮೇಲೆ ಕುಳಿತು ಚಲ್ಲಣದ ಕಿಸೆಯೊಳಗಿಂದ ಚುಟ್ಟವೊಂದನ್ನು ತೆಗೆದು ಬೆಂಕಿ ಹಚ್ಚಿದ.

"ಕಮಾಲ್ ಸಾಹೇಬ, ನೀವು ಕೆಲಸವಿಲ್ಲದೆ ಬರುವವರಲ್ಲ." ಚೌಧರಿ ಆತನನ್ನು ಮಾತಿಗೆಳೆದರು: "ಬಂದ ಕಾರ್ಯವೇನು?"

"ಹಮೀದ್ ದಾದ, ನೀವು ಪಾಕಿಸ್ತಾನದ ಪಡೆಗೆ ಶಾಮೀಲಾಗಿದ್ದೀರಂತೆ" ಬಾಯಿಯಿಂದ ಹೊಗೆ ಬಿಡುತ್ತಾ ಹೇಳಿದ್ದ ಕಮಾಲ.

"ಯಾರು ಹೇಳಿದರು?" ಬೆಚ್ಚಿದ ಸ್ವರ ಚೌಧರಿಯ ಕೊರಳಿಂದ ಹೊಮ್ಮಿತು.

"ನಮಗೆ ಎಲ್ಲ ಸಂಗತಿ ತಿಳಿಯುವುದು. ಬೀಸುವ ಗಾಳಿ ಸುದ್ದಿ ಮುಟ್ಟಿಸುತ್ತದೆ." ಕಮಾಲನ ತುಟಿಗಳ ಮೇಲೆ ಕಿರುನಗೆ ಮಿನುಗಿತು: "ನೀವು ಮೇಜರ್ ಅಸದ್ ಖಾನನನ್ನು ಮನೆಗೆ ಕರೆದು ಬಿರ್ಯಾನಿ ಔತಣ ಇಕ್ಕಿದಿರಂತಲ್ಲಾ?"

"ಅದು ನಿಜ." ಚೌಧರಿ ಕೇಳಿಸಿಕೊಂಡನ್ನು ಹೊರಚೆಲ್ಲಿದರು: "ಮೇಜರನ ಕಣ್ಣು ನನ್ನ ಮೇಲಿದೆ; ಆತನ ಅಪ್ರೀತಿಗೆ ಒಳಗಾದರೆ ಗಂಡಾಂತರವಿದೆ. ಎಂದು ನೂರ್ ಅಮೀನ್ ಹೇಳಿದ. ಊರಲ್ಲಿ ಬದುಕಿ ಬಾಳಬೇಕಾದವನು ನಾನು. ದಂಡಿನವರ ನಿಷ್ಠುರ ಕಟ್ಟಿಕೊಳ್ಳುವುದು ಬೇಡವೆಂದು ನೂರ್‌ಅಮೀನನ ಸಲಹೆಯಂತೆ ಮೇಜರನನ್ನು ಊಟಕ್ಕೆ ಕರೆದೆ."

"ಹಮೀದ್ ದಾದ, ಆ ನೂರ್‌ಅಮೀನ್ ಮೈ ಎಲ್ಲಾ ವಿಷವುಳ್ಳ ಹಾವು. ಅವನು ಅವಾಮಿ ಲೀಗಿನ ಪಕ್ಷಪಾತಿಗಳ ಮತ್ತು ಹಿಂದುಗಳ ಮನೆಗಳನ್ನು ದಂಡಾಳುಗಳಿಗೆ ತೋರಿಸಿಕೊಟ್ಟು ಎಷ್ಟು ಜನರನ್ನು ಕೊಲ್ಲಿಸಿದ್ದಾನೆ; ಎಷ್ಟು ಹೆಂಗಸರ ಮಾನಹರಣಕ್ಕೆ ಕಾರಣನಾಗಿದ್ದಾನೆ. ಮತ್ತು ಎಷ್ಟು ಮನೆಗಳಿಗೆ ಕಿಚ್ಚನ್ನಿರಿಸಿದ್ದಾನೆ! ಆತನ ಮಾತುಕೇಳಿ ಪಾಕಿಸ್ತಾನದ ಪಡೆಯ ಸೈತಾನರನ್ನು ಮನೆ ಹೊಕ್ಕಿಸಿದಿರಲ್ಲ!"

ಚೌಧರಿ ಮಾತಾಡಲಿಲ್ಲ. ಅವರು ಬಾಯಿಯಲ್ಲಿ ಬೆರಳಿರಿಸಿ ಉಗುರತುದಿ ಕಡಿದರು.

"ಹಮೀದ್ ದಾದ, ಇದು ಬದುಕು ಸಾವುಗಳ ಹೋರಾಟ." ಕಮಾಲನ ಸ್ವರ ಕಟುವಾಗಿತ್ತು: "ಇಲ್ಲಿ ಕರುಣೆ ಮರುಕಗಳಿಗೆ ಅವಕಾಶವಿಲ್ಲ. ನಮ್ಮವರು ಎನಿಸಿಕೊಂಡವರಾದರೂ ಸರಿಯೆ. ಬಂಗ್ಲಾದೇಶಕ್ಕೆ ಎರಡು ಬಗೆಯುತಿದ್ದಾರೆ ಎಂಬ ಸುಳಿವು ಸಿಕ್ಕರೆ ಸಾಕು; ಅಂತಹವರನ್ನು ನಾವು ಗುಂಡಿಕ್ಕಿ ಕೊಲ್ಲುವೆವು. ನೀವು ನೂರ್ ಅಮೀನನ ಬೆನ್ನ ಹಿಂದೆಹೋದರೆ ಅವನು ನಿಮ್ಮನ್ನು ಸಂಜೆನ ಮಡುವಿನಲ್ಲಿ ಮುಳುಗಿಸುವುದು ಖಂಡಿತ."




ಕಮಾಲನ ದನಿ ರೂಕ್ಷವಾಗಿತ್ತು. ಬೆದರಿಕೆಯ ಸಿಡಿಲು ಆ ದನಿಯಲ್ಲಿ ಅಡಗಿತ್ತು. ಚೌಧರಿ ಒಂದು ಕ್ಷಣ ಆಲೋಚಿಸಿ, "ನಾನು ಎಂದಾದರು ವಂಗ ಬಂಧುವಿಗೆ ದ್ರೋಹ ಬಗೆಯುತ್ತೇನೆಯೆ? ಇಲ್ಲ. ನಾನು ನಾಲ್ಕುದಿನಗಳ ಹಿಂದೆ ಮುಕ್ತಿ ಫೌಜಿಗೆ ಐದು ಗೋಣಿ ಅಕ್ಕಿಯನ್ನು ಕಳುಹಿಸಿಕೊಟ್ಟದನ್ನು ಆಲೋಚಿಸಿ. ಪಾಕಿಸ್ತಾನದ ದಂಡಾಳುಗಳು ಊರಿಗೆ ಬಂದು ಹಿಂದುಗಳ ಮನೆ–ಮಠಗಳನ್ನು ಸುಲಿಗೆ ಮಾಡತೊಡಗಿದಾಗ ನನ್ನ ಜೀವ ಒತ್ತೆಯಿಟ್ಟು ಅವರ ಹೆಂಗಸರು ಮಕ್ಕಳಿಗೆ ರಕ್ಷಣೆಯ ಇಕ್ಕೆಯೊಂದನ್ನು ಒದಗಿಸಿ ಅವರನ್ನು ಗಡಿಯಾಚೆ ಕಳುಹಿಸಿಕೊಟ್ಟುದನ್ನು ಒಮ್ಮೆ ಆಲೋಚಿಸಿ! ಇಂತಹವನು ನಿಮಗೆ ದ್ರೋಹ ಬಗೆಯಬಲ್ಲನೆ?" ಎಂದು ನುಡಿದರು.

"ಹಮೀದ ದಾದ, ನೀವು ದ್ರೋಹ ಬಗೆಯುತ್ತಿದ್ದೀರೆಂದು ನಾನು ಹೇಳಲಿಲ್ಲ." ಕಮಾಲ ತುಟಿಯ ಮೇಲಿದ್ದ ಚುಟ್ಟದಿಂದ ಹೊಗೆಯೆಳೆಯುತ್ತ ಹೇಳಿದ: "ಈ ಗಂಡಾಂತರದ ದಿನಗಳಲ್ಲಿ ಮನಸ್ಸಿನ ಸ್ಥಿರಸಂಕಲ್ಪವನ್ನು ಉಳಿಸಿಕೊಳ್ಳಬೇಕಾದರೆ ಅಪಾರ ಧೈರ್ಯಬೇಕು. ಧೈರ್ಯಶಾಲಿಗಳು ಸಹ ಅಪಾಯದ ಕತ್ತರಿಯೊಳಗೆ ಸಿಕ್ಕಾಗ ಹೆಜ್ಜೆ ತಪ್ಪುತ್ತಾರೆ."

"ಕಮಾಲ್ ಸಾಹೇಬ", ಚೌಧರಿ ಉಸುರಿದರು: "ನಾನು ಅಂತಹವನಲ್ಲ. ಖುದಾನ ಮೇಲೆ ಆಣೆಯಿಟ್ಟು ಹೇಳುತ್ತೇನೆ. ನಾನು ಬಂಗ್ಲಾದೇಶಕ್ಕೆ ದ್ರೋಹ ಬಗೆಯಲಾರೆ."

"ಹಮೀದ್ ದಾದ. ನಿಮ್ಮನ್ನು ನಾನು ನಂಬುತ್ತೇನೆ." ಕಮಾಲ ಬೆಂಚಿನ ಮೇಲೆಯಿಂದ ಏಳುತ್ತ ಹೇಳಿದ; "ನೀವು ನುರಿತ ಬೇಟೆಗಾರರಾಗಬೇಕು.

ಜಗೇಜು ಹರಡಿದ ಬಲೆಯೊಳಗೆ ಸಿಕ್ಕಿಬೀಳದೆ ಬಲೆಯನ್ನು ಹರಿದು ಹಾಕುವ ಜಾಣ್ಮೆ ತೋರಬೇಕು."

"ಕಮಾಲ ಸಾಹೇಬ, ನೀವು ತುಸು ತಡೆಯಿರಿ." ಎಂದು ಹೇಳಿ ಚೌಧರಿ ಒಳಮನೆಗೆ ಹೋದರು. ಅವರು ಪೆಟ್ಟಿಗೆ ತೆರೆದು ಹತ್ತುರೂಪಾಯಿಗಳ ಹತ್ತು ನೋಟುಗಳನ್ನು ಹೆಕ್ಕಿತಂದು ಕಮಾಲನ ಕೈಗೆ ಹಾಕಿದರು.

"ಇದೇಕೆ?" ಸೋಜಿಗದ ದನಿಯಲ್ಲಿ ಕೇಳಿದ ಕಮಾಲ.

"ಕಮಾಲ್‌ಸಾಹೇಬ, ನಿಮ್ಮಂತೆಯೆ ಕೈಯಲ್ಲಿ ಬಂದೂಕ ಹಿಡಿದು ಹೋರಾಡಬೇಕೆಂದು ನನಗನಿಸಿದೆ. ಆದರೆ ಈ ಸಂಸಾರದ ಚಿಂತೆ ನನ್ನನ್ನು ಬಿಡುವುದಿಲ್ಲ. ರಸೂಲ್ ಪ್ರಾಯಕ್ಕೆ ಬಂದಿದ್ದರೆ......"

"ಏನು ಮಾಡುತಿದ್ದಿರಿ?"

"ಸಂಸಾರದ ಹೊರೆಯನ್ನು ಆತನ ಹೆಗಲಿಗೊಪ್ಪಿಸಿ ನಾನು ಬಂದೂಕ ಹಿಡಿದು ನಿಮ್ಮ ಸಂಗಡ ಬರುತಿದ್ದೆ."

"ಹಮೀದ್ ದಾದ, ನೀವು ಚಿಂತಿಸುವುದು ಬೇಡ." ಕಮಾಲ ಒಂದು ಕ್ಷಣ ನಿಂತು ಮಾತನ್ನು ಆಲಿಸುತಿದ್ದ ರಸೂಲನ ಮೋರೆ ನೋಡಿ ಹೇಳಿದ: "ಅಲ್ಲಾಹುವಿನ ಕೃಪೆಯಿದ್ದರೆ ನೀವು ಅದಕ್ಕಿಂತಲೂ ಮಿಗಿಲಾದ ಸೇವೆ ಸಲ್ಲಿಸುತ್ತೀರಿ."

"ಈ ಹಣದಿಂದ ನೀವು ಮದ್ದುಗುಂಡುಗಳನ್ನು ಕೊಳ್ಳಿರಿ," ಎಂದರು ಚೌಧರಿ.

ರಸೂಲ್ ಕಮಾಲನನ್ನು ಕಳುಹಿಸಿಕೊಡಲು ಹಿತ್ತಿಲಬಾಗಿಲ ತನಕ ಬಂದ. ಕಮಾಲ ಬಾಗಿಲು ದಾಟುತಿದ್ದಾಗ ರಸೂಲ್ "ಕಮಾಲ್ ದಾದ," ಎಂದಾತನನ್ನು ಕರೆದ.

"ರಸೂಲ ಏನು?" ಕಮಾಲ ಕೊರಳು ಮುರಿದು ಹುಡುಗನ ಮೋರೆಯನ್ನು ನೋಡಿದ.

"ನಾನು ಬಂದಾಗ ನೀವು ಇರಲಿಲ್ಲ."

"ಕೆಲಸದ ಮೇಲೆ ಹೋಗಿದ್ದೆ."

"ಕಮಾಲ್‌ದಾದ".

"ಏನು?"

"ನಾನು ಸ್ಟೆನ್‌ಗನ್ನನ್ನೆತ್ತಿ, ಗುಂಡು ಹಾರಿಸಲು ಕಲಿತಿದ್ದೇನೆ." ಹೆಮ್ಮೆಯ ಸ್ವರ ಹೊರಟಿತು ರಸೂಲನ ಕಂಠದಿಂದ.

"ಜಾಣಮರಿ ನೀನು." ಕಮಾಲ ಬಾಲಕನ ಬೆನ್ನನ್ನು ನೇವರಿಸಿದ.

"ಕಮಾಲ್‌ದಾದ",

"ಹೇಳು ಮರಿ."

"ಆ ಸ್ಟೆನ್‌ಗನ್ನಿನಿಂದ ಪಾಕಿಸ್ತಾನದ ಸೈನಿಕನೊಬ್ಬನನ್ನು ಹೊಡೆದುರುಳಿಸಬೇಕೆಂದು ನನ್ನ ಆಸೆ."

"ಸ್ವಲ್ಪ ತಾಳು ಮರಿ. ನೀನು ಮೇಜರ್ ಅಸದ್ ಖಾನನನ್ನೇ ಹೊಡೆದು ಉರುಳಿಸುವಿಯಂತೆ."

ರಸೂಲನ ಕಣ್ಣುಗಳಲ್ಲಿ ಹೆಮ್ಮೆ ಮತ್ತು ಹರ್ಷಗಳ ಕಿಡಿಗಳು ತುಳುಕಿದವು. ಕಮಾಲ ಬಾಲಕನ ಕೆನ್ನೆಯ ಮೇಲೆ ಮೃದುವಾಗಿ ಬೆರಳಾಡಿಸಿ ಹೊರಟು ಹೋದ.

ಮರುದಿನ ಹಮೀದ್ ಚೌಧರಿ ಗದ್ದೆಗಳಲ್ಲಿನ ಸಣಬು ಪೈರನ್ನು ಪರಿಶೀಲಿಸಿ ಮನೆಗೆ ಬಂದಾಗ ಸೇನೆಯ ಜೀಪೊಂದು ಮನೆಯ ಮುಂದೆ ಕಾದು ನಿಂತಿತ್ತು. ಮತ್ತೇನು ಬಂತು ಗಂಡಾಂತರ ಎಂದು ಅವರ ಎದೆ ದ್ರುತಗತಿಯಲ್ಲಿ ತುಡಿದುಕೊಂಡಿತು. ಅವರು ತ್ವರಿತ ಗತಿಯಲ್ಲಿ ಸೋಪಾನಗಳನ್ನು ಏರಿ ಮನೆಯೊಳಗೆ ಹೋದರು. ಅಲ್ಲಿ ಕುರ್ಚಿಗಳಲ್ಲಿ ಮೇಜರ್ ಅಸದ್ ಖಾನ, ಮತ್ತು ಕ್ಯಾಪ್ಟನ್ ಹುಸೇನರು ಮಂಡಿಸಿದ್ದರು. ಇವರೇಕೆ ಅನಿರೀಕ್ಷಿತವಾಗಿ ತಮ್ಮ ಮನೆಯನ್ನು ಹೊಕ್ಕರೆಂದು ಚೌಧರಿ ಚಕಿತರಾದರು. ಅವರು ತುಟಿಗಳ ಮೇಲೆ ಒತ್ತಾಯದ ನಗು ತಂದುಕೊಂಡು ಅನಾಮಂತ್ರಿತ ಅತಿಥಿಗಳಿಗೆ ಅಭಿವಾದನೆ ಮಾಡಿದರು.

"ಚೌಧರಿ," ಮೇಜರ್ ಅಸದ್‌ಖಾನನ ತುಟಿಯ ಮೇಲೆ ಅಪ್ರಸನ್ನತೆಯ ವಕ್ರಹಾಸವೊಂದು ನರ್ತಿಸಿತು. "ನಿಮ್ಮ ಹೆಣ್ಣುಮಕ್ಕಳು ಕಾಲೇಜಿನಲ್ಲಿ ಕಲಿತ ವಿದ್ಯಾವತಿಯರೆಂದು ಹೇಳುತಿದ್ದೀರಿ. ಆದರೆ ಅವರು ಹಳ್ಳಿಯ ಅನಾಗರಿಕ ಗುಗ್ಗುಗಳಂತೆ ವರ್ತಿಸಿ ನಮ್ಮನ್ನು ಅಪಮಾನಿಸಿದ್ದಾರೆ."

"ಏನಾಯಿತು?" ಉತ್ಸುಕತೆಯ ದನಿಯಲ್ಲಿ ಕೇಳಿದರು, ಚೌಧರಿ.

"ನಾವು ಜೀಪಿನಲ್ಲಿ ಸಂಚರಿಸಿ ಠಾಣೆಗಳ ಉಸ್ತುವಾರಿಯನ್ನು ಪರಿಶೀಲಿಸಿ ಮರಳುತಿದ್ದೆವು." ಕ್ಯಾಪ್ಟನ್ ಹುಸೇನ್ ಹೇಳಿದ: "ದಾಹದಿಂದ ನಮ್ಮ ಗಂಟಲು ಒಣಗಿ ಹೋಗಿತ್ತು. ಇಲ್ಲಿಗೆ ಬಂದಾಗ ನಿಮ್ಮ ನೆನಪಾಯಿತು. ಚೌಧರಿ ಒಳ್ಳೆಯ ಜನ; ನಮಗೆ ಒಂದಿಷ್ಟು ಚಹಾ ಕೊಟ್ಟು ನೀರಡಿಕೆ ತಣಿಸಿಯಾರು ಎಂದು ನಂಬಿ ಜೀಪು ನಿಲ್ಲಿಸಿ ಮನೆಯೊಳಕ್ಕೆ ಹೊಕ್ಕೆವು. ನಿಮ್ಮ ಮಕ್ಕಳನ್ನು ಕರೆದೆವು. ಆದರೆ ಅವರು ಒಳಮನೆಯಿಂದ ಹೊರಗೆ ಕಾಲಿಡುವುದೇ ಇಲ್ಲ."

"ಇಷ್ಟೆ ತಾನೆ." ಚೌಧರಿ ಸೇನಾಧಿಕಾರಿಗಳನ್ನು ಆದರಿಸುತ್ತ ಹೇಳಿದರು: "ಒಂದು ಕ್ಷಣ ಕುಳ್ಳಿರುವಿರಂತೆ. ಅವರು ಚಹಾ ತಯಾರಿಸಿ ಕೊಡುವರು. ಆದ ವಿಳಂಬವನ್ನು ಮನ್ನಿಸಬೇಕು."

ಮೇಜರ್ ಅಸದಖಾನ ಮೀಸೆಯ ಮೇಲೆ ಬೆರಳಾಡಿಸಿ ಮುಸುಮುಸನೆ ನಕ್ಕ. ಚೌಧರಿ ತನ್ನ ಕುಮಾರಿಯರನ್ನು ಕರೆದು ಅತಿಥಿಗಳಿಗೆ ಚಹಾ ತಯಾರಿಸಲು ಆಜ್ಞಾಪಿಸಿದರು.

"ಚೌಧರಿ, ನೀವು ಬಂಗಾಳಿಜನ, ಶತಮೂರ್ಖರು." ಮೇಜರ್ ಅಸದ್‌ಖಾನ ಮೀಸೆಯ ತುದಿಯಿಂದ ಬೆರಳು ತೆಗೆದು ಸಿಗಾರೊಂದಕ್ಕೆ ಬೆಂಕಿ ಹಚ್ಚುತ್ತ ಹೇಳಿದ: "ಬೆಂಕಿಗೆ ಪತಂಗಗಳು ಬಂದು ಬೀಳುವ ಹಾಗೆ ಜನ ಸಾಯುತಿದ್ದಾರೆ. ನಾವೇನು ನಾಡನ್ನು ಬಿಟ್ಟುಕೊಡುವೆವೆಂದು ಆಲೋಚಿಸಿದಿರಾ? ಒಬ್ಬ ದಂಡಾಳಿನ ಪ್ರಾಣಕ್ಕೆ ಪ್ರತಿಯಾಗಿ ನೂರು ಮಂದಿಯ ಪ್ರಾಣಗಳನ್ನು ಬಲಿಯಾಗಿ ತೆಗೆದುಕೊಳ್ಳುವೆವು."

"ಮೇಜರ್‌ಸಾಹೇಬ," ಚೌಧರಿ ವಿನಮ್ರ ನುಡಿಯಲ್ಲಿ ಮಾರ್ನುಡಿದರು: "ನಾನಂತೂ ಹೋರಾಡುವವನಲ್ಲ. ಅವರೇಕೆ ಪತಂಗಗಳಂತೆ ಮಡಿದು ಬೀಳುತಿದ್ದಾರೆ ಎಂಬುದನ್ನು ಹೇಗೆ ಹೇಳಲಿ?"

"ಚೌಧರಿ, ಜನರಲ್ ಟಿಕ್ಕಾಖಾನರು ಏನು ಹೇಳುತಿದ್ದಾರೆ ಗೊತ್ತೆ?" ಕ್ಯಾಪ್ಟನ್ ಹುಸೇನ್ ಬಾಯ್ದೆರೆದ: "ಬಂಗಾಲ ಬೇಕಾದರೆ ಖಬರಸ್ತಾನವಾಗಿ ಹೋಗಲಿ; ನಾವು ನಾಡನ್ನು ಬಿಟ್ಟುಕೊಡಲಾರೆವೆಂದು!"

"ಈ ಜನ ಆ ಮುಜೀಬರ್ ಇಂಡಿಯಾದ ಕೈವಾರಿ ಎಂಬುದನ್ನು ಗ್ರಹಿಸಲಾಗದಷ್ಟು ದಡ್ಡರು" ಮೇಜರ್ ಅಸದ್‌ಖಾನ ಸಿಗಾರಿನ ಹೊಗೆಬಿಡುತ್ತ ಹೇಳಿದ: "ಆ ಧರ್ಮಲಂಡನಿಗೆ ವಂಗಬಂಧು ಎಂಬ ಬಿರುದು ಕೊಟ್ಟು ನೆತ್ತಿಯ ಮೇಲೆ ಕುಳ್ಳಿರಿಸಿದ್ದಾರೆ."

ಚೌಧರಿಯ ನೈರಕ್ತ ಕುದಿಯಿತು, ಆದರೆ ಬಡವನ ಕೋಪ ದವಡೆಗೆ ಮಾರಿ ಎಂಬುದನ್ನು ಅವರು ಬಲ್ಲರು. ಸದ್ದಿಲ್ಲದೆ ಉಕ್ಕಿಬಂದ ಮುನಿಸನ್ನು ಅವರು ನುಂಗಿಕೊಳ್ಳಬೇಕಾಯಿತು.

ಆಯೇಷ ಟ್ರೇಯಲ್ಲಿ ಮೂರು ಕಪ್ಪು ಚಹಾ ತಂದಳು. ಅವಳ ಬೆನ್ನ ಹಿಂದೆ ಬಂದ ಖತೀಜ ಹಿಡಿದ ತಟ್ಟೆಯಲ್ಲಿ ಬಿಸ್ಕತ್ತುಗಳಿದ್ದವು. ಆ ಯುವತಿಯರು ತಾವು ತಂದ ಚಹಾಕಪ್ಪುಗಳನ್ನು, ಬಿಸ್ಕತ್ತುಗಳನ್ನು ಮೇಜಿನ ಮೇಲಿರಿಸಿದರು. ಮೇಜರ್ ಅಸದ್‌ಖಾನ ತನ್ನ ಕಣ್ಣುಗಳಿಂದ ಅವರ ಮೈಯನ್ನೊಮ್ಮೆ ಎಂಜಲಿಸಿ "ನೀವೆಲ್ಲ ಕಲಿತ ಹುಡುಗಿಯರು. ಶಿಷ್ಟಾಚಾರವನ್ನು ಸ್ವಲ್ಪ ಕಲಿಯಬೇಡವೆ?" ಎಂದು ಅಸಂತೋಷದ ಸ್ವರ ಎತ್ತಿದ.

"ಮೇಜರ್ ಸಾಹೇಬ, ಆದ ಅಪಚಾರವೇನು?" ದಿಗಿಲುಗೊಂಡ ಸ್ವರದಲ್ಲಿ ಕೇಳಿದರು ಚೌಧರಿ.

"ಚಹಾ ಕಪ್ಪನ್ನು ಎತ್ತಿ ಕೈಗೆ ಕೊಡಬೇಡವೆ?" ಕ್ಯಾಪ್ಟನ್ ಹುಸೇನ ಮಾರುಲಿದ: "ಚಹಾಕಪ್ಪನ್ನು ಮೇಜಿನ ಮೇಲೆ ಬಡಿಯುವುದೆಂದರೆ ಅದೊಂದು ದೊಡ್ಡ ಅಪಚಾರ."

ಆಯೇಷಳ ತುಟಿಗಳು ನಡುಗಿದವು. ಮೊಗ ಕೆಂಪಡರಿತು. ಅವರು ಕಣ್ಣೆತ್ತಿ ತಂದೆಯನ್ನು ನೋಡಿದಳು.

"ಆಯೇಷ, ಏಕೆ ಅಂಜುತ್ತಿ?" ಚೌಧರಿ ಮಗಳಿಗೆ ಹೇಳಿದರು: "ಮೇಜರಸಾಹೇಬರು ಹುಲಿಯೇನೂ ಅಲ್ಲ. ಅವರು ವಿಶ್ವಾಸವಿಟ್ಟು ನಮ್ಮ ಮನೆಗೆ ಬಂದಿದ್ದಾರೆ. ಅತಿಥಿಗಳನ್ನು ಆದರಿಸಿ ಉಪಚರಿಸುವುದು ನಮ್ಮ ಕರ್ತವ್ಯ"

ಆಯೇಷ ಪಿತೃವಚನವನ್ನು ಮೀರಲಾರದೆ ಕಂಪಿಸುವ ಹಸ್ತದಿಂದ ಚಹಾಕಪ್ಪುಗಳನ್ನೆತ್ತಿ ಮೇಜರ್ ಅಸದ್‌ಖಾನ ಮತ್ತು ಕ್ಯಾಪ್ಟನ್ ಹುಸೇನರಿಗೆ ಕೊಟ್ಟಳು. ತರುಣಿಯರು ಒಳಮನೆಗೆ ಹೋಗಲು ಅಣಿಯಾದಾಗ ಅಸದ್‌ಖಾನನ ಮೊಗದಲ್ಲಿ ಕ್ರೂರ ಹಾಸ್ಯವೊಂದು ಕಳೆಯಾಡಿತು. ಅವನು "ನೀವು ಬೆಕ್ಕನ್ನು ಕಂಡ ಗಿಳಿಗಳಂತೆ ಹಾರಿಹೋಗಬೇಡಿ. ನಾವು ಹುಡುಗಿಯರನ್ನು ಮಾತಾಡಿಸದೆ ಎಷ್ಟೋ ದಿನಗಳಾದವು!" ಎಂದು ಹೇಳಿದ.

ಖತೀಜಳಿಗೆ ಮೈಯಲ್ಲಿ ಮುಳ್ಳೆರಿದಂತಾಯಿತು. ಅವಳು ಕಣ್ಣೆತ್ತಿ ತಂದೆಯನ್ನು ನೋಡಿದಳು. ಅವರ ಹಣೆಯಲ್ಲಿ ಬೆವರಹನಿಗಳು ಮೂಡಿದವು. ಆಯೇಷ ಈ ಬಗೆಯಲ್ಲಿ ಮಾತಾಡುವುದು ಯಾವ ಶಿಷ್ಟಾಚಾರ. ಎಂದು ತನ್ನಲ್ಲೇ ಹೇಳಿಕೊಂಡಳು.

ಮೇಜರ್ ಅಸದ್‌ಖಾನ ತಟ್ಟೆಯಿಂದ ಒಂದು ಬಿಸ್ಕತ್ತು ಎತ್ತಿ ಬಾಯಿಗೆ ಹಾಕಿಕೊಂಡು ಒಂದು ಗುಟುಕು ಚಹಾ ಹೀರಿದ. ಆತನ ತೃಷ್ಣೆ ತುಂಬಿದ ಕಣ್ಣುಗಳು ಆಯೇಷಳ ರೂಪಶ್ರೀಯನ್ನು ಆರ್ತಿಯಿಂದ ಹೀರಿದವು.

"ಚೌಧರಿ, ನಿಮ್ಮ ಮಗನೆಲ್ಲಿ?" ಮೇಜರ್ ಅಸದ್‌ಖಾನ ಹಜಾರದೊಳಗೊಮ್ಮೆ ಕಣ್ಣೋಡಿಸಿದ: "ನಿನ್ನೆ ನಾವು ಬಂದಾಗಲೂ ಅವನು ಮನೆಯಲ್ಲಿ ಇರಲಿಲ್ಲ."

"ಎಲ್ಲಿಯೊ ಆಡುವುದಕ್ಕೊ, ಮೀನು ಹಿಡಿಯುವುದಕ್ಕೊ ಹೋಗಿದ್ದಾನೆ" ಚೌಧರಿ ಮಾರ್ನುಡಿದರು: "ಅವನಿಗೆ ಓದು ತಪ್ಪಿ ಎರಡು ತಿಂಗಳಾಯಿತು."

"ನೀವು ಆತನನ್ನೊಬ್ಬ ಬೇಹುಗಾರನನ್ನಾಗಿ ಮಾಡಲಿಲ್ಲವಷ್ಟೆ?" ಕ್ಯಾಪ್ಟನ್ ಹುಸೇನ ತುಟಿಯ ಮೇಲಿಂದ ಚಹಾ ಕಪ್ಪನ್ನು ತೆಗೆದು ಕೇಳಿದ.

"ಬೇಹುಗಾರ!" ಚೌಧರಿಯ ಕೊರಳಿಂದ ವಿಸ್ಮಯ ಉದ್ಗಾರ ಸೂಸಿತು.

"ಹೌದು." ಮೇಜರ್ ಅಸದ್‌ಖಾನ ಸ್ವರ ಪೆತ್ತಿದ: "ನಮ್ಮ ಸುದ್ದಿಯನ್ನು ಬಂಡುಗಾರರಿಗೆ ತಲುಪಿಸುವ ಬೇಹುಗಾರ!"

"ಇಲ್ಲ; ಇಲ್ಲ." ಬೆದರಿದ ಚೌಧರಿ ತಲೆಯಾಡಿಸಿದರು.

"ಯಾವ ಹುತ್ತದಲ್ಲಿ ಯಾವ ಹಾವಿದೆಯೊ?" ಕ್ಯಾಪ್ಟನ್ ಹುಸೇನ ಉದ್ಗಾರವೆತ್ತಿದ. ಆ ಧ್ವನಿಯಲ್ಲಿ ಹುದುಗಿದ ವ್ಯಂಗ್ಯವನ್ನು ಚೌಧರಿ ಗುರುತಿಸದೆ ಇರಲಿಲ್ಲ.

ಚಹಪಾನ ಮುಗಿಯಿತು. ಅನಾಮಂತ್ರಿತ ಅತಿಥಿಗಳು ಹೊರಡಲು ಅಣಿಯಾದರು. ಕ್ಯಾಪ್ಟನ್ ಹುಸೇನ ಆಸನದಿಂದ ಎದ್ದು "ಚೌಧರಿ, ನೀವಿನ್ನು ಹೊರಡಿ." ಎಂದು ಕಿರುನಗೆಯನ್ನು ಬೀರುತ್ತ ಉಸುರಿದ.

"ಎಲ್ಲಿಗೆ?" ವಿಸ್ಮಯ ವಿಹ್ವಲಸ್ವರದಲ್ಲಿ ಚೌಧರಿ ಪ್ರಶ್ನಿಸಿದರು.

"ನಮ್ಮ ಸೇನಾಶಿಬಿರಕ್ಕೆ."

"ಸಂಗಡ ನಿಮ್ಮ ಮಗಳಂದಿರನ್ನೂ ಕರೆದುಕೊಳ್ಳಿ." ಮೇಜರ್ ಅಸದ್‌ಖಾನ ಆಜ್ಞಾಪಿಸಿದ.

"ನಾವೇಕೆ ಸೇನಾಶಿಬಿರಕ್ಕೆ ಬರಬೇಕು?" ಮೇಜರನ ಮಾತಿನ ಹೊಲಬಾಗದೆ ಚೌಧರಿ ಆತನ ಮೋರೆ ನೋಡಿದರು.

"ಸೇನಾಶಿಬಿರವನ್ನು ನೋಡಲು ಮತ್ತು ನಾವು ಬಂಡುಗಾರರಿಂದ ನಿಮ್ಮನ್ನು ಹೇಗೆ ಕಾಪಾಡುತ್ತಿದ್ದೇವೆ ಎಂಬುದನ್ನು ತಿಳಿಯಲು. ನಮ್ಮ ದಂಡಿನ ಪಾಳೆಯವನ್ನು ನೋಡಿದ ಮೇಲೆ ನಿಮ್ಮ ಮಗಳಂದಿರ ಮೈಚಳಿ ಬಿಟ್ಟೀತು."

ಮೇಜರನ ಅಜ್ಞೆಯನ್ನು ಕೇಳಿದಾಗ, ಆಯೇಷ ಮತ್ತು ಖತೀಜ ಗಡ-ಗಡನೆ ಕಂಪಿಸಿದರು.

"ಮೇಜರ್ ಸಾಹೇಬ, ಮಾಫ್ ಮಾಡಬೇಕು." ಚೌಧರಿ ದೀನಸ್ವರದಲ್ಲಿ ಅರಿಕೆ ಮಾಡಿದರು: "ಹೆಣ್ಣುಮಕ್ಕಳು ಸೇನಾಶಿಬಿರಕ್ಕೆ ಹೋಗುವುದೆಂದರೆ......"

"ಏಕೆ ಹೋಗಬಾರದು? ಕೆರಳಿದ ದನಿಯಲ್ಲಿ ಅಸದ್‌ಖಾನ ಪಡಿನುಡಿದ: "ಬಂಡುಗಾರರ ತಂಡದಲ್ಲಿ ಹೆಣ್ಣುಮಕ್ಕಳು ಗಂಡುಭೀರುಗಳಾಗಿ ಕೈಯಲ್ಲಿ ಬಂದೂಕು ಹಿಡಿಯಬಹುದಂತೆ! ನಮ್ಮ ಸೇನಾಶಿಬಿರದಲ್ಲಿ ಕಾಲಿಟ್ಟರೆ ಹೆಣ್ಣುಮಕ್ಕಳ ಮರ್ಯಾದೆ ಹಾರಿಹೋಗುವುದೆ?"

ಅನಿತರಲ್ಲಿ ಹಜಾರದೊಳಗೆ ನೂರ್ ಅಮೀನ್ ಬಂದ. ಅವನು ಮೇಜರ್‌ಸಾಹೇಬನಿಗೆ ವಂದಿಸಿ "ಚೌಧರಿಯ ಮನೆ ಮುಂದೆ ಸಾಹೇಬರ ಜೀಪು ನಿಂತುದು ಕಾಣಿಸಿತು. ನನ್ನ ವಂದನೆಗಳನ್ನು ಸಲ್ಲಿಸಿ ಮಾತಾಡಿಸಿ ಹೋಗೋಣವೆಂದು ಬಂದೆ." ಎಂದು ನುಡಿದ.

"ಮೇಜರ್‌ಸಾಹೇಬ, ಬೇಕಾದರೆ ನೀವು ನನ್ನನ್ನು ಎಳೆದುಕೊಂಡು ಹೋಗಿ." ಕೋಪ ಮಿಶ್ರಿತ ಸ್ವರದಲ್ಲಿ ಚೌಧರಿ ಉಲಿದರು. "ಆದರೆ ಮಗಳಂದಿರನ್ನು ಮಾತ್ರ ಕಳುಹಿಸಿಕೊಡಲಾರೆ."

"ಹಮೀದ್, ಏನು ಸಮಾಚಾರ?" ನೂರ್ ಅಮೀನ ತಿಳಿಯದವನಂತೆ ನಡುವೆ ಬಾಯಿಹಾಕಿ ಪ್ರಶ್ನಿಸಿದ. ಚೌಧರಿ ನಾಲ್ಕುಮಾತುಗಳಲ್ಲಿ ಮೇಜರ್ ಮಗಳಂದಿರನ್ನು ಸೇನಾಶಿಬಿರಕ್ಕೆ ಕರೆದೊಯ್ಯಲು ಒತ್ತಾಯಪಡಿಸಿದ ಸಂಗತಿಯನ್ನು ಅರುಹಿದರು

"ಹಮೀದ್, ಇದಕ್ಕೇಕೆ ಇಷ್ಟೊಂದು ಕೋಪ, ಇಷ್ಟೊಂದು ಗಾಬರಿ?" ನೂರ್ ಅಮೀನ್ ಮುಗುಳ್ನಗೆ ಬೀರಿದ.

"ಹೆಣ್ಣುಮಕ್ಕಳನ್ನು ದಂಡಿನಪಾಳಯಕ್ಕೆ ಕರೆದೊಯ್ಯುವುದೆಂದರೆ?"

"ಏಕಾಗಬಾರದು?" ನೂರ್ ಅಮೀನ್ ಹೇಳಿದ: "ನಾವು ನಾಟಕ, ಸಿನೆಮಾ ಮತ್ತು ಜಾತ್ರೆಗಳಿಗೆ ಹೆಣ್ಣುಮಕ್ಕಳನ್ನು ಕರೆದೊಯ್ಯುವುದಿಲ್ಲವೆ? ನೀನು ಮೇಜರ್‌ಸಾಹೇಬರಲ್ಲಿ ಅಷ್ಟೊಂದು ವಿಶ್ವಾಸ ಇರಿಸದಿದ್ದರೆ ಹೇಗಾದೀತು?"

"ನೂರ್ ಅಮೀನ್, ನೀವು ಚೌಧರಿಗೆ ಸ್ವಲ್ಪ ಬುದ್ಧಿ ಹೇಳಿ" ಅಸದ್‌ಖಾನ ನುಡಿದ: "ನಾವು

# ಸ್ವರ್ಗದಲಿ ಮಂತ್ರಿ



ಭಗವಂತ ಒಮ್ಮೆ ಧರೆಗಿಳಿದು ಬಂದೆ
ರಾಜಕಾರಣಿಗೊಂದು, ವರ ಕೇಳು ಎಂದ
ಥಟ್ಟನೆ ಕೇಳಿದನು ಈ ಮಹಾಮಂತ್ರಿ
ಸ್ವರ್ಗದಲ್ಲಿಯೂ ನಾನು ಆಗುವೆನು
ಮಂತ್ರಿ.

ಎಂ. ಗೋವಿಂದ

ಚೌಧರಿಯಲ್ಲಿರಿಸಿದ ವಿಶ್ವಾಸದ ಗುರುತಾಗಿ ಅವರನ್ನೂ ಅವರ ಮಗಳಂದಿರನ್ನೂ ಕರೆದುಕೊಂಡು ಹೋಗುತ್ತಿದ್ದೇವೆ; ಅಲ್ಲದೆ ಅವರಿಗೆ ಕೇಡುಮಾಡಲಿಕ್ಕೂ ಅಲ್ಲ. ಅವರ ಕೂದಲು ಕೊಂಕದಂತೆ ನೋಡಿಕೊಳ್ಳುತ್ತೇವೆ."

"ಹಮೀದ್, ಮೇಜರ್ ಸಾಹೇಬರು ಇಜ್ಜತ್ತಿನ ಮನುಷ್ಯರು." ನೂರ್‌ಅಮೀನ್ ಉಪದೇಶಿಸಿದ: "ಅವರೇ ನಿನಗೆ ಭರವಸೆ ಕೊಟ್ಟಿದ್ದಾರೆ. ಅವರ ಆಜ್ಞೆಯನ್ನು ನೆತ್ತಿಯ ಮೇಲೆ ಹೊರುವುದು ಲೇಸು ಇಲ್ಲದಿದ್ದರೆ ಅವರ ಕೋಪ ನಿನ್ನ ಮನೆಯನ್ನು ಸುಟ್ಟು ಉರುಹೀತು!"

ಚೌಧರಿಯ ಮನಸ್ಸು ಆಲೋಚಿಸಿತು: "ಮಗಳಂದಿರನ್ನು ಕರೆದುಕೊಂಡು ಬರುವುದಿಲ್ಲವೆಂದರೆ ತನ್ನ ಮನೆಗೆ ತಾನೇ ಕಿಚ್ಚಿಕ್ಕಿದಂತೆ. ಮೇಜರ್ ಸಾಹೇಬರು ಕೂದಲು ಕೊಂಕದಂತೆ ನೋಡಿಕೊಳ್ಳುವ ಭರವಸೆಯಿತ್ತಿದ್ದಾರೆ. ಅವರು ವಚನಭಂಗಮಾಡಲಾರರು. ದಂಡಾಳುಗಳ ಒಡನಾಟವೆಂದರೆ ಹುಲಿಯೊಡನೆ ಸರಸವಾಡಿದ ಹಾಗೆ."

"ಚೌಧರಿ, ಏನು ಹೇಳುವಿರಿ?" ಮೇಜರ್ ಅಸದ್‌ಖಾನ ಅಸಹನೆಯ ಸ್ವರದಲ್ಲಿ ನುಡಿದ: "ನಮಗೆ ತಡವಾಗುವುದು. ನಮ್ಮ ಆಜ್ಞೆಯನ್ನು ಮೀರಿದರೆ, ನಮ್ಮ ಅಭಯಹಸ್ತದ ನೆರಳು ನಿಮಗೆ ದೊರೆಯಲಾರದು."

"ಮೇಜರ್ ಸಾಹೇಬ, ನಿಮ್ಮನ್ನು ಪೂರ್ಣವಾಗಿ ನಂಬಿದ್ದೇನೆ." ಚೌಧರಿ ನಮ್ರಸ್ವರದಲ್ಲಿ ಬಿನ್ನಯಿಸಿದರು! "ಹಾಲಿನಲ್ಲಿ ಅದ್ದುವವರೂ ನೀವೆ; ನೀರಿನಲ್ಲಿ ಅದ್ದುವವರೂ ನೀವೆ."

"ಚೌಧರಿಯಲ್ಲಿ ಅಷ್ಟಾದರೂ ವಿವೇಕವಿದೆಯಲ್ಲ." ಕ್ಯಾಪ್ಟನ್ ಹುಸೇನನ ನಗು ಅವರನ್ನು ಹಂಗಿಸಿತು.

"ಮಕ್ಕಳೆ; ನೀವು ಹೆದರಬೇಡಿ." ನೂರ್ ಅಮೀನ್ ಆಯೇಷ ಮತ್ತು ಖತೀಜರನ್ನು ಸಮೀಪಿಸಿ ಧೈರ್ಯನೀಡುವ ದನಿಯಲ್ಲಿ ಹೇಳಿದ: "ಮೇಜರ್ ಸಾಹೇಬರೆಂದರೆ ದಿಲ್‌ದಾರ್ ಮನುಷ್ಯರು. ಅವರು ತಮ್ಮ ಪಾಳಯವನ್ನು ನಿಮಗೆ ತೋರಿಸಿ ನಿಮ್ಮನ್ನು ಸುರಕ್ಷಿತವಾಗಿ ಕಳುಹಿಸಿ ಕೊಡುವರು. ಇನ್ನೊಂದು ತಾಸಿನಲ್ಲಿ ನೀವು ಮನೆಯನ್ನು ಮರಳಿ ಸೇರಿ, ನೀವು ತಾಳಿದ ಭೀತಿಯನ್ನು ನೆನೆದು ನಗುವಿರಿ."

ಚೌಧರಿ, "ಆಯೇಷ, ಖತೀಜ, ನೀವಿನ್ನು ಹೊರಡಿ. ನಾವು ಮೇಜರ್ ಸಾಹೇಬರ ಆಜ್ಞೆಯನ್ನು ಪಾಲಿಸೋಣ." ಎಂದು ತಗ್ಗಿದ ದನಿಯಲ್ಲಿ ಅಂದರು.

ಆಯೇಷ ಮತ್ತು ಖತೀಜ ತಂದೆ ತಮ್ಮ ಸಂಗಡವಿರುವದರಿಂದ ಅನ್ಯಾಯ ಒದಗಲಾರದೆಂದು ಭಾವಿಸಿದರು. ಆಯೇಷ ಕಣ್ಣೆತ್ತಿ ಮೇಜರ್ ಅಸದ್‌ಖಾನನನ್ನು ನೋಡಿದಳು. ಅವಳಿಗೆ ಹುಲಿಯ ಮೋರೆ ನೆನಪಾಯಿತು. ತಾವು ಹುಲಿಯ ಗವಿಯನ್ನು ಹೊಗುತ್ತೇವೆ ಎಂಬ ಭೀತಿ ಅವಳಲ್ಲಿ ಅಂಕುರಿಸಿತು. ಅವಳು ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿದ ಬಾಳೆಯ ಗಿಡದಂತೆ ಕಂಪಿಸಿದಳು.

ರಸೂಲ್ ಅಲೆದಾಟವನ್ನು ಮುಗಿಸಿ ಮನೆಯೊಳಗೆ ಹೊಕ್ಕಾಗ ಅಕ್ಕಂದಿರ ಮಾತುಕತೆ ಕೇಳಿಸಲಿಲ್ಲ. ನೀರವತೆ ಮನೆಯೊಳಗೆ ಮುಸುಕಿತ್ತು. ಆ ನೀರವತೆಯ ಗವಿಯ ಆಳದಿಂದ ಗದ್ಗದಿತ ಸ್ವರವೊಂದು ಎದ್ದು ಬರುತಿತ್ತು. ಅವನಿಗೆ ಆಶ್ಚರ್ಯವಾಯಿತು. ಅವನು ಹಜಾರದೊಳಗೆ ಕಾಲಿಕ್ಕಿ "ದೀದಿ, ದೀದಿ" ಎಂದು ಅಕ್ಕನನ್ನು ಕೂಗಿದ. ಆದರೆ ಆಯೇಷ ಉತ್ತರಕೊಡಲಿಲ್ಲ. ಬಂದೂಕವನ್ನೆತ್ತಿ ನರಿಯೊಂದನ್ನು ಕೊಂದೆನೆಂಬ ಸಾಹಸದ ವಾರ್ತೆಯನ್ನು ಹೇಳಬೇಕೆಂಬ ಉತ್ಸಾಹ ಆತನದು.

ಆದರೆ ಅಕ್ಕ ಆಯೇಷ ಪಡಿನುಡಿಗೊಡಲಿಲ್ಲ. ಒಳಮನೆಗೆ ಹೆಜ್ಜೆ ಹಾಕಿದ. ಅಲ್ಲಿಯೂ ಅಕ್ಕಂದಿರು ಅವನ ದೃಷ್ಟಿಗೆ ಬೀಳಲಿಲ್ಲ. ಅವನು ಊಟದ ಮನೆಯನ್ನು ದಾಟಿ ಅಡುಗೆಕೋಣೆಗೆ ಹೋದ. ಅಲ್ಲಿ ತಾಯಿ ಒಲೆಯ ಮುಂದೆ ಕುಳಿತು ಕಣ್ಣೀರು ಹಾಕುತ್ತಿದ್ದಳು. ರಸೂಲ್ ಆಕೆಯನ್ನು ಸಮೀಪಿಸಿ "ಅಮ್ಮ, ದೀದಿಯರೆಲ್ಲಿ?" ಎಂದು ಪ್ರಶ್ನಿಸಿದ.

"ಬೇಟಾ, ನಿನ್ನ ತಂದೆಯನ್ನೂ, ಅಕ್ಕಂದಿರನ್ನೂ ಕರೆದೊಯ್ದರು." ತಾಯಿ ಬಿಕ್ಕುದನಿಯಲ್ಲಿ ಉತ್ತರಿಸಿದಳು.

"ಯಾರು?"

"ನಿನ್ನೆ ನಮ್ಮ ಮನೆಗೆ ಬಿದ್ರೂಟಕ್ಕೆ ಬಂದಿದ್ದ ಮೇಜರ್ ಸಾಹೇಬರು."

"ಎಲ್ಲಿಗೆ?"

"ಸೇನಾ ಶಿಬಿರಕ್ಕೆ"

"ದಾದ ಒಪ್ಪಿಕೊಂಡನೆ?"

"ಬೇರೇನು ಮಾಡುತ್ತಾರೆ ಬೇಟಾ? ನೂರ್ ಅಮೀನ್ ಮಾವ ಮೇಜರ್ ಸಾಹೇಬರ ಮಾತು ಕೇಳುವುದು ಒಳ್ಳೆಯದೆಂದು ಹೇಳಿದ. ಇಲ್ಲದಿದ್ದರೆ ಗಂಡಾಂತರವಂತೆ?"

"ಹುಲಿಯ ಗವಿಯೊಳಗೆ ನುಗ್ಗಿದವರು ಮರಳಿ ಬರುತಾರೇನವ್ವ?"

"ನನಗೆ ತಿಳಿಯದು ಬೇಟ."

"ಹುಲಿಗವಿಯೊಳಗೆ ಹೊಕ್ಕವರೆಲ್ಲ ಮರಳಿ ಬರುವುದಿಲ್ಲ. ಹುಲಿಯನ್ನು ಸೀಳಿ ಹಾಕುವ ತಾಖತ್ತು ಉಳ್ಳವರು ಮಾತ್ರ ಹೊರಬರಬಲ್ಲರು,"

ತಾಯಿ ಪ್ರತಿ ಹೇಳಲಿಲ್ಲ. ರಸೂಲ್ ಒಂದು ಕ್ಷಣ ದೆವ್ವ ಹಿಡಿದವನಂತೆ ಆಲೋಚಿಸುತ್ತ ನಿಂತ. ಅನಂತರ ಮೈ ಮೇಲೆ ದೆವ್ವದ ಆವೇಶ ಬಂದವನಂತೆ ದಡದಡನೆ ಹೆಜ್ಜೆ ಹಾಕುತ್ತ ಹೊರಗೆ ಓಡಿದ. ಗಾಬರಿಗೊಂಡ ತಾಯಿ ಅವನನ್ನು ಅನುಸರಿಸಿಕೊಂಡು ಬಂದು "ಬೇಟಾ, ನೀನೆಲ್ಲಿಗೆ ಹೋಗುವುದು?" ಎಂದು ಕೇಳಿದಳು.

"ದಾದ ಮತ್ತು ದೀದಿಯರನ್ನು ಬಿಡಿಸಿ ತರುವುದಕ್ಕೆ!" ಎಂದು ರಸೂಲ್ ಉದ್ಗಾರವೆತ್ತಿ ಹೊರಗೆ ಧಾವಿಸಿದ.

"ಕೈಯಲ್ಲಿ ಆಯುಧವಿಲ್ಲದ ಆ ಪುಟ್ಟ ಹುಡುಗ ಏನು ಮಾಡಿಯಾನು?" ಎಂದು ಅನುಕಂಪದ ಉದ್ಗಾರವನ್ನೆತ್ತಿತು. ಕಂಗುಮರ.

"ಅಕ್ಕಂದಿರ ಮೇಲೆ ಆವನಿಗೆಷ್ಟು ಪ್ರೀತಿ" ಎಂದಿತು ಮಲ್ಲಿಗೆ ಬಳ್ಳಿ.

"ಹುಚ್ಚು ಹುಡುಗ!" ಎಂದುಲಿದಿತು ಮಾವಿನ ಮರ.

"ಈಗಲೆ ನಿಮ್ಮ ಅಭಿಪ್ರಾಯ ಕೊಡಬೇಡಿ." ಬೆಳ್ನೆಲರು ಹೇಳಿತು; "ಕತೆಯನ್ನು ಪೂರ್ತಿ ಕೇಳಿಯಾದ ಮೇಲೆ ನಿಮ್ಮ ಅಭಿಪ್ರಾಯ ಹೇಳಿ."

"ಕತೆ ಕುತೂಹಲಕಾರಿಯಾಗಿದೆ. ಮುಂದುವರಿಸು." ಎಂದು ತೆಂಗಿನಮರ ತಲೆಯಾಡಿಸಿತು.

× × ×

"ರಸೂಲ್ ಅಡವಿಯಲ್ಲಿ - ಗೆರಿಲ್ಲ ತಂಡದ ಗೋಪ್ಯ ಪಾಳಯವಿದ್ದ ತಾಣಕ್ಕೆ ಏದುಸಿರು ಬಿಡುತ್ತ ಬಂದ. ಓಡಿ ಬರುವ ಆತುರದಲ್ಲಿ ಎಚ್ಚರಿಕೆ ವಹಿಸದುದರಿಂದ ಅವನು ತೊಟ್ಟ ಬುಷ್‌ಕೋಟು ಅಲ್ಲಿ-ಇಲ್ಲಿ ಮುಳ್ಳು ತಗುಲಿ ಹರಿದುಹೋಯಿತು. ಮುಳ್ಳುಗಳು ಗೀರಿ ಕಾಲುಗಳಲ್ಲಿ ಗಾಯಗಳಾಗಿದ್ದವು. ಅವನ ಮುಖದಿಂದ ಸ್ವೇದಧಾರೆ ಅವಿರತವಾಗಿ ಸುರಿಯುತ್ತಿತ್ತು. ಕಣ್ಣುಗಳು ಕೆಂಪಾಗಿದ್ದವು. ತುಟಿಗಳೆರಡೂ ನಡುಗುತ್ತಿದ್ದವು. ಒಂದು ತಾಸಿನ ಹಿಂದೆ ಹೋಗಿದ್ದ ರಸೂಲ್ ಮರಳಿ ಬಂದುದನು ಕಂಡು ಕಾವಲುಗಾರ ಗೆರಿಲ್ಲ ವೀರನಿಗೆ ಆಶ್ಚರ್ಯವಾಯಿತು. ಅವನು "ರಸೂಲ್, ಏನು ಮರಳಿ ಬಂದೆ?" ಎಂದು ಉತ್ಸುಕತೆಯ ದನಿಯಲ್ಲಿ ಪ್ರಶ್ನಿಸಿದ.

"ಆಲಿ ಕಮಾಲ್ ದಾದ ಇಲ್ಲವೆ?" ಏದುಸಿರು ಬಿಡುತ್ತ ಕೇಳಿದ ರಸೂಲ್.

"ಇಲ್ಲ. ಅವರು ಕಾರ್ಯಾಚರಣೆಗೆ ಹೋಗಿದ್ದಾರೆ." ಕಾವಲುಗಾರ ಆಲಿ ಹೇಳಿದ: "ಏಕೆ ಬಂದೆ? ವಿಶೇಷ ಸುದ್ದಿ ಏನಾದರೂ ಇದೆಯೆ?"

"ಇಲ್ಲ." ರಸೂಲ್ ತುಸು ಹೊತ್ತು ಆಲೋಚಿಸುತ್ತಾ ನಿಂತ. ಆ ಮೇಲೆ ಅವನು: "ಆಲಿ, ಸ್ಟೆನ್ ಗನ್ನಿನಿಂದ ಗುಂಡು ಹೊಡೆಯುವ ಅಭ್ಯಾಸ ಮಾಡಬೇಕೆಂದೆನಿಸಿತು. ಹಾಗೆಯೇ ಅರ್ಧದಾರಿಯಿಂದ ಬಂದೆ. ಆ ಸ್ಟೆನ್‌ಗನ್ನನ್ನೊಮ್ಮೆ ಕೊಡುವಿಯಾ?" ಎಂದು ಕೇಳಿದ.

ಗೆರಿಲ್ಲದಳದ ನಾಯಕ ಕಮಾಲನಿದ್ದಾಗ ಅವನು ರಸೂಲನ ಕೈಗೆ ಆ ಕೈದುವನ್ನು ಕೊಡುತಿದ್ದ. ಅದನ್ನು ಉಪಯೋಗಿಸುವ ವಿಧಾನವನ್ನು ಕಲಿಸಿಕೊಡುತಿದ್ದ. ಆದುದರಿಂದ ಆಲಿ ಹೆಚ್ಚು ಆಲೋಚಿಸದೆ ಯಂತ್ರದ ಕೋವಿ ತೆಗೆದು ರಸೂಲನ ಕೈಗೆ ನೀಡಿದ.

ರಸೂಲ ಎರಡೂ ಕೈಗಳಿಂದ ಆ ಕೋವಿಯನ್ನೆತ್ತಿ ಹೆಮ್ಮೆ ಮತ್ತು ಹರ್ಷ ತುಂಬಿದ ಕಣ್ಣುಗಳಿಂದ ನೋಡುತ್ತ ತನ್ನ ಎದೆಗೆ ಅಪ್ಪಿಕೊಂಡ. ಅವನು ಒಂದು ಕ್ಷಣ ಆಲೋಚಿಸುತ್ತ ನಿಂತು, "ಆಲಿ, ಕಮಾಲ್‌ದಾದ ಬಂದಾಗ ಹೇಳು. ಈ ಇರುಳು ನಾ ಬಂದು ಆತನನ್ನು ಕಾಣುತ್ತೇನೆ" ಎಂದು ಅಂದು ಅಲ್ಲಿ ನಿಲ್ಲದೆ ಸರಸರನೆ ಹೆಜ್ಜೆಹಾಕಿದ.

"ರಸೂಲ್, ರಸೂಲ್ ಎಲ್ಲಿಗೆ ಹೋಗುತ್ತಿ?" ವಿಸ್ಮಯಗೊಂಡ ಆಲಿ ಅವನನ್ನು ತಡೆದು ನಿಲ್ಲಿಸಲು ಪ್ರಯತ್ನಿಸಿದ. ಸ್ಟೆನ್‌ಗನ್ನು ಅಮೂಲ್ಯವಾದ ಕೈದು. ರಸೂಲ್ ಅದನ್ನು ಒಯ್ದು ಹಾಳು ಮಾಡಿದನೆಂದರೆ ದಳ ನಾಯಕ ಕಮಾಲ್ ತನ್ನನ್ನು ತರಾಟೆಗೆ ತೆಗೆದುಕೊಳ್ಳದಿರಲಾರನು ಎಂಬ ಭೀತಿ ಅವನ ಎದೆಯಲ್ಲಿ ಅಂಕುರಿಸಿತು. ಅವನು, "ರಸೂಲ್, ನೀನು ಆ ಸ್ಟೆನ್ ಗನ್ನು ಕೊಟ್ಟುಹೋಗು" ಎಂದು ಕೂಗಿದ.

"ಇಲ್ಲ ಆಲಿ." ಹತ್ತೆಂಟು ಮಾರು ಸರಿದ ರಸೂಲ್ ಹೇಳಿದ: "ನೀನು ಭಯಪಡಬೇಡ. ಈ ಕೈದುವನ್ನು ಸುರಕ್ಷಿತವಾಗಿ ತಂದೊಪ್ಪಿಸುವೆನು. ನೀನು ಕಮಾಲ್ ದಾದನಿಗೆ ಹೇಳು: ರಸೂಲ್, ಮೇಜರ್ ಅಸದ್ ಖಾನನನ್ನು ಗುಂಡಿಕ್ಕಿ ಕೊಲ್ಲಲು ಹೋದನೆಂದು."

ರಸೂಲ್ ಊರೊಳಗೆ ಬಂದಾಗ ಕತ್ತಲು ಕವಿದಿತ್ತು. ಬೀದಿಯಲ್ಲಿ ದೀಪಗಳಿರಲಿಲ್ಲ. ಮನೆ ಬಾಗಿಲುಗಳೆಲ್ಲಾ ಮುಚ್ಚಿದ್ದವು. ಯಾವ ಮನೆಯಲ್ಲೂ ದೀಪದ ಬೆಳಕು ಕಾಣಿಸಲಿಲ್ಲ. ಊರಲ್ಲಿ ಲಷ್ಕರಿ ಆಡಳಿತ ಆರಂಭವಾದ ಮೇಲೆ ಜನರು ರಾತ್ರಿ ಮನೆಯಿಂದ ಹೊರಗೆ ಬರಲು ಧೈರ್ಯಪಡುತ್ತಿರಲಿಲ್ಲ.

ಕೃಷ್ಣಪಕ್ಷದ ಪಂಚಮಿಯ ರಾತ್ರಿಯದು. ಕತ್ತಲು ರಸೂಲನ ನೆರವಿಗೆ ಬಂತು. ಅವನು ಬೀದಿಯಲ್ಲಿ ನಡೆಯದೆ ಚರಂಡಿಗಿಳಿದು ಬೆನ್ನು ಬಾಗಿಸಿ ಮೆಲ್ಲನೆ ನಡೆದ. ಬೀದಿಯಲ್ಲಿ ಅಲೆಯುವ ಗಸ್ತಿನ ದಂಡಾಳುಗಳ ಬೂಟಿನ ಸಪ್ಪಳ ಕೇಳಿಸಿದಾಗ ಅವನು ಚರಂಡಿಯೊಳಗೆ ಬೆನ್ನು ಮೇಲಾಗಿ ಮಲಗಿ ಸದ್ದು ಮಾಡದೆ ಉಸಿರು ಬಿಗಿ ಹಿಡಿದ. ಹೆಜ್ಜೆಗಳ ಸಪ್ಪಳ ಅಳಿದಾಗ ಅವನು ಮುಂದೆ ಹೆಜ್ಜೆಯಿಟ್ಟ.

ಅನತಿ ದೂರದಲ್ಲಿರುವ ಮಾಧ್ಯಮಿಕ ಶಾಲೆಯೆ ಸೈನಿಕ ಶಿಬಿರ. ರಸೂಲ್ ಹತ್ತೆಂಟು ನಿಮಿಷಗಳಲ್ಲಿ ಆ ಎಡೆಯನ್ನು ಸೇರಿದ. ಶಾಲೆಯ ಮುಂದೆ ಕಿಚ್ಚನ್ನುರಿಸಿ ಕಾವಲಿನ ಭಟರು ಹರಟುತ್ತಿದ್ದರು. ಶಾಲೆಯ ಆವರಣವನ್ನು ದಾಟಿ ಒಬ್ಬ ವ್ಯಕ್ತಿ ಹೊರಬರುವುದು ರಸೂಲನಿಗೆ ಕಾಣಿಸಿತು. ರಸೂಲ್ ಚರಂಡಿಗೆ ಜಿಗಿದು ಹುಗಿದುಕೊಳ್ಳಬೇಕೆಂದು ಆಲೋಚಿಸುವಷ್ಟರಲ್ಲಿ ಆ ವ್ಯಕ್ತಿ ಕಂಪಿತಸ್ವರದಲ್ಲಿ "ಯಾರೆ"ಂದು ಕೇಳಿತು.

ರಸೂಲನಿಗೆ ಆ ಕೊರಳುಲಿತದ ಗುರುತು ಹತ್ತಿತು. ಆತ ತಮ್ಮ ಮನೆಗೆ ಆಗಾಗ ಬರುತಿದ್ದ ನೂರ್ ಅಮೀನ್ ಮಾವ ಎಂಬುದು ಅವನಿಗೆ ತಿಳಿಯಿತು. ರಸೂಲ್ ಓಡಿಹೋಗುವ ಪ್ರಯತ್ನಮಾಡದೆ ತಗ್ಗಿದ ದನಿಯಲ್ಲಿ, "ನಾನು ಮಾವ-ರಸೂಲ್." ಎಂದು ಉತ್ತರಿಸಿದ.

"ನೀನಿಲ್ಲಿ? ಸೇನಾಶಿಬಿರದ ಬಳಿಯಲ್ಲಿ!" ನೂರ್ ಅಮೀನನ ಕೊರಳಿಂದ ಚಕಿತ ಸ್ವರವಲ್ಲಿ ಹೊರಟಿತು.

"ಹೌದು ಮಾವ." ರಸೂಲ್ ಹೇಳಿದ: "ಮೇಜರ್ ಸಾಹೇಬರು ದಾದನನ್ನೂ, ದೀದಿಯರನ್ನೂ ಪಾಳಯಕ್ಕೆ ಕರೆದುಕೊಂಡು ಬಂದರಂತೆ. ಅವರಿನ್ನೂ ಮನೆಗೆ ಬರಲಿಲ್ಲ. ನಾನು ಹುಡುಕಿಕೊಂಡು ಬಂದೆ."

"ಹೋಗಿ ನೋಡು." ನೂರ್ ಅಮೀನ್ ನಕ್ಕ. "ನಿನ್ನ ಅಕ್ಕಂದಿರಿಗೆ ಯಾವ ಕೇಡೂ ಬಂದಿಲ್ಲ. ಅವರಿಬ್ಬರೂ ಮೇಜರ್ ಸಾಹೇಬರ ಮತ್ತು ಕ್ಯಾಪ್ಟನ್ ಹುಸೇನರ ತೋಳತೆಕ್ಕೆಗೆ ಒಳಗಾಗಿ ಮೋಜುಮಾಡುತಿದ್ದಾರೆ."

ರಸೂಲನ ಕಿವಿಗಳಿಗೆ ಕಾದ ಸೀಸವಾದವು, ನೂರ್ ಅಮೀನನ ನುಡಿಗಳು. ತಾನು ಚರಂಡಿಯೊಳಗಿರಿಸಿದ ಸ್ಟೆನ್‌ಗನ್ನನ್ನೆತ್ತಿ, ನೂರ್‌ಅಮೀನನ ಎದೆಗೆ ಗುಂಡು ಹೊಡೆಯೋಣವೆಂದು ಆಲೋಚಿಸಿದ. 'ಹಾಗೆ ಮಾಡಿದರೆ ನೀನು ಬಂದ ಕೆಲಸ ಕೆಡುವುದು.' ಅವನಲ್ಲಿ ಉದಿಸಿಬಂದ ವಿವೇಕ ಎಚ್ಚರಿಸಿತು. ನೂರ್ ಅಮೀನನಿಗೆ ಕತ್ತಲಿನ ವೇಳೆ ಒಬ್ಬಂಟಿಗನಾಗಿ ಬೀದಿಯಲ್ಲಿ ಸಂಚರಿಸುವ ಧೈರ್ಯವಿಲ್ಲ. ಗೆರಿಲ್ಲ ದಳದವರು ತನ್ನನ್ನು ಗುಂಡಿಕ್ಕಿ ಕೊಂದಾರೆಂಬ ಭೀತಿ ಅವನನ್ನು ಕಾಡುತಿತ್ತು. ಆದುದರಿಂದ ಅವನು ಹೆಚ್ಚು ಮಾತಾಡದೆ ಸರಸರನೆ ಹೆಜ್ಜೆ ಹಾಕುತ್ತ ಕತ್ತಲಲ್ಲಿ ಕರಗಿ ಹೋದ.

ನೂರ್‌ಅಮೀನ್ ಕಣ್ಮರೆಯಾದೊಡನೆ ರಸೂಲ್ ತಾನು ಚರಂಡಿಗೆ ಒಗೆದಿದ್ದ ಸ್ಟೆನ್‌ಗನ್ನನ್ನೆತ್ತಿಕೊಂಡ. ಅನಿತರಲ್ಲಿ ಶಾಲೆಯೊಳಗಿಂದ ಕರುಣಾಪೂರಿತ ಆಕ್ರಂದನವೊಂದು ಅಲೆ ಅಲೆಯಾಗಿ ಬಂದು ಅವನ ಕಿವಿಯನ್ನು ಹೊಕ್ಕು ಮೈ ನಡುಗಿಸಿತು. ಅದು ತನ್ನ ನೆಚ್ಚಿನ ದೀದಿ ಆಯೇಷಳ ಕಂಠಸ್ವರ ಎಂಬುದನ್ನು ಆತ ಗ್ರಹಿಸಿದ. ಆ ಚೀತ್ಕಾರದಲ್ಲಿ ತುಂಬಿದ ದುಃಖ, ಅಪಮಾನಗಳ ವೇದನೆ ಅವನ ಮೈಯ ನೆತ್ತರನ್ನು ಒಂದು ಚಣ ಹೆಪ್ಪುಗಟ್ಟಿಸಿತು. ಮರುಕ್ಷಣದಲ್ಲಿ ಅಂತರಂಗದಲ್ಲಿ ಕ್ರೋಧ. ಪ್ರತೀಕಾರಗಳ ಜ್ವಾಲೆಗಳು ಸಿಡಿದೆದ್ದು ಉಮ್ಮಳಿಸಿದವು.

ಶಾಲೆಯ ಗೇಟಿನಿಂದ ಒಳಗೆ ನುಸುಳಿ ಹೋಗುವಂತಿಲ್ಲ. ಅಲ್ಲಿ ಉರಿಯುವ ಬೆಂಕಿ ಸುತ್ತ ಕುಳಿತ ದಂಡಾಳುಗಳಿದ್ದಾರೆ. ಹಾಗೆ ಹೋಗುವುದೆಂದರೆ ಮೃತ್ಯುವಿನ ದವಡೆಯೊಳಗೆ ಹೊಕ್ಕಂತೆ. ಶಾಲೆಯ ಆವರಣದ ಸುತ್ತ ಎತ್ತರದ ತಂತಿ ಬೇಲಿಯಿದೆ. ಒತ್ತೊತ್ತಾಗಿ ಮುಳ್ಳುತಂತಿಗಳನ್ನು ಬಿಗಿದಿದ್ದಾರೆ. ಅವುಗಳ ಎಡೆ

ಯಿಂದ ನುಸುಳುವುದು ಅಶಕ್ಯ. ರಸೂಲ್ ಚರಂಡಿಯೊಳಗೆ ಕುಳಿತು ಪಹರೆಯ ದ...ಳುಗಳ ದೃಷ್ಟಿಗೆ ಬೀಳದೆ ಆವರಣದೊಳಗೆ ಹೋಗುವುದು ಹೇಗೆಂದು ಚಿಂತಿಸಿದ.

ಶಾಲೆಯ ಹಿಂದುಗಡೆ ತಂತಿಬೇಲಿಯ ಹೊರಗೆ ಬೆಳೆದು ನಿಂತ ಮಾವಿನ ಮರವೊಂದು ಮಬ್ಬುಮಬ್ಬಾಗಿ ಕಾಣಿಸಿತು. ಮರದ ತಗ್ಗಿನ ಕೊಂಬೆಯೊಂದು ಬೇಲಿಯಾಚೆ ಶಾಲೆಯ ವಠಾರದೊಳಗೆ ಪಸರಿಸಿತ್ತು. ಮರವನ್ನು ಕಾಣುತ್ತಲೇ ರಸೂಲನ ಮೆದುಳಿನಲ್ಲಿ ಉಪಾಯವೊಂದು ಸ್ಫುರಿಸಿತು. ಅವನು ಎದ್ದು ನೆಲದ ಮೇಲೆ ಮೊಣಕಾಲುಗಳನ್ನೂರಿ ಒಡಲನ್ನು ಚಾಚಿ ಹಾವಿನಂತೆ ಹೊಟ್ಟೆಯನ್ನೆಳೆಯುತ್ತ ಮಾವಿನ ಮರದೆಡೆಗೆ ಸರಿಯತೊಡಗಿದ. ಕಣ್ಣುಗಳು ಕೆದರಿದ ಕಲಿತನ ಮತ್ತು ವನ್ನೇರಿ ಆ ತಗ್ಗಿನ ಕೊಂಬೆಯೆಡೆಗೆ ಬಂದ. ಕೈಗಳಿಂದ ಕೊಂಬೆಯನ್ನು ಬಿಗಿಹಿಡಿದು ಅದರ ಮೇಲೆ ಹೊಟ್ಟೆಯೆಳೆಯುತ್ತ ಶಾಖೆಯ ತುದಿಗೆ ತಲುಪಿದ.

ಅನಿತರಲ್ಲಿ ಪಾಳಿಯಾದ ಕಾವಲಿಗೆ ನಿಂತ ಪಹರೆಯ ಸಿಪಾಯಿಯ ಹೆಜ್ಜೆಯ ಸದ್ದು ಕೇಳಿಸಿತು. ರಸೂಲ್ ಉಸಿರು ಬಿಗಿ ಹಿಡಿದು ತುದಿಗೊಂಬೆಯ ಮೇಲೆ ಮುದುಡಿ ಕುಳಿತ. ಶಾಲೆಯೊಳಗಿಂದ ಆರ್ತಸ್ವರದ ಇನ್ನೊಂದು




ಕ್ರೋಧಗಳ ಕಿಡಿಗಳು ಬೆಳಕನ್ನು ಹರಹಿ ದಾರಿ ತೋರಿದುವು. ನೆಲದಲ್ಲಿ ಹರಳು ಕಲ್ಲುಗಳು ಅವನ ಮೊಣಕಾಲು ಮತ್ತು ತೊಡೆಗಳನ್ನಿರಿದು ಘಾಸಿಗೊಳಿಸಿದವು. ಅವನು ಮಾವಿನ ಮರದಡಿ ಸೇರಬೇಕಾದರೆ ಅರೆತಾಸು ಹಿಡಿಯಿತು.

ರಸೂಲ್ ತನ್ನ ಬುಷ್‌ಕೋಟು ಕಳಚಿ ಅದನ್ನು ಮೂರು ನಾಲ್ಕು ಸೀಳಾಗಿ ಹರಿದ. ಸೀಳುಗಳನ್ನು ಒಂದಕ್ಕೊಂದು ಗಂಟು ಹಾಕಿ ಹಗ್ಗವೊಂದನ್ನು ಸಮೆದ. ಈ ಹಗ್ಗದಿಂದ ಕೈಯಲ್ಲಿದ್ದ ಸ್ಟೆನ್‌ಗನ್ನನ್ನು ತನ್ನ ಬೆನ್ನಿಗೆ ಬಿಗಿದು ಕಟ್ಟಿದ. ಬೀಸಿ ಬಂದ ಕುಳಿರ್ಗಾಳಿ ಅವನ ಮೈಯನ್ನಿರಿದಿತು. ಅವನು ಕತ್ತಲಲ್ಲಿ ಮಾವಿನಮರ

ತರಂಗ ಎದ್ದುಬಂದು ಅವನ ಕಿವಿ ಸೀಳಿತು. ಅದು ಕಿರಿಯ ದೀದಿ ಖತೀಜಳ ಮೊರೆ. ಅವನ ದೇಹ ಥರಥರನೆ ನಡುಗಿತು. ಅವನು ಕೊಂಬೆಯಿಂದ ಉರುಳಿ ಬೀಳುವುದರಲ್ಲಿದ್ದ. ಅವನು ಮಂಗನಂತೆ ಕೊಂಬೆಯನ್ನು ಅಪ್ಪಿ ಹಿಡಿದು ತೂಗಾಡಿದ.

ಕೆಲವು ನಿಮಿಷಗಳು ಉರುಳಿದವು. ರಸೂಲನಿಗೆ ಒಂದೊಂದು ನಿಮಿಷವೂ ಒಂದೊಂದು ಯುಗದಂತೆ ತೋರಿತು. ಕೊನೆಗೊಮ್ಮೆ ಗಸ್ತು ತಿರುಗುತಿದ್ದ ಪಹರೆಯ ಸಿಪಾಯಿಯ ದೃಷ್ಟಿಯಿಂದ ಮರೆಯಾದ. ರಸೂಲ್ ಚದುರುತಿದ್ದ ಧೈರ್ಯವನ್ನು ಒಟ್ಟುಗೂಡಿಸಿ ತುದಿರೆಂಬೆಯಿಂದ ಕೆಳಗೆ ಜಿಗಿದ. ಶಾಲೆಯ ವಠಾರ

ವನ್ನು ಹೊಗುವ ಸಾಹಸದಲ್ಲಿ ವಿಜಯಿಯಾದೆನೆಂಬ ಸಾರ್ಥಕ ಭಾವದ ಸೆಲೆ ಅವನ ಹೃದಯದಲ್ಲಿ ಚಿಮ್ಮಿತು.

ರಸೂಲ್ ಹಾವಿನಂತೆ ಹರಿದು ಕಿಡಕಿ ಬಳಿ ಹರಿದ. ಕಿಡಕಿಯ ಕದಗಳನ್ನು ಮುಚ್ಚಿ ಒಳಗಿನಿಂದ ಅಗುಳಿ ಹಾಕಿದ್ದರು. ಏನು ಮಾಡುವುದೆಂದು ಅವನು ತುಸು ಚಿಂತಿಸಿದ. ಶಾಲೆ ಹೆಂಚು ಹೊದಿಸಿದ ಕಟ್ಟಡ. ಅವನು

ಕಿಟಕಿಯ ಚಡಿಯ ಮೇಲೇರಿ ನಿಂತ. ಮಾಡಿನ ಪಕ್ಕಾಸು ಅವನ ಕೈಗಳಿಗೆ ಎಟುಕಿತು. ಅವನು ಚಡಿಯ ಮೇಲೆ ತುದಿಗಾಲಲ್ಲಿ ನಿಂತು ಎಡಗೈಯಿಂದ ಪಕ್ಕಾಸನ್ನು ಹಿಡಿದು ಬಲಗೈಯಿಂದ ಎರಡು ಹಂಚುಗಳನ್ನು ಜಾರಿಸಿ, ಪಕ್ಕಾಸನ್ನು ಹಿಡಿದು ತೂಗಿ ಮಾಡಿನ ಮೇಲೇರಿದ. ಸದ್ದು ಮಾಡದೆ ಹೆಜ್ಜೆಯ ಮೇಲೆ ಹೆಜ್ಜೆಯನ್ನಿರಿಸುತ್ತ ಮಾಡಿನ ಮೇಲೆ ಸರಿದ.

ಶಾಲೆಯೊಳಗಿಂದ ಮೂರನೆಯ ಸಲ ಆರ್ತಾಕ್ರಂದನವೆದ್ದಿತು. ರಸೂಲ್ ಮಾಡಿನ ಮೇಲೆ ಕುಳಿತು ಆ ರೋದನದ ಸ್ವರ ಆಲಿಸಿದ. ಆಯೇಷಾ ಮತ್ತು ಖತೀಜ ಇಬ್ಬರೂ ಒಟ್ಟಿಗೇ ಕರುಳು ಕಿತ್ತುಬರುವಂತೆ ಚೀರುತಿದ್ದಾರೆ. ರಸೂಲ್ ಆ ಕರುಣಾದ್ರಕ್ರಂದನವನ್ನು ಕೇಳಲಾರೆನೆಂಬಂತೆ ಎರಡೂ ಕೈಗಳನ್ನೆತ್ತಿ ಕಿವಿಗಳನ್ನು ಮುಚ್ಚಿಕೊಂಡ. ಆ ಚೀತ್ಕಾರ ಧ್ವನಿ ಆತನ ಸಹೋದರಿಯರು ಶಾಲೆಯ ಯಾವ ಕೋಣೆಯಲ್ಲಿ ಬಂಧಿತರಾಗಿದ್ದಾರೆಂಬ ಸುಳಿವುಗೊಟ್ಟು ರಸೂಲನಿಗೆ ಉಪಕಾರವನ್ನೆಸಗಿತು.

ರಸೂಲ್ ಶೋಕಾರ್ತಸ್ವರ ಹರಿದು ಬರುತಿದ್ದ ಎಡೆಯನ್ನು ಗುರುತಿಸಿ ಮಂಗನಂತೆ ಮಾಡಿನ ಮೇಲೆ ಕೈಕಾಲುಗಳನ್ನೂರುತ್ತಾ ಸರಿದ. ಆ ಸ್ಥಳಕ್ಕೆ ಬಂದ ಮೇಲೆ ಅವನು ಕುಳಿತು ಸದ್ದಾಗದಂತೆ ಹಂಚುಗಳೆರಡನ್ನು ಕಿತ್ತು ತೆಗೆದು ಒಳಗೆ ತಲೆ ಹಾಕಿ ಇಣುಕಿ ನೋಡಿದ. ಮೇಜದ ಮೇಲೆ ಉರಿಯುತಿದ್ದ ಗಾಜಿನ ದೊಡ್ಡ ದೀಪ ಕೋಣೆಯೊಳಗೆ ಪ್ರಭೆಯನ್ನು ಹರಡಿತ್ತು. ಆ ರುದ್ರ ಭಯಾನಕ ದೃಶ್ಯವನ್ನು ಕಂಡಾಗ ಆತನಿಗೆ ತಲೆ ತಿರುಗಿ ಬವಳಿ ಬರುವಂತಾಯಿತು. ಅವನು ಮಾಡಿನಿಂದ ಕೆಳಗುರುಳಿ ಬಿದ್ದೇನೆಂಬ ಭೀತಿಯಿಂದ ಎರಡೂ ಕೈಗಳಿಂದ ಪಕ್ಕಾಸನ್ನು ಬಿಗಿಯಾಗಿ ಹಿಡಿದ.

ಕೋಣೆಯೊಳಗೆ ಚೌಧರಿಯನ್ನು ಕಿಟಕಿಯ ಪಕ್ಕದಲ್ಲಿ ನಿಲ್ಲಿಸಿ, ಅವರ ತೋಳುಗಳನ್ನು ಹಗ್ಗಗಳಿಂದ ಬಿಗಿದು ಕಿಟಕಿಯ ಸರ[illegible]ಗೆ ಕಟ್ಟಿದ್ದರು. ಅವರ ಮೈ ಮೇಲಿನ ಜುಬ್ಬವನ್ನು ಕಿತ್ತು ಹರಿದುಹಾಕಿದ್ದರು. ಗುದ್ದುಗಳ ಆಘಾತಕ್ಕೆ ಅವರ ಮೂಗು ಜಜ್ಜಿ ಹೋಗಿತ್ತು. ಮೂಗಿನಿಂದ ರಕ್ತಧಾರೆಯಾಗಿ ಸುರಿಯುತಿತ್ತು. ತುಟಿಗಳೆರಡು ಒಡೆದು ಊದಿಕೊಂಡಿದ್ದುವು. ಬಾಯಿಯಿಂದ ಹಲ್ಲುಗಳು ನಾಲ್ಕು ಉದುರಿ ಬಿದ್ದಿದ್ದುವು. ಪ್ರಹಾರಾಘಾತಗಳಿಂದ ಕಣ್ಣುರೆಪ್ಪೆಗಳು ಊದಿಕೊಂಡಿದ್ದವು. ಕೆನ್ನೆಗಳೆರಡು ಬೀಗಿ ಹಸಿರುಗಟ್ಟಿ, ಕುಂಬಳಕಾಯಿಗಳಂತಾಗಿದ್ದುವು.ಬೈನೆಟ್ಟಿನ ಇರಿತದಿಂದ ಎದೆಯ ಮೇಲೆ ಅಲ್ಲಲ್ಲಿ ಆದ ಗಾಯಗಳಿಂದ ಒಸರಿದ ನೆತ್ತರು ಹೆಪ್ಪುಗಟ್ಟಿತ್ತು.

ತನ್ನ ತಂದೆಗೊದಗಿದ ವಿಪತ್ತನ್ನು ಕಂಡಾಗ ರಸೂಲನ ಕಣ್ಣುಗಳಿಂದ ಬಾಷ್ಪಧಾರೆ ಅವಿಚ್ಛಿನ್ನವಾಗಿ ಹರಿಯಿತು. ಅವನ ಎದೆಯಾಳದಲ್ಲಿ ಉಕ್ಕಿದ ಶೋಕ ಆರ್ತಸ್ವರದ ರೂಪದಲ್ಲಿ ಹೊರಗೆ ಚಿಮ್ಮಲು ಹವಣಿಸಿತು. ಅವನು ಹಲ್ಲುಗಳಿಂದ ಕೆಳದುಟಿಯನ್ನು ಕಚ್ಚಿಹಿಡಿದು ಉಕ್ಕುತ್ತಿರುವ ಅಳಲಿಗೆ ತಡೆಯನ್ನೊಡ್ಡಿದ.

ರಸೂಲನ ನಚ್ಚಿನ ಸೋದರಿಯರಾದ ಆಯೇಷ ಮತ್ತು ಖತೀಜ ನೆಲದ ಮೇಲೆ ಹೊರಳಿದ್ದರು. ಅವರ ಮುಡಿಗಳು ಬಿಚ್ಚಿ ನೆಲದ ಮೇಲೆ ಹರಡಿದ್ದುವು. ಅವರುಟ್ಟ ಸೀರೆ ಮತ್ತು ರವಿಕೆಗಳನ್ನು ಕಿತ್ತು ದೂರ ಎಸೆದಿದ್ದರು.. ಅವರ ಕಪೋಲ ಮತ್ತು ಕುಚಗಳನ್ನು ಹಲ್ಲುಗಳಿಂದ ಕಡಿದು ಗಾಯಗೊಳಿಸಿದ್ದರು. ಅಸದ್ ಖಾನ್ ನೀಡುತ್ತಿದ್ದ ಚಿತ್ರಹಿಂಸೆಯನ್ನು ತಡೆಯಲೆಂದು ಆಯೇಷಾ ತೋಳೆತ್ತಿದಾಗ,ಆ ದಾನವ ಕೈಯೆತ್ತಿ ಆಕೆಯ ಕೆನ್ನೆಗೆ ಪ್ರಹರಿಸುತ್ತಿದ್ದ. ಎದೆ ಮತ್ತು ಹೊಟ್ಟೆಗಳಿಗೆ ಮುಷ್ಟಿಯನ್ನು ಬಿಗಿ ಹಿಡಿದು ಗುದ್ದುತಿದ್ದ.

ಮಾಡಿನಿಂದ ಇಣುಕಿ ನೋಡುತ್ತಿದ್ದ ರಸೂಲನ ನೆತ್ತರು ಕುದಿಯಿತು. ಒಡಲೊಳಗಿನ ಕರುಳು ಬಾಯಿಗೆ ಕಿತ್ತುಬರುವಂತಾಯಿತು. ಎದೆಯಲ್ಲಿ ಹೊತ್ತಿದ ಕ್ರೋಧವಹ್ನಿ ಅವನ ದೇಹವನ್ನು ಸುಡತೊಡಗಿತು. ಆತ ಬೆನ್ನಿಗೆ ಕಟ್ಟಿಕೊಂಡಿದ್ದ ಸ್ಟೆನ್‌ಗನ್ನನ್ನು ಬಿಚ್ಚಿ ಕೈಯಲ್ಲಿ ಹಿಡಿದ.

ಅಸದ್‌ಖಾನ್ ಆಯೇಷಳ ಬಳಿಯಿಂದೆದ್ದು ತನ್ನ ಬೂಟುಗಾಲಿನಿಂದ ಆಕೆಯ ಎದೆಯನ್ನೊಮ್ಮೆ ಒದೆದು ಚೌಧುರಿಯ ಬಳಿಗೆ ಸರಿದ. ಅವನ ಮೈಯಲ್ಲಿ ಭೂತಸಂಚಾರವಾದಂತೆ ಚೌಧುರಿಯನ್ನು ಉರಿಯನ್ನುಗಳುವ ಕಣ್ಣುಗಳಿಂದ ನೋಡುತ್ತ, "ನಮಕ್ ಹರಾಮ್! ಅವಾಮಿ ಲೀಗಿನ ಬಾಲಬಡುಕರಿಗೆ ಒದಗುವ ಗತಿ ಏನೆಂಬುದನ್ನು ಕಣ್ಣಾರೆ ಕಂಡೆಯಲ್ಲ!" ಎಂದು ಆರ್ಭಟಿಸಿ ಹೊಡೆಯಲೆಂದು ಕೈ ಮೇಲೆತ್ತಿದ.

ಅಸದ್‌ಖಾನನಿಗೆ ಎತ್ತಿದ ಕೈಯಿಂದ ಹೊಡೆಯಲು ಅವಕಾಶವಾಗಲಿಲ್ಲ. ಅನಿತರಲ್ಲಿ ರಸೂಲನ ಕೈಯಲ್ಲಿದ್ದ ಸ್ಟೆನ್‌ಗನ್ ಸಿಡಿಲಂತೆ ಆರ್ಭಟಿಸಿತು. ಅದು ಉಗುಳಿದ ಅಗ್ನಿಗೋಳಗಳು ಮಿಂಚಿನ ತುಣುಕುಗಳಂತೆ ಹರಿದು ಬಂದು ಅಸದ್‌ಖಾನನನ್ನು ಬಳಸಿದುವು. ಅವನ ಮೈ, ಮೊಗಗಳನ್ನು ಕೊರೆದುವು. ಅವನು ಎತ್ತಿದ ಕೈ ಹಾಗೆಯೇ ಉಳಿಯಿತು. ಮೈಯಿಂದ ರಕ್ತಧಾರೆ ಚಿಮ್ಮಿತು. ಅವನು ಮರುಕ್ಷಣದಲ್ಲೇ ರಕ್ತದ ಮಡುವಿನಲ್ಲಿ ಹೊರಳಾಡುತ್ತಿದ್ದ.

ರಸೂಲ್ ಖತೀಜಳ ಕಡೆಗೆ ದೃಷ್ಟಿ ಹೊರಳಿಸಿದ. ಗುಂಡಿನ ಸಪ್ಪಳ ಕೇಳಿದಾಗ ಆಕೆಯ ಪಕ್ಕದಲ್ಲಿದ್ದ ಕ್ಯಾಪ್ಟನ್ ಹುಸೇನ್ ಎದ್ದು ತನ್ನ ಬೂಟುಗಾಲೆತ್ತಿ ಆಕೆಯ ಮರ್ಮಸ್ಥಾನವನ್ನು ತುಳಿದ. ಮರುಕ್ಷಣದಲ್ಲಿ ಅವಳ ಬಿಳಿಯ ಲಂಗ ರಕ್ತಮಯವಾಯಿತು. ಮಾಡಿನ ಮೇಲಿದ್ದ ರಸೂಲನ ಸ್ಟೆನ್‌ಗನ್ನಿನ ಮುಖ ಕ್ಯಾಪ್ಟನ್ ಹುಸೇನನ ಕಡೆಗೆ ತಿರುಗಿತು. ಆ ಕೈದು ರಸೂಲನ ಇಂಗಿತವನ್ನರಿತು ಆರ್ಭಟಿಸಿ ಸಿಡಿಗುಂಡಿನ ಮಳೆಯನ್ನೇ ಹುಸೇನನ ಮೇಲೆ ಸುರಿಸಿತು. ಗುಂಡುಗಳು ಹಗೆಯ ಮೈಯನ್ನು ಕೊರೆದು ಛಿದ್ರಗೊಳಿಸಿದವು. ಕ್ಯಾಪ್ಟನ್ ಹುಸೇನ ಖತೀಜಳ ಪಾದಗಳ ಬಳಿ ಉರುಳಿ ಬೀಳುವುದನ್ನು ಮಾಡಿನ ಮೇಲಿದ್ದ ರಸೂಲ್ ಕಣ್ಣರಳಿಸಿ ನೋಡಿದ.

ರಸೂಲ್ ಕೈಗೊಂಡ ಕೆಲಸ ಮುಗಿದಿತ್ತು. ಗೆರಿಲ್ಲಾ ನಾಯಕ ಕಮಾಲ ಹಿಂದಿನ ಇರುಳು ಅಪ್ಪಣೆ ಮಾಡಿದಂತೆ ಮೇಜರ್ ಅಸದ್‌ಖಾನನನ್ನು ಹೊಡೆದುರುಳಿಸಿದ್ದ. ಭೀಷಣ ಸಂತೃಪ್ತಿಯ ಉಗ್ರ ದೀಧಿತಿ ಆ ವೀರ ಬಾಲಕನ ಮೊಗದಲ್ಲಿ ಮಿಂಚಿ ಆವರಿಸಿದ ತಮವನ್ನು ಸೀಳಿತು.

ರಸೂಲ್ ಸ್ಟೆನ್‌ಗನ್ನನ್ನು ಕೈಯಲ್ಲಿ ಹಿಡಿದು ಮಾಡಿನಿಂದ ಕೆಳಗಿಳಿಯತೊಡಗಿದ. ಗುಂಡುಗಳ ಗರ್ಜನೆ ಪಾಳೆಯದ ಸೈನಿಕರನ್ನೆಲ್ಲ ಬಡಿದೆಬ್ಬಿಸಿತು. ಇರುಳು ಹೊತ್ತು ಗೆರಿಲ್ಲಾ ವೀರರು ಪಾಳೆಯಕ್ಕೆ ಮುತ್ತಿಗೆ ಹಾಕಿದ್ದಾರೆ ಎಂಬ ಭ್ರಮೆಯಿಂದ ಅವರು ಶಾಲೆಯನ್ನು ಸುತ್ತುಗಟ್ಟಿ ನಿಂತರು.

ಮಾಡಿನಿಂದ ಇಳಿಯುತ್ತಿದ್ದ ರಸೂಲನ ಹೆಜ್ಜೆ ತಪ್ಪಿತು. ಅವನು ಕೈಯಲ್ಲಿ ಹಿಡಿದಿದ್ದ ಸ್ಟೆನ್‌ಗನ್ನು ಸಡಿಲಗೊಂಡು, ಮುಷ್ಟಿಯಿಂದ ಜಾರಿ ನೆಲಕ್ಕುರುಳಿತು. ರಸೂಲ ಕೆಳಗೆ ಬಿದ್ದು ಭೂಮಿಯನ್ನು ಆಶ್ರಯಿಸಿದ.

ರಸೂಲ್ ಏಳುವ ಮುನ್ನ ಇಪ್ಪತ್ತು ಮುಷ್ಟಿಗಳ ಗುದ್ದುಗಳು ಅವನ ಮೊಗ ಮತ್ತು ಮೈಗಳ ಮೇಲೆ ನೆಲೆಗೊಂಡವು. ಇಪ್ಪತ್ತು ಬೈನೆಟ್ಟು ಆತನ ದೇಹವನ್ನು ಛಿದ್ರಗೊಳಿಸಿದವು. ಆ ಆಘಾತವನ್ನು ತಾಳಲಾರದೆ ಆತ ಭೂಮಾತೆಯ ಮಡಿಲನ್ನಾಶ್ರಯಿಸಿದ. ಆತನ ಪ್ರಾಣಪಕ್ಷಿ ಗೂಡನ್ನು ಬಿಟ್ಟು ಹಾರಿಹೋಯಿತು. ಆದರೆ ಮೇಜರ್ ಅಸದ್‌ಖಾನನನ್ನು ಸಂಹರಿಸಿದ ಕಲಿ ತಾನೆಂಬ ಸಂತೃಪ್ತಿಯ ಪ್ರಭಾಪುಂಜ ಆತನ ವಿಕಸಿತ ನೇತ್ರಗಳಿಂದ ಮಾಸಲಿಲ್ಲ. ಇರಿದು ಸೇಡು ತೀರಿಸಿಕೊಂಡ ಸೈನಿಕರು ವೀರ ಬಾಲಕನ ದೇಹವನ್ನೆತ್ತಿ ಬೀದಿಗೆಸೆದರು".

ಮೆಲುಗಾಳಿ ಬೀದಿಯಲ್ಲಿ ಬಿದ್ದ ವೀರ ಬಾಲಕನ ಕತೆಯನ್ನು ಹೇಳಿ ಮುಗಿಸಿ ತಾನು ಹೊತ್ತ ಹೊರೆಯನ್ನು ಇಳಿಸಿದಂತೆ ಪೇರುಸಿರನ್ನು ಹೊರಚೆಲ್ಲಿತು.

"ನಾನು ಹತ್ತಿರವಿದ್ದಿದ್ದರೆ ಭೀತಿಯೇನೆಂದು ಅರಿಯದಿದ್ದ ಆ ಹಸುಳೆಯ ಮೈಗೆ ನನ್ನ ಮುಗುಳುಗಳ ಬಿಳಿಯ ಹಚ್ಚಡ ಹೊದಿಸುತಿದ್ದೆ" ಎಂದು ನುಡಿದಿತು ಮಲ್ಲಿಗೆಯ ಬಳ್ಳಿ.

"ನಾನು ನನ್ನ ಉದ್ದನೆಯ ಎಲೆಗಳ ಚಾಮರ ಬೀಸಿ ಗಾಳಿ ಹಾಕುತಿದ್ದೆ" ಎಂದು ಉಸುರಿತು ತೆಂಗಿನ ಮರ.

"ಆತನಿಗೆ ಪವಡಿಸಲು ನಾನು ಕೆಂದಳಿರ ತಲ್ಪವನ್ನು ಏರ್ಪಡಿಸಿ ಕೊಡುತಿದ್ದೆ" ಎಂದು ಅಳಲಿತು ಮಾವಿನಮರ.

ಆ ಪುಟ್ಟ ತೋಟದಲ್ಲಿ ಮೌನ ನೆಲೆಗೊಂಡಿತು. ಸಸ್ಯಾವಳಿಗಳೆಲ್ಲ ಆ ವೀರ ಬಾಲಕನ ಸಾಹಸದ ಕತೆಯನ್ನು ನೆನೆಯುತ್ತ ಆತನಿಗೆ ಬಾಷ್ಪಾಂಜಲಿಯನ್ನರ್ಪಿಸಿದುವು.

ಮೂಡಣ ದಿಗಂತವನ್ನೇರಿ ಬಂದ ಕೃಷ್ಣಪಕ್ಷದ ಚಂದ್ರ ಬೀದಿಯಲ್ಲಿ ಬಿದ್ದಿದ್ದ ಬಾಲಕನನ್ನು ದಿಟ್ಟಿಸಿ ನೋಡಿದ. ಗಾಳಿ ಹೇಳಿದ ಕತೆಯನ್ನು ಕೇಳಿದ ತಂಗದಿರ ವೀರಬಾಲಕನಿಗೆ ಅಂತಿಮ ಗೌರವವನ್ನು ಸಲ್ಲಿಸುವದರಲ್ಲಿ ತಾನು ಹಿಂದುಳಿಯಬಾರದೆಂದು ಬೆಳದಿಂಗಳ ಹೂಗೊಂಚಲುಗಳನ್ನು ರಸೂಲನ ಮೇಲೆರಚಿ ಮೋಡಗಳ ಹಿಂದೆ ಮರೆಯಾದ.



# ವರ್ಷಭವಿಷ್ಯ

ಜೋತಿಷಿ:
**ಶ್ರೀ ಕೃಷ್ಣಶಾಸ್ತ್ರಿ ಭಿಡೆ**
ಭವಿಷ್ಯ ಕಥನ ಕಾರ್ಯಾಲಯ,
ಕಪಿಲೇಶ್ವರ ಬೀದಿ, ಬೆಳಗಾವಿ



**ವಿಕ್ರಮ ಸಂವತ್ ೨೦೧೮ ರ ಭವಿಷ್ಯ, ಅರ್ಥಾತ್ ಶ್ರೀಶಕೆ ೧೮೮೩ ಕಾರ್ತಿಕ ಶುದ್ಧ ೧ ಬುಧವಾರದಿಂದ ೧೮೮೪ ಆಶ್ವಿನ ಬಹುಳ ೩೦ ರವಿವಾರ ವರೆಗಿನ, ಅಂದರೆ ಕ್ರಿಸ್ತಶಕ ೧೯೬೧ ಅಕ್ಟೋಬರ್ ೨೦ ರಿಂದ ೧೯೬೨ ನವ್ಹೆಂಬರ್ ೫ ರ ವರೆಗಿನ ಅರ್ಥಾತ್ ಈ ದೀಪಾವಳಿಯಿಂದ ಮುಂದಿನ ದೀಪಾವಳಿಯ ವರೆಗಿನ ವರ್ಷಭವಿಷ್ಯ.**

ಸೂಚನೆ :- ಈ ವರ್ಷ ಭವಿಷ್ಯವನ್ನು ಕೇವಲ ಸ್ಥೂಲಮಾನದಿಂದ ಹೇಳಲಾಗಿದೆ. ವ್ಯಕ್ತಿಗಳ ಈ ಭವಿಷ್ಯವನ್ನು ಅವರವರ ಜನ್ಮಕುಂಡಲಿಯ ಮೇಲಿಂದ ಅತ್ಯಂತ ನಿಖರವಾಗಿ ಹೇಳಲು ಸಾಧ್ಯ. ಅವರೂ ಜನ್ಮರಾಶಿಯ ಮೇಲಿಂದ ಹೇಳಲಾದ ಈ ವರ್ಷ ಭವಿಷ್ಯವು ದ್ವಾದಶ ರಾಶಿಯವರಿಗೆ ದೊರೆಯ ಲಿರುವ ಇಷ್ಟಾನಿಷ್ಟ ಫಲಗಳ ನಿಶ್ಚಿತಕಲ್ಪನೆಯನ್ನು ನೀಡುವದೆಂಬುದರಲ್ಲಿ ಸಂದೇಹವಿಲ್ಲ. ಪ್ರತಿ ಯೊಬ್ಬರ ಜನ್ಮರಾಶಿಯಂತೆಯೆ ಜನ್ಮಕುಂಡಲಿಯನ್ನನುಸರಿಸಿಯೂ ಭವಿಷ್ಯವನ್ನು ಹೇಳಿದರೆ ಹೆಚ್ಚು ಮನವರಿಕೆಯಾಗುವದು. ಅದರಂತೆ ಸ್ತ್ರೀಯರ ಭವಿಷ್ಯವನ್ನು ಅವರ ದೇಹಧರ್ಮಾನುಸಾರ ಫಲ ತಾರ ತಮ್ಯವನ್ನು ಗಮನದಲ್ಲಿಟ್ಟುಕೊಂಡು ನೋಡಬೇಕು.



## ಮೇಷ

ಈ ರಾಶಿಯವರಿಗೆ ಸಾಡೇಸಾತಿ ಇರುವದಾದರೂ ಗುರುವು ಈ ರಾಶಿಯವರಿಗೆ ೯ ನೆಯವನಾದ ಬಳಿಕ ಬಹುತರ ಎಲ್ಲ ವಿಷಯಗಳಲ್ಲಿಯೂ ಒಳ್ಳೆಯ ಸಮಾಧಾನ, ಯಶಸ್ಸು ಹಾಗೂ ಭಾವೀ ಪ್ರಗತಿಗೆ ಮಾರ್ಗದರ್ಶಕವಾಗುವಂತಹದಾಗಿರುವದರಲ್ಲಿ ಸಂದೇಹವಿಲ್ಲ.

ಕಳೆದ ಐದು ವರ್ಷಗಳಂತೆಯೆ, ಈ ವರ್ಷವೂ ಸಾಡೇಸಾತಿ ಇರುವದಾದರೂ ದಿನಾಂಕ ೬-೧-೧೯೬೨ರ ವರೆಗೆ ಗುರುವು ಎಂಟನೆಯವನಾಗಿದ್ದು ರಾಶಿಸ್ವಾಮಿ ಮಂಗಳ ಆಕ್ಟೋಬರ್ ೨೫ರ ವರೆಗೆ ದಶಮದಲ್ಲಿ ಉಚ್ಚಸ್ಥಾನದಲ್ಲಿರುವದರಿಂದಾಗಿ ಆರೋಗ್ಯ ಸಾಮಾನ್ಯತಃ ಉತ್ತಮವಿರುವದು; ಆದರೆ ಜನವರಿಯಿಂದ ಗುರು ಒಂಭತ್ತನೆಯವನಾಗುವದರಿಂದ ಯಾವುದೇ ಕಾರ್ಯವನ್ನಾದರೂ ಅತ್ಯುತ್ಸಾಹದಿಂದ ಮಾಡುವ ಶಕ್ತಿ ಪ್ರಾಪ್ತವಾಗುವದು. ಡಿಸೆಂಬರ್ ೧೬ ರಿಂದ ಫೆಬ್ರುವರಿ ೧, ಸಪ್ಟೆಂಬರ್ ೨೨ ರಿಂದ ಮುಂದಿನ ಕಾಲದಲ್ಲಿ ಉಷ್ಣಜನ್ಯ ಹಾಗು ಕಿರುಕಳ ವಿಕಾರಗಳಿಂದ ತುಸು ತೊಂದರೆಯಾಗುವ ಸಂಭವ. ಇತರ ವಿಷಯಗಳಲ್ಲಿ ಸಹ ಗುರು ಎಂಟನೆಯವನಾಗಿರುವವರೆಗೆ ಪ್ರಾಪಂಚಿಕ ಸುಖ ಚೆನ್ನಾಗಿರುವದಲ್ಲದೇ ಪ್ರತಿಯೊಂದು ಕಾರ್ಯದಲ್ಲಿ ಏನಾದರೊಂದು ಆಕಸ್ಮಿಕ ಅಡಚಣೆಯುಂಟಾಗುವದರಿಂದ ವಿಪರೀತ ತೊಂದರೆ ಹಾಗು ಮನೋಭಂಗವಾಗುವದು. ಆಗಸ್ಟ ೪ ರಂದು ಒಂಭತ್ತನೆಯವನಾಗುವ ರಾಹು ಹಾಗು ಅಂದಿನಿಂದಲೇ ಮೂರನೆಯವನಾಗುವ ಕೇತುವಿನಿಂದಾಗಿ ಒಳ್ಳೆಯ ಸುಖ, ಸಮಾಧಾನಗಳು ದೊರೆಯಲಾರಂಭಿಸುವವು. ಆಗಸ್ಟವರೆಗೆ ಸನಿಹದ ಆಪ್ತರಿಂದ ವಿನಾಕಾರಣ ತೊಂದರೆ ಹಾಗು ವಿರೋಧ ಉಂಟಾಗುವದು. ಅಂತೆಯೇ ಪ್ರತಿಯೊಂದು ವಿಷಯದ ಬಗೆಗೂ ಸಾಧ್ಯವಿದ್ದ ಮಟ್ಟಿಗೆ ಅವರಿಂದ ದೂರವಿರುವ ಜಾಗರೂಕತೆಯನ್ನು ವಹಿಸುವದವಶ್ಯ.

ವರ್ಷಾರಂಭದಲ್ಲಿ ರಾಶಿಸ್ವಾಮಿ ಮಂಗಳನು ಉಚ್ಚನಾಗಿರುವದರಿಂದ ಶುಕ್ರನಿಂದಯುಕ್ತನಾಗಿರುವ ಸುಯೋಗವಾಗುವದರಿಂದ ಪತಿ ಇಲ್ಲವೆ ಪತ್ನಿಯ ಸುಖಕ್ಕೆ ಈ ವರ್ಷ ಅತ್ಯುತ್ತಮವಾಗಿದೆ, ಅಲ್ಲದೇ ಉಭಯತರಲ್ಲಿ ಪ್ರತಿಯೊಂದು ವಿಷಯದ ಬಗೆಗೆ ಒಳ್ಳೇ ಮತೈಕ್ಯ, ಉತ್ಕಟಪ್ರೇಮ, ಸಂಪೂರ್ಣನಿಷ್ಠೆ ಹಾಗು ಪರಸ್ಪರ ವಿಚಾರಗಳನ್ನು ಅರಿತುಕೊಳ್ಳುವಿರಲ್ಲದೇ ನಿಮ್ಮಿಬ್ಬರ ಸಹವಾಸದಲ್ಲಿ ವ್ಯತ್ಯಯ ಉಂಟಾಗದು. ಆದರೆ ಫೆಬ್ರುವರಿ ೫ರಿಂದ ಮಾರ್ಚ ೧, ಜೂನ್ ೧೬ರಿಂದ ಜುಲೈ ೨೬ ಹಾಗೂ ಆಕ್ಟೋಬರ್ ೨೪ರ ಮುಂದಿನ ಅವಧಿಯಲ್ಲಿ ಅವಶ್ಯಕವಾದ ಶುಭಕಾರ್ಯವೊಂದಕ್ಕಾಗಿ ಸಹವಾಸದಲ್ಲಿ ವ್ಯತ್ಯಯ ಉಂಟಾಗುವ ಸಂಭವ.

ಈ ರಾಶಿಯ ವಿವಾಹೇಚ್ಛುಗಳು ಈ ಮೊದಲು ವಿವಾಹವಾಗದೇ ಇದ್ದು ಈ ಸಲ ಆ ವಿಚಾರದಲ್ಲಿದ್ದರೆ ಅವರಲ್ಲಿಯ ಬಹುಜನರ ವಿವಾಹ ಜನೇವರಿ ೬ರವರೆಗೆ ನಿಶ್ಚಿತವಾಗಿಯೂ ಗೊತ್ತಾಗುವದು. ಹಾಗು ಮೇಲೆ ಹೇಳಿದ ದಿನಾಂಕದ ನಂತರವೆಂದರೆ ವಿಶೇಷತಃ ಜನೇವರಿ ೧೧ರಿಂದ ಫೆಬ್ರುವರಿ ೫ ಇಲ್ಲವೆ ಮಾರ್ಚ ೧ರಿಂದ ಎಪ್ರಿಲ್ ೧ ಇಲ್ಲವೆ ಜುಲೈ ೨೬ರಿಂದ ಸಪ್ಟೆಂಬರ್ ೧ ಇಲ್ಲವೆ ಸಪ್ಟೆಂಬರ್ ೨೮ರಿಂದ ಆಕ್ಟೋಬರ್ ೨೪ ಈ ಅವಧಿಯಲ್ಲಿ ನಿಶ್ಚಿತವಾಗಿಯೂ ಆಗುವದಲ್ಲದೇ ವಧೂವರರು ಅನುರೂಪವಾಗಿದ್ದು ಪರಸ್ಪರ ಪೂರ್ವ ಪರಿಚಿತರೇ ಆಗಿರುವರು. ಆದರೆ ಮೊದಲು ಗೊತ್ತುಪಡಿಸಿದ ಮುಹೂರ್ತಕ್ಕೆ ಅನಿರೀಕ್ಷಿತ ಆತಂಕವುಂಟಾಗುವದರಿಂದ ಬೇರೊಂದು ಮುಹೂರ್ತದಲ್ಲಿ ಲಗ್ನ ಜರಗುವದು.

ಈ ವರ್ಷ ನಿಮ್ಮ ಮಗ ಅಥವಾ ಮಗಳ ವಿವಾಹ ಮಾಡುವುದಿದ್ದಲ್ಲಿ ಅದಕ್ಕೆ ಜನೆವರಿ ೫ರ ನಂತರವೇ ಒಳ್ಳೆಯ ಬಾಸಿಂಗಬಲವಿದೆ. ಗುರುಬಲವಿರುವದರಿಂದ ವಿಶೇಷ ಯಶಸ್ಸು ಲಭಿಸುವದು. ಬಹುತರವಾಗಿ ಜನೆವರಿ ೧೪ರಿಂದ ಫೆಬ್ರುವರಿ ೧೩ ಇಲ್ಲವೆ ಎಪ್ರಿಲ್ ೧೪ರಿಂದ ಮೇ ೧೬ ಇಲ್ಲವೆ ಜೂನ್ ೧೪ ರಿಂದ ಜುಲೈ ೧೬ರ ಈ ಅವಧಿಯಲ್ಲಿ ನಿಶ್ಚಿತವಾಗಿಯೂ

ಹಾಗೂ ಸುಸೂತ್ರವಾಗಿ ಆಗುವವು. ಸೋದರನಿಗೆ ಅಳಿಯನಾಗಿ ತುಂಬಾ ಸಿರಿವಂತ ಸ್ವಭಾವದವನಾಗಿಯೂ ಅಷ್ಟೇ ಪ್ರೇಮಳ, ಸುಶಿಕ್ಷಿತ, ಧರ್ಮಶೀಲ ಹಾಗೂ ಆಚಾರ ಹುಸ್ತನಿರುತ್ತಾನೆ. ಅದರಂತೆಯೇ ಜನವರಿ ೫ರಿಂದ ಅಂದರೆ ಗುರು ಒಂಭತ್ತನೆಯವನಾದ ಬಳಿಕ ಮಕ್ಕಳಿಂದ ಒಳ್ಳೇ ಸುಖ ದೊರೆಯುವುದಲ್ಲದೆ ಅವರವರ ಯೋಗ್ಯತೆಯ ಮೇರೆಗೆ ಒಳ್ಳೇ ಉತ್ಕರ್ಷ ಕೂಡ ಆಗುವದು.

ನಿಮ್ಮ ಉದ್ಯೋಗದಲ್ಲಿ ಈ ವರ್ಷ ಭಾರಿ ಯಶಸ್ಸು ಹಾಗೂ ಅಪಾರ ದ್ರವ್ಯಲಾಭವಾಗಲಿದೆ. ಸಾಡೇಸಾತಿಯಿದ್ದರೂ ಚಿಂತಿಸಬೇಕಿಲ್ಲ. ಯಾಕೆಂದರೆ ಕರ್ಮ ಹಾಗೂ ಲಾಭಸ್ಥಾನಗಳ ಸ್ವಾಮಿಯಾದ ಶನಿಯು ಪರಿಪೂರ್ಣ ದೃಷ್ಟಿ ಲಾಭ ಸ್ಥಾನದ ಮೇಲಿದೆ. ಅಂತೆಯೇ ಸ್ವತಂತ್ರ ಉದ್ಯೋಗ ಕೈಕೊಳ್ಳುವವರಿಗಂತೂ ವಿಶೇಷ ದ್ರವ್ಯ ಲಾಭವಾಗಲಿದೆ. ಮತ್ತು ಜನವರಿ ೪ರವರೆಗಿರುವ ಎಂಟನೆಯ ಗುರುವಿನಿಂದಾಗಿ ಒಂದು ವೇಳೆ ಮಂದವೆನಿಸಿದರೂ ತದನಂತರ ಅವನು ಒಂಭತ್ತನೆಯವನಾಗಲಿರುವುದರಿಂದಾಗಿ ಆಯಾತ-ನಿರ್ಯಾತ ದೊಡ್ಡ ಪ್ರಮಾಣದಲ್ಲಾಗುವುದಲ್ಲದೆ ಅದು ನಿಮ್ಮ ನಿರೀಕ್ಷೆ ಮೀರಿ ಹೆಚ್ಚುವುದು. ಹಾಗೂ ಆಗಸ್ಟ ೪ರಂದು ಮೂರನೆಯವನಾಗಲಿರುವ ಕೇತುವಿನಿಂದಾಗಿ ನಿಮ್ಮ ಉದ್ಯೋಗ ಅತ್ಯಂತ ಊರ್ಜಿತಾವಸ್ಥೆಯಲ್ಲಿರುವದು. ಬುದ್ಧಿಜೀವಿಗಳಿಗಿಂತ ಶ್ರಮಜೀವಿ ಉದ್ಯೋಗಿಗಳಿಗೆ ಈ ವರ್ಷ ಹೆಚ್ಚು ಸುಖಕರವಾಗಿದೆ. ಅದರಂತೆಯೇ ನೌಕರದಾರರಿಗೆ ಗುರು ಎಂಟನೆಯವನಾಗಿರುವವರೆಗೆ ವರಿಷ್ಠರ ಅವಕೃಪೆ ಹಾಗೂ ಕೆಲಸದ ಒತ್ತಡಗಳನ್ನು ಸಹಿಸಬೇಕಾಗುವದು. ಆದರೆ ಗುರು ಒಂಭತ್ತನೆಯವನಾದ ನಂತರ ತೊಂದರೆಗಳೆಲ್ಲ ಬಹುಬೇಗ ಕಡಿಮೆಯಾಗಿ ವರಿಷ್ಠರು ನಿಮ್ಮೊಂದಿಗೆ ವಿಶೇಷ ವಿನಯದಿಂದ ವರ್ತಿಸುವರು. ಹಾಗೂ ಬಹುತೇಕರಿಗೆ ಫೆಬ್ರುವರಿ ೧೦ರಿಂದ ಮಾರ್ಚ್ ೧೫ ಇಲ್ಲವೆ ಆಗಸ್ಟ ೬ರಿಂದ ಸಪ್ಟೆಂಬರ್ ೨೨ ಈ ಅವಧಿಯಲ್ಲಿ ಮೇಲಿನ ಹುದ್ದೆಗೆ ಬಡತಿ ದೊರೆಯಬಹುದು. ಸರಕಾರಿ ನೌಕರರಿಗೆ ಬಡತಿ ಸಿಕ್ಕು ಅನುಕೂಲಕರವಾದ ಸ್ಥಳಕ್ಕೆ ಬದಲಿಯಾಗುವದಾದರೆ ಮಾರ್ಚ್ ೧೫ರಿಂದ ಮೇ ೨ ಇಲ್ಲವೆ ಜೂನ್ ೨೦ರಿಂದ ಆಗಸ್ಟ ೬ ಈ ಅವಧಿಯಲ್ಲಾಗಲಿದೆ. ಆದರೆ ಹೊಸ ಸ್ಥಳವು ಕೆಲಸಕ್ಕೆ ಹಾಗೂ ಗಳಿಕೆಗೆ ಅನುಕೂಲವಿದ್ದರೂ ವಾಸಿಸಲು ಅಡಚಣೆಯುಂಟಾಗುವ ಸಂಭವ. ಕೇತು ನಾಲ್ಕನೆಯವನಾಗಿರುವವರೆಗೆ ಅಂದರೆ ಆಗಸ್ಟ ೪ರವರೆಗೆ ಕೈಕೆಳಗಿನ ನೌಕರರಿಂದ ವಿಪರೀತ ತೊಂದರೆಯಾಗುವ ಯೋಗವಿದೆ. ಅದರಂತೆಯೆ, ಸಾಡೇಸಾತಿಯ ಶನಿಯೂ ಸಂಗ್ರಹ ಸ್ಥಾನದಲ್ಲಿರುವದರಿಂದ ಧನಸಂಗ್ರಹಕ್ಕೆ ಭೀತಿ ಇರದಿದ್ದರೂ ಕೆಲ ನಿತ್ಯೋಪಯೋಗಿ ವಸ್ತುಗಳು ಮಾತ್ರ ಕಳೆದುಹೋಗಬಹುದಲ್ಲದೆ ಕಳ್ಳರು ನಿಮ್ಮ ನೆರೆಯವರೇ ಆಗಿರಬಹುದಾಗಿದೆ. ಆಗಸ್ಟ ೪ರವರೆಗೆ ನಿಕಟ ಆಪ್ತರು ಇಲ್ಲವೆ ನೆರೆಯವರು, ಸೇವಕರು ತೀರ ತೊಂದರೆಯನ್ನೀಯುತ್ತಾರೆ. ಅನಂತರ ಮಾತ್ರ ಅವರು ಅತ್ಯಂತ ಸರಳ ಹಾಗೂ ಪ್ರೇಮಭಾವದಿಂದ ವರ್ತಿಸುವರೆಂಬುದು ನಿಮ್ಮ ಅನುಭವಕ್ಕೆ ಬರದಿರದು. ಆಗಸ್ಟವರೆಗೆ ಮನೆಯ ಅಥವಾ ಸ್ಥಾವರ ಆಸ್ತಿಯ ದುರಸ್ತಿಗಾಗಿ ವೆಚ್ಚ ಮಾಡಬೇಕಾಗುವದು. ವಾಹನಸುಖ ಉತ್ತಮ: ಆದರೆ ಅದು ಸ್ವಂತದ್ದಾಗಿದ್ದರೆ ಮೇಲಿಂದ ಮೇಲೆ ಕೆಡುವದರಿಂದ ದುರಸ್ತಿಗಾಗಿ ನಿರೀಕ್ಷೆ ಮೀರಿ ವೆಚ್ಚ ಮಾಡಬೇಕಾಗುವ ಪ್ರಸಂಗ. ಸತ್ಪುರುಷರ ಸಹವಾಸ, ಅದರಂತೆಯೆ, ಮಂಗಲಕರ ಕಾರ್ಯ ಇಲ್ಲವೆ ಯಾತ್ರೆಗಾಗಿ ದೂರದ ಪ್ರವಾಸ ಕೈಕೊಳ್ಳುವ ಯೋಗ. ಆದರೆ ಫೆಬ್ರುವರಿ ೧೦ರಿಂದ ಮಾರ್ಚ್ ೧೫ ಮತ್ತು ಆಗಸ್ಟ ೬ರಿಂದ ಮುಂದಿನ ಅವಧಿಯಲ್ಲಿ ಅತ್ಯಂತ ಖ್ಯಾತ ವ್ಯಕ್ತಿಗಳ ಪರಿಚಯವಾಗಿ ಮುಂದಿನ ಉತ್ಕರ್ಷಕ್ಕೆ ಹಾಗೂ ಹಿತಕ್ಕೆ ಕಾರಣೀಭೂತವಾಗುವದೆಂಬುದು ನಿಶ್ಚಯ. ಮಿತ್ರಸುಖ ಉತ್ತಮ. ಲೇಖನ ಕೆಲಸಗಳೆಲ್ಲ ಅನುಕೂಲವೇ ಸರಿ: ಆದರೆ ಅವರಲ್ಲಿಯೂ ಅಕ್ಟೋಬರ್ ೨೦ರಿಂದ ನವ್ಹೆಂಬರ್ ೧, ಡಿಸೆಂಬರ್ ೧೧ರಿಂದ ಜನವರಿ ೬, ಫೆಬ್ರುವರಿ ೧೪ರಿಂದ ಮಾರ್ಚ್ ೩, ಮೇ ೬ರಿಂದ ೨೪, ಜೂನ್ ೮ರಿಂದ ೨೫, ಆಗಸ್ಟ ೩೧ರಿಂದ ಸಪ್ಟೆಂಬರ್ ೧೮ ಹಾಗೂ ಅಕ್ಟೋಬರ್ ೫ರಿಂದ ೨೫ ಈ ಅವಧಿಯಲ್ಲಿ ಯಾರ ಜನ್ಮಕುಂಡಲಿಯಲ್ಲಿ ಬುಧ ತೃತೀಯ, ಪಂಚಮ, ಸಪ್ತಮ, ನವಮ, ಇಲ್ಲವೆ ಏಕಾದಶ ಸ್ಥಾನದಲ್ಲಿರುವನೊ ಅವರ ಮಹತ್ವದ ಲೇಖನ ಕಾರ್ಯಗಳು ವ್ಯವಸ್ಥಿತ ರೀತಿಯಲ್ಲಿ ಪೂರ್ಣಗೊಳ್ಳುವವು. ಲೋಕದ ದೃಷ್ಟಿಯಲ್ಲಿ ಪ್ರಾಪಂಚಿಕ ಸುಖ ಚೆನ್ನಾಗಿ ಕಂಡರೂ ಆಂತರಿಕ ಕಲಹದಿಂದಾಗಿ ತೊಂದರೆಯಾಗುತ್ತಲೇ ಇರುವದೆಂದು ತಿಳಿಯಬೇಕು. ಅಂತೆಯೆ ಈ ಸಾಡೇಸಾತಿಯ ನಿವಾರಣಾರ್ಥ ಶನಿಯ ಸಂಪೂರ್ಣ ೨೩,೦೦೦ ಜಪ ಮಾಡಬೇಕು.

ದಾವೆ, ಫಿರ್ಯಾದಿ ಹಾಗೂ ಖಾಸಗಿ ಸ್ಪರ್ಧೆಯ ಕಾರ್ಯಗಳಲ್ಲಿ ಗುರು ಎಂಟನೆಯವನಾಗಿರುವಾಗ ನಿರ್ಣಯವಾದರೆ ನಿಮ್ಮ ವಿರುದ್ಧವಾಗುವದಾದರೆ ಒಂಭತ್ತನೆಯ ಗುರುವಿರುವಾಗ ಮಾತ್ರ ಒಳ್ಳೇ ಅನುಕೂಲ. ಆದರೆ ಪ್ರತಿಸ್ಪರ್ಧಿ ಮುಂದೆ ಹೋಗುವ ಸಂಭವ ಇದ್ದೇ ಇದೆ.

ಈ ರಾಶಿಯ ಗರ್ಭವತಿಯರು ಎಂಟನೆಯ ಗುರುವಿದ್ದಾಗ ಪ್ರಸೂತರಾದರೆ ಅವರಿಗೆ ಗಂಡು ಮಗುವೇ ಜನಿಸುವದು, ಆದರೆ ಮಗು ದೀರ್ಘಾಯುವಾಗಿರುವದೆಂದು ನಿಶ್ಚಿತವಾಗಿ ಹೇಳಲು ಬಾರದು. ಆದರೆ ಒಂಭತ್ತನೆಯ ಗುರುವಿರುವಾಗ ಅಂದರೆ ಜನವರಿ ೫ರ ನಂತರ ಹೆರಿಗೆಯಾದರೆ ಜನಿಸುವ ಮಗು ಹೆಣ್ಣಾಗಲಿ, ಗಂಡಾಗಲಿ ದೀರ್ಘಾಯುವಾಗಿರುವುದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಮೇ ೨೪ರಿಂದ ಜೂನ್ ೮, ಜೂನ್ ೨೫ರಿಂದ ಆಗಸ್ಟ ೩೧ ಹಾಗೂ ಅಕ್ಟೋಬರ್ ೨೫ರ ನಂತರವಾದರೆ ಯಶಸ್ಸು ಸಿಕ್ಕುವ ಭರವಸೆಯಿಲ್ಲ. ಆದರೆ ಮುಂದಿನ ಅವಧಿಯಲ್ಲಾದರೆ ಯಶಸ್ಸು ನಿಶ್ಚಿತವಾಗಿ ಸಿಕ್ಕುವದು.




**ಈ ವರ್ಷವು ಈ ರಾಶಿಯವರಿಗೆ ಸಾಂಸಾರಿಕ ಹಾಗೂ ಮಾನಸಿಕ ಸುಖಕ್ಕೆ ಸಾಧಾರಣವಿರುವದಾದರೂ ಉದ್ಯೋಗ ಧಂದೆಗಳಲ್ಲಿ ಆರ್ಥಿಕ ಉನ್ನತಿಗೆ ಹಾಗೂ ಲಾಭಕ್ಕೆ ನಿರೀಕ್ಷೆಗಿಂತ ಹೆಚ್ಚು ಚೆನ್ನಾಗಿದೆ ಎಂಬುದು ನಿಶ್ಚಿತ.**

ಕಳೆದ ವರ್ಷದಂತೆಯೆ ಈ ವರ್ಷವೂ ಈ ರಾಶಿಯವರಿಗೆ ಸಾಡೇಸಾತಿ ಇರುವದಾದರೂ ಕಳೆದ ಎಪ್ರಿಲ್ ವರೆಗಿದ್ದ ಶನಿ ಹನ್ನೆರಡನೆಯವನಾಗಿದ್ದು ಈ ವರ್ಷ ಮೊದಲನೆಯವನಾಗಲಿದ್ದು ದೇಹಸ್ಥನಿದ್ದಾನೆ. ಮತ್ತು ಈತನೇ ಈ ರಾಶಿಯ ನವಮ ಹಾಗೂ ದಶಮ ಅಂದರೆ ಅನುಕ್ರಮವಾಗಿ ಭಾಗ್ಯ ಹಾಗೂ ಕರ್ಮಸ್ಥಾನದಲ್ಲಿ ತ್ರಿಕೋಣ ಮತ್ತು ಕೇಂದ್ರಾಧಿಪತಿಯಾಗಿರುವದರಿಂದ ಸಾಡೇಸಾತಿಯ ನಡುವಿನ ಎರಡೂವರೆ ವರ್ಷ ಅನಿಷ್ಟ ಫಲಗಳನ್ನೀಯದೆ ತದ್ವಿರುದ್ಧ ಭಾಗ್ಯವೃದ್ಧಿ, ಅಧಿಕಾರ ಹಾಗೂ ಮಹತ್ವದ ಲೌಕಿಕ ಹೆಚ್ಚಳವಾಗುವುದು. ಅದರಲ್ಲಿಯೂ ಈ ವರ್ಷ ಜನವರಿ ೫ರ ವರೆಗೆ ಲಾಭೇಶ ಗುರು ಏಳನೆಯವನಾಗಿರುವದರಿಂದ ಹಾಗೂ ಆತನ ಪೂರ್ಣ ದೃಷ್ಟಿ ಶನಿಯ ಮೇಲಿರುವದರಿಂದಾಗಿ ಭಾಗ್ಯೋದಯವಾಗುವ ಸಂಗತಿಯೊಂದು ನಿಶ್ಚಿತವಾಗಿಯೂ ಜರಗುವುದು.

ವರ್ಷಾರಂಭದಲ್ಲಿ ದೇಹೇಶ ಶುಕ್ರನು ಆರನೆಯವನಾಗಿರುವುದರಿಂದಾಗಿ ಆರೋಗ್ಯಕ್ಕೆ ಮೇಲಿಂದ ಮೇಲೆ ಏನೋ ಆಗುತ್ತಿದೆಯೆಂಬ ಸಂಶಯದಿಂದಾಗಿ ಮನಸ್ಸು ಕಳವಳಗೊಳ್ಳುವುದು. ಆದರೆ ಅದೇ ಶುಕ್ರನು ಸ್ವಕ್ಷೇತ್ರವಾದ ತುಲಾದಲ್ಲಿರುವದರಿಂದ ಅನಾರೋಗ್ಯವಾಗಿದೆ ಎಂಬ ಅಭಿಪ್ರಾಯವನ್ನು ಡಾಕ್ಟರರೂ ನೀಡಲಾರರು. ಮುಂದೆ ಜನವರಿ ೫ರ ನಂತರ ಗುರು ಎಂಟನೆಯವನಾಗಲಿರುವದರಿಂದ ಯಾವುದೇ ಆತಂಕವಾಗದು. ಆದರೆ ಲೋಕಮತ ಪ್ರತಿಕೂಲವಾಗಿರುವದೆಂದು ಕಂಡುಬರುವುದರಿಂದ ಮನಸ್ಸಿಗೆ ಒಂದು ಬಗೆಯ ಹಳಹಳಿ ಇದ್ದೇ ಇರುವದು.

ಅದರಂತೆಯೆ ಈ ವರ್ಷದ ಆರಂಭದಲ್ಲಿ ಭಾರ್ಯಾಸ್ಥಾನದಲ್ಲಿ ಗುರು ಹಾಗೂ ನೆಪ್ಚ್ಯೂನ್ ಈ ಶುಭಗ್ರಹಗಳ ಯುತಿ ಹಾಗೂ ಭಾರ್ಯೇಶ ಮಂಗಳ ಭಾಗ್ಯಸ್ಥಾನದಲ್ಲಿ ಉಚ್ಚನಾಗಿರುವಂತಹ ಅಪೂರ್ವ ಯೋಗದಿಂದಾಗಿ ಹೆಂಡತಿಯ ಆರೋಗ್ಯ ಕೂಡ ಉತ್ತಮವಿರುವುದಲ್ಲದೇ ದೈಹಿಕಸುಖವೂ ಅತ್ಯುತ್ತಮ. ಅದರಂತೆಯೇ ಮೇ ೨ರಿಂದ ಜೂನ್ ೨೦ರ ನಂತರದ ಅವಧಿಯಲ್ಲಿ ಸಹವಾಸದಲ್ಲಿ ವ್ಯತ್ಯಯವುಂಟಾಗುವ ಸಂಭವವಿಲ್ಲ. ಅವಳ ಸಲಹೆ ಹಾಗೂ ವಿಚಾರಗಳು ಸಯುಕ್ತಿಕ, ಯೋಗ್ಯ ಮತ್ತು ದೇವವಾಣಿಯಂತೆ ದಿಟವಾಗಿ ಪರಿಣಮಿಸುವವು. ಆದರೆ ವರ್ಷಾರಂಭದಲ್ಲಿ ಸ್ತ್ರೀ ಸುಖದರ್ಶಕ ಶುಕ್ರನು ಆರನೆಯವನಾಗಿರುವದರಿಂದಾಗಿ ಆಕೆ ನಿಮ್ಮ ನಿಷ್ಕಳಂಕ ಪ್ರೇಮದ ಬಗೆಗೆ ಒಮ್ಮೊಮ್ಮೆ ಸಂಶಯಗ್ರಸ್ತಳಾಗಿ ಖಿನ್ನ ಹಾಗೂ ಉದಾಸೀನಳಾಗಿ ಕಾಣಿಸುವಳು.

ಈ ರಾಶಿಯವರ ವಿವಾಹ ಇನ್ನೂ ಆಗದಿದ್ದು ಈ ವರ್ಷವೇ ಆಗಬೇಕಿದ್ದರೆ ದೀಪಾವಳಿಯಿಂದ ವಿಶೇಷ ಪರಿಶ್ರಮ ವಹಿಸಬೇಕು. ಗುರು ಏಳನೆಯವನಾಗಿರುವಾಗ ಅಂದರೆ ಜನವರಿ ೫ರೊಳಗಾಗಿ ಅಲ್ಪಾಯಾಸದಿಂದಲೇ ಬಾಸಿಂಗಬಲ ಒದಗಿ ನಿರ್ವಿಘ್ನವಾಗಿ ಜರಗುವದು. ತದನಂತರ ಮಾತ್ರ ಬೇಗ ನಿಶ್ಚಯವಾಗದು. ಒಂದು ವೇಳೆ ನಿಶ್ಚಯವಾದರೂ ವಿವಾಹವಾಗುವವರೆಗೆ ಅನೇಕ ವಿಘ್ನಗಳು ಎದುರಾಗುವವಲ್ಲದೇ ಎದುರು ಪಕ್ಷದವರ ವರ್ತನೆ ಅಸಹ್ಯವಾಗಿದ್ದು ಕ್ಷುಲ್ಲಕ ಕಾರಣಗಳಿಗಾಗಿ ವಿಕೋಪಕ್ಕೆಡೆಗೊಡಬಹುದು. ಆದರೆ ವಧೂವರರು ಪರಸ್ಪರ ಅನುರೂಪರಾಗಿದ್ದು ರೂಪ ಹಾಗೂ ಗುಣಗಳೆರಡರಲ್ಲೂ ಚೆನ್ನಾಗಿರುವುದು ಕಂಡುಬರುತ್ತದೆ.

ಅದರಂತೆಯೆ, ಮಕ್ಕಳಲ್ಲಿ ಯಾರದಾದರೂ ಮದುವೆ ಮಾಡುವುದಿದ್ದಲ್ಲಿ ಗುರು ಏಳನೆಯವನಿರುವಾಗಲೇ ಹೆಚ್ಚು ಅನುಕೂಲ. ಆದರೆ ಗುರು ಎಂಟನೆಯವನಾಗಿರುವಾಗ ಮಾತ್ರ ವಿವಾಹವಾಗದು. ಒಂದು ವೇಳೆ ಗೊತ್ತಾದರೂ ವಿಶೇಷ ಪ್ರಯತ್ನಪಟ್ಟರೆ ಮಾತ್ರ ಸಾಧ್ಯವಾದೀತಾದರೂ ಪ್ರತಿಪಕ್ಷದವರಿಂದ ವರದಕ್ಷಿಣೆ, ಗೌರವ

ಹಾಗೂ ಇಚ್ಛಿತ ಲಾಭಗಳೇನೂ ದೊರೆಯಲಾರವು. ಆದರೆ ಅಕ್ಟೋಬರ್ ೪ರ ನಂತರ ನಿಶ್ಚಯವಾದರೆ ತೀರ ತೊಂದರೆದಾಯಕವೆಂದೇ ತಿಳಿಯಬೇಕು. ಸೊಸೆ ಇಲ್ಲವೆ ಅಳಿಯ ಸುಶಿಕ್ಷಿತ, ಶೀಲಸಂಪನ್ನರಾದರೂ ಅತೀವ ಅಹಂಕಾರಿಗಳಾಗಿರುವರು. ಈ ಸಲ ಮಕ್ಕಳಿಂದ ದೊರೆಯುವ ಸುಖ ತೀರ ಸಾಮಾನ್ಯ. ಆದರೆ ಅವರ ಉನ್ನತಿಗೆ ಈ ವರ್ಷ ಅತ್ಯುತ್ತಮವಾಗಿದೆ.

ಉದ್ಯೋಗ – ವ್ಯವಹಾರಸ್ಥರಿಗೆ ಈ ವರ್ಷವಿಡಿ ಅತ್ಯಂತ ಮಹತ್ವದ್ದಲ್ಲದೇ ಪ್ರಗತಿಯ ದೃಷ್ಟಿಯಿಂದಲೂ ಅಮೂಲ್ಯವಾದುದು. ಏಳನೆಯ ಗುರುವಿರುವಾಗ ದ್ರವ್ಯ ಲಾಭವಾದರೆ ಕೇತು ಮೂರನೆಯವನಿರುವಾಗ ಅಂದರೆ ಅಗಸ್ಟ ೪ರ ವರೆಗೆ ಉದ್ಯೋಗ ವ್ಯವಹಾರಗಳಿಗಾಗಿ ಪಟ್ಟ ಶ್ರಮ ಹಾಗು ಧೈರ್ಯ, ಸಾಹಸಗಳು ವ್ಯರ್ಥವಾಗದೆ ಪ್ರತಿಯಾಗಿ ಹೆಚ್ಚು ಯಶಸ್ಸು ಸಿಕ್ಕುವದು. ಬುದ್ಧಿಜೀವಿಗಳಿಗಿಂತ ಶ್ರಮಜೀವಿಗಳಿಗೆ ಈ ವರ್ಷ ವಿಶೇಷ ಅನುಕೂಲಕರವಿದೆ. ನೌಕರದಾರರಿಗೆ ಸಹ ಗುರು ಏಳನೆಯವನಾಗಿರುವಾಗ ಇಲ್ಲವೇ ಮೇ ೨ರಿಂದ ಜೂನ್ ೨೦ ಇಲ್ಲವೆ ಅಗಸ್ಟ ೬ರಿಂದ ಸಪ್ಟೆಂಬರ್ ೨೨ರ ಅವಧಿಯಲ್ಲಿ ಮೇಲಿನ ಹುದ್ದೆಗೆ ಬಡತಿ ದೊರೆಯುವುದು ನಿಶ್ಚಿತ. ಆದರಂತೆಯೇ ಬದಲಿಯಾದರೂ ಸಕಲ ಸೌಕರ್ಯವುಳ್ಳ ಹಾಗು ಮೇಲು ಸಂಪಾದನೆಗೆ ಯೋಗ್ಯವಾದ ಸ್ಥಳಕ್ಕೇ ಆಗುವದಲ್ಲದೇ ಈ ಸಲದ ವಿಶೇಷವೆಂದರೆ ಗುರು ಎಂಟನೆಯವನಾದಾಗ ಆಕಸ್ಮಿಕ ಧನಲಾಭದ ವಿಶೇಷ ಯೋಗವಿದೆ; ಅದೂ ದೊಡ್ಡ ಪ್ರಮಾಣದಲ್ಲಿ! ಎಂಟನೆಯ ಗುರು ಲಾಭಸ್ಥಾನದ ಸ್ವಾಮಿಯೂ ಆಗಿರುವದರಿಂದ ಆಕಸ್ಮಿಕ ಲಾಭ ಇಲ್ಲವೇ ಗುಪ್ತಲಾಭವನ್ನೀಯುವನು. ಅದು ಕೆಲವರಿಗೆ ಲಾಟರಿಯಲ್ಲಿ ದೊರೆತರೆ, ಇನ್ನು ಕೆಲವರಿಗೆ ರೇಸಿನಲ್ಲಿ ಇಲ್ಲವೇ ಬೇರಿನ್ನಾವ ಮಾರ್ಗದಿಂದಲಾದರೂ ದೊರೆಯುವುದು ನಿಶ್ಚಿತ. ಆದರೆ ಯಾರ ಜನ್ಮಕುಂಡಲಿಯಲ್ಲಿ ಅಷ್ಟಮೇಶ, ಲಾಭೇಶ ಹಾಗು ಸುಖೇಶ ಅಂದರೆ ಚತುರ್ಥೇಶ ಅಷ್ಟಮಸ್ಥಾನದಲ್ಲಿರುವರೊ ಅವರ ಪೂರ್ವಸ್ಥಿತಿ ಒಮ್ಮೆಲೆ ಬದಲಾಗಿ ಶ್ರೀಮಂತಿಕೆ ಬರುವುದು. ಆದರೆ ನೌಕರಿ ಇಲ್ಲವೆ ಉದ್ಯೋಗದಲ್ಲಿ ಸಾಕಷ್ಟು ಪ್ರಾಪ್ತಿಯಾದರೂ ಸಂಗ್ರಹದಲ್ಲಿ ಅಷ್ಟೇನೂ ಹೆಚ್ಚಳವಾಗದು. ಕಾರಣವೆಂದರೆ ನಿರರ್ಥಕ ವೆಚ್ಚ-ಅದೂ ಪ್ರತಿಷ್ಠೆಯನ್ನುಳಿಸುವದಕ್ಕಾಗಿ. ವಾಹನದಿಂದ ವಿಶೇಷ ತೊಂದರೆಯೆನಿಸುವ ಅನುಭವ ಉಂಟಾಗುವುದು. ವರಿಷ್ಠರು ಇಲ್ಲವೆ ಆಶ್ರಯದಾತರು ಪ್ರೇಮದಿಂದ ವರ್ತಿಸುವರಾದರೆ ಕೈಕೆಳಗಿನವರು ತೊಂದರೆಯನ್ನೀಯುವರು. ಕೆಲ ವಸ್ತುಗಳು ಕಳೆದುಹೋಗುವವವು. ಇಲ್ಲವೇ ಅಪಹರಿಸಲ್ಪಡುವವು. ವಿಶೇಷತಃ ಮೇ ೬ರಿಂದ ೧೪, ಇಲ್ಲವೆ ಅಕ್ಟೋಬರ್ ೫ರಿಂದ ೨೫, ಈ ಅವಧಿಯಲ್ಲಿ ತುಸು ಮಟ್ಟಿಗಾದರೂ ಈ ಬಗೆಯ ಅನುಭವವಾಗುವದು. ಈ ಸಲ ವಿಶೇಷವಾಗಿ ದೂರದ ಪ್ರವಾಸ ಕೈಕೊಳ್ಳುವಿರಿ. ಹಾಗು ಅದರ ಉದ್ದೇಶವೂ ಸಫಲ. ಭೆಟ್ಟಿಯ ಕಾರ್ಯಗಳೂ ಮನಸ್ಸಿನಂತಾದರೆ ಲೇಖನ ಕಾರ್ಯ ಮಾತ್ರ ಸ್ಥಗಿತ ಹಾಗೂ ಅಪೂರ್ಣವಾಗುವದರಿಂದಾಗಿ ಮನೋಭಂಗವಾಗುವದು. ಗುರು ಎಂಟನೆಯವನಿರುವಾಗ ಶುಭ ಹಾಗು ಭವಿಷ್ಯ ಸೂಚಕ ಸ್ವಪ್ನಗಳು ವಿಶೇಷವಾಗಿ ಬೀಳುವವಲ್ಲದೇ ಅವು ಬಹು ಬೇಗ ದಿಟವಾದ ಅನುಭವವೂ ಬರುವುದು.

ದಾವೆ-ಫಿರ್ಯಾದಿ ಅಥವಾ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಏಳನೆಯ ಗುರುವಿರುವಾಗ ಅಂದರೆ ಜನವರಿ ೫ರ ಮೊದಲು ಹಾಗು ನಂತರ ಜನವರಿ ೧೧ರಿಂದ ಫೆಬ್ರುವರಿ ೫, ಮೇ ೧ರಿಂದ ಜೂನ್ ೧೭ ಹಾಗು ಜುಲೈ ೨೬ರಿಂದ ಸಪ್ಟೆಂಬರ್ ೧ ಈ ಅವಧಿಯಲ್ಲಿ ತೀರ್ಮಾನವಾದರೆ ಜಯ ಖಂಡಿತ ಸಿಕ್ಕುವದೆಂಬುದರಲ್ಲಿ ಸಂಶಯವೇ ಇಲ್ಲ.

ಈ ರಾಶಿಯ ಗರ್ಭವತಿಯರ ಪ್ರಸೂತಿ ಜನವರಿ ೫ಕ್ಕಿಂತ ಮೊದಲಾದರೆ ಸುಬುದ್ಧ ಹಾಗು ದೀರ್ಘಾಯು ಪುತ್ರ ಪ್ರಾಪ್ತಿಯ ಪ್ರಬಲ ಯೋಗವಿದೆ. ಆದರೆ ನಂತರ ಪ್ರಸೂತಿಯಾದರೆ ಬಹುತರವಾಗಿ ಹೆಣ್ಣು ಮಗುವಾಗುವದು. ಆದರೆ ಅಗಸ್ಟ ೪ರ ನಂತರವಾದರೆ ಅವಳಿಗಳಾಗುವ ಪ್ರಬಲ ಯೋಗವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ನವೆಂಬರ್ ೧ರಿಂದ ೨೪, ಜನವರಿ ೨೭ರಿಂದ ಫೆಬ್ರುವರಿ ೧೪, ಮಾರ್ಚ್ ೩ರಿಂದ ಮೇ ೬, ಮೇ ೨೪ರಿಂದ ಜೂನ್ ೨೫ ಹಾಗು ಸಪ್ಟೆಂಬರ್ ೧೮ರಿಂದ ಅಕ್ಟೋಬರ್ ೫ ಈ ಅವಧಿಯಲ್ಲಾದರೆ ಅನಾಯಾಸವಾಗಿ ಉತ್ತೀರ್ಣರಾಗುತ್ತಾರೆ. ಅವರಲ್ಲಿ ಮೂರರಲ್ಲಿ ಎರಡು ಪಾಲು ವಿದ್ಯಾರ್ಥಿಗಳಾದರೂ ಒಳ್ಳೆಯ ಶ್ರೇಣಿಯನ್ನು ಪಡೆಯುವರು.



## ಮಿಥುನ

**ಈ ರಾಶಿಯವರಿಗೆ ಈ ವರ್ಷ ಸಾಡೇಸಾತಿಯಿದ್ದರೂ ವಿಶೇಷ ಕ್ಲೇಶವುಂಟಾಗದು ಹಾಗು ಪ್ರಾಪಂಚಿಕ ಮತ್ತು ಮಾನಸಿಕ ತೊಂದರೆಗಳು ಕೆಲ ಪ್ರಮಾಣದಲ್ಲಿ ಹೆಚ್ಚೆನಿಸಿದರೂ ಔದ್ಯೋಗಿಕ ವಿಷಯಗಳಲ್ಲಿ ಖಂಡಿತವಾಗಿಯೂ ಯಶೋದಾಯಕವಿದೆ.**

ಈ ರಾಶಿಯವರಿಗೆ ಕಳೆದ ಮೇದಿಂದಲೇ ಸಾಡೇಸಾತಿ ಪ್ರಾರಂಭವಾಗಿದ್ದು ಮುಂದೆ ಏಳೂವರೆ ವರ್ಷಗಳವರೆಗೆ ಇರಲಿದೆ. ಸಾಡೇಸಾತಿಯು ಪ್ರಥಮ ಭಾಗವಿದಾಗಿದೆಯಾದ್ದರಿಂದ ಯಾವುದೇ ವ್ಯವಹಾರ ಹಾಗು ಆರೋಗ್ಯದ ಬಗೆಗೆ ವಿಶೇಷ ದಕ್ಷತೆ ವಹಿಸಬೇಕು. ಶನಿ ವ್ಯಯಸ್ಥಾನದಲ್ಲಿದ್ದು ಯಾವುದೇ ವ್ಯಕ್ತಿಯ ವ್ಯವಹಾರ ಅಥವಾ ಕಾರ್ಯದ ಬಗೆಗೆ ಮೊದಲು ಆಲೋಚಿಸಿ ಮತ್ತು ಮಾಹಿತಿ ಪಡೆದು ಮುಂದಡಿಯಿರಿಸಬೇಕು. ಇಲ್ಲವಾದರೆ ಮೋಸಕ್ಕೊಳಗಾಗಿ ಪಶ್ಚಾತ್ತಾಪ ಪಡಬೇಕಾದ ಸಂಭವ.

ಈ ರಾಶಿಯವರ ಆರೋಗ್ಯಕ್ಕೆ ಗುರು ಆರನೆಯವನಾಗಿರುವರೆಗೆ ಅಂದರೆ ಜನವರಿ ೫ರ ವರೆಗೆ ವಾಯು ವಿಕಾರ, ರಕ್ತದ ಒತ್ತಡ ಇತ್ಯಾದಿ ವಿಕಾರಗಳಿಂದ ಬಳಲಬೇಕಾದೀತು. ಹೀಗಾಗಿ ಆರೋಗ್ಯಕ್ಕೆ ತುಸು ತೊಂದರೆಯಾಗುವ ಸಂಭವ. ವರ್ಷಾರಂಭದಲ್ಲಿ ರಾಶಿ ಸ್ವಾಮಿಯಾದ ಬುಧನು ಪಂಚಮನಾಗಿ ಶುಭಸ್ಥಾನದಲ್ಲಿ ಮತ್ತು ಶುಭಕರವೂ ಮಿತ್ರರಾಶಿಯೂ ಆದ ತುಲಾದಲ್ಲಿರುವುದರಿಂದ ಹಾಸಿಗೆ ಹಿಡಿಯಬೇಕಾದಂಥ ವಿಕಾರಗಳೇನೂ ಉಂಟಾಗವು. ಜನವರಿ ೫ರ ನಂತರ ಬರುವ ಏಳನೆಯ ಗುರು ಸುಖ ಹಾಗು ಆರೋಗ್ಯಗಳನ್ನೀಯುವನು. ಆವಶ್ಯಕ ದೇಹಸುಖಕ್ಕೆ ನವೆಂಬರ್ ೨೪ರಿಂದ ಡಿಸೆಂಬರ್ ೧೦, ಫೆಬ್ರುವರಿ ೧೪ರಿಂದ ಮೇ ೨೪, ಜೂನ್ ೮ರಿಂದ ೨೫ ಹಾಗು ಸಪ್ಟೆಂಬರ್ ೧೮ರಿಂದ ಅಕ್ಟೋಬರ್ ೫ ಈ ಅವಧಿ ಅತ್ಯುಚ್ಚವಾಗಿದೆ.

ಸ್ತ್ರೀಸುಖಕ್ಕೆ ಆರನೆಯ ಗುರುವಿರುವಾಗ ಅನೇಕ ಆತಂಕಗಳು, ಹಾಗು ಪರಸ್ಪರರಲ್ಲಿ ಮೇಲಿಂದ ಮೇಲೆ ಮತಭೇದವುಂಟಾಗುವದರಿಂದಾಗಿ ಅಷ್ಟೊಂದು ಚೆನ್ನಾಗಿರದು ಆದರೆ ಗುರು ಏಳನೆಯ ಅಂದರೆ ಭಾರ್ಯಾಸ್ಥಾನಕ್ಕೆ ಬಂದ ನಂತರ ಮೇಲೆ ಹೇಳಿದ ಅಶುಭ ಘಟನೆಗಳೆಲ್ಲ ಒಂದೆರಡುತಿಂಗಳುಗಳೊಳಗೆ ಒಮ್ಮೆಲೇ ಇಲ್ಲವಾಗುವವು. ಅಲ್ಲದೇ ವರ್ಷ ಕೊನೆಗೊಳ್ಳುವವರೆಗೂ ಹೆಂಡತಿಯ ಆರೋಗ್ಯವನ್ನೊಳಗೊಂಡು ಎಲ್ಲ ವಿಧದಿಂದಲೂ ಉತ್ತಮ; ಆದರೂ ಜೂನ್ ೨೦ರಿಂದ ಅಗಸ್ಟ ೬ರ ಕಾಲದಲ್ಲಿ ಚಾಕು, ಚೂರಿ, ಕತ್ತರಿ, ಸೂಜಿ ಇಲ್ಲವೆ ಈಳಿಗೆ ಮುಂತಾದ ಯಾವುದೊಂದು ಆಯುಧದಿಂದ ಕೈ ಇಲ್ಲವೆ ಕಾಲ್ಬೆರಳಿಗೆ ಗಾಯವಾಗಿ ತೊಂದರೆಗೀಡಾಗುವ ಸಂಭವ. ಹಾಗು ಅಗಸ್ಟ ೪ರ ವರೆಗೆ ಹೆಂಡತಿಯ ಸ್ವಭಾವ ಸಿಡುಕಿನದಾಗಿರಬಹುದು.

ಈ ರಾಶಿಯವರ ವಿವಾಹವಿನ್ನೂ ಆಗಿರದೆ ಈ ಸಲ ಆಗಲೇಬೇಕಿದ್ದಲ್ಲಿ ಗುರು ಏಳನೆಯವನಾಗಿರುವಾಗ ಅಂದರೆ ಜನವರಿ ೫ರಿಂದ ಬಾಸಿಂಗಬಲ ಅತ್ಯುತ್ತಮವಾಗಿದೆಯಲ್ಲದೇ ವಿಶೇಷ ಶ್ರಮವೇನೂ ಆಗದೆ ಗೊತ್ತಾದ ಮುಹೂರ್ತದಂದು ವಿವಾಹ ಜರಗುವದು. ಅದೂ ಅಲ್ಲದೆ ಮೇ ೬ರಿಂದ ೨೪ ಮತ್ತು ಜೂನ್ ೮ರಿಂದ ೧೫ ಈ ಅವಧಿಯಲ್ಲಿ ಅನೇಕರ ವಿವಾಹ ತೀರ ನಿರಾಯಾಸವಾಗಿ ಆಗಿಬಿಡಬಹುದಾಗಿದೆ. ವಧು ಇಲ್ಲವೆ ವರ ಸ್ವಂತಕ್ಕಿಂತ ಹೆಚ್ಚು ಸ್ಫುರದ್ರೂಪಿಗಳಾಗಿರುವರು. ಆದರೆ ಪರಸ್ಪರ ಪ್ರೇಮ ಹಾಗು ಮತ್ತೈಕ್ಯಕ್ಕೆ ತುಸು ಕಾಲಾವಧಿ ಬೇಕಾಗುವದು.

ಅದರಂತೆಯೆ, ನಿಮ್ಮ ಮಕ್ಕಳಲ್ಲಿ ಯಾರದಾದರೂ ಮದುವೆ ಮಾಡುವುದಿದ್ದಲ್ಲಿ ವರ್ಷವಿಡೀ ಅಂದರೆ ಗುರು ಆರನೆಯ ಹಾಗು ಏಳನೆಯ ಸ್ಥಾನಗಳಲ್ಲಿರುವಾಗ ಒಳ್ಳೆಯ ಬಾಸಿಂಗಬಲವಿದ್ದು ಏಳನೆಯ ಗುರುವಿರುವಾಗಿನಕ್ಕಿಂತ ಆರನೇ ಗುರುವಿರುವಾಗಲೇ ಹೆಚ್ಚು ಬೇಗ ಹಾಗು ಉತ್ತಮ ಮನೆತನದವರೊಂದಿಗೆ ಆಗುವುದು. ಸೊಸೆ ಇಲ್ಲವೆ ಅಳಿಯ ರೂಪದಿಂದ ಸುಂದರರು ಹಾಗು ಸ್ವಭಾವದಿಂದ ಸಿಡುಕಿನವರಿರುವರು; ಆದರೆ ಅಷ್ಟೇ ದೊಡ್ಡ ಮನಸ್ಸಿನವರೂ ಆಗಿರಬಹುದಾಗಿದೆ. ಮಕ್ಕಳಿಂದ ಈ ಸಲ ಒಳ್ಳೆಯ ಸುಖ ದೊರೆಯುವದು. ಆದರೆ ಕೇತು ಎರಡನೆಯವನಿರುವವರೆಗೆ ಅಂದರೆ ಅಗಸ್ಟ ೪ರವರೆಗೆ ಮಾತ್ರ ಅದು ಮನಸ್ಸಿನಂತೆ ದೊರೆಯುತ್ತಿಲ್ಲವೆಂಬ ತಪ್ಪುಗ್ರಹಿಕೆ ನಿಮ್ಮ ಮನಸ್ಸಿನಲ್ಲುಳಿದುಬಿಡಬಹುದು.

ಉದ್ಯೋಗ ಧಂದೆಗಳಲ್ಲಿ ಮೊದಲು ಅಂದರೆ ಆರನೆಯ ಗುರು ಇರುವಾಗ ದಗದಗಿ ಬಹಳ ಮತ್ತು ಪರಾವಲಂಬಿಯಾಗಿರಬೇಕಾದ ಪ್ರಸಂಗವಿದ್ದರೂ ಆತ ಏಳನೆಯವನಾದ ನಂತರ ಅಂದರೆ ಜನವರಿ ೫ರ ನಂತರ ಅದು ಹೆಚ್ಚು ಊರ್ಜಿತಗೊಳ್ಳುವುದಲ್ಲದೇ ಅತ್ಯಂತ ಲಾಭದಾಯಕವೂ ಆಗುವದು ನಿಶ್ಚಿತ. ವರ್ಷಾರಂಭದಲ್ಲಿ ಶನಿ ವ್ಯಯಸ್ಥಾನದಲ್ಲಿದ್ದರೂ ಅವನೇ ಈ ರಾಶಿಯ ನವಮೇಶ ಅಂದರೆ ಭಾಗ್ಯೇಶನಿದ್ದು ಈ ಸ್ಥಾನದ ಮೇಲೆ ಅವನ ಪೂರ್ಣ ದೃಷ್ಟಿಯಿರುವುದರಿಂದ, ಹಾಗೆಯೆ ದಶಮೇಶ ಅರ್ಥಾತ್ ಕರ್ಮೇಶ ಗುರು ಆರನೇಯವ ಹಾಗು ಲಾಭೇಶ ಮಂಗಳ ಎಂಟನೆಯವರಾಗಿದ್ದು ಅವರು ಸಹ ಈ ಸ್ಥಾನವನ್ನು ಪೂರ್ಣ ದೃಷ್ಟಿಯಿಂದ ನೋಡುತ್ತಲಿರುವರು. ಅಂತೆಯೇ ಉದ್ಯೋಗದಲ್ಲಿ ಒಳ್ಳೆಯ ಲಾಭ ದೊರೆಯುವದಲ್ಲದೇ ಪತ್ತು ಹಿಂದೆಂದಿಗಿಂತಲೂ ಹೆಚ್ಚುವದು. ಅಷ್ಟಮದಲ್ಲಿರುವ ಲಾಭೇಶ ಮಂಗಳನು ಉಚ್ಚನಾಗಿರುವದರಿಂದ ಅನೇಕರ ಪರಿಸ್ಥಿತಿ

ದ ಎಲ್ಲಿ ಒಳ್ಳೇ ಬದಲಾವಣೆ ಕಂಡುಬರುವಷ್ಟರ ಮಟ್ಟಿಗೆ ಲಾಟರಿ, ರೇಸ್ ಮುಂತಾದವುಗಳಲ್ಲಿ ಆಕಸ್ಮಿಕ ಲಾಭವಾಗುವುದು. ಶ್ರಮಜೀವಿ, ಬುದ್ಧಿಜೀವಿ ಮತ್ತು ನೌಕರವರ್ಗದವರೆಲ್ಲರಿಗೂ ಈ ವರ್ಷವು ಅತ್ಯಂತ ಲಾಭದಾಯಕವಿದೆ. ನೌಕರದಾರರಿಗೆ ಫೆಬ್ರುವರಿ ೧ ರಿಂದ ಮಾರ್ಚ್ ೧೫ ಇಲ್ಲವೆ ಅಗಸ್ಟ ೬ರಿಂದ ಸಪ್ಟೆಂಬರ್ ೨೨ ಈ ಅವಧಿಯಲ್ಲಿ ಬಡತಿ ದೊರೆಯುವ ಪ್ರಬಲ ಯೋಗವಿದೆ. ವರಿಷ್ಠರ ಮರ್ಜಿಯು ಸಹ ಏಳನೆಯ ಗುರುವಿರುವಾಗ ಚೆನ್ನಾಗಿಯೇ ಇರುವುದು ಹಾಗು ಕೈಕೆಳಗಿನವರು ಚೆನ್ನಾಗಿ ವರ್ತಿಸುವರು. ಆದರೆ ಸಾಡೇಸಾತಿಯ ಶನಿ ಹನ್ನೆರಡನೆಯವನಾಗಿರುವದರಿಂದ ಯಾರಿಗಾದರೂ ಜಾಮೀನು ಆಗುವದು, ಸಾಲ ಕೊಡುವದು ಅಥವಾ ಮಹತ್ವರ ವಿಷಯಗಳಲ್ಲಿ ಇತರರ ಮೇಲೆ ವಿಶ್ವಾಸ ವಿಡುವುದು ಮುಂತಾದವುಗಳ ಬಗೆಗೆ ಎಚ್ಚರದಿಂದಿರಬೇಕು. ಇಲ್ಲವಾದರೆ ಲೋಕಾಪವಾದಕ್ಕೆ, ಭಾರಿ ಹಾನಿಗೆ ಅಥವಾ ಮೋಸಕ್ಕೆ ಗುರಿಯಾಗಬೇಕಾಗಬಹುದು. ಅಗಸ್ಟ ೪ರ ವರೆಗೆ ವೆಚ್ಚ ಕೂಡ ವಿಪರೀತವಾಗುವ ಪ್ರಸಂಗ ಅರ್ಥಾತ್ ಸಂಗ್ರಹವಾಗುವಂಥ ವಿಶೇಷ ಯೋಗವೇನೂ ಇಲ್ಲ. ಅಲ್ಲದೆ ಅಗಸ್ಟ ೪ರವರೆಗೆ ಚಿಕ್ಕ-ಪುಟ್ಟ ನಿತ್ಯೋಪಯೋಗಿ ವಸ್ತುಗಳು ಕಳೆದುಹೋಗುವವು. ದೂರದ ಪ್ರವಾಸ ಬಹು ಕಷ್ಟಕರವಾದರೆ ಹತ್ತಿರದ ಪ್ರವಾಸ ಅತ್ಯಂತ ಸುಖಕರ. ಭೆಟ್ಟಿ ಹಾಗು ಲೇಖನ ಕಾರ್ಯಗಳು ಏಳನೆಯ ಗುರುವಿರುವಾಗ ಅತ್ಯುತ್ತಮ.

ದಾವೆ-ಫಿರ್ಯಾದಿ ಹಾಗು ಖಾಸಗಿ ಸ್ಪರ್ಧೆಗಳಲ್ಲಿ ಜನವರಿ ೫ರ ಪೂರ್ವದಲ್ಲಿ ದೊರೆಯುವ ನಿರ್ಣಯ ನಿಮ್ಮ ವಿರುದ್ಧ. ತದನಂತರವಾದರೆ ಯಶೋದಾಯಕ. ಅಷ್ಟೇ ಅಲ್ಲದೇ ಜನವರಿ ೫ರಿಂದ ಮಾರ್ಚ್ ೧೫ ಇಲ್ಲವೆ ಅಗಸ್ಟ ೬ರಿಂದ ಸಪ್ಟೆಂಬರ್ ೨೨ ಈ ಅವಧಿಯಲ್ಲಿ ದೊರೆಯುವ ತೀರ್ಮಾನಗಳು ಅತ್ಯಂತ ಯಶೋದಾಯಕವಿರುವದಲ್ಲದೆ ಪ್ರತಿಪಕ್ಷಿಯು ನಾಮಶೇಷನಾಗುವನು.

ಈ ರಾಶಿಯ ಗರ್ಭವತಿಯರು, ಜನವರಿ ೫ರ ನಂತರ ಪ್ರಸೂತರಾದರೆ ಅತ್ಯಂತ ಸುಲಭ ಪ್ರಸೂತಿಯಾಗುವ ಯೋಗವಿದ್ದು ಮಗು ಸಶಕ್ತವಾಗಿರುವುದು. ಈ ಸಲ ಬಹುತರರಿಗೆ ಗಂಡು ಮಗು ಜನಿಸುವ ಯೋಗವಿದೆ.

ಡಿಸೆಂಬರ್ ೧೮ರ ಪೂರ್ವದಲ್ಲಿ ಇಲ್ಲವೆ ಜನವರಿ ೧೧ರಿಂದ ಫೆಬ್ರುವರಿ ೫ ಇಲ್ಲವೆ ಮಾರ್ಚ್ ೧ರಿಂದ ಎಪ್ರಿಲ್ ೧ ಇಲ್ಲವೆ ಮೇ ೧ರಿಂದ ಜೂನ್ ೧೭ ಇಲ್ಲವೆ ಜುಲೈ ೨೭ರಿಂದ ಸಪ್ಟೆಂಬರ್ ೧ ಹಾಗು ಸಪ್ಟೆಂಬರ್ ೨೮ರಿಂದ ಅಕ್ಟೋಬರ್ ೨೪ ಈ ಅವಧಿಯಲ್ಲಿ ಪರೀಕ್ಷೆಯಾದರೆ ಯಶಸ್ಸು ಖಂಡಿತ. ಗುರು ಏಳನೆಯವನಾಗಿರುವಾಗ ಪರೀಕ್ಷೆಗೆ ಕಟ್ಟುವವರಲ್ಲಿ ಕನಿಷ್ಟ ೧/೩ದಷ್ಟು ವಿದ್ಯಾರ್ಥಿಗಳು ಉಚ್ಚವರ್ಗದಲ್ಲಿ ಉತ್ತೀರ್ಣರಾಗುವ ಶಕ್ಯತೆಯಿದೆ.



## ಕರ್ಕ

ಈ ವರ್ಷವು ಲಾಭ, ಉತ್ಕರ್ಷ ಹಾಗು ಪ್ರತಿಷ್ಠೆಗಳಿಗೆಲ್ಲ ಅತ್ಯಂತ ಯಶೋದಾಯಕವಿದ್ದು ಅಗಸ್ಟ ೪ರ ನಂತರ ಪ್ರಾಪಂಚಿಕಸುಖಕ್ಕೂ ಅತ್ಯುತ್ತಮವಾಗಿದೆಂಬ ಅನುಭವ ಈ ರಾಶಿಯವರಿಗೆ ಉಂಟಾಗುವದು ನಿಶ್ಚಿತ.

ಈ ರಾಶಿಯವರಿಗೆ ಅಗೆಸ್ಟ ೪ರ ವರೆಗೆ ಇರುವ ಕೇತುವಿನಿಂದಾಗಿ ಆರೋಗ್ಯ ಇರಬೇಕಾದಷ್ಟು ಚೆನ್ನಾಗಿರದು. ಆಗೀಗ ತುಸು ತೊಂದರೆಯಾದರೂ ದಣಿವುಂಟಾದಂತೆ ಎನಿಸುವುದು, ವಿಶೇಷ ಅದರಂತೆಯೆ ವರ್ಷವಿಡೀ ಈ ರಾಶಿಯ ಮೇಲೆ ಶನಿಯ ದೃಷ್ಟಿಯಿರುವುದರಿಂದಾಗಿ ಉತ್ಸಾಹ ಕುಂದಿ ಬೇಸರ ಉಂಟಾಗುವುದು ಹಾಗು ಎಷ್ಟೋ ಸಲ ಏನೇನೋ ವಿಚಾರ ಉಂಟಾದಂತೆ ಭಾಸವಾಗುವುದು. ಆರನೆಯ ಗುರುವಿರುವಾಗ ಅಂದರೆ ಜನವರಿ ೫ರ ನಂತರ ಹೀಗಾಗುವದು ವಿಶೇಷವಾಗಿ ನಿಮ್ಮ ಅನುಭವಕ್ಕೆ ಬರುವುದು. ಆದರಂತೆಯೆ ವರ್ಷಾರಂಭದಲ್ಲಿ ಈ ರಾಶಿಯ ಮೇಲೆ ಮಂಗಳ ಹಾಗು ಗುರುವಿನ ದೃಷ್ಟಿ ಇರುವದರಿಂದಾಗಿ ತೀವ್ರ ಕಾಯಿಲೆಗಳೇನೂ ಆಗುವ ಭಯವಿಲ್ಲ. ಇತರ ವಿಷಯದಲ್ಲಿ ಅವಶ್ಯಕ ದೇಹಸುಖ, ಐದನೆಯ ಗುರುವಿರುವಾಗ ಅತ್ಯುತ್ತಮ. ಆದರಂತೆಯೇ ಆರನೆಯ ಗುರುವಿರುವಾಗ ಸಹ ಉತ್ತಮವಾಗಿರುವುದು. ಆದರೆ ಐದನೆಯ ಗುರುವಿದ್ದಾಗ ಶುಭ ಹಾಗು ಉತ್ಸಾಹಜನಕ ವಿಚಾರಗಳು ಹೊಳೆಯುವಂತೆ ಆರನೆಯ ಗುರುವಿರುವಾಗ ಹೊಳೆಯಲಾರವು. ಪ್ರತಿಯಾಗಿ ಆಗ ಅಧೈರ್ಯದ, ಭಯಪ್ರದ ವಿಚಾರಗಳೇ ಹೆಚ್ಚು.

ನಿಮ್ಮ ರಾಶಿಯಲ್ಲಿ ಕೇತುವಿರುವಂತೆಯೆ, ಸಪ್ತಮ ಅರ್ಥಾತ್ ಭಾರ್ಯಾಸ್ಥಾನದಲ್ಲಿ ಅಂದರೆ ಅಗಸ್ಟ ೪ರ ವರೆಗೆ ರಾಹು ಇದ್ದುದರಿಂದ ಅಲ್ಲಿಯವರೆಗೆ ಹೆಂಡತಿಯ ಆರೋಗ್ಯ ಕೂಡ ಬಹಳ ಕಿರಿಕಿರಿಯದಾಗಿರುವದು. ಆದರೆ ಸಪ್ತಮೇಶ ಶನಿ ಏಕಾದಶ ಸ್ಥಾನದಲ್ಲಿ ಹಾಗು ಮಿತ್ರ ಕ್ಷೇತ್ರದಲ್ಲಿರುವದರಿಂದ ಆಕೆಗೆ ಕೂಡ ಅಂಥ ದೊಡ್ಡ ಕಾಯಿಲೆಗಳು ಉಂಟಾಗುವ ಭಯವಿಲ್ಲ. ಗುರು ಆರನೆಯವನಾಗಿರುವಾಗ ನಿಮ್ಮಂತೆಯೆ ಆಕೆಯ ವಿಚಾರಗಳು ಸಹ ತುಂಬ ಭಯಪ್ರದವೇ ಆಗಿರುತ್ತವೆ. ಮತ್ತು ಮೊದಲನೆಯ ಕೇತು ಹಾಗು ಏಳನೆಯ ರಾಹು ಇರುವವರೆಗೆ ಅಂದರೆ ಅಗಸ್ಟ ೪ರ ವರೆಗೆ ಉಭಯತರಲ್ಲಿ ಮೇಲಿಂದ ಮೇಲೆ ತೀವ್ರ ಮತಭೇದವುಂಟಾಗುವದಲ್ಲದೆ ಅಕ್ಟೋಬರ್ ೨೫ರಿಂದ ಡಿಸೆಂಬರ್ ೧೭ ಹಾಗೂ ೧೫ಮಾರ್ಚ್‌ದಿಂದ ಮೇ ೨ ಈ ಅವಧಿಯಲ್ಲಂತೂ ಅದು ತೀರ ವಿಕೋಪಕ್ಕೆ ಹೋಗುವ ಸಾಧ್ಯತೆಯಿದೆ. ತದನಂತರ ಮಾತ್ರ ಅದು ಕೆಲ ದಿನಗಳಲ್ಲಿ ತನ್ನಿಂದತಾನೇ ಶಾಂತವಾಗುವುದು.

ಅದರಂತೆಯೆ. ಈ ರಾಶಿಯವರ ವಿವಾಹ ಇನ್ನೂ ಆಗದಿದ್ದು ಈ ವರ್ಷ ಆಗಬೇಕೆನ್ನುವವರಿಗೆ ಐದನೆಯ ಗುರುವಿರುವಾಗಲೇ ಅಂದರೆ ಜನವರಿ ೫ರ ವರೆಗೆ ಒಳ್ಳೆಯ ಬಾಸಿಂಗಬಲವಿದ್ದು, ವಿಶೇಷ ಪ್ರಯತ್ನವಿಲ್ಲದೆಯೇ ಆಗುವದು. ಅನಂತರ ಮಾತ್ರ ಕಠಿಣವೆಂದೇ ತಿಳಿಯಬೇಕು. ಒಂದು ವೇಳೆ ಗೊತ್ತಾದರೂ ಯೋಗ್ಯ ಕಾರಣಗಳಿಗಾಗಿ ಮುಂದೆ ಹಾಕಬೇಕಾಗುವದು. ಅಲ್ಲದೆ ಕೆಲವು ಮದುವೆ ಮುರಿದುಹೋಗುವ ಸಂಭವವೂ ಉಂಟು. ವಧು ಇಲ್ಲವೆ ವರ ಅನುರೂಪರಾಗಿದ್ದು ಸುಂದರ ಹಾಗು ಒಳ್ಳೆಯ ಸ್ವಭಾವದವರಾದರೆ ತುಸು ಚಂಚಲ ಪ್ರವೃತ್ತಿಯುಳ್ಳವರೂ ಆಗಿದ್ದುದು ಕಂಡುಬರುತ್ತದೆ.

ಸಂತತಿಯ ವಿವಾಹವಾಗುವುದಿದ್ದಲ್ಲಿ ಅದಕ್ಕೆ ವರ್ಷವಿಡೀ ಬಾಸಿಂಗಬಲವಿದೆ. ಅದರಲ್ಲಿಯೂ ಅಕ್ಟೋಬರ್ ೩೦ರಿಂದ ನವೆಂಬರ್ ೨೩, ಡಿಸೆಂಬರ್ ೧೮ರಿಂದ ಜನವರಿ ೧೧, ಫೆಬ್ರುವರಿ ೫ರಿಂದ ಮಾರ್ಚ್ ೧, ಎಪ್ರಿಲ್ ೧ರಿಂದ ಮೇ ೧ ಹಾಗು ಸಪ್ಟೆಂಬರ್ ೨೮ರಿಂದ ಅಕ್ಟೋಬರ್ ೨೪ ಈ ಅವಧಿಯಲ್ಲಿ ನಿರಾಯಾಸವಾಗಿ ಅಪೇಕ್ಷಿತ ಮನೆತನದ ವ್ಯಕ್ತಿಜೊತೆಯ ಆಗುವದು. ವಧೂವರರು ರೂಪ ಹಾಗು ಗುಣಗಳಿಂದ ಮನಸ್ಸಿಗೊಪ್ಪುವಂತಿರುವರು. ವಿವಾಹವಾದ ಒಂದೆರಡು ತಿಂಗಳುಗಳಲ್ಲಿ ಮನೆಯಲ್ಲಿ ವಿಶೇಷ ಆನಂದದಾಯಕವಾದ ಘಟನೆಯೊಂದು ಜರಗುವುದು. ಹಾಗೆಯೇ ಸಂತತಿಯಿಂದ ಈ ವರ್ಷ

ಒಳ್ಳೆಯ ಸುಖ ದೊರೆಯುವುದಲ್ಲದೆ ಅಕ್ಟೋಬರ್ ೨೫ರವರೆಗೆ ಇಲ್ಲವೆ ಫೆಬ್ರುವರಿ ೧೧ರಿಂದ ಮಾರ್ಚ್ ೧೫ ಇಲ್ಲವೆ ಸಪ್ಟೆಂಬರ್ ೨೨ರ ನಂತರ ಅವರಲ್ಲಿ ಕೆಲವರ ಭಾರಿ ಉನ್ನತಿಯಾಗುವ ಸದವಕಾಶವಿದೆ.

ಸ್ವಂತದ ಉದ್ಯೋಗವಿರುವವರಿಗೆ ಈ ವರ್ಷ ಏಕಾದಶ ಅಂದರೆ ಲಾಭಸ್ಥಾನದ ಶನಿಯಿಂದಾಗಿ ವಿಶೇಷ ಉತ್ಕರ್ಷದ್ದಾಗಿದೆ. ಮಾನ ಮರ್ಯಾದೆ, ಲೌಕಿಕ ಇಲ್ಲವೆ ಅಧಿಕಾರಗಳ ಹೆಚ್ಚಳವಾಗುವ ಸಹಜಾವಕಾಶ ವಿದೆಯಲ್ಲದೆ ಅವರವರ ಶಿಕ್ಷಣ, ಬುದ್ಧಿ ಹಾಗು ಪ್ರಯತ್ನದ ಪ್ರಮಾಣದಲ್ಲಿ ಉಚ್ಚಸ್ಥಾನವೂ ಪ್ರಾಪ್ತವಾದೀತು. ಅತ್ಯಂತ ಕಠಿಣ ಇಲ್ಲವೆ ದುರ್ಲಭ ವಿಷಯಗಳಲ್ಲೂ ಯಶಸ್ಸು ಖಂಡಿತ. ಅಲ್ಲದೆ ವರ್ಷಾರಂಭದಲ್ಲಿ ನವಮ ಅರ್ಥಾತ್ ಭಾಗ್ಯಸ್ಥಾನದ ಮೇಲೆ ತತ್‌ಸ್ವಾಮಿ ಗುರುವಿನ ಮತ್ತು ದಶಮ ಅಂದರೆ ಕರ್ಮಸ್ಥಾನದ ಮೇಲೆ, ತತ್‌ಸ್ವಾಮಿ ಮಂಗಳನ ಪೂರ್ಣ ದೃಷ್ಟಿಯಿದ್ದು ಲಾಭೇಶ ಶುಕ್ರನು ಸುಖಸ್ಥಾನವಾದ ಚತುರ್ಥದಲ್ಲಿ ಧನೇಶ ರವಿ ಹಾಗು ಪರಾಕ್ರಮೇಶಬುಧರೊಟ್ಟಿಗೆ ತುಲಾದಲ್ಲಿ ಅಂದರೆ ಸ್ವಕ್ಷೇತ್ರದಲ್ಲಿರುವಂಥ ಅಪೂರ್ವಯೋಗದಿಂದಾಗಿ ಪ್ರತಿಯೊಬ್ಬರೂ ತಂತಮ್ಮ ಕರ್ತೃತ್ವಶಕ್ತಿಗನುಸಾರವಾಗಿ ಬಹಳ ಪ್ರಸಿದ್ಧಿಯನ್ನೂ ಸಮಾಜದಲ್ಲಿ ವಿಶೇಷ ಪ್ರತಿಷ್ಠೆಯನ್ನೂ ಪಡೆಯುವರು. ಸ್ವತಂತ್ರ ಉದ್ಯೋಗಿಯಾಗಿರಲಿ, ವ್ಯಾಪಾರಿಯಾಗಿರಲಿ, ನೌಕರ ವರ್ಗದವನಿರಲಿ, ಪ್ರತಿಯೊಬ್ಬನಿಗೂ ಕನಿಷ್ಠ ಶೇಕಡಾ ೯೦ರಷ್ಟಾದರೂ ಈ ಸತ್ಫಲ ದೊರೆಯುವದು ಅನುಭವಕ್ಕೆ ಬಂದೀತು. ನೌಕರವರ್ಗದವರಿಗೆ ಬದಲಿಯಾದರೆ ಅದು ಪೂರ್ವನಿಯೋಜಿತ ಸ್ಥಳಕ್ಕೇ ಆಗುವದಲ್ಲದೇ ಅನಿರೀಕ್ಷಿತವಾಗಿ ಬಡತಿಯೂ ದೊರೆಯುವುದು ಹಾಗು ಸಂಗ್ರಹದಲ್ಲಿ ಅಪಾರ ಹೆಚ್ಚಳವಾಗುವದು. ಅದರಂತೆಯೇ ಅಷ್ಟಮೇಶ ಶನಿ ಲಾಭಸ್ಥಾನದಲ್ಲಿದ್ದು ಆತನ ಪೂರ್ಣ ದೃಷ್ಟಿ ಅಷ್ಟಮದ ಮೇಲಿರುವದರಿಂದಾಗಿ ಲಾಟರಿ, ರೇಸ್ ಮುಂತಾದ ಮೂಲಗಳಿಂದ ಆಕಸ್ಮಿಕವಾಗಿ ಬಹು ದೊಡ್ಡ ಮೊತ್ತ ಸಿಕ್ಕಬಹುದಾಗಿದೆ, ಎಂಬುದರಲ್ಲಿ ಸಂದೇಹವಿಲ್ಲ. ಐದನೆಯ ಗುರುವಿರುವಾಗ ಶುಭಸೂಚಕ ಸ್ವಪ್ನಗಳು ಬೀಳುವವು; ಆದರೆ ಗುರು ಆರನೆಯವನಾಗಿರುವಾಗ ಮಿತ್ರರು ಹಾಗು ಕೈಕೆಳಗಿನ ನೌಕರರು ಒಳಗೊಳಗೇ ನಿಮ್ಮ ಬಗೆಗೆ ಮತ್ಸರ ಭಾವ ಹೊಂದಿರುವರೆಂಬುದು ಅನೇಕ ಸಲ ಕಂಡು ಬರುವದು. ಐದನೆಯ ಗುರುವಿರುವಾಗ ಮಂಗಲ ಕಾರ್ಯಗಳು ನಿಶ್ಚಯವಾಗುವದರಿಂದ ಅಥವಾ ನಿಮ್ಮ ಉಮೇದಿಗಾಗಿ ಬಹು ದೊಡ್ಡ ಧಾರ್ಮಿಕ ಕಾರ್ಯಗಳು ಜರಗುವವು. ಅದರಂತೆಯೆ, ಕುಲದೇವತೆಯ ಆರಾಧನೆ ಹಾಗು ದೂರದ ಯಾತ್ರಾದಿ ಕಾರ್ಯಗಳು ಜರಗುವವು. ಅದೇ ರೀತಿ ಪೂಜ್ಯ ವ್ಯಕ್ತಿಯ ದರ್ಶನ ಭಾಗ್ಯ ಹಾಗು ಸಹವಾಸದ ಯೋಗವು ಅಕಲ್ಪಿತವಾಗಿಯೆ ಒದಗಬಹುದು. ಚಿಕ್ಕ ಪುಟ್ಟ ಪ್ರಮಾಣದಲ್ಲಿ ಮನೆ ಇಲ್ಲವೆ ಜಮೀನು ಅಥವಾ ಅವೆರಡನ್ನೂ ಗಳಿಸಲು ಸಾಧ್ಯವಾಗಬಹುದು. ಹಾಗೆಯೆ ವಾಹನ ಸುಖ ಕೂಡ ತುಂಬ ಉತ್ತಮ. ಅನೇಕರು ಸ್ವಂತದ ವಾಹನ ಹೊಂದಬಹುದಾಗಿದೆ.

ದಾವೆ-ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಡಿಸೆಂಬರ್ ೧೭ರಿಂದ ಫೆಬ್ರುವರಿ ೧, ಮಾರ್ಚ್ ೧೫ರಿಂದ ಮೇ ೨, ಜೂನ್ ೨೦ರಿಂದ ಅಗಸ್ಟ್ ೬ ಹಾಗು ಸಪ್ಟೆಂಬರ್ ೨೨ರ ನಂತರದ ಅವಧಿಯಲ್ಲಿ ನಿರ್ಣಯವಾದರೆ ಅತ್ಯಂತ ಯಶೋದಾಯಕ; ಆದರೆ ಇತರ ಸಮಯದಲ್ಲಾದರೆ ನಿಮ್ಮ ವಿರುದ್ಧ ತೀರ್ಮಾನವಾಗುವದೆಂದೇ ತಿಳಿಯಬೇಕು.

ಈ ರಾಶಿಯ ಗರ್ಭಿಣಿಯರಿಗೆ ಐದನೆಯ ಗುರುವಿರುವಾಗ ಹೆರಿಗೆಯಾದರೆ ಪುತ್ರಲಾಭ; ಹಾಗು ಹೆರಿಗೆ ಸುಲಭ. ಆ ನಂತರವಾದರೆ ವಿಶೇಷ ತೊಂದರೆಯಾದರೂ ಬಹುತರರಿಗೆ ಗಂಡುಮಗುವೇ ಜನಿಸುವುದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಡಿಸೆಂಬರ್ ೧೭ರಿಂದ ಮೇ ೧೫, ಜೂನ್ ೨೦ರಿಂದ ಸಪ್ಟೆಂಬರ್ ೨೨ರ ಅವಧಿಯಲ್ಲಾದರೆ ಯಶ ನಿಶ್ಚಿತವಷ್ಟೇ ಅಲ್ಲದೆ ಐದನೆಯ ಗುರುವಿರುವಾಗ ಒಂದನೆ ಮೇಲಿನ ವರ್ಗ ಕೂಡ ದೊರೆಯುವದು.



**ಸಿಂಹ**

**ಒಟ್ಟಿನಲ್ಲಿ ಈ ರಾಶಿಯವರಿಗೆ ಐದನೆಯ ಗುರುವಿರುವಾಗ ಬಹುತರ ಎಲ್ಲ ವಿಧದಿಂದಲೂ ಸುಖ ಹಾಗು ಉತ್ಕರ್ಷ ಹೆಚ್ಚುತ್ತ ಹೋಗುವದೆಂಬುದು ನಿಶ್ಚಿತ.**

ಈ ರಾಶಿಯವರಿಗೆ ಈ ಸಲ ಗ್ರಹಬಲ ಅತ್ಯುತ್ತಮವಿದ್ದಾಗ್ಯೂ ಜನೆವರಿ ೫ರ ವರೆಗಿರುವ ನಾಲ್ಕನೆಯ ಗುರುವಿನಿಂದಾಗಿ ಸಂತತಿಯಿಂದಲೂ ಮತ್ತು ಅಕ್ಟೋಬರ್ ೨೫ರವರೆಗೆ ಅಂದರೆ ವರ್ಷದ ಪ್ರಾರಂಭ ಐದು ದಿನಗಳಲ್ಲಿ ಸಮೀಪದ ಆಪ್ತ ಇಲ್ಲವೆ ನೆರೆಹೊರೆಯವರಲ್ಲಿಯ ಕೆಲವರಿಂದಲೂ ತುಂಬ ಉಪದ್ರವವುಂಟಾಗುವದು; ಆದರೆ ಈ ವಿಷಯದಲ್ಲಿ ನಿಮ್ಮ ವರ್ತನೆ ತಪ್ಪಾದುದು ಹಾಗು ಹುಂಬತನದ್ದೆಂದು ಜನ ಭಾವಿಸುವದರಿಂದಾಗಿ ಮನಸ್ಸು ತುಂಬ ಉದ್ವಿಗ್ನಗೊಳ್ಳುವುದು. ಜನವರಿ ೫ರಂದು ಗುರು ಐದನೆಯವನಾಗಲಿರುವನು. ಅಂದಿನಿಂದ ಮಾತ್ರ ಮಾನಸಿಕ, ಶಾರೀರಿಕ, ಕೌಟುಂಬಿಕ ಮುಂತಾದ ಎಲ್ಲ ವಿಷಯಗಳಲ್ಲೂ ಉತ್ತಮ ಸುಖ-ಸಮಾಧಾನಗಳು ದೊರೆಯಲಾರಂಭಿಸುವವು. ವರ್ಷಾರಂಭದಲ್ಲಿ ರಾಶಿಸ್ವಾಮಿಯಾದ ರವಿಯು ಪರಾಕ್ರಮಸ್ಥಾನವಾದ ತೃತೀಯದಲ್ಲಿ ವ್ಯಯೇಶ ಚಂದ್ರ, ಲಾಭೇಶ ಹಾಗು ಧನೇಶ ಬುಧ ಹಾಗು ಕರ್ಮೇಶ ಶುಕ್ರ ಹೀಗೆ ಮೂವರಿಂದಲೂ ಯುಕ್ತನಾಗಿರುವದರಿಂದ ಯಾವುದೇ ಚಿಕ್ಕ ದೊಡ್ಡ ಕಾರ್ಯಗಳನ್ನು ಉತ್ಸಾಹದಿಂದ, ಆನಂದದಿಂದ, ಆದರೆ ಭಾರಿ ಈರ್ಷೆಯಿಂದ ಮಾಡುವಿರಿ. ಅವುಗಳಲ್ಲಿ ನೂರಕ್ಕೆ ೮೦–೯೦ರಷ್ಟಾದರೂ ಯಶಸ್ವಿಯಾಗಿ ಕೈಗೂಡುವವೆಂಬ ಅನುಭವ ಅಕ್ಟೋಬರ್ ೩೦ರ ವರೆಗೆ, ಇಲ್ಲವೆ ಜನೆವರಿ ೧೧ರಿಂದ ಫೆಬ್ರುವರಿ ೫, ಮಾರ್ಚ್ ೧ರಿಂದ ಎಪ್ರಿಲ್ ೧ , ಮೇ ೧ ರಿಂದ ಜೂನ್ ೧೭, ಜುಲೈ ೨೬ರಿಂದ ಸಪ್ಟೆಂಬರ್ ೧ ಹಾಗು ಸಪ್ಟೆಂಬರ ೨೮ರಿಂದ ಅಕ್ಟೋಬರ್ ೨೪ರ ವರೆಗಿನ ಅವಧಿಯಲ್ಲಿ ಉಂಟಾಗುವದು ನಿಶ್ಚಿತ.

ಮಿತ್ರ ಕ್ಷೇತ್ರ ಅಂದರೆ ದಶಮದಲ್ಲಿರುವ ಸ್ವಸ್ವಾಮಿ ಶನಿಯ ದೃಷ್ಟಿ ಭಾರ್ಯಾಸ್ಥಾನದ ಮೇಲೆಯೆ ಇದ್ದು, ವರ್ಷಾರಂಭದಲ್ಲಿ ಆತನ ಹಾಗು ಗುರುವಿನ ಶುಭ ಪ್ರತಿದೃಷ್ಟಿಯೋಗ ಉಂಟಾಗುವದರಿಂದಾಗಿ ಹೆಂಡತಿಯ ಆರೋಗ್ಯ ಯಾವಾಗಲೂ ಚೆನ್ನಾಗಿರುವದಲ್ಲದೆ ಆಕೆಯ ವರ್ತನೆ ಮತ್ತು ವಿಚಾರಗಳು ಸೌಮ್ಯ ಹಾಗು ಸಮಂಜಸವಾಗಿರುತ್ತವೆ. ಆದರೆ ದೇಹೇಶ ರವಿಯೊಂದಿಗೆ ಉಂಟಾಗಿರುವ ಶನಿಯ ಷಡಷ್ಟಕ ಯೋಗದ ಪರಿಣಾಮವಾಗಿ ಕೆಲವೊಮ್ಮೆ ತಪ್ಪು ತಿಳುವಳಿಕೆಯಿಂದಾಗಿ ನೀವು ಆಕೆಯನ್ನು ತಿರಸ್ಕಾರದಿಂದ, ತುಚ್ಛವಾಗಿ ಕಾಣುವ ತಪ್ಪು ಮಾಡುವಿರಿ. ಬೇಸಿಗೆಬೇಸರಿಕೆಗಳಿಂದ ಆಕೆಯ ಆರೋಗ್ಯ ಕೆಡುವ ಸಂಭವವಿಲ್ಲದಿದ್ದರೂ ಎತ್ತರದಿಂದ ಬೀಳುವ, ನಡೆಯುವಾಗ ಕಾಲು ಜಾರುವ, ವಾಹನದಿಂದ ಇಲ್ಲವೆ ಬೇರೆ ಇನ್ನಿತರ ವಸ್ತುವಿನಿಂದ ಪೆಟ್ಟಾಗುವದರಿಂದ ಆಕೆಗೆ ಜೂನ್ ೨೦ರಿಂದ ಅಗಸ್ಟ್ ೬ರ ಅವಧಿಯಲ್ಲಿ ಅಪಘಾತ ಸಂಭವಿಸಿ ಕ್ಲೇಶವುಂಟಾಗುವ ಭೀತಿಯಿದೆ.

ಈ ರಾಶಿಯವರ ವಿವಾಹವಾಗದೆ ಇದ್ದು ಈ ವರ್ಷವೇ ಆಗಬೇಕೆಂದಿದ್ದರೆ, ನಾಲ್ಕನೆಯ ಗುರುವಿರುವಾಗಲೆ ಅಂದರೆ ಜನವರಿ ೫ಕ್ಕಿಂತ ಮೊದಲು. ರೂಪಗುಣಗಳೆರಡರಲ್ಲೂ ಸಾಮಾನ್ಯವಾಗಿದ್ದರೂ ಪರಿಸ್ಥಿತಿಯಿಂದ ಉತ್ತಮವಾಗಿರುವ ವಧು ಇಲ್ಲವೆ ವರ-ರೊಂದಿಗೆ ಅದು ತೀವ್ರ ಗೊತ್ತಾಗಿ ಬೇಗ ವಿವಾಹ ಜರಗುವದು. ಐದನೆಯ ಗುರುವಿರುವಾಗ ರೂಪ-ಗುಣಗಳೆರಡರಲ್ಲೂ ಅನುರೂಪರಾಗಿದ್ದು ಪರಿಸ್ಥಿತಿ ಸಾಮಾನ್ಯವಾಗಿರುವವರೊಂದಿಗೆ ಆಗುವದಾದರೂ ಅದಕ್ಕಾಗಿ ವಿಶೇಷ ಪ್ರಯತ್ನ ಪಡಬೇಕಾಗುವದು.

ಅದರಂತೆಯೆ, ನಿಮ್ಮ ಮಕ್ಕಳಲ್ಲಿ ಯಾರದಾದರೂ ವಿವಾಹ ಈ ಸಲ ಮಾಡುವದಿದ್ದಲ್ಲಿ ಐದನೆಯ ಗುರುವಿರುವಾಗ ಉತ್ತಮ ಬಾಸಿಂಗಬಲವಿದೆ. ಅಂದರೆ ಜನೆವರಿ ೫ರ ನಂತರ ಅಲ್ಪಾಯಾಸದಿಂದಲೇ ನಿಶ್ಚಯವಾಗಿ ಗೊತ್ತಾದ ಮುಹೂರ್ತದಂದೇ ನಿರ್ವಿಘ್ನವಾಗಿ ಜರಗುವದಲ್ಲದೇ ಸೊಸೆ ಇಲ್ಲವೆ ಅಳಿಯ ರೂಪ ಹಾಗು ಗುಣಗಳಿಂದ ಉತ್ತಮರಾಗಿದ್ದು ಸ್ವಭಾವದಿಂದ ತುಸು ಗರ್ವಿಷ್ಠರಾಗಿರುವ ಸಾಧ್ಯತೆಯಿದೆ. ಸಂತತಿಯಿಂದ ನಾಲ್ಕನೆಯ ಗುರುವಿಗಿಂತ ಅವನು ಐದನೆಯವನಾಗಿರುವಾಗ ಒಳ್ಳೆಯ ಸುಖ ದೊರೆಯುವದಲ್ಲದೆ ಈತನಿಂದ ಅವರ ಪೈಕಿ ಬಹುತರರ ಉತ್ಕರ್ಷವೂ ಆಗುವದು.

ಉದ್ಯೋಗಧಂದೆಗಳಲ್ಲಿ ಈ ವರ್ಷ ಐದನೆಯ ಗುರುವಿರುವಾಗಲೇ ವಿಶೇಷ ಪ್ರಗತಿಯಾಗಲಿದೆ. ಹಾಗು ಭಾರಿ ಧೈರ್ಯದ, ಸಾಹಸದ ಕಾರ್ಯಗಳಲ್ಲಿ ಯಶಸ್ಸು ದೊರೆಯಲಿರುವದರಿಂದ ಜನರ ಮೇಲೆ ನಿಮ್ಮ ಕರ್ತೃತ್ವಶಕ್ತಿಯ ದೊಡ್ಡ ಪ್ರಭಾವವುಂಟಾಗುವದು. ಅದರಂತೆಯೆ, ಬುದ್ಧಿಜೀವಿಗಳಿಗಿಂತ ಶ್ರಮಜೀವಿ ಉದ್ಯೋಗಿಗಳಿಗೆ ಹೆಚ್ಚು ದ್ರವ್ಯಲಾಭವಾಗುವುದು. ನೌಕರದಾರರಿಗೆ ಬಹುತರವಾಗಿ ನಾಲ್ಕನೆಯ ಗುರುವಿರುವಾಗ ಮೇಲಿನ ದರ್ಜೆ ದೊರೆಯಬಹುದು. ಹಾಗು ಕೆಲವರಿಗೆ ಫೆಬ್ರುವರಿ ೧ರಿಂದ ಮೇ ೨ ಈ ಅವಧಿಯಲ್ಲಿ ತಾತ್ಪೂರ್ತಿಕವಾದರೂ ಬಹುದೊಡ್ಡ ಅಧಿಕಾರ ಸ್ಥಾನ ದೊರೆಯುವುದು. ಬದಲಿಯಾದರೆ ಎಲ್ಲ ಬಗೆಯಿಂದಲೂ ಅನುಕೂಲವಾದರೂ ದೂರದ ಸ್ಥಳಕ್ಕೆ ಆಗುವದು. ಮೇಲಧಿಕಾರಿ ಇಲ್ಲವೆ ಕೈಕೆಳಗಿನವರು ಒಳ್ಳೆಯ ಸಂತೋಷದಿಂದ, ಆದರದಿಂದ ವರ್ತಿಸುವರು; ಆದರೆ ಲೋಕಾಭಿಪ್ರಾಯ ಮಾತ್ರ ಪ್ರತಿಕೂಲವಿರುವದು. ವ್ಯಾಪಾರಸ್ಥರಿಗೆ ವಿಪುಲಲಾಭವಾಗಿ ಸ್ಥಾವರ-ಜಂಗಮ ಆಸ್ತಿಯ ವಿಶೇಷ ಸಂಗ್ರಹವಾಗುವುದು. ವಿಶೇಷತಃ ಅಕ್ಟೋಬರ್ ೨೦ರವರೆಗೆ ಹಾಗು ಜನವರಿ ೨೭ರಿಂದ ಮಾರ್ಚ್ ೩, ಮೇ ೬ರಿಂದ ೨೪ ಹಾಗು ಸಪ್ಟೆಂಬರ್ ೧೮ರಿಂದ ಅಕ್ಟೋಬರ್ ೫ ಈ ಅವಧಿ ಕೇವಲ ದ್ರವ್ಯಲಾಭಕ್ಕೆ ಹೆಚ್ಚು

ಅನುಕೂಲಕರವಾಗಿದೆ. ಜನೆವರಿ ೫ಕ್ಕಿಂತ ಮೊದಲು ಮಹತ್ವದ ಸರಕಾರಿ ಕಾರ್ಯದಲ್ಲಿ ಬಹು ದೊಡ್ಡ ಯಶಸ್ಸು ದೊರೆತು ಪ್ರತಿಪಕ್ಷದವರು ಪರಾಜಿತರಾಗುವರು. ಆಕಸ್ಮಿಕವಾಗಿ ತುಸು ದ್ರವ್ಯಲಾಭ ಕೂಡ ಆಗಬಹುದು. ಸಮೀಪದ ಪ್ರವಾಸಕ್ಕಿಂತ ದೂರದ ಪ್ರವಾಸವೇ ಹೆಚ್ಚು ಸುಖಕರವಾಗಿ ಜರಗುವದು ಮತ್ತು ಗುರು ಐದನೆಯವನಾಗಿರುವಾಗ ಅನೇಕ ಮಂಗಲ ಕಾರ್ಯಗಳು ಹಾಗು ಎರಡು ಇಲ್ಲವೆ ಕನಿಷ್ಠ ಒಂದಾದರೂ ಬಹು ದೊಡ್ಡ ಯಾತ್ರೆ ಜರಗುವ ಯೋಗವಿದೆ. ಬಂಧುಗಳ, ಮಿತ್ರರ ಹಾಗು ಆಪ್ತರಲ್ಲಿಯ ಅನೇಕರ ಉತ್ಕರ್ಷವಾಗುವಂಥ ವರ್ಷವಿದಾಗಿದೆ.

ದಾವೆ, ಫಿರ್ಯಾದಿ ಹಾಗು ಖಾಸಗಿ ಸ್ಪರ್ಧೆಯ ಕಾರ್ಯಗಳಲ್ಲಿ ಜನೆವರಿ ೫ರ ಪೂರ್ವದಲ್ಲಿ ನಿರ್ಣಯ ದೊರೆಯುವುದಾದರೆ ಪೂರ್ಣ ಅನುಕೂಲವಾಗಬಹುದೆಂಬುದು ನಿಜವಾದರೂ ಅದಕ್ಕಾಗಿ ಶ್ರಮ ಹಾಗು ವಿಶೇಷ ಪ್ರಯತ್ನ ಮಾಡಬೇಕಾದ ಪ್ರಸಂಗ. ಅನಂತರವಾದರೆ ನೂರಕ್ಕೆ ೫೦ರಷ್ಟಾದರೂ ಯಶ ಸಿಕ್ಕುವದು ನಿಶ್ಚಿತ. ಆದರೆ ನಿಮ್ಮ ಹಾಗು ಪ್ರತಿಪಕ್ಷಿಯ ನಡುವಣ ಘರ್ಷಣೆ ಮಾತ್ರ ಕಡಿಮೆಯಾಗದೆ ಮತ್ತಿಷ್ಟು ಉಲ್ಬಣಗೊಳ್ಳುವದು. ಹಾಗು ಪ್ರತಿಪಕ್ಷಿಯ ಕಡೆಗಿರುವವರಲ್ಲಿ ಒಬ್ಬಿಬ್ಬರ ವಿಯೋಗವಾಗುವ ಸಂಭವ.

ಈ ರಾಶಿಯ ಗರ್ಭವತಿಯರ ಹೆರಿಗೆ ಜನೆವರಿ ೫ರ ವರೆಗಾದರೆ ಬಹುಶಃ ಹೆಣ್ಣು ಮಗುವೇ ಜನಿಸುವುದು. ಆದರೆ ಪ್ರಸೂತಿ ಮಾತ್ರ ಕಷ್ಟಕರ. ಆದರೆ ಗುರು ಐದನೆಯವನಾದ ನಂತರವಾದರೆ ಏನೂ ತೊಂದರೆಯಾಗದೆ ಬಹುತರರಿಗೆ ಗಂಡು ಮಗುವೇ ಆಗುವುದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ, ಗುರು ನಾಲ್ಕನೆಯವನಿದ್ದಾಗ ಆದರೆ ಪರಿಶ್ರಮ ಪಟ್ಟು ಅಭ್ಯಾಸ ಮಾಡಿದರೆ ಮಾತ್ರ ಉತ್ತೀರ್ಣರಾಗಬಹುದು. ಆದರೆ ಗುರು ಐದನೆಯವನಾದ ನಂತರ ಪರೀಕ್ಷೆಯಾಗುವುದಿದ್ದರೆ ಬಹುತರ ವಿದ್ಯಾರ್ಥಿಗಳು ಉತ್ತೀರ್ಣರಾಗುವರಲ್ಲದೆ ಪ್ರತಿಶತ ೭೦ರಷ್ಟಾದರೂ ವಿದ್ಯಾರ್ಥಿಗಳು ಉಚ್ಚ ಶ್ರೇಣಿಯಲ್ಲಿ ಉತ್ತೀರ್ಣರಾಗುವರು.




ಒಟ್ಟಿನಲ್ಲಿ ಈ ವರ್ಷವು ಈ ರಾಶಿಯವರಿಗೆ ಅಪೇಕ್ಷಿತ ಕಾರ್ಯಗಳಲ್ಲಿ ಮೊದ ಮೊದಲು ತೊಂದರೆದಾಯಕವೂ ವಿಲಂಬಕರವೂ ಅನಿಸಿದರೂ ಕೊನೆಗೆ ನಿರೀಕ್ಷೆಯಂತೆ ಯಶಸ್ಸು ನೀಡುವಂಥದೂ ಭಾವೀ ಉತ್ಕರ್ಷಕ್ಕೆ ಪೋಷಕವೂ ಆಗಿದೆ.

ವರ್ಷಾರಂಭದಲ್ಲಿ ರಾಶಿಸ್ವಾಮಿಯಾದ ಬುಧನು ಲಾಭೇಶ ಚಂದ್ರ ಮತ್ತು ಭಾಗ್ಯೇಶನೂ ಧನೇಶನೂ ಆದ ಶುಕ್ರನೊಂದಿಗೆ ದ್ವಿತೀಯ ಅಂದರೆ ಧನಸ್ಥಾನದಲ್ಲಿರುವುದರಿಂದ ಈ ವರ್ಷವು ಒಟ್ಟಿನಲ್ಲಿ ಸುಖ ಸಮಾಧಾನದ ಹಾಗು ಪ್ರಗತಿಯದಾಗಿದೆಯಲ್ಲದೆ ಬಹ್ವಂಶ ಯೋಜಿತ ಕಾರ್ಯಗಳು ನಿರಾಯಾಸವಾಗಿ ನೆರವೇರುವವು. ವರ್ಷವಿಡೀ ಶನಿ ಒಂಬತ್ತನೆಯವನಾಗಿದ್ದು, ಕೇತು ಆಗಸ್ಟ ೪ರವರೆಗೆ ಹನ್ನೊಂದನೆಯವನಾಗಿ, ಗುರು ಜನೆವರಿ ೫ರವರೆಗೆ ಮೂರನೆಯವನಾಗಿದ್ದು, ಈ ಮೂವರೂ ಬಲಿಷ್ಠ ಸ್ಥಾನಗಳಲ್ಲಿರುವದರಿಂದ ಆರೋಗ್ಯ ಚೆನ್ನಾಗಿರುವದು. ಅತ್ಯಂತ ಮಹತ್ವದ ೩-೪ ಕೆಲಸಗಳು ಮೂರನೆಯ ಗುರುವಿದ್ದಾಗಲೇ ನಿಮ್ಮಿಚ್ಛೆಯಂತೆ ಯಶಸ್ವಿಯಾಗುವವು. ಆದರೆ ಗುರು ನಾಲ್ಕನೆಯವನಾಗಿರುವಾಗ ಲೋಕಾಭಿಪ್ರಾಯ ಪ್ರತಿಕೂಲವಾಗಿದೆಯೆಂದೆನಿಸುವದು. ಆಗಸ್ಟ ೪ ರಂದು ಬರಲಿರುವ ನಾಲ್ಕನೆಯ ರಾಹುವಿನಿಂದಾಗಿ ನಿಮ್ಮವರೇ ಎನಿಸಿದ ಕೆಲ ಆಪ್ತರು, ಸೇವಕರು ಹಾಗು ಆಶ್ರಿತರು ನಿಮ್ಮ ವಿರುದ್ಧ ವರ್ತಿಸುತ್ತಿರುವುದು ಕಂಡುಬಂದೀತು.

ಹೆಂಡತಿಯ ಆರೋಗ್ಯ ಚೆನ್ನಾಗಿಯೇ ಇರುವದು. ಆದರೂ ಡಿಸೆಂಬರ್ ೧೭ರಿಂದ ಫೆಬ್ರುವರಿ ೧, ಆಗಸ್ಟ ೭ರಿಂದ ಸಪ್ಟೆಂಬರ್ ೨೨ ಈ ಅವಧಿಯಲ್ಲಿ ಪಿತ್ತವಿಕಾರ ಇಲ್ಲವೆ ಉಷ್ಣವಿಕಾರಗಳಿಂದ ತುಸು ಕೆಡುವ ಸಂಭವವಿದೆ. ಅನಪೇಕ್ಷಿತ ಕಾಲದಲ್ಲಿ ನೀವು ಇಲ್ಲವೆ ಅವಳು ಪರಸ್ಥಳಕ್ಕೆ ಹೋಗುವದರಿಂದಾಗಿ ಸಹವಾಸಸುಖಕ್ಕೆ ವ್ಯತ್ಯಯವಾಗುವದು. ಗುರು ನಾಲ್ಕನೆಯವನಿರುವಾಗ ಆಕೆಯ ಪ್ರಭಾವ ನಿಮ್ಮ ಮೇಲೆ ವಿಶೇಷವಾಗಿರುವುದಲ್ಲದೇ ಅನೇಕ ವಿಷಯಗಳಲ್ಲಿ ಮತ್ಯೈಕ್ಯ ಹಾಗು ಒಳ್ಳೆಯ ಪ್ರೇಮವಿರುವದು.

ಈ ರಾಶಿಯವರ ವಿವಾಹ ಈ ವರ್ಷ ಆಗುವದಿದ್ದಲ್ಲಿ ಅದಕ್ಕೆ ಸಹ ಮೂರನೆಯ ಗುರುವಿದ್ದಾಗಿನಂತೆಯೆ ನಾಲ್ಕನೆಯ ಗುರುವಿದ್ದಾಗಲೂ ಒಳ್ಳೆಯ ಬಾಸಿಂಗಬಲವಿದೆಯೆಂದು ತಿಳಿದು ಅದಕ್ಕಾಗಿ ಅಹರ್ನಿಶಿ ಪ್ರಯತ್ನ ಮಾಡಬೇಕು. ಮೂರನೆಯ ಗುರುವಿರುವಾಗ ಪ್ರಯತ್ನಿಸಿದಷ್ಟು, ನಾಲ್ಕನೆಯ ಗುರುವಿರುವಾಗ ಪ್ರಯತ್ನಿಸಬೇಕಿಲ್ಲವಷ್ಟೇ ಅಲ್ಲ, ಆಗ ಅಲ್ಪಾಯಾಸದಿಂದಗೊತ್ತಾಗಿ ವಿವಾಹ ಜರಗುವದು. ವಧು ಇಲ್ಲವೆ ವರ ರೂಪ-ಗುಣಗಳೆರಡರಲ್ಲಿಯೂ ನಿಮಗಿಂತ ಶ್ರೇಷ್ಠರಾಗಿರುವರೆಂಬ ಅನುಭವ ಉಂಟಾಗುವದು. ವಿವಾಹ ಮೂರನೆಯ ಗುರುವಿರುವವರೆಗಾದರೆ ವಿದಾರು ಪಶ್ಚಿಮ ದೂರದ ಊರಿನವರಾಗಿರುವ ಸಂಭವ ಹೆಚ್ಚು. ನಾಲ್ಕನೆಯ ಗುರುವಿರುವಾಗ ತೀರ ಹತ್ತಿರದ ಊರಿನದಾಗಿರಬಹುದಾಗಿದೆಯಲ್ಲದೆ ಉಭಯತರಲ್ಲಿ ಒಳ್ಳೆಯ ಪ್ರೇಮವೂ ಇರುವುದು.

ನಿಮ್ಮ ಮಕ್ಕಳ ವಿವಾಹವನ್ನು ಈ ಸಲ ಮಾಡುವದಿದ್ದಲ್ಲಿ ಅದಕ್ಕೆ ಮೂರನೆಯ ಗುರುವಿರುವಾಗ ಅಂದರೆ ಜನೆವರಿ ೫ರವರೆಗಿದ್ದಷ್ಟು ಬಾಸಿಂಗಬಲ, ಗುರು ನಾಲ್ಕನೆಯವನಿರುವಾಗ ಇಲ್ಲವಲ್ಲದೆ ಅಕಸ್ಮಾತ್ ಗೊತ್ತಾದರೂ ಸೌಲಭ್ಯದ ದೃಷ್ಟಿಯಿಂದಲೂ ವೆಚ್ಚದ ದೃಷ್ಟಿಯಿಂದಲೂ ಅತೀವ ತೊಂದರೆದಾಯಕವಾಗಿದೆ. ಅದರಂತೆ ಗುರು ಮೂರನೆಯವನಿರುವಾಗಲಾದರೆ ಅಳಿಯ ಅಥವಾ ಸೊಸೆ ಮನಸ್ಸಿಗೊಪ್ಪುವಂತಿರುವರು. ಆದರೆ ಅದೇ ಗುರು ನಾಲ್ಕನೆಯವನಾದನಂತರ ಮದುವೆಯಾದರೆ ಮನಸ್ಸಿಗೊಪ್ಪುವಂತಿರಲಾರರು. ಸಂತತಿಯಿಂದ ದೊರೆಯುವ ಸುಖ ಮೇಲ್ನೋಟಕ್ಕೆ ಚೆನ್ನಾಗಿ ಕಂಡರೂ ಅಂತರದಲ್ಲಿ ಅಷ್ಟಿರದಲ್ಲದೆ, ಕೆಲವರ ವರ್ತನೆ ಕೂಡ ಬೇಸರಗೊಳಿಸುವಂಥದೂ ಹುಸಿ ನೋಯಿಸುವಂಥದೂ ಆಗಿರಬಹುದಾಗಿದೆ. ಅದರಂತೆಯೇ ಸಂತತಿಸ್ವಾಮಿ ಶನಿ ನವಮ ಅಂದರೆ ಭಾಗ್ಯಸ್ಥಾನದಲ್ಲಿದ್ದು ಅತನ ಮೇಲೆ ಗುರುವಿನ ದೃಷ್ಟಿಯಿರುವದರಿಂದ ಹಾಗು ವರ್ಷಾರಂಭದಲ್ಲಿಯೇ ಈ ಬಲಿಷ್ಠ ಯೋಗವಿರುವದರಿಂದ ಮಕ್ಕಳಲ್ಲಿ ಪ್ರತಿಯೊಬ್ಬರೂ ಅವರವರ ಯೋಗ್ಯತೆಗೆ ಮೀರಿ ಉನ್ನತಿ ಹೊಂದುವುದು ನಿಶ್ಚಿತ. ಅವರಲ್ಲಿ ಕೆಲವರು ಶಿಕ್ಷಣಕ್ಕಾಗಿ ಇಲ್ಲವೆ ಮಹತ್ವದ ಬೇರೆ ಕಾರ್ಯಗಳಿಗಾಗಿ ವಿದೇಶ ಪ್ರಯಾಣ ಕೈಕೊಳ್ಳಬಹುದಾದ ಯೋಗವಿದೆಯಲ್ಲದೆ ಒಬ್ಬಿಬ್ಬರು ತಮ್ಮ ಅಸಾಧಾರಣ ಗುಣದಿಂದಾಗಿ ಲೋಕ ಪ್ರಸಿದ್ಧಿ ಪಡೆಯುವರು.

ಉದ್ಯೋಗ-ಧಂದೆಗಳಿಗೆ ಈ ವರ್ಷ ಅತ್ಯಂತ ಶ್ರೇಷ್ಠವಾಗಿದೆಯಲ್ಲದೆ ಯಶೋದಾಯಕವೂ ಆಗಿದೆ. ಅದರಲ್ಲೂ ಆಗಸ್ಟ ೪ರ ವರೆಗೆ ಅಂದರೆ ರಾಹು ನಾಲ್ಕನೆಯವನಾಗಿ ಬರುವವರೆಗೆ ವಿಶೇಷ ಲಾಭದಾಯಕವಿದೆ. ದುರ್ಲಭ, ದುಸ್ಸಾಧ್ಯ ಹಾಗು ಅಲಭ್ಯವಾದಯಾವುದೇ ಕಾರ್ಯಗಳು ಅನಾಯಾಸವಾಗಿ ಸಾಧ್ಯವಾಗುವವು. ತದನಂತರ ಮಾತ್ರ ಏನಾದರೂ ವಿಘ್ನವುಂಟಾಗಿ ವಿಶೇಷ ವಿಲಂಬವಾಗಿ ಯಶಸ್ಸು ದೊರೆಯುವದು. ಬುದ್ಧಿಜೀವಿಗಳಿಗಿಂತ ವ್ಯಾಪಾರೋದ್ಯೋಗಗಳಲ್ಲಿರುವವರಿಗೆ ಈ ವರ್ಷ ಹೆಚ್ಚು ಲಾಭದಾಯಕವಾಗಿರುವುದಲ್ಲದೆ ವಿಶೇಷವಾಗಿ ಮಾನಸಿಕಸುಖ ದೊರೆಯುವದು. ನೌಕರದಾರರಿಗೆ ಮಾರ್ಚ್ ೧೫ರಿಂದ ಮೇ ೨, ಅಗಸ್ಟ ೬ರಿಂದ ಸಪ್ಟೆಂಬರ್ ೨೨ ಈ ಅವಧಿಯನ್ನುಳಿದು ಇತರ ಸಮಯದಲ್ಲಿ ಒಳ್ಳೆಯ ಲಾಭ, ಸುಖ ಹಾಗು ವಿಶೇಷ ಉತ್ಕರ್ಷ ಉಂಟಾಗುವುದು. ಮೇಲಿನ ಅವಧಿಯಲ್ಲಿ ವರಿಷ್ಠರ ಮರ್ಜಿ ಚೆನ್ನಾಗಿರದು ಮತ್ತು ಅವರು ವಿಶೇಷ ಕಿರುಕುಳವನ್ನೂ ಕೊಡಬಹುದು; ಆದರೆ ಇತರ ಸಮಯದಲ್ಲಿ ಇದೆಲ್ಲ ತನ್ನಿಂದ ತಾನೇ ಕಡಿಮೆಯಾಗುವುದು. ಬದಲಿಯಾದರೆ ಗುರು ಮೂರನೆಯವನಾಗಿರುವಾಗಿನಕ್ಕಿಂತ ನಾಲ್ಕನೆಯವನಾಗಿರುವಾಗ ಆದರೆ ಹೆಚ್ಚು ಅನುಕೂಲವಿರುವ ಸ್ಥಳಕ್ಕೇ ಆಗುವದಲ್ಲದೇ ಬಹುತರರಿಗೆ ನವೆಂಬರ್ ೨೪ರಿಂದ ಡಿಸೆಂಬರ್ ೧೦, ಜನೆವರಿ ೬ರಿಂದ ಫೆಬ್ರುವರಿ ೧೪, ಮೇ ೬ರಿಂದ ಜೂನ್ ೨೫, ಸಪ್ಟೆಂಬರ್ ೧೮ರಿಂದ ಅಕ್ಟೋಬರ್ ೫ ಈ ಅವಧಿಯಲ್ಲಿ ಬಡತಿ ದೊರೆಯುವ ಸಂಭವವಿದೆ. ಉಚ್ಚ ವಸ್ತುವಿನ ವಿಶೇಷ ಸಂಗ್ರಹವಾಗುವದು. ಅಲ್ಲದೆ ಗುರು ನಾಲ್ಕನೆಯವನಿರುವಾಗ ಕೆಲವರಿಗೆ ಸ್ಥಾವರ ಆಸ್ತಿಯ ಸಂಗ್ರಹವೂ ಸಾಧ್ಯವಾಗುವ ಯೋಗವಿದೆಯಲ್ಲದೆ ಮನದಲ್ಲಿ ಯೋಜಿಸಿದಂತೆ ಎಲ್ಲವೂ ವ್ಯವಸ್ಥಿತ ರೀತಿಯಲ್ಲಿ ಸಾಧಿಸುವವು. ಅದರಂತೆಯೆ ಗುರು ನಾಲ್ಕನೆಯವನಾದನಂತರ ಅನೇಕರಿಗೆ ವಾಹನ ಖರೀದಿಸುವ ಅಗತ್ಯ ನಿಶ್ಚಿತವಾಗಿಯೂ ಬರುವುದು. ಮೂರನೆಯ ಗುರುವಿರುವಾಗ ಪ್ರಸಿದ್ಧ ಕ್ಷೇತ್ರದ ಯಾತ್ರಾಯೋಗ ಜರಗುವ ಸಾಧ್ಯತೆಯುಂಟು ಇಲ್ಲವೆ ಮಹತ್ವದ ಧಾರ್ಮಿಕ ಕಾರ್ಯಗಳಾದರೂ ಜರಗುವ ಯೋಗವಿದೆ. ದೂರದ ಪ್ರವಾಸ ಹೆಚ್ಚು ಸುಖಕರ ಹಾಗು ಇಚ್ಛಾಪೂರ್ತಿಯದಾಗಿರುವದಾದರೆ ಸನಿಹದ ಪ್ರವಾಸ ಅಕ್ಟೋಬರ್ ೨೫ರಿಂದ ಫೆಬ್ರುವರಿ ೧, ಜೂನ್ ೨೦ರಿಂದ ಆಗಸ್ಟ್ ೬ ರವರೆಗೆ ಹೆಚ್ಚು ಸುಖಕರ ಹಾಗು ಯಶಸ್ಸಿನದಾಗಿರುವುದು. ರಾಹು ನಾಲ್ಕನೆಯವನಾದನಂತರ ಅಂದರೆ ಅಗಸ್ಟ ೪ರ ನಂತರ ಪಿತೃಗಳ ಬಗೆಗೆ ಅನೇಕ ಸ್ವಪ್ನಗಳು ಬೀಳುವವು. ಅಲ್ಲದೇ ಈ ಸಲ ಅತ್ಯಂತ ಪೂಜನೀಯ ಹಾಗು ಪ್ರೀತಿಪಾತ್ರ ವ್ಯಕ್ತಿಯ ಸಹವಾಸ ಆಕಸ್ಮಿಕವಾಗಿ ಲಭಿಸುವದು.

ದಾವೆ, ಫಿರ್ಯಾದಿ ಹಾಗು ಖಾಸಗಿ ಸ್ಪರ್ಧೆಗಳಲ್ಲಿ ಫೆಬ್ರುವರಿ ೧ರವರೆಗೆ ಇಲ್ಲವೆ ಮೇ ೨ರಿಂದ ಜೂನ್೨೦ ಇಲ್ಲವೆ ಸಪ್ಟೆಂಬರ್ ೨೨ರ ನಂತರ ನಿರ್ಣಯವಾದರೆ ಅವುಗಳಲ್ಲಿ ಬಹ್ವಂಶ ಅತ್ಯಂತ ಯಶಸ್ವಿಯಾಗಬಲ್ಲವು.

ಈ ರಾಶಿಯ ಗರ್ಭವತಿಯರು ಅಗಸ್ಟ ೪ರ ಮೊದಲು ಪ್ರಸೂತರಾದರೆ ಅವರಿಗೆ ತುಸು ತೊಂದರೆಯೆನಿಸಿದರೂ ಬಹುತರರಿಗೆ ಹೆಣ್ಣು ಮಗುವೇ ಜನಿಸುವದು; ನಂತರವಾದರೆ ಸುಲಭ ಪ್ರಸೂತಿಯಾಗಿ ಪುತ್ರೋತ್ಸವದ ಆನಂದ ದೊರೆಯುವುದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಜನೆವರಿ ೫ರ ಮೊದಲು ಇಲ್ಲವೆ ಜನೆವರಿ ೨೭ರಿಂದ ಫೆಬ್ರುವರಿ ೧೪, ವಾರ್ಚ್ ೩ರಿಂದ ಮೇ ೬, ಜೂನ್ ೨೫ರಿಂದ ಅಗಸ್ಟ ೩೧, ಇಲ್ಲವೆ ಸಪ್ಟೆಂಬರ್ ೧೮ರಿಂದ ಅಕ್ಟೋಬರ್ ೫ ಈ ಅವಧಿಯಲ್ಲಾದರೆ ನಿಶ್ಚಿತವಾಗಿಯೂ ಉತ್ತೀರ್ಣರಾಗುವರು; ಅಲ್ಲದೆ ಮಾರ್ಚ್ ೩ರಿಂದ ಮೇ ೬ ಈ ಅವಧಿಯಲ್ಲಾದರೆ ಅವರಲ್ಲಿ ಬಹುತರರಿಗೆ ಮೇಲಿನ ಶ್ರೇಣಿ ದೊರೆಯುವುದು.




**ಈ ವರ್ಷವು ಈ ರಾಶಿಯವರಿಗೆ ಬಹುತರ ಎಲ್ಲ ವಿಷಯಗಳಲ್ಲಿಯೂ ಸುಖಕರವಾಗಿರುವಂತೆ ಉದ್ಯೋಗಿಳ ವಿಷಯದಲ್ಲಿಯೂ ತುಂಬ ಉತ್ಕರ್ಷದ್ದಾಗಿದೆ ಎಂದೇ ತಿಳಿಯಬೇಕು.**

ವರ್ಷಾರಂಭದಲ್ಲಿ ಈ ರಾಶಿಯವರಿಗೆ ಸ್ವಸ್ವಾಮಿಯಾದ ಶುಕ್ರನು ಲಾಭೇಶ ರವಿ, ಕರ್ಮೇಶ ಚಂದ್ರ, ಭಾಗ್ಯೇಶ ಬುಧರಿಂದ ಯುಕ್ತನಿರುವದರಿಂದ ಹಾಗು ಅಗಸ್ಟ ೪ರವರೆಗೆ ರಾಹು ನಾಲ್ಕನೆಯವನು ಮತ್ತು ವರ್ಷವಿಡೀ ಶನಿ ಎಂಟನೆಯವನಾಗಿದ್ದರೂ ವಿಶೇಷ ಕ್ಲೇಶವುಂಟಾಗದೇ ಆರೋಗ್ಯ ಉತ್ತಮವೇ ಇರುವುದು. ಶುಭ ಹಾಗು ಉಚ್ಚ ವಿಚಾರಗಳಿಂದ ಕೂಡಿ ಮನಸ್ಸು ಪ್ರಫುಲ್ಲಿತವಾಗಿರುವದು; ಆದರೆ ಒಮ್ಮೊಮ್ಮೆ ಹೊಟ್ಟೆನೋವು, ಗಂಟಲು ನೋವು ಮುಂತಾದ ವಿಕಾರಗಳು ಉಂಟಾಗುವುದಲ್ಲದೆ ಸೂಜಿ, ಚಾಕು ಮುಂತಾದ ವಸ್ತುಗಳಿಂದ ಕೈಗೆ ಇಲ್ಲವೆ ಕಾಲಿಗೆ ಗಾಯವಾಗಿ ನಾಲ್ಕೆಂಟು ದಿನ ತೊಂದರೆಯಾಗಬಹುದು. ವಾಹನದಿಂದಲೂ ತುಸು ತೊಂದರೆಯಾಗಬಹುದು. ಡಿಸೆಂಬರ್ ೧೮ರಿಂದ ಜನೆವರಿ ೧೧, ಮಾರ್ಚ್ ೩೦ರಿಂದ ಮೇ ೧ ಹಾಗು ಅಕ್ಟೋಬರ್ ೨೪ರಿಂದ ನವೆಂಬರ್ ೫ರ ಅವಧಿಯಲ್ಲೇ ಮೇಲೆ ಹೇಳಿದ ಚಿಕ್ಕ ಪ್ರಮಾಣದ ಅಪಘಾತಗಳು ಸಂಭವಿಸಬಹುದಾದ ಅನುಭವ ಉಂಟಾದೀತು. ಇತರ ಅವಶ್ಯಕ ವಿಷಯಗಳಲ್ಲಿ ದೇಹ ಸುಖ ಚೆನ್ನಾಗಿಯೇ ದೊರೆಯುವುದು. ಹಾಗು ಪ್ರಾಪಂಚಿಕಸುಖಕ್ಕೆ ಜನೆವರಿ ೫ರವರೆಗೆ ಇರುವ ದ್ವಿತೀಯ ಗುರುವಿಗಿಂತ ಅಂದಿನಿಂದ ಬರಲಿರುವ ತೃತೀಯ ಗುರುವೇ ಹೆಚ್ಚು ಫಲದಾಯಕನಾಗಿರುವನು.

ಸ್ತ್ರೀಸುಖಕ್ಕೂ ಈ ವರ್ಷವು ಅತ್ಯುತ್ತಮವೇ ಆಗಿದ್ದು, ಡಿಸೆಂಬರ್ ೧೬ರ ವರೆಗೆ, ಅದರಂತೆಯೆ ಜನೆವರಿ ೧ರಿಂದ ಮಾರ್ಚ್ ೧೫, ಮೇ ೨ರಿಂದ ಜೂನ್ ೨೦ ಮತ್ತು ಅಗಸ್ಟ ೬ರಿಂದ ಸಪ್ಟೆಂಬರ್ ೨೨ ಈ ಅವಧಿಯಲ್ಲಿ ಅವಳಿಂದ ಉತ್ಸಾಹ ಹೆಚ್ಚುವಂಥ ವಿಶೇಷ ಘಟನೆಗಳು ಜರಗುವದರಿಂದ ಆಕೆಯ ಬಗೆಗೆ ಪ್ರೇಮ ವರ್ಧಿಸುತ್ತ ಹೋಗುವದಲ್ಲದೆ ಅವಳ ಆರೋಗ್ಯವೂ ಒಟ್ಟಿನಲ್ಲಿ ನಿರೋಗಿಯಾಗಿರುವದು ನಿಜವಾದರೂ ಮಾರ್ಚ್ ೧೫ರಿಂದ ಮೇ ೨, ಸಪ್ಟೆಂಬರ್ ೨೨ರಿಂದ ನವ್ಹೆಂಬರ್ ೫, ಈ ಅವಧಿಯಲ್ಲಿ ತಲೆಶೂಲಿ, ಮೂಲವ್ಯಾಧಿ ಇಲ್ಲವೆ ಮಾಸಿಕ ರಜೋದರ್ಶನಕ್ಕೆ ಸಂಬಂಧಿಸಿದ ಕೆಲ ತೊಂದರೆಗಳುಂಟಾಗಬಹುದು.

ಈ ರಾಶಿಯ ಅವಿವಾಹಿತರ ವಿವಾಹ ಈ ವರ್ಷ ಆಗುವದಿದ್ದಲ್ಲಿ ಗುರು ದ್ವಿತೀಯದಲ್ಲಿರುವದಕ್ಕಿಂತ ಆತ ತೃತೀಯದಲ್ಲಿ ಬಂದನಂತರ ಅಂದರೆ ಜನೆವರಿ ೫ರ ನಂತರವೇ ಒಳ್ಳೆಯ ಬಾಸಿಂಗಬಲವಿದ್ದು ಅಲ್ಪಾಯಾಸದಿಂದಲೇ ವಿವಾಹವಾಗಿ ವಧು ಇಲ್ಲವೆ ವರ ಸ್ವತಃಕ್ಕಿಂತ ತುಸು ಕಪ್ಪು ವರ್ಣದವರಾದರೂ ರೂಪದಿಂದ ತುಂಬ ಸುಂದರವಾಗಿದ್ದು ಕರ್ತೃತ್ವಶಾಲಿಗಳೂ, ಗಡಚು ಧ್ವನಿಯುಳ್ಳವರಾದರೂ ಮೃದುಭಾಷಿಗಳೂ ಆಗಿರುತ್ತಾರೆ. ವರ್ಷಾರಂಭದಲ್ಲಿ ಮಂಗಳ ಉಚ್ಚಸ್ಥಾನದಲ್ಲಿರುವುದರಿಂದ ಅವರು ಅದೃಷ್ಟವಂತರಾಗಿರುವರೆಂಬುದು ವಿವಾಹಾನಂತರ ೬-೮ ತಿಂಗಳಲ್ಲಿ ನಿಮ್ಮ ಅನುಭವಕ್ಕೆ ಬರುವುದು.

ಅದರಂತೆಯೆ, ನಿಮ್ಮ ಮಕ್ಕಳ ವಿವಾಹವನ್ನು ಈ ಸಲ ಮಾಡುವದಿದ್ದಲ್ಲಿ ಅದಕ್ಕೆ ಸಹ ಗುರು ದ್ವಿತೀಯನಾಗಿರುವಾಗ ಅಂದರೆ ಜನೆವರಿ ೫ರ ಮೊದಲಿದ್ದಷ್ಟು ಉತ್ತಮ ಬಾಸಿಂಗಬಲ ಮುಂದೆ ಇಲ್ಲ. ಮೇಲ್ಕಾಣಿಸಿದ ಅವಧಿಯಲ್ಲಾದರೆ ಮನಕ್ಕೊಪ್ಪುವಂಥಲ್ಲಿ ಅಲ್ಪಾ-ಯಾಸದಿಂದಲೇ ಗೊತ್ತಾಗಿ ವಿವಾಹ ನಿರ್ವಿಘ್ನವಾಗಿ ಜರಗುವುದಲ್ಲದೆ ಸೊಸೆ ಇಲ್ಲವೆ ಅಳಿಯ ಗುಣ, ರೂಪ ಹಾಗು ಬುದ್ಧಿಮತ್ತೆಯಲ್ಲಿ ನಿಮ್ಮ ಅಪೇಕ್ಷೆಗಿಂತ ಹೆಚ್ಚು ಉತ್ತಮರಾಗಿರುವರು. ಮಕ್ಕಳೆಲ್ಲರಿಂದಲೂ ವಿಶೇಷತಃ ಗುರು ದ್ವಿತೀಯನಾಗಿರುವಾಗಲೇ, ಹೆಚ್ಚು ಸುಖ ದೊರೆಯುವದಲ್ಲದೆ ಎಲ್ಲರ ಉನ್ನತಿಯೂ ಆಗುವುದು; ಆದರೆ ಕೆಲವರು ದೂರದ ಸ್ಥಳಕ್ಕೆ ಹೋಗುವುದರಿಂದ ಮನಸ್ಸು ತುಸು ಖಿನ್ನವಾಗಬಹುದು.

ವರ್ಷವಿಡೀ ಶನಿ ಎಂಟನೆಯವನಾದ್ದಾಗ್ಯೂ ಉದ್ಯೋಗಕ್ಕೆ ಆತ ಪ್ರತಿಕೂಲನೇನಲ್ಲ. ಯಾವುದೇ ಕಾರ್ಯ ಸಕಾಲಕ್ಕಾಗದೆ ತುಸು ತಡವಾಗಿ ಆಗುವದರಿಂದಾಗಿ ಸ್ವಲ್ಪ ತೊಂದರೆ ಹಾಗು ಮಾನಸಿಕ ಗೊಂದಲವಾಗಬಹುದಷ್ಟೇ. ವರ್ಷಾರಂಭದಲ್ಲಿ ಭಾಗ್ಯೇಶ ಬುಧ, ಕರ್ಮೇಶ ಚಂದ್ರ, ಲಾಭೇಶ ರವಿ ದೇಹಸ್ಥಾನದಲ್ಲಿ ಅಂದರೆ ಈ ರಾಶಿಯಲ್ಲೇ ಇದ್ದು ಜನೆವರಿ ೫ರವರೆಗೆ ಗುರು ದ್ವಿತೀಯ ಹಾಗು ಅನಂತರ ತೃತೀಯ, ಹೀಗೆ ಅನುಕ್ರಮವಾಗಿ ಮಿತ್ರಕ್ಷೇತ್ರ ಹಾಗು ಸ್ವಕ್ಷೇತ್ರದಲ್ಲಿ ಬಲಿಷ್ಠರಾಗಿದ್ದುದರಿಂದ ಉದ್ಯೋಗಸ್ಥರಿಗೆ ವಿಶೇಷ ದ್ರವ್ಯಲಾಭವಾಗುವುದಲ್ಲದೇ ಪತ್ತು ಪ್ರತಿಷ್ಠೆಗಳೂ ಹೆಚ್ಚುವವು. ಮತ್ತು ಪ್ರಗತಿಯ ಮೆಟ್ಟಲೇರುತ್ತ ನಡೆಯುವುದು. ವ್ಯಾಪಾರಸ್ಥರಂತೆಯೆ ಶ್ರಮಜೀವಿ ಹಾಗು ಬುದ್ಧಿಜೀವಿಗಳಿಗೂ ಈ ವರ್ಷ ಪ್ರಗತಿ, ಪ್ರತಿಷ್ಠೆ ಹಾಗು ಲಾಭಕ್ಕೆ ಒಳ್ಳೆಯ ಅನುಕೂಲಕರವಿದೆಯೆಂಬ ಅನುಭವ ನವೆಂಬರ್ ೧ರವರೆಗೆ; ಅದರಂತೆಯೆ, ಮುಂದೆ ನವೆಂಬರ್ ೨೪ರಿಂದ ಡಿಸೆಂಬರ್ ೧೦, ಜನೆವರಿ ೬ರಿಂದ ೨೭, ಫೆಬ್ರುವರಿ ೧೪ರಿಂದ ಮಾರ್ಚ್ ೩, ಮೇ ೬ರಿಂದ ಜೂನ್ ೨೪, ಅಗಸ್ಟ ೮ರಿಂದ ೨೫, ಅಗಸ್ಟ ೩೧ರಿಂದ ಸಪ್ಟೆಂಬರ್ ೧೮, ಹಾಗು ಅಕ್ಟೋಬರ್ ೫ರಿಂದ ೨೫ ಈ ಅವಧಿಗಳಲ್ಲಿ ನಿಶ್ಚಿತವಾಗಿಯೂ ಉಂಟಾಗುವುದು. ಲಾಭದ ಮಾನದಂತೆ ಸಂಗ್ರಹವೂ ಸಾಧ್ಯವಾಗುವುದು. ಎಂಟನೆಯ ಶನಿ ಆಕಸ್ಮಿಕ ಲಾಭಕ್ಕೆ ಹೆಚ್ಚು ಅನುಕೂಲನಾಗಿದ್ದಾನೆ. ಅಂತೆಯೇ ಲಾಟರಿ, ರೇಸ್‌ಗಳಲ್ಲಿ ಪ್ರಯತ್ನಪಟ್ಟರೆ ಅದು ಸಹಸಾ ವ್ಯರ್ಥವಾಗಲಾರದು. ನೌಕರವರ್ಗದವರಿಗೆ ಗುರು ದ್ವಿತೀಯನಾಗಿರುವಾಗಿನಕ್ಕಿಂತಲೂ ಆತ ತೃತೀಯನಾಗಿದ್ದಾಗಲೇ ಬಡತಿಯ ಅವಕಾಶವಿದ್ದು, ಬಹುತರರಿಗೆ ರಾಹು ಮೂರನೆಯ ಅಂದರೆ ಅಗಸ್ಟ ೪ರ ನಂತರವೇ ಬಹುಶಃ ಅದು ದೊರೆಯುವುದು; ಆದರೆ ಮೇಲೆ ಹೇಳಿದ ಅವಧಿಯವರೆಗೆ ಅಂದರೆ

ರಾಹು ನಾಲ್ಕನೆಯವನಾಗಿರುವವರೆಗೆ ಪರಿಶ್ರಮಿಸಿದ ವಿಶೇಷ ತೊಂದರೆಯಾಗುವುದು. ರಾಹು ಮೂರನೆಯವನಾದನಂತರ ಬದಲಿಯಾದರೆ ಯೋಗ್ಯ ಸ್ಥಳಕ್ಕೇ ಆಗುವುದಾದರೆ ರಾಹು ನಾಲ್ಕನೆಯವನಿರುವಾಗ ಅನುಕೂಲಕರವಲ್ಲದ ಸ್ಥಳಕ್ಕೆ ಆಗುವುದು. ಗುರು ಮೂರನೆಯವನಿರುವಾಗ ಯಾತ್ರೆ ಇಲ್ಲವೆ ಒಳ್ಳೆಯ ಧಾರ್ಮಿಕ ಕಾರ್ಯ ಜರಗುವ ಸಂಭವ. ನಾಲ್ಕನೆಯ ರಾಹು ವಿಷ್ಣಾಗೆ ಅಪ್ಪರಿಂದ; ಆದರೆ ಆತ ಮೂರನೆಯವನಾದ ನಂತರ ಬಂಧುಗಳಿಂದ ವಿಪರೀತ ತೊಂದರೆ ಹಾಗು ಉಪದ್ರವವಾಗುವದು. ಎರಡನೆಯ ಗುರುವಿರುವಾಗಿನಕ್ಕಿಂತ ಆತ ಮೂರನೆಯವನಾದ ನಂತರ ಮಿತ್ರಸುಖ ಅತ್ಯುತ್ತಮವಿರುವದಲ್ಲದೇ ಮಕ್ಕಳ ಹಳ್ಳಿಯೂ ಆಗಬಹುದು.

ದಾವೆ-ಫಿರ್ಯಾದಿ ಹಾಗು ಇತರ ಖಾಸಗಿ ಸ್ಪರ್ಧೆಗಳಲ್ಲಿ ಡಿಸೆಂಬರ್ ೧೮ರಿಂದ ಫೆಬ್ರುವರಿ ೧, ಮೇ ೨ರಿಂದ ಜೂನ್ ೨೨ ಹಾಗು ಅಗಸ್ಟ ೬ರಿಂದ ಸಪ್ಟೆಂಬರ್ ೨೨ ಈ ಅವಧಿಯಲ್ಲಿ ನಿರ್ಣಯವಾದರೆ ಸ್ವಂತಕ್ಕೆ ಅತ್ಯಂತ ಯಶೋದಾಯಕವಾಗುವುದು.

ಈ ರಾಶಿಯ ಗರ್ಭಿಣಿಯರ ಹೆರಿಗೆ ಎರಡನೆಯ ಗುರುವಿರುವಾಗ ಆದರೆ ವಿಶೇಷ ಶ್ರಮವಾಗದೆ ಬಹುಶಃ ಗಂಡು ಮಗುವೇ ಜನಿಸುವುದು. ಆದರೆ ಗುರು ತೃತೀಯದಲ್ಲಿ ಅಂದರೆ ಜನೆವರಿ ೫ರ ನಂತರ ಹೆರಿಗೆಯಾದರೆ ಬಹುತರರಿಗೆ ಹೆಣ್ಣು ಮಗು ಜನಿಸುವ ಯೋಗವಿದ್ದು ಮೊದಲು ಪ್ರಸೂತಿ ಕಷ್ಟಕರವೆನಿಸಿದರೂ ತದನಂತರ ಮಾತ್ರ ತಾಯಿ ಹಾಗು ಮಗು ಇಬ್ಬರ ಆರೋಗ್ಯವೂ ಚೆನ್ನಾಗಿರುವುದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಎರಡನೆಯ ಗುರುವಿರುವಾಗ ಅಂದರೆ ಜನೆವರಿ ೫ರ ಮೊದಲು ಆದರೆ ಬಹುತರರು ಪಾಸಾಗುವರು. ಅನಂತರ ಅಂದರೆ ಫೆಬ್ರುವರಿ ೧೪ರಿಂದ ಮಾರ್ಚ ೩, ಮೇ ೨೪ರಿಂದ ಜೂನ್ ೨೫, ಅಗಸ್ಟ ೩೧ರಿಂದ ಸಪ್ಟೆಂಬರ್ ೧೮ ಹಾಗು ಆಕ್ಟೋಬರ್ ೧೮ರಿಂದ ೨೫ರ ಅವಧಿಯಲ್ಲಿ ಆಗುವದಿದ್ದರೆ ಮೇಲ್ದರ್ಜೆಯಲ್ಲಿ ಉತ್ತೀರ್ಣರಾಗುವರು.



## ವೃಶ್ಚಿಕ

**ಈ ವರ್ಷವು ಈ ರಾಶಿಯವರಿಗೆ ಸಂಗ್ರಹಕ್ಕೆ ಅಷ್ಟೊಂದು ಅನುಕೂಲಕರವಾಗಿರದಿದ್ದರೂ ಪ್ರಾಪಂಚಿಕಸುಖ ಹಾಗು ಔದ್ಯೋಗಿಕ ಉತ್ಕರ್ಷಕ್ಕೆ ಒಳ್ಳೆಯ ಪೋಷಕವಾಗಿದೆ.**

ವರ್ಷಾರಂಭದಲ್ಲಿ ಈ ರಾಶಿಯವರ ರಾಶಿಸ್ವಾಮಿ ಕುಜನು ಮಂಗಳನು ಬಲಿಷ್ಠ ಹಾಗು ಉಚ್ಚನಾಗಿರುವನಲ್ಲದೆ ಜನೆವರಿ ೫ರ ವರೆಗೆ ಗುರು ಕೂಡ ಇದೇ ರಾಶಿಯಲ್ಲಿರುವದರಿಂದ ಆರೋಗ್ಯ ಉತ್ತಮವಿರುವುದು. ಮೇಲ್ಕಾಣಿಸಿದ ದಿನಾಂಕದ ನಂತರ ಗುರು ಎರಡನೆಯವನಾದ ಬಳಿಕ ಬಹುತರ ಎಲ್ಲ ವಿಷಯದಲ್ಲಿಯೂ ಪ್ರಾಪಂಚಿಕಸುಖ ಮನಸ್ಸಿನಂತೆ. ಅಲ್ಲದೇ ಕೌಟುಂಬಿಕ ಉತ್ಕರ್ಷ ಎದ್ದು ಕಾಣುವಂಥ ಒಂದೆರಡು ಘಟನೆಗಳು ನಿಶ್ಚಿತವಾಗಿಯೂ ಜರಗುವದರಿಂದ ಮನೋತ್ಸಾಹ ಇಮ್ಮಡಿಯಾಗುವುದು. ಅದರಂತೆಯೆ, ಅಕ್ಟೋಬರ್ ೩೦ರಿಂದ ನವೆಂಬರ್ ೨೩, ಮಾರ್ಚ ೧೮ರಿಂದ ಎಪ್ರಿಲ್ ೧ ಹಾಗು ಮೇ ೬ರಿಂದ ೨೪ ಈ ಅವಧಿಯಲ್ಲಿ ಆರೋಗ್ಯಕ್ಕೆ ತುಸು ತೊಂದರೆಯಾಗುವ ಸಂಭವವಿದೆಯಲ್ಲದೆ ನವೆಂಬರ್ ೧೭ರವರೆಗೆ ಕೆಲ ವೆಚ್ಚಗಳಿಗಾಗಿ ಇಲ್ಲವೆ ಕುಟುಂಬದವರ ಕೆಲ ಕಾರ್ಯಗಳಿಗಾಗಿ ಮನಸ್ಸಿನ ವಿರುದ್ಧ ಸಮ್ಮತಿಸಬೇಕಾಗುವದು.

ಶನಿಯು ವರ್ಷವಿಡೀ ಸಪ್ತಮದಲ್ಲಿರುವುದರಿಂದ ಹೆಂಡತಿಯು ಅನಾವಶ್ಯಕ ವರ್ಚಸ್ಸು ಬೀರಲೆಳಸುವುದರಿಂದಾಗಿ ಮನಸ್ಸು ವಿಪರೀತ ಮುದುಡಿಕೊಳ್ಳುವುದು. ಆದರೆ ಅನೇಕ ವಿಷಯಗಳಲ್ಲಿ ನಿಮಗಿಂತ ಹೆಂಡತಿಯ ವಿಚಾರಗಳೇ ಹೆಚ್ಚು ಹಿತಕರವೂ ಹಾಗು ಯೋಗ್ಯವಾದವುಗಳೂ ಆಗಿರುತ್ತವೆ. ಅವಳ ಆರೋಗ್ಯ ಅಕ್ಟೋಬರ್ ೩೦ರವರೆಗೆ ಹಾಗು ಅನಂತರ ಮಾರ್ಚ ೧೮ರಿಂದ ಎಪ್ರಿಲ್ ೧ ಮತ್ತು ಆಕ್ಟೋಬರ್ ೨೪ರಿಂದ ನವೆಂಬರ್ ೫ ಈ ಅವಧಿಯಲ್ಲಿ ವಿಪರೀತ ಕಿರಿಕಿರಿಯದಾಗಿರುತ್ತದೆ. ಆದರೆ ಇತರ ಅವಧಿಯಲ್ಲಿ ಉತ್ತಮವಾಗಿರುವುದು.

ಈ ರಾಶಿಯ ಅವಿವಾಹಿತರ ವಿವಾಹ ಆಗುವುದಿದ್ದಲ್ಲಿ ಈ ಸಲ ನಿಶ್ಚಿತವಾಗಿಯೂ ಆಗುವುದು. ಮೊದಲನೆಯ ಗುರುವಿರುವಾಗ ಅಂದರೆ ಜನೆವರಿ ೫ರ ಪೂರ್ವದಲ್ಲಿ ಅಲ್ಪಾಯಾಸದಿಂದಲೇ ಗೊತ್ತಾಗಿ ವಿವಾಹ ಜರಗುವ ಬಲಿಷ್ಠ ಯೋಗವಿದೆ. ಆದರೆ ಗುರು ಎರಡನೆಯವನಾದ ಬಳಿಕ ನಿಶ್ಚಿತವಾದರೆ ವಿವಾಹ ವಿಪರೀತ ವಿಲಂಬವಾಗುತ್ತ ಹೋಗುವುದೆಂದೇ ತಿಳಿಯಬೇಕು. ವರ ಇಲ್ಲವೆ ವಧು ಸ್ವತಃಕ್ಕಿಂತ ತುಸು ಕಪ್ಪು ವರ್ಣದ ಹಾಗು ಸ್ಥೂಲಕಾಯದ ಆದರೆ ಸ್ವಭಾವದಿಂದ ಸೌಮ್ಯ, ದೂರದರ್ಶಿ ಹಾಗು ಚಾಣಾಕ್ಷರಾಗಿರುವರು.

ಅದರಂತೆಯೆ, ನಿಮ್ಮ ಮಕ್ಕಳ ವಿವಾಹವಾಗುವುದಿದ್ದಲ್ಲಿ ಅದಕ್ಕೆ ಸಹ ಬಾಸಿಂಗಬಲ ಚೆನ್ನಾಗಿದ್ದು ಮೊದಲನೆಯ ಗುರುವಿರುವಾಗಾಗಲಿ ಇಲ್ಲವೆ ಎರಡನೆಯ ಗುರುವಿರುವಾಗಾಗಲಿ ಅಲ್ಪಾಯಾಸದಿಂದಲೇ ವಿವಾಹ ನಿಶ್ಚಯವಾಗುವದೆಂಬುದರಲ್ಲಿ ಸಂಶಯವಿಲ್ಲ; ಅದೂ ಸಹ ಅಲ್ಪ ಪರಿಚಯದ ವ್ಯಕ್ತಿಯ ಪ್ರಭಾವದಿಂದ. ಸೊಸೆ ಇಲ್ಲವೆ ಅಳಿಯ ಅತ್ಯಂತ ಸುಂದರರೂ, ಮನಸ್ಸೊಪ್ಪುವಂಥವರೂ, ಹಸನ್ಮುಖಿಗಳೂ ಇರುವದಾದರೆ ಸ್ವಭಾವದಿಂದ ಸಿಡುಕಿನವರಾಗಿರಬಹುದಾಗಿದೆ. ಸಮಾರಂಭ ನಿಮ್ಮಲ್ಲಿಯೇ ಜರುಗಬೇಕೆಂಬ ಅಪೇಕ್ಷೆ ಮನದಲ್ಲಿದ್ದರೂ ಅದು ಎದುರು ಪಕ್ಷದವರಿರುವೆಡೆ ಜರುಗಿಸಬೇಕಾಗುವದೆಂಬುದು ನಿಮ್ಮ ಅನುಭವಕ್ಕೆ ಬರುವದು. ಈ ಸಲ ಮಕ್ಕಳಲ್ಲಿಯ ಪ್ರತಿಯೊಬ್ಬರ ಉನ್ನತಿಯೂ ಅಪೇಕ್ಷಿತ ರೀತಿಯಲ್ಲಾಗುವುದು. ಅಲ್ಲದೇ ಅವರಿಂದ ಅಪೇಕ್ಷಿತ ಸುಖವೂ ದೊರೆಯುವುದು. ಅವರಲ್ಲೊಬ್ಬನ ಭಾಗ್ಯದ ಬಾಗಿಲು ತೆರೆಯುತ್ತ ಹೋಗುವದೆಂಬುದರ ಅನುಭವ ಡಿಸೆಂಬರ್ ೧೭ರಿಂದ ಫೆಬ್ರುವರಿ ೧, ಜೂನ್ ೨೨ರಿಂದ ಅಗಸ್ಟ ೬ ಇಲ್ಲವೆ ಸಪ್ಟೆಂಬರ್ ೨೨ರಿಂದ ನವೆಂಬರ್ ೫ ಈ ಅವಧಿಯಲ್ಲಿ ನಿಶ್ಚಿತವಾಗಿಯೂ ಆಗುವದು.

ಸ್ವತಂತ್ರ ಉದ್ಯೋಗದಲ್ಲಿದ್ದವರಿಗೆ ನವೆಂಬರ್ ೨೩ರವರೆಗೆ ತಮ್ಮ ಉದ್ಯೋಗ ಅತೀವ ಮಂದವೂ ಚಿಂತಾಜನಕವೆನ್ನಿಸುವಂತಹದೂ ಹಾನಿಕರವೂ ಎಂದು ಭಾಸವಾದರೂ ಅನಂತರ ಶೀಘ್ರಗತಿಯಲ್ಲಿ ಸುಧಾರಣೆಯಾಗುವುದು. ರಾಹು ಮೂರನೆಯವನಿರುವವರೆಗೆ ಅಂದರೆ ಅಗಸ್ಟ ೪ರ ವರೆಗೆ ಎಲ್ಲ ರೀತಿಯಿಂದಲೂ ಪ್ರಗತಿ, ಪ್ರತಿಷ್ಠೆ ಹಾಗು ಒಳ್ಳೆಯ ಲಾಭ ದೊರೆಯುವುದಲ್ಲದೆ ಮನೋತ್ಸಾಹವೂ ಹೆಚ್ಚುವದು. ವ್ಯಾಪಾರಸ್ಥರಿಗಿಂತ ಬುದ್ಧಿಜೀವಿ, ಶ್ರಮಜೀವಿ ಹಾಗು ಕಲಾಜೀವಿಗಳಿಗೆ ಹೆಚ್ಚು ಸುಖ ಹಾಗು ಯಶಸ್ಸು ದೊರೆಯುವುದು. ನೌಕರದಾರರಿಗೆ ಗುರು ಪ್ರಥಮದಲ್ಲಿರುವಾಗಿನಕ್ಕಿಂತ ದ್ವಿತೀಯದಲ್ಲಿರುವಾಗ ಹೆಚ್ಚು ಯಶೋದಾಯಕವಾಗಿದ್ದು, ರಾಹು ತೃತೀಯದಲ್ಲಿರುವವರೆಗೆ ಮೇಲಿನ ಹುದ್ದೆ ಸಹ ದೊರೆಯಬಹುದು. ಆದರೆ ಆತ(ರಾಹು) ಎರಡನೆಯವನಾದ ಬಳಿಕ ಅಂದರೆ ಅಗಸ್ಟ ೪ರ ನಂತರ ಪರಿಸ್ಥಿತಿ ಮರ್ಜಿ ಚೆನ್ನಾಗಿಲ್ಲ ಎಂಬುದು ಕಂಡುಬರುವದು. ಅದಕ್ಕೆ ನಿಮ್ಮ ಅಶಿಸ್ತಿನ, ಅಧಿಕಪ್ರಸಂಗತನದ, ನಿಮ್ಮ ರತನದ ವರ್ತನೆಯೇ ಕಾರಣವಾಗಿರಬಹುದಾಗಿದೆ. ವರ್ಗವಾಗುವದಿದ್ದಲ್ಲಿ ಗುರು ಮೊದಲನೆಯವನಾಗಿರುವದಕ್ಕಿಂತ ಎರಡನೆಯವನಾದಾಗ ಆದರೆ ಹೆಚ್ಚು ಸುಖಸೌಕರ್ಯವುಳ್ಳ ಸ್ಥಳಕ್ಕೆ ಆಗುವುದು. ಈ ವರ್ಷ ಲಾಭಕ್ಕೆ ಅತ್ಯಂತ ಯಶೋದಾಯಕವಿದೆ. ಆದರೂ ಆ ಮಾನದಿಂದ ಸಂಗ್ರಹ ಸಾಧ್ಯವಾಗದೆಂಬುದರ ಅನುಭವ ಬಹುತರರಿಗೆ ಆಗುವದು. ಅದಕ್ಕೆ ಕಾರಣವೆಂದರೆ ಲಾಭಕ್ಕಿಂತ ಖರ್ಚು ಹೆಚ್ಚು ಮಾಡಬೇಕಾದ ಪ್ರಸಂಗ ಬರುವದು. ಕೈಕೆಳಗಿನ ಸೇವಕರು, ಆಪ್ತರು ಹಾಗು ನೆರೆಹೊರೆಯವರೆಲ್ಲ ನಿಮ್ಮೊಡನೆ ಚೆನ್ನಾಗಿ ವರ್ತಿಸುವರು. ಆದರೆ ಲೇವಾದೇವಿಯ ಬಗೆಗೆ ಮಿತ್ರರಿಂದ ವಿಶೇಷ ತೊಂದರೆಯುಂಟಾಗುವ ಭಯವಿದೆ. ಮೊದಲನೆಯ ಗುರುವಿರುವಾಗ ಯಾತ್ರೆಯ ಯೋಗವಿದ್ದರೆ ಆತ ಎರಡನೆಯವನಾಗಿರುವಾಗ ಇತರ ಧಾರ್ಮಿಕ ಕಾರ್ಯಗಳಿಗೆ ಅನುಕೂಲವಿರುವುದು. ಬಂಧುಗಳ ಉತ್ಕರ್ಷವಾದರೆ ಯಾವುದೇ ವಿಷಯದಲ್ಲಿಯೂ ನಿಮ್ಮ ಹಾಗು ಅವರ ನಡುವೆ ಭಿನ್ನಾಭಿಪ್ರಾಯವಿರುವುದು. ವಾಹನಸುಖ ಉತ್ತಮ. ಅದರಲ್ಲಿಯೂ ನೂರಕ್ಕೆ ಎಪ್ಪತ್ತರಷ್ಟು ಜನರಿಗಾದರೂ ವಾಹನವನ್ನು ಖರೀದಿಸುವ ಆವಶ್ಯಕತೆ ಉಂಟಾಗುವುದು. ಎರಡನೆಯ ಗುರುವಿರುವಾಗ ಶುಭಸೂಚಕ ಸ್ವಪ್ನಗಳನೇಕ ಬೀಳುವವು. ಆಕ್ಟೋಬರ್ ೩೦ರಿಂದ ನವೆಂಬರ್ ೨೪, ಜನವರಿ ೬ರಿಂದ ಫೆಬ್ರುವರಿ ೧, ಮಾರ್ಚ ೩ರಿಂದ ಮೇ ೬, ಮೇ ೨೪ರಿಂದ ಜೂನ್ ೨೫ ಹಾಗು ಸಪ್ಟೆಂಬರ್ ೧೮ರಿಂದ ಆಕ್ಟೋಬರ್ ೫ರ ಕಾಲದಲ್ಲಿ ಧನಲಾಭಕ್ಕೆ ಅನುಕೂಲಕರವಾಗಿದೆ. ಹಾಗು ನವೆಂಬರ್ ೨೪ರಿಂದ ಡಿಸೆಂಬರ್ ೧೧, ಜನೆವರಿ ೬ರಿಂದ ೨೨ ಮತ್ತು ಜೂನ್ ೮ರಿಂದ ೨೫ರ ನಡುವಿನ ಸಮಯದಲ್ಲಿ ತುಸು ಆಕಸ್ಮಿಕ ಲಾಭವಾಗುವ ಸಂಭವವಿದೆಯೆಂದು ತಿಳಿಯಬೇಕು.

ದಾವೆ-ಫಿರ್ಯಾದಿ ಹಾಗು ಇತರ ಖಾಸಗಿ ಸ್ಪರ್ಧೆಗಳಲ್ಲಿ, ಆಕ್ಟೋಬರ್ ೩೦ರಿಂದ ನವೆಂಬರ್ ೨೩, ಡಿಸೆಂಬರ್ ೧೮ರಿಂದ ಜನೆವರಿ ೧೧, ಫೆಬ್ರುವರಿ ೫ರಿಂದ ಮಾರ್ಚ ೧, ಜೂನ್ ೧೭ರಿಂದ ಜುಲೈ ೨೩, ಸಪ್ಟೆಂಬರ್ ೧೮ರಿಂದ ಆಕ್ಟೋಬರ್ ೨೫ರ ಅವಧಿಯಲ್ಲಿ ತೀರ್ಪು ಆದರೆ ಖಂಡಿತವಾಗಿಯೂ ಯಶಸ್ಸು ಸಿಕ್ಕುವದು. ಅಲ್ಲದೆ ಫೆಬ್ರುವರಿ ೧೮ರಿಂದ ಮಾರ್ಚ ೧೫ರ ನಡುವಿನ ಅವಧಿಯಲ್ಲಿ ಶತ್ರುಗಳ ಪೈಕಿ ಕೆಲವರ ಅಪಕರ್ಷ ಇಲ್ಲವೆ ವಿಯೋಗವಾಗುವ ಸಂಭವವಿದೆ.

ಈ ರಾಶಿಯ ಗರ್ಭಿಣಿ ಸ್ತ್ರೀಯರ ಹೆರಿಗೆ ಗುರು ಪ್ರಥಮನಾಗಿರುವಾಗಅಂದರೆ ಜನವರಿ ೫ರವರೆಗೆ ಆದರೆ ಬಹುತರರಿಗೆ ಹೆಣ್ಣು ಮಗುವಾಗುವದಾದರೂ ಅನಂತರ ಗುರು ಎರಡನೆಯವನಾದ ಬಳಿಕ ಪುತ್ರ ಪ್ರಾಪ್ತಿಯಾಗುವ ಪ್ರಬಲಯೋಗವಿದೆ. ಆದರೆ ಡಿಸೆಂಬರ್೧೭ ರಿಂದ ಫೆಬ್ರುವರಿ ೧೮ರ ಅವಧಿಯಲ್ಲಾದರೆ ಮಾತ್ರ ತುಸು ತೊಂದರೆಯಾಗುವ ಸಂಭವ. ಇತರ ಕಾಲದಲ್ಲಾದರೆ ಸುಲಭಪ್ರಸೂತಿಯಾಗುವುದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಜನವರಿ ೫ರ ಪೂರ್ವದಲ್ಲಾದರೆ ನೂರಕ್ಕೆ ೬೦ರಷ್ಟು ಜನ ಉತ್ತೀರ್ಣರಾಗುವರು. ತದನಂತರವಾದರೆ ೫೦ಕ್ಕಿಂತ ಕಡಿಮೆ ಪ್ರಮಾಣದಲ್ಲಾಗುವ ಯೋಗವಿದ್ದು, ಅದರಲ್ಲೂ ಕೆಲವು ವಿದ್ಯಾರ್ಥಿಗಳು ಮೇಲ್ದರ್ಜೆಯನ್ನು ಪಡೆಯುವ ಯೋಗವಿದೆ.




ಈ ರಾಶಿಯವರಿಗೆ ಈ ವರ್ಷ ಜನವರಿ ವರೆಗಿನ ಕಾಲ, ಅತೀವ ಕಷ್ಟಮಯ,ಅಲ್ಲಿಂದ ಆಗಸ್ಟ ೪ ರ ವರೆಗೆ ಕಷ್ಟಸಾಧ್ಯ ಯಶಸ್ಸಿನ ಕಾಲವಾದರೆ ತದನಂತರ ಒಳ್ಳೆಯ ಯಶೋದಾಯಕ ಹಾಗು ಸುಖಕರ ಕಾಲವಾಗಿದೆ ಎಂದೇ ತಿಳಿಯಬೇಕು.

ರಾಶಿಸ್ವಾಮಿ-ಗುರು ದ್ವಾದಶ ಅಂದರೆ ಜನವರಿ ೫ರ ವರೆಗೆ ವ್ಯಯಸ್ಥಾನದಲ್ಲಿರುವದರಿಂದ ಆರೋಗ್ಯ ಒಂದಿಲ್ಲೊಂದು ಬಗೆಯಿಂದ ಕೆಡುತ್ತಲೇ ಇರುವುದಲ್ಲದೆ ವಿವಿಧ ರೀತಿಯ ಆಪತ್ತುಗಳು ಎದುರಾಗುವುದರಿಂದಾಗಿ ಮನಸ್ಸಿಗೆ ಖೇದವುಂಟಾಗಬಹುದು. ಆದರೆ ಮೇಲೆ ಹೇಳಿದ ದಿನಾಂಕದ ನಂತರ ಮಾತ್ರ ಸ್ವಂತದ ಪರಿಶ್ರಮದಿಂದ ಕೆಲವೊಂದು ದೂರವಾದರೆ ಇನ್ನುಳಿದವುಗಳು ತಂತಾನೇ ದೂರವಾಗುವವಲ್ಲದೆ ಆರೋಗ್ಯ ಉತ್ತಮಗೊಳ್ಳುವುದು. ಹಾಗು ಸುಖವೂ ಮನಸ್ಸಿನಂತೆ ದೊರೆಯುವುದು. ಆಗಸ್ಟ ೪ ರ ವರೆಗೆ ರಾಹು ದ್ವಿತೀಯ ಅಂದರೆ ಕುಟುಂಬ ಸ್ಥಾನದಲ್ಲಿದ್ದು ಅಲ್ಲಿಯ ವರೆಗೆ ಮಾತ್ರ ಗೃಹಕಲಹವಿದ್ದೇ ಇರುವುದು. ಸರಳ ಮಾತು ಕೂಡ ಒಬ್ಬರಿಗೊಬ್ಬರಿಗೆ ಸೇರಿಕೆಯಾಗದು. ಹಾಗು ಪರಸ್ಪರರಲ್ಲಿ ಮತ್ಯೈಕ್ಯ ವಿರದ್ದರಿಂದ ಅನೇಕ ಕುಟುಂಬಗಳು ಒಡೆದು-ಹೋಗುವ ಸಂಭವ. ಆಗಸ್ಟ ೪ರ ನಂತರ ಕೌಟುಂಬಿಕ ಸುಖ ವ್ಯವಸ್ಥಿತ ರೀತಿಯಲ್ಲಿ ದೊರೆಯುವುದು. ರಾಹು ದ್ವಿತೀಯದಲ್ಲಿರುವವರೆಗೆ ಮಂತ್ರ-ತಂತ್ರ ಇಲ್ಲವೆ ಭೂತಪೀಡೆಯಿಂದಾಗಿ ಮನೆಯಲ್ಲಿಯ ಒಬ್ಬರಿಗೆ ಕ್ಲೇಶವುಂಟಾಗುವ ಸಂಭವವಿದೆ.

ಹೆಂಡತಿಯ ಆರೋಗ್ಯ ಈ ಸಲ ನಿಮಗಿಂತ ಉತ್ತಮವಿರುವುದು. ಆದರೆ ಆಗಸ್ಟ ೪ರಿಂದ ಏಳನೆಯ ಕೇತು ಬಂದನಂತರ ಆಕೆಯ ಸ್ವಭಾವ ಸಿಡುಕಿನದಾಗುವುದು. ಹಾಗು ಚಿಕ್ಕ ಪುಟ್ಟ ವಿಷಯಗಳಲ್ಲಿಯೂ ವಾದಿಸತೊಡಗುವಳು.

ಈ ರಾಶಿಯ ವಿವಾಹೇಚ್ಛುಗಳಿಗೆ ಹನ್ನೆರಡನೆಯ ಗುರುವಿರುವಾಗ ಬಾಸಿಂಗಬಲವಿಲ್ಲವೆಂದೇ ಹೇಳಬಹುದು. ಆದರೆ ಗುರು ಮೊದಲನೆಯವನಾದ ಬಳಿಕ ಅಂದರೆ ಜನವರಿ ೫ರ ನಂತರ ಮಾತ್ರ ಅಲ್ಪಾಯಾಸದಿಂದಲೇ ಕೂಡಿಬರುವದಲ್ಲದೇ ವಧೂವರರು ಗುಣ ಹಾಗು ರೂಪದಲ್ಲಿ ಅನುರೂಪರಿರುವರು. ಉಭಯತರ ಮನೆತನಗಳು ಪೂರ್ವ ಪರಿಚಿತವಿರಬಹುದಲ್ಲದೆ, ವಧು ಇಲ್ಲವೆ ವರ ಪರಸ್ಪರ ಪರಿಚಿತರಿರಲೂಬಹುದು.

ಅದರಂತೆಯೆ, ಸಂತತಿಯ ವಿವಾಹವನ್ನು ಈ ಸಲ ಮಾಡುವದಿದ್ದಲ್ಲಿ ಅದಕ್ಕೆ ಗುರು ಧನು ರಾಶಿಗೆ ಬಂದ ಬಳಿಕ ಅಂದರೆ ಜನವರಿ ೫ರಿಂದಲೇ ಪ್ರಬಲ ಬಾಸಿಂಗ ಬಲವಿದೆ. ಅಂದರೆ ಅಂದಿನಿಂದ ಪ್ರಯತ್ನ ಪಟ್ಟರೆ ವಿಶೇಷ ತೊಂದರೆಯಾಗದೆ ಲಗ್ನ ಗೊತ್ತಾಗುವುದು. ಆದರೆ ದೂರದಸ್ಥಳಕ್ಕಾಗುವುದು. ಸೊಸೆ ಇಲ್ಲವೆ ಅಳಿಯ ಗುಣ ರೂಪಗಳಲ್ಲಿ ಅನುರೂಪರಾಗಿರುವರಲ್ಲದೆ ಸುದೈವಿಗಳೂ ಆಗಿರುವದು ಯಥಾವಕಾಶದಲ್ಲಿ ಅನುಭವಕ್ಕೆ ಬಂದೀತು. ಅದರಂತೆಯೆ, ಫೆಬ್ರುವರಿ ೧ರಿಂದ ಮಾರ್ಚ ೧೫, ಮೇ ೨ರಿಂದ ಜೂನ್ ೨೦ ಇಲ್ಲವೆ ಆಗಸ್ಟ ೬ರಿಂದ ಸಪ್ಟೆಂಬರ್ ೨೨ರ ಅವಧಿಯಲ್ಲಿ ವಿವಾಹವಾದರೆ ಅಪೇಕ್ಷೆಗಿಂತ ಹೆಚ್ಚು ವೈಭವದಿಂದ ಜರಗುವುದಲ್ಲದೆ ವೆಚ್ಚ ಕೂಡ ಅತಿ ಕಡಿಮೆಯಾಗುವದು. ಸಂತತಿಯ ಪೈಕಿ ಪ್ರತಿಯೊಬ್ಬರೂ ತಂತಮ್ಮ ಯೋಗ್ಯತೆಗಿಂತಲೂ ಹೆಚ್ಚು ಉನ್ನತಿ ಹೊಂದುವ ಯೋಗವಿದೆಯೆಂಬುದು ನಿಶ್ಚಿತ. ಆದರೆ ಗುರು ಹನ್ನೆರಡನೆಯವನಿರುವಾಗ ಮಗನಿಂದ ಹಾಗು ರಾಹು ಎರಡನೆಯವನಿರುವಾಗ ಮಗಳಿಂದ ವಿಶೇಷ ತೊಂದರೆಯಾಗಬಹುದು. ಆದರೆ ಅವರಲ್ಲೊಬ್ಬರು ಅತಿದೂರದ ಸ್ಥಳಕ್ಕೆ ಹೋಗುವದರಿಂದ ಮನಸ್ಸು ಅಸ್ವಸ್ಥ ಹಾಗು ಚಿಂತಾತುರವಾಗುವುದು.

ಉದ್ಯೋಗಧಂದೆಗಳಲ್ಲಿಯೂ ವರ್ಷಾರಂಭದಲ್ಲಿ ಭಾಗ್ಯೇಶ ರವಿ ಹಾಗು ಕರ್ಮೇಶ ಬುಧ, ಲಾಭೇಶ ಶುಕ್ರನೊಂದಿಗೆ ಲಾಭಸ್ಥಾನದಲ್ಲಿರುವುದರಿಂದಾಗಿ, ಒಳ್ಳೆಯ ಪ್ರಗತಿಯು, ದೊಡ್ಡ ಪ್ರತಿಷ್ಠೆಯು ಹಾಗು ವಿಪುಲ ಲಾಭದ ಯೋಗವಿದೆಯೆಂಬಲ್ಲಿ ಎಳ್ಳಷ್ಟು ಶಂಕೆಯಿಲ್ಲವಾದರೂ ಹನ್ನೆರಡನೆಯ ಗುರುವಿರುವಾಗ ವಿಶೇಷ ವೆಚ್ಚದ ಪ್ರಸಂಗಗಳು ಒಂದರ ಹಿಂದೊಂದು ಎದುರಾಗುವದರಿಂದ ತಲೆತಗ್ಗಿಸಬೇಕಾದಂಥ ಪ್ರಸಂಗ ಬರಬಹುದು. ದೊಡ್ಡಸ್ತಿಕೆಗಾಗಿ ಸಾಲ ತೆಗೆಯಬೇಕಾದ ಪ್ರಸಂಗ ಕೂಡ ಬರಬಹುದು. ಅಲ್ಲದೆ ಮನೆಯಲ್ಲಿರುವ ಪ್ರತಿಯೊಬ್ಬರೂ ಮನಸ್ಸಿಗೆ ಬಂದಂತೆ ವೆಚ್ಚ ಮಾಡುವರು. ಗುರು ಮೊದಲನೆಯವನಾದ ನಂತರ ಅದೆಲ್ಲ ಹಿಡಿತಕ್ಕೆ ಬರುವದಲ್ಲದೆ ರಾಹು ಮೊದಲನೆಯವನಾದ ಬಳಿಕ ಅಂದರೆ ಆಗಸ್ಟ ೪ರಿಂದ ತುಸು ಸಂಗ್ರಹ ಸಾಧ್ಯವಾಗುವುದು. ವ್ಯಾಪಾರಿಗಳಿಗೆ ಆಗಸ್ಟ ೬ರ ನಂತರದ ಕಾಲ ಲಾಭದಾಯಕವಾಗಿರುವುದು; ಆದರೆ ಬುದ್ಧಿಜೀವಿ ಹಾಗು ಕಲಾವಿದರಿಗೆ ಜನವರಿ ೧೧ರಿಂದ ಮಾರ್ಚ ೩೦, ಜೂನ್ ೧೭ರಿಂದ ಸಪ್ಟೆಂಬರ್ ೧ ಹಾಗು ಸಪ್ಟೆಂಬರ್ ೨೮ರಿಂದ ಅಕ್ಟೋಬರ್ ೨೪ರ ಅವಧಿಯು ಲಾಭದಾಯಕವಾಗಿದೆ. ಶ್ರಮಜೀವಿಗಳಿಗೆ ಜನವರಿ ೫ರಿಂದ ಆಗಸ್ಟ ೪ ಈ ಅವಧಿ ಅನುಕೂಲಕರವಿದೆ. ನೌಕರದಾರರಿಗೆ ಫೆಬ್ರುವರಿ ೧ರಿಂದ ಮಾರ್ಚ ೧೫ ಇಲ್ಲವೆ ಆಗಸ್ಟ ೬ರಿಂದ ನವೆಂಬರ್ ೫ ಈ ಅವಧಿಯಲ್ಲಿ ಬಡತಿ ದೊರೆಯುವ ಯೋಗವಿದ್ದು, ಅನುಕೂಲ ಸ್ಥಳಕ್ಕೆ ಬದಲಿಯಾಗುವುದು, ಆದರೆ ಇತರ ಸಮಯದಲ್ಲಿ ಬದಲಿಯಾದರೆ ಅನುಕೂಲಕರವಲ್ಲದ ಸ್ಥಳಕ್ಕೆ ಆಗುವ ಸಾಧ್ಯತೆಯುಂಟು. ಮೊದಲನೆ ಗುರುವಿರುವಾಗ ವರಿಷ್ಠರ ಮರ್ಜಿ ವಿಶೇಷವಾಗಿರುವುದಾದರೆ ರಾಹು ಮೊದಲನೆಯವನಾದ ನಂತರ ಅವರು ತುಸು ದರ್ಪದಿಂದ ವರ್ತಿಸುವರು. ಅಲ್ಲದೆ ಮೊದಲನೆಯ ರಾಹುವಿರುವಾಗ ವಾಹನಸುಖ ಉತ್ತಮ. ಆದರೆ ಸ್ವಂತದ ವಾಹನವಿದ್ದವರು ರಾಹು ಎರಡನೆಯವನಿರುವವರೆಗೆ ಅಂದರೆ ಆಗಸ್ಟ ೪ರ ಪೂರ್ವದಲ್ಲಿ ಅದರ ದುರಸ್ತಿಗಾಗಿ ಅತೀವ ವೆಚ್ಚ ಮಾಡಬೇಕಾದ ಪ್ರಸಂಗ ಮೇಲಿಂದ ಮೇಲೆ ಬರುವುದು. ಎಪ್ರಿಲ್ ೧೪ರಿಂದ ಮೇ ೧೫ ಇಲ್ಲವೆ ಜೂನ್ ೧೪ರಿಂದ ಜುಲೈ ೧೬ ಇಲ್ಲವೆ ಆಗಸ್ಟ ೧೬ರಿಂದ ಸಪ್ಟೆಂಬರ್ ೧೬ ಈ ಕಾಲದಲ್ಲಿ ಒಳ್ಳೆಯ ಕಾರ್ಯಕ್ಕಾಗಿ ಒಮ್ಮೆಲೆ ದೂರದ ಪ್ರವಾಸ ಕೈಕೊಳ್ಳಬಹುದು. ಹನ್ನೆರಡನೆಯ ಗುರುವಿರುವಾಗ ಪಾರಮಾರ್ಥಿಕ ವ್ಯಕ್ತಿಗಳೊಡನೆ ಸಹವಾಸ. ಆದರೆ ಯಾತ್ರೆಯ ಯೋಗ ಮಾತ್ರ ಕಡಿಮೆ.

ದಾವೆ-ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಗಳಲ್ಲಿ ನಿರ್ಣಯವು ಜನವರಿ ೫ರ ಮೊದಲಾದರೆ ಅದು ಬಹುಶಃ ನಿಮ್ಮ ವಿರುದ್ಧವೇ ಆಗುವುದು. ಆಗಸ್ಟ ೪ರ ವರೆಗಾದರೆ ನಿಮ್ಮಂತೆಯೇ ಅಗುವದಾದರೆ ಪ್ರತ್ಯಕ್ಷ ಯಶಸ್ಸು ತೀರ ಅಲ್ಪವೆನಿಸಬಹುದು; ಆದರೆ ತದನಂತರ ಅಂದರೆ ರಾಹು ಮೊದಲನೆಯವನಾದ ನಂತರ ನಿರ್ಣಯವಾದರೆ ಭಾರೀ ಯಶಸ್ಸು ದೊರೆಯುವುದು.

ಈ ರಾಶಿಯ ಗರ್ಭಿಣಿಯರ ಹೆರಿಗೆ ಗುರು ಹನ್ನೆರಡನೆಯವನಿರುವಾಗ ಆದಲ್ಲಿ ವಿಶೇಷ ತೊಂದರೆಯಾಗುವದು. ಆದರೆ ಗುರು ಮೊದಲನೆಯವನಾದ ಬಳಿಕ ಪ್ರಸೂತಿ ಸುಲಭವಾಗಿ ಬಹುತರರಿಗೆ ಪುತ್ರ ಪ್ರಾಪ್ತಿಯಾಗುವದು. ಹಾಗು ರಾಹು ಮೊದಲನೆಯವನಿರುವಾಗ ಬಹುತರರಿಗೆ ಅವಳಿಗಳಾಗುವ ವಿಶೇಷ ಸಂಭವವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಮೊದಲನೆಯ ಗುರುವಿರುವಾಗ ಅಂದರೆ ಜನವರಿ ೫ರ ನಂತರವಾದರೆ ನೂರಕ್ಕೆ ೮೦ರಷ್ಟು ಪಾಸಾಗುತ್ತಾರೆ. ಅಷ್ಟೇ ಅಲ್ಲದೆ ಫೆಬ್ರುವರಿ ೧ರಿಂದ ಮಾರ್ಚ ೧೫, ಮೇ ೨ರಿಂದ ಜೂನ್ ೨೦ ಅಥವಾ ಆಗಸ್ಟ ೬ರಿಂದ ಸಪ್ಟೆಂಬರ್ ೨೨ರ ವರೆಗಿನ ಅವಧಿಯಲ್ಲಾದರೆ ಪ್ರಾಯಶಃ ಮೇಲಿನ ದರ್ಜೆಯಲ್ಲಿ ಉತ್ತೀರ್ಣರಾಗುವರು.




ಈ ರಾಶಿಯವರಿಗೆ ಈ ವರ್ಷ ಪ್ರಾಪಂಚಿಕ ದೃಷ್ಟಿಯಿಂದ ಸಾಮಾನ್ಯವಾಗಿದ್ದರೂ ಉದ್ಯೋಗಿಕ ಉತ್ಕರ್ಷಕ್ಕೆ ಹೆಚ್ಚು ಯಶೋದಾಯಕವಾಗಿದೆಯೆಂಬುದು ನಿಶ್ಚಿತ.

ವರ್ಷಾರಂಭದಲ್ಲಿ ರಾಹುವನ್ನುಳಿದು ಎಲ್ಲ ಗ್ರಹಗಳೂ ಸ್ಥಾನ ಮತ್ತು ರಾಶಿ ಎರಡೂ ದೃಷ್ಟಿಯಿಂದಲೂ ಬಲಿಷ್ಠವಾಗಿರುವುದರಿಂದ ಆಗಸ್ಟ ೪ರ ವರೆಗೆ ಆರೋ

ಗ್ಯಕ್ಕೆ ಕೆಲ ಸಲ ಆಲಸ್ಯವಾಗಿ ತೊಂದರೆಯಾಗುವುದೆಂದೆನಿಸಿದರೂ ಬಹುತರ ಎಲ್ಲ ವಿಷಯಗಳಲ್ಲಿ ದೇಹಸುಖ ಚೆನ್ನಾಗಿರುವದು. ಜನೆವರಿ ೫ರ ವರೆಗಂತೂ ಅದು ಮತ್ತಿಷ್ಟು ಉತ್ತಮಗೊಳ್ಳುವುದು. ಅಲ್ಲಿಯ ವರೆಗೆ ಗುರು ಹನ್ನೊಂದನೆಯುವ ಅಂದರೆ ಲಾಭಸ್ಥಾನದಲ್ಲಿರುವದರಿಂದ ಅಸಾಧ್ಯವೆನಿಸುವಂಥ ಸಂಗತಿಗಳು ಅನಾಯಾಸವಾಗಿ ಸಾಧ್ಯವಾಗಬಹುದು. ಆನಂತರ ಹನ್ನೆರಡನೆಯ ಗುರು ಬಂದ ಬಳಿಕ ಮಾತ್ರ ನಿಮ್ಮ ವಿಪರೀತ ಬುದ್ಧಿಯಿಂದಾಗಿ ಅನೇಕ ಸುಲಭಕಾರ್ಯಗಳು ಸಹ ಕೆಟ್ಟುಹೋಗುವ ಭೀತಿ! ಆಗಸ್ಟ ೪ ಅಂದರೆ ಕೇತು ಆರನೆಯುವನಾದ ಬಳಿಕ ಅಷ್ಟೊಂದು ತೊಂದರೆಯಾಗಲಿಕ್ಕಿಲ್ಲ. ಅಲ್ಲದೆ ತುಸು ತಡವಾದರೂ ಯೋಚಿಸಿದ ಕಾರ್ಯಗಳೆಲ್ಲ ಕೊನೆಗೆ ಮನಸ್ಸಿನಂತಾಗುವವು. ವರ್ಷಾರಂಭದಲ್ಲಿ ಈ ರಾಶಿಯು ಉಚ್ಚ ಮಂಗಳನಿಂದ ಯುಕ್ತವಾಗಿರುವದರಿಂದ ಸಾಹಸಕಾರ್ಯಗಳೆಡೆ ಮನಸ್ಸು ಹರಿಯುವುದಲ್ಲದೆ ಜನೆವರಿ ೫ರವರೆಗೆ ಅಂಥ ಕಾರ್ಯಗಳಲ್ಲಿ ಬಹ್ವಂಶ ಯಶಸ್ಸು ದೊರೆಯುವುದು.

ಕೇತು ಆರನೆಯುವನಾಗಿ ಬರುವವರೆಗೆ ಅಂದರೆ ಆಗಸ್ಟ ೪ರ ವರೆಗೆ ಹೆಂಡತಿಯ ಆರೋಗ್ಯ ಸರಿಯಿರದು. ಕೆಲ ಸಲ ಶೀತವಿಕಾರವಾದರೆ ಮತ್ತೆ ಕೆಲ ಸಲ ಪಿತ್ತವಿಕಾರದಿಂದ ತೊಂದರೆಯಾಗುವುದು. ಆದರೆ ಯಾವುದೇ ಬಗೆಯ ಕ್ಲೇಶವಾಗದು. ಕೇತು ಏಳನೆಯುವನಿರುವಾಗ ಅಂದರೆ ಆಗಸ್ಟ ೪ರ ವರೆಗೆ ಉಭಯತರಲ್ಲೂ ಕ್ಷುಲ್ಲಕ ಕಾರಣಗಳಿಗಾಗಿ ವಿರಸವುಂಟಾಗುವುದು. ಹಾಗು ಪ್ರತಿಯೊಬ್ಬರೂ ಬೇರೆಯುವರ ತಪ್ಪನ್ನು ಎತ್ತಿತೋರಿಸುವುದರಲ್ಲಿ ನಿರತರಾಗಿರುವರು. ಆದರೆ ಮೇಲಿನ ದಿನಾಂಕದ ನಂತರ ಏಕೀಭಾವ ಹಾಗು ಪ್ರೇಮ ಚೆನ್ನಾಗಿ ಉಳಿಯುವವು.

ಈ ರಾಶಿಯ ವಿವಾಹೇಚ್ಛುಗಳಿಗೆ ಗುರು ಹನ್ನೊಂದನೆಯುವನಿರುವರೆಗೆ ಅಂದರೆ ಜನೆವರಿ ೫ರ ಪೂರ್ವದಲ್ಲಿ ವಿವಾಹ ಗೊತ್ತಾಗುವದು ನಿಶ್ಚಯವಾದರೂ ಅದಕ್ಕಾಗಿ ವರ್ಷಾರಂಭದಿಂದಲೇ ರಭಸದ ಪ್ರಯತ್ನ ಪಡಬೇಕಾಗುವದು. ಆದರೆ ಮುಂದೆ ಮಾತ್ರ ಯೋಗವಿಲ್ಲ. ಒಂದು ವೇಳೆ ಮುಂದಿನ ಅವಧಿಯಲ್ಲಿ ನಿಶ್ಚಯವಾದರೂ ವಿವಾಹ ಜರಗುವಲ್ಲಿ ವಿಶೇಷ ಆತಂಕಗಳು ಎದುರಾಗುವವು. ವಧು ಇಲ್ಲವೆ ವರ ಪೂರ್ಣ ಅನುರೂಪರಾಗಿರುವರು. ಆದರೆ ವಧುವಿಗಿಂತ ವರನಾಗಲಿ, ವರನಿಗಿಂತ ವಧುವಾಗಲಿ ಹೆಚ್ಚು ಸುಂದರರೂ ಜಾಣರೂ ಆಗಿರುವರು.

ಅದರಂತೆಯೆ, ನಿಮ್ಮ ಮಕ್ಕಳ ವಿವಾಹ ಆಗುವುದಿದ್ದಲ್ಲಿ ಅದಕ್ಕೆ ಸಹ ಹನ್ನೊಂದನೆಯ ಗುರುವಿರುವಾಗಲೇ ಪ್ರಬಲ ಬಾಸಿಂಗಬಲವಿದೆ. ಅದರ ನಂತರ ಮಾತ್ರ ಅಷ್ಟೊಂದು ಚೆನ್ನಾಗಿಲ್ಲ. ಅಂದರೆ ಗುರು ಹನ್ನೆರಡನೆಯುವನಿರುವಾಗ ಅಂದರೆ ಜನೆವರಿ ೫ರ ನಂತರ ನಿಶ್ಚಯವಾದಲ್ಲಿ ಕೆಲವರ ವಿವಾಹ ಮಾತ್ರ ನೆರವೇರುವದು. ಹಾಗು ಉಳಿದವರ ವಿವಾಹವನ್ನು ಕೆಲ ಅನಿವಾರ್ಯ ಕಾರಣಗಳಿಂದಾಗಿ ಮುಂದಿನ ವರ್ಷದ ವರೆಗೆ ಮುಂದೂಡಬೇಕಾಗುವುದು. ವಧೂವರರು ಸುಂದರರೂ ವಿದ್ಯಾವಂತರೂ ಆಗಿರುವರಾದರೆ ಆರೋಗ್ಯ ಹಾಗು ಸ್ವಭಾವದಿಂದ ಅಷ್ಟೊಂದು ನಿರೋಗಿ ಹಾಗು ಉತ್ಸಾಹಿಗಳಾಗಿರಲಾರರು. ಆದರೂ ಅವರು ಒಳ್ಳೆಯ ದೈವಶಾಲಿಗಳಾಗಿದ್ದಾರೆಂಬ ಅನುಭವ ಬೇಗ ಉಂಟಾಗುವದು. ಸಂತತಿಯಿಂದ ಈ ಸಲ ಆರ್ಥಿಕ ಇಲ್ಲವೆ ಮಹತ್ವದ ಕಾರ್ಯಗಳಲ್ಲಿ ಒಳ್ಳೆಯ ಸಹಾಯ ದೊರೆಯುವುದಾದರೆ ಅವರಿಂದ ಸುಖ ಮಾತ್ರ ಸಿಕ್ಕದಲ್ಲದೆ ಅನೇಕ ವೇಳೆ ಮಾನಖಂಡನವಾಗುವದೆಂಬುದು ನಿದರ್ಶನಕ್ಕೆ ಬಂದೀತು.

ರಾಶಿಸ್ವಾಮಿ ಶನಿ ಈ ವರ್ಷವಿಡೀ ಪಂಚಮನಿದ್ದು ಅಂದರೆ ಸುತ ಹಾಗು ಬುದ್ಧಿ ಸ್ಥಾನದಲ್ಲಿರುವದರಿಂದ ಬುದ್ಧಿ ತೀಕ್ಷ್ಣವಾಗುವಂಥ ಅನೇಕ ಸಂಗತಿಗಳು ಈ ಸಲ ಜರಗುವವು. ಸಂತತಿಯ ಉನ್ನತಿಯ ಬಗೆಗೂ ಚೆನ್ನಾಗಿರುವದು. ಅದರಂತೆಯೆ, ವರ್ಷಾರಂಭದಲ್ಲಿ ಹನ್ನೊಂದನೆಯ ಗುರು ಲಾಭಸ್ಥಾನದಲ್ಲಿ, ಹಾಗೆಯೆ ಲಾಭೇಶ ಮಂಗಳ ದೇಹಸ್ಥಾನದಲ್ಲಿ ಉಚ್ಚನಾಗಿದ್ದು ದಶಮ ಉರ್ಫ್ ಭಾಗ್ಯೇಶ ಬುಧನೊಂದಿಗೆ ಸ್ವಸ್ವಾಮಿ ಶುಕ್ರನೊಂದಿಗೆ ಯುಕ್ತನಾಗಿರುವಂಥ ಪೂರ್ಣ ಶುಭಯೋಗವಿರುವದರಿಂದ ಉದ್ಯೋಗಸ್ಥರಿಗೆ ಈ ವರ್ಷ ಕಳೆದ ಕೆಲವರ್ಷಗಳಿಗಿಂತಲೂ ಅತ್ಯುತ್ತಮವಿದೆ. ವಿಪುಲ ಲಾಭ ಹಾಗು ಭಾಗ್ಯೋದಯಕ್ಕೆ ಈ ವರ್ಷ ವಿಶೇಷ ಅನುಕೂಲವಿದೆಯೆಂಬುದರಲ್ಲಿ ಸಂದೇಹವಿಲ್ಲ. ಜನೆವರಿ ೫ ಅಂದರೆ ಗುರು ಹನ್ನೊಂದನೆಯುವನಿರುವ ವರೆಗೆ ವ್ಯಾಪಾರಿಗಳಿಗೆ ಹಾಗು ಬುದ್ಧಿಜೀವಿಗಳಿಗೆ ಅಪಾರ ಧನಲಾಭವಾದರೆ ಮುಂದೆ ಗುರು ಹನ್ನೆರಡನೆಯುನಾದ ಬಳಿಕ ತುಸು ಕಡಿಮೆಯಾಗುವದಲ್ಲದೆ ಈ ಮೊದಲು ಪಾಲುಗಾರಿಕೆಯ ವ್ಯವಹಾರದಲ್ಲಿ ತೊಡಗಿದ್ದರೆ ಅದು ಒಬ್ಬ ಪ್ರತಿಷ್ಠಿತ ವ್ಯಕ್ತಿಯ ಮಾತಿನಿಂದ ಅಲ್ಪಾಯಾಸದಿಂದ ಹಾಗು ಅಲ್ಪ ಮೌಲ್ಯ ದೊರೆತು ವ್ಯವಹಾರದಿಂದ ಬಿಡುಗಡೆಯಾಗುವುದು, ಗುರು

ಹನ್ನೊಂದನೆಯವನಿರುವಾಗಲೇ ನೌಕರದಾರರಿಗೆ ಬಡತಿ ಸಿಕ್ಕುವದು. ಅಂದರೆ ಜನವರಿ ೨೭ರಿಂದ ಫೆಬ್ರುವರಿ ೧೪ ಇಲ್ಲವೆ ಜೂನ್ ೮ರಿಂದ ೨೫ ಇಲ್ಲವೆ ಅಕ್ಟೋಬರ್ ೫ರಿಂದ ನವೆಂಬರ ೫ ಈ ಕಾಲದಲ್ಲಂತೂ ದೊರೆಯುವುದು ನಿಶ್ಚಿತ. ಬದಲಿಯಾಗುವುದಿದ್ದರೆ ಗುರು ಹನ್ನೊಂದನೆಯವನಿರುವುದಕ್ಕಿಂತ ಆತ ಹನ್ನೆರಡನೆಯವನಾಗಿರುವಾಗ ಆದರೆ ಸುಖ ಸೌಲಭ್ಯಗಳಿಂದ ಕೂಡಿದ ಸ್ಥಳಕ್ಕೆ ಆಗುವುದೆಂಬ ಅನುಭವ ಉಂಟಾಗುವುದು. ಹನ್ನೆರಡನೆಯ ಗುರುವಿರುವಾಗ ವರಿಷ್ಠರಿಂದ ತುಸು ತೊಂದರೆಯಾದರೆ ಕೈಕೆಳಗಿನವರು ಮಾತ್ರ ಒಳ್ಳೇ ಅನುಕೂಲರಾಗಿರುವರು. ಗುರು ಹನ್ನೆರಡನೆಯವನಾದ ನಂತರ ಆಪ್ತರಲ್ಲಿಯ ಕೆಲವರೊಂದಿಗೆ ವಿನಾ ಕಾರಣ ತಪ್ಪು ತಿಳುವಳಿಕೆಯುಂಟಾಗುವುದು; ಆದರೆ ಮಿತ್ರ ಇಲ್ಲವೆ ಪರಕೀಯ ಜನರೊಂದಿಗೆ ಒಳ್ಳೆಯ ಸಂಬಂಧ ಉಂಟಾಗುವದು. ಅದರಂತೆಯೆ, ಸತ್ಪುರುಷರ ಸಹವಾಸ ಇಲ್ಲವೆ ದರ್ಶನ ಲಾಭವಾದರೂ ಸಂಭವಿಸುವುದಲ್ಲದೇ ಸಮೀಪದ್ದೇ ಆದರೂ ಪ್ರಸಿದ್ಧ ಕ್ಷೇತ್ರದ ಯಾತ್ರೆಯ ಯೋಗವುಂಟು. ಅಲ್ಲದೆ ಇತರ ಪ್ರವಾಸಗಳ ಯೋಗವೂ ಇದೆ. ಕುಸು ಸಂಗ್ರಹದ ಸಾಧ್ಯತೆಯಿದೆ. ವಾಹನಸುಖ ಅತೀವ ಉತ್ತಮವಿದೆ. ಹಾಗು ಹನ್ನೆರಡನೆಯ ಗುರುವಿರುವಾಗ ಶುಭ ಸೂಚಕ ಸ್ವಪ್ನಗಳು ಬೀಳುವವಲ್ಲದೆ ಅನೇಕರಿಗೆ ಆರಾಧ್ಯ ದೇವತೆಯ ದೃಷ್ಟಾಂತವಾಗುವುದು.

ದಾವೆ-ಫಿರ್ಯಾದಿ ಅಥವಾ ಇತರ ಖಾಸಗಿ ಸ್ಪರ್ಧೆಗಳಲ್ಲಿ ಜನವರಿ ೫ರ ಮೊದಲು ನಿರ್ಣಯವಾದರೆ ಪೂರ್ಣ ಅನುಕೂಲವಿದೆಯಾದರೆ ಫೆಬ್ರುವರಿ ೧೪ರಿಂದ ಮಾರ್ಚ್ ೩, ಮೇ ೬ರಿಂದ ೨೪ ಹಾಗು ಸೆಪ್ಟೆಂಬರ್ ೧೮ರಿಂದ ಅಕ್ಟೋಬರ್ ೨೫ರ ನಡುವಣ ಕಾಲದಲ್ಲಾದರೂ ಒಳ್ಳೆಯ ಅನುಕೂಲವಿದೆ.

ಈ ರಾಶಿಯ ಗರ್ಭವತಿಯರು ಹನ್ನೊಂದನೆಯ ಗುರುವಿರುವಾಗ ಪ್ರಸೂತರಾದರೆ ಅವರಿಗೆ ತೊಂದರೆಯೆನಿಸದೆಯೆ ಕನ್ಯಾರತ್ನ ಜನಿಸುವದು; ಆದರೆ ಗುರು ಹನ್ನೆರಡನೆಯವನಿರುವಾಗ ಆದರೆ ತುಸು ತೊಂದರೆಯಾದರೂ ಬಹುತರರಿಗೆ ಗಂಡುಮಗುವೇ ಜನಿಸುವುದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಜನವರಿ ೫ರ ಪೂರ್ವದಲ್ಲಿ ಹಾಗು ಫೆಬ್ರುವರಿ ೫ರಿಂದ ಮಾರ್ಚ್ ೧, ಜೂನ್ ೨೫ರಿಂದ ಅಗಸ್ಟ್ ೩೧, ಸೆಪ್ಟೆಂಬರ್ ೧೮ರಿಂದ ಅಕ್ಟೋಬರ್ ೫ರವರೆಗಾದರೆ ಉತ್ತೀರ್ಣರಾಗುವರಲ್ಲದೆ ಜನವರಿ ೫ರ ಪೂರ್ವದಲ್ಲಾಗುವವರಿಗೆ ಮೇಲಿನ ದರ್ಜೆ ಕೂಡ ಸಿಕ್ಕುವ ಸಂಭವವಿದೆ.



## ಕುಂಭ

ಈ ರಾಶಿಯವರಿಗೆ ಒಟ್ಟಿನಲ್ಲಿ ಈ ವರ್ಷ ಪ್ರಾಪಂಚಿಕ ಹಾಗು ಔದ್ಯೋಗಿಕ ವಿಷಯಗಳ ಬಗೆಗೆ ಪ್ರಥಮದಲ್ಲಿ ವಿಶೇಷ ಶ್ರಮಪಡಬೇಕಾಗುವದಾದರೂ ಕೊನೆಯಲ್ಲಿ ಸುಖ ಹಾಗು ಉತ್ಕರ್ಷಗಳು ಹೆಚ್ಚುವವೆಂಬುದು ನಿಶ್ಚಿತ.

ರಾಶಿಸ್ವಾಮಿ ಶನಿ ನಾಲ್ಕನೆಯ ಅಂದರೆ ತೊಂದರೆಗಳನ್ನುಂಟುಮಾಡುವ ಸ್ಥಾನದಲ್ಲಿದ್ದಾಗ್ಯೂ ಆತ ವೃಷಭ ಅಂದರೆ ಅನ್ಯರಾಶಿಯಲ್ಲಿದ್ದು ಆತನ ಪೂರ್ಣದೃಷ್ಟಿ ಈ ರಾಶಿಯ ಮೇಲಿರುವದರಿಂದ ಆರೋಗ್ಯಕ್ಕೆ ವಾತ ಪೀಡೆಯಿಂದ ತುಸು ತೊಂದರೆಯಾಗಬಹುದು; ಆದರೆ ಹಾಸಿಗೆ ಹಿಡಿಯಬಹುದಾದಷ್ಟು ಉಲ್ಬಣಿಸದು. ಗುರು ಹನ್ನೊಂದನೆಯವನಾದ ಬಳಿಕ ಅಂದರೆ ಜನೆವರಿ ೫ರಿಂದ ಆರೋಗ್ಯ ಸುಧಾರಿಸುತ್ತ ಹೋಗುವದು. ಹಾಗು ಅಂದಿನಿಂದ ಪ್ರಾಪಂಚಿಕಸುಖ ಕೂಡ ಮನಸ್ಸಿನಂತೆ ದೊರೆಯಲು ಸಹಾಯಕವಾಗುವಂಥ ಕೆಲ ಒಳ್ಳೆಯ ಸಂಗತಿಗಳು ಜರಗುವವು. ಆದರೆ ಹರ್ಷಲನು ಅಷ್ಟಮದಲ್ಲಿದ್ದು ಸೆಪ್ಟೆಂಬರ್ ೨೨ರಿಂದ ಆತನ ಮೇಲೆ ಮಂಗಳನು ಭ್ರಮಣ ಮಾಡುವುದರಿಂದ ಜಾರಿ ಬಿದ್ದು ಚಿಕ್ಕ ಪುಟ್ಟ ಅಪಘಾತಗಳು ಉಂಟಾಗುವ ಸಂಭವವಿದೆ. ಈ ಅವಧಿಯಲ್ಲಿ ಬಹು ಎಚ್ಚರಿಕೆಯಿಂದಿರಬೇಕು. ನಾಲ್ಕನೆಯ ಶನಿಯ ದೋಷ ಪರಿಹಾರಾರ್ಥವಾಗಿ ಶನಿಯ ೨೩,೦೦೦ ಜಪ ಮಾಡುವುದು ಉತ್ತಮ.

ವರ್ಷಾರಂಭದಲ್ಲಿ ಸಪ್ತಮೇಶ ಎಂದರೆ ಭಾರ್ಯೇಶ ರವಿ ಪ್ರತಿವರ್ಷದಂತೆ ನವಮ ಅಂದರೆ ಭಾಗ್ಯಸ್ಥಾನದಲ್ಲಿದ್ದುದು ವಿಶೇಷ ಮಹತ್ವದ್ದಿರದಿದ್ದರೂ ಆತ ಸ್ತ್ರೀ ಸುಖದರ್ಶಕ ಶುಕ್ರನೊಂದಿಗೆ ಯುಕ್ತನಿದ್ದಾನೆಂಬುದು ಮಾತ್ರ ಮಹತ್ವದ್ದೂ ಅತೀವ ಸುಖದಾಯಕವೂ ಅಹುದು. ಅಂದರೆ ಸ್ತ್ರೀ ಸುಖ ವ್ಯವಸ್ಥಿತ ರೀತಿಯಲ್ಲಿ ದೊರೆಯುವುದು. ವಿಶೇಷತಃ ವರ್ಷಾರಂಭದಲ್ಲಿರುವ ಹತ್ತನೆಯ ಗುರುವಿಗಿಂತ ಹನ್ನೊಂದನೆಯ ಗುರುವಿರುವಾಗ ಅಂದರೆ ಜನವರಿ ೫ರ ನಂತರ ಅದು ಮತ್ತೂ ಹೆಚ್ಚು ದೊರೆವುದು. ಪರಸ್ಪರರ ಸಹವಾಸದಲ್ಲಿ ವ್ಯತ್ಯಯವೇನೂ ಆಗದು. ಕೆಲ ಸಲ ಮತಭೇದ ಉಂಟಾದರೂ ಅದು ಪ್ರೇಮವೃದ್ಧಿಗೆಂದೇ ತಿಳಿಯಬಹುದು. ಅಕ್ಟೋಬರ್ ೨೦ರಿಂದ ೨೫ ಹಾಗು ಮಾರ್ಚ್ ೧೫ರಿಂದ ಮೇ ೨ ಈ ಅವಧಿಯಲ್ಲಿ ಅವಳ ಆರೋಗ್ಯ ತುಸು ಕಿರಿಕಿರಿಯದಾಗಿರಬಹುದು. ಇತರ ಅವಧಿಯಲ್ಲಿ ನಿರೋಗಿಯಾಗಿರುವಳು.

ಈ ರಾಶಿಯ ವಿವಾಹೇಚ್ಛುಗಳಿಗೆ ಗುರು ಹತ್ತನೆಯವನಿರುವವರೆಗೆ ಬಾಸಿಂಗಬಲವಿಲ್ಲವೆಂದೇ ಹೇಳಬಹುದು. ಆದರೆ ಆತ ಹನ್ನೊಂದನೆಯವನಾದ ಬಳಿಕ ಮಾತ್ರ ಸಂಪೂರ್ಣವಿದೆಯೆಂದು ತಿಳಿಯಬೇಕಲ್ಲದೆ ಅನೇಕರ ವಿವಾಹ ಆಶ್ಚರ್ಯಕರ ರೀತಿಯಲ್ಲಿ ಅನಾಯಾಸವಾಗಿ ನಿಶ್ಚಯವಾಗಿ ಕೂಡಲೆ ಲಗ್ನ ಜರುಗಿಬಿಡಬಹುದು. ವಧು ಇಲ್ಲವೆ ವರ ರೂಪದಿಂದ ಸಾಮಾನ್ಯ, ಆರೋಗ್ಯ ಹಾಗು ಸ್ವಭಾವದಿಂದ ಉತ್ತಮರಿದ್ದು ಗಂಭೀರ ಪ್ರವೃತ್ತಿಯ ಹಾಗು ಅತೀವ ತಿಳುವಳಿಕೆಯುಳ್ಳವರಿರುತ್ತಾರೆ. ಆದರೆ ಪರಸ್ಪರ ವಿಷಯದಲ್ಲಿ ಐಕ್ಯವುಂಟಾಗಲು ತುಸು ಅವಧಿ ಹಿಡಿಯಬಹುದು.

ಅದರಂತೆಯೆ, ನಿಮ್ಮ ಮಕ್ಕಳ ವಿವಾಹ ಮಾಡುವದಿದ್ದಲ್ಲಿ ಅದಕ್ಕೆ ಸಹ ಗುರು ಹನ್ನೊಂದನೆಯವನಾದಂದಿನಿಂದ ಕೇತು ಐದನೆಯವನಾಗಿ ಬರುವವರೆಗೆ ಅಂದರೆ ದಿ. ಜನವರಿ ೫ರಿಂದ ಅಗಸ್ಟ್ ೮ರ ವರೆಗಿನ ಅವಧಿಯಲ್ಲಿ ಅತ್ಯುತ್ತಮ ಬಾಸಿಂಗಬಲವಿದೆ. ಅನಾಯಾಸದಿಂದಲೇ ಅಪೇಕ್ಷಿತ ಸ್ಥಳಕ್ಕೆ ಗೊತ್ತಾಗಿ ನಿಶ್ಚಿತವಾದ ದಿನದಂದೇ ವಿವಾಹ ನಿರ್ವಿಘ್ನವಾಗಿ ಜರುಗಬಹುದು. ಸೊಸೆ ಇಲ್ಲವೆ ಅಳಿಯ ಸುಂದರ, ಜಾಣ ಹಾಗು ಸುಶಿಕ್ಷಿತರಾಗಿರುವರಾದರೂ ತುಸು ಅಹಂಕಾರಿ ಹಾಗು ಹಟದ ಸ್ವಭಾವದವರಾಗಿರಬಹುದು. ಈ ಸಲ ಮಕ್ಕಳೆಲ್ಲರಿಂದಲೂ ಉತ್ತಮ ಸುಖ ದೊರೆಯಬಹುದು. ಆದರೆ ಅದು ಹತ್ತನೆಯ ಗುರುವಿಗಿಂತ ಹನ್ನೊಂದನೆಯವನಿರುವಾಗಲೇ ಹೆಚ್ಚು ದೊರೆಯುವುದು. ಈ ಸಲ ಅವರಲ್ಲಿಯ ಅನೇಕರ ಉನ್ನತಿಯಾಗುವದಲ್ಲದೆ ಜನವರಿ ೨೭ ರಿಂದ ಫೆಬ್ರುವರಿ ೧೪ ಇಲ್ಲವೆ ಜೂನ್ ೮ರಿಂದ ೨೫ ಈ ಅವಧಿಯಲ್ಲಿ ಒಬ್ಬಿಬ್ಬರ ಉನ್ನತಿಯಂತೂ ವಿಶೇಷ ಪ್ರಮಾಣದಲ್ಲಾಗುವ ಸಂಭವ.

ವರ್ಷಾರಂಭದಲ್ಲಿ ರಾಶಿಸ್ವಾಮಿ ಶನಿ ಚತುರ್ಥದಲ್ಲಿ ಹಾಗು ಚತುರ್ಥೇಶ ಶುಕ್ರ ಭಾಗ್ಯಸ್ಥಾನದಲ್ಲಿದ್ದು ಈತನೇ ಭಾಗ್ಯೇಶನಾಗಿರುವದರಿಂದಾಗಿ ಈ ವರ್ಷ ಉದ್ಯೋಗ-ವ್ಯವಹಾರಸ್ಥರಿಗೆ ಒಳ್ಳೆಯ ಭಾಗ್ಯದಾಯಕವೂ, ಯಶೋದಾಯಕವೂ ಆಗಿದೆ. ಅದರಲ್ಲಿಯೂ ಹತ್ತನೆಯ ಗುರುವಿರುವರೆಗೆ ಪತ್ತು, ಹಾಗು ಪ್ರತಿಷ್ಠೆಗಳು ಸಹ ಹೆಚ್ಚುವವು. ಹನ್ನೊಂದನೆಯ ಗುರು ಅಂದರೆ ಜನೆವರಿ ೫ರಿಂದ ಮುಂದೆ ವಿಪುಲ ದ್ರವ್ಯ ಲಾಭವಾಗಬಹುದು. ವ್ಯಾಪಾರಸ್ಥ ಹಾಗು ಬುದ್ಧಿಜೀವಿ ಉದ್ಯೋಗಿಗಳಿಗೆ ಈ ವರ್ಷ ಶ್ರಮಜೀವಿಗಳಿಗಿಂತ ಹೆಚ್ಚು ಸುಖ, ಲಾಭ, ಯಶಸ್ಸು ದೊರೆಯಬಹುದು. ವ್ಯವಹಾರದಲ್ಲಿ ಅನೇಕರೊಂದಿಗೆ ತಂಟೆಗಳು ಹುಟ್ಟಿಕೊಳ್ಳಬಹುದು; ಇಲ್ಲವೆ ನಿಧಾನ ವಾಗ್ವಾದವಾದರೂ ಉಂಟಾಗುವ ಸಂದರ್ಭ ಅನೇಕ ಸಲ ಬರಬಹುದು. ಅದರಂತೆಯೆ, ಯಾರಿಂದಲಾದರೂ ಬರಬೇಕಾಗಿದ್ದ ಸಾಲವಿದ್ದರೆ ಅದರಲ್ಲಿ ಅರ್ಧಮರ್ಧ ಸೊಟು ಬಿಟ್ಟೇ ಉಳಿದದ್ದನ್ನು ಪಡೆಯಬೇಕಾಗಬಹುದು; ಆದರೆ ನೀವು ಕೊಡಬೇಕಾಗಿದ್ದ ಸಾಲವಿದ್ದಲ್ಲಿ ಅಸಲಿಗಿಂತ ಹೆಚ್ಚು ತೆರಬೇಕಾಗಬಹುದು. ಹನ್ನೊಂದನೆಯ ಗುರುವಿರುವಾಗ ನೌಕರದಾರರಿಗೆ ಬಡತಿ ದೊರೆಯುವುದು ನಿಶ್ಚಿತ. ಬದಲಿಯಾದರೆ, ಕೆಲಸ ಹಾಗು ವಾಸದ ದೃಷ್ಟಿಯಿಂದ ವಿಪರೀತ ಅನಾನುಕೂಲವುಳ್ಳ ಸ್ಥಳಕ್ಕೆ ಆಗುವ ಭೀತಿ. ಮಂಗಲಕರ ಹಾಗು ಧಾರ್ಮಿಕ ಕಾರ್ಯಗಳಿಗಾಗಿ ವಿಶೇಷ ವೆಚ್ಚ ಮಾಡಬೇಕಾಗುವದರಿಂದ ಅಪಾರ ಲಾಭವಾದಾಗ್ಯೂ ಕೂಡ ಸ್ಥಾವರ ಇಲ್ಲವೆ ರೋಖ ಸಂಗ್ರಹದಲ್ಲಿ ಹೆಚ್ಚಳವೇನೂ ಸಾಧ್ಯವಾಗದು. ವಿಶೇಷತಃ ಜನೆವರಿ ೧೧ರಿಂದ ಫೆಬ್ರುವರಿ ೫, ಮಾರ್ಚ್ ೧ರಿಂದ ಏಪ್ರಿಲ್ ೧, ಜೂನ್ ೧೭ರಿಂದ ಸೆಪ್ಟೆಂಬರ್ ೧, ಹಾಗು ಅಕ್ಟೋಬರ್ ೧ರಿಂದ ೨೪ರ ವರೆಗಿನ ಅವಧಿ ಲಾಭಕ್ಕೆ ಅತ್ಯುತ್ತಮವಾಗಿದೆ. ಹತ್ತನೆಯ ಗುರುವಿರುವಾಗ ಮಾತ್ರ ವಾಹನಸುಖ ಚೆನ್ನಾಗಿರುವದು. ಹತ್ತನೆಯ ಗುರುವಿಗಿಂತ ಆತ ಹನ್ನೊಂದನೆಯವನಾದ ಬಳಿಕ ಮಿತ್ರರು ಹೆಚ್ಚು ಕಳಕಳಿಯಿಂದ ವರ್ತಿಸುವರು. ಯಾತ್ರೆ ಕೈಕೊಳ್ಳಬೇಕೆಂದು ನಿರ್ಧರಿಸಿದರೂ ಅದು ಈ ಸಲ ನೆರವೇರುತ್ತದೆಂಬ ಭರವಸೆಯಿಲ್ಲ. ಕೇತು ಆರನೆಯವನಾದ ನಂತರ ಅಪೇಕ್ಷಿತ ಎಲ್ಲ ಘಟನೆಗಳೂ ವಿಶೇಷ ತೊಂದರೆಯಾಗದೆಯೆ ಸುಸೂತ್ರವಾಗಿ ಜರಗುವವು.

ದಾವೆ-ಫಿರ್ಯಾದಿ ಹಾಗು ಖಾಸಗಿ ಸ್ಪರ್ಧೆಯ ಕಾರ್ಯಗಳಲ್ಲಿ ಹತ್ತನೆಯ ಗುರುವಿಗಿಂತ ಹನ್ನೊಂದನೆಯ ಗುರುವೇ ಅನುಕೂಲನಾಗಿದ್ದಾನೆ. ಅದರಲ್ಲಿಯೂ ಆರನೆಯ ಕೇತುವಿರುವವರೆಗೆ ಅಂದರೆ ಅಗಸ್ಟ ೪ರ ವರೆಗೆ ನಿರ್ಣಯ ದೊರೆತರೆ ಭಾರೀ ಯಶಸ್ಸು ಸಿಕ್ಕುವುದು.

ಈ ರಾಶಿಯ ಗರ್ಭಿಣಿಯರ ಹೆರಿಗೆ ಗುರು ಹತ್ತನೆಯವನಿರುವಾಗ ಅಂದರೆ ಜನೆವರಿ ೫ರ ಪೂರ್ವದಲ್ಲಾದರೆ ಸಾಧಾರಣ ತೊಂದರೆಯಾದು. ಅನಂತರ ಐದನೆಯ ಕೇತುವಿರುವಾಗ ಅಂದರೆ ಅಗಸ್ಟ ೪ರ ನಂತರವಾದರೆ ವಿಶೇಷ ತೊಂದರೆಯುದೇಬುದು ಅನುಭವಕ್ಕೆ ಬಂದೀತು ಹಾಗು ಈ ಎರಡೂ ಅವಧಿಗಳಲ್ಲಿ ಬಹುತರರಿಗೆ ಹೆಣ್ಣು ಮಗುವೇ ಜನಿಸುವದು. ಆದರೆ ಜನವರಿ ೫ರಿಂದ ಆಗಸ್ಟ ೪ರ ಅವಧಿಯಲ್ಲಾದರೆ ಗಂಡುಮಗುವಾಗುವ ಯೋಗವಿದೆ.

ಹತ್ತನೆಯ ಗುರು ಹಾಗು ಕೇತು ಐದನೆಯವನಿರುವಾಗ ಪರೀಕ್ಷೆ ಇದ್ದಲ್ಲಿ ಪಾಸಾಗಿಯೇ ತೀರುತ್ತಾರೆಂದು ಹೇಳಲು ಶಕ್ಯವಿಲ್ಲ. ಆದರೆ ನಡುವಿನ ಅವಧಿಯಲ್ಲಿ ಅಂದರೆ ಜನವರಿ ೫ರಿಂದ ಅಗಸ್ಟ ೪ ಅರ್ಥಾತ್ ಗುರು ಹನ್ನೊಂದನೆಯವನಿರುವಾಗ ಪರೀಕ್ಷೆ ಇದ್ದವರೆಲ್ಲ ಉತ್ತೀರ್ಣರಾಗುವರಲ್ಲದೆ ನೂರಕ್ಕೆ ೪೦ರಷ್ಟು ವಿದ್ಯಾರ್ಥಿಗಳು ಮೇಲಿನ ದರ್ಜೆಯಲ್ಲಿ ಪಾಸಾಗುವ ಭರವಸೆಯಿದೆ.



## ಮೀನ

ಈ ರಾಶಿಯವರಿಗೆ ಈ ವರ್ಷ ಅಗಸ್ಟ ೪ ರ ವರೆಗೆ ವ್ಯಾಪಾರಿಕ ಹಾಗು ಉದ್ಯೋಗಿಕ ಯಶ ಹಾಗು ಸುಖಕ್ಕೆ ಅತ್ಯಂತ ಯಶೋದಾಯಕವಿದೆ. ಅನಂತರ ಮಾತ್ರ ಕೇವಲ ಉದ್ಯೋಗಿಕ ಹಾಗು ಆರ್ಥಿಕ ಲಾಭಕ್ಕೂ ಅಷ್ಟೇ ಉತ್ಕರ್ಷದ್ದೆಂಬುದು ನಿಶ್ಚಿತವಾಗಿಯೂ ಕಂಡುಬರುವುದು.

ಈ ರಾಶಿಗಿದ್ದ ಸಾಡೇಸಾತಿಯು ಕಳೆದ ಎಪ್ರಿಲ್ ಕೊನೆಯಲ್ಲಿಯೇ ಮುಕ್ತಾಯವಾಗಿದ್ದು ಅದರ ಕರ್ತಾನಾದ ಶನಿ ಈಗ ಮೂರನೆಯವನಿರುವದರಿಂದ ಆರೋಗ್ಯಕ್ಕೆ ಹಾಗು ಯೋಜಿತ ಕಾರ್ಯಗಳ ಯಶಸ್ಸಿಗೆ ಅತೀವ ಉತ್ತಮನಿರುವನಲ್ಲದೆ ೬೪ರ ಜುಲೈ ೧೯ ರ ವರೆಗೆ ಆತ ಇದೇ ಸ್ಥಾನದಲ್ಲಿರುವನು. ವರ್ಷಾರಂಭದಲ್ಲಿ

ರಾಶಿಸ್ವಾಮಿ ಗುರು ನವಮದಲ್ಲಿ ಅತ್ಯಂತ ಶುಭ ಸ್ಥಾನದಲ್ಲಿದ್ದು, ಮಂಗಳನು ಹನ್ನೊಂದನೆಯ ಅಂದರೆ ಲಾಭಸ್ಥಾನದಲ್ಲಿ ಉಚ್ಚನಿದ್ದುದರಿಂದಾಗಿ ದೇಹಸುಖಕ್ಕೆ ಅವಶ್ಯಕವೂ ಆದಂಥ ಬಹುತರ ಎಲ್ಲ ವಿಷಯಗಳಲ್ಲಿಯೂ ಸಮಾಧಾನ ನೀಡುವಂಥವನಾಗಿದ್ದಾನೆ. ಆದರೆ ಮೇ ೨ರಿಂದ ಜೂನ್ ೨೬ರ ಅವಧಿಯಲ್ಲಿ ತುಸು ಕ್ಲೇಶವುಂಟಾಗುವ ಸಂಭವವಿದೆ.

ಪೆಂಪತಿಯ ಆರೋಗ್ಯ, ವರ್ಷಾರಂಭದಲ್ಲಿ ಭಾಗ್ಯೇಶ ಬುಧ ಮಿತ್ರಕ್ಷೇತ್ರ ತುಲಾದಲ್ಲಿದ್ದುದರಿಂದಾಗಿ ಅತ್ಯಂತ ನಿರೋಗಿಯಾಗಿರುವದು. ಫೆಬ್ರುವರಿ ೧೪ರಿಂದ ಮಾರ್ಚ್ ೩, ಅಗಸ್ಟ ೩೧ರಿಂದ ಸಪ್ಟೆಂಬರ್ ೧೭ ಈ ಅವಧಿಯಲ್ಲಿ ತುಸು ಕಿರಿಕಿರಿಯುಂಟಾಗಬಹುದು. ಭಾರ್ಯಾಸ್ಥಾನದಲ್ಲಿರುವ ಹರ್ಷಲ್‌ನಿಂದಾಗಿ ಉಭಯತರಲ್ಲೂ ನಿಕಟ ಪ್ರೇಮ ಹಾಗು ವಿಶ್ವಾಸವಿರುವುದಾದರೂ ಕ್ಷುಲ್ಲಕ ಕಾರಣಗಳಿಗಾಗಿ ಕೆಲವೊಮ್ಮೆ ವಿಪರೀತ ವಾಗ್ವಾದವುಂಟಾಗುವ ಪ್ರಸಂಗ, ವಿಶೇಷತಃ ಡಿಸೆಂಬರ್ ೧೭ರಿಂದ ಫೆಬ್ರುವರಿ ೧ ಹಾಗು ಸಪ್ಟೆಂಬರ್ ೨೨ರ ನಂತರದ ಅವಧಿಯಲ್ಲಿ ಮೇಲಿಂದ ಮೇಲೆ ಬರಬಹುದು.

ಈ ರಾಶಿಯ ಅವಿವಾಹಿತರ ವಿವಾಹವಾಗುವುದಿದ್ದಲ್ಲಿ ಅದಕ್ಕೆ ವರ್ಷವಿಡೀ ಬಾಸಿಂಗಬಲವಿದೆಯೆಂಬುದು ನಿಶ್ಚಿತ. ಅದರಲ್ಲಿಯೂ ಒಂಬತ್ತನೆಯ ಗುರುವಿರುವವರೆಗೆ ಅಂದರೆ ಜನೆವರಿ ೫ರವರೆಗೆ ಅನಾಯಾಸವಾಗಿ ನಿಶ್ಚಿತವಾಗುವದು. ಆದರೆ ಮುಂದೆ ಇಂಥ ಪ್ರಬಲ ಯೋಗವಿಲ್ಲ. ಅಂದರೆ ಅದಕ್ಕಾಗಿ ವಿಶೇಷ ತೊಂದರೆ ಪಡಬೇಕಾಗುವದು.ವಧು ಇಲ್ಲವೆ ವರ ರೂಪದಲ್ಲಿ ಸ್ವಂತಕ್ಕಿಂತ ಕುರೂಪಿಯೆನಿಸಿದರೂ ಬುದ್ಧಿ, ವ್ಯವಹಾರ ಜ್ಞಾನ, ಕರ್ತೃತ್ವಗುಣಗಳಲ್ಲಿ ಹೆಚ್ಚು ಉತ್ತಮರಿರುವ ಶಕ್ಯತೆಯಿದೆ. ಮೊದಲಿನ ಎರಡು-ಮೂರು ತಿಂಗಳು ಮತೈಕ್ಯಕ್ಕೆ ತೊಂದರೆಯಾದರೂ ಮುಂದೆ ಅದು ಸುಧಾರಿಸುವದಲ್ಲದೆ ಉಭಯತರಲ್ಲೂ ಒಳ್ಳೆಯ ಪ್ರೇಮ ಹಾಗು ಪರಸ್ಪರರಲ್ಲಿ ಗಾಢ ಶ್ರದ್ಧೆಯುಂಟಾಗುವದು.

ಅದರಂತೆಯೆ, ನಿಮ್ಮ ಈ ವರ್ಷ ಸಂತತಿಯ ವಿವಾಹ ಮಾಡುವದಿದ್ದಲ್ಲಿ ಅದಕ್ಕೆ ಸಹ ಗುರು ಒಂಭತ್ತನೆಯವನಿರುವಾಗ ಅಂದರೆ ಜನೆವರಿ ೫ರಿಂದ ಅಗಸ್ಟ ೪ರ ಅವಧಿಯಲ್ಲಿ ಹಾಗು ಗುರು ಹತ್ತನೆಯವನಾದಾಗ ಅಂದರೆ ಅಗಸ್ಟ ೪ರ ನಂತರ ವಿಶೇಷ ಸುಲಭ ಯೋಗವಿದ್ದು ಮನಸ್ಕೊಪ್ಪುವ ಸ್ಥಳಕ್ಕೆಯೆ ಗೊತ್ತಾಗುವದು. ಆದರೆ ಈ ನಡುವಣ ಕಾಲದಲ್ಲಿ ಅಂದರೆ ಜನೆವರಿ ೫ರಿಂದ ಅಗಸ್ಟ ೪ ರ ವರೆಗಿನ ಅವಧಿಯಲ್ಲಿ ಒಂದು ವೇಳೆ ಗೊತ್ತಾದರೂ ಲಗ್ನ ನೆರವೇರುವವರೆಗೂ ಅನಪೇಕ್ಷಿತ ಅಡ್ಡಿಗಳನೇಕ ಎದುರಾಗುವವು. ಹತ್ತನೆಯ ರಾಹುವಿರುವಾಗ ವಿವಾಹವಾದರೆ ಸೊಸೆ ಇಲ್ಲವೆ ಅಳಿಯ ಮನಸ್ಕೊಪ್ಪುವಂಥವರು ದೊರೆಯಬಹುದು. ಹನ್ನೊಂದನೆಯ ರಾಹುವಿರುವಾಗ ವಿವಾಹವಾದರೆ ರಾಹು ಹತ್ತನೆಯವನಾದ ಬಳಿಕ ಅವರ ವಿಷಯದಲ್ಲಿ ಮೊದಲುಳಿದುಕೊಂಡು ಬಂದಿದ್ದ ದುರಭಿಪ್ರಾಯ ಬಹು ಬೇಗ ಬದಲಾಗಿ ಅತ್ಯಂತ ನಿರ್ಮಲವಾಗುವುದು. ಮಕ್ಕಳಲ್ಲಿ ಬಹುತರರ ಉತ್ಕರ್ಷ ಒಂಭತ್ತನೆಯ ಗುರುವಿರುವಾಗ ಒಡೆದು ಕಾಣಿಸುವಂತಾಗುವದು. ಆದರೆ ಮನಸ್ಸಿಗೆ ಪೂರ್ಣ ತೃಪ್ತಿಯುಂಟಾಗುವಂಥ ಸುಖ ರಾಹು ಹತ್ತನೆಯವನಾದ ನಂತರವೇ ಅವರಿಂದ ದೊರೆಯುವುದು. ಕೇತು ಐದನೆಯವನಿರುವಾಗ ಮನವನ್ನು ದುಃಖಕ್ಕೀಡುಮಾಡುವಂಥ ಮಾತನ್ನು ಅವರಲ್ಲಿಯ ಒಬ್ಬ ಮಗ ಇಲ್ಲವೆ ಮಗಳಿಂದ ಕೇಳಬೇಕಾಗಬಹುದು. ಅಲ್ಲದೆ ಒಬ್ಬನು ಅತಿ ದೂರದ ಸ್ಥಳಕ್ಕೆ ಹೋಗುವದರಿಂದಾಗಿ ಅಂತಃಕರಣ ಒಡವಾಗಬಹುದಾಗಿದೆ.

ಉದ್ಯೋಗ-ಧಂದೆಗಳಲ್ಲಿ ಈ ವರ್ಷ. ವರ್ಷಾರಂಭದಲ್ಲಿ ರಾಶಿ ಸ್ವಾಮಿ ಗುರು ನವಮದಲ್ಲಿದ್ದು ಜನೆವರಿ ೫ರಿಂದ ಆತ ದಶಮ ಅಂದರೆ ಕರ್ಮಸ್ಥಾನಕ್ಕೆ ಸ್ವಸ್ಥಾನವಾದ ಧನು ರಾಶಿಗೆ ಬರಲಿರುವದರಿಂದ ಅಪೂರ್ವ ಭಾಗ್ಯೋತ್ಕರ್ಷವಾಗುವುದು. ಹಾಗು ಅನೇಕ ವಿಷಯಗಳಲ್ಲಿ ವೈಭವ ಪ್ರಾಪ್ತವಾಗಬಹುದು. ಕಠಿಣ, ದುರ್ಲಭ ಇಲ್ಲವೆ ಅಸಾಧ್ಯ ಕಾರ್ಯಗಳಲ್ಲಿ ಅಲ್ಪಾಯಾಸದಿಂದ ಸಹಜವಾಗಿಯೇ ಯಶಸ್ಸು ಸಿಕ್ಕುವದು. ವ್ಯಾಪಾರಸ್ಥರಿಗಿಂತ ಬುದ್ಧಿಜೀವಿ ಹಾಗು ಶ್ರಮಜೀವಿ ಉದ್ಯೋಗಿಗಳಿಗೆ ಅತ್ಯಂತ ಯಶೋದಾಯಕವಾಗಿದೆ. ನೌಕರದಾರರಿಗೆ ಸಹ ಅಗಸ್ಟ ೪ರ ವರೆಗೆ ನಿರೀಕ್ಷೆಗಿಂತ ಹೆಚ್ಚು ಪ್ರಗತಿದಾಯಕ ಇಲ್ಲವೆ ಅಧಿಕಾರ ವೃದ್ಧಿಯದಾಗಿದೆ. ಮೇಲೆ ಹೇಳಿದ ದಿನಾಂಕದ ನಂತರ ಮಾತ್ರ ವರಿಷ್ಠರು ತುಸು ಅಸಮಾಧಾನದಿಂದಿರುವರಾದರೆ ಕೈಕೆಳಗಿನವರು ನಿರ್ಭಿಡೆಯಿಂದ ವರ್ತಿಸಹತ್ತಬಹುದು. ಮೇಲ್ಕಾಣಿಸಿದ ದಿನಾಂಕದ ಪೂರ್ವದಲ್ಲಿ ಬದಲಿಯಾದರೆ ಎಲ್ಲ ದೃಷ್ಟಿಯಿಂದಲೂ ಅನುಕೂಲಕರವಾದ ಸ್ಥಳಕ್ಕೆಯೆ ಆಗುವುದು. ಆದರೆ ಆನಂತರ ಬದಲಿಯಾದರೆ ಅನುಕೂಲಕರವಲ್ಲದ ಸ್ಥಳಕ್ಕೆ ಆಗುವ ಸಂಭವವಿದೆ. ಅಕ್ಟೋಬರ್ ೩೦ ಇಲ್ಲವೆ ಡಿಸೆಂಬರ್ ೧೮ರಿಂದ ಜನೆವರಿ ೧೧, ಮಾರ್ಚ್ ೧ರಿಂದ ಎಪ್ರಿಲ್ ೧ ಹಾಗು ಜುಲೈ ೨೬ರಿಂದ ಸಪ್ಟೆಂಬರ್ ೧ ಈ ಅವಧಿಯಲ್ಲಿ ಅನೇಕರಿಗೆ ಲಾಟರಿ, ರೇಸ್, ವಾರಸಾ ಪ್ರಾಪ್ತಿ ಮುಂತಾದವುಗಳಿಂದ ಆಕಸ್ಮಿಕ ಲಾಭವು ಸಾಕಷ್ಟು ದೊಡ್ಡ ಪ್ರಮಾಣದಲ್ಲೇ ದೊರೆಯುವ ಸಂಭವವಿದೆ. ಲಾಭ ಹೆಚ್ಚಾದಂತೆ ಅಪೇಕ್ಷಿತ ವಿಷಯದಲ್ಲಿ ಸಂಗ್ರಹ ಕೂಡ ಹೆಚ್ಚಾಗುವದು. ಬಹುತರ ಕಾರ್ಯಗಳಲ್ಲಿ ಧೈರ್ಯ ಹಾಗು ಸಾಹಸ ತೋರುವ ಮನೋಭಾವವಿರುವದು. ಜನೆವರಿ ೫ರಿಂದ ಅಕ್ಟೋಬರ್ ೪ ರ ಕಾಲದಲ್ಲಿ ನೌಕರದಾರರಿಗೆ ಬಡತಿ ಸಿಕ್ಕುವದಲ್ಲದೆ ಪ್ರತಿಷ್ಠೆಯೂ ಹೆಚ್ಚುವದು. ಬಹು ಹಿಂದೆಯೆ ಮನದಲ್ಲಿ ಯೋಜಿಸಿದ್ದ ಒಂದೆರಡು ಯಾತ್ರೆಗಳು ಜರುಗಬಹುದು. ಹತ್ತನೆಯ ಗುರುವಿರುವಾಗ ಮಂಗಲಕರ ಮತ್ತು ಧಾರ್ಮಿಕ ಕಾರ್ಯಗಳೂ ಜರುಗಬಹುದು. ಅಕ್ಟೋಬರ್ ೪ ರ ನಂತರ ಮಿತ್ರಸುಖ ಅತಿಶಯ ಉತ್ತಮ. ಸ್ವಂತದ ವಾಹನವಿದ್ದರೂ ವಾಹನ ಸುಖ ಸಾಮಾನ್ಯವೆಂದೇ ತಿಳಿಯಬೇಕು. ಗುರು ಒಂಭತ್ತನೆಯವನಿರುವಾಗ ಪೂಜ್ಯ ಜನರ ಸಹವಾಸ ಹಾಗು ಅನುಗ್ರಹ ಲಭ್ಯವಾಗುವ ವಿಶೇಷ ಯೋಗವಿದೆ.

ದಾವೆ-ಫಿರ್ಯಾದಿ ಹಾಗು ಖಾಸಗಿ ಸ್ಪರ್ಧೆಯ ಕಾರ್ಯಗಳಲ್ಲಿ,ಅಕ್ಟೋಬರ್ ೩೦ರಿಂದಫೆಬ್ರುವರಿ ೧೩, ಎಪ್ರಿಲ್ ೧೪ರಿಂದ ಮೇ ೧೫, ಜೂನ್ ೧೬ರಿಂದ ಜುಲೈ ೧೬, ಅಗಸ್ಟ ೧೬ರಿಂದ ಸಪ್ಟೆಂಬರ್ ೧೭ರ ವರೆಗಿನ ಅವಧಿಯಲ್ಲಿ ನಿರ್ಣಯವಾದರೆ ಯಶೋದಾಯಕ. ಇತರ ಕಾಲದಲ್ಲಾದರೆ ನಿಮ್ಮ ವಿರುದ್ಧವಾಗುವ ಸಂಭವ. ನಿರ್ಣಯ ನಿಮ್ಮ ಪರವಾಗಲಿ ಅಥವಾ ವಿರುದ್ಧವಾಗಲಿ ಪ್ರತಿಪಕ್ಷಿ ಮಾತ್ರ ಮಣಿಯಲಾರನಷ್ಟೇ ಅಲ್ಲ ಆತನ ಈರ್ಷ್ಯೆ ಹೆಚ್ಚುತ್ತಲೇ ಇರುವದೆಂಬುದು ಕಂಡುಬಂದೀತು.

ಈ ರಾಶಿಯ ಗರ್ಭಿಣಿಯರ ಪಾಲಿಗೆ ಗುರು ಒಂಭತ್ತನೆಯವನಿರುವಾಗ ತುಸು ಕಷ್ಟಕರವೆನಿಸುವುದು; ಆದರೆ ಹೆಣ್ಣುಮಗುವೇ ಜನಿಸುವುದು. ಹತ್ತನೆಯ ಗುರುವಿರುವಾಗ ಪ್ರಸೂತಿ ಕಷ್ಟದ್ದೆನಿಸದು. ಹತ್ತನೆಯ ರಾಹು ಬರುವ ಮೊದಲು ಅಂದರೆ ಜನೆವರಿ ೫ರಿಂದ ಅಗಸ್ಟ ೪ವರೆಗಿನ ಅವಧಿಯಲ್ಲಿ ಬಹುತರರಿಗೆ ಗಂಡು ಮಗುವೇ ಆಗುವುದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಜನೆವರಿ ೫ರ ಪೂರ್ವದಲ್ಲಿ ಹಾಗು ಅಗಸ್ಟ ೪ರ ನಂತರವಾದರೆ ಅವರು ಪಾಸಾಗುವದು ನಿಶ್ಚಿತ; ಆನಂತರ ಅಂದರೆ ಡಿಸೆಂಬರ್ ೧೭ರಿಂದ ಜನೆವರಿ ೫ ಇಲ್ಲವೆ ಅಗಸ್ಟ ೬ರಿಂದ ಸಪ್ಟೆಂಬರ್ ೨೨ ಈ ಅವಧಿಯಲ್ಲಾದರೆ ಅವರಿಗೆ ಉಚ್ಚ ಶ್ರೇಣಿ ಕೂಡ ದೊರೆಯಬಹುದಾಗಿದೆ.

" ಶುಭಂ ಭವತು "



ಪಡುವಣ ರಾಜ್ಯದ ಕಿರಿಯ ಅರಸುಗುವರಿಗೆ ವಯಸ್ಸಾಗುತ್ತ ಬಂದರೂ ಯೋಗ್ಯವರ ದೊರೆಯಲಿಲ್ಲ. ಅರಸೊತ್ತಿಗೆಯ ವೈಭವವಳ್ಳದ್ದ ಹಿರಿಯಮಗಳು ತಾಯಿಯ ಬಯಕೆಯಂತೆ ತಂಗಿಯನ್ನು ಸವತಿಯಾಗಿ ಪಡೆಯಲಿಚ್ಛಿಸದೆ ದಾರಿದ್ರ್ಯ ನಟಿಸಿದಳು. ತಾಯಿ ಮತ್ತು ಮಗ ಜನಾಪವಾದಕ್ಕಂಜಿ ಅರಸುಗುವರಿಯನ್ನು ಕಾಡಿನಲ್ಲಿ ಬಿಟ್ಟರು. ಆದರೆ ದೈವವು ರಾಜಕುವರಿಯ ರೀರ್ವರ ವಿಧಿಯನ್ನೇ ಬದಲಿಸಿತು.

ಬಂದಾಗ-ತಮ್ಮನ ಕುದುರೆಯ ಖುರಪುಟದ ಸದ್ದೂ ಕಿವಿಗಡಚಿಕ್ಕುತ್ತಿತ್ತು. ಅವನ ಅಕ್ಕ ಪಕ್ಕದಲ್ಲಿ ಚಾಮರ ಬೀಸಿ ಬರುತ್ತಿದ್ದ ಚಾಕರಿಯ ಜನವಿಲ್ಲ. ಅಲಂಕರಿಸಿದ ಮೇಣೆಯೂ ಅದಾಗಿರಲಿಲ್ಲ. ಅರಸಿಗೇಕೋ ಅನುಮಾನ ಬಂತು. ತನ್ನ ತಾಯಿ ತನ್ನಿಂದ ಏನೋ ಬಹು ಅಮೂಲ್ಯವಸ್ತು ಕೇಳಲು ಬಂದಿರಬೇಕು, ಎಂದು ಸಂಶಯ ಬರಲು, ಥಟ್ಟನೆ ಎದ್ದು, ಅರಸನ ಭುಜ ಹಿಡಿದು ಅಲುಗಿಸುತ್ತ-

"ನನ್ನರಸಾ, ದೂರದಲ್ಲಿ ನನ್ನಮ್ಮ ಮೇಣೆಯಲ್ಲಿ ಬರುತ್ತಿದ್ದಾರೆ. ಯಾವುದೋ ಸಂಕಟವನ್ನೇ ಹೊತ್ತು



# ಬಾಲೆ ಕನ್ನಾಪು

ಗೀತಾ ಕುಲಕರ್ಣಿ

ಅಲ್ಲಿ ಎಲ್ಲವೂ ಚಿಕ್ಕ ಚಿಕ್ಕ ತುಂಡು ರಾಜ್ಯ. ಪಡುವಣದ ತುಂಡು ರಾಜ್ಯದ ಹಿರಿಯ ಕಣ್ಮುಚ್ಚಿ ಆಗಲೇ ವರುಷಗಳು ಸಂದಿವೆ. ಯಜಮಾನಿಗೆ ಕೈಹಿಡಿದ ಹಿರಿಯ ಕಣ್ಮುಚ್ಚಿದ ದುಃಖದ ಜೊತೆ ಎರಡು ಹೆಣ್ಣು-ಒಂದು ಗಂಡು ಹೀಗೆ ಮೂರು ಮಕ್ಕಳನ್ನು ಬೆಳೆಸಿ ದೊಡ್ಡವರನ್ನಾಗಿ ಮಾಡುವ ಕೆಲಸದ ಜೊತೆಯಲ್ಲಿ ರಾಜ್ಯದ ಕಾರುಭಾರಿನ ಚಿಂತೆ ತಲೆಯ ಮೇಲೆ ಬಿತ್ತು; ಹಗಲು ಆಕಾಶದಲ್ಲಿ ಸೂರ್ಯ-ಇರುಳಲ್ಲಿ ಚಂದ್ರ ಬಂದು ಹೋಗುತ್ತಿದ್ದರು- ದಿನಗಳು-ತಿಂಗಳುಗಳು ಕಳೆದವು. ಆಟ ಆಡುತ್ತಿದ್ದ ಮಕ್ಕಳು ಬೆಳೆದು ದೊಡ್ಡವರಾದರು, ಹುಣ್ಣಿಮೆಯ ಚಂದ್ರನಂತೆ.

ಹಿರಿಯಮಗಳನ್ನು ಮೂಡಣದ ಅರಸನಿಗೆ ಮದುವೆಮಾಡಿ ಕೊಟ್ಟಾಯಿತು. ಮತ್ತೂ ವರುಷಗಳು ಕಳೆದವು. ಅವಳಿಗೆ ಎರಡು ಮುತ್ತಿನಂಥ ಗಂಡು ಮಕ್ಕಳು ಹುಟ್ಟಿದವು.

ಎರಡನೆಯ ಮಗಳು ಬಾಲೆ ಕನ್ಯಾಪು-ಚಂದ್ರನ ಪ್ರತಿಬಿಂಬ! ಗುಣದಲ್ಲಿ ಅಪರಂಜಿ! ಐದು ಮಲ್ಲಿಗೆ ತೂಕದ ಬಾಲೆ ಕನ್ಯಾಪು-ಅಮ್ಮ-ತಮ್ಮನ ಪ್ರಾಣ ಪದಕ!

ಆದರೆ ವರ್ಷಗಳು ನಿಲ್ಲುತ್ತವೆಯೇ? ಋತುಗಳು ಬದಲಾದಂತೆ-ಗಿಡಮರಗಳಲ್ಲಿ ಹೂ-ಹಣ್ಣು ಚಿಗಿತಂತೆ-ಬಾಲೆಯ ಚೆಲುವು ಇಮ್ಮಡಿಯಾಗುತ್ತ ಬಂತು. ಆದರೆ ಅವಳ ಕೈಹಿಡಿಯುವ ಅರಸುಗುವರ ಯಾರೂ ಮುಂದೆ ಬರಲಿಲ್ಲ. ಹನ್ನೆರಡರ ಮೇಲೆ ಹನ್ನೆರಡು ವರುಷಗಳಾಗುತ್ತ ಬಂತು. ತಾಯಿಗೆ ದಿನದಿನಕ್ಕೆ ಚಿಂತೆ ಹೆಚ್ಚಾಯಿತು. ದಿನಗಳೆದಂತೆ ಎದೆಯಭಾರ ಜಾಸ್ತಿಯಾಯಿತು. ತಮ್ಮ ಈ ದುಃಖದಲ್ಲಿ ಹಿಡಿಯಾದ. ತಾಯಿಮಗ ಆಪ್ತಾಲೋಚನೆ ಮಾಡಿ ಕೊನೆಗೆ ತುಂಬ ಕಷ್ಟದಲ್ಲಿ ಒಂದು ನಿರ್ಣಯಕ್ಕೆ ಬಂದರು. "ದೂರದ ಮೂಡಣದ ಅರಮನೆಯಲ್ಲಿ ಹಿರಿಯ ಮಗಳು ಎರಡು ಮುತ್ತಿನಂಥ ಮಕ್ಕಳೊಂದಿಗೆ ಸುಖದಲ್ಲಿ ಮೀಯುತ್ತಿದ್ದಾಳೆ. ಪತಿಯ ಪ್ರೀತಿಯಲ್ಲಿ ಜಗತ್ತನ್ನೇ ಮರೆತ ಅವಳನ್ನು ಒಂದು ಮಾತು ಕೇಳಿದರೆ ಹೇಗೆ ಮಗೂ?" ತಾಯಿ ಕೇಳಿದ ಗೂಢ ಮಾತಿನ ಅರ್ಥ ಮಗನಿಗೆ ತಟ್ಟನೆ ತಿಳಿಯಲಿಲ್ಲ. ವಿಷಯ ತಿಳಿಸಲು ತನ್ನಮ್ಮನನ್ನು ಕೇಳಿಕೊಂಡ ಅರಸುಮಗ.

"ಏನು ಹೇಳಲಿ? ಹೇಗೆ ತಿಳಿಸಲಿ? ಹೆತ್ತ ಹೊಟ್ಟೆಯ ಉರಿ ನೀನೇನು ಬಲ್ಲೆ ಮಗೂ? ರತ್ನದಂತ ಹುಡುಗಿ ನಮ್ಮ ಕನ್ಯಾಪು! ಅವಳ ಕೊರಳಿಗೆ ಮಾಂಗಲ್ಯ ಕಟ್ಟುವ ಅರಸು ಮಗ ಇನ್ನೂ ಬರಲಿಲ್ಲ... ಜನನಿಂದೆ ಕೇಳಿ ಕೇಳಿ ನನ್ನೆದೆ ಬೆಂದು ಬೂದಿಯಾಗಿದೆ... ಕಿವಿ ಕಿವುಡಾಗಿದೆ. ಕಟ್ಟಿಗೆ ಜೀರ್ಣವಾದಂತೆ- ಬಾಲೆ ಜೀರ್ಣವಾಗುತ್ತ ಬಂದಿದ್ದಾಳೆ. ಇದಕ್ಕೆ ಉಳಿದಿರುವುದು ಒಂದೇ ಉಪಾಯ. ನಿನ್ನ ಭಾವನ ಕೈಗೆ ಬಾಲೆಯ ಕೈಕೊಟ್ಟು-ಮಂಗಲಾಕ್ಷತೆ ಅವಳ ತಲೆಯ ಮೇಲೆ ಹಾಕಿ, ಮತ್ತೆ ಅವಳನ್ನು ಈ ಅರಮನೆಗೇ ತಂದರಾಯಿತು. ಅಕ್ಕನಿಗೆ ಸವತಿಯ ಭಯ ಬೇಡ. ನಮ್ಮರಮನೆಗೆ ಜನ ನಿಂದೆ ಬೇಡ!" ತಾಯಿಯ ಮಾತು ಅರಸುಮಗನಿಗೂ ಒಪ್ಪಿಗೆಯೇ, ಅರಮನೆಯ ಬೋವಿಗಳಿಗೆ ಮೇಣೆ ಸಿದ್ಧಪಡಿಸಲು ಹೇಳಿಕಳುಹಿಸಿದ ಅರಸುಮಗ.

—ಇತ್ತ ಏಳುಮಾಳಿಗೆಯ ಮೇಲೆ ಭಾರಿ ಭೋಜನ ಮುಗಿಸಿ ಮಲಗಿದ್ದ ಅರಸನ ಭುಜಕ್ಕೊರಗಿ ಅಕ್ಕ-ಚಿಗುರೆಲೆಯನ್ನು ಮಡಿಚಿ-ತನ್ನವನ ಬಾಯಿಗಿಟ್ಟು-ತಾನೂ ಮೆಲ್ಲಿ-ಕೆಂಪುತುಟಿಯಲ್ಲಿ ನಾಲಿಗೆಯಾಡಿಸಿ-ತಾಂಬೂಲ ಉಗುಳಲು ಕಿಟಕಿಯತ್ತ ಬಂದಾಗ-ದೂರದಲ್ಲಿ ತನ್ನ ತವರುಮನೆಯ ಮೇಣೆ ಹೊತ್ತ ಬೋವಿಗಳು ಬರುತ್ತಿದ್ದಾರೆ! ಹಿಂದೆಲ್ಲ ಹೀಗೆ ಮೇಣೆ ತರುವಂತೆ ನನಗೆ ಅಶುಭ ಯೋಚನೆ ಬಂದಿದೆ. ನೀವು ಹಿಂದುಮುಂದಿನ ಯೋಚನೆ ಮಾಡದೆ ಪಡುವಣದ ಕಿರುಕೋಣೆಯಲ್ಲಿ ಇದ್ದುಬಿಡಿ." ಎಂದಳು.

ಅರಸ ಅಲ್ಲಿಂದೆದ್ದು ಚಾಚೂ ತಪ್ಪದೆ ಅರಸಿಯ ಮಾತಿನಂತೆ ಕಿರಿಕೋಣೆ ಸೇರಿ ಮಲಗಿಬಿಟ್ಟ, ಅರಸಿ-ತನ್ನ ಮೈಮೇಲಿದ್ದ ಚಿನ್ನದೊಡವೆ ಕಳಚಿಬಿಟ್ಟು-ಹರಿದ ಸೀರೆ-ರವಕೆ ಧರಿಸಿ, ಮುಡಿದ ಮಲ್ಲಿಗೆಯ ಮಾಲೆಯನ್ನು ಕಿಟಕಿಯಾಚೆ ಬಿಸುಟಿ-ಸೇವಕರನ್ನು ಕರೆದು-ತನ್ನವರು ಯಾರು ಬಂದರೂ ಉಪಚರಿಸುವ ಅಗತ್ಯವಿಲ್ಲ ಎಂದು ಎಚ್ಚರಿಕೆಯ ಮಾತನ್ನಾಡಿ, ತಲೆಗೂದಲು ಹರವಿಕೊಂಡು, ಕತ್ತಲೆಕೋಣೆ ಸೇರಿ ನೆಲದ ಮೇಲೆ ಮಲಗಿಕೊಂಡಳು.

ಅರಮನೆಯ ಮುಂದೆ ಮೇಣೆ ಇಳಿಯಿತು-ಯಾರೂ ಮುಂದೆ ಬಂದು ಸ್ವಾಗತಿಸಲಿಲ್ಲ. ಕಾಲಿಗೆ ನೀರು, ಕುಡಿಯಲು ಹಾಲನ್ನಿತ್ತು ಬರಮಾಡಿಕೊಳ್ಳಲಿಲ್ಲ. ಆದರದ ಮಾತಿಲ್ಲ. ಮೇಣೆಯಿಂದ ಯಾರೂ ಇಳಿಸಿಕೊಳ್ಳಲೂ ಬರಲಿಲ್ಲ. ಅರಮನೆಯೇ ಮಲಗಿದ್ದಂತಿತ್ತು. ಮೇಣೆಯಿಂದ ಇಳಿದ ತಾಯಿ ತಾನಾಗಿಯೇ ಅರಮನೆಯಲ್ಲಿ ಮಗಳನ್ನು ಹುಡುಕಿ-ಎಲ್ಲೂ ಕಾಣದಾಗಲು ಕತ್ತಲೆಯಕೋಣೆಯ ಬಳಿ ನಿಂತು ಎರಡು ಬಾರಿ ಮೆಲ್ಲನೆ ಕರೆದರು. ತಾಯಿಯ ಕರೆ ಆದೇ ತನಗೆ ಕೇಳಿಸಿದಂತೆ-ಅಳುಮುಖದಲ್ಲಿ ಎದ್ದು ಬಂದಳು ಮಗಳು-ತಾಯಿ ಎದುರು. ತಾಯಿ ಮಗಳ ಮುಖ-ಉಡುಪು-ತೊಡುಗೆ ಕಂಡು ಭಯಗೊಂಡಿತು ಅವರೆದೆ, ಕಾಲು ಕಂಪಿಸಿತು,





"ಅಯ್ಯೋ... ಏನಾಗಿದೆ ಕಂದ? ಇದೇನು ನಿನ್ನ ರೂಪ? ಈ ಹರಿದ ಬಟ್ಟೆ? ಬರಿದಾದ ನಿನ್ನ ಕುತ್ತಿಗೆ-ಕೈಗಳು? ಎಲ್ಲಿ ನಿನ್ನ ಅರಸ? ನಿನ್ನ ಬಳಿಗೆ ಸಹಾಯಕ್ಕಾಗಿ ಅಂಗಲಾಚಿ ಬಂದಿದ್ದೇನೆ. ಜನನಿಂದೆ-ತಡೆಯು ಬಾರದೆ-ನಿನ್ನರಸನ ಕೈಗೆ ಬಾಲೆ ಕನ್ಯಾಮಣಿಯ ಧಾರೆ ಎರೆದು ಕೊಟ್ಟು ನಿನಗೆ ಸಪತ್ನಿಯಾಗಲು ಇಲ್ಲಿ ಅವಳನ್ನು ಇರಿಸದೆ ಮತ್ತೆ ನನ್ನಲ್ಲಿಗೆ ಕೊಂಡೊಯ್ಯುವೆ ಮಗೂ... ಬೇರೆ ದಾರಿ ಕಾಣದೆ ಬಂದೆನಮ್ಮ... ಈ ಮುದ್ದಿನ ಕೆಲಸ ನಿನ್ನಿಂದಾಗಲಿ..... ನಿನ್ನ ತೌರಿನ ಮಾನ ಕಾಯುವ ಭಾರ ನಿನ್ನದಮ್ಮ ದೇ?

ತಾಯಿ ಕಣ್ಣೀರ ಹೊಳೆ ಹರಿಸಿ ಹೇಳಿದರೂ ಹಿರಿಯ ಮಗಳ ಮನಸ್ಸು ಕರಗಲಿಲ್ಲ. ಅದು ಕಲ್ಲಾಗಿದೆ.

"ಅಮ್ಮಾ..... ನನ್ನ ಸ್ಥಿತಿ ನಿನಗೇನು ಗೊತ್ತು? ನಿನ್ನಳಿಯ ಈ ಅರಮನೆಗೆ ಬರುವುದು ಹುಣ್ಣಿಮೆಗೋ ಅಮಾವಾಸ್ಯೆಗೋ... ನನ್ನೆಲ್ಲ ಭಾಗ್ಯವನ್ನೇ ಅವರು ನೀರುಪಾಲು ಮಾಡಿದ್ದಾರೆ. ಇನ್ನು ಕನ್ಯಾಮಣಿ ಇಲ್ಲಿಗೆ ಬಂದರೆ ನಾನು ಅವಳನ್ನು......ಈ ದುಃಖದಲ್ಲಿ ಇರಿಸಿಕೊಳ್ಳಲೂ ಆಗದು. ಮದುವೆಯಾದ ಹೆಣ್ಣನ್ನು ಮತ್ತೆ ತವರಿಗೆ ಕಳಿಸುವುದೂ ಎಲ್ಲಿಯ ನ್ಯಾಯ? ಇಂಥ ಯಾವ ಮಾತೂ ಬೇಡ. ನೀವು ಬಂದ ದಾರಿಯಿಂದಲೇ ಹೊರಟು ಹೋಗಿ, ನಾನು ನಿಮ್ಮೆಲ್ಲರ ಪಾಲಿಗೆ ಇಲ್ಲವೆಂದರೂ ಸರಿ..." ಮತ್ತೆ ಹಿರಿಯ ಮಗಳು ಉತ್ತರಿಸದೆ ಕೋಣೆಯಲ್ಲಿ ಸೇರಿ ಬಾಗಿಲು ಮುಚ್ಚಿಬಿಟ್ಟಳು.

ತಾಯಿ ಮುಖ ಇಷ್ಟೇ ಆಯಿತು. ಅಲ್ಲಿ ಮತ್ತೆ ಅರೆಗಳಿಗೆ ನಿಲ್ಲಲಿಲ್ಲ. ಬಂದ ಹಾಗೆ ಬಾಯಲ್ಲಿ ನೀರ ಹನಿಯಿಲ್ಲದೆ ಮತ್ತೆ ಮೇಣೆಯಲ್ಲಿ ಕುಳಿತರು.

× × × ×

ಮೇಣೆ ಬಂದು ಅರಮನೆಯ ಹಿಂಬದಿಯ ಬಾಗಿಲಲ್ಲಿ ನಿಂತಾಗಲೇ, ಅರಸುಮಗನಿಗೆ ತಾಯಿ ಸುಖದಿಂದ ಅರಮನೆಗೆ ಮರಳಿ ಬಂದಿಲ್ಲ ಎಂದು ಖಚಿತವಾಯಿತು. ಕಂದಿದ ಮುಖದಲ್ಲಿ ಬಂದಿಳಿದ ತಾಯಿಯಿಂದ ವಿಷಯ ತಿಳಿದು ಅವನೂ ತಲೆಯ ಮೇಲೆ ಕೈಯಿಟ್ಟು ಕುಳಿತುಬಿಟ್ಟ.

ತಾಯಿ ಹಾಸಿಗೆ ಹಿಡಿದುಬಿಟ್ಟರು. ಅನ್ನ ನೀರು ಸೇರದಾಯಿತು. ತಲೆದಿಂಬು ಕಣ್ಣೀರಿನಿಂದ ತೋಯ್ದು ಹೋಯಿತು. 'ಇನ್ನು ಜನನಿಂದೆಯನ್ನು ಕೇಳಲು ಸಾಧ್ಯವಿಲ್ಲ...' ಮದುವೆಪ್ರಾಯದ ಹೆಣ್ಣಿನ ಉಸಿರು ಮನೆಯ ಛಾವಣಿಗೆ ತಾಗಿ ಅದು ಬಿಡಿಸುವಂತಿದೆಯೆ?

ಇನ್ನು ಉಳಿದದ್ದು ಬಾಲೆ ಕನ್ಯಾಮಣಿ. ಈ ಅರಮನೆಯಲ್ಲಿ ಮದುವೆಯಿಲ್ಲದೆ ಇರಿಸಿಕೊಳ್ಳುವಂತಿಲ್ಲ. ಮದುಮಗಳಾಗಿ ಅವಳು ಇನ್ನೊಂದು ಅರಮನೆಗೆ ಸೇರಬೇಕು......ಇಲ್ಲವೇ ಕಾಡುಪಾಲಾಗಬೇಕು!

ಏಳುಮಾಳಿಗೆಯ ಮೇಲೆ ತನ್ನ ಸಖಿಯರೊಂದಿಗೆ * ಚೆನ್ನೆಮಣೆ ಆಡುತ್ತಿದ್ದ ಬಾಲೆ ಕನ್ಯಾಮಣಿಯನ್ನ ತಮ್ಮ ಕೆಳಗಿನಿಂದಲೇ ಕೂಗಿ ಕರೆದ.

"ಬಾಲೆ.... ನಿನ್ನಕ್ಕ ನಿನ್ನನ್ನ ನೋಡಲು ಹಂಬಲಿಸಿ ನಿನಗಾಗಿ ಕರೆಕಳುಹಿಸಿದ್ದಾಳೆ. ಭಾವ ಮಕ್ಕಳು ನಿನಗಾಗಿ ಕಾಯುತಿದ್ದಾರಂತೆ. ಬೇಗ ಇಳಿದು ಬಾ ಇನ್ನು ಆಟ ಸಾಕು."

ತಮ್ಮನ ಈ ಮಾತು ಬಾಲೆಯ ಕಿವಿಗೆ ಬಿದ್ದುದೇ ತಡ. ಜಿಂಕೆಮರಿಯಂತೆ ಜಿಗಿದು ನಿಂತು, ಚೆನ್ನೆ ಮಣೆಯನ್ನು ಆಚೆ ದೂಡಿ, ಕುಣಿಯುತ್ತ, ಮೆಟ್ಟಿಲಿಳಿದು ಕೆಳಕ್ಕೆ ಬಂದಳು. ಅವಳು ದುಂಬಿಯಂತೆ ಹರ್ಷಗೊಂಡಳು.

ಅಕ್ಕನರಮನೆ! ಭಾವನೊಂದಿಗೆ ಸರಸದ ಮಾತು! ಮಕ್ಕಳೊಂದಿಗೆ ಉಲ್ಲಾಸದ ಆಟ! ಈ ನೀರಸರಮನೆಯಲ್ಲಿ ಒಂಟಿಯಾಗಿ ತಾನು ತನಗೇ ಭಾರವಾಗಿದ್ದ ಮನಸ್ಸು, ತಮ್ಮನ ಮಾತಿಗೆ ಹಾರುವ ಹಕ್ಕಿಯಾಯಿತು.

ತಾನಿನ್ನು ಹೊರಡಬೇಕು. ಪನ್ನೀರಲ್ಲಿ ಮಿಂದು ಬಂದು ದೇವರಿಗೆ ಅಡ್ಡಬಿದ್ದು, ತನ್ನ ಶೃಂಗಾರದ ಕೋಣೆಯಲ್ಲಿ ಬಂದು ಕನ್ನಡಿ ಎದುರು ಕುಳಿತು ಚಿನ್ನದ *ಕರಡವ ಮುಂದಿಟ್ಟು ಒಂದು ಕ್ಷಣ ಸುಮ್ಮನೆ ನೋಡಿದಳು.

ಕಣ್ಣು ಕೋರೈಸುವ ಈ ಎಲ್ಲ ನಗ ನಾಣ್ಯ ತನ್ನ ಮೈಯಲ್ಲಿ ತೊಟ್ಟು ಅಕ್ಕ ಭಾವನ್ನ ಮೆಚ್ಚಿಸಬೇಕೆನ್ನುವ ಚಪಲ. ಮತ್ತೆ ಅಕ್ಕ ಕೋಪಗೊಂಡರೆ? ಎನ್ನುವ ಭಯವೂ ಬಾಲೆಯ ಮನದಲ್ಲಿ ಮೂಡಿತು.

ಕೆಂಪು ಮುತ್ತಿನ ಹಾರ, ಪಚ್ಚೆಯಪದಕ ಸರ, ಚಿನ್ನದ ಗುಂಡುಸರ, ಕೊರಳಲ್ಲಿ ಹಾಕಿದಾಗ ಅವಳ ಕಣ್ಣುಗಳೇ ಕುಕ್ಕಿದಂತಾಯಿತು. ನತ್ತು, ಬುಗುಡಿ ಬುಲಾಕು ಮೂಗಿಗಿಟ್ಟು ಕಿವಿಗೆ ವಜ್ರದ ಓಲೆ ಇರಿಸಿ ತಲೆ ಬಾಚಿ ನಡುವೆ ಬೈತಲೆ ಮುತ್ತಿನ ಸರ ಇಟ್ಟು ಗುಲಾಬಿ ಕೇದಿಗೆಯ ಚಿನ್ನದೊಡವೆ ಇಟ್ಟು ಕೈತುಂಬ ಬಳೆ ಹಾಕಿಕೊಂಡು ಮಿಂಚುವ ಉಂಗುರ ಬೆರಳಿಗಿಟ್ಟು ಕಾಲಿಗೆ ಚಿನ್ನದ ಪೈಜನ ತೊಟ್ಟು-ಪೀತಾಂಬರ ಸೀರೆಯುಟ್ಟು, ಅಮ್ಮನ ಬಳಿ ಕುಣಿಯುವ ನವಿಲಾಗಿ ಬಂದು ನಿಂತಳು ಬಾಲೆ ಕನ್ಯಾಮಣಿ!

"ಇದೇನಮ್ಮಾ......ನೀನು ಹೀಗೆ ಮಲಗಿದ್ದು? ನಿನಗೇನು ಕಡಿಮೆಯಾಗಿದೆ ಈ ಅರಮನೆಯಲ್ಲಿ...... ನಿನ್ನ ದುಃಖದ ಮುಖ ನನ್ನ ಉತ್ಸಾಹವನ್ನೇ ನುಂಗಿಬಿಟ್ಟಿದೆ.... ನಾಲ್ಕು ದಿನ ಅಕ್ಕನರಮನೆಗೆ ಹೋಗಿ ಬರುವ ನನ್ನನ್ನ ನಗು ನಗುತ್ತ ಕಳುಹಿಸಿಕೊಡಮ್ಮಾ... ಇಲ್ಲಿ ಒಬ್ಬಳಾಗಿ ಬೇಸರಗೊಂಡಿದ್ದ ನನ್ನೆದೆಗೆ, ಅಕ್ಕನ ಪ್ರೀತಿ, ಭಾವನ ಮಾತು, ಮಕ್ಕಳ ಜೊತೆಯಲ್ಲಿ ಸಂತೋಷಪಟ್ಟು ಬರ್ತೀನಮ್ಮಾ... ಏಳು... ಪ್ರೀತಿ

---

* ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆಡುವ ಆಟ. ಕಟ್ಟಿಗೆಯಲ್ಲಿ ಕೊರೆದು ಮಾಡಿದ ಮಣೆಯಲ್ಲಿ ಕವಡೆ ಇಟ್ಟು ಆಡುತ್ತಾರೆ.

---

* ಆಭರಣ ಇಡುವ ಬೆಳ್ಳಿಯ ಕುಸುರಿನ ಪೆಟ್ಟಿಗೆ

ಯಿಂದ ಕಳುಹಿಸಿಕೊಡಮ್ಮ...... ನಿನ್ನ ಮುದ್ದಿನ ಮಗಳು ನಾನು, ಬಾಲೆ ಕನ್ಯಾಮು... ಹೇಗೆ ಶೃಂಗಾರವಾಗಿ ಹೊರಟು ನಿಂತಿದ್ದಾಳೆ ಕಣ್ತುಂಬ ನೋಡಿ-ನಕ್ಕು ಬಿಡಬಾರದೇ?"

"ಬಾಲೆ...... ನೀನು ಹೋಗಿ ಬಾ ಮಗೂ... ನನ್ನ ಕರುಳೇ ಕೊರೆಯುತ್ತಿದೆ...... ಇಲ್ಲಿಂದ ನಾನು ಒಂದು ಹೆಜ್ಜೆ ಏಳಲಾರೆ. ಮಗೂ ನೀನು ಅಕ್ಕನ ಮನೆಗೆ ಹೋಗಿ ಬಾ......"

ತನ್ನತ್ತ ನೋಡದೇ ಗೋಡೆಗೆ ಮುಖವಿರಿಸಿ-ಅಳುತ್ತ ಕಳುಹಿಸಿದ ತಾಯಿಯ ಬಗೆಗೆ ಒಂದು ಕ್ಷಣ ಬೇಸರವಾದರೂ ಬಾಲೆ ಕನ್ಯಾಮುಗೆ ಎಲ್ಲಿಲ್ಲದ ಸಂಭ್ರಮ!

ಏಳುಮಾಳಿಗೆಯ ಮೇಲೆ ಇಷ್ಟು ವರುಷವೂ ಜೊತೆಯಿಲ್ಲದೆ ಹೊರಗಿನ ಗಾಳಿ ಬೆಳಕಿಲ್ಲದೆ ಬೆಳೆದ ಬಾಲೆಗೆ ಅಕ್ಕನ ಅರಮನೆಯಿಂದ ಬಾ ಎಂದು ಬಂದ ಕರೆ- ಅವಳ ಕಾಲನ್ನು ನಿಂತಲ್ಲಿ ನಿಲ್ಲಗೊಡಲಿಲ್ಲ.

ಮೇಣೆಯಲ್ಲಿ ಬಾಲೆ ಕನ್ಯಾಮು, ಮುಂದೆ ಕುದುರೆಯಲ್ಲಿ ತಮ್ಮ ಅರಸುಮಗ ಅವರ ಹಿಂದೆ ಚಾಕರಿಯ ಜನರ ಹಿಂಡು. ದಾರಿ ಸಾಗುತಿದ್ದಂತೆ ಕನ್ಯಾಮು ಮೇಣೆಯಿಂದಲೇ ಪರದೆ ಸರಿಸಿ ನಿಸರ್ಗದ ಚೆಲುವನ್ನೆಲ್ಲ ಕಣ್ತುಂಬ ಹೀರಿದಳು ಹಕ್ಕಿ-ಪಕ್ಷಿಗಳ ಚಿಲಿಪಿಲಿ ಧನಿಯಲ್ಲಿ ಅವಳಿಗೆ ಸಂತಸವೇ ಸಂತಸ! ಅರಮನೆಯಲ್ಲಿಯ ನೀರಸ ಪರಿಸರವೆತ್ತ? ಈ ಬೀಸುತಿದ್ದ ಗಾಳಿ...... ಜನಜಂಗುಳಿಯಲ್ಲಿಯ ಮಾತು-ನಗುವಿನಲ್ಲಿ ಅವಳಿಗೆ ದಾರಿಯ ಆಯಾಸದ ನೆನಪೇ ಇರಲಿಲ್ಲ.

ಕುದುರೆ ನಾಡದಾರಿ ಬಿಟ್ಟು- ಕಾಡುದಾರಿ ಹಿಡಿಯಿತು. ಹಿಂದಿನಂತೆ ಜನರ ಮಾತು-ನಗು ಕಿವಿಗೆ ಬೀಳದಾಗಲು ಕನ್ಯಾಮು ಪರದೆ ಸರಿಸಿ ನೋಡಿದರೆ ಮುಗಿಲು ಮುಟ್ಟುವ ದೈತ್ಯ ಮರಗಳು... ಕತ್ತಲು ತುಂಬಿದ ದಾರಿ... ನಿರ್ಜನ ಪ್ರದೇಶ. ಭಯ ಅವಳಿ ಗುಂಟಾಯಿತು.

"ತಮ್ಮಾ...... ಇದೇನು ನಾಡದಾರಿ ಬಿಟ್ಟು- ನಾವು ಕಾಡುದಾರಿ ತಿಳಿಯದೆ ಬಂದುಬಿಟ್ಟಿರಬೇಕು. ಅಕ್ಕನ ಮೂಡಣದ ಅರಮನೆ ದಾರಿ ಇದಲ್ಲ... ಇದು ದಟ್ಟಡವಿ." ಅರಸುಮಗ ತಗ್ಗಿದ ತಲೆಯನ್ನು ಮೇಲಕ್ಕೆತ್ತದೆ ಮೆಲ್ಲನೆ ನುಡಿದ-

"ಅಕ್ಕಾ...... ನೀನು ಹಿಂದೆ ಹೋದಾಗ ಚಿಕ್ಕ ಹುಡುಗಿಯಾಗಿದ್ದೆಯಲ್ಲವೇ? ಆದರೆ ಈಗ ಕಣ್ಣು ಕೋರೈಸುವ ಸೌಂದರ್ಯದಲ್ಲಿದ್ದ ನಿನ್ನನ್ನು ರಾಜಮಾರ್ಗದಲ್ಲಿ ಹೇಗೆ ಕೊಂಡೊಯ್ಯಲಿ?"

ಬಾಲೆ ಕನ್ಯಾಮು-ಈ ಮಾತಿಗೆ ಮರುತ್ತರವೀಯದಾದಳು. ಅವಳಿಗೆ ಇನ್ನಿಷ್ಟು ಹಿಗ್ಗು! ತನ್ನ ಸೌಂದರ್ಯದ ಬಗ್ಗೆ ತಮ್ಮನಿಗೆ ಎಷ್ಟೊಂದು ಅಭಿಮಾನ!

ಆದರೂ ಈ ಕಾನನದ ಕತ್ತಲು! ಹುಳಹುಪ್ಪಡಿಗಳ ಜೀರ್ ಜೀರ್ ಕೂಗು! ಗಿಡಮರಗಳ ಚರಚರ ಸದ್ದು ಇನ್ನಷ್ಟು ಭಯ ಹುಟ್ಟಿಸಿದವು.

ಹೊತ್ತು ಏರಿದಂತೆ ಬಾಲೆ ಕನ್ಯಾಮು ಆಯಾಸಗೊಂಡಳು. ಅರಸುಮಗ ಕುದುರೆ ನಿಲ್ಲಿಸಿ, ಬೋವಿಗಳಿಗೆ ಮೇಣೆ ಕಳಗಿಳಿಸಲು ಆಜ್ಞೆ ಇತ್ತ. ವಿಶ್ರಾಂತಿಗೆಂದು ಚಿಕ್ಕದೊಂದು ಡೇರೆ ತಯಾರಾಯಿತು.

ಕರ್ಪೂರದ ಗೊಂಬೆಯಂತಿದ್ದ ಕನ್ಯಾಮು- ಒರಗಿಕೊಂಡಲ್ಲೇ ನಿದ್ದೆಹೋದಳು.

ಅರಸುಮಗ ತನ್ನೆದೆಯ ನೋವನ್ನು ಯಾರಲ್ಲೂ ತೋಡಿಕೊಳ್ಳಲಾರ. ರತಿಯಂತಿದ್ದ ಅಕ್ಕನ್ನ ಈ ಕಾಮಟೆ ಕಲೆಂಜಿಮಲೆ ಕಾನನದಲ್ಲಿ ಬಿಟ್ಟುಹೋಗಬೇಕಾದ ದುಃಖದ ಪ್ರಸಂಗಕ್ಕೆ ತನ್ನನ್ನೇ ಬಲಿ ತೆಗೆದುಕೊಳ್ಳುವ ಮನಸ್ಸಾಗಿದೆ. ಆದರೆ ಅರಮನೆಯಲ್ಲಿ ತಾಯಿಯ ನೆನಪು! ಲೋಕನಿಂದೆಯ ಭಯ! ಮನೆಯ ದೇವರಿಗೆ ಬಾಲೆ ಕನ್ಯಾಮುನ್ನ ರಕ್ಷಿಸಲು ಬೇಡಿಕೊಂಡು ಅರಸುಮಗ ತನ್ನ ಸಂಗಡಿಗರೊಂದಿಗೆ ಪಡುವಣದ ಅರಮನೆಗೆ ಹಿಂತಿರುಗಿಬಿಟ್ಟ ಅತಿ ದುಃಖದಿಂದ.

ಸ್ವಲ್ಪ ಸಮಯ ಕಳೆಯಿತು. ಬಾಲೆ ಕನ್ಯಾಮುಗೆ ಎಚ್ಚರವಾಯಿತು. ದಣಿದಿದ್ದ ಅವಳೀಗ ಮತ್ತೆ ಚೇತರಿಸಿಕೊಂಡಿದ್ದಳು. ಕಣ್ಣುಜ್ಜಿ ಮೆಲ್ಲನೆ ಕಣ್ಣುತೆರೆದಳು- ಅಲ್ಲಿ ಯಾರೂ ಇಲ್ಲ! ತಮ್ಮ ಕುದುರೆ ಅಲ್ಲಿಲ್ಲ. ಚಾಕರಿಯ ಜನರಿಲ್ಲ-ಅಲ್ಲಿದ್ದ ಡೇರೆ ಇಲ್ಲ... ತನ್ನ ಮೇಣೆ ಇಲ್ಲ!! ಒಂದು ನರಹುಳವಿಲ್ಲ!!

ಅಯ್ಯೋ ಇದೇನು? ಅಕ್ಕನ ಅರಮನೆಗೆ ಕೊಂಡ್ಯೊಯುವೆನೆಂದು ಈ ಕಾನನದಲ್ಲಿ ತನ್ನನ್ನ ಏಕಾಂಗಿಯಾಗಿ ಬಿಟ್ಟುಹೋದನೇ ನನ್ನ ತಮ್ಮ? ಭೂಮಿಗೂ ಭಾರವಾಗಿ ನಾನು ಇದ್ದೇನು ಪ್ರಯೋಜನ? ಈ ಜೀವ ಇನ್ನೇಕೆ ಬದುಕಬೇಕು? ಹೆತ್ತ ತಾಯಿಗೂ ಬೇಡವಾಗಿ ಒಡಹುಟ್ಟಿದ ತಮ್ಮನಿಗೂ ಭಾರವಾಗಿ ನಾನಿದ್ದ ಮೇಲೆ ನಾನಿನ್ನು ಈ ಲೋಕದಲ್ಲಿ ಇರುವುದು ಸರಿಯೇ?

ಬಾಲೆ ಕನ್ಯಾಮಗೆ ದುಃಖ ಒತ್ತರಿಸಿ ಬ... ಮನೆಯ ದೇವರನ್ನು ನೆನೆದಳು- "ನನ್ನ ... ಸಾಯಬೇಕು ಎಂದು ಸೆರಗು ಕುತ್ತಿಗೆಗೆ ಸುತ್ತಿದ...

ಬ್ರಹ್ಮದೇವರಿಗೆ ಬಾಲೆ ಕನ್ಯಾಮಣಿಯ ಸ್ಥಿತಿ ಕ... ಮರುಕ ಉಂಟಾಯಿತು. ಕಾನನದ ನಡುಮಧ್ಯೆ ಆ... ಹತ್ಯೆಗೆ ಸಿದ್ಧಳಾಗಿದ್ದ ಅವಳೆದುರು ಮುದಿಬ್ರಾಹ್ಮ... ನಾಗಿ ನಿಂತರು.

"ಮಗಳೇ ಇದೇನು ನೀನು ಮಾಡುತ್ತಿರುವುದು... ಇಷ್ಟೊಂದು ದುಃಖಕ್ಕೆ ಏನು ಕಾರಣ?"

ಎಲ್ಲವನ್ನೂ ತಿಳಿದ ದೇವರು ಏನೂ ತಿಳಿ... ದಂತೆ ಬಾಲೆಯನ್ನು ಕೇಳಿದರು.

ಕನ್ಯಾಮಗೆ ಕತ್ತಲಲ್ಲಿ ಬೆಳಕು ಕಂಡಂತಾಯಿತು...



ಬಾಲೆ ಕನ್ಯಾಮ ತನ್ನ ಈ ವರೆಗಿನ ಕಥೆಯನ್ನು ಚಾಚೂ ತಪ್ಪದೆ ಅಳುತ್ತ ಹೇಳಿದಳು.

ಬ್ರಹ್ಮ ಅವಳನ್ನು ಸಂತೈಸುತ್ತ:

"ನಿನ್ನ ತಾಯಿ-ತಮ್ಮನ ತಪ್ಪಿಲ್ಲ ಮಗು- ಬೆಳೆದು ನಿಂತ ನಿನ್ನನ್ನು ಅರಮನೆಯಲ್ಲಿ ಮದುವೆ ಇಲ್ಲದೆ ಇರಿಸಿಕೊಂಡರೆ ಜನಾಪವಾದದ ಭಯ ಅವರಿಗೆ. ಈ ಅಪವಾದ ತಪ್ಪಿಸಲು ನಿನ್ನ ತಾಯಿ-ನಿನ್ನಕ್ಕನ ಬಳಿಗೆ ಅಳುತ್ತ ಹೋಗಿ ಕೈಯೊಡ್ಡಿ ಕೇಳಿದರು- "ಮಗೂ... ನಿನ್ನರಸನ ಕೈಯಲ್ಲಿ ನನ್ನ ಮಗಳು ಬಾಲೆ ಕನ್ಯಾಮನ್ನ ಕೈ ಇರಿಸಿ, ಧಾರೆ ಎರೆದು ಮತ್ತೆ ನನ್ನ ಅರಮನೆಯಲ್ಲೇ ಬಾಲೆಯನ್ನ ಇರಿಸಿಕೊಳ್ಳುವೆ. ನಿನಗೆ ಸವತಿಯ ಭಯ ಬೇಡ." ಎಂದು ಬೇಡಿಕೊಂಡರು. ನಿನ್ನಕ್ಕ- ಅಮ್ಮ ದೂರದಿಂದಲೇ ಬರುತ್ತಿರುವುದನ್ನು ಕಂಡು ಚಿನ್ನದೊಡವೆ ಬೆಲೆಬಾಳುವ ಸೀರೆರವಿಕೆ ತೆಗೆದಿರಿಸಿ,

ಕತ್ತಲಕೋಣೆ ಸೇರಿ-ಅಳುತ್ತ 'ತನ್ನದೆಲ್ಲವೂ ಅಳಿದು ಹೋಗಿದೆ, ನಿನ್ನ ಅಳಿಯರಸು ಈ ಮನೆಯನ್ನೇ ಮರೆತಿದ್ದಾರೆ- ನೀನು ಇಲ್ಲಿಗೆ ಇನ್ನು ಬರಬೇಡವೆಂದು- ನಿನ್ನಮ್ಮನ್ನ ಬಂದಹಾಗೆ ಆಸರೆಗೆ ನೀರೂ ಕೊಡದೆ ಕಳುಹಿಸಿದ್ದಾಳೆ ನಿನ್ನಕ್ಕ... ಇರಲಿ- ನೀನು ಅಳುವ ಕಾರಣವಿಲ್ಲ ಬಾಲೆ, ಹೀಗೆನ್ನುತ್ತ ಅಜ್ಜ ತನ್ನ ಬರಿಗಾಲಿನಿಂದ ನೆಲದಲ್ಲಿಯ ಮೂರು ಕಲ್ಲುಗಳನ್ನು ಹೆಕ್ಕಿ ತೆಗೆದು ಬಾಲೆ ಕನ್ಯಾಪುವಿನ ಬಿಡಿಸಿದ ಅಂಗೈಯಲ್ಲಿ ಅದನ್ನರಿಸಿ-

"ಕನ್ಯಾಮು......ಮೊದಲ ಕಲ್ಲನ್ನೆತ್ತಿ- ಕಾಡು ಸರಿದು ನಾಡಾಗಲಿ-ಎಂದು ಎಸೆ.

"ಎರಡನೆಯ ಕಲ್ಲನ್ನೆತ್ತಿ- ಅರಮನೆ-ಸೇವಕ-ಸೇವಕಿಯರಿಂದ ತುಂಬಿಕೊಳ್ಳಲಿ ಎಂದು ಬಿಸಾಡು-

"ಮೂರನೆಯ ಕಲ್ಲನ್ನೆತ್ತಿ ಕಣ್ಮುಚ್ಚಿ- ನನ್ನ ಬಾಳ ಜೊತೆಗಾರ ಬರಲಿ ಎಂದು ನೆನೆಸಿ-ಎಸೆದು ಬಿಡು." ಇಷ್ಟು ಹೇಳಿ ಬಾಲೆ ಕನ್ಯಾಮು ಕಣ್ಮುಚ್ಚಿ ತೆರೆಯುತ್ತಿದ್ದಂತೆ ಬ್ರಾಹ್ಮಣ ಅಲ್ಲಿ ಮತ್ತೆ ಅವಳಿಗೆ ಕಾಣಲಿಲ್ಲ. ಅಂಗೈ ನಡುವೆ ಮೂರು ಕಲ್ಲುಗಳು ಮಾತ್ರ ಭದ್ರವಾಗಿದೆ.

ಬಾಲೆ ಕನ್ಯಾಮು ಕಣ್ಣೀರು ಒರಸಿಕೊಂಡಳು- ಅವಳಿಗೆ ತಾಯಿ-ತಮ್ಮನ ದುಃಖದ ಅರ್ಥವಾಯಿತು. ಅಕ್ಕನ ಮಾತ್ಸರ್ಯಕ್ಕೆ ನೊಂದುಕೊಂಡಳು-

ಅಂಗೈಯಲ್ಲಿದ್ದ ಒಂದು ಕಲ್ಲನ್ನೆತ್ತಿ ಅಜ್ಜ ಹೇಳಿದಂತೆ ಮನಸ್ಸಿನಲ್ಲಿ ನೆನಸಿ ಬಿಸುಟಿದಳು- ಮತ್ತೆ ಕಣ್ತೆರೆದಾಗ-

ಕಾಡು ಸರಿದು ನಾಡಾಗಿತ್ತು!!

ಎರಡನೆ ಕಲ್ಲನ್ನ ಕಣ್ಮುಚ್ಚಿ ಬಿಸಾಡಿದಳು- ಅವಳ ಕಣ್ಣುಗಳನ್ನೇ ಅವಳು ನಂಬದಾದಳು- ಪಡುವಣದ ಅರಮನೆಗೂ ಮಿಗಿಲಾದ ಅರಮನೆ ಅವಳೆದುರು ನಿಂತಿದೆ. ಸೇವಕ ಸೇವಕಿಯರಿಂದ ತುಂಬಿ ತುಳುಕಿದ ಅರಮನೆ ಏನು ವೈಭವದಲ್ಲಿದೆ!

ಕೊನೆಯ ಕಲ್ಲನ್ನೆತ್ತಿ ಮತ್ತೆ ಬಿಸಾಡಿದಳು-

ಕಣ್ಮುಚ್ಚಿದ ಅವಳ ಕೈಯನ್ನು ಭದ್ರವಾಗಿ ಹಿಡಿದಾಗ ಬಾಲೆ ಕಣ್ಣುಬಿಟ್ಟಳು. ಎದುರಿಗೆ ಅವಳ ಕನಸಿನ ಅರಸುಮಗ-ಕಣ್ಣುತುಂಬುವ ಚೆಲುವಿನ ರೂಪಿನಲ್ಲಿ ನಿಂತು ನಗುತ್ತಿದ್ದಾನೆ. ಅವಳನ್ನು ತೋಳ ತೆಕ್ಕೆಯಲ್ಲಿ ಸೆರೆಹಿಡಿದು-ಅರಮನೆಯೊಳಕ್ಕೆ ಕರೆದೊಯ್ದ ಅರಸುಮಗ.

ಬಾಲೆ ಕನ್ಯಾಮುಗೆ ಇನ್ನು ದುಃಖವಿಲ್ಲ...... ಅವಳಿಗೆ ಏನು ಬೇಕೋ ಎಲ್ಲವೂ ಇದೆ. ಅರಮನೆಯ ಹಿರಿಯನನ್ನು ಕರೆದು, ಮೇಣೆ ಸಿದ್ಧಪಡಿಸಿ- ಪಡುವಣದ ಅರಮನೆಗೆ ಹೋಗಿ "ನನ್ನ ತಾಯಿಯನ್ನ ಇಲ್ಲಿ ಕರೆತರಬೇಕು-ನನ್ನ ತಮ್ಮನಿಗೆ ತಿಳಿಸಬೇಕು- ಅಕ್ಕ ಬಾಲೆ ಕನ್ಯಾಮು ಹೇಳಿದ್ದಾರೆ ಈ ಮೇಣೆಯಲ್ಲಿ ಅಮ್ಮನನ್ನು ಕುಳ್ಳಿರಿಸಿಕೊಂಡು-ನೀವು ಕುದುರೆಯಲ್ಲಿ ಬರಬೇಕೆಂದು" ಅರಸಿಯ ಅಣತಿಯಂತೆ ಹಿರಿಯ ಮೇಣೆ-ಬೆಳ್ಳಿ ಕುದುರೆಯೊಂದಿಗೆ ಪಡುವಣದ ಅರಮನೆಗೆ ಹೊರಟುಹೋದ.

ಇತ್ತ ಅಕ್ಕನ ಐಶ್ವರ್ಯ ಅಡಿಮೇಲಾಯಿತು. ಹೆತ್ತ ತಾಯಿ, ಒಡಹುಟ್ಟಿದ ತಂಗಿಗೆ ಎರಡು ಬಗೆದ ಅವಳಿಗೆ ಬ್ರಹ್ಮ ಬುದ್ಧಿ ಕಲಿಸಿದ. ಶತ್ರುಗಳು ಬಂದು ಅರಮನೆ-ರಾಜ್ಯ ಕಸಿದುಕೊಂಡರು. ಎಲ್ಲವನ್ನೂ ಕಳೆದುಕೊಂಡ ಅರಸ ತನ್ನ ಪಡುವಣದ ಅರಮನೆ ಕಳೆದುಕೊಂಡು ಅರಸಿ-ಮಕ್ಕಳೊಂದಿಗೆ ರಾಜ್ಯ ಬಿಟ್ಟು ಹೊರಟ. ಹೊಟ್ಟೆಯ ಚಿಂತೆಗೆ ಬಲಿಯಾದ. ಅವನು ಊರಲ್ಲಿ ತಲೆ ಎತ್ತಿ ನಿಲ್ಲಲಾರದೆ ಕಾಡದಾರಿ ಹಿಡಿದ. ಹೆಂಡತಿ ಮಕ್ಕಳೂ ಕಲ್ಲುಮುಳ್ಳು ತುಳಿಯಬೇಕಾಯಿತು.

ಕಾಮಟೆ ಕಲೆಂಜಮಲೆ ಕಾಡಿನ ಬದಿಯಲ್ಲಿ ಒಂದು ಗುಡಿಸಲು ಹಾಕಿಕೊಂಡು-ಉದರ ಪೋಷಣೆಗಾಗಿ ಕಟ್ಟಿಗೆ ಕಡಿದು ಮಾರಿ ಬಂದ ಹಣದಿಂದ ಜೀವನ ಸಾಗಿಸತೊಡಗಿದರು, ಅವರು.

ಒಂದು ದಿನ ಬಾಲೆ ಕನ್ಯಾಪು ಏಳುಪ್ಪರಿಗೆಯ ಮೇಲೆ ನಿಂತು ದೂರದಲ್ಲಿ ದೃಷ್ಟಿ ನೆಟ್ಟಾಗ-ಅವಳಕ್ಕನ ರೂಪು ಕಣ್ಣಿಗೆ ಬಿತ್ತು. ತನ್ನ ಸೇವಕರನ್ನು ಕರೆದು ಹೊರಟಿದ್ದ ಆ ಹೆಣ್ಣನ್ನು ತೋರಿಸಿ ಅವರಾರು ? ಎಲ್ಲಿಯವರು? ಇಲ್ಲಿ ಏನು ಮಾಡುತಿದ್ದಾರೆ? ಎಲ್ಲವನ್ನೂ ತಿಳಿದುಕೊಂಡು, ತನಗೆ ತಿಳಿಸಲು ಆಜ್ಞೆ ಇತ್ತಳು. ಮತ್ತೆ ನಾಲ್ಕು ದಿನ ಕಳೆಯಿತು. ಕನ್ಯಾಪುಗೆ ಹಿಗ್ಗೇ ಹಿಗ್ಗು, ಅವಳನ್ನು ಅಂಗೈಯಲ್ಲಿ ಹೂವಿನಂತೆ ಜತನದಿಂದ ನೋಡಿ ಬಂಗಾರಿನಂತೆ ಎದೆಗವಚಿಕೊಳ್ಳುವ ಅರಸ ಅವಳ ಆಸೆಯಂತೆ ಆ ರಾಜ್ಯದ ಜನಕ್ಕೆಲ್ಲ ಭಾರಿ ಔತಣದ ಆಮಂತ್ರಣ ಕೊಡಿಸಿದ್ದ.

ಅರಮನೆಯ ಸುತ್ತು ಮುತ್ತು ಗೌಜೇ ಗೌಜು- ಔತಣದೂಟ ಭಾರಿ ಸಂಭ್ರಮದಲ್ಲಿ ನಡೆದಿತ್ತು.

ಕನ್ಯಾಪುವಿನ, ಅಕ್ಕ-ಭಾವ-ಮಕ್ಕಳೂ ಊಟ- ಮಾಡುತಿದ್ದುದನ್ನು ದೂರದಲ್ಲೇ ನಿಂತು ನೋಡುತಿದ್ದಳು.

ಬಗೆ ಬಗೆಯ ಭಕ್ಷಗಳು ಎಲೆಯಲ್ಲಿ ರಾಶಿ ರಾಶಿಯಾಗಿ ಬಿದ್ದಿದ್ದವು. ಊಟ ಮಾಡುತ್ತಿದ್ದ ಅಕ್ಕ ಕಣ್ಣೀರು ಒರಸಿಕೊಳ್ಳುತ್ತ, ಭಕ್ಷ ಬಾಯಿಗಿಟ್ಟಾಗ-ತಾನು ಇಂಥ ಊಟ ತನ್ನರಮನೆ ಬಿಟ್ಟಮೇಲೆ ಉಂಡದ್ದು ಇದೇ ಮೊದಲು ಎಂದು ನೆನಪು!

ತಾಂಬೂಲ ಎಲ್ಲರಿಗೂ ಕೊಟ್ಟಾಯಿತು. ಅಕ್ಕನ ಬಳಿ ತಾನೇ ಸ್ವತಃ ಬಂದು ನಿಂತಳು ಬಾಲೆ!

ಅಕ್ಕನ ಕೈಗೆ ಚಿಗುರೆಲೆಯ ತಾಂಬೂಲವಿತ್ತು-

"ನನ್ನ ಗುರುತಾಗಲಿಲ್ಲವೇ ಅಕ್ಕಾ? ಬಾಲೆ ಕನ್ಯಾಪುವನ್ನ ಮರೆತುಬಿಟ್ಟೆಯಾ?" ಈ ಧ್ವನಿಗೆ ಅಕ್ಕ ಬೆಚ್ಚಿ ಬಿದ್ದು ಕತ್ತೆತ್ತಿ ನೋಡಿದಳು. ಆ ಮುಖ ನೋಡುತ್ತಲೇ ಕಂಬನಿಯ ಕಟ್ಟೆಯೊಡೆಯಿತು. ಭಾವ ತಗ್ಗಿದ ತಲೆ ಎತ್ತಲಾರ! ಅಂದು ತಲೆ ಮರೆಸಿ ಕೋಣೆ ಸೇರಿದ್ದ, ಮಡದಿಯ ಮಾತುಕೇಳಿ!

ಆದರೆ ಮಕ್ಕಳಿಬ್ಬರೂ ಎದ್ದು ಓಡಿ ಬಂದು ಚಿಕ್ಕಮ್ಮನ ಕಾಲುಗಳಿಗೆ ತೊಡಕಿಕೊಂಡು ಅಳತೊಡಗಿದವು.

ಬಾಲೆ ಕನ್ಯಾಪು ಕಣ್ಣೀರು ಒರಸಿಕೊಂಡು- ಮಕ್ಕಳಿಬ್ಬರನ್ನು ಬರಸೆಳದು ಅಪ್ಪಿಕೊಂಡಳು.

"ಅಕ್ಕಾ... ಅಮ್ಮ ಬಂದಾಗ ಮನೆಯಲ್ಲಿದ್ದ ಸೌಭಾಗ್ಯಲಕ್ಷ್ಮಿಯನ್ನು ಇಲ್ಲವೆಂದು ಸುಳ್ಳು ಹೇಳಿದೆ. ದಣಿದು ಬಂದ ಅವರಿಗೆ ಆಸರಿಗೆ ಹಾಲು ಕೊಡಲಿಲ್ಲ., ಕಾಲುಗಳಿಗೆ ನೀರು ತರಲಿಲ್ಲ. ಬಂದಹಾಗೆ ಹಿಂದಕ್ಕಟ್ಟಿದೆ. ಅವರೆದೆಯಲ್ಲಿದ್ದ ಬೆಂಕಿಗೆ ತಂಪು ಕಾಣಲು ನಿನ್ನಲ್ಲಿಗೆ ಬಂದಿದ್ದರು. ಆದರೆ ನೀನು ಉರಿಯುವ ಅವರೆದೆಗೆ ಇನ್ನಷ್ಟು ಬೆಂಕಿಯ ಕೆನ್ನಾಲಗೆಯನ್ನು ತಿವಿದು ಹೊರಗೆ ಕಳುಹಿಸಿಬಿಟ್ಟೆ- ಇನ್ನೆಂದೂ ಇಲ್ಲಿಗೆ ಬರಬೇಡವೆಂದು, ಈಗ ಆದದ್ದಾಯಿತು-ದೇವರೇ ನನಗೆ ಎಲ್ಲವನ್ನೂ ಕೊಟ್ಟ. ಈಗ ನಿಮಗೇನು ಬೇಕೋ ಎಲ್ಲವನ್ನೂ ಇಲ್ಲಿಂದ ತೆಗೆದುಕೊ. ದೂರದಲ್ಲಿ ಎಲ್ಲಿಯಾದರೂ ಸುಖವಾಗಿ ಭಾವಯ್ಯನೊಂದಿಗೆ ಇದ್ದುಬಿಡು. ಈ ಮಕ್ಕಳು ಮಾತ್ರ ನನ್ನೊಡನೆ ಇರಲಿ, ಮುತ್ತಿನ ಕುರುಲೆಯಂತಿದ್ದ ಈ ಮಕ್ಕಳಿಗೆ ಇನ್ನಾವ ಕಷ್ಟವೂ ಬಾರದಿರಲಿ.

ಅಕ್ಕ-ಭಾವಯ್ಯನಿಗೆ ಬೇಕುಬೇಕಾದ್ದಾದನ್ನೆಲ್ಲ ಕೊಟ್ಟು ಕಳುಹಿಸಿ ಆ ಎರಡು ಮಕ್ಕಳೊಂದಿಗೆ ಬಾಲೆ ಕನ್ಯಾಪು ತನ್ನ ಅರಸನೊಂದಿಗೆ ಬಹು ಸಂಭ್ರಮದಿಂದ ತನ್ನರಮನೆಯಲ್ಲಿ ಇದ್ದುಬಿಟ್ಟಳು.





ಆರಿದ್ರಾ ಮಳೆ ಜಡಿದು ಸುರಿಯುತ್ತಿದೆ. ಗುಡ್ಡೆಗಳಲ್ಲೂ ರಸ್ತೆಗಳಲ್ಲೂ ತೋಟಗಳಲ್ಲೂ ನೀರು ಹರಿದು ಹುಗ್ಗುತ್ತಿದೆ. ಆ ಶಬ್ದ ಕಿವಿಗೆ ಬಡಿಯುತ್ತಿದೆ. ಅಬ್ಬಾ... ಗಟ್ಟಿಹಾಳೆಗಳಿಂದ ಮಾಡಿದ ಈ ಗೊರಬು, ಇದರ ಮೇಲೆ ಯಾರು ಉಪಯೋಗಿಸಿದ್ದರೂ, ಉಪಯೋಗಿಸಿಕೊಂಡ ಕಂಬಳಿ ಕೊಪ್ಪೆ ಎಲ್ಲಾ ಈ ಜಡಿಮಳೆಯಿಂದ ಒದ್ದೆಯಾಗಿ ಮೈ ಛಳಿಯಾಗುತ್ತಿದೆ. ಗಾಳಿ ಹೊಡೆತಕ್ಕಿಂತ ಆಕಾಶ ಒಡೆದು ಸುರಿಯುತ್ತಿರುವಂತೆ ಭಾಸವಾಗುವ ಈ ದಪ್ಪ ಮಳೆಹನಿಗಳು ಎಷ್ಟೊಂದು ಮೈಗೆ, ಮನಸ್ಸಿಗೆ ಛಳಿ ಹುಟ್ಟಿಸುತ್ತಿವೆ. ಒಳಕಟ್ಟೆ ಗುಡ್ಡದಲ್ಲಿದ್ದ ತುಂಬಾ ಚಿಗುರಿಕೊಂಡು ಹೆಮ್ಮರವಾಗುವ ತಾಕತ್ತು ತನಗಿದೆ ಎಂತಿದ್ದ ಮತ್ತೀಮರ ಮೂರ್ನಿ ಗಟ್ಟದ ಆರು ಕುಸ್ಟೆ ಬೋಳಿಸಿದ್ದ. ಅವುಗಳನ್ನು ಹೊರೆ ಮಾಡಿ ಕಟ್ಟುವಾಗ ಮಳೆಗೆ ಬೇಸತ್ತು, ಅವನು ಗೋಣಾಗಿಕೊಂಡ-ನೊಬ್ಬನ ಹೊರೆ ಕಟ್ಟಿ ಅದನ್ನು ಬೆನ್ನಮೇಲೆ ಹೋತು ಬೀಳಿಸಿಕೊಂಡಾಗ "ಅಯ್ಯೋ ಸಾಯೋಕೆ ಬಹಳ ಹೊತ್ತಿಲ್ಲ. ಅಪ್ಪಯ್ಯ" ಅಂದುಕೊಂಡು ಕೊಬ್ಬರಿ ಎಣ್ಣೆ ಉದಿಸಿದ ಎಕ್ಕಡ ಕಾಲಿಗೆ ಹಾಕಿ ಹೊರಟ ಕುಸ್ಟ ಮುಖದ

ಮೇಲೆ ಮಳೆಹನಿಗಳು ಬಿದ್ದಾಗ ಒರೆಸಿಕೊಳ್ಳಲು ಈಗ ತನಗೆ ಎರಡು ಕೈ ಅಸಾಧ್ಯ. 'ಇಂಥ ಕಷ್ಟ ಯಾರು ಯಾರಿಗೂ ಬೇಡ. ಬಾಳೆ ಬರೆ ಚಂಡಿಯಮ್ಮ' ಕುಸ್ಟ-ಗೆ ಅಳುವಂತಾಯಿತು. ಅಷ್ಟೊಂದು ಧಾರಾಕಾರವಾಗಿ ಮಳೆ ಸುರಿಯುತ್ತಿದ್ದರೂ ಗಾಳಿ ಹೊಡೆತ ಭೀಕರವಾಗಿದ್ದರೂ ನೀರಿನಲ್ಲಿ ತುಂಬಿಕೊಂಡ ಗುದ್ದ ಇಳಿದು ಹೋಗುತ್ತಿದ್ದರೂ ಹಾಕಿಕೊಂಡ ಕಂಬಳಿಕುಪ್ಪೆ, ಹಾಳೆಯ ಗೊರಬಿನಿಂದ, ಹೊತ್ತ ಭಾರೀ ಹೊರೆಸೊಪ್ಪಿನಿಂದ ಮೈಯಲ್ಲಿ ಬೆವರಿಳಿದು ಅಸಾಧ್ಯ ಸೆಖೆಯಾಗಿ ದೊಡ್ಡದಾಗಿ ದಮ್ಮು ಬಿಡಲಾರಂಭಿಸಿದನು.

ಈಗ ಒಂದು ವಾರದಿಂದ ಈ ಆರಿದ್ರ ಜಡಿಮಳೆ ಸುರಿಯುತ್ತಿತ್ತು. ಅದರ ಜೊತೆಗೆ ಸೊಪ್ಪು, ಕಡ್ಡಿ ಕೊಟ್ಟಿಗೆಗೆ ಹಾಸುವ ಕೆಲಸ ಪ್ರಾರಂಭವಾಗಿತ್ತು.

ಕೊಡಸೆ ಎಳೆಪ್ರಾಯದ ವಿಧವೆ. ಆಳುಮಗ ಕುಸ್ಟ
ನೊಂದಿಗೆ ಅವಳ ಸಲುಗೆ, ತಾಯಿ ನೇತ್ರಾವತಿ,
ತಂದೆ ಮರಿಯಯ್ಯನಿಗೆ ಕೊರಗುಂಟು
ಮಾಡಿತು. ಆದರೆ ಯಜಮಾನನ ಸಾಲ
ತೀರಿಸಿದ ಕುಸ್ಟನ ಋಣಸಂಬಂಧ
ನಿರ್ವ್ಯಾಜವಾದುದಾದಾಗ ಅವರು
ಸಮಾಧಾನದ ಉಸಿರು ಗರೆದರು.

# ಸಂಬಂಧ

ಶ್ರೀನಿವಾಸ್ ಉಡುಪ

ಬೇಸಿಗೆಯಲ್ಲಿ ಇದೇ ಈ ಒಳಕಟ್ಟೆಗುಡ್ಡದಲ್ಲಿ ಕಟ್ಟಿಗೆ ಕಡಿವಾಗ ಕೊಡಸೆ ಹೊಳೆಯಿಂದ ಬೀಸುವ ತಂಗಾಳಿ ಹಿತವೆನ್ನಿಸುತ್ತಿತ್ತು. ಈಗ ಕೊಡಸೆ ಹೊಳೆ ನೋಡಿದರೆ ಭಯವಾಗುತ್ತದೆ. ಕೆಂಪನೆ ರಾಡಿನೀರು ಇಡೀ ಹತ್ತೇಳು ಗ್ರಾಮಗಳನ್ನು ನುಂಗಿ ದೊಡ್ಡ ಕಡಲಂತೆ ಕಾಣಿಸುತ್ತಿತ್ತು. 'ಆನೆಬೈಲಲ್ಲಿ ಸರ್ಕಾರಿ ಬೆಳಕು ತಯಾರಿ ಮಾಡದಿದ್ದರೆ ಶರಾವತಿಯಿಂದ ಸರ್ಕಾರಿ ದೀಪಗಳು ಈ ನಮೂನೆ ಉರಿಯುತ್ತಿರದಿದ್ದರೆ ಇಂತ ಆರಿದ್ರಾ ಮಳೆಯಲ್ಲೂ ಸಲೀಸಾಗಿ ಕೊಡಸೆ ಹೊಳೆ ದಾಟುತ್ತಿದ್ದೆ. ಸಾಗರಪೇಟೆಗೆ ಹೋಗಿ ಪಸನಬ್ಯಾರಿಗಳ ಹೋಟ್ಲಲ್ಲಿ ಒಂದಿಷ್ಟು ಬೇಯಿಸಿದ ಮಾಂಸ ತಿನ್ನುತ್ತಿದ್ದೆ.' ಕುಸ್ಟ ಸೊಪ್ಪು ಹೊತ್ತು ಕೊಡಸೆ ಗ್ರಾಮಕ್ಕೆ ಇಳಿಯುತ್ತಾ ಹೇಳಿಕೊಂಡ.

'ಈ ಅಮಾಸೆ ವರೆಗೂ ಅಯ್ಯನ ಮಾತಿನ ಪ್ರಕಾರ ಕೊಟ್ಟಿಗೆಗೆ ಸೊಪ್ಪು ಹಾಕಲೇಬೇಕು. ಸೊಪ್ಪು ಕಡಿದು ಹೊರುವ ವರೆಗಾದರೂ ಮಳೆ ನಿಂತಿದ್ದರೆ ಎಷ್ಟು ಸಲೀಸಾಗಿ ಕೆಲಸ ಮಾಡಬಹುದಿತ್ತು. ಸ್ವಲ್ಪ ಮಳೆ ಕಡಿಮೆ ಮಾಡು ಭೂತಪ್ಪ.' ಕುಸ್ಟ ಆ ಹೊರೆ ಹೊತ್ತ ಕ್ರಮದಲ್ಲೇ ಊರ ಮುಂದೆ ಇದ್ದ ಭೂತರಾಯನ ಮರಕ್ಕೆ ಕಾಲಿನಿಂದ ಎಕ್ಕಡ ಕಳಚಿ ಮನಸಲ್ಲೇ ಬೇಡಿಕೊಂಡ.

'ಬೆಳಗ್ಗೆಯಿಂದ ಇಷ್ಟೊತ್ತಿಗೆ ಇನ್ನೂ ಒಂದು ಹೊರೆ ಸೊಪ್ಪು ತಂದಿಲ್ಲವಲ್ಲ. ಇವತ್ತು ಏನಾಗಿದೆ ತನಗೆ? ಕೊಡಸೆ ಅಮ್ಮಾವರಿಗೆ ಮರಗೆಸದ ಎಲೆಗಳನ್ನು ತಂದು ಕೊಡಬೇಕು. ಅವರಿಗೆ ಮರಗೆಸುವಿನ ಎಲೆಗಳ ಪತ್ರೊಡೆ ಮಾಡೋದು, ರಾಶಿ ರಾಶಿ ಎಲ್ಲರಿಗೂ ಬಡಿಸಿ ತಾವು ತಿನ್ನೋದು ಭಾರೀ ಇಷ್ಟ. ಒಂದು ತಿಂಗಳಿಂದ ಮರಗೆಸುವಿಗಾಗಿ ನನ್ನಲ್ಲಿ ಹೇಳುತ್ತಿದ್ದಾರೆ. ನಾನಿನ್ನೂ ತಂದು ಕೊಡಲಿಲ್ಲ. ಇಂದ್ರೋಡಿ ಕಾಡಿನಲ್ಲಿ ಭಾರೀ ಹಲಸಿನ ಮರ ಇದೆ. ಅದರ ಪಕ್ಕದ ಮರದಲ್ಲಿ ಬೇಕಷ್ಟು ಮರಗೆಸು ಚಿಗುರಿದೆ. ಕಳೆದ ವಾರ ಜೇನು ಹುಡುಕಲು ಹೋದಾಗ ನೋಡಿ ಬಂದಿದ್ದೇನೆ. ಈ ದಿನ ಕೊಟ್ಟಿಗೆಗೆ ಸೊಪ್ಪು ಪೂರೈಸಿ ದೋಣಿಯಲ್ಲಿ ಕೊಡಸೆ ಹೊಳೆ ದಾಟಿ ಇಂದ್ರೋಡಿ ಕಾಡಿಗೆ ಹೋಗಿ, ಆ ಮರಗೆಸುವಿನ ಎಳೆಸೊಪ್ಪುಗಳನ್ನು ತರಲೇಬೇಕು. ಕುಸ್ಟ ಹೇಳಿಕೊಳ್ಳುತ್ತಾ, ಕೊಡಸೆ ಊರಿನ ಗಾಡಿರಸ್ತೆಯಲ್ಲಿ ನಡೆದೇ ಬರುತ್ತಿದ್ದವನು ಇದ್ದಕ್ಕಿದ್ದ ಹಾಗೆ ನಿಂತ.

ಕೊಡಸೆ ಊರ ಮುಂದಿನ ಸಣ್ಣಹಳ್ಳ. ಅದು ಮಳೆಗಾಲದಲ್ಲಿ ಹಳ್ಳ. ಬೇಸಗೆಯಲ್ಲಿ ನೀರಿನ ಪಸೆಯೇ ಅದರಲ್ಲಿ ಗುರ್ತಿಸಲಾಗುತ್ತಿರಲಿಲ್ಲ. ಕುಸ್ಟ ಮನೆಯಿಂದ ಬರುವಾಗ ಕಾಲುಗಂಟಿನ ವರೆಗೆ ನೀರಿತ್ತು. ಅವನು ಲೀಲಾಜಾಲವಾಗಿ ದಾಟಿ ಬಂದಿದ್ದ. ಸೊಪ್ಪು ಕಡಿದು, ಹೊರೆ ಕಟ್ಟಿ ಹೊತ್ತು ಬರುವಾಗ ಜಡಿಮಳೆಯಿಂದ ಹಳ್ಳ ಹೊಳೆಯಾಗಿತ್ತು. ಹೇಗೆ ದಾಟಬೇಕು? ಸ್ವಲ್ಪ ಹೊತ್ತು ಕುಸ್ಟ ಹಳ್ಳದ ಬುಡದಲ್ಲಿ ನಿಂತು ಯೋಚಿಸಿದ. ಅವನ ಹುಟ್ಟೂರಾದ ಬಸರೂರಿನ ಕಲಕುಟಿಗ ದೇವರನ್ನು ನೆನೆಯುತ್ತಾ ಹಳ್ಳ ಇಳಿದು ಈ ಕಡೆಗೆ ಬಂದಾಗ ಅವನ ಎದೆ ವರೆಗೆ ತೊಯ್ದು, ಭಾರಿ ಹೆದರಿಕೆಯಾಗುವಷ್ಟು ಕುಸ್ಟ ಕಂಗಾಲಾದ.

'ಕೊಡಸೆ ಅಮ್ಮಾವರಿಗೆ ಈಗ ಪ್ರಾಯ ಏನಿದ್ದರೂ ಇಪ್ಪತ್ತೆರಡು, ವರ್ಷ ಇರಬಹುದು. ಎಷ್ಟೊಂದು ಸಾಪಾಗಿದ್ದಾರೆ; ಬೆಳ್ಳಿಪಟ್ಟೆಯ ಬಣ್ಣದ ಮೈ. ಅವರನ್ನು ನೋಡಿದರೆ ಇನ್ನಷ್ಟು ಹೊತ್ತು ಪಸಂದಾಗಿ ಕಾಣೋಣ ಅನ್ನಿಸುತ್ತೆ. ಅವರು ನಿಜವಾಗಿಯೂ ಸಾಪಾಗಿದ್ದಾರೆ. ಇಂತಹ ಅಮ್ಮನಿಗೆ ಮದುವೆಯಾಗಿ ಒಂದೇ ವರ್ಷದಲ್ಲಿ ಗಂಡ ಅಡಿಕೆಮರದಿಂದ ಕೊನೆಕೊಯ್ಯುವಾಗ ಮರಮುರಿದು ಬಿದ್ದು ಸಾಯಬೇಕೇ? ಅಬ್ಬಾ ಆ ದಿನ ನೆನೆಸಿಕೊಂಡರೆ ಕರುಳುಬಾಯಿಗೆ ಬರುತ್ತದೆ. ಅವತ್ತಿನಿಂದ ಈ ಅಮ್ಮ ಖುಷಿಯಾಗಿರುತ್ತಿದ್ದವರು ಅಳೋಕೆ ಶುರುಮಾಡಿಬಿಟ್ಟರಲ್ಲ. ಬೆಳೆಯುವ ಪ್ರಾಯದಲ್ಲಿ ಕೊಡಸೆ ಅಮ್ಮಾವರ ಕಮ್ಮಬಡೆ, ಇಡೀ ಕಲೆ ದೋಚಿಸಿ ಬಿಡಬೇಕೆ? ಕೈಬಳೆ, ಕುತ್ತಿಗೆ ನಗ, ಮೂಗು-ಕಿವಿಗಳ ನಗಗಳನ್ನು ಪೂರ್ತಿ ಕಳಚಿಬಿಡಬೇಕೆ? ಕೆಂಪು ಸೀರೆ ಉಡಿಸಿ ಸಾಪಾಗಿದ್ದ ಕೊಡಸೆ ಅಮ್ಮಾವರನ್ನು ವಿಕಾರಮಾಡಿ ಬಿಡಬೇಕೆ? ಗಂಡ ಸತ್ತುಹೋದರೆ ...... ಈ ಎಳೇ ಪ್ರಾಯದಲ್ಲಿ ಕೊಡಸೆ ಅಮ್ಮಾವರ ಈ ವಿರೂಪ ನೋಡೋಕೆ ಆಗೋಲ್ಲ. ಅಯ್ಯನಿಗೂ ಬುದ್ಧಿ ಬೇಡವೆ? ಕೊಡಸೆ ಊರವರ ಹೆದರಿಕೆಗಾಗಿ, ಪುರೋಹಿತ ಭಟ್ರು ದಿಕ್ಕಳ ಹೇಳಿಕೆಗಾಗಿ, ತಾವೇ ಬೆಳಸಿ ಖುಷಿಯಾಗಿ ಕಿರುಗುಳಿಗೆ ಅಯ್ಯನ ಜೊತೆ ಮದುವೆ ಮಾಡಿಕೊಟ್ಟ 'ಕೊಡಸೆ ಅಮ್ಮಾವರನ್ನು' ಈ ಜನರು ಬೋಳಿ ಮಾಡೋದೆ? ಆ ದಿನ ನೆನಸಿದರೆ ಎಲ್ಲರಿಗೂ ಸೊಂಟದಲ್ಲಿದ್ದ ಕತ್ತಿಯಿಂದ ಹೊಡೆದುಬಿಡೋಣ ಅನ್ನಿಸಿತ್ತು. ... ಆದರೆ... ನಾನು ಅಯ್ಯನ ಮನೆಯ ಖಾಯಂ ಆಳು. ಅವರನ್ನು ಎದುರಿಸೋದು ನನ್ನಿಂದ ಸಾಧ್ಯವೇ ? ಬಸರೂರಲ್ಲಿ ಎಷ್ಟೋ ಕಡೆ ಹೀಗೆ ಬಿರಾಮಣರಲ್ಲಿ ಗಂಡ ಸಾಯೋಲ್ಲ? ಆದರೆ ಆ ಹೆಂಗಸರೂ ತಲೆಬೋಳಿ ಮಾಡು, ನಗ ಕಳಚೋದು, ಈ ರೀತಿ ಕೆಂಪುಸೀರೆ ಉಡೋದು. ಇಷ್ಟು ಚಿಕ್ಕಪ್ರಾಯದ ಹೆಣ್ಣಿಗೆ ಮಾಡೋದು ತಾನು ಕಂಡೇ ಇಲ್ಲ.

ಮೇಲಿನ ಮನೆ ಕೊಡಸೆ ಅಮ್ಮನವರ ವಯಸ್ಸಿನ ಕಾಮಮ್ಮ, ತೋಟದ ಮನೆ ತೇಜಮ್ಮ, ಎಷ್ಟೊಂದು ಖುಷಿಯಾಗಿದ್ದಾರೆ. ಸಂಕ್ರಾಂತಿಗೆ ಅವರು ಗಂಡನ ಜೊತೆಗೆ ಮಕ್ಕಳನ್ನು ಹೊತ್ತು ಬಂದಾಗ ಎಷ್ಟೊಂದು ಉಲ್ಲಾಸರಾಗಿರುತ್ತಾರೆ. ಆದರೆ ಕೊಡಸೆ ಅಮ್ಮಾವರು ಅವರ ಎದುರಿಗೆ ಸುಳಿಯೋಲ್ಲ. ಉಪ್ಪರಿಗೆಯ ಕತ್ತಲೆ ಕೋಣೆಯಲ್ಲಿ ಮಾವಿನಮಿಡಿ ಉಪ್ಪಿನಕಾಯಿ ಭಾಲಿ ತಿರುಸುತ್ತಾ ವಾಟೆ ಹುಳಿಯನ್ನು ಒಣಗಿಸುತ್ತಾ ಮೌನವಾ ಕೂತುಬಿಡ್ತಾರೆ.

ಪೈಸೆರೆಪ ಕೂಡಲೇ ಕೊಡಸೆ ಅಮ್ಮಾವರಿಗೆ ಅಯ್ಯ ಅವಸರ ಮಾಡಿ ಮದುವೆ ಮಾಡದಿದ್ದಿದ್ದರೆ

ಈಗ ಈ ಅಮ್ಮ ಗಂಡನ ಜೊತೆಗೆ, ಮಗುವಿನ ಜೊತೆಗೆ ಖುಷಿಪಡುತ್ತಿದ್ದರೋ ಏನೋ!

ಮೂರೊತ್ತೂ ಗಂಡ ಸತ್ತಾಗ ಮಂಕಾಗಿ ದೆವ್ವ ಬಡಿದವರಂತೆ ಕೊಡಸೆ ಅಮ್ಮ ಕುಳಿತು ಮರ್ಕತಾ ಇದ್ದರಲ್ಲ... ಆಗ ಅಯ್ಯ, ಅಮ್ಮ, ಮೇಲುಮನೆ ಉಪಾಧ್ಯಾಯರು, ತೋಟದಮನೆ ಮಂಜರು ಮಾಡಿದ ಸಮಾಧಾನವೆಷ್ಟು, ತೋಟದ ಹಳ್ಳದಲ್ಲಿರುವ ಕಲ್ಲಿನಲ್ಲಿ ಕತ್ತಿ ಮಸಿಯುತ್ತಾ ತಾನು ಕೂಡ ಕೊಡಸೇ ಅಮ್ಮಾವರ ಜೊತೆಯಲ್ಲಿ ಎಷ್ಟು ಅತ್ತಿಲ್ಲ ಏನು ಕತೆ.'

ಕುಸ್ಟ ಭಾರವಾದ ಸೊಪ್ಪಿನಹೊರೆ ಕೊಟ್ಟಿಗೆ ಬಾಗಿಲಲ್ಲಿ ಹಾಕಿ, ಚಾವಡಿಯ ಕೆಳಗೆ ಮೆಟ್ಟುಬಿಟ್ಟು ಹಾಕಿಕೊಂಡ ಹಾಳೆಟೊಪ್ಪಿ, ಕಂಬಳಿಕುಪ್ಪೆ, ಗೊರಬು ತೆಗೆದಾಗ ಸ್ವಲ್ಪ ದೇಹಕ್ಕೆ ಹಿತವೆನ್ನಿಸಿತು.

ಸೊಂಟಕ್ಕೆ ಸಿಕ್ಕಿಸಿದ ಕೆಂಪು ಕರವಸ್ತ್ರ ತೆಗೆದು ಮುಖದ ಮೇಲೆ, ಮೈಮೇಲೆ ಬಿದ್ದ ಮಳೆಯ ನೀರು ಒರೆಸಿಕೊಂಡ. ಕಾಲಲ್ಲಿ ಹತ್ತಿಕೊಂಡ ಇಂಬಳಗಳನ್ನು ಸೊಂಟಕ್ಕೆ ಸಿಕ್ಕಿಸಿಕೊಂಡ ಕತ್ತಿಬಾಯಿಂದ ಅಂಗಳಕ್ಕೆ ಕೆಡವಿ, ಹರಿಯುತ್ತಿದ್ದ ರಕ್ತ ಕಟ್ಟಲು ಸೊಂಟಕ್ಕೆ ಸಿಕ್ಕಿದ್ದ ಸುಣ್ಣದ ಡಬ್ಬಿ ತೆಗೆದು ಇಂಬಳ ಕಚ್ಚಿದಲ್ಲೆಲ್ಲಾ ಹಸಿ ಸುಣ್ಣ ಮೆತ್ತಿಕೊಂಡ.

"ಏನು ಕುಸ್ಟ, ಇಂಥ ಮಳೆಯಲ್ಲಿ ಸೊಪ್ಪಿಗೆ ಹೋಗದಿದ್ದರೂ ಏನಾಗುತ್ತಿತ್ತು. ಊರ ಮುಂದಿನ ಹಳ್ಳ ಹೇಗೆ ದಾಟಿ ಬಂದೆ ಮಾರಾಯ. ಉಪಾಧ್ಯಾಯರ ಮನೆಮೇಲೆ ಹಾಕಿದ ಸಾರದಿಂದಲಾದರೂ ದಾಟಿ ಬರಬಾರದಿತ್ತೆ"?

ಕೊಡಸೆ ತಲೆಯ ಮೇಲೆ ಕೆಂಪು ಸೆರಗು ಹೊದ್ದು ನಗುತ್ತಾ ಕುಸ್ಟನಿಗೆ ಬಿಸಿ ಬಿಸಿ ಕಾಫಿ ಅವನ ಲೋಟಕ್ಕೆ ಸುರಿವಾಗ ಹೇಳಿದಳು. ಕುಸ್ಟ ಕಾಫಿ ಕುಡಿಯುವಾಗ ತನ್ನನ್ನು ನೋಡುತ್ತಾ ನಗುತ್ತಿದ್ದ ಕೊಡಸೆ ಅಮ್ಮಾವರನ್ನು ನೋಡಿ ಪುಳಕಿತನಾದ.

"ಅಯ್ಯಾ ಪೂಜೆಗೆ ಕುಳಿತರಾ?"

"ಉಹುಂ ಕುಸ್ಟ, ಅಪ್ಪಯ್ಯ, ಸಂಪೇಮನೆ ಅಡಿಗಳಲ್ಲಿ ವೈದಿಕದಡಿಗೆಗೆ ಹೋಗಿದ್ದಾರೆ."

ಕುಸ್ಟ ಕಾಫಿ ಕುಡಿದು, ಕವಳಿಗೆಯನ್ನು ಹಳ್ಳದ ನೀರಿನಿಂದ ತೊಳೆದು ಗೊರಬನ್ನು ಬಿಟ್ಟು ಬರೀ ಕಂಬಳಿ ಕೊಪ್ಪೆ, ಹಾಳೇಟೊಪ್ಪಿ ಹಾಕಿಕೊಂಡು ಮತ್ತೆ ಸೊಪ್ಪಿಗೆ ಹೊರಟ.

ಅಯ್ಯನಿಗೆ ಒಂದು ಎಕರೆ ಗೇಣಿತೋಟ, ಇದರ ಉತ್ಪತ್ತಿ ಏನೇನೂ ಸಾಲೋಲ್ಲ, ಒಡೆಯರಿಗೆ ಗೇಣಿ ಕೊಟ್ಟು ಉಳಿಯೋದು ಅಷ್ಟಕ್ಕಷ್ಟೆ. ಅದಕ್ಕಾಗಿ ಅಡಿಗೆ ಕೆಲಸಕ್ಕೆ ಪಾಪ ಆಗಾಗ ಕರೆಬಂದಾಗ ಹತ್ತಾರು ಮೈಲಿಗಳನ್ನು ಸುತ್ತಿ ಹೋಗುತ್ತಿದ್ದರು. ಈಗಿನ ಕಾಲವೇ ದುಬಾರಿ ಕಾಲ. ಎಷ್ಟು ದುಡ್ಡಿದ್ದರೂ ಸಾಲೋದಿಲ್ಲ. ಕೊಡಸೆ ಅಮ್ಮನವರ ಲಗ್ನಕ್ಕೆ ಅಯ್ಯ ಮಾಡಿದ ಸಾಲ ಕಣಿವೆಬಾಗಿಲು ಭಟ್ಟರಲ್ಲಿ ಇನ್ನೂ ತೀರಿಲ್ಲ. ಬಡ್ಡಿ ಮಾತ್ರ ಕೊಡುತ್ತಿದ್ದಾರೆ. ಬಡಸ್ತಿಕೆ ಅಂದರೇ ಕಷ್ಟ. ಆದರೆ ತನಗೆ ಮಾತ್ರ ತಿಂಗಳು ತಿಂಗಳು ಕೊಡುವ ಸಂಬಳ ಎಷ್ಟೇ ಕಷ್ಟವಾದರೂ ಕೊಟ್ಟುಬಿಡುತ್ತಾರೆ. ಅದನ್ನೆಲ್ಲಾ ತಾನು ತಕ್ಷಣ ಕೊಡಸೆ ಅಮ್ಮಾವರ ಕೈಲಿ ಇಡಲು ಕೊಟ್ಟುಬಿಡುತ್ತೇನೆ. ಕುಸ್ಟ ನಡೆಯುವಾಗ ಇವನ್ನೆಲ್ಲಾ ಯೋಚಿಸುತ್ತಾನೆ. ಮಳೆ ಹಿಡಿದದ್ದು ಬಿಡದೆ ಒಂದೇ ಸವನೆ ರೊಯ್ಯನೆ ಸುರಿಯುತ್ತದೆ. ಹಳ್ಳದ ಬುಡಕ್ಕೆ ಬಂದಾಗ ಮತ್ತಷ್ಟು ನೀರು ಜಾಸ್ತಿ ಏರಿ ಎದೆಮಟ್ಟಕ್ಕೆ ಬಂದಿದೆ. ಅಂದುಕೊಂಡು ಗುಡ್ಡಹತ್ತಿ ಮೇಲಮನೆ ಉಪಾಧ್ಯಾಯರ ತೋಟ ಹಾದು, ಸಾರ ದಾಟಿ ಒಳಕಟ್ಟೆ ಗುಡ್ಡಕ್ಕೆ ತಿರುಗುತ್ತಾನೆ.

ಇತ್ತೀಚೆಗೆ ಅಮ್ಮನವರ ಕಾಹಿಲೆಗೆ ಅಯ್ಯನಿಗೆ ಸಾಲ ಏರುತ್ತಿದೆ. ನಗರದಿಂದ ಪಂಡಿತರನ್ನು ಕರೆತಂದು ಸಾಕಾಗಿದೆ. ಏಳೆಂಟು ತಿಂಗಳಿಂದ ಅಯ್ಯನವರು ತುಂಬಾ ಪೇಚಿಗೆ ಸಿಲುಕಿಕೊಂಡಿದ್ದಾರೆ. ಕಳೆದ ಚಳಿಗಾಲದಲ್ಲಿ ಭಾರಿ ಚಳಿಬಂದು ಮಂಜುಬೀಳದೆ ಅಡಿಕೆಮರಗಳೆಲ್ಲ ಕೆಂಪಾಯ್ತು. ಮಹಾರೋಗ ಅಂಬೋದು ಕಾಣಿಸಿಕೊಂಡು ಚಿಗುರಿದ ಸಿಂಗಾರಗಳು ಉದುರಿಹೋಯಿತು. ಏಷ್ಟೋ ಉದ್ದೆ ಹಳೆಯ ಅಡಿ ಮರಗಳು ಒಣಗಿ ತಲೆ ಕಳಚಿ ಬಿದ್ದು ಸತ್ತುಹೋದವು. ಆಗ ಅಯ್ಯ ಅವರು ತೋಟದ ಮರ ಹಿಡಿದು ಬೇಗ ಮುಂಚೆ ಮರ್ಕೋದು ಕಂಡರೆ... ಕೊಡಸೇ ಅಮ್ಮಾವ ಗಂಡ ಸತ್ತಾಗಲೂ ಅಯ್ಯ ಇಷ್ಟು ಮರ್ಕರಲಿಲ್ಲ.

ಸೊಸೈಟಿ. ಕಣಿವೆಬಾಗಿಲು ಭಟ್ಟರು. ಬ್ಯಾಂಕ್ ಎಲ್ಲಾ ಕಡೆ ಅಯ್ಯ ಸಾಲ ಎತ್ತಿದ್ದಾರೆ. ಆಳುಗಳು ಸಾ ಕೊಡಿ, ವಾಯ್ದೆ ಮುಗೀತು ಎಂದು ಎಷ್ಟು ಸಲ ಅಯ ನವರ ಮನೆಗೆ ಬಂದಿಲ್ಲ?

ಕೊಟ್ಟಿಗೆ ಗಂಟಿಗಳು ಇದ್ದಕ್ಕಿದ್ದ ಹಾಗೆ ಕಾಲು ಬ ಬಂದು ಕರೆಯುತ್ತಿದ್ದ ಎರಡು ಮೂರು ಗಂಟಿ ಸ ಹೋದಾಗ ಕೊಡಸೆ ಅಮ್ಮಾವರಿಗೆ ದುಃಖ ಸಹಿ ಲಾಗಲಿಲ್ಲ.

ಕುಸ್ಟ ಸೊಪ್ಪು ಹೊತ್ತು ಕೊಟ್ಟಿಗೆಗೆ ಹಾಕುವಾ ಒಳಗೆ ಕೊಡಸೆ ಅಮ್ಮಾವರು ಕಾಹಿಲೆಯಿಂದ ಮ ಗಿದ ತಾಯಿಯ ಜೊತೆಗೆ ಮಾತಾಡುವುದು ಕೇಳಿ ಕೊಳ್ಳುತ್ತಾನೆ.

"ಅಮ್ಮ ಸ್ವಲ್ಪ ಕೂತುಕೋ, ಮಲಗಿ ಮಲಗಿ ಬೆನ್ನು ಬಿದ್ದುಹೋಗುತ್ತೆ."

"ಮಗ್ಗಲು ಮಾಡೋಕೆ ಆಗೋಲ್ಲ ಕೊಡಸೆ"

ನೇತ್ರಾವತಮ್ಮ ನರಳುತ್ತಾರೆ. ಅಡಿಗೆಮ ಯಿಂದ ಕೊಡಸೆ ಅಮ್ಮಾವರು ಅಮ್ಮ ಮಲಗಿದ ಹೋದ ಶಬ್ದ ಕೇಳಿಸಿಕೊಳ್ಳುತ್ತಾನೆ ಕುಸ್ಟ.

"ನನ್ನ ಕಥೆ ಮುಗೀತು ಕೊಡಸೆ. ದೇಹದ ಏನೇನೂ ತ್ರಾಣವಿಲ್ಲ. ಹಿಡಿದ ಜ್ವರ ನನಗೆ ಬಿಡೋ ವೋ ಏನೋ, ಈ ಮನೆಗೆ ನೀನೇ ದಿಕ್ಕು. ಅವ ಹಗಲುರಾತ್ರಿ ದುಡಿಯೋದು ನನಗೆ ನೋಡೋ ಆಗೊಲ್ಲ ಮಾರಾಯ್ತಿ.

"ಯಾಕೆ ಕೆಟ್ಟದ್ದು ಮಾತಾಡ್ತಿ ಅಮ್ಮ. ನಿನ ಜ್ವರ ಬಿಡುತ್ತೆ. ನೀನು ಮೊದಲಿನಂತೆ ಓಡಾಡ್ತೀಯ ನಿನಗೆ ಬಸರು ಹೋಗಿದ್ದು ಈ ರೀತಿ ಕಾಹಿಲೆ ಮಲಗೋ ಕಾರಣ ಎಂದು ನಗರದ ಪಂಡಿತರು ಅಪ್ಪಯ್ಯನಿಗೆ ಹೇ ದ್ದು ಕೇಳಿದ್ದೇನೆ. ನಿನ್ನ ರೋಗ ವಾಸಿಯಾಗಿ ನೀನ ಚೇತರಿಸಿಕೊಂಡರೆ ಮುಂದೆ ನಿನ್ನ ಬಸುರು ನಿಂತು ಈ ಮನೆಗೆ ಒಬ್ಬ ಮಗ ಹುಟ್ಟುತ್ತಾನೆ. ಅದಕ್ಕಾಗಿ ನೀನ ಮನೋರೋಗ ಹಚ್ಕೋಬಾರ್ದು",

ಕೊಡಸೆ ಮಾತು ಮುಗಿದಾಗ ನೇತ್ರಾವತಮ ಗಟ್ಟಿಯಾಗಿ ಹುಚ್ಚರಂತೆ ನಕ್ಕರು.

"ನನಗೆ ಆಗಬೇಕಾದ್ದು ನನ್ನಲ್ಲಿ ಈ ವಯಸ್ಸಿನಲ್ಲ ನೀ ನೋಡ್ತಿ, ಕೊಡಸೆ".

ನೇತ್ರಾವತಮ್ಮನ ಮಾತು ಮುಗಿದಾಗ ಹುಣಸೆ ಹಣ್ಣಿನ ಚರಟ ಬಿಸಾಡಲು ಅಂಗಳಕ್ಕೆ ಬಂದ ಕೊಡಸೆ ಮುಖವನ್ನು ಕೊಟ್ಟಿಗೆಗೆ ಸೊಪ್ಪು ಹಾಕೋದು ನಿಲ್ಲಿ ಕುಸ್ಟ ಕಂಡಿಯಲ್ಲಿ ನೋಡಿದ.

ಯುವತಿಯಾದ ಕೊಡಸೆಯ ಆ ವಿಕಾರ ಮುಖ ದಲ್ಲೂ ನಗು ಹರಿದಾಡುತ್ತಿದೆ. ಪ್ರಾಯದ ಬೆಳ ಮಿಂಚುತ್ತೆ. ಮಡಿಯಲ್ಲಿ ಇದ್ದುದರಿಂದ ರೌ ಹಾಕುವ ಅಭ್ಯಾಸ ಬಿಟ್ಟದ್ದರಿಂದ ಕೆಂಪುಸೀರೆಯ ಸೆರಗು ಜಾರಿ ಎದೆಭಾಗ ಕಾಣಿಸುತ್ತದೆ. ಅದನ್ನು ನೋ ಡಿದಾಗ ಕುಸ್ಟನಿಗೆ ಒಂದು ರೀತಿ ಎದೆಯಲ್ಲಿ ಅ ಲಕ್ಕಿ ಬತ್ತ ಕುಟ್ಟಿದ್ಹಾಗೆ ಆಯಿತು. ನಾಲಿಗೆಯಲ್ಲಿ ನೀರು ಬಂದಿತು. ಮೈಯಲ್ಲಿ ಸೆಳೆತ ಕಾಣಿಸಿಕೊಂಡಿತು.

"ಕೊಡಸೆ ಉಪ್ಪರಿಗೆ ಕೋಣೆಯಲ್ಲಿ 'ಹೊಂಚಟ್ಟು' ಇದೆ. ಒಂದಿಷ್ಟು ತೆಗೆದು ನೀನು ತಿನ್ನು. ಬೆಳಗಿಂದ ನೀನು

ಏನೂ ತಿಂದಿಲ್ಲ. ಕುಸ್ಟ ಬೆಳಗ್ಗೆಯಿಂದ ಜಡಿಮಳೇಲಿ ಸೊಪ್ಪು ಹೊರ್‍ತಾ ಇದ್ದಾನೆ. ಅವನಿಗೆ ಸ್ವಲ್ಪ ಕೊಡು."

ಕೊಡಸೆ ಸೆರಗು ಸರಿಮಾಡಿಕೊಂಡು ಉಪ್ಪರಿಗೆ ಹತ್ತಿ ಕೋಣೆಯಲ್ಲಿ ಹೊಗೆಕಂಡಿ ಹತ್ತಿರ ಇಟ್ಟ ಡಬ್ಬದಿಂದ ಹಣಚಟ್ ತೆಗೆದು ಬಾಯಿಗೆ ಹಾಕಿಕೊಂಡು ಸ್ವಲ್ಪ ತಂದು ಕೊಟ್ಟಿಗೆಯ ಬಾಗಿಲಲ್ಲಿ ನಿಂತು ಕುಸ್ಟನ ಕೈಗೆ ಹಣೆದಳು.

"ಇದೇನು ಅಮ್ಮಾವರೆ?"

"ಹಣಚಟ್ಟು"

"ಈಗ ಯಾಕೆ?"

"ನೀನೇ ಬೇಸಿಗೆಯಲ್ಲಿ ಕಾಡಿನಿಂದ ತಂದ ಮಾವಿನ ಹಣ್ಣಿನದು. ತಿನ್ನೋ ಮಾರಾಯ. ಬಾಯಿಸಿಹಿಯಾಗಲಿ" ಕುಸ್ಟ ಹಣಚಟ್ ಹಿಡಿದು ತಿನ್ನುವಾಗ ನಕ್ಕ. ಕೊಡಸೆ ಅವನ ಬರಿಮೈ ರೂಪ ನೋಡಿ ನಕ್ಕಳು. ಇಬ್ಬರ ನಗೂ ಒಳಗೆ ಮಲಗಿದ ನೇತ್ರಾವತಮ್ಮ ಕೇಳಿಸಿಕೊಂಡಾಗ ಎದೆ ಹೊಡೆದುಕೊಳ್ಳತೊಡಗಿತು.

"ನೀವು ಹೀಗೆ ನಗುತ್ತಿರಬೇಕು" ಕುಸ್ಟ ಬಾಯಿ ಅಗಲಿಸಿ ಹೇಳಿದ.

"ಈ ಮನೆಯಲ್ಲಿ ನಗೋದು ಹೇಗೆ ಮಾರಾಯ?" ಮತ್ತೆ ಕೊಡಸೆ ವಾತಾವರಣ ನೆನೆಸಿ ಯಾತನೆಯ ಮುಖದಿಂದ ಒಳಗೆ ಹೋದಳು.

ಅವಳು ನಡೆವಾಗ ಹಿಂಬದಿ ಬೆಳೆದ, ಅವಳ ಮೈ ನೋಡಿದಾಗ ಕುಸ್ಟ ಒಂದು ರೀತಿ ಸಂತೋಷ ಪಟ್ಟಂತವನಾದ. 'ಎಷ್ಟೊಂದು ಸಾಪು ಈ ಅಮ್ಮನ ಮೈ' ಅಂದು ಉಳಿದ ಹಣಚಟ್ಟನ್ನು ಪಟಕ್ಕನೆ ಬಾಯಿಗೆ ಹಾಕಿಕೊಂಡ.

ನೇತ್ರಾವತಮ್ಮನಿಗೆ ತುಂಬಾ ಭಯವೆನ್ನಿಸಿತು. ಅವರು ಮನೇಲಿ ಇರೋಲ್ಲ. ತನಗೆ ಕಾಹಿಲೆ, ಪ್ರಾಯದ ಮಗಳು ವಿಧವೆ. ಪ್ರಾಯ ತುಂಬಿದ ಕುಸ್ಟ, ಮನೆ ಆಳು. ತುಂಬಾ ಸಲಿಗೆ. ಅವನ ಜೊತೆಗೆ ಕೊಡಸೆ ಇಷ್ಟು ಸಂತಸವಾಗಿ ಇರೋದು... ಏನಾದರೂ ಹೆಚ್ಚು ಕಡಿಮೆ ಯಾದರೆ...

ಅವರಿಗೆ ಥಕ್ಕನೆ ನೆನಪಾಯಿತು; ಹಿಂದಿನ ದಿನ ಹೊರಗೆ ಹೋಗಲು ತೋಟದ ಹೆಬ್ಬಾಗಿಲಿನ ಮರದ ಹತ್ತಿರ ನರಳುತ್ತಾ ಕುಳಿತಾಗ ಮೇಲಿನ ಮನೆ ಉಪಾಧ್ಯಾಯರ ಹೆಂಡತಿ ಸಾವಿತ್ರಿ ಸೊಸೆಯಾದ ಊರ್ಮಿಳೆ ಹತ್ತಿರ, "ಯಾಕೋ ನನಗೆ ಅನುಮಾನ ಹುಡುಗಿ."

"ಯಾವ ವಿಷಯದಲ್ಲಿ ಅತ್ತೆ?"

"ಕೊಡಸೆ ಕುಸ್ಟನಿಗೆ ದೇಹಸಂಬಂಧ ಬೆಳೆದಿದೆ."

"ಹೌದಾ ಅತ್ತೆ?"

"ಹುಂ ಊರ್ಮಿಳೆ. ಅವಳ ತಂದೆ ಸದಾ ಅಡಿಗೆಗೆ ಆ ಹಳ್ಳಿ ಈ ಹಳ್ಳಿ ತಿರುಗುತ್ತಿರುತ್ತಾನೆ. ನೇತ್ರಾವತಿಗೆ ಕಾಹಿಲೆ. ಕುಸ್ಟನ ಜೊತೆ ಗಂಡ ಕೊಡದ ಸುಖ ಕೊಡಸೆ ಪಡೆಯುತ್ತಿದ್ದಾಳೆ."

"ಹಾಗಿರಲಾರದು ಅತ್ತೆ."

"ಕುಸ್ಟನ ಜೊತೆ ಆ ಹುಡುಗಿ ತೋಟದಲ್ಲೂ ಮನೆಯಲ್ಲೂ ನಗುತ್ತಾ ಹರಟೋದನ್ನು ನಾನು ಎಷ್ಟು ಸಾರಿ ನೋಡಿಲ್ಲ ಹೇಳು? ಸಂಬಳದ ಹಣವೆಲ್ಲ ಅವನು ಅವಳ ಕೈಲೇ ಹಾಕಿದ್ದಾನೆ ಮಾರಾಯ್ತಿ?"

"ಹೌದಾ?"

ನೇತ್ರಾವತಮ್ಮನವರಿಗೆ ಸಿಟ್ಟು ಉಕ್ಕೇರಿತು. ಮನೆಗೆ ಬಂದ ಮೇಲೆ ಕೊಡಸೆಗೆ ಈ ವಿಚಾರ ಹೇಳಬೇಕೆನ್ನಿಸಿ



ತ್ತದೆ. ಆದರೆ ಹೇಳಲಾರದೆ ಹಾಗೇ ಮನಸ್ಸಿನಲ್ಲಿ ಸಿಟ್ಟು ನುಂಗಿಕೊಂಡರು.

ಆವರ ಹತ್ತಿರ ಈ ವಿಚಾರ ಸೂಕ್ಷ್ಮವಾಗಿ ತಿಳಿಸ ಬೇಕು. ಕುಸ್ಪನನ್ನು ಮನೆ ಬಿಡಿಸಬೇಕು... ಪಾಪ ಹುಡುಗ ನಾಗಿದ್ದಾಗಿನಿಂದ ಆತ ಘಟ್ಟ ಹತ್ತಿ ಬಂದ ಮೇಲೆ ನಮ್ಮ ಮನೇಲೇ ಇದ್ದಾನೆ. ಯಾರು ಎಷ್ಟು ಆಸೆ ತೋರಿಸಿದರೂ ಆತ ನಮ್ಮ ಮನೆ ಬಿಟ್ಟು ಹೋಗಿಲ್ಲ. ಎಷ್ಟು ಕೆಲಸ ಮಾಡುತ್ತಾನೆ. ಗೊಬ್ಬರ ಎಳೆಯುತ್ತಾನೆ, ಅಗತೆ ಅಗಿಯುತ್ತಾನೆ. ಕೊನೆಕೊಯ್ಯುತ್ತಾನೆ. ಔಷಧ ಹಾಕುತ್ತಾನೆ. ಅಡಕೆ ಸುಲಿಯುತ್ತಾನೆ. ಬೇಸುತ್ತಾನೆ ಎಲ್ಲಾ ಕೆಲಸ ಮನೆ ಮಗನಿಗಿಂತ ಚೆನ್ನಾಗಿ ಮಾಡಿಕೊಂಡು ಹೋಗುತ್ತಾನೆ. ವಾರ ವಾರ ಎಲೆ, ಬಾಳೆಕಾಯಿ ಕೊಯ್ದು ನಗರದ ಸಂತೆಗೆ ಮಾರಿ ಹಣ ತಂದುಕೊಡುತ್ತಾನೆ. ಇಷ್ಟು ವರ್ಷವಾಯಿತು ಒಂದು ದಿನವೂ ಸೋಮಾರಿತನ ಮಾಡಲಿಲ್ಲ. ಕಾಹಿಲೆ ಮಲಗಲಿಲ್ಲ. ಅವನಿಗೆ ಕೊಡಸೆಯನ್ನು ಕಂಡರೆ ಹುಡುಗಿ ಆಗಿದ್ದಾಗಿನಿಂದಲೂ ಇದೇ ರೀತಿ ಸಲುಗೆ. ಅಷ್ಟಕ್ಕಾಗಿ ಮೇಲಮನೆ ಯಜಮಾನಿ ಮಾತನಾಡಿದ್ದು ನಂಬಿ ಅವನನ್ನು ಕೆಲಸದಿಂದ ದೂಡಲೇ?

'ಊರು ತುಂಬಾ ಸುದ್ದಿ ಹರಡಿದೆಯೋ ಏನೋ?

'ಈಗ ಕುಸ್ಪನ್ನ ಕಳಿಸಿದರೆ... ನಾವು ಬದುಕೋ ದು ಹೇಗೆ? ಇವರಿಗೆ ದಿನ ದಿನಕ್ಕೂ ಸಾಲ ಹೆಚ್ಚಾಗು ತ್ತಿದೆ. ನನಗೋ ಕಾಹಿಲೆ ವಾಸಿ ಆಗೋಲ್ಲ.

'ಕುಸ್ಪನಿಗೆ ಅವನ ಜಾತಿಯ ಹುಡುಗಿಯನ್ನು ನೋಡಿ ಮದುವೆ ಮಾಡಿಬಿಡಬೇಕು. ಹೇಗೂ ಅವನ ಸಂಬಳದ ದುಡ್ಡೇ ಎರಡೋ, ಮೂರು ಸಾವಿರ ಕೊಡಸೆ ಯ ಹತ್ತಿರವಿದೆ. ಅದರಲ್ಲೇ ಗಡದ್ದಾಗಿ ಕುಸ್ಪನ ಮದುವೆ ಮಾಡಬೇಕು.'

ಚಿಮಿಣಿಯಿಂದ ನೇತ್ರಾವತಮ್ಮನಿಗೆ ಅಸಾಧ್ಯ ಕೆಮ್ಮಲಾಗತೊಡಗಿತು.

"ಕೊಡಸೇ ಸ್ವಲ್ಪ ಹೊದಿಸ್ತೀಯಾ?"

"ಹುಂ."

ಕೊಡಸೆ ತಾಯಿಗೆ ಹೊದಿಕೆ ಹೊಚ್ಚುವಾಗ ನೇತ್ರಾ ವತಮ್ಮ ಬಹಳ ಧೈರ್ಯ ತೆಗೆದುಕೊಂಡು ಹೇಳಿದರು,

"ಕೊಡಸೆ ... ನೀನು ವಿಧವೆ. ನಿನಗೆ ಇದು ಗೊತ್ತು. ಯಾಕೆ ಹೇಳ್ತೀನಿ ಅಂದರೆ... ಬಾಳೆಮರದ ಬಾಳ್ವೆ ನಿನ್ನದು. ಅದರದೇ ಹಿಡಿತ ನಿನ್ನ ಹಿಡಿತ. ಬಾಳೆ ಮರಕ್ಕೆ ಒಂದೇ ಗೊನೆ ಬರೋದು... ಆ ಮೇಲೆ ಗಿಡ ಕಡಿದುಬಿಡುತ್ತಾರೆ... ಹಾಗೆ ನಿನಗೆ ಮದುವೆ ಒಂದೇ ಸಾರಿ... ನಿನ್ನ ಗಂಡ ಅಪಘಾತದಿಂದ ಹೋಗಿಬಿಟ್ಟ. ನಿನಗೆ ಮಕ್ಕಳು ಆಗಲಿಲ್ಲ. ಗೊನೆ ಬಿಡುವ ಮುಂಚೆ ಬಾಳೆಮರವನ್ನು ಹುಡುಗರು ಕತ್ತರಿಸಿ ಹಾಕಿದಂತೆ ನಿನ್ನ ಬಾಳ್ವೆಯಾಯಿತು. ಈ ಬಾಳೆಮರದಲ್ಲಿ ಕೊನೆ ಬರುವಾರದ್ದು. ಬಂದರೆ ಬಾಳೆಮರದ ಬೆಳವಣಿಗೆಯ ನಿಯಮ ಮುರಿಯುತ್ತೆ. ಎಲ್ಲಾ ಗೊತ್ತಿರುವ ನಿನಗೆ ನಾನು ಹೇಳುವುದು ಏನೂ ಇಲ್ಲ."

"ಅಮ್ಮ ನಾನು ಬದುಕಿರೋದು ನಿನಗೆ ಬೇಡ ವಾಗಿದ್ದರೆ ಹೇಳು. ಕುಸ್ಪನಿಗೆ ಹೇಳಿ ಫಾಲಿಡಾಲ್ ತರಿಸಿ ತೆಗೆದುಕೊಳ್ಳುತ್ತೇನೆ. ನಾನೇನು ಮಾಡಬಾರದ್ದು ಮಾಡಿದೀನಿ...?" ಕೊಡಸೆ ಅಳತೊಡಗಿದಳು. ತಾಯಿಗೆ ಹೊದಿಕೆ ಹೊಚ್ಚಿದ್ದರಿಂದ ಮೈಲಿಗೆ ಆಗಿ ಸ್ನಾನಕ್ಕೆ ಹೋದಳು.

ತೋಟ್ಟಿಗೆಯಲ್ಲಿ ಕೆಲಸ ಮಾಡುತ್ತಿದ್ದ ಕುಸ್ಪ ನೇತ್ರಾವತಮ್ಮನ ಮಾತು ಕೇಳಿಕೊಂಡಾಗ ಅಂದು ಕೊಂಡು 'ನಾನು ಕೊಡಸೆ ಅಮ್ಮಾವ್ರ ನಕ್ಕಿದ್ದು ಅಮ್ಮಾ ವರು ಕೇಳಿಸಿಕೊಂಡಿದ್ದಾರೆ. ಆದರೆ ಅವರು ಹೀಗೆ ಊಹಿಸಬಹುದೆ?' ಕುಸ್ಪನಿಗೆ ತಕ್ಷಣ ಕಣ್ಣೀರು ಬಂದಿತು. ಮಳೆಯಲ್ಲಿಯೇ ನೆನೆದುಕೊಂಡು ತೋಟಕ್ಕೆ ಇಳಿವಾಗ ಸ್ನಾನ ಮಾಡುತ್ತಿದ್ದ ಕೊಡಸೆ ಹೇಳಿದಳು.'

"ಕುಸ್ಪ ಮೈ ಗಟ್ಟಿ ಇದೆಯೆಂದು ಕಲ್ಲಿಗೆ ಬಡಕೋ ಬಾರದ್ದು."

ಕುಸ್ಪ ತೋಟದಲ್ಲಿ ದೂರ ನಡೆದು ಮರೆಯಲ್ಲಿ ನಿಂತು ಕೊಡಸೆ ಅಮ್ಮಾವರನ್ನು ನೋಡುತ್ತಾನೆ. ಅವಳು ಕಿರಿಗೆ ಸುತ್ತಿ ಒದ್ದೆ ಸೀರೆ ಹಿಂಡುತ್ತಿರುತ್ತಾಳೆ. ಅವಳ ಬೆತ್ತಲೆ ಮೈ ನೋಡಿದಾಗ ಹೊಸದೊಂದು ಆಸೆ ಕುಸ್ಪ ನಿಗೆ ಕಾಣಿಸುತ್ತದೆ. ಅವಳು ಒದ್ದೆ ಕೆಂಪುಸೀರೆ ಉಟ್ಟು ಒಳಗೆ ಹೋಗುವವರೆಗೂ ಮಳೆಯಲ್ಲಿ ನೆನೆಯುತ್ತಾ ಅವಳನ್ನು ನೋಡಿ ಒಂದು ಹೊಸ ಯಾತನೆಯನ್ನು ಅವನು ಅನುಭವಿಸತೊಡಗಿದ.

'ಬಾಳೇ ಮರಕ್ಕೆ ಒಂದೇ ಗೊನೆ... ಹಾಗೆಯೇ ಕೊಡಸೆ ಅಮ್ಮಾವರ ಬೆಳೆದ ಮೈ ಹೀಗೆ ಹಾಳಾಗಬೇಕೆ?'

ಕುಸ್ಪನಿಗೆ ಥಕ್ಕನೆ ಮರಗೆಸುವಿನ ನೆನಪಾಗಿ ಕಂಬಳಿಕುಪ್ಪೆ ಮನೆಗೆ ಬಂದು ತೆಗೆದುಕೊಂಡು ಸೀದಾ ಇಂದ್ರೋಡಿ ಕಾಡಿಗೆ ಓಡಿದ.

'ಕೊಡಸೆಅಮ್ಮಾವರಿಗೆ ತುಂಬಿದ ಪ್ರಾಯ. ತನ್ನ ನೋಡಿದರೆ ಅವರಿಗೆ ತುಂಬಾ ಖುಷಿ. ನಗುತ್ತಾ ಕಾಫಿ ಕೊಡುತ್ತಾರೆ. ತಿಂಡಿಕೊಡುತ್ತಾರೆ. ಬಡಿಸುತ್ತಾರೆ. ಆಗಾಗ್ಗೆ ಭಾರತದ ಕಥೆಗಳನ್ನು ಹೇಳುತ್ತಾರೆ. ಹರಟೆ ಹೊಡೆಯುತ್ತಾರೆ.

"ಮದುವೆಯಾಗಬಾರದೆ ಕುಸ್ಪು" ಅನ್ನುತ್ತಾರೆ. "ಒಬ್ಬಂಟಿಗನಾಗಿ ಎಷ್ಟು ದಿನ ಇರ್ತೀಯಾ? ಗಟ್ಟದ ಕೆಳಗೆ ಒಂದು ಸಾರಿ ಹೋಗಿ ಹೆಣ್ಣು ನೋಡಿ ಬಾರೋ" ಅಂದ ಮಾತುಗಳು ಯಾಕೋ ಕೊಡಸೆ ಅಮ್ಮಾವರಿಗೆ ನನ್ನ ಕಂಡರೆ ಹಸಿವಾಗುತ್ತೋ ಏನೋ?

'ನಿಂತ ನೀರಿನ ಕೊಡಸೆ ಹೊಳೆ ದೋಣಿ ವಿಹಾರ ಸಾಗುವಾಗ ಕುಸ್ಪನಿಗೆ ಅನ್ನಿಸುತ್ತೆ... ಇದ್ದಕ್ಕಿದ್ದ ಹಾಗೆ ಈ ತುಂಬಿದ ಹೊಳೆಯಲ್ಲಿ ಹಾರಿದರೆ ಹೇಗೆ?... ಇನ್ನೇನಾಗುತ್ತೆ ನೀರು ಕುಡಿದು ಸಾಯುತ್ತೇನೆ.

ಹೆದರಿಕೆಯಾಗಿ ಕುಸ್ಪ ಬೇಗ ಬೇಗ ಇಂದ್ರೋಡಿ ಕಾಡಿನ ದಡ ಸೇರಿದ. ದೋಣಿ ನಿಲ್ಲಿಸಿ ಹೊಳೆ ದಡದ ಮರದ ಬೇರಿಗೆ ದೋಣಿ ಹಗ್ಗ ಕಟ್ಟಿ ಕಾಡಿನಲ್ಲಿ ನಡೆ ವಾಗ ದನಕಾಯುವ ಬೀರ ಬೀಳುವ ಹಲಸಿನ ಹಣ್ಣ ನ್ನು ಬಿಡಿಸಿ ಸೊಳೆಯಲ್ಲಿರುವ ಬೀಜ ತೆಗೆದು ಗುಳುಂ ಗುಳುಂ ನುಂಗುತ್ತಿರುತ್ತಾನೆ.

ಕುಸ್ಪ ಬೀರನ ಹತ್ತಿರ ಹೋಗಿ ಅರ್ಧ ಬಗ್ಗಿ, ಬೀಳುವ ಹಲಸಿನ ಹಣ್ಣು ತೆಗೆದು ಸೊಳೆ ಗುಳುಂ ಗುಳುಂ ನುಂಗುವಾಗ ಥಟ್ಟನೆ ಕೊಡಸೆ ಅಮ್ಮ ಕಾಣಿ ಸುತ್ತಾಳೆ. "ಈ ಹಣ್ಣು ಎಷ್ಟು ಸಿಹಿ ಬೀರ" ಎಂದಾಗ ಕೊಡಸೆ ಅಮ್ಮ ತನ್ನ ಹತ್ತಿರ ನಿಂತಾಗ, ಮಾತಾಡಿದಾಗ ನಕ್ಕಾಗ ಇದೇ ರೀತಿ ಸಿಹಿ ಮೈಮೇಲೆಲ್ಲ ಹರಡೋದು ಯಾಕಾಗಿ ಅಂದುಕೊಂಡ.

ಮರಗೆಸು ರಾಶಿ ರಾಶಿ ತಂದಾಗ, ಕೊಡಸೆ ಅವನಿಗೆ ಹೇಳಿದಳು. "ಕುಸ್ಪ ನೀನೊಬ್ಬನೇ ನನ್ನ ಒಂಟಿಕೆ ತಿಳಿದು ತೀರಿಸೋನು".

ಕುಸ್ಪ ಅಂಗಳದಲ್ಲಿ ಬೆಳೆದ ಕಳೆ ಕೀಳುತ್ತಾ, 'ನಿಜ ನನ್ನ ಮೇಲೆ ಕೊಡಸೆ ಅಮ್ಮನವರಿಗೆ ಪ್ರೀತಿ ... ಒಂದು ಸಲ ಅವರು ಒಬ್ಬರೇ ತೋಟದಲ್ಲಿ ಹೋ... ಹೆಕ್ಕುವಾಗ ಹಿಂದಿನಿಂದ ಹೋಗಿ ಅಪ್ಪಿಕೊಂಡು ನೋ... ಬೇಕು' ಕುಸ್ಪ ಹೇಳಿಕೊಂಡ.

ಮಾರನೆಯ ದಿನ ಅಯ್ಯ ದೇವರ ಪೂಜೆ ಮ... ಕುಳಿತಾಗ ಕಣವೆಬಾಗಿಲ ಭಟ್ಟರು ಬಂದು ಜೋ... ಮಾಡತೊಡಗಿದರು. ಸಾಲ ವಾಪ್ತಿ ಮಾಡಲು ... ದರು. ಅಯ್ಯ ಕಂಗಾಲಾಗಿ ತಲೆಯ ಮೇಲೆ ಕೈಹೊ... ಕುಳಿತುಕೊಂಡರು. ಭಟ್ಟರು ಬರೋ ದು... ಮರಿಯಯ್ಯನಿಗೆ ಬೈದು ನಗರಕ್ಕೆ ಹೊರಟು ಹೋದ...

ಮಧ್ಯಾಹ್ನವೇ... ಕೊಡಸೆ ಅಮ್ಮನ ಹ... ಹಣ ಇಸಿದು ಕಣವೆ ಬಾಗಿಲಿಗೆ ಹೋಗಿ ಭಟ್ಟರ ಸಾ... ತೀರಿಸಿ ಮರಿ ಅಯ್ಯ ಬರೆದುಕೊಟ್ಟ ಪ್ರೊನೋ... ತಂದು ಅಯ್ಯನಿಗೆ ಕುಸ್ಪ ಕೊಟ್ಟ.

"ಇದೇನು ಮಾರಾಯ!"

ಮರಿಯ್ಯಯ ಆಶ್ಚರ್ಯದಿಂದ ಕುಸ್ಪನ... ಕಣ್ಣುರೆಪ್ಪೆ ಮುಚ್ಚದೇ ನೋಡಿದರು.

"ಅಪ್ಪಯ್ಯ ಕುಸ್ಪನ ಸಂಬಳದ ಹಣ ಇತ್ತ... ಕೇಳಿದ್ದ, ಎಣಿಸಿ ಕೊಟ್ಟೆ".

ಮರಿಯಯ್ಯ ಸಂತೋಷದಿಂದ ಕುಸ್ಪನಿಗೆ ... ಮುಗಿದರು. ನೇತ್ರಾವತಮ್ಮ ಕಾಹಿಲೆಯಿಂದ ಮ... ದವರು ಇದನ್ನು ಕೇಳಿಸಿಕೊಂಡು,

"ನೀನು ನಮ್ಮನೆ ಆಳಲ್ಲ, ಮಗ ಕಣೋ ಕುಸ್ಪ" ಎಂದರು.

ಕೊಡಸೆ ಕಿಲಕಿಲನೆ ನಕ್ಕಳು. ಕುಸ್ಪನಿಗೆ ಮ... ಗಾಲದಲ್ಲಿ ಹಿತ್ತಲು ಮಾಡಲು ಮಳೆಯಲ್ಲಿಯೇ ಬೇ... ಕಟ್ಟಲು ಅಂಗಳಕ್ಕೆ ಹೋದಾಗ ತುಂಬಾ ಸಂತೋ... ವಾಗುತ್ತದೆ.

ಅವನು ಬೇಲಿ ಕಟ್ಟುವಾಗ ಒಂದು ರೀತಿ... ಯಾತನೆ ಅನುಭವಿಸುತ್ತಾ, ಮರಿಯಯ್ಯ ಮೂರ್ಛೆ ಹೋಗುತ್ತಾರೆ. ಕೊಡಸೆ ಅಮ್ಮ ಗಾಬರಿಯ... "ಅಪ್ಪಯ್ಯ" ಎಂದು ಕಿರುಚಿದಾಗ ನೇತ್ರಾವತಮ್ಮ ... ಸ್ಥಿತಿಯಲ್ಲೂ ಎದ್ದುಬಂದರು. ಮೇಲಿನ ಮನೆ, ತೋ... ಟದ ಮನೆ ಜನವೆಲ್ಲಾ ಸೇರಿಬಿಟ್ಟರು. ಕುಸ್ಪ ಕಂಗಾ... ಲಾಗಿ ಓಡಿ ನಗರಕ್ಕೆ ಹೋಗಿ ಪಂಡಿತರನ್ನು ಕರೆದು ಕೊಂಡು ಬಂದ.

ಪಂಡಿತರ ಚಿಕಿತ್ಸೆಯಿಂದ ಮರಿಯಯ್ಯ ಚೇತರಿ... ಕೊಂಡರು. ಎಲ್ಲರೂ ಹೋದ ಮೇಲೆ,

ಕುಸ್ಪ ಕೇಳಿದ "ಏನಾಯ್ತು ಅಯ್ಯ... ಒಂದು ಗಳಿಗೆ ನಮ್ಮೆಲ್ಲರ ಜೀವ ಹಾರೋ ಸ್ಥಿತೀನೇ ಮಾಡಿ ಬಿಟ್ರಲ್ಲ".

ಅವನ ಕಣ್ಣಲ್ಲಿ ದಳದಳನೆ ನೀರಿಳಿಯತೊಡಗಿತು. ಹೊರಗಡೆ ಮಳೆಯ ರಭಸವೂ ಜೋರಾಗಿತ್ತು. ಕೊಡಸೆ ಮುಗುಳುನಗುವಿನಿಂದ ಅಪ್ಪಯ್ಯನ ತಲೆಸವರುತ್ತಾ ಕುಳಿತಿದ್ದಳು. ನೇತ್ರಾವತಮ್ಮ ತಮ್ಮ ಕಾಹಿಲೆ ಮರೆತು ಗಂಡನ ಕಾಲು ತಿಕ್ಕುತ್ತಾ ಕುಳಿತಿದ್ದರು.

"ಸಂಪೇಮನೆ ವೈದಿಕದವರಿಗೆ ಉಸಿರು ಕಟ್ಟಿ ಮಾಡಿದೆ ಮಾರಾಯ. ಆಗಲೇ ತಲೆ ತಿರುಗುತ್ತಿತ್ತು, ರಾತ್ರಿ ನಿದ್ರೇನೂ ಬರಲಿಲ್ಲ. ಇದೆಲ್ಲಾ ಸೇರಿ ಈ ಸ್ಥಿತಿ ನನಗೆ ಬರಿಸ್ತೋ ಏನೋ!?"

"ಸುಮ್ಮನೆ ಮಲಗಿ ಅಯ್ಯ, ಸರಿಯಾಗುತ್ತೆ"

ಷ್ಟ ಹೇಳಿ ಚಿಗುರುವೀಳೆದೆಲೆ ಅಯ್ಯನಿಗೆ ತರಲು
ಂಟದ ಕಡೆಗೆ ಹೋದ. ಹಿಂದಿನಿಂದ ಕೊಡಸೆ ಒಂದು
ಳುತ್ತಾಳೆ.

"ನಿನ್ನಿಂದ ಇವತ್ತು ಅಪ್ಪಯ್ಯ ಬದುಕಿದರು
ಾರಾಯ".

ಕುಸ್ಪ ಅಷ್ಟು ಹತ್ತಿರ ಬಂದ ಕೊಡಸೆ ಅವಳ್ನಾ
ನ್ನು ನೋಡಿ ಬಹಳ ಸಂತೋಷಪಟ್ಟ.

"ನನ್ನದು ಒಂದು ಮಾತು ನಡೆಸುತ್ತೀಯಾ
ಸ್ಪ?" ಗಟ್ಟಿಯಾಗಿಯೇ ಕೊಡಸೆ ಕೇಳಿದಳು.

"ಹೇಳಿ" ಕುಸ್ಪ ನಗುತ್ತಲೇ ಹೇಳಿದ.

"ನೀನು ಒಂದು ಹುಡುಗಿ ನೋಡಿ ಮದುವೆ
ಾಗು ಮಾರಾಯ",

"ಆಗಲಿ ತಾಯಿ ನಿಮಗೆ ಯಾವ ಅಪವಾದ ಬಾರ
ದಿದ್ದಂತೆ ನೋಡಿದರಾಯ್ತು, ತಾನೆ?"

"ಅಷ್ಟು ಮಾಡು ಮಾರಾಯ, ನಾನು ಬಾಳೆಯ
ಮರದಂತೆ ತಾನೆ?"

ಸೇತ್ರಾವತಮ್ಮ, ಮರಿಯಯ್ಯ ಈ ಮಾತು
ಕೇಳಿಸಿಕೊಂಡವರು ಅವರ ಮುಖದಲ್ಲಿ ಸಮಾಧಾನ
ಹರಡುತ್ತದೆ.

"ಕುಸ್ಪ ಆಳಲ್ಲ ಮಗ ಕಣೇ, ಅವನ ಸಂಬಳ
ಒಂದು ಹಿಡಿತ ಮಾಡಿದ್ದರಿಂದ ಈ ದಿನ ನನ್ನ ಸಾಲ
ಬಗೇಹರಿತು" ಮರಿಯಯ್ಯ ಹೇಳಿದರು.

"ಹೌದು ಕಣ್ರಿ... ಕೊಡಸೇನು ಅಷ್ಟೆ. ಮನಸ್ಸು
ಹಿಡಿತದಲ್ಲಿ ಇಟ್ಟಿದ್ದಾಳೆ ಅನ್ನೋದು ಈ ದಿನ
ಗೊತ್ತಾಯ್ತು. ಯಾರು ಏನೇ ಹೇಳ್ಲಿ ಇನ್ಮುಂದೆ
ನಾನು ಅನುಮಾನಪಡೋಲ್ಲ".

"ಈ ಸಾರಿ ಅಡಿಕೆ ಮಾರಿದ ಮೇಲೆ ಕುಸ್ಪನಿಗೆ
ಮದುವೆ ಮಾಡಬೇಕು",

"ಹಾಗೆ ಮಾಡಿ ಅಪ್ಪಯ್ಯ",
ಕೊಡಸೆ ನಕ್ಕು ಒಳಗೆ ಹೋದಳು.

ಕುಸ್ಪ ಸಮಾಧಾನದಿಂದ ಎಲೆಪತ್ರಿ, ಚಿಗುರೆಲೆ
ಚೂಟುತ್ತಾ ಹೇಳಿಕೊಂಡ " 'ಸಂಬಂಧ' ಅಂದರೆ ದೇಹ
ಸಂಬಂಧ ಒಂದೇ ಅಂತ ಈ ಜನ ತಿಳಿದಿದ್ದಾರೆ. ಅಯ್ಯನ
ವರಿಗೆ ಸದಾ ಸುಖವಾಗಿಡಲು ನಾನು ಹೀಗೆ ದುಡಿಯು
ತ್ತೇನೆ. ಅವರ ಋಣ ತೀರಿಸುತ್ತೇನೆ."





# ಮೈಸೂರಿನ ಭಾಗ್ಯನಿಧಿ ಮಲೆನಾಡು





ವಿಶೇಷ ಶಬ್ದಚಿತ್ರ

ಇಪ್ಪತ್ತೈದು ಸಾವಿರದ ಏಳುನೂರ ಎಪ್ಪತ್ತು ಚದರ ಮೈಲು ವಿಸ್ತೀರ್ಣವಾದ ಹಾಗೂ ಅರವತ್ತೆರಡು ಲಕ್ಷ ತೊಂಬತ್ತೇಳುಸಾವಿರ ಎರಡನೂರ ಎಂಬತ್ನಾಲ್ಕು ಜನವಸತಿಯಿರುವ ಮೈಸೂರು ರಾಜ್ಯದ ಭಾಗ್ಯನಿಧಿ ಎನಿಸಿದ ಮಲೆನಾಡು, ಮಲೆಗಳ ಬೀಡಾಗಿರುವಂತೆ ಮಳೆಯ ನಾಡೂ ಆಗಿರುವುದು. ರಾಜ್ಯದ ಪಶ್ಚಿಮ ಭಾಗವನ್ನು, ಕರಾವಳಿಯನ್ನು ಆವರಿಸಿರುವ ದಕ್ಷಿಣ ಕನ್ನಡ ಉತ್ತರ ಕನ್ನಡ, ಕೊಡಗು, ಚಿಕ್ಕಮಂಗಳೂರು, ಹಾಸನ ಹಾಗೂ ಶಿವಮೊಗ್ಗ ಈ ಆರು ಜಿಲ್ಲೆಗಳ ಬಹುಭಾಗ ಮಲೆನಾಡಿಗೆ ಒಳಪಟ್ಟಿದೆ. ಬೆಳಗಾವಿ ಜಿಲ್ಲೆಯ ತುಸುಭಾಗವಷ್ಟು ಮಲೆನಾಡಿಗೆ ಸಮೀಪವಾಗಿರುವದು. ಹೀಗಾಗಿ ಈ ನಮ್ಮ ವಿಶೇಷ ಶಬ್ದಚಿತ್ರದಲ್ಲಿ ಈ ಜಿಲ್ಲೆಗಳನ್ನು ಪ್ರಾಮುಖ್ಯವಾಗಿ ಗಮನಿಸಿ ಅಲ್ಲಿಯ ಜನಜೀವನ, ಅಲ್ಲಿಯ ಶಿಲ್ಪ ವೈಭವ, ಅಲ್ಲಿಯ ಪ್ರವಾಸಿ ಆಕರ್ಷಣೆಗಳು, ಅಲ್ಲಿಯ ನಿಸರ್ಗ ಸೌಂದರ್ಯ, ಅಲ್ಲಿಯ ಜಾನಪದ ಸಾಹಿತ್ಯ ಇವನ್ನು ಸ್ಥೂಲವಾಗಿ ಆದರೂ ರಮ್ಯವಾಗಿ ವಿವರಿಸುವ ಒಂದು ವಿಶೇಷ ಪ್ರಯತ್ನ ಇಲ್ಲಿರುವುದು.

ವಿಸ್ತಾರ ಹಾಗೂ ಜನವಸತಿಯಲ್ಲಿ ಅತಿ ಚಿಕ್ಕ ಜಿಲ್ಲೆ ಕೊಡಗು. ವಿಸ್ತಾರದಲ್ಲಿ ದೊಡ್ಡ ಜಿಲ್ಲೆ ಚಿಕ್ಕಮಂಗಳೂರಾದರೆ ಜನಸಂಖ್ಯೆಯಲ್ಲಿ ದೊಡ್ಡ ಜಿಲ್ಲೆ ದಕ್ಷಿಣ ಕನ್ನಡ. ಹೆಚ್ಚು ಅರಣ್ಯ ಪ್ರದೇಶ ಹಾಗೂ ಭಾರಿ ಘಟ್ಟದ ಪ್ರದೇಶ ಹೊಂದಿರುವ ಜಿಲ್ಲೆಯೂ ಚಿಕ್ಕಮಂಗಳೂರೇ. ಅತಿ ಹೆಚ್ಚು ಮಳೆಬೀಳುವ ಜಿಲ್ಲೆಗಳಲ್ಲಿ ಶಿವಮೊಗ್ಗೆ ಹಾಗೂ ಉತ್ತರ ಕನ್ನಡಗಳು ಮೊದಲ ಹಾಗೂ ಎರಡನೆ ಸ್ಥಳದಲ್ಲಿರುವವು.

ಕೊಡಗು ಜಿಲ್ಲೆ ೧೫೮೧ ಚದರ ಮೈಲು ವಿಸ್ತೀರ್ಣವಾಗಿದ್ದು ಜನಸಂಖ್ಯೆ ೩೭೮೯೨೩. ಅತಿ ಎತ್ತರದ ಪ್ರದೇಶ ನಾಲ್ಕು ಸಾವಿರ ಅಡಿಯುವರೆಗಿದ್ದು ನಿಸರ್ಗದ ತೊಟ್ಟಿಲು ಎನಿಸಿದೆ. ಸಾಮಾನ್ಯವಾಗಿ ೧೨೦ ಇಂಚು ಮಳೆ ಬೀಳುವುದು. ಒಂದು ದಿಸೆಯಲ್ಲಿ ಇದಕ್ಕೆ ಹೊಂದಿರುವ ದಕ್ಷಿಣ ಕನ್ನಡ ಜಿಲ್ಲೆ ೬೦೦೦ ಚದರ ಮೈಲು ವಿಸ್ತಾರವಾಗಿದೆ. ಜನ ಸಂಖ್ಯೆ ೧೯೩೭೦೮. ಮಳೆ ಸಾಮಾನ್ಯವಾಗಿ ೧೫೦ ಇಂಚು ಬೀಳುವುದು. ಇದಕ್ಕೆ ಹೊಂದಿರುವ ಉತ್ತರ ಕನ್ನಡ ಜಿಲ್ಲೆ ೩೯೭೬ ಚದರ ಮೈಲು ವಿಸ್ತೀರ್ಣವಾಗಿರುವುದು. ಜನಸಂಖ್ಯೆ ೮೪೮೬೦೪. ಮಳೆ ಘಟ್ಟದ ಮೇಲೆ ೨೦೦ ಇಂಚು ಬಿದ್ದರೆ ಭಟಕಳ, ಕಾರವಾರಗಳಂಥ ಕರಾವಳಿಯಲ್ಲಿ ೧೫೦ ಇಂಚು ಬೀಳುವುದು. ಇವೆರಡು ಜಿಲ್ಲೆಗಳಿಗೆ ತಾಗಿರುವ ಶಿವಮೊಗ್ಗ ೩೮೪೪ ಚದರ ಮೈಲು ವಿಸ್ತಾರವಾಗಿದೆ. ಜನಸಂಖ್ಯೆ ೧೩೦೦೩೭೬. ಕೊಡಚಾದ್ರಿಉತ್ತುಂಗ ಗಿರಿಯಾಗಿರುವುದು. ಆಗುಂಬೆ ದಕ್ಷಿಣದ ಚಿರಾಪುಂಜಿಯೆಂದು ಹೆಸರು ಪಡೆದಿದ್ದು ೨೫೦ರಿಂದ ೩೦೦ ಇಂಚುಗಳವರೆಗೆ ಮಳೆ ಬೀಳುವುದು. ಅದೇ ಬಯಲು ಪ್ರದೇಶದಲ್ಲಿ ೫೦–೬೦ ಇಂಚು ಮಳೆ ಬೀಳುವುದು. ಶಿವಮೊಗ್ಗಕ್ಕೆ ಹೊಂದಿರುವ ಜಿಲ್ಲೆ ಚಿಕ್ಕ ಮಂಗಳೂರು. ಇದರ ವಿಸ್ತಾರ ೨೭೧೮ ಚದರ ಮೈಲು. ಸಾಮಾನ್ಯ ಎತ್ತರ ೩೫೦೦ರಿಂದ ೪೦೦೦ ಅಡಿ ಇರುವದಾದರೂ ಕೆಮ್ಮಣ್ಣುಗುಂಡಿ ೫ ಸಾವಿರ ಅಡಿಯ ವರೆಗಿದ್ದರೆ ಬಾಬಾಬುಡನ್ ಗಿರಿಯಲ್ಲಿ ಇದಕ್ಕೂ ಹೆಚ್ಚು ಎತ್ತರದ ಕೆಲ ಗಿರಿಗಳಿವೆ. ಶೃಂಗೇರಿ-ಕೊಪ್ಪಗಳಲ್ಲಿ ಅತಿ ಹೆಚ್ಚು ಮಳೆ. ಸಾಮಾನ್ಯವಾಗಿ ೧೨೦–೧೫೦ ಇಂಚು ಬೀಳುವುದು ಶಿವಮೊಗ್ಗ. ಚಿಕ್ಕಮಂಗಳೂರಿಗೆ ಹೊಂದಿರುವ ಹಾಸನ ೨೬೧೮ ಚ.ಮೈಲು ವಿಸ್ತಾರವಾಗಿದೆ. ಜನಸಂಖ್ಯೆ ೧೯೮೮೪. ಎತ್ತರ ೩೬೦೦ಅಡಿ. ಮಳೆ ಸಾಮಾನ್ಯವಾಗಿ ೫೦ ಇಂಚು.

ಇಷ್ಟು ಸಾಮಾನ್ಯ ಪರಿಚಯದೊಂದಿಗೆ ಈ ಶಬ್ದಚಿತ್ರದಲ್ಲಿ ನೀವಿನ್ನು ಹಣಿಕಿಕ್ಕಬಹುದು.







# ಮಲೆನಾಡ ನಗೆಯ ನೋಟಗಳು






ಇವತ್ತು ಎಷ್ಟು ಇಂಚು ಮಳೆ
ಬಂತು ರಾಮಣ್ಣೋರೇ ?



ಮಲೆನಾಡ ಜನ ಇಷ್ಟೊಂದು ಅತಿಥ್ಯಪ್ರಿಯ
ರೆಂದು ನನಗೆ ಗೊತ್ತಿರಲಿಲ್ಲ ಅವರ ಉಪಚಾರ್ದಲ್ಲಿ
ನಂಗೆ ಹೊಟ್ಟೆ ತುಂಬಿದ್ದೇ ತಿಳಿಯಲಿಲ್ಲ.



- ಕೆ. ಆರ್. ಸ್ವಾಮಿ



ಮಲೆನಾಡಿನಲ್ಲಿ ಎಲ್ಲೆಂದರೆ ಅಲ್ಲಿ ಜಲಪಾತ
ಗಳಾಗುತ್ತವೆ ಎಂದು ನೀನು ಹೇಳಿದ್ದು
ನಿಜ.



ನಮ್ಮೂಂಗೆ 'ಮಲೆನಾಡು' ನೋಡೋಕೆ
ಬಂದವನು, ಮೆತ್ತಗೆ ಮಲೆನಾಡ ಮಲ್ಲಿಗೆ
ಯನ್ನು ಅಪಹರಿಸಿ ಬಿಟ್ಟ.


ಮಲೆನಾಡಿನ ಅಪಃ ಚಿ
ರಾಯಚೂರ
ಧಾರವಾಡ
ಬಳ್ಳಾರಿ
ಚಿತ್ರದುರ್ಗ
ಶಿವಮೊಗ್ಗಾ
ಶಿವಮೊಗ್ಗಾ
ಭದ್ರಾವತಿ
ಹೊನ್ನಾಳಿ
ಶಿಕಾರಿಪುರ
ಸೊರಬ
ಹೊಸನಗರ
ತರೀಕೆರೆ
ಕಡೂರು
ನರಸಿಂಹರಾಜಪುರ
ಶೃಂಗೇರಿ
ಚಿಕ್ಕಮಗಳೂರ
ಚಿಕ್ಕಮಗಳೂರು
ಕುದುರೆಮುಖ
ಹಾಸನ
ಸಕಲೇಶಪುರ
ಚನ್ನರಾಯಪಟ್ಟಣ
ರಾಮನಾಥಪುರ
ತುಮಕೂರ
ಮೈಸೂರು
ಕೊಡಗು
ಭಾಗಮಂಡಲ
ಕುಂದಾಪುರ
ಉಡುಪಿ
ಕಾರ್ಕಳ
ಮಂಗಳೂರು
ಧರ್ಮಸ್ಥಳ
ಪುತ್ತೂರು
ಭಟ್ಕಳ
ಹೊನ್ನಾವರ
ಕುಮಟಾ
ಯಲ್ಲಾಪುರ
ಸಿದ್ದಾಪುರ
ಬೆಳಗಾಂವ
ಕಾರವಾರ
ಶಿರಸಿ



ಸಹ್ಯಾದ್ರಿ ಪ್ರದೇಶದ ಅನುಪಮ ಸೃಷ್ಟಿಸೌಂದರ್ಯ ಸವಿಯಲು ಆಸಕ್ತಿಯೂ ಬೇಕು, ಅನುಕೂಲವೂ ಇರಬೇಕು.

# ನೀಲ ಹಸುರು ಸ್ವರ್ಗ

ಶಿವರಾಮ ಕಾರಂತ

ವಿಶಾಲ ಕರ್ನಾಟಕದಲ್ಲಿ ಅದರ ಪಡುವಣ ಸೆರಗಿನ ಶೋಭೆಯೇ ಬೇರೆ; ಮೂಡಲ ಬಯಲುಸೀಮೆಯ ತೆರನೇ ಬೇರೆ. ಮೂಡಣ ಭಾಗ ಅದರ ಹೆಸರೇ ಹೇಳುವಂತೆ ಬಯಲು ಸೀಮೆ. ಕಣ್ಣು ಚಾಚುವತನಕವೂ ಇಳಿದಾದ ದಿಗಂತ ಬಲು ದೂರದಲ್ಲಿ ಕಾಣಿಸುವ ನಾಡು. ಅಲ್ಲಿ ಇಲ್ಲಿ ಇದರ ಮೈಯ್ಯನ್ನು ಏರು ತಗ್ಗಾಗಿ ಮುರಿಯುವ ಗುಡ್ಡಗಳ ಸೆರಗು ಇಲ್ಲವೆಂದಲ್ಲ; ಅಲ್ಲಲ್ಲಿ ಅವು ಕಾಣಿಸುತ್ತವೆ-ತಮ್ಮ ಬಂಡೆಗಳ ರಾಶಿಯಿಂದ; ಅವುಗಳ ಎಡೆಯಲ್ಲಿ ಬೆಳೆಯುವ ಮುಳ್ಳುಹೊದರುಗಳಿಂದ, ವಿವಿಧ ಕಳ್ಳಿ ಗಿಡಗಳಿಂದ. ಕಂದು, ಬೂದುಗಂದು, ತುಸುವೇ ಹಸುರು ಛಾಯೆ ಹೊತ್ತ ಅವನ್ನು ಬಲು ಹೊತ್ತು ನೋಡಿ ಆನಂದಿಸುವುದು ಕಷ್ಟ. ಬೆಳೆಯಿಲ್ಲದ ವೇಳೆ-ಬಟ್ಟಬಯಲುಗಳ ಕರಿಮಣ್ಣಿನ ಚಾಪೆಯೂ ಕಾಣಬೇಕೆಂಬ ಬಯಕೆಯನ್ನು ಹುಟ್ಟಿಸುವುದಿಲ್ಲ. ಇದಕ್ಕೆ ಪ್ರತಿಯಾದ ನೋಟವನ್ನು ಒದಗಿಸುವ ಭೂಮಿಯು ಸೆರಗು ಪಡುವಣದ್ದು. ಇನ್ನೂರು ಮೈಲು ಉದ್ದಕ್ಕೆ (ದಕ್ಷಿಣೋತ್ತರವಾಗಿ ಹಬ್ಬಿದ ಸಹ್ಯಾದ್ರಿ) ಬೆಟ್ಟ ಅದರ ಬೆನ್ನೆಲುಬು. ಅದರಿಂದ ಪಡುವಣಕ್ಕೆ, ಮೂಡಣಕ್ಕೆ ತೋಳು ಮತ್ತು ಬೆರಳುಗಳಂತೆ ಅಸಂಖ್ಯ ಕಿರಿಯ ಬೆಟ್ಟದ ಸಾಲುಗಳೂ ಇಳಿಯುತ್ತವೆ. ಅದೇ ತೆರ ಮೂಡಣ ಸೆರಗುಗಳೂ ಇಳಿದಿಳಿದು ಬಯಲು ನಾಡಲ್ಲಿ ತಮ್ಮ ಉನ್ನತಿಯನ್ನು ಕಳೆದುಕೊಂಡರೆ, ಪಡುವಣದ ಸಾಲುಗಳು ಅರಬ್ಬಿ ಸಮುದ್ರದ ಅಂಚನ್ನೇ ಚುಂಬಿಸಲು ಹೋಗುತ್ತವೆ. ಈ ಮಲೆಗಳ ದೆಸೆಯಿಂದಾಗಿ ಈ ಪ್ರದೇಶ ಮಲೆನಾಡಾಗಿದೆ. ನೈಋತ್ಯ ದಿಕ್ಕಿಂದ ಬೀಸುವ ಮಳೆಗಾಳಿಗೆ ಈ ಸಹ್ಯಾದ್ರಿ ಬಲವಾದ ಗೋಡೆಯಂತೆ ಅಡ್ಡ ನಿಲ್ಲುವದರಿಂದ ಅದರ ಮೇಲೆ ವರ್ಷಕ್ಕೆ ಮುನ್ನೂರು ಇಂಚು ಮಳೆಯ ಅಭಿಷೇಕವಾದರೆ ಅಚ್ಚರಿಯಿಲ್ಲ. ಅಲ್ಲಿಂದ ಪಡುವಣಕ್ಕೆ ಸರಿದಂತೆ ಮಳೆ ಕಡಿಮೆಯಾದರೂ, ಕಡಲ ಕರಾವಳಿಯಲ್ಲಿನ ಮಳೆ ಸರಾಸರಿ ೧೩೦ ಇಂಚು. ಸಹ್ಯಾದ್ರಿಯಿಂದ ಮೂಡಣಕ್ಕೆ ಸರಿದಂತೆ, ೨೦-೩೦ಮೈಲು ದೂರದೊಳಗಾಗಿ, ಮಳೆ ೫೦-೩೦ಕ್ಕೆ ತಗ್ಗುತ್ತದೆ. ಹೀಗಾಗಿ ಈ ಮಲೆನಾಡು ಮಳೆನಾಡೂ ಆಗಿದೆ. ಅದರಿಂದಲೇ ಎಲ್ಲೆಂದರಲ್ಲಿ ಗಿಡಮರಗಳ ಸೊಂಪು. ವರ್ಷದುದ್ದಕ್ಕೂ ಹಸುರು ಕೊಡೆ. ಆ ಮಳೆಯ ಅನುಗ್ರಹ–ನೂರಾರು ತೊರೆ ಹೊಳೆಗಳಿಗೆ ಜನ್ಮವೀಯುವದರಿಂದ ಬೆಟ್ಟದ ಇಳಕಲುಗಳಲ್ಲಿ ಅವು ಮಿಂಚಿನ ಬಳ್ಳಿಯಂತೆ ಪಡುವಣ ಕಡಲಿಗೆ ಓಡುವ ನೋಟ ಅನುಪಮ ಅನುಭವ! ನೆಲ ಹೀರುವ ಮಳೆನೀರು ಜಿನುಗಿ ಇಳಿಯುತ್ತ ಅವುಗಳ ಸೆಲೆಗಳು ತೊರೆಯಾಗಿ, ತೊರೆ ನದಿಯಾಗಿ ಧಾವಿಸುವ ನೋಟ ಅಪ್ಸರಕನ್ಯೆಯ ವಿಲಾಸ. ಅಂಥ ನದಿಗಳು ಒಂದೇ ಎರಡೇ. ಕಾಳಿ, ಅಘನಾಶಿನಿ, ಶರಾವತಿ, ಗಂಗಾವಳಿ, ಸುವರ್ಣ, ನೇತ್ರಾವತಿಯೆಂಬ ಹಲವಾರು ನದಿಗಳು ಸಹ್ಯಾದ್ರಿಯಲ್ಲಿ ಹುಟ್ಟಿ. ಆ ಬೆಟ್ಟಗಳ ಎತ್ತರದಿಂದ ಧುಮುಕುವ ನೋಟ ಇನ್ನಷ್ಟು ಅದ್ಭುತ! ಹೆಸರುಳ್ಳ ಜಲಪಾತಗಳು, ಹೆಸರಿಲ್ಲದುವು ಹಲವಾರು ಇವೆ. ಕೆಲವನ್ನು ಕಂಡು, ಬಳಸಿ ಹೋಗಿ ನೋಡಿ ಆನಂದಿಸುವ ಅವಕಾಶವಿದ್ದರೆ- ಇನ್ನು ಹಲವು-ಅನೇಕ ಬೆಟ್ಟಗಳ ಸಂದುಗೊಂದಿನಲ್ಲಿ ಹಾರಿ, ಕುಣಿದು ಜಿಗಿದು-ಉದ್ದೇಶ ಪಟ್ಟು ಹುಡುಕಿ ಹೋಗುವವರಿಗಷ್ಟೇ ಕಾಣಸಿಗುವಂಥವು.



ಮಡಕೇರಿಯ 'ರಾಜಾ ಸೀಟ'ದಿಂದ ಕಾಣುವ ಕೊಡಗಿನ ವಿಸ್ತೃತ ದೃಶ್ಯ.

ಈ ನದಿಗಳು ತಮ್ಮ ಪಶ್ಚಿಮಯಾತ್ರೆಯನ್ನು ಮಾಡುವಾಗ ಮಾನವನ ಶೈಶವದಿಂದ ಮುಪ್ಪಿನ ತನಕ

ಕಂಡುಬರುವ ವಿವಿಧ ಅವಸ್ಥೆಗಳನ್ನು ತೋರಿಸುತ್ತವೆ. ಅವುಗಳ ದಂಡೆಗಳನ್ನು ಮನುಷ್ಯ ತೆಂಗುಗಳ ತೋಟ ಮಾಡಿದ್ದಾನೆ; ಬೆಟ್ಟಗಳ ಸಂದುಗಳಲ್ಲಿ ಕಂಗುಗಳ ತೋಟ ಮಾಡಿದ್ದಾನೆ. ಕರಾವಳಿಯ ಮರಳು ದಂಡೆಯ ಉದ್ದಕ್ಕೂ-ಹೆಡೆಯಾಡಿಸುವ ಕಿರೀಟ ಹೊತ್ತ ತೆಂಗುಗಳೇ. ಸಹ್ಯಾದ್ರಿಯ ಮೂಡಣದಿಕ್ಕಿನಲ್ಲೂ ಇಂಥ ಸೊಬಗಿನ ವಿಲಾಸ ಮತ್ತು ಅರಣ್ಯಗಳ ಸೋಂಪು ಬೆಟ್ಟು ಸವೆದು ಬಯಲು ಭೂಮಿಯಾಗುವ ತನಕವೂ ಕಾಣಸಿಗುತ್ತದೆ. ಅನಂತರ ಅದಿಲ್ಲ.

ಕಡಲು ತೀರದ ವಿಶಾಲ ನೀಲ ಅರಬ್ಬಿಸಮುದ್ರವು ಹವಾಮಾನದ ಉಕ್ಕು, ಸೊಕ್ಕು, ಉದಾಸೀನ ಭಾವಗಳನ್ನು ಅನುಸರಿಸಿ ತೋರಿಸುವ ತೆರೆಗಳ ಲೀಲೆ ಮತ್ತೊಂದೇ ಕತೆ. ಪಡುವಣದಿಂದ ಗಾಳಿರಾಯ ಹೊತ್ತುತರುವ ಮುಗಿಲರಾಶಿಯ ಸೊಂಪು, ಉಕ್ಕು, ಬೆಡಗು-ಋತುಮಾನಕ್ಕೆ ಸಮನಾಗಿ ನೂರಾರು ಬಗೆಯ ಆಕಾರ, ಬಣ್ಣ, ಬೆಡಗುಗಳನ್ನು ತೋರಿಸುತ್ತಲೇ ಇರುತ್ತದೆ. ಸೃಷ್ಟಿಸೌಂದರ್ಯವನ್ನು ಸವಿಯಬೇಕೆಂಬ ರಸಿಕನಿಗೆ ಈ ಮಲೆನಾಡು ಒದಗಿಸುವ ಅವಕಾಶ ನೂರಾರು; ಸಾವಿರಾರು.

ಅದಕ್ಕಿಂತ ಹೆಚ್ಚಿನ ಕುತೂಹಲ ತಳೆದವರಿಗೆ ಈ ಪ್ರದೇಶದ ಕಾಡುಗಳಲ್ಲಿ, ಗುಡ್ಡಗಳಲ್ಲಿ, ಊರುಕೇರಿಗಳ ಹೊದರುಗಳಲ್ಲಿ, ಮರಗಳಲ್ಲಿ ವಾಸಿಸುವ ಪ್ರಾಣಿ ಮತ್ತು ಪಕ್ಷಿಗಳ ವೈವಿಧ್ಯ ಮತ್ತು ಜೀವನ ಚಿರನೂತನ. ಉತ್ತರ ಕನ್ನಡ ಮತ್ತು ದಕ್ಷಿಣಕನ್ನಡ ಜಿಲ್ಲೆಗಳನ್ನು ಕುರಿತು ಕಳೆದ ಶತಮಾನದಲ್ಲಿ ಬರೆದ ಗಜೆಟಿಯರುಗಳನ್ನೇ ಹುಡುಕಿ ತಿರುವಿ ನೋಡುವ ಕುತೂಹಲಿಗೆ ಅವುಗಳ ರಹಸ್ಯ ತಿಳಿದೀತು. ಇಲ್ಲಿ ಬೆಳೆಯುವ ಸಸ್ಯಸಂಪತ್ತು ಎಷ್ಟು 'ವಿವಿಧ-ಎಂಬುದು ಗೋಚರವಾದೀತು. ವನ್ಯಪ್ರಾಣಿಗಳಲ್ಲಿ ಕಣ್ಣಿಗೆ ಬೀಳುವ ಹುಲಿ. ಚಿರತೆ, ಕಾಚಿ, ಕಡವೆ, ಕರಡಿ, ಆನೆ ಮೊದಲಾದವುಗಳ ಕತೆ ಒಂದಾದರೆ, ನೆಲದಲ್ಲಿ ಹರಿಯುವ ಹಲವಾರು ಜಾತಿಯ ಹಾವುಗಳ ಕತೆ ಇನ್ನೊಂದು. ವೃಕ್ಷವಾಸಿ



ಸೌಂದರ್ಯದ ತಾಣವೆನಿಸಿದ ಜೋಗಜಲಪಾತ

ಸೂರ್ಯಾಸ್ತದ ರಮಣೀಯ ನೋಟಕ್ಕೆ ಹೆಸರಾದ ಆಗುಂಬೆ



ಪಕ್ಷಿಗಳ, ಪ್ರಾಣಿಗಳ ಮೋಹಕ ಜೀವನದ ಕತೆ ಮಗದೊಂದು. ಈ ಗೆಜೆಟಿಯರುಗಳನ್ನು ಬರೆದವರು-ಇಲ್ಲಿನ ಕೆರೆ, ತೊರೆ, ಕಡಲುಗಳ ಜೀವ ಸಮೃದ್ಧಿಯನ್ನು ಕಲಿತು ಧಾರಾಳವಾಗಿ ಮಾಹಿತಿ ಒದಗಿಸಿದ್ದಾರೆ.

ಸರಿಯೆ! ಇವನ್ನು ಇಲ್ಲಿ ವಾಸಿಸುವ ಜನರೇ ಆಗಲಿ, ಅವರ ನೆರೆಕರೆಯ ಜನರೇ ಆಗಲಿ—ಎಷ್ಟು ಕಂಡಿದ್ದಾರೆ; ಕಂಡು ಎಷ್ಟು ಸಂತೋಷ ಅನುಭವಿಸಿದ್ದಾರೆ, ಅದನ್ನು ಅನುಭವಿಸಲು ತಿರುತಿರುಗಿ ಬಂದಿದ್ದಾರೆ—ಎಂದು ಕೇಳಿದಿರಾದರೆ, ಆ ಪ್ರಶ್ನೆಯನ್ನು ಉತ್ತರಿಸದಿರುವುದೇ ಲೇಸು ಅನಿಸುತ್ತದೆ.

## ಮಂಗನ ಮುಂದೆ ಮಾಣಿಕ್ಯ

ಇಲ್ಲಿನ ಇನ್ನೂರು ಮೈಲು ಉದ್ದದ ಕಡಲ ಬೇಲೆ (ಮರಳಿನ ಹಾಸುಗೆ)ಯಲ್ಲಿ ಸಂಜೆ ಮುಂಜಾನೆ ವಿಹರಿಸಲು ಬರುವವರೆಷ್ಟು? ಕಡಲಲ್ಲಿ ಈಜಲು ಬರುವವರೆಷ್ಟು ಮಂದಿ? ಇಲ್ಲೇನಾದರೂ ಕ್ರೀಡಾವಿನೋದಗಳು ಕಾಣಿಸುತ್ತವೆಯೇ? ಜನ ಹಲಗೆಯ ಹಾಳೆಯ ಮೇಲೆ ನಿಂತು ತೆರೆಗಳ ಮೇಲೆ ಸವಾರಿ ಮಾಡುವ

ದನ್ನು ಕಂಡಿದ್ದೀರಾ? ಅಥವಾ ಕಡಲನ್ನು ಕೂಡುವ ನದಿಗಳಲ್ಲಿ, ಖಾರಿಗಳಲ್ಲಿ ದೋಣಿಯ ಸ್ಪರ್ಧೆ ಕಂಡಿದ್ದೀರಾ? ನದಿದಂಡೆಗಳಲ್ಲಿ– ಪಿಕ್‌ನಿಕ್ಕಿಗೆ ಬರುವವರನ್ನು ಕಾಣುತ್ತೀರಾ ? ಇಲ್ಲವೆ ಮರಗಿಡಗಳಲ್ಲಿ ಬೀಡಾರ ಮಾಡಿಕೊಂಡ· ಕೆರೆಕುಂಟೆಗಳಲ್ಲಿ ಕಾಲೆಳೆಯುವ, ಪಕ್ಷಿಗಳನ್ನು ದುರ್ಬೀನು ಹಿಡಿದೇ ಅಡಗಿಯೋ ನೋಡುತ್ತಿರುವ ಹಕ್ಕಿಹೊಂಚುಗರನ್ನು ನೋಡಿದ್ದೀರಾ! ಪಾಶ್ಚಾತ್ಯದೇಶದ ಯಾವ ಕಡಲ ತೀರ, ದ್ವೀಪ, ಬೆಟ್ಟಗಳ ಮೂಲೆಗೆ ಹೋದರೂ ರಜಾಸಮಯವನ್ನು ಆನಂದದಿಂದ ಕಳೆಯಲು ಬರುವ ಆಬಾಲವೃದ್ಧರನ್ನು ಕಾಣುವಂತೆ ಇಲ್ಲಿಯೂ ಕಾಣುವೆವೆಂದರೆ ನಿರಾಶೆಯಾದೀತು. ನಾವು ಆ ಪಾಶ್ಚಾತ್ಯರಂತೆ ಐಹಿಕ ಸುಖವಾದಿಗಳಲ್ಲ; ಪಾರಮಾರ್ಥಿಗಳು. ಆದುದರಿಂದ ನಮ್ಮ ಜನ-ಏನು ಸುಖ ಕಾಣುತ್ತಿದ್ದರೂ ಅದನ್ನು ಸಿನೆಮಾ ಮತ್ತು ಉಪಹಾರ ಮಂದಿರಗಳಲ್ಲಷ್ಟೇ ಅರಸುತ್ತಾರೆ.

ಹಿಂದೆಯೂ ಮಲೆನಾಡಿನಲ್ಲಿ ಸಾಕಷ್ಟು ಪಾರಮಾರ್ಥಿಗಳಿದ್ದರು. ಅಂಥವರು ಈ ನಾಡಿನ ಅನೇಕ ಮೂಲೆಗಳನ್ನು ಆರಿಸಿ ದೇವಾಲಯ, ಬಸದಿಗಳನ್ನು ನಿರ್ಮಿಸಿದರು. ವಡಭಾಂಡೇಶ್ವರ, ಮುರುಡೇಶ್ವರ, ಗೋಕರ್ಣಗಳ ದೇವಾಲಯಗಳು-ಕಡಲ ಸಂಪತ್ತಿಯಲ್ಲೇ ಇವೆ. ಯಾಣ, ಕಾವಳಗಳಂಥ ನೈಸರ್ಗಿಕ ದೇವಾಲಯಗಳು ಸಹ್ಯಾದ್ರಿಯ ಮಡಿಲಲ್ಲೇ ಇವೆ. ವರ್ಷಕ್ಕೆ ನೂರು ಮಂದಿ ಕೂಡ ಅವುಗಳನ್ನು ಹೋಗಿ ನೋಡುತ್ತಲಿಲ್ಲ. ಗೆರಸೊಪ್ಪೆಯ ವನಿತ್ತು ಹಾಡುವಳ್ಳಿಯ ಅರಣ್ಯಗಳಲ್ಲಿ- ಕಿರಿಯ ರಾಜಧಾನಿಗಳೇ ಹುಟ್ಟಿಕೊಂಡು ಮೆರೆದುವು. ಅಂದಿನ ಜನ ಅರಸರೂ ಅನೇಕ ಸುಂದರ ಬಸದಿಗಳನ್ನು ನಿರ್ಮಿಸಿದ್ದಾರೆ, ಅನೇಕ ಸುಂದರ ಪ್ರತಿಮೆಗಳನ್ನು ಸ್ಥಾಪಿಸಿದ್ದಾರೆ. ದಲ್ಲಿವು ಸಾಲದಾದರೆ-ಸಹ್ಯಾದ್ರಿಯ ಪಡುವಣ ಭಾಗ ಆನೆ, ಮಲೆನಾಡು ಅಂತ್ಯಗೊಳ್ಳುವಲ್ಲಿ- ಬಳ್ಳಿಗಾವಿ, ... ವಟ್ಟು, ಹಾನಗಲ್ಲು, ಬನವಾಸಿಗಳಂಥ ಊರುಗಳಲ್ಲಿ-ಕ್ರಿಸ್ತಶಕಾರಂಭದಿಂದ ತೊಡಗಿ ಸುಮಾರು ಹದಿನೆರಡನೆಯ ಶತಮಾನದ ಅವಧಿಯ ತನಕವೂ ನಿರ್ಮಿಸಿದ ಹಲವಾರು ದೇಗುಲಗಳಿವೆ. ತಮ್ಮ ಜೀರ್ಣಾವಸ್ಥೆಯಲ್ಲೂ ಇಲ್ಲಿದ್ದ ಜನರ ಸೌಂದರ್ಯಪ್ರಜ್ಞೆ ಎಂಥದಿತ್ತೆಂಬುದಕ್ಕೆ ಅವು ಸಾಕ್ಷಿಯನ್ನು ಒದಗಿಸಬಲ್ಲವು. ಆ ಪ್ರಜ್ಞೆ ಹೇಗೆ ಕಡಿಮೆಯಾಗುತ್ತ ಸರಿದು ಅವನತಿಗಿಳಿಯಿತು ಎಂಬುದನ್ನು ಕೆಳದಿಯಂಥ ಸ್ಥಳಗಳ ಗುಡಿಗೋಪುರಗಳು ತೋರಿಸಬಲ್ಲವು

ಮಲೆನಾಡಿನ ರೂಪವತ್ತೂ ಸೌಂದರ್ಯವನ್ನು ಅನುಭವಿಸಬೇಕೆಂಬ ಅಪೇಕ್ಷೆಯಿಲ್ಲದ ಜನರ ಪಾಲಿಗೆ ಅದು ಮಂಗನ ಮುಂದೆ ಚೆಲ್ಲಿದ ಮಾಣಿಕ್ಯವೇ ಸರಿ. ನಮ್ಮ ಎಳೆಯರಲ್ಲಿ ನಾವು ಇದಕ್ಕೆ ಬೇಕಾದ ಅಭಿರುಚಿಯನ್ನು ಪ್ರಯತ್ನಪೂರ್ವಕವಾಗಿ ಬೆಳೆಯಿಸಬೇಕು. ಅಭಿರುಚಿಯುಳ್ಳವರು ಇಂಥ ಸ್ಥಳಕ್ಕೆ ಹೋಗಿ ಒಂದೆರಡು ದಿವಸ ಅಲ್ಲಿ ಇರಲು ಸೌಕರ್ಯಗಳನ್ನು ಕಲ್ಪಿಸಬೇಕು. ಇಂದಿನ ದಿನ ನಾವು ಟೂರಿಸ್ಟ್ ಆಕರ್ಷಣೆಯನ್ನು ಕುರಿತು ಬಲು ಬಲು ಮಾತಾಡುತ್ತಿದ್ದೇವೆ. ಲಕ್ಷ, ಎರಡುಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಿ ಸುಂದರಸ್ಥಳಗಳಲ್ಲಿ ಒಂದೊಂದು ಪ್ರವಾಸಿ ಮಂದಿರ ಕಟ್ಟಿಬಿಟ್ಟರೆ ಜನ ಬಂದು ಹಣ ಸುರಿಯುತ್ತಾರೆ ಎಂಬುದು ನಮ್ಮ ಅಭಿಪ್ರಾಯ. ಬೇರೆ ಬೇರೆ ಆದಾ


ಕೆ. ಆರ್. ವಿಶ್ರಾಮಧಾಮವಿರುವ ಬಾಬಾಬುಡನಗಿರಿಯ ಸುಂದರ ನೋಟ

ಲೆಸ್ಸಿಂಗಟನ್ ಜಲಪಾತ



ಎಂಬುದನ್ನು ಮೊದಲು ನಾವು ತಿಳಿಯಬೇಕು; ಅದನ್ನು ಜನರಿಗೆ ತಿಳಿಸಬೇಕು. ಅಲ್ಲಿ ಬಂದು ಬೇಸರದ ಗಳಿಗೆಗಳನ್ನು ಕಳೆಯಲು ಹಲವಾರು ವಿಧದ ಸೌಕರ್ಯಗಳನ್ನು ಒದಗಿಸಬೇಕು. ಕಡಲಿದೆಯಾದರೆ ಕಡಲ ವಿಹಾರಕ್ಕೆ, ತೆರೆಗಳ ಸವಾರಿಗೆ, ಈಜುವುದಕ್ಕೆ ಏರ್ಪಾಡು ಬೇಕು. ಬಂದವರು ನೀರು ಪಾಲಾಗದಂತೆ- ಜೀವ ರಕ್ಷಕರನ್ನು ಕಾವಲಿರಿಸಬೇಕು. ಅರಣ್ಯಸ್ಥಳವಾದರೆ -ಯಾವ ಋತುಗಳಲ್ಲಿ ಏನೇನು ಪಕ್ಷಿಗಳು ಬರುತ್ತವೆ; ಅವುಗಳ ಜೀವನ ಕ್ರಮ ಹೇಗೆ; ಅವನ್ನು ಹೊಂಚು ಹಾಕುವ ಸುಲಭದ ರೀತಿಗಳು ಯಾವುವು—ಎಂಬುದನ್ನು ತಿಳಿಸುವವರು ಬೇಕು. ಪ್ರಾಣಿಜೀವನ ಪರಿಶೀಲಕರ ಬದಲು- ಕದ್ದು ಬೇಟೆಯಾಡುವವರ ಹಾವಳಿ ಇಂದು ಅಧಿಕವಾಗಿ ಬೆಳೆದು ನಮ್ಮಲ್ಲಿರುವ ಅನೇಕ ಪ್ರಾಣಿಗಳ ಕುಲ ನಾಶವಾಗುತ್ತದೆ. ಹುಲಿಚಿರತೆಗಳ ಹೆಸರು ಮಾತ್ರ ಉಳಿದಿದೆ.

ವಿವೇಕವಿಲ್ಲದೆ ಅಪಾಯಕಾರಿ ವಿಷಗಳನ್ನು ಕೃಷಿ ರಕ್ಷಣೆಗೆ ಬಳಸುವ ಪರಿಪಾಠದಿಂದ - ಕೀಟ, ಪಕ್ಷಿಗಳ ಕುಲ ನಾಶವಾಗುತ್ತಿದೆ ಎಂಬ ಅರಿವೂ ನಮಗೆ ಬಂದಿಲ್ಲ. ಇವೇ ಇನ್‌ಸೆಕ್ಟಿಸೈಡ್ಸುಗಳ ವಿವೇಕರಹಿತ ಬಳಕೆಯಿಂದ ನಮ್ಮ ಮಕ್ಕಳು ಮರಿಗಳೂ ಜಾನುವಾರುಗಳೂ ಅಪಾಯಕ್ಕೆ ಗುರಿಯಾಗುತ್ತಿದ್ದಾರೆ ಎಂಬ ವಿಚಾರವನ್ನೇ ತಿಳಿದವರೂ ಕುರುಡರೊ, ಕಿವುಡರೊ ಆಗಿ ವರ್ತಿಸುತ್ತಿದ್ದಾರೆ. ನಿಸರ್ಗದೊಡನೆ ಮನುಷ್ಯ ಹೊಂದಿ ಬಾಳಲು ಕಲಿಯದೆ ಹೋದರೆ- ಅದನ್ನು ಕೆಡಿಸುತ್ತಾನೆ; ತಾನೆ ಕೆಡುತ್ತಾನೆ.





ಕಾಳವಗುಹೆಯ ನೈಸರ್ಗಿಕ ಶಿವಲಿಂಗ

ಯುವ ಜನ, ಆದಾಯವಿಲ್ಲದ ವಿದ್ಯಾರ್ಥಿಗಳು, ಬಡವರೂ ಸಹ ತಂತಮ್ಮ ವರಮಾನದೊಳಗೆ- ಅಲ್ಲಿ ತಂಗಬಲ್ಲ ಸೌಕರ್ಯಗಳು ಇರಬೇಕು. ಸದ್ಯದ ಪ್ರವಾಸಿ ಮಂದಿರಗಳು, ಮಂತ್ರಿಗಳು ಬಾರದಿದ್ದಾಗ ಮಾತ್ರವೇ ಇತರರಿಗೆ ದೊರೆಯುವಂಥವು. ಅಲ್ಲಿ ಬರುವ ಹಲವರು- ತಮ್ಮ ಸಂತೋಷಕ್ಕಾಗಿ ಸ್ಥಳೀಯ ನಿಸರ್ಗವನ್ನು ಆಶ್ರಯಿಸುವ ಬದಲು, ತಮಗೆ ಬೇಕಾದ ಕನ್ಯೆಯರನ್ನೊ, ಸೀಸೆಗಳನ್ನೊ ತರುವ ಜಾತಿಯವರು.

## ನಮ್ಮ ಕರ್ತವ್ಯ

ಜನ ಬಂದು, ನಿಂತು, ಆನಂದಿಸಬೇಕಾದರೆ-ಒಂದೋ. ಎರಡೋ ದಿನ ಅವರು ಹೇಗೆ ಸಮಯ ಕಳೆಯಬೇಕು? ಕಾರಿನಲ್ಲಿ ಧಾವಿಸಿ ಬಂದು ಅರ್ಧಘಂಟೆ [illegible] ಣಕ್ಕೆ ಮರಳಿಹರೆ ಸಾಲದೇ ಎಂಬ ಪ್ರಶ್ನೆ ಬರುತ್ತದೆ. ಬರುವವರ ವಿವಿಧ ಅಭಿರುಚಿಗಳಿಗೆ ಅಲ್ಲಿ ಏನಿದೆ-



ಕಾರವಾರದಿಂದ ' ಅಂಜದೀವ 'ದ ನೋಟ

# ಕುವೆಂಪು ಕಂಡ ಮಲೆನಾಡು



ಎಸ್. ಎಸ್. ಬ್ಯಾತನಾಳ

ಮಲೆನಾಡ ಮೈಸಿರಿಗೆ ಮಾರುಹೋಗಿದೆ ಮಲೆಯ ಕವಿಹೃದಯ. ಮಲೆನಾಡ ಮಡಿಲಲ್ಲಿ ಮಗುವಾಗಿ ಬೆಳೆದ ರಸಿಕ ಕವಿಗೆ ಕಾಡು ನಾಡಾಗಿ, ನಂದನವಾಗಿ ನಲಿದಿದೆ; ಒಲಿದಿದೆ. ಕುವೆಂಪು ಕವಿಕಣ್ಣು ಕಾಣುವ ಮೊದಲು ಮಲೆನಾಡು ಕೇವಲ ಕಾಡಾಗಿದ್ದಿತು. ಕುವೆಂಪು ಕಾವ್ಯಶಿಶು ಇಲ್ಲಿನ ನಿಸರ್ಗ ರಮಣೀಯತೆಯ ರಸವನ್ನುಂಡು ಪುಷ್ಟವಾಯಿತು. ಮಲೆನಾಡು ಚೆಲುವಿನ ಚೈತನ್ಯವನ್ನು ಪಡೆದು ಕನ್ನಡ ಕಾವ್ಯಲೋಕದಲ್ಲಿ ಚಿರಂತನ ಸೃಷ್ಟಿ ಪಡೆಯಿತು. ಅಂತೆಯೇ, ಕವಿ ಕುವೆಂಪು "ಮಲೆಯ ನಾಡಿಗೆ ಮಳೆಯ ಬೀಡಿಗೆ, ಸಿರಿಯ ಚೆಲುವಿನ ರೂಢಿಗೆ ಹೋಗುವೆನು ನಾ" ಎಂದು ಹಾಡಿರುವರು. ಕವಿಯ ಹೃದಯಕ್ಕೆ ರಸಲೋಕದ ದರ್ಶನ ನೀಡಿದ ಕಾವ್ಯದರಮನೆಯೇ ಕನ್ನಡನಾಡಿನ ಮಲೆನಾಡು. ಮಲೆನಾಡು "ಅವರ ಕಾವ್ಯ ವೈನತೇಯ ಗರಿಗೆದರಿ ಆತೀತದೆಡೆ ಹಾರಲು ಅನುವು ಮಾಡಿಕೊಟ್ಟ ಮೊದಲ ಮಲ್ಲಸಾಲೆ; ಅವರ ಬಾಳನ್ನು ಪರಿವರ್ತಿಸಿ ಕವಿಯನ್ನಾಗಿ ಮಾಡಿ ಲೋಕಕ್ಕೆ ನೀಡಿದ ಪವಾಡ ಚೇತನ. ಕವಿ ಕುವೆಂಪುವಿಗೂ ಮಲೆನಾಡಿಗೂ ಬಿಡಿಸಲಾರದ ನಂಟು; ಎಂದೆಂದಿಗೂ ತೀರದ ಋಣಾನುಬಂಧ!

ಮಲೆನಾಡು ಪ್ರಕೃತಿ ಸೌಂದರ್ಯದ ನೆಲೆವೀಡು. ಅಲ್ಲಿನ ಗಿರಿಶಿಖರ ತರಂಗಗಳ ನೀಲಲೀಲೆ ಭವ್ಯವಾಗಿದೆ; ಬೃಹತ್ತಾಗಿದೆ. ಮುಗಿಲುಗಳ ವರ್ಣಮಯ ವಿನ್ಯಾಸ ವಿಚಿತ್ರ; ವೈವಿಧ್ಯಪೂರ್ಣ. ದಿಗಂತಪಂಕ್ತಿಯ ಮಾಯಾರೇಖೆ ಮೋಹಕವಾಗಿದೆ. ಪಶ್ಚಿಮ ಪರ್ವತಗಳ ಇಡುಕು, ದಟ್ಟವಾಗಿ ಕಿಕ್ಕಿರಿದ ಅಡವಿಗಳ ಜಂಜಡ, ಹೆಬ್ಬಂಡೆಗಳ ರಾಶಿ, ತೊರೆಗಳ ಗುಳುಗುಳು ನಿನಾದ, ತುಂಬಿದ ತೊರೆಯ ಭೋರೆಂಬ ಅರ್ಭಟ, ಸಹಸ್ರ ಪಕ್ಷಿಗಳ ವಸಂತಗಾನ, ವಿಶಾಲ ನೀಲಗಗನಗಳಿಂದ ಮಲೆನಾಡು ಮೈವೆತ್ತು ನಿಂತಿದೆ. ಉನ್ನತ ಗಿಡಮರಗಳ ವಿತಾನ ಕೈವೀಸಿ ಕರೆಯುತ್ತಿದೆ. ಇಲ್ಲಿನ ಸೌಂದಾರ್ಯಾನುಭೂತಿಯ ಸಮಗ್ರದರ್ಶನ ಪಡೆಯಲು ಮಲೆಯಲ್ಲಿ ಅಲೆಯಬೇಕು. ಹಾಗೆ ಅಲೆಯುವುದು ದೊಡ್ಡ ಸಾಹಸವೇ ಸರಿ. ಬೆಟ್ಟವೇರಬೇಕು. ಕಣಿವೆಯಿಳಿಯಬೇಕು. ಸರುವುಗಳನ್ನು ದಾಟಿ, ಹಳವುಗಳಲ್ಲಿ ನುಸಿದು, ತೊರೆಗಳನ್ನು ಹಾಯ್ದು, ಝರಿಗಳನ್ನು ನೆಗೆಯಬೇಕು.

ಮಲೆನಾಡ ಪ್ರಕೃತಿದೇವಿ ಶಾಂತಮಯಿಯೂ ಅಹುದು; ಭಯಭರಿತಳೂ ಅಹುದು. ಮಲೆನಾಡು ಕೇವಲ ಕಗ್ಗಾಡಿನ ಬೀಡಲ್ಲ; 'ಪಕ್ಷಿಕಾಶಿ'ಯದು. ಕಾಜಾಣ ಕಾಮಳ್ಳಿ, ಕುಟುರ, ಕೋಗಿಲೆ, ಗಿಣಿ, ಚೋರೆ, ನವಿಲು, ಮಡಿವಾಳ, ಮರಕುಟಿಕ, ಮಿಂಗುಲಿ, ಮಿಂಚುಳ್ಳಿ ಹೊರಸಲು, ಓಕರಾಳ, ಪುರುಳಿ ಮುಂತಾದ ಪಕ್ಷಿಗಳ ಪರಿಷತ್ತೇ ನೆರೆದಿರುತ್ತದೆ. ಹಕ್ಕಿ – ಪಕ್ಷಿಗಳ ಇಂಚರವು 'ಜಡದ ಬಡತನಕ್ಕೆ ಜೀವದೈಸಿರಿ'ಯನ್ನು ನೀಡಿದೆ. ಇಲ್ಲಿನ ಪ್ರಾಣಿಗಳ ಬಳಗವೂ ಹಿರಿದಾಗಿದೆ. ಹುಲಿ, ಹಂದಿ, ದೊಪ್ಪು, ಕಡ, ಮಿಗ, ಹುಸಿಯು, ಕೋಡಗ, ಎರಳೆ, ಸಾರಗ, ಬರ್ಕ, ಹಾವು, ಉಡ, ಕಣೆಹಂದಿ, ಚಿಪ್ಪಿನ ಹಂದಿ, ಮುಂಗುಸಿ, ಕುರ್ಕ– ಒಂದೇ ಎರಡೇ! ನೆನೆದರೆ ಸಾಕು, ಎದೆ ಉಕ್ಕುತ್ತದೆ: ಮೈಯನೆ ಮರೆಸುತ್ತದೆ. ಭಯವೂ ಆವರಿಸುತ್ತದೆ.

ಕವಿ ಕುವೆಂಪು ಹಕ್ಕಿ ಸಂಕುಲದ ಗಾನಸುಧೆಯಲ್ಲಿ ಮಿಂದಿರುವರು. ಹಕ್ಕಿಬಳಗ ಸುತ್ತು ಕೂಡಿ; ಬೈಗು ಬೆಳಗು ಹಾಡಿ ಮಲೆಯ ನಾಡನ್ನು ಸಗ್ಗ ಮಾಡಿ ಹಾಡಿರುವರು. ಪ್ರಾಣಿ ಜಗತ್ತಿನಲ್ಲಿ ಬೇಟೆಗಾರನಾಗಿ ಭಯದ ಧೈರ್ಯದ ಅನುಭವವನ್ನು ಅರಿತಿರುವರು. ಅವರಿಗೆ ಪ್ರಾಣಿಗಳಿಂದರೂ ಬಲು ಜೀವ. ಪ್ರಾಣಿ – ಪಕ್ಷಿಕುಲ ನಿತ್ಯವಾದುದು; ಅವಿನಾಶಿಯಾದುದು. ಬಂದೂಕು, ಕೋವಿಗಳನ್ನು ಹಿಡಿದು, ಪ್ರಾಣಿಗಳ ಹರಣವನ್ನೇ ಹೀರ ಬಯಸುವ ಬೇಟೆಗಾರನ ಕಲ್ಲೆದೆ, ಭೂತದಯೆಯ ಕವಿಯ ಅಂತರಿಕ ಕೂಗಿಗೆ ಕರಗಿ ನೀರಾಗುತ್ತದೆ, "ಕೊಲ್ಲ ಬತ್ತಳಿಕೆ, ಬಿಲ್ಲು ಬಾಣವನು ಬಿಟ್ಟು ಬಾ" ಎಂದು ಬಿಯದನಿಗೆ ಪ್ರಾರ್ಥಿಸುತ್ತಾನೆ ಕೋಮಲ ಮನದ ಕವಿ. ಪ್ರಾಣಿಪಕ್ಷಿಗಳ ಕುಲಕ್ಕೆ ಸುತ್ತಲಿನ ಶಕ್ತಿಯೇ ಕಾವಲಾಗಿದೆ.

ಕವಿ ಕುವೆಂಪು ತಮ್ಮ ಬಾಲ್ಯ ದಿನಗಳನ್ನು ಕಳೆದ ಕುಪ್ಪಳ್ಳಿಯ ತೋಟ

# ಹೃದಯದ ಹಂಬಲ

ಸಹ್ಯಾದ್ರಿಯ ಸೌಂದರ್ಯ ದರ್ಶನಕ್ಕೆಂದು ಕುವೆಂಪು ಕಾಡಿನಲ್ಲಿ ಅಡ್ಡಾಡಿದರು. ಅವರಲ್ಲಿರುವ ವನಶ್ರೀಯ ಆರಾಧನೆಯ ಆಶೆ ಅಮೋಘವಾದುದು. ಕಾಡಿನಲ್ಲಿ ಸುತ್ತಾಡುವ ಗಂಡುತನದ ಕೆಚ್ಚಿದೆ; ಸೌಂದರ್ಯಾನುಭವದ ಸೊಬಗನ್ನು ಸವಿಯುವ ಸರಸಭಾವವಿದೆ. ಈ ಕಾರಣವಾಗಿಯೇ ನೀಲಗಿರಿ, ಬ್ರಹ್ಮಗಿರಿ, ಕವಿಶೈಲ, ಶೃಂಗೇರಿ, ರಾಮತೀರ್ಥ, ಕಲ್ಲುಸಾರ, ಕನ್ನಂಬಾಡಿ, ಆಗುಂಬೆ, ಹುಲಿಯಕಲ್ಲು ಮೊದಲಾದ ಸ್ಥಾನಗಳೆಲ್ಲ ಚಿರಪರಿಚಿತವಾಗಿವೆ. "ಅಲ್ಲಿಗೈದುವೆನಲ್ಲಿಗೈದುವೆನಿಲ್ಲಿ ಬೇಸರವಾಗಿದೆ। ಕಾಡುಮಲೆಗಳನಲೆವ ಹುಚ್ಚಿನ ಕಿಚ್ಚು ಹೃದಯದಿ ರೇಗಿದೆ" ಎಂದು ಹೃದಯದ ಹಂಬಲವನ್ನು ಪ್ರಕಟಿಸಿರುವರು. ಮಲೆನಾಡಿನ ಅರಣ್ಯದ ಪ್ರತಿಯೊಂದು ಪ್ರದೇಶ, ಗಿಡ, ಬಳ್ಳಿ, ಹೊದರು, ಹೂವು, ಹಕ್ಕಿ ಮುಂತಾದವು, "ಬರಿಯ ಹೆಸರುಗಳಲ್ಲ ನನಗಿವು ಸಾಹಸಗಳ ಕಿಡಿಗಳು। ಕಂಡು ಕೇಳಿದ ಕಥೆಯನೊಡಲೊಳಗಾಂತ ಮಂತ್ರದ ನುಡಿಗಳಾಗಿವೆ" ಕವಿಗೆ.



ಆಗುಂಬೆಯ ಸಮೀಪದಲ್ಲಿರುವ ನಬಾಲಾದ ಮಲೆನಾಡ ಮನೆಯೊಂದರಲ್ಲಿ.....

ಬೇಸಿಗೆಯ ಬಿರುಬಿಸಿಲು, ಚಳಿಗಾಲದ ಕೊರೆವ ಚಳಿ, ಮುಂಗಾರಿನ ಬಿರುಮಳೆ, ಮುಗಿಲುಗಳ ಗರ್ಜನೆ, ತೊರೆಗಳ ಜಲಘೋಷ, ವಸಂತದ ಹಸುರಿನ ಸೊಂಪು, ಬೆಳಗಿನ ಉತ್ಸಾಹ, ಬೈಗಿನ ಶ್ರೀಶಾಂತಿ, ಬೆಳ್ಮುಗಿಲು, ಬೆಳ್ದಿಂಗಳು, ಇಬ್ಬನಿಯ ಸೋನೆ, ಹುಲಿಯ ಗರ್ಜನೆ, ಹಂದಿಯ ಹೂಂಕಾರ ಮುಂತಾದವು ಕವಿ ಕಣ್ಣಿಗೆ ಬೆಳಕು ನೀಡಿವೆ; ಅಸೀಮ ಸ್ಫೂರ್ತಿಯ ಸೆಲೆಗಳಾಗಿವೆ. ಮಾಗಿಚೈತ್ರಗಳಲ್ಲಿ, ಮಳೆ ಮಂಜುಗಳಲ್ಲಿ, ನಿಸರ್ಗದೇವಿಯ ಲಾವಣ್ಯ ಲಾಸ್ಯಗಳ ವಿವಿಧ ಭಂಗಿಗಳ ಚಿತ್ರಣ, "ನಮ್ಮ ಲೋಕ ಕೊಲಿದು ನಾಕವಡ್ಡ ಬೀಳ್ವುದೆಂ"ದು ಸಾರುತ್ತಿದೆ.

ಪ್ರಕೃತಿದೇವಿಯ ಸೊಬಗಿನ ದೇಗುಲದಲ್ಲಿ ದೇವತ್ವದ ದರ್ಶನವನ್ನು ಕಾಣುವ ಕವಿ ಮನದ ನೆಲೆ ಭವ್ಯ; ದಿವ್ಯ. ನಗರದ ಎದೆ ಬೇಸರಿನ ಬೊಬ್ಬೆಗೆ ಬೇಸತ್ತು ಮನೆ ಬೇಡವೆಂದು ಬಯಸಿ "ಸಹ್ಯಾದ್ರಿಯೆ ಸಂತವಿಡು, ಶಾಂತಿ ಸುಧೆಯೆ ತಂಪನೆಸೆ" ಎಂದು ಮೌನವೇ ಮಹಾಸ್ತೋತ್ರವಾಗಿ ಕವಿ ಮನ ನಾಕದಿ ನೆಲೆಸುತ್ತದೆ.

ಮಲೆಯ ರಾಜ್ಯ ನಿಶ್ಶಬ್ದ ಸ್ವಾತಂತ್ರ್ಯ ಸಾಮ್ರಾಜ್ಯ. ಮಲೆನಾಡು ಬರಿಯ ಕಾಡಲ್ಲ; ದೇವರ ಬೀಡು; ಶಿವನ ಮುಡಿ; ಕವಿಯ ತಾಯಿಮನೆ. ಸೌಂದರ್ಯದ ರಸದೂಟ ಬಯಸುವ ಕವಿ ಚೈತನ್ಯ, ಲೋಕದ ದುಃಖ, ಹೀನ, ದೀನ ದಾರಿದ್ರ್ಯವನ್ನು ನಾಶಮಾಡುವ ಶಕ್ತಿ ಕಲಾದರ್ಶನದಲ್ಲಿ ಉಂಟೆಂದು ಬಲವಾಗಿ ನಂಬಿಗೆ ಇರಿಸಿದೆ. ಪ್ರಕೃತಿಯ ಉಪಾಸನೆಯಲ್ಲಿ ಮನವು ಅಡಗುತ್ತದೆ. ಅಂತೆಯೇ, 'ಕೋಟಿ ಮೈಲುಗಳಾಚೆ, ಕಾಶಿಯಾತ್ರೆಗಳೇಕೆ'ಂದು ಪ್ರಶ್ನಿಸಿದ್ದಾರೆ. ಪ್ರಕೃತಿಯಲ್ಲಿಯೇ ಪರಮಾತ್ಮನನ್ನು ಕಾಣುವ ಮಹನ್ನೋಟವದು. ಕವಿಮನಕ್ಕೆ ಜಡವೆಂಬುದಿಲ್ಲ; ಜಡವೆಂಬುದೆಲ್ಲ ಚೇತನದ ನಟನೆಯ ಲೀಲೆ. ಈ ವಿಶ್ವದಲ್ಲಿ ರಸವಿಲ್ಲದಿನ್ನಿಲ್ಲ. ಭೂಮ ನಿಸರ್ಗದ ವ್ಯಾಪಾರಗಳು ಮಾನವ ಜೀವನದ ಆಗು ಹೋಗುಗಳನ್ನು ಲೆಕ್ಕಿಸುವುದಿಲ್ಲ, ಬೃಹತ್ ಪ್ರಕೃತಿ ನಿರ್ದಾಕ್ಷಿಣ್ಯವಾಗಿ, ನಿರ್ಲಕ್ಷ್ಯವಾಗಿ ತನ್ನ ದುರ್ದಮ್ಯ ವ್ಯಾಪಾರಗಳನ್ನು ಸಾಗಿಸುತ್ತಿದೆ. ಅದುದರಿಂದ ಪ್ರಕೃತಿ ಜಡವಲ್ಲ; ನಿತ್ಯ ಚೈತನ್ಯಮೂರ್ತಿ. 'ತೆಗೆ! ಜಡವೆಂಬುದು ಬರಿ ಸುಳ್ಳು!' ಮಲೆನಾಡಿನ ನಿಸರ್ಗದ ವಿರಾಟ ರೂಪ, ವಿನ್ಯಾಸಗಳನ್ನು ಕಣ್ಣಾರೆ ಕಂಡು ಸವಿಯುಂಡ ಕವಿಗೆ, "ರಸತೀರ್ಥದಲಿ ಬಂದವಗೆ ಭವದ ಭಯವೇಕೆ? ಪುಣ್ಯದಾಲಯ ಪೃಥ್ವಿ! ಸ್ವರ್ಗವದು ಪರದೇಶಿ"ಯಾಗುತ್ತದೆ. ಮಾತಿಗೆ ನಿಲುಕದ ಪ್ರಕೃತಿಯ ಅಪಾರತೆ ಮನಕ್ಕೆ ನಿಲುಕದ ಅತೀತತೆಗಳ ಸೊಬಗಿನಲಿ ಶಿವನಿಹನು; ಶಿವನೆ ಸೊಬಗಾಗಿಹನು? ಪ್ರಕೃತಿ, ಬ್ರಹ್ಮಮಯಿ, ಆನಂದಮಯಿ. ಸೃಷ್ಟಿ ಸೌಂದರ್ಯದ ಮುಗ್ಧತೆಗೆ ಭವ್ಯತೆಗೆ ಸೆರೆಸಿಕ್ಕ ದಾರ್ಶನಿಕ ಕವಿಮನವು,

"ಸತ್ಯದಲಿ ಶಿವವಿಹುದು, ಶಿವದಲ್ಲಿ ಸತ್ಯವಿದೆ।

ಮೇಣೆರಡು ಸೌಂದರ್ಯದಲಿ ಲೀನವಾಗಿಹವು"

ಎಂಬ ಮಹತ್ ತತ್ವದ ದರ್ಶನದೆಡೆಗೆ, ದೂರಕೆ, ಬಹುದೂರಕೆ ಹಾರಿದೆ; ಹಾಡಿ ಹಾರಾಡಿದೆ.

ಕುಪ್ಪಳಿಯ 'ಕವಿ ಶಿಲೆಯ' ಮೇಲೆ ಕೆತ್ತಲಾಗಿರುವ ಕವಿಗಳನೇಕರ ಹೆಸರುಗಳನ್ನಿಲ್ಲಿ ಕಾಣಬಹುದು



## ವೈಶಿಷ್ಟ್ಯಪೂರ್ಣ ಜನಜೀವನ

ಕವಿಗೆ ರಸವೊಂದೆ ನೀತಿ; ನಿಯತಿ. ಕಲೆಯ ಕಣ್ಣಿಲ್ಲದವನಿಗೆ ಮಲೆನಾಡು –ಕಲ್ಲುನಾಡು; ಕಲಾವಂತನಿಗೆ ಸಗ್ಗದ ಬೀಡು. ಕಾಣುವಕಣ್ಣು ಬೇಕು; ಕೇಳುವಕಿವಿ ಬೇಕು; ಸವಿವಮನ ಬೇಕು. ಅಂದರೆ ಬಾಳು ಬೆಳಗುತ್ತದೆ: ಬದುಕು ಸಾರ್ಥಕವಾಗುತ್ತದೆ. "ಸವಿಯದಿರೆ ನೋಡದಿರೆ, ಕೇಳದಿರೆ, ಬದುಕಿದ್ದರೂ ನಾವು ಸತ್ತಂತೆ!"

ಮಲೆನಾಡಿನ ಜನಜೀವನವೂ ವೈಶಿಷ್ಟ್ಯಪೂರ್ಣವಾಗಿದೆ. ಇಲ್ಲಿ ಹಳ್ಳಿಗಳೆಂದರೆ ಒಂದು ಮನೆಯ ಊರು. ಒಂದು ಮನೆಯೇ ಒಂದು ಪುಟ್ಟ ಕೋಟೆಯಂತಿರುತ್ತದೆ. ಹೆಗ್ಗಡೆ, ಗೌಡ, ಸಾಹುಕಾರ ಮತ್ತು ಪಟೇಲರ ಮನೆಗಳು ಮಾತ್ರ ಹೆಂಚಿನವು: ಒಕ್ಕಲುಗಳಿಗೆ ಹುಲ್ಲು ಮನೆ; ಕೂಲಿಯಾಳುಗಳಿಗೆ ಗುಡಿಸಲು. ಮನೆಯಲ್ಲಿ ಸ್ವಚ್ಛತೆಗೆ ಸ್ಥಾನವಿಲ್ಲ. ಮನೆಯ ಮುಂಭಾಗದಲ್ಲಿ ದನದ ಕೊಟ್ಟಿಗೆ, ಕೋಳಿ, ಕುರಿ, ಹಂದಿಗಳ ಒಡ್ಡುಗಳಿರುತ್ತವೆ. ಕೋಳಿ, ನಾಯಿ, ದನ ಕರು, ಹೇಂಟೆ, ಹಂದಿಮರಿಗಳ ಗಲಾಟೆ, ಗಲೀಜುಗಳೇ ಸ್ವಾಗತ, ನೀಡುತ್ತವೆ. ಹಿತ್ತಲ

ಕಡೆಗೂ ಕೋಳಿ, ನಾಯಿಗಳ ಅಲೆದಾಟ; ಕಿರುಚಾಟ. ಅಲ್ಲಲ್ಲಿ ಮಾಂಸದ ತುಂಡುಗಳು, ಕೂದಲು ಮುದ್ದೆಗಳು ಬಿದ್ದಿರುತ್ತವೆ. ಅಂಗಳಕ್ಕೆಲ್ಲ ರಕ್ತರಂಜಿತ ತಾಂಬೂಲದುಗುಳಿನ ಅಲಂಕಾರ. ನೊಣಗಳಂತೂ ಗೊಮ್ಮೆಂದು ಮುಖವನ್ನೇ ಮುತ್ತುತ್ತವೆ.

ಹೆಗ್ಗಡೆಯರು, ಗೌಡರು, ಸಿರಿವಂತರು, ತೋಟ ಗದ್ದೆಗಳುಳ್ಳ ಜಮೀನುದಾರರು, ಒಕ್ಕಲು, ಆಳುಗಳಿಂದ ಬೇಸಾಯದ ಕೆಲಸ ಮಾಡಿಸಿಕೊಂಡು, ಬಡ್ಡಿ ವ್ಯವಹಾರ, ಊರ ಹಿರಿತನಗಳನ್ನು ನಿರ್ವಹಿಸುವರು; ವಿಲಾಸಜೀವಿಗಳು. ಭೋಗಕ್ಕೆ ಹೆಣ್ಣು, ಬೊಜ್ಜಿಗೆ ಕಳ್ಳು ಇರಬೇಕು. ಹಣದ ಜಂಭ ಬಹಳ. ತಮ್ಮ ಪ್ರತಿಷ್ಠೆಗೆ ಕುಂದು ಬಂದರೆ ಸಹಿಸರು. ತಮ್ಮ ಮೂಗಿನ ನೇರಕ್ಕೆ ಬಾಳಬೇಕೆಂಬ ಅಭಿಮಾನಧನರು. ದಾಯಾದಿಗಳಲ್ಲಿ ಪೈಪೋಟಿ ನಡೆಯಿಸುವುದು ಸ್ವಾಭಾವಿಕ. ದೇವರು, ಧರ್ಮ, ದೆವ್ವಗಳಲ್ಲಿ ಅಚಲ ಶ್ರದ್ಧೆಯುಳ್ಳವರು. ಸಂಪ್ರದಾಯಪ್ರಿಯರು. ಆದರಾತಿಥ್ಯಕ್ಕೆ ಹೆಸರಾದವರು.

ಇವರ ಹೆಣ್ಣುಮಕ್ಕಳು ಸೊಂಟಕ್ಕೆ ಸೀರೆ ಸುತ್ತಿ, ಗೊಬ್ಬೆ ಸೆರಗು ಹೊದೆಯುವರು. ಕುಂಕುಮ ಹಚ್ಚಿಕೊಳ್ಳುತ್ತಾರೆ. ತುಳಸೀಪೂಜೆ ಮಾಡುತ್ತಾರೆ. ಬುಗುಡಿ, ಅಡ್ಡಿಕೆ, ಬಳೆಕಡಗ, ಕಾಲುಂಗುರ ಇತ್ಯಾದಿ ಆಭರಣಗಳನ್ನು ಧರಿಸುವರು. ದಿನಾಲು ಮನೆಕೆಲಸ, ಪತಿಸೇವೆಗಳ ಜೊತೆಗೆ ಆಳು-ಕಾಳುಗಳ ಹೊಟ್ಟೆ ನೆತ್ತಿ ನೋಡಿಕೊಳ್ಳುವುದು ಗೃಹಿಣಿಯ ಕರ್ತವ್ಯ. ಗಂಡನ ದೃಷ್ಟಿಯಲ್ಲಿ ಹೆಂಡತಿ ಕೇವಲ ಉಪಭೋಗದ ವಸ್ತು. ಅವಳಿಗೆ ಕೌಟುಂಬಿಕ ಜೀವನದಲ್ಲಿ ಯಾವ ಸ್ಥಾನವೂ ಇಲ್ಲ. ಅವಳ ಮಾತಿಗೆ ಬೆಲೆಯಿಲ್ಲ. ಹೇಳಿದಂತೆ ಕೇಳಿಕೊಂಡು ಬಿದ್ದಿರಬೇಕಾದ ಮೂಕಜೀವಿ.

ಎತ್ತಿನ ಕಮಾನು ಗಾಡಿ ಪ್ರವಾಸ, ಹೆಂಚಿನ ಮನೆಯವರದೇ ಹಕ್ಕು. ಇವರಲ್ಲಿ ಮದುವೆ ಸಮಾರಂಭ ಅದ್ದೂರಿಯಿಂದಲೇ ನಡೆಯುತ್ತದೆ. ಮದುವೆಯ ಆಹ್ವಾನ ಪತ್ರಿಕೆಗಳನ್ನು ಹಂಚುತ್ತಾರೆ. ಮದುಮಕ್ಕಳಿಗೆ ಬಾಸಿಂಗಕಟ್ಟಿ,ಗುಂಡಿನ ಸರಹಾಕಿ, ದಂಡಿಗೆಯಲ್ಲಿ ಕೂಡಿಸಿ ಮೆರವಣಿಗೆ ಮಾಡುತ್ತಾರೆ. ವಾಲಗ, ಕದನಿ, ಕೊಂಬು ತಂಬಟೆಗಳ ಗದ್ದಲಕ್ಕೆ ಗರ್ನಾಲು, ಬಿರುಸು, ಸುರ್ ಸುರ್ ಬಾಣ, ಮದ್ದು - ಗುಂಡುಗಳ ಆರ್ಭಟೆ ಸೇರಿ ಕಿವಿ ಗಡಚಿಕ್ಕುತ್ತವೆ. ಹೋಳಿಗೆ, ಕಡಬು ಮೊದಲಾದ ಸಿಹಿಯೂಟದ ಜೊತೆಗೆ ಮಾಂಸದ ಮೃಷ್ಟಾನ್ನವೂ ಇರುತ್ತದೆ; ನಂಜಿಕೊಳ್ಳಲು ಸ್ವಾರ್ಲುಮೀನಿನ ಚಟ್ನಿ ಬೇರೆ. ನೀರಿಳಿಯದ ಗಂಟಲಲ್ಲಿ ಕಡುಬನ್ನು ನೂಕಲು ಕಳ್ಳು ನೀರಾಗಿ ನೆರವಾಗುತ್ತದೆ. ಅಳಿಯ ಸಂತಾನದ ಕುಟುಂಬ ಪದ್ಧತಿಯು ಪ್ರಚಲಿತವಿದೆ.

## ನೈತಿಕ ಅಧಃಪತನ

ಬ್ರಾಹ್ಮಣ ವರ್ಗವು ಪ್ರತಿಷ್ಠಿತ ಗುಂಪು. ಪೂಜೆ ಧಾರ್ಮಿಕ ಕ್ರಿಯೆಗಳು, ಯಂತ್ರ-ಮಂತ್ರಗಳನ್ನು ಮಾಡಿಕೊಡುವುದು, ಜೋತಿಷ್ಯ ಹೇಳುವುದು, ಕೆಲಮಟ್ಟಿನ ವೈದ್ಯಕೀಯವನ್ನೂ ಮಾಡುವುದು —ಇವರ ಮುಖ್ಯ ಉದ್ಯೋಗಗಳು. ಬೇರೆ ಜಾತಿಯವರನ್ನು ಮುಟ್ಟಿಸಿಕೊಳ್ಳುವುದಿಲ್ಲ. ಬ್ರಾಹ್ಮಣನಿಗೆ ಯಾವುದೇ ಬಗೆಯ ಅಪಮಾನಗೊಳಿಸುವುದು, ಚೇಷ್ಟೆ ಮಾಡುವುದು ಪಾಪಕಾರಕವೆಂದೇ ಉಳಿದ ವರ್ಗದವರ ದೃಢ ನಂಬುಗೆ. ಗೌಡ – ಹೆಗ್ಗಡೆಯರಿಗೂ ನಡುಮನೆಯಲ್ಲಿಯೇ ಊಟಕ್ಕೆ ಹಾಕುತ್ತಾರೆ. ಬ್ರಾಹ್ಮಣ ಸ್ತ್ರೀಯರು ಮಾತ್ರ ಕಚ್ಚೆ ಹಾಕಿ ಸೀರೆಯುಡಬೇಕೆಂಬ ಪರಂಪರೆ ಬಹುಕಾಲದಿಂದ ನಡೆದು ಬಂದಿದೆ.

ಒಕ್ಕಲುಗಳೆಂದರೆ – ಒಂದೊಂದು ಗೌಡರ ಅಥವಾ ಹೆಗ್ಗಡೆಯರ ಮನೆತನದ ಬೇಸಾಯ, ಊಳಿಗಗಳನ್ನು ತಲೆತಲಾಂತರವಾಗಿ ಮಾಡುತ್ತ ಬಂದವರು. ಇವರು ದುಡಿಯಬೇಕು; ತಿನ್ನಬೇಕು. ಹೆಚ್ಚಿನ ಗಳಿಕೆಯಿಲ್ಲ. ಒಕ್ಕಲು ಹೆಣ್ಣುಗಳಿಗೆ ಮೊಳಕಾಲು ಮುಚ್ಚುವಷ್ಟು ಬಟ್ಟೆಯಾದರೆ ಸಾಕು. ಬಿರಾಂಬರು ಉಟ್ಟ ಹಾಗೆ ಸೀರೆ ಉಟ್ಟರೋ ಅಂತಹರ ಮನೆ ತೊಳೆದೇ ಹೋಗುತ್ತದೆಂಬ ಭಯ.

ಮೇಲೆ ಹೇಳಿದ ವರ್ಗದ ಜನಗಳಲ್ಲದೆ, ಹಳೆಪೈಕದವರು, ಬೇಲರು, ಮಾದಿಗರು, ಬಿಲ್ಲವರು, ಹಸಲವರು, ಕರಾದಿಯವರು ಮೊದಲಾದ ಕೆಳವರ್ಗದವರೂ ಉಂಟು. ಬಡತನವೇ ಇವರ ಬಾಳುವೆ. ಸಾಲದ ಶೂಲ ತಪ್ಪಿದ್ದಲ್ಲ. ಆಹಾರಕ್ಕಾಗಿ ಕೂಲಿ ಮಾಡುವರು; ಬೇಟೆಯಾಡುವರು; ಮೀನು, ಏಡಿಗಳನ್ನು ಹಿಡಿಯುವರು. ಬಗನಿಕಳ್ಳನ್ನು ಇಳಿಸಿ, ತಾವೂ ಕುಡಿದುಳಿದುದನ್ನು ಮಾರುವರು. ಶ್ರೀಮಂತರ ಬಾದ್ದಂಬುಲಕೆ ಕೈಯಾನುವುದೇ ಇವರ ದೀನ ಬಾಳಿನ ಹೀನ ಸ್ಥಿತಿ. ಮೇಲು ವರ್ಗದವರಲ್ಲಿಯೇ ಕೆಲಮಟ್ಟಿಗೆ ಅಭಾವವಾಗಿರುವ ನೈತಿಕ ಮಟ್ಟ, ಈ ಜನರಲ್ಲಿ ಇನ್ನೂ ಕೆಳಕ್ಕಿಳಿದಿರುತ್ತದೆ. ಅವಾಚ್ಯ ಮಾತು ನಿತ್ಯದ ರೂಢಿ. ಸಿರಿವಂತರು ಈ ಜನರನ್ನು ಕಳ್ಳತನದಿಂದ ನಾಟಾ ಕಡಿಸಿ ಸಾಗಿಸುವುದು, ಇನ್ನೊಬ್ಬರು ಕಟ್ಟಿದ ಕಳ್ಳನ್ನು ತುಡುಗು ಮಾಡುವುದು, ಕಳವು ಮಾಡಿಸುವುದು ಮೊದಲಾದ ಹೀನಕೃತಿಗಳಿಗೆ ಉಪಯೋಗಿಸಿಕೊಳ್ಳುವರು; ತಮಗೆ ಆಗದವರ ಮೇಲಿನ ಸೇಡು ತೀರಿಸಿಕೊಳ್ಳುವರು; ದ್ವೇಷ ಸಾಧಿಸುವರು. ಕೆಳವರ್ಗದ ಹೆಂಗಸರಿಗೆ ಮರ್ಯಾದೆ ಮುಚ್ಚುವಷ್ಟು ಬಟ್ಟೆಯಾದರೆ ಸಾಕು. ಸೊಂಟಕ್ಕೆ ಸುತ್ತಿದ ಕಿರಿಬಟ್ಟೆಯ ತುದಿಯೊಂದು ಎದೆ ಮುಚ್ಚಲು ಯತ್ನಿಸುತ್ತದೆ. ಕುಪ್ಪಸವನ್ನಂತೂ ಕಂಡೇ ಅರಿಯರು. ಗಂಡಸರು ಕೌಪೀನಧಾರಿಗಳಾಗಿರುವದೇ ಹೆಚ್ಚು. ಕುಚ್ಚಲಕ್ಕಿ ಗಂಜಿ, ಅಂಬಲಿ, ಮಾಂಸ, ಮೀನು, ಏಡಿ, ಹಸಿ ಮೆಣಸಿನಕಾಯಿ ಇವರ ಸಾಮಾನ್ಯ ಆಹಾರ.

ಮಲೆಯಮಕ್ಕಳು ಜಾತಿಯ ಕಟ್ಟುನಿಟ್ಟುಗಳನ್ನು ಪಾಲಿಸುವ ನಿಷ್ಠಾವಂತರು. ಅಂತರ್‌ಜಾತೀಯ ವಿವಾಹ ಸಲ್ಲದು. ಅನಧಿಕೃತ ಗಂಡು-ಹೆಣ್ಣಿನ ಸಂಬಂಧ ಮುಚ್ಚುಮರೆಯಾಗಿ ನಡೆಯುತ್ತದೆ. ಹೆಗ್ಗಡೆಯರು, ಗೌಡರು ಹೊಲಗೇರಿಗೆ ನುಗ್ಗಿದರೆ, ದೆಯ್ಯ, ದ್ಯಾವರಿಗೆ ಮುಟ್ಟುಚಟ್ಟಾಗುತ್ತದೆ; ಅವು ಕೇರಿಗೆ ಕೇರೀನೇ ತೆಗೆದುಬಿಡುತ್ತವೆ ಎಂಬ ವಿಶ್ವಾಸ.

ಮಲೆನಾಡಿನಲ್ಲಿ ಶಿಕ್ಷಣದ ಪ್ರಸಾರವೂ ಅಷ್ಟಕ್ಕಷ್ಟೆ. ಗಂಡು ಹುಡುಗರಿಗೆ ವ್ಯವಹಾರಕ್ಕೆ ಬೇಕಾಗುವಷ್ಟು ಓದು ಬರಹ ಬಂದರೆ ಸಾಕು. ಹೆಂಗಸರು ಓದು ಕಲಿಯುವುದು ಗಂಡಸರು ಸೀರೆಯುಡುವುದಕ್ಕಿಂತಲೂ ಹಾಸ್ಯಾಸ್ಪದವಾದುದು. ಮಕ್ಕಳಿಗೆ ಪಾಠ ಹೇಳಲೆಂದು ಐಗಳನ್ನು ಮನೆಯಲ್ಲಿಯೇ ಇಟ್ಟುಕೊಳ್ಳುವ ರೂಢಿಯಿತ್ತು. ಮನೆಯ ಮಹಡಿಯೇ ಶಾಲೆ; ಮರಳ ಮೇಲೆ ಅಕ್ಷರಾಭ್ಯಾಸ. ಹುಡುಗರಿಗೆ ಪಾಠ ಹೇಳುವ ಐಗಳಾದರೂ ಹಿರಿಯರಿಗೆ ಕೂಲಿಯಾಳುಗಳು. ಕನ್ನಡ ಜಿಲ್ಲೆಯಿಂದ ಬರುತ್ತಿದ್ದ ಐಗಳು ಕೆಲಸ ಹೆಚ್ಚಾಗಿ, ಸಂಪಾದನೆ ಸೊನ್ನೆಯಾಗಿ ಕೆಲದಿನಗಳಲ್ಲಿಯೇ ಕಾಲ್ತೆಗೆಯುವರು. ಐಗಳಿಗೂ ಪಾಠ ಹೇಳುವುದಕ್ಕಿಂತ ನಶ್ಯ ತೀಡುವುದು, ಸರಾಯಿ ಕುಡಿಯುವುದು, ಜೂಜಾಡುವುದು, ಮೊದಲಾದ ವ್ಯಸನಗಳಲ್ಲಿಯೇ ಹೆಚ್ಚಿನ ಆಸಕ್ತಿ.

## ಅಭ್ಯಂಜನದ ಸಜಾ!

'ಅಭ್ಯಂಜನ' ಮಲೆನಾಡಿನ ಒಂದು ಮಹಾಕಾರ್ಯ. ಕ್ರಾಂತಿಯ ವಿಷಯ. ಮಕ್ಕಳಿಗೆ ಭಾನುವಾರ ರಜಾ ಆದರೂ, ಅಭ್ಯಂಜನದ ಸಜಾ ತಪ್ಪದು. ಇಲ್ಲಿನ ಅಭ್ಯಂಜನವೆಂದರೆ ಎಣ್ಣೆಸ್ನಾನದ [illegible]. ವಾರಕ್ಕೊಮ್ಮೆ ಇದನ್ನು ಮಾಡುತ್ತಿದ್ದರೆ ಅಮೃತತ್ವ ಲಭಿಸುವುದೆಂದೇ ಹಿರಿಯರ ತಿಳುವಳಿಕೆ. ಮನೆಯಲ್ಲಿ ಸ್ನಾನದ ಇಲಾಖೆಯೇ ಬೇರೆ. ದಗದಗ ಉರಿಯುವ ಬಡಬಾಗ್ನಿ,

ಕುವೆಂಪು ಅವರ ಜನ್ಮಸ್ಥಾನವಿದು





ಮಲೆನಾಡಿನಲ್ಲಿ ದೀಪಾವಳಿ : ಸ್ವರಕ್ಕನುಗುಣವಾಗಿ ಕುಣಿವ ಹರಿಜನರು

ನೀರು ಕಾಯಿಸುವ ಕಡಾಯಿ, ಸ್ನಾನದ ಡೋಣಿ, ಮೈಗೆಲ್ಲ ಉಜ್ಜುವ ಹರಳೆಣ್ಣೆ, ಮಧ್ಯೆ ಪಾನಕದ ಸರಬರಾಯಿ. ನೆತ್ತಿಗೆ ಎತ್ತರದಿಂದ ಸುಡುಸುಡುವ ನೀರನ್ನು ರಪರಪ ಹೊಡೆಯುವುದು ಅಭ್ಯಂಜನದ ಆಡಂಬರಗಳಾಗಿವೆ. ಅಭ್ಯಂಜನದ ನಂತರ ಮೈತುಂಬಾ ಹೊದೆದು ಮಲಗಿದರೆ, ಮೈಯೆಲ್ಲ ನೀರಿಳಿದು ಹೊಸಜೀವ ಬಂದಂತಾಗುತ್ತದೆ; ಚೈತನ್ಯ ಚಿಗುರುತ್ತದೆ.

ಮಲೆನಾಡಿಗರ ಸರ್ವಸಾಮಾನ್ಯ ಚಟಗಳೆಂದರೆ ಹೊಗೆಸೊಪ್ಪು ಸಹಿತ ಎಲೆಯಡಿಕೆ ಅಗಿಯುವುದು, ನಶ್ಯ ತೀಡುವುದು, ಕಳ್ಳು ಕುಡಿಯುವುದು, ಬೀಡಿ ಸಿಗರೇಟು ಸೇದುವುದು, ಹೆಂಗಸರೂ ಕಳ್ಳು ಕುಡಿಯುವುದು ಸಹಜ; ಸ್ವಾಭಾವಿಕ. ಇವರೂ ಗೊರಟು ಹೊಡಿ ಬೆಳ್ಳೇಡಿಗಳನ್ನು ಹಿಡಿಯುವರು. ಕಳ್ಳಂಗಡಿಯಲ್ಲಿಯೂ ಕುಡಿತ, ಕೋಳಿಕಾಂಡ; ಜೂಜು, ಜುಗಾರಿ, ಇಸ್ಪೀಟು, ಹಾದರ, ಅತ್ಯಾಚಾರಗಳಿಗೆ ಅಳತೆಯಿಲ್ಲ.

ಜನಸಾಮಾನ್ಯರು ಬೇಟೆ, ಇಸ್ಪೀಟು, ಕೋಳಿ ಅಂಕ, ಭಾಗವತರಾಟ, ತಾಳಮದ್ದಲೆ, ತೇರಿನ ಉತ್ಸವ ಮುಂತಾದ ವಿನೋದಗಳಲ್ಲಿ ತಮ್ಮ ಬೇಸರವನ್ನು ಕಳೆಯುವರು. ಐಗಳಿದ್ದ ಮನೆಗಳಲ್ಲಿ ರಾಮಾಯಣ, ಮಹಾಭಾರತ, ಗದುಗಿನ ಭಾರತ, ತೊರವೆ ರಾಮಾಯಣ, ಜೈಮಿನಿ, ಗೋವಿನ ಕಥೆಗಳ ವಾಚನ ನಡೆಯುತ್ತದೆ. ಹರಿಕಥೆಗಳೂ ಉಂಟು.

ಮಲೆನಾಡಿನ ಗೋಪಾಲಕರು ದಿಟ್ಟರು, ಗಟ್ಟಿಗರು, ಕಪ್ಪಸಹಿಷ್ಣುಗಳು. ಮೊಳಕಾಲು ಮೀರದ ಕೊಳಕು ಪಂಚೆ; ಹರಕು ಅಂಗಿ. ಸೊಂಟಕ್ಕೆ ಆ ಕಬ್ಬಿಣದ ಕೊಂಡಿಯುಳ್ಳ ಒಡಾಣದ ದಟ್ಟಿ ( ಕಬ್ಬಿಣದ ಕೊಂಡಿಯಲ್ಲಿ ಕೆಲಸದ ಕೈಗತ್ತಿ ಸಿಗಿಸುವರು.), ಹೆಗಲ ಮೇಲೊಂದು ಕಂಬಳಿ– ಇವರ ಉಡಿಗೆ. ಕೊಳಲು ದನಗಾಹಿಗಳ ಪರಮ ಗೆಳೆಯ. ಮಳೆಗಾಲದಲ್ಲಿ ಇವರ ಗೋಳು ಹೇಳಲಾಸಲ್ಲ. ದನ ತಪ್ಪಿಸಿಕೊಂಡರೆ, ಕುಡುಗು ಹೋದರೆ, ಇವರಿಗೆ ಬೈಗುಳ, ಶಿಕ್ಷೆ ತಪ್ಪವು. ಇವರದು ಸುಖ – ದುಃಖ ಮಿಶ್ರಿತ ಜೀವನ.

## ಮೂಢನಂಬಿಕೆಗೆ ತವರೂರು

ದೇವರು, ದೆಯ್ಯ, ಭೂತ, ಪಿಶಾಚಿ, ಜೋತಿಷ್ಯಗಳಲ್ಲಿ ಇಲ್ಲಿನ ಜನರಿಗೆ ಅಲುಗಾಡದ ಆತ್ಮವಿಶ್ವಾಸ. ಯಾವ ಹೊಸಕಾರ್ಯ ಪ್ರಾರಂಭಿಸುವ ಮೊದಲು ದೇವರೆದುರು ಚೀಟಿ ಹಾಕುವರು; ಹೊತ್ತಿಗೆ ಕೇಳಿಸುವರು. ಹರಕೆ ಹೊರುವರು. ಕೆಮ್ಮು, ಶೀತ, ಗೂರ್ಲು, ಸೊಂಟನೋವು, ಜರ, ಹಸಿಬಕ್ಕೆ, ತುರಿಗಜ್ಜಿ, ಕುರು, ಆಮಶಂಕೆ, ಉಬ್ಬಸ– ಯಾವ ಬೇನೆಯಾದರೂ ಸರಿಯೇ – ಎಲ್ಲವೂ ಅಲೌಕಿಕ ಮತ್ತು ಅತೀಂದ್ರಿಯ ಶಕ್ತಿಗಳ ಚೇಷ್ಟೆಗಳಾಗಿರುತ್ತವೆ. ಭೂತದ ಭಯ ಹಿಂಗಲು, ದೆವ್ವ ಪಿಶಾಚಿಗಳ ಕಾಟ ತೀರಲು, ಅವುಗಳಿಗೆ ಪ್ರಾಣಿಬಲಿ ಕೊಡಬೇಕು, ರಕ್ತದಾನವಾಗಬೇಕು. ದೇವರ ಕೃಪೆಗೆ ಪಾತ್ರರಾಗಲು ಧರ್ಮಸ್ಥಳ, ತಿರುಪತಿ, ಸಿಬ್ಬಲುಗುಡ್ಡೆ, ಚಂದ್ರಮೌಳೇಶ್ವರ ದೇವರುಗಳಿಗೆ ಮುಡುಪು ಕಟ್ಟಬೇಕು; ಹರಕೆ ಹೊರಬೇಕು. ಇವನ್ನೆಲ್ಲ ಮಾಡಿಸುವ ಸರ್ವಜ್ಞನೇ ಜೋಯಿಸ ಮಹಾಶಯ. ದೇವ–ದೆವ್ವಗಳ ಏಜಂಟನವನು. ಅವನ ಮುಖಾಂತರವೇ ಪ್ರಾರ್ಥನೆ ಸಲ್ಲಬೇಕು; ಪೂಜೆ ಮಾಡಬೇಕು; ಬಲಿ ಬೀಳಬೇಕು. ಜೋಯಿಸನಲ್ಲಿ ಜನತೆಗೆ ಅಪಾರ ಶ್ರದ್ಧೆ, ಭಕ್ತಿ, ಅವನ ಆಜ್ಞೆ ಶಿಲಾಶಾಸನ; ಅವನಿತ್ತ ಔಷಧ ರಾಮಬಾಣ. ಆಗಾಗ ಕೆಲವರು ಡಾಕ್ಟರುಗಳಲ್ಲಿ ಹೋಗಿ ಔಷಧಿ ತರುವುದುಂಟು. ರೋಗಿ ಬದುಕಿದರೆ ದೈಯ್ಯದ ಕೃಪೆ, ಜೋಯಿಸನಿಗೆ ಮರ್ಯಾದೆ. ರೋಗಿ ಸತ್ತರೆ ಡಾಕ್ಟರನಿಗೆ ಶಾಪ. ವಿಲಕ್ಷಣ ಸ್ವಭಾವದ ಮಕ್ಕಳಿಗೆ ಬುದ್ಧಿ ಕಲಿಸಲೆಂದು 'ಸಿದ್ದೆಗುಮ್ಮ' (ಮೆಣಸಿನಕಾಯಿ ಹೊಗೆ) ಹಾಕುತ್ತಾರೆ; ತೆಂಗಿನಕಾಯಿ ಮಂತ್ರಿಸುತ್ತಾರೆ.

ಗಟ್ಟದ ಕೆಳಗಿನ ಸೇರೆಗಾರರು, ಸಾಬಿಗಳು ಕಂತ್ರಾಟು ಕೆಲಸ, ವ್ಯಾಪಾರಗಳಿಗೆಂದು ಬಂದು ಸ್ವಾರ್ಥ ಸಾಧಿಸಿಕೊಳ್ಳುವರು. ಸೇರೆಗಾರರಿಗೆ ಸೆರೆಯ ಜೊತೆಗೆ ಸ್ತ್ರೀಯೂ ಅವಶ್ಯ. ಸಾಬಿಗಳು ವ್ಯಾಪಾರದ ಗತ್ತು ತಿಳಿದವರು. ಹೆಣ್ಣುಮಕ್ಕಳೊಡನೆ ಕೆಳವರ್ಗದ ಜನರೊಡನೆ ಇವರ ವ್ಯಾಪಾರ ಹೆಚ್ಚು. ಕೈಚಳಕ, ಮೋಸಗಳಲ್ಲಿ ಎತ್ತಿದ ಕೈ. ಕಳವು ಮಾಡುತ್ತಾರೆ, ಕಳವಿನ ಮಾಲನ್ನು ಕೊಂಡು ದಕ್ಕಿಸಿಕೊಳ್ಳುತ್ತಾರೆ. ಶ್ರೀಮಂತರ ಬಾಲ ಬಡಿದು ಬಡವರನ್ನು ಚಬಕದಿಂದ ಹೆದರಿಸಿಕೊಂಡು ಸಾಬಿಗಳು ಪುಂಡರಾಗಿರುವರು. ಹೆಣ್ಣು ಹೆಂಡಗಳ ಆಶೆ ವಾಸನೆಗಳಿಗೆ ಮೂಗೆಳೆಯುವವರು. ದಯೆ ಇವರ ಕೋಶದಲ್ಲಿಲ್ಲ.

ಇತ್ತೀಚೆ ಸಹ್ಯಾದ್ರಿಯ ಸೆರಗಿಗೆ ಪ್ರಗತಿಯ ಗಾಳಿ ತಾಗಿದೆ. ನಾಗರಿಕತೆ ಸುಳಿದಾಡುತ್ತಿದೆ. ಕಿರಿಸ್ತಾನರು ಕಾಲಿರಿಸಿದ್ದಾರೆ. ಹಿಂದು ಧರ್ಮವನ್ನು ಹೀಗಳೆದು ಮಾನವ ಕುಲವನ್ನೇ ಮೇಲೆತ್ತುವ ಗುತ್ತಿಗೆ ಹೊತ್ತವರಂತೆ ಇವರ ಪ್ರಚಾರ-ನಡತೆ. ಕ್ರಿಸ್ತಮತ ಪ್ರಚಾರಕ್ಕಾಗಿ ಪುಕ್ಕಟೆ ದವಾಖಾನೆ, ಇಸ್ಕೂಲುಗಳನ್ನು ತೆರೆದರು. ಕಾಫಿ, ಸಿಗರೇಟುಗಳನ್ನು ಪ್ರಚಾರ ಮಾಡಿದರು. ಬೈಸಿಕಲ್ಲನ್ನು ಓಡಿಸಿದರು. ಪಾದ್ರಿಗಳ ಬೋಧನೆಗೆ ಬಲಿಬಿದ್ದ ಶ್ರೀಮಂತ ಯುವಕರು, ಜುಟ್ಟು ಕತ್ತರಿಸಿ ಕ್ರಾಪು ಬಿಟ್ಟರು. ಬೈಸಿಕಲ್ ಹತ್ತುವ ಸಾಹಸಕ್ಕಿಳಿದರು. ಬಾಯಿಗೆ ಸಿಗರೇಟು, ಹೊಟ್ಟೆಗೆ ಕಾಫಿ. ಮನೆಯಲ್ಲಿಯ ಮುಗ್ಧ ಹೆಂಡತಿಯನ್ನು ಕಡೆಗಣಿಸಿದರು. 'ಡೈವೋರ್ಸ್'ಗೂ ಸಿದ್ಧರಾದ ಶೂರರು. ಆದರೆ ಕಾಯಿದೆಯ ಮೇರೆಗೆ ಮತಾಂತರ ಹೊಂದಿದರೆ ಆಸ್ತಿಯ ಹಕ್ಕು ದೊರೆಯದೆಂದು ಅಂಜಿ ತೆಪ್ಪಗಾಗಿರುವರು. ಬಹುಸಂಖ್ಯೆ ಜನರಿಗೆ ಪಾದ್ರಿಗಳ ವಾದ ಹಿಡಿಸಲಿಲ್ಲ; ತಮ್ಮ ಧರ್ಮ, ನಂಬಿಕೆಗಳನ್ನು ಬಿಡಲು ಒಪ್ಪಲಿಲ್ಲ. ಈ ಜನರು ಕಿರಿಸ್ತಾನರೆಂದರೆ ತಮ್ಮಲ್ಲಿಯ ಹೊಲೆಯರಕ್ಕಿಂತಲೂ ಕೀಳೆಂದೇ ಬಗೆದರು. ಸುಧಾರಣೆಯ ಸಂಕೇತಕ್ಕಾಗಿ ಹಣತೆಯ ಬದಲು ಲಾಟೀನು, ಕಂದೀಲು ಬಂದವು. ಬೆಂಕಿಪೊಟ್ಟಣ ಬಹಳ ಅಪರೂಪವಸ್ತು. ಆಸ್ಪತ್ರೆ, ಸ್ಕೂಲು, ಪೋಸ್ಟಾಫೀಸು ಪ್ರಾರಂಭವಾಗಿವೆ. ಅಂಗಡಿಗಳು ತೆರೆದಿವೆ. ವಿದ್ಯಾರ್ಜನೆಯ ಹಂಬಲ ಹಬ್ಬಿತು. ಪಟ್ಟಣಗಳಿಗೆ ಹೋಗಿ ವಿದ್ಯೆ ಕಲಿತುಬಂದವರು ಮೂಢ ಜನತೆಗೆ ಬುದ್ಧಿ ಹೇಳತೊಡಗಿದರು. ಅನೀತಿ, ಅತ್ಯಾಚಾರ, ಪ್ರಾಣಿಬಲಿಗಳನ್ನು ಖಂಡಿಸಿದರು. ಸಮಾಜ ಸುಧಾರಣೆಗೆ ಟೊಂಕ ಕಟ್ಟಿದರು. ರಸ್ತೆಗಳು ರೂಪುಗೊಂಡವು. ಮೋಟಾರು, ಬಸ್ಸುಗಳ ಓಡಾಟ ಸುರುವಾಯಿತು. ಖಾದಿ ಪ್ರಚಾರವೂ ಕೇಳಿಸಿತು. ಮೂಢಾಚಾರಗಳು ಮೂಲೆಗುಂಪಾಗತೊಡಗಿದವು. ಹೊಸತನದ ಗಾಳಿಗೆ ಜನತೆ ಹಿತವಾಗಿ ಮೈಯೊಡ್ಡಿತು; ಜೀವನ ಸೌಲಭ್ಯಗಳಿಗೆ ಮನ ಒಲಿದಿತು.

ಮಲೆನಾಡಿನ ಪೂರ್ವ ದಿಗಂತದಲ್ಲಿ ಜ್ಞಾನಕಿರಣ ಮೂಡಿದೆ, ನವಜೀವನದ ಕ್ರಾಂತಿ ಕೈಮಾಡಿ ಕರೆಯುತಿದೆ.

"ಕಣ್ತೆರೆಯಿರಿ ನವಕಾಂತಿಗೆ, ಶಾಂತಿಗೆ

ಓ ಕ್ರಾಂತಿಯ ಪುತ್ರರೆ ಬಾಳಿ"

(ಶ್ರೀ ಕುವೆಂಪುರವರ ವಿವಿಧ ಕೃತಿಗಳ ಆಧಾರದಿಂದ)

# ಮಲೆನಾಡು ಜಾನಪದ ಸಾಹಿತ್ಯದ ಮುಖಗಳು

ಪ್ರಕೃತಿಯ ಋತುಮಾನದ ಬದಲಾಣೆಯನ್ನನುಸರಿಸಿದ ಮಲೆನಾಡಿನ ಕೃಷಿ ಜೀವನ ಸಾಹಿತ್ಯದ ಮೇಲೆ ಹೆಚ್ಚು ಪ್ರಭಾವ ಬೀರಿದೆ. ಮಲೆನಾಡಿನ ಪ್ರಕೃತಿ, ಜನಜೀವನ, ಸಂಸ್ಕೃತಿ, ಕಲೆಗಳನ್ನು ಪ್ರತಿಬಿಂಬಿಸುವ ಮಲೆನಾಡಿನ ಜಾನಪದ ಸಾಹಿತ್ಯ ದರ್ಶನವಿಲ್ಲಿದೆ.

ಮಲೆನಾಡಿನ ಜಾನಪದ ಜೀವನದಲ್ಲಿ ಪ್ರಕೃತಿ, ನೆಲ, ಜಲ, ಬೆಳೆಗಳಿಗೆ ಪ್ರಾಧಾನ್ಯವಿರುವುದು ಆಶ್ಚರ್ಯವಲ್ಲ. ಏಕೆಂದರೆ ಇಲ್ಲಿ ಋತುಮಾನಗಳು ನಿಗದಿಯಂತೆ ಬದಲಾವಣೆಯಾಗುವುವು. ಆಯಾ ಋತುಗಳಿಗೆ ನಿರ್ದಿಷ್ಟವಾದ ಚಿತ್ರರಂಜಿತ ಭೇದಗಳಿವೆ. ಉದಾಹರಣೆಗೆ ಇಲ್ಲಿನ ಮಳೆಗಾಲ ಜೂನಿನಲ್ಲಿ ಆರಂಭವಾಗುತ್ತದೆಂಬುದು ಅನಾದಿಯಿಂದ ಅನುಭವಸಿದ್ಧವಾದ ಜಾನಪದ ಪ್ರಜ್ಞೆಯಾಗಿದೆ. ಮಳೆಯಾರಂಭದ ದಿನಗಳಲ್ಲಿ ಹಿಂದುಮುಂದಾಗಬಹುದು. ಆದರೆ ಜೂನಿನಿಂದ ಸುಮಾರು ಸಪ್ಟೆಂಬರ ತಿಂಗಳ ಅವಧಿಯಲ್ಲಿ ಭೋರೆನ್ನುವ ಜಡಿಮಳೆ ಬಂದೇ ಬರುವುದು. ಈ ವರ್ಷಾಋತುವಿಗೂ ಇತರ ಋತುಗಳಿಗೂ ಇರುವ ಭೇದವನ್ನು ಇಲ್ಲಿ ವರ್ಣಿಸುವ ಅವಶ್ಯವಿಲ್ಲ. ಮಳೆಯು ಆರಂಭವಾಗುವವರೆಗೆ ನೆಲವೆಲ್ಲ ಒಣಗಿ ಹೋಗಿರುತ್ತದೆ. ಎಲ್ಲೆಡೆಯೂ ಧೂಳು, ಹುಲ್ಲು ನಿಸ್ಸಂತಾನವಾಗಿರುತ್ತದೆ. ಮರ-ಸಸಿಗಳು ಹೇಗೋ ಜೀವತಾಳಿ ನಿಂತಿದ್ದರೂ ಅವುಗಳ ಎಲೆಗಳ ಮತ್ತು ಹೂಗಳ ವೈಭವ ಬಹಳ ಮಟ್ಟಿಗೆ ಕಳೆಗುಂದಿರುತ್ತದೆ. ಜನರೆಲ್ಲ ಸೆಕೆ ಸೆಕೆ ಎನ್ನುತ್ತ ಮಳೆಗಾಗಿ ಚಾತಕ ಪಕ್ಷಿಯಂತೆ ಬಾಯ್ಬಿಡುತ್ತಾರೆ. ರೈತರಂತೂ ಭತ್ತ ಮೊಳಕೆಯನ್ನು ಸ್ಫೋಟಿಸಿ ಸಸಿಯಾಗುವ ಅನುಕೂಲ ವಾತಾವರಣವನ್ನು ನಿರೀಕ್ಷಿಸುತ್ತಿದ್ದಾರೆ. ಕೆಲವು ಕಡೆ ಬಾವಿಯ ನೀರು ಬತ್ತಿ ಹೋಗಿ ಕುಡಿಯುವ ನೀರಿಗೂ ಕೊರತೆಯಾಗುತ್ತದೆ. ಅಶ್ವಿನಿ, ಭರಣಿ, ಕೃತ್ತಿಕಾ ಎಂದು ಮಹಾನಕ್ಷತ್ರಗಳ ಲೆಕ್ಕ ಹಾಕುತ್ತಿದ್ದಾರೆ. ಪುಷ್ಯಾ ನಕ್ಷತ್ರದ ಮಳೆಯಲ್ಲಿ ಬೆಕ್ಕಿನ ಹೆಣವನ್ನು ಕೂಡಾ ಹೂಳಲು ಆಗದೆನ್ನುತ್ತದೆ ಪೂರ್ವದ ಅನುಭವಸಿದ್ಧ ನಾಣ್ಣುಡಿ. ಕೃತ್ತಿಕಾ ನಕ್ಷತ್ರದಲ್ಲಿ ಮಳೆ ಬರಬಾರದಂತೆ: ಕೃತ್ತಿಕೆಯಲ್ಲಿ ಬಿಸಿಲು ಬೀಳಬೇಕಂತೆ. ಕೃತ್ತಿಕೆಯ ಹಿಂದೆಯೇ ಮಳೆ ಬಂದರೆ ರೈತರಿಗೆ ಸಮಾಧಾನ- ಏಕೆಂದರೆ ಆಗ ಭತ್ತದ ಮೊಳಕೆ ಸಸಿಯಾಗಿ ಬಲಿಯುತ್ತದೆ. ಆದರೆ ಆಗ ಒಂದೇ ಸವನೆ ಮಳೆ ಬಿದ್ದರೆ ಆ ಸಸಿ ಹಾಳಾಗುತ್ತದೆ.

## ಪ್ರಕೃತಿ ವೈಚಿತ್ರ್ಯ

ಹೀಗೆ ಭೂಮಿ ಪಸೆಯನ್ನು ಕಳೆದುಕೊಂಡು, ಜನರು ಕೂಡಾ ಸೆಕೆಯಿಂದ ಬಳಲುತ್ತಿರುವಾಗ ಒಮ್ಮೆಲೇ ಆಕಾಶದಲ್ಲಿ ಕಾರ್ಮೋಡಗಳು ಕಲೆಯುತ್ತವೆ. ಗಾಳಿ ಬಿರುಗಾಳಿಯಂತೆ ಬೀಸಲು ಆರಂಭವಾಗುತ್ತದೆ. ಮಿಂಚುಗಳು ಚಿಮುಕತೊಡಗುತ್ತವೆ. ಬಂದೂಕಗಳನ್ನು ಹಾರಿಸಿದಂತೆ ಸಿಡಿಲು ಗುಡುಗತೊಡಗುತ್ತದೆ. ಒಮ್ಮೆಲೇ ಮಳೆ ಭೋರಿಡುತ್ತ ಬರುತ್ತದೆ. ಒಂದೆಡೆ ಅದು ದೇಹವನ್ನು ತಂಪುಮಾಡಿದರೆ, ಇನ್ನೊಂದೆಡೆ ಒಣಗಿದ ಮಣ್ಣಿನ ಮೇಲೆ ಅದರ



ಕೊಡಗಿನ ನಾರಿಯರ ಉರವ್ಯ ನೃತ್ಯ

ಹನಿ ಬಿದ್ದು ಹೊರಡುವ ವಾಸನೆ ಮೂಗಿನ ಸೊಳ್ಳೆಗಳಲ್ಲಿ ಸೇರುತ್ತದೆ. ಮಲೆನಾಡಿನ ಜನರಿಗೆ, ಅದರಲ್ಲೂ ರೈತರಿಗೆ ಇದೊಂದು ಅವರ್ಣನೀಯವಾದ ಅನುಭವ. ಪ್ರಕೃತಿಯ ಅದ್ಭುತವು ನಿಯಮಿತವಾಗಿ, ಸ್ಪಷ್ಟವಾಗಿ ಜನರಿಗೆ ತೋರುತ್ತದೆ. ಹೀಗೆ ಮಳೆ ಸುರುವಾಗುವುದೇ ತಡ. ಬಗೆಬಗೆಯ ಕೀಟಗಳ ಗಾನ ಆರಂಭವಾಗುತ್ತದೆ. ಕಪ್ಪೆಗಳು ಎಲ್ಲಿಂದಲೋ ಪ್ರತ್ಯಕ್ಷವಾಗಿ ಗುಟುರು ಹಾಕಲಾರಂಭಿಸುತ್ತವೆ. ಮರಗಳ ಎಲೆಗಳು ಹಸಿರಾಗಿ ಚಿಗುರತೊಡಗುತ್ತವೆ. ಕಂದು ಬಣ್ಣದ ಭೂಮಿಯಲ್ಲಿ ಹುಲ್ಲಿನ ಚಿಗುರು ಹಚ್ಚಡ ಹೊದಿಸಿದಂತೆ ರಂಜಿಸತೊಡಗುತ್ತದೆ. ಗುಡ್ಡಗಾಡುಗಳಲ್ಲಿ ಕೂಡಾ ಚಿಕ್ಕ ಚಿಕ್ಕ ತೊರೆಗಳು ಜುಳು ಜುಳು, ಗುಳು ಗುಳು ಎನ್ನುತ್ತ ಹರಿಯತೊಡಗುತ್ತವೆ.

ಈ ಋತು ಬದಲಾವಣೆಯೊಡನೆಯೇ ಜಾನಪದ ಜೀವನವೂ ಹೆಣೆದುಕೊಂಡಿದೆ. ಏಕೆಂದರೆ ಮಲೆನಾಡಿನ ಮುಖ್ಯ ಬೆಳೆಯಾದ ಭತ್ತದ ಬೆಳೆಗೆ ನೀರಿನ ಅವಶ್ಯಕತೆ ಬಹಳ. ಈಗ ಇಲ್ಲಿನ ಇನ್ನೊಂದು ಪ್ರಮುಖ ಬೆಳೆಯಾಗಿರುವ ಅಡಿಕೆ ಬೇಸಾಯಕ್ಕೂ ನೀರಿನ ಪೂರೈಕೆ ವಿಪುಲವಾಗಿ ಬೇಕು. ಮಲೆನಾಡಿನಲ್ಲಿ ಹೇಳಿಕೊಳ್ಳುವಂಥ ಜಲಾಶಯ, ನೀರಾವರಿ ಯೋಜನೆಗಳೂ ಆಗಿಲ್ಲ. ಮಳೆಗಾಲದಲ್ಲಿ ಪಶ್ಚಿಮಘಟ್ಟಗಳ ಮೇಲೆ ಓತಪ್ರೋತವಾಗಿ ಸುರಿಯುವ ಮಳೆ ಪ್ರವಾಹದ ರೂಪವನ್ನು ತಾಳಿ ಅರಬಿ ಸಮುದ್ರದೊಡನೆ ಸೇರಿಕೊಳ್ಳುತ್ತದೆ. ಅದ್ದರಿಂದ ಇಲ್ಲಿ ಬೇಸಾಯ ಸಂಪೂರ್ಣವಾಗಿ ಮೇಘರಾಜನನ್ನೇ ಹೊಂದಿಕೊಂಡಿರುತ್ತದೆ: ಜಾನಪದ ಸಂಸ್ಕೃತಿಯಲ್ಲಿ ಹೀಗೆ ಪಂಚಭೂತಗಳ

– ಸೇವ ನಮಿರಾಜ ಮಲ್ಲ

ಪ್ರಭಾವ ಇಲ್ಲಿ ಹೆಚ್ಚು ಕಂಡುಬರುತ್ತಿರುವುದು ಸೋಜಿಗವಲ್ಲ.

## ಓಣಂ ಸುಗ್ಗಿ

ಕರಾವಳಿಯ ಕನ್ನಡ ಜಿಲ್ಲೆಗಳಲ್ಲೂ ಕೊಡಗಿನಲ್ಲೂ ಈ ಕೃಷಿಜೀವನದ ಮುಖಗಳನ್ನು ಹಬ್ಬಗಳನ್ನಾಗಿ, ಉತ್ಸವಗಳನ್ನಾಗಿ ಆಚರಿಸುವುದು ವಾಡಿಕೆಯಾಗಿದೆ. ಕೊಡಗಿನ ಹುತ್ತರಿ ಹಬ್ಬ ಬೆಳೆ ಕೊಯ್ದಾದ ಬಳಿಕ ಆಚರಿಸುವ ಸಂಭ್ರಮದ ಹಬ್ಬವಾಗಿದೆ. ಅವರು ದುಡಿಯನ್ನು ಬಾರಿಸಿ ಕುಣಿಯುತ್ತಾರೆ. ಈ ಹಬ್ಬದಲ್ಲಿ ಹಾಡುವ ಕಥಾಭಾಗವೂ ಕೃಷಿಯ ವಿವರಣೆಗಳಿಗೇ ಸಂಬಂಧಿಸಿದುದು: ಮಿಾಯಾರು ತಿಂಗಳ ಸಂಕ್ರಮಣದಲ್ಲಿ ಆರಂಭವಾಗುವ ಬೇಸಾಯದ ವರ್ಣನೆ ಅದರಲ್ಲಿ ಮನಮುಟ್ಟುವಂತೆ ಇದೆ. ಮೂವತ್ತಾರು ಎತ್ತುಗಳನ್ನು ಹೂಳಲು ಸಿದ್ಧಪಡಿಸುವಾಗ ಗುಡುಗು, ಆಣೆಕಲ್ಲು ಮಳೆ ಎಲ್ಲ ಭೋರಿಡುವುವು; ಮಳೆಯಲ್ಲಿ ನೆಲ ಮೆದುವಾಗಿ ಹದನಾಯಿತು. ಮುಹೂರ್ತ ಕೇಳಿ ಬೀಜ ಬಿತ್ತಿದ. ಸಸಿಗಳನ್ನು ಕೀಳಿ ನೆಡಲು ಅವನ ಪತ್ನಿ ಮಿಂದು ಮಡಿಬಟ್ಟೆಯನ್ನುಟ್ಟು, ನಂದಾದೀಪವಿಟ್ಟು, ದೇವರಿಗೆ ನಮಸ್ಕರಿಸಿ ಅಕ್ಕಿಯ ಸೇಸೆ ಹಾಕುವಳು. 'ಕಳಿ ಕಳಿ' ಎನ್ನುತ್ತ ಸಸಿಗಳನ್ನು ನಟ್ಟರು. ಮುಂದೆ ಬೇರೂರಿ ಸಸಿಗಳು ಕದಿರೊಡೆದುವು. ಕೊಯ್ಯಲು ಮುಹೂರ್ತಕ್ಕೆ ಮುಹೂರ್ತ ಕೇಳಲು ಕೇರಳದ ಚಂದ್ರಕೋಲು ಊರಿನ ಅಪ್ಪಯ್ಯ'ಓಣಂ' ದಿನವನ್ನೇ ಮುಹೂರ್ತ ಹೇಳುತ್ತಾನೆ. ಮಳೆಯಾಳಿಗಳ ಸಂಪ್ರದಾಯದ ಓಣಂ ಎಂಬ ಸುಗ್ಗಿ ಹಬ್ಬ ಹೀಗೆ ಕೊಡಗಿನ ಸುಗ್ಗಿಯೊಡನೆ ಒಂದಾಗುತ್ತದೆ.



ಮಲೆನಾಡ ಪ್ರಮುಖ ಕಲೆ—ಯಕ್ಷಗಾನ

ದಕ್ಷಿಣ ಕನ್ನಡದಲ್ಲಿ ಇಂಥ ಸುಗ್ಗಿಯಲ್ಲಿ ಬಲೀಂದ್ರ ಪೂಜೆ ನಡೆಯುತ್ತದೆ. ಮೂಲದಲ್ಲಿ ಈ ತುಳುವರ ಬಲೀಂದ್ರನಿಗೆ ವಾಮನಾವತಾರದ ಬಲೀಂದ್ರನೇ ಆಧಾರದಂತಿದ್ದರೂ ಬಲಿಯನ್ನು ಸುಗ್ಗಿಯ ಸಮಯದಲ್ಲಿ ಏಕಾಗಿ ಆರಾಧಿಸುವರೆಂದು ತಿಳಿಯದು. ಇದು ದೀಪಾವಳಿಯ ಸಮಯದಲ್ಲೇ ನಡೆಯುವ ಹಬ್ಬ. ಭತ್ತವನ್ನು ದೊಡ್ಡ ದೊಡ್ಡ ರಾಶಿಗಳನ್ನಾಗಿ ಅವುಗಳ ಮೇಲೆ ಬೂದಿಯನ್ನು ಗೆರೆಯಾಗಿ ಸುರಿಯುತ್ತಾರೆ. ರಾತ್ರಿ ಬಿದಿರಿನ ಕಡ್ಡಿಗಳ ತುದಿಗೆ ಬಟ್ಟೆ ಸುತ್ತಿ, ಎಣ್ಣೆಯಲ್ಲಿ ಮುಳುಗಿಸಿದ 'ಕೊಲ್ತಿರಿ'(ಕೊಳ್ಳಿ + ತಿರಿ?) ಬೆಂಕಿ ಹಚ್ಚಿಸಿ ಆ ರಾಶಿಗಳ ತುದಿಯಲ್ಲೂ, ಬೇರೆ ಬೇರೆ ಗದ್ದೆಗಳಲ್ಲೂ 'ಪೊಲಿ ಪೊಲಿ ಪೊಲಿ' ಎನ್ನುತ್ತ ಕುತ್ತಿಡುತ್ತಾರೆ. ಕೆಲವರ ಮನೆಯ ಮುಂದೆ ಈ ಬಗ್ಗೆ ಅಂತರ ಅಂತರವುಳ್ಳ ಮರದ ಸಣ್ಣ ದೀಪಸ್ಥಂಭವೂ ಇರುತ್ತದೆ. ಆಮೇಲೆ ತುಳುವಿನಲ್ಲಿರುವ ಬಲೀಂದ್ರನ ಸಂಧಿಯನ್ನು ಹಾಡುತ್ತಾರೆ. ನೊಗ ನೇಗಿಲುಗಳಿಗೆ ದೀಪ ಹಚ್ಚಿ, ಹೂ ಮುಡಿಸಿ ಪೂಜೆ ಮಾಡುತ್ತಾರೆ. ಅಕ್ಕಿದೋಸೆ ಮತ್ತು ಬೆಲ್ಲ ಮತ್ತು ತೆಂಗಿನಕಾಯಿ ತುರಿ ಬೆರಸಿದ ಅವಲಕ್ಕಿ ಮನೆ ಮನೆಯಲ್ಲೂ ಆಗ ಯಥೇಷ್ಟ ತಯಾರಿರುತ್ತದೆ. ಇದೇ ಸಮಯದಲ್ಲಿ ಗೋಪೂಜೆಯೂ ಮನೆಮನೆಗಳಲ್ಲಿ ಜರಗುತ್ತದೆ. ನರಕಚತುರ್ದಶಿಯಂದು ನಡೆಯುವ ತೈಲಾಭ್ಯಂಗವೂ ಇದರೊಡನೇ ಸೇರುವುದು.

## ಗೋಷ್ಠಿಗಾನ

ದಕ್ಷಿಣ ಕನ್ನಡದ ಜಾನಪದ ಸಂಸ್ಕೃತಿಯು ಒಂದಂಶ ತುಳುಭಾಷೆಯ ಸಂಧಿ, ಪಾಡ್ದನ ಮುಂತಾದ ಹಾಡುಗಳನ್ನೊಳಗೊಂಡಿದೆ. ಇದರಲ್ಲೂ ಮೊದಲ ಬೆಳೆಗೆ ಮಳೆಗಾಲದಲ್ಲಿ ಅಗೆಯಿಂದ ಭತ್ತದ ಸಸಿಯನ್ನು ತೆಗೆದು ನೆಡುವಾಗ ಹೆಚ್ಚಿನ ಹಾಡುಗಳು ಹೇಳಲ್ಪಡುತ್ತವೆ. ಕೆಲಸದಲ್ಲಿ ಭಾಗವಹಿಸುವವರು ಹೆಚ್ಚಾಗಿ ಹೆಂಗಸರು. ಇವರ ಕೆಲಸಕ್ಕೆ ಮಜೂರಿ ದೊರೆಯುವುದಾದರೂ ಹೆಚ್ಚಿನವರು ಇವರಲ್ಲಿ ಕೂಲಿಯಾಳುಗಳಲ್ಲ. ಬಹುಮಂದಿ ಸ್ವಂತ ಬೇಸಾಯವುಳ್ಳವರು. ಪಾದ ಮುಳುಗುವಷ್ಟು ಕೆಸರು ನೀರಿನಲ್ಲಿ ನಿಂತುಕೊಂಡು ತಲೆಗೆ ಅಡಿಕೆಯ ಹಾಳೆಯ "ಮುಟ್ಟಾಳೆ"ಯನ್ನು ಧರಿಸಿ, ಹಳ್ಳಿಯಲ್ಲೇ ಬಿದಿರು, ಎಲೆ ಬಿಳಲುಗಳಿಂದ ತಯಾರಾಗುವ "ಕೊರಂಬು"ಗಳನ್ನು ಇಟ್ಟುಕೊಂಡು ಮಳೆಗಾಳಿಗಳ ಮಧ್ಯೆ ಈ ಕೆಲಸವನ್ನು ಮಾಡುತ್ತಿರುತ್ತಾರೆ. ಉಭಯಕುಶಲೋಪರಿ, ಹರಟೆ ಇತ್ಯಾದಿ ಸಂವಾದಗಳು ಅವರ ಮಧ್ಯೆ ಆಗ ನಡೆಯಬೇಕಾದುದು ಸ್ವಾಭಾವಿಕವಾದರೂ ಸಂಪ್ರದಾಯದ ಕೆಲವು ತುಳುಹಾಡುಗಳನ್ನೂ ಗೋಷ್ಠಿಗಾನದ ರೂಪದಲ್ಲಿ ಹಾಡುತ್ತಾರೆ. ಇದರಲ್ಲಿ ಪಲ್ಲವಿಯನ್ನು ಎಲ್ಲರೂ ಹಾಡುವರು; ಕಥಾಭಾಗವನ್ನು ಒಬ್ಬ ವ್ಯಕ್ತಿಯೇ ಹಾಡುವುದು. ಈ ಹಾಡುಗಳಲ್ಲಿ'ಮಂಜೊಟ್ಟಿಗೋಣಾ' (ಕೋಣ)ದಂಥ ಒಂದೆರಡು ಹಾಡುಗಳು ಅಡಕವಾಗಿದ್ದರೂ ಹೆಚ್ಚಿನವುಗಳಿಗೆ ಕಥೆ ಇರುವುದಿಲ್ಲ. ಉದಾಹರಣೆಗೆ; 'ಹೋಬೇಲೆ'.

ಹೋ ಬೇಲೆ ಮಗಲಾಲ್ ದಾನೆಮಾರ್‌ತಿಂದಲ್?<br>
(ಹೋ ಬೇಲೆಯ ಮಗಳು ಏನು ಮಾರಿ ತಿಂದಳು?)<br>
ಹೋ ಬೇಲೆ ಮಗಲಾಲ್ ಓಲೆ ಮಾರ್ ತಿಂದಲ್

ಸೂತ್ರದ ಗೊಂಬೆ...



(ಹೋ ಬೇಲಿ ಮಗಳು ಓಲೆ ಮಾರಿ ತಿಂದಳು)

ಹೀಗೆ ಅವಳು ಮಾರಿತಿಂದ ವಸ್ತುಗಳ ಸರಪಣಿಯೇ ಈ ಹಾಡು. ಇದೇ ರೀತಿ "ಗೋವಿಂದ ಬದನೆ", "ಎಲಾ ಲಾಲಿ ಪಾಪುಮಾ, ಪಾತುಮಗ್ ಪಾತಿಜೇ ದೀಡಿ ಕುಪ್ಪ ಸೊ ದೆತ್ತಿಜೆ" ಮುಂತಾದ ಹಾಡುಗಳನ್ನು ಹಾಡುತ್ತಾರೆ. ಜಾನಪದ ಸಾಹಿತ್ಯದಲ್ಲೇ ಅಪರೂಪವಾಗಿರುವ ಪ್ರಾಣಿಪಕ್ಷಿಗಳನ್ನು ಸಂಬೋಧಿಸುವ ತುಳು ಹಾಡುಗಳನ್ನೂ ನಾಟಿ ಸಮಯದಲ್ಲಿ ಹಾಡುತ್ತಾರೆ; ಅಳಿಲಿನ ಬಗ್ಗೆ, "ಈ ಓಲು ಪುಟ್ಟಿಯಯ ಚಣಿಲಣ್ಣ?"(ನೀನೆಲ್ಲಿ ಹುಟ್ಟಿದೆಯೋ ಅಳಿಲಣ್ಣ?), 'ಕುವಾ ಕೂರಾಯೀ ಎಂಚಿ ನೇಟ್ ಕುಲ್ಲುದ?" ಎಂಬುದು ಕೋಕ್ಕರೆಯ ಕುರಿತಾತಾದುದು.

ತುಳು ಜಾನಪದಗೀತೆಗಳು ಬರೆಯಲ್ಪಟ್ಟವುಗಳಲ್ಲ. ಆದ್ದರಿಂದ ವೃತ್ತಿನಿರತ ಕವಿ ಸಾಹಿತಿಗಳ ಕೈವಾಡ ಇವುಗಳಲ್ಲಿಲ್ಲ. ಆದರೂ ಪ್ರಾಸ, ಲಯ, ಜಾಣ್ನುಡಿ, ಕೊಂಕುನುಡಿಗಳು ಎಲ್ಲ ಇವುಗಳಲ್ಲಿ ಚೆನ್ನಾಗಿ ಕೂಡಿಕೊಂಡಿವೆ. ತುಳುವಿನ ಸಂಧಿಗಳು ಕಥನ ಕಾವ್ಯಗಳು. ಅವುಗಳಲ್ಲಿ ನಾಗರೇ ಮುಂತಾದ ಕಥೆಗಳಿವೆ. ಹೊಲೆಯರಿಗಂತೂ ತುಳುಪಾಡ್ದನಗಳೇ ಶುಭಶೋಭನಾದಿಗಳಲ್ಲಿ ಸಂಗೀತ ಮೇಳ; ಅವುಗಳನ್ನು ಹಾಡುವಾಗ 'ದುಡಿ' ಎಂಬ ಡಮರುವಿನಂಥ ಚರ್ಮವಾದ್ಯವೊಂದೇ ಸಹಉಪಕರಣವಾಗಿದೆ.

## ಭೂತಾರಾಧನೆ

ದಕ್ಷಿಣಕನ್ನಡದಲ್ಲಿ ವಿಶಿಷ್ಟವಾಗಿರುವ ಭೂತಾರಾಧನೆಯೂ ಪುರಾತನ ಪರಂಪರೆಯದು. ಇದು ಪ್ರೇತಪೂಜೆಯ ಸಂಪ್ರದಾಯವಾದರೂ ಜನರಲ್ಲಿ ಭೂತಗಳ ಮೇಲಿನ ಶ್ರದ್ಧೆ ಬಹಳಷ್ಟು ಹೆಚ್ಚು. ಒಳ್ಳೇದಾದರೂ ಭೂತದ ಮಹಾತ್ಮೆಯನ್ನು ನೆನೆಯುವವರಿದ್ದಾರೆ; ಆದರೆ ಕೆಟ್ಟದಾದರಂತೂ ಭೂತವನ್ನು ಹಳಿಯದಿಲ್ಲ. ಮನೆಯಲ್ಲಿ ಜಾನುವಾರುಗಳಿಗೇನಾದರೂ ಆಕಸ್ಮಾತ್ ಕಾಹಿಲೆಯಾದರೆ ಭೂತಕ್ಕೆ ನಿವೃತ್ತಿ ಮಾಡುವುದು ಸಾಮಾನ್ಯವಾಗಿದೆ. ಭತ್ತದ ಪೈರಿಗೆ ರೋಗ ತಲೆದೋರಿದರೂ ಭೂತಕ್ಕೆ ಹರಕೆ ಹೇಳುವ ವಾಡಿಕೆ ಇದೆ. ಮನುಷ್ಯರ ಕಾಹಿಲೆಗಳಿಗೂ ಭೂತಗಳು ಹೇತುಗಳೆಂದು ನಂಬುವ ಜಾನಪದ ಶ್ರದ್ಧೆ ಇಲ್ಲದಿಲ್ಲ. ಭೂತಾರಾಧನೆಯನ್ನು ತುಳು ಜಾನಪದ ಸಂಸ್ಕೃತಿಯ ವೈಶಿಷ್ಟ್ಯವೆನ್ನುವುದರ ಜೊತೆಗೆ ಅದು ಜಾನಪದ ಧರ್ಮಸಂಪ್ರದಾಯಕ್ಕೂ ಸೇರಿದೆ ಎಂದರೆ ತಪ್ಪಾಗಲಿಕ್ಕಿಲ್ಲ. ಈ ಭೂತಾರಾಧನೆ ದಕ್ಷಿಣ ಕನ್ನಡದ ನೆರೆಪ್ರದೇಶಗಳಲ್ಲೂ ಇದೆ. ಚಿಕ್ಕಮಗಳೂರು, ಹಾಸನ ಮುಂತಾದ ಮಲೆನಾಡು ಭಾಗಗಳಲ್ಲಿ 'ಚವುಂಡಿ' ಭೂತದ ಪ್ರಭಾವವಿದ್ದರೆ, ಉತ್ತರ ಕನ್ನಡ ಕರಾವಳಿ ಭಾಗದಲ್ಲಿ 'ಜಟ್ಟಿಂಗ'ನ ಪ್ರತೀತಿಯಿದೆ.

ಯಕ್ಷಗಾನ ಕಲೆ ಮಲೆನಾಡಿನ ವಿಶಿಷ್ಟಕಲೆಯೆನ್ನಬಹುದು. ದೊಡ್ಡಾಟ, ಕೃಷ್ಣಪಾರಿಜಾತ ಮುಂತಾದ ಪೌರಾಣಿಕ ವಸ್ತುಗಳನ್ನೊಳಗೊಂಡ ಪೌರಾಣಿಕ ಬಯಲಾಟಗಳು ಅಲ್ಲಲ್ಲಿ ಪ್ರಚಾರದಲ್ಲಿದ್ದರೂ ಯಕ್ಷಗಾನದಷ್ಟು ಸ್ವತಂತ್ರವಾಗಿ ಸಾಹಿತ್ಯ ಮತ್ತು ಕಲೆಯ ಪರಿಪೂರ್ಣತೆಯನ್ನು ಪಡೆದ ಜಾನಪದ ಕಲೆ ವಿರಳವೆನ್ನಬಹುದು. ನೂರಕ್ಕಿಂತಲೂ ಹೆಚ್ಚು ಸಂಖ್ಯೆಯಲ್ಲಿರುವ ಯಕ್ಷಗಾನ ಪ್ರಸಂಗಗಳು ಸಾಹಿತ್ಯ ದೃಷ್ಟಿಯಿಂದಲೂ ಮೌಲಿಕ ಕೃತಿಗಳು. ಹಾಗೆಯೇ ಯಕ್ಷಗಾನದಲ್ಲಿ ಪ್ರಯೋಗಿಸಲ್ಪಡುವ ರಾಗ-ತಾಳಗಳನ್ನೂ ಕೇವಲ ಅಶಾಸ್ತ್ರೀಯ ಸಂಗೀತವೆಂದು ಕಡೆಗಣಿಸುವುದು ಸಾಧ್ಯವಿಲ್ಲ. ಇತ್ತೀಚಿನವರೆಗೆ ಹೆಚ್ಚಿನ ವ್ಯಾಪಾರೀ ಉದ್ದೇಶವಿಲ್ಲದೆ ಇದು ನಡೆಯುತ್ತ ಇರುತ್ತಿದ್ದರೂ ಕಳೆದ ದಶಕದಲ್ಲಿ ಈ ಜಾನಪದ ಕಲೆ ವ್ಯಾಪಾರಿ ಮನೋವೃತ್ತಿಯವರ ಕಪಿಮುಷ್ಟಿಯೊಳಗೆ ಸೇರಿಕೊಳ್ಳುತ್ತ ಸಾಂಪ್ರದಾಯಿಕ ಸರಳ ಮನರಂಜನೆಯ ಪರಂಪರೆಯನ್ನು ತ್ವರಿತ ಗತಿಯಲ್ಲಿ ಕಳೆದುಕೊಳ್ಳತೊಡಗಿದೆ.

ಯಕ್ಷಗಾನ ಮತ್ತು ವೇಷಹಾಕದ ತಾಳಮದ್ದಲೆಗಳು ಹಳ್ಳಿಗರಿಗೆ ಹಿಂದೆ ಮನೋರಂಜನೆಯ ಮುಖ್ಯ ಮಾಧ್ಯಮಗಳಾಗಿದ್ದವು. ಆದ್ದರಿಂದ ಹೆಚ್ಚಿನ ಯಕ್ಷಗಾನ ಬಯಲಾಟದ ಮೇಳಗಳನ್ನು ದೇವಾಲಯಗಳೇ ನಡೆಸುತ್ತಿದ್ದವು. ಆಟ ಆಡಿಸುವೆನೆಂದು ಹರಕೆ ಹೇಳುವ ಜಾನಪದ ರೂಢಿಯೂ ಇಂದು ಮಾಯವಾಗುತ್ತಲಿದೆ. ಏಕೆಂದರೆ ಈ ಮೇಳಗಳು ಜಾನಪದದ ಮಟ್ಟದಿಂದ ವ್ಯಾಪಾರೀ ಮಟ್ಟಕ್ಕೆ ಪರಿವರ್ತನೆಗೊಂಡಿವೆ.

ಮಲೆನಾಡಿನಲ್ಲಿ ಸಮಾಜದ ಬೇರೆ ಬೇರೆ ವರ್ಗಗಳಿಗೇ ಸೀಮಿತವಾಗಿರುವ ಜಾನಪದ ಸಂಸ್ಕೃತಿಯೂ ಇದೆ. ಉತ್ತರ ಕನ್ನಡದ ಹಾಲಕ್ಕಿ ಒಕ್ಕಲುಗಳ ಕುಣಿತ ವೇಷದ ಮಟ್ಟಿಗೆ ಯಕ್ಷಗಾನದ ಮೆರುಗನ್ನು ಪಡೆಯಲು ಯತ್ನಿಸುತ್ತಿದೆ. ದಕ್ಷಿಣ ಕನ್ನಡದ ಕೆಲವು ವರ್ಗದವರಲ್ಲಿ ಕೋಲಾಟವಾಡುವ ಸಂಸ್ಕೃತಿಯೂ ಇದೆ. ಆದರೆ ಇಂದು ಅಪರೂಪವಾಗಿದೆ. ಕೊರಗರು ಎಂಬ ಇಲ್ಲಿನ ಮೂಲ ನಿವಾಸಿಗಳ ಕುಣಿತ ಇಂದು ಪೇಟೆಗಳಲ್ಲಿ ಕಾಣಸಿಗುವುದು ಕಷ್ಟ. ಆದರೆ ನವರಾತ್ರಿಯ ವೇಳೆ ಹುಲಿ ಕರಡಿಗಳ ವೇಷಗಳನ್ನು ಹಾಕಿಕೊಂಡು ಕುಣಿಯುವ ಜಾನಪದ ಸಂಪ್ರದಾಯ ಇನ್ನೂ ನಡೆದು ಬಂದಿದೆ. ಇದನ್ನು ವಿಶಿಷ್ಟವಾದ ಜಾನಪದ ಕಲೆ ಎಂದು ಹೇಳಲಾಗದಿದ್ದರೂ ಇದರಲ್ಲಿ ಭಾಗವಹಿಸುವ ನರ್ತಕರು



ಭೂತಕುಣಿತ



ಕೊಡಗಿನ ಕಲಾವಿದರ ಹುತ್ತರಿ ಕುಣಿತ

ತಮ್ಮ ಸ್ವಂತ ಪ್ರೌಢಿಮೆಯ ಬಲದಿಂದಲೇ ಕುಣಿಯುತ್ತಾರೆ. ಅವರಲ್ಲಿ ಪ್ರತಿಭಾವಂತರೂ ಇದ್ದಾರೆ.

ದಕ್ಷಿಣ ಕನ್ನಡದಲ್ಲಿ ಕಣಿ ಹೇಳುವ ನರಸಣ್ಣ, ಶಂಖ ಊದುವ ದಾಸಯ್ಯ, ತಂತಿಮೀಟುವ ಕೀಜೆಯವರು ಎಲ್ಲ ತಮ್ಮ ವೃತ್ತಿಯ ದೃಷ್ಟಿಯಿಂದ ನಾಮಾವಶೇಷರಾಗುತ್ತಿದ್ದಾರೆ. ಒಪ್ಪದ ಮಾತುಗಳಿಂದ ಬುಡುಬುಡುಕೆ ಬಾರಿಸಿ ತುಳುವಿನಲ್ಲಿ ಕಣಿ ಹೇಳುವ ನರಸಣ್ಣನ ಕಸಬು ಈಗಿನ ಪೀಳಿಗೆಯವರಿಗೆ ಆಕರ್ಷಕವಾಗಿಲ್ಲವೋ ಏನೋ!

## ಕೋಣಗಳ ಪಂದ್ಯಾಟ

ಇಲ್ಲಿನ ಜಾನಪದ ಸಂಸ್ಕೃತಿಗೆ ಊರ ದೇವಾಲಯ ಮತ್ತು ಭೂತಸ್ಥಾನಗಳು ಕೇಂದ್ರವಾಗಿವೆ. ವಾರ್ಷಿಕ ರಥೋತ್ಸವ, ಬಲಿದೀಪೋತ್ಸವಗಳ ಸಮಯದಲ್ಲಿ ಊರವರೆಲ್ಲ ಒಟ್ಟು ಸೇರುತ್ತಾರೆ. ಆಧುನಿಕ 'ಫುಟ್‌ಬಾಲ್'ಆಟ ಬರುವ ಮೊದಲೇ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾಲ್ಚೆಂಡಿನಾಟ ಪ್ರಚಲಿತವಿತ್ತು. ತೊಗಲಿನ ಉರುಟು ಚೀಲದೊಳಗೆ ತೆಂಗಿನಕಾಯಿಯ ಸಿಪ್ಪೆಯ ಹುರಿಯನ್ನು ತುಂಬಿಸಿ ಹೊಲಿದು ಅದರಿಂದ ಚೆಂಡಾಟದ ಪಂದ್ಯ ನಡೆಯುತ್ತಿತ್ತು. ಈಗಲೂ ಮಂಗಳೂರು ಸಮೀಪದ ಪೊಳಲಿಯ ದೇವಸ್ಥಾನದಲ್ಲಿ ನಡೆಯುವ ಜಾತ್ರೆಯ ಸಮಯ ಇಂಥ ಚೆಂಡಾಟ ಸಾಂಕೇತಿಕವಾಗಿಯಾದರೂ ನಡೆಯುತ್ತಿದೆ. ಗೋಕುಲಾಷ್ಟಮಿಯ ವೇಳೆಯಲ್ಲಿ ತೆಂಗಿನಕಾಯಿಗಳ 'ತೆಪ್ಪಂಗಾಯಿ' ಆಟ ನಡೆಯುತ್ತದಲ್ಲದೆ ಕೆಲವೆಡೆ ಮೊಸರು ಕುಡಿಕೆ ಉತ್ಸವವೂ ಸಾಂಪ್ರದಾಯಿಕ ರೀತಿಯಲ್ಲಿ ಜರಗುತ್ತದೆ.

ಕೋಣಗಳನ್ನು ಕ್ರೀಡೆಕೆಲಸಕ್ಕೆ ಉಪಯೋಗಿಸುವುದು ಕೇವಲ ಕನ್ನಡ ಜಿಲ್ಲೆಗಳ ಕರಾವಳಿ ಪ್ರದೇಶದಲ್ಲಿ ಮಾತ್ರ ಎಂದರೂ ಸರಿಯೆ. ಆದ್ದರಿಂದ ಕೋಣಗಳಿಗೆ ಇಲ್ಲಿನ ಜಾನಪದ ಸಂಪ್ರದಾಯದಲ್ಲಿ ಬಹಳ ಪ್ರಾಮುಖ್ಯತೆಯಿದೆ. ಕೋಣದ ಕುರಿತಾದ ತುಳು ಹಾಡನ್ನು ಮೇಲೆ ಪ್ರಸ್ತಾಪಿದೆ. ಭೂತಗಳಲ್ಲಿ ಕೂಡಾ ಒಂದು ಭೂತದ ಹೆಸರು ಮಹಿಷಂತಾಯ ಎಂದು; ಇದರ ಮುಖವಾಡ ಕೋಣದ ರೂಪದ್ದು. ಎಳೆಪ್ರಾಯದ ಕೋಣಗಳನ್ನು ಚೆನ್ನಾಗಿ ತಿನ್ನಿಸಿ ಸಾಕುವುದು ಮತ್ತು ಅವುಗಳನ್ನು ಪಂದ್ಯದಲ್ಲಿ ಓಡಿಸುವುದು ಇಲ್ಲಿನ ಸಂಪ್ರದಾಯಸ್ಥ ಶ್ರೀಮಂತ ಬೇಸಾಯಗಾರರ ಹವ್ಯಾಸವಾಗಿದೆ. ಇಂಥ ಓಡುವ ಕೋಣಗಳ ಬೆಲೆಯೇ ಸಾವಿರ ರೂಪಾಯಿಗಳಷ್ಟು. ಅವುಗಳನ್ನು ಸಾಕಲು ವರ್ಷಕ್ಕೆ ಸಾವಿರ ರೂಪಾಯಿ ಮೀರಿಯೇ ಖರ್ಚಿಗೆ ಬೇಕು. ಆದರೂ ಅವುಗಳನ್ನು ಸಾಕಿ ಪ್ರಸಿದ್ಧಿ ಪಡೆಯಬೇಕೆನ್ನುವ ಪ್ರತಿಷ್ಠಾವಂತರು ಇನ್ನೂ ಉಳಿದಿದ್ದಾರೆ.

ಚಳಿಗಾಲ ಮತ್ತು ಬೇಸಿಗೆ ಕಾಲಗಳಲ್ಲಿ ಈ ಕೋಣಗಳ ಪಂದ್ಯಾಟ ನಡೆಯುತ್ತದೆ. ಹಲವೆಡೆ ದೇವಸ್ಥಾನಗಳ ವಾರ್ಷಿಕ ಜಾತ್ರೆಗಳ ಸಮಯದಲ್ಲಿ ಇವು ನಡೆಯುತ್ತವೆ. ಸುಮಾರು ಒಂದು ಫರ್ಲಾಂಗು ಉದ್ದದ 'ಕಂಬಳ' ಗದ್ದೆಯಲ್ಲಿ ನಡೆಯುವ ಈ ಪಂದ್ಯಗಳನ್ನು ನೋಡಲು ಸಾವಿರಾರು ಮಂದಿ ಸೇರುತ್ತಾರೆ. ಮಧ್ಯಾಹ್ನದಿಂದ ಸಂಜೆಯವರೆಗೂ ಈ ಪಂದ್ಯಾಟ ನಡೆಯುವುದು. ಒಂದು ಓಟದಲ್ಲಿ ವೇಗವನ್ನಾಧರಿಸುವ ಪಂದ್ಯ. ಇನ್ನೊಂದು, ಕೋಣಗಳು ಓಡುವಾಗ ಅವುಗಳು ಎಳೆದುಕೊಂಡುಹೋಗುವ ಒಂದು ಹಲಗೆಯ ತೂತಿನಿಂದ ಎಷ್ಟು ಎತ್ತರಕ್ಕೆ ನೀರು ಹಾರುವುದೆಂಬ ಆಧಾರದ ಮೇಲೆ ಪಂದ್ಯ. ಈ ಪಂದ್ಯದಲ್ಲಿ ದೊರಕುವ ಪಾರಿತೋಷಕ ಅಷ್ಟು ಬೆಲೆಯದ್ದಲ್ಲ; ಚಿನ್ನ ಮತ್ತು ಬೆಳ್ಳಿಗಳ ಪದಕಗಳ ಹೊರತು ಇನ್ನೆರಡು ಪಾರಿತೋಷಕಗಳೆಂದರೆ ಬಾಳೆಹಣ್ಣಿನಗೊನೆ ಮತ್ತು ಎಳನೀರಿನ ಗೊನೆ.

ಕೋಳಿ ಅಂಕ ಜಾನಪದ ಕ್ರೀಡೆಗಳಲ್ಲಿ ಮುಖ್ಯವಾದುದು. ಇದರಲ್ಲಿ ಜೂಜಿನ ಅಂಶವಿರುವುದರಿಂದ ಇದರಲ್ಲಿ ಮನೋರಂಜನೆಯ ಉದ್ದೇಶ ಕಡಿಮೆಯಾಗ ಹತ್ತಿ, ಇದು ಹಲವರಿಗೆ ಶಾಪರೂಪದ ಚಟವಾಗಿದೆ.

ಕತ್ತಿ ಕಠಾರಿ ಕೋಚಿ ಪೂಜಾರಿ

ಕಟ್ಟದ ಕೋರಿ ರೊಟ್ಟಿಗ್ ಪಾರಿ

(-ಅಂಕದ ಕೋಳಿ ರೊಟ್ಟಿಗೆ ಹಾರಿ)

ಎಂದು ಸಾಂಪ್ರದಾಯಿಕವಾಗಿ ಇದರಲ್ಲಿ ಗೆದ್ದವನಿಗೆ ಸೋತಕೋಳಿಯ ಹೆಣ ಮಾತ್ರ ಸಿಗುತ್ತದೆ. ಆದರೆ ಈ ಕಾಳಗ ನಡೆಯುವಾಗ ಇದೇ ಕೋಳಿ ಗೆಲ್ಲುವುದೆಂದು ಪಣತೊಟ್ಟವರ ಹಣ ಹಸ್ತಾಂತರವಾಗು

ಕಂಬಳ—ದಕ್ಷಿಣ ಕನ್ನಡದಲ್ಲಿಯ ಕೋಣಗಳ ಪಂದ್ಯಾಟ



ತ್ತದೆ. ಇದು ಹಳ್ಳಿಗಳಲ್ಲೂ ಚಿಕ್ಕಪ್ರಮಾಣದಲ್ಲೂ ನಡೆಯುತ್ತದೆ. ಆದರೆ ಜಾತ್ರೆ, ಆಯನ ಮುಂತಾದ ಕೆಲ ಸಮಾರಂಭಗಳ ವೇಳೆ ಬೃಹತ್ ಪ್ರಮಾಣದಲ್ಲಿ ಜರಗುತ್ತದೆ. ಅಂಕದ ಕೋಳಿ ಹುಂಜವೇ ಆಗಿರ ಬೇಕು. ಅದರ ಕಾಲಿಗೆ ಹರಿತವಾದ ಚಾಕುವನ್ನು ಬಿಗಿ ಯುತ್ತಾರೆ. ಎರಡು ಕೋಳಿಗಳನ್ನೂ ಎದುರೆದು ರಾಗಿ ಹಿಡಿದು ಒಂದರಮೇಲೊಂದನ್ನು ಎರಗಿಸು ತ್ತಾರೆ. ಎದುರಾಳಿ ಕೋಳಿ ಸಾಯುವತನಕ ಇದು ನಡೆಯಬೇಕು. ಆದರ ಗಾಯದ ಮೇಲೆ ತತ್‌ಕ್ಷಣ ಚಿಕಿತ್ಸೆ ನಡೆಸುವ ಶಸ್ತ್ರಚಿಕಿತ್ಸಾತಜ್ಞರೂ ಅಲ್ಲಿ ರುತ್ತಾರೆ. ಕೋಳಿ ಪಂಚಾಂಗವೆಂಬ ಜ್ಯೋತಿಷ್ಯಾ ಧಾರವೂ ಈ ಜೂಜಿಗೆ ಇದೆಯಂತೆ.

## ಧಾರ್ಮಿಕ ಸಂಪ್ರದಾಯ

ಶಿವಮೊಗ್ಗೆಯ ಸುತ್ತ ಮತ್ತ ಕೇಳಿಬರುವ 'ಅಂಟಿಗೆ ಪಂಟಿಗೆ'ಯವರ ಹಾಡುಗಳನ್ನೂ ಇಲ್ಲಿ ಗಮನಿಸುವು ದವಶ್ಯ. ದೀಪಾವಳಿ ಸಮಯದಲ್ಲಿ ಒಕ್ಕಲಿಗರು ಹೇಳುವ ಈ ಹಾಡುಗಳು ಜಾನಪದ ಸಾಹಿತ್ಯದ ಮುಖ್ಯ ಅಂಶಗಳಲ್ಲೊಂದು. ರಾತ್ರಿ ಮನೆಯಿಂದ ಮನೆಗೆ ದೀಪ ಮುಟ್ಟಿಸುತ್ತ ಸಾಗುವ ಹಲವಾರು ಜನರ ಗುಂಪಿನಲ್ಲಿಯ ಹಾಡುಗಾರರ ತಂಡ ಹಾಡುತ್ತದೆ. ಜಾನಪದ ಕವಿಗಳು ಕಂಡ ಪೌರಾಣಿಕ ದೃಶ್ಯಗಳಿಂದ ಕೂಡಿದ ಆ ಹಾಡುಗಳು ಶೃಂಗಾರ, ವೀರ, ಕರುಣ, ಹಾಸ್ಯರಸಗಳ ಮಡುಗಳು; ಅಲ್ಲಿಯ ವರ್ಣ ನಾಚಾತುರ್ಯ, ಸಂಭಾಷಣೆಯ ಸೊಗಸು ಹೇಳಲ- ಸದಳ.

"ದಿಪ್ಪ್ ದಿಪ್ಪ್ ದೀಪೋಳಿಗೆ" ಎಂಬ ಅವರ ಕೂಗು ತುಂಬ ಆಕರ್ಷಕವಾಗಿರುತ್ತದೆ; ಜೊತೆಯಲ್ಲೇ "ಹಾರ್‍ರು ಮನೆ ಹೋಳಿಗೆ" ಎಂದು ಅದೇ ತಂಡದ ಹುಡು ಗರು ವಿನೋದವಾಗಿ ದನಿಗೂಡಿಸುತ್ತಿರುತ್ತಾರೆ. ಅವ ರೆಲ್ಲ ಮನೆಯಂಗಳಕ್ಕೆ ಬಂದು, "ತಂದೀವಿ ದೀಪ ದೇವರ ಕೊಳ್ಳಿರಯ್ಯ" ಎಂದು ಆಹ್ವಾನಿಸುತ್ತಾರೆ. ಮನೆಯೊಡತಿ ಬಾಗಿಲು ತೆರೆದಾಗ, "ಬಾಗಿಲು ತೆರೆದ ಕೈಗೆ ಭಾಗ್ಯದ ಮಳೆ ಬರಲಿ" ಎಂದೂ "ದೀಪ ಕೊಂಡವರಿಗೆ ದೊರೆ ಪದವಿ ದೊರಕಲಿ" ಎಂದೂ ಹರಸುತ್ತಾರೆ. ತಾವು ಎಂಥ ಕಠಿಣದಾರಿಯಲ್ಲಿ ದೀಪ ಉಳಿಸಿಕೊಂಡು ಬಂದಿದ್ದೇ ವೆಂಬುದನ್ನೂ ಅವರು ಹಾಡುತ್ತಾರೆ.

ಅವರೆಲ್ಲ ಮನೆಯೊಳಗೆ ಬರಲು, ಗೃಹಿಣಿ ದೀವಟಿ ಗೆಗೆ ಎಣ್ಣೆ ಸುರಿದು, ದುಡ್ಡು ಹಾಕಿ ತನ್ನ ಹಣತೆಯನ್ನು ಹಚ್ಚಿಕೊಂಡು ಹೋಗಿ, ಒಲೆಗೆ 'ಅಗ್ನಿ ಕೂಡಿಸು'ತ್ತಾಳೆ. ಶಕ್ತ್ಯಾನುಸಾರ ಇತ್ತ ಸಂಭಾವನೆ ಯನ್ನು ತೆಗೆದುಕೊಂಡು ವೀಳ್ಯಮೆದ್ದು ತಂಡ ಮುಂದಿನ ಮನೆಗೆ ಸಾಗುತ್ತದೆ. ಮನೆ ಮನೆ ತಿರುಗಿ ಅಕ್ಕಿಯನ್ನೂ ಬತ್ತವನ್ನೂ ಜೊತೆಗೆ ಹಣವನ್ನೂ ಸಂಗ್ರಹಿಸಿ ಅವರು ಒಂದು ದಿನ ಔಂತೆ (ಔತಣ) ಜರುಗಿಸಿ, ಊರವರನ್ನೆಲ್ಲ ಕರೆದು ರಸಕವಳ ಹಾಕಿ ಆನಂದಪಡುತ್ತಾರೆ. ಮುಖ್ಯ ವೆಂದರೆ ಜಾನಪದದ ಜೀವಂತ ಸಂಪ್ರದಾಯಗಳಲ್ಲಿ ಒಂದಾಗಿರುವ ಅಂಟಿಗೆ ಪಂಟಿಗೆ ಹಾಡುಗಳು ತುಂಬ ಆಕರ್ಷಕವಾಗಿರುತ್ತವೆ.



'ಅಂಟಿಗೆ—ಪಂಟಿಗೆ'ಯ ತಂಡ ಸಂಭಾವನೆ—ಕಾಣಿಕೆಗಳನ್ನು ಸ್ವೀಕರಿಸುತ್ತಿರುವುದು

ಅಂತೂ ಮಲೆನಾಡಿನ ಜಾನಪದ ಸಂಸ್ಕೃತಿಯಲ್ಲಿ ಮನರಂಜನೆಯ ಅಂಶಕ್ಕಿಂತಲೂ ಶ್ರದ್ಧೆ, ಧರ್ಮ ಗಳ ಅಂಶವೇ ಹೆಚ್ಚೆಂದು ನಿಸ್ಸಂದೇಹವಾಗಿ ಹೇಳ ಬಹುದು.



ಹರಿಜನರಲ್ಲಿ ಅತ್ಯಂತ ಜನಪ್ರಿಯವಾಗಿರುವ ಸಮೂಹ ನೃತ್ಯ—ಕೋಲಾಟ



ಮಲೆನಾಡಿನ ಪ್ರಕೃತಿಸೌಂದರ್ಯವನ್ನು ಕಂಡು ಮುಗ್ಧನಾಗದ ಕವಿ ಇಲ್ಲ. ಮಲೆನಾಡಿನ ವನಸಿರಿ ಜನಜೀವನವನ್ನು ಸೂರೆಗೊಂಡಂತೆ ಸಾಹಿತ್ಯವನ್ನೂ ಸೂರೆಗೊಂಡಿದೆ.

# ಕವಿ ಕಂಡ ... ಮಲೆನಾಡು

...ಎ. ಎಸ್ ವೇಣುಗೋಪಾಲರಾವ್

ಪಶ್ಚಿಮಸಮುದ್ರರಾಜನ ಆರ್ಭಟವನ್ನು ಹೆಮ್ಮೆಯಿಂದ ನೋಡುತ್ತ ಈ ನಾಡಿನ ನೆಲ ಉಬ್ಬಿ ಮೇಲೆದ್ದಿದೆ. ಹಾಗೆ ಏರುತ್ತ ಏರುತ್ತ ಪಶ್ಚಿಮ ಪರ್ವತ ಸ್ತೋಮವಾಗಿದೆ. ದಕ್ಷಿಣೋತ್ತರವಾಗಿ ಬೀಸುವ ಮಾರುತಗಳನ್ನು ತಡೆದು, ಸಮೃದ್ಧವಾಗಿ ಮಳೆಯನ್ನು ಹಿಂಡಿಕೊಳ್ಳುವ ಈ ಸಹ್ಯಾದ್ರಿಸ್ತೋಮದ ನೋಟ ಅಪೂರ್ವರಮಣೀಯವಾದುದು. ತನ್ನ ಒಡಲಲ್ಲಿ ತುಂಗೆ-ಭದ್ರೆ-ವರದೆ-ಕಾಳಿ-ಶರಾವತಿಯಂತಹ ನದಿಗಳಿಗೆ ಜನ್ಮವಿತ್ತು, ಇಲ್ಲಿಯ ನೆಲವನ್ನು ಸುಜಲಾಂ, ಸುಫಲಾಂ, ಸಸ್ಯಶ್ಯಾಮಲಾಂ, ಆಗಿಸಿದೆ ಈ ಪರ್ವತ ಪಂಕ್ತಿ. ಗೋವೆಯ ಅಂಚಿನಿಂದ ದಕ್ಷಿಣದ ನೀಲಗಿರಿಯವರೆಗೂ ಚಾಚಿ, ೧೫೦೦ ರಿಂದ ೮೦೦೦ ಅಡಿಗಳವರೆಗೆ ಎದ್ದು ನಿಂತ ಈ ಘಟ್ಟಗಳು ಜಗತ್ತಿನ ಪ್ರಾಚೀನ ಪರ್ವತಸ್ತೋಮಗಳಲ್ಲಿಯೇ ಒಂದಾಗಿದೆ. ಈ ಪರ್ವತದ ಒಡಲೇ ಕರ್ನಾಟಕದ ಮಲೆನಾಡು. ಚಿಕ್ಕಮಗಳೂರು, ಶಿವಮೊಗ್ಗೆ, ಧಾರವಾಡ, ಕಾರವಾರದ ಪೂರ್ವದ ಅಂಚು ಈ ನಾಡಿನ ಸಾರವತ್ತಾದ ಭಾಗ. ಇಲ್ಲಿನ ವನ್ಯಸಂಪತ್ತು, ಖನಿಜ ಸಮೃದ್ಧಿ, ವಿಜ್ಞಾನಿಯನ್ನು, ಆಡಳಿತಗಾರರನ್ನು ಸಾಹಸಕ್ಕೆ ಸೆಳೆದಂತೆ, ಇಲ್ಲಿಯ ಅಪೂರ್ವ ಚೆಲುವಿನ ನೋಟ ಕವಿಯ ಕನಸನ್ನು ಕೆಣಕಿದೆ, ಶತ ಶತಮಾನಗಳಿಂದ, ಬೃಹದಾರಣ್ಯಗಳಿಂದ, ಅಮೃತೋಪಮ ನದೀ ನದಗಳಿಂದ ರಾಜಿಸುವ ಈ ನೆಲ-ಈ ಜಲ ಪರಮ ಪುಣ್ಯತಮ, ಪ್ರಾಚೀನ.

ನಾಡಿನ ಪಶ್ಚಿಮಸಾನುವಿನ ಸಾಲು ಕವಿಯ ಕಣ್ಣಿಗೆ ದಿಕ್‌ದಂತಿ ಸಮೂಹದಂತೆ ಕಾಣಿಸುತ್ತಿದೆ.

"ಸೊಂಡಿಲ ಮೇಗಡೆ ಸೊಂಡಿಲ ಚಾಚಿ
ವಿಶಾಲವ್ಯೋಮದ ಕರೆಯನೆ ಚಾಚಿ
ಸ್ಪರ್ಧಿಸುತ್ತಿರುವುವೊ ಎನೆ ದಿಗ್ದಂತಿ
ಹಬ್ಬಿದೆ ಸುತ್ತಲು ದಿಗಂತ ಪಂಕ್ತಿ-ಗಂತಿ, ಗಂತಿ!"

ಎನ್ನುತ್ತಾರೆ ಮಲೆನಾಡಿನ ಕವಿ. (ಕು.ವೆಂ.ಪು-ಪಕ್ಷಿಕಾಶಿ) ಈ ಪರ್ವತಮಾಲೆಯ ಔನ್ನತ್ಯವೇ ಇಲ್ಲಿಯ ವರ್ಷಾವೈಭವಕ್ಕೆ ಕಾರಣವಾಗಿದೆ. ವರ್ಷಾಋತುವೇ ಮಲೆನಾಡಿನ ವೈಶಿಷ್ಟ್ಯಪೂರ್ಣವಾದ ರುದ್ರ, ವೈಭವದ ಕಾಲ. ಆಗಿನ ಭೀಷಣ ಧಾರಾವರ್ಷ ಕವಿಯ ಮನಸ್ಸನ್ನು ಗರಿಗೆದರಿಸಿ ನುಡಿಸುತ್ತಿದೆ:

"ಗುಡ್ಡ ಗುಡ್ಡ ಸ್ಥಾವರ ಲಿಂಗ
ಅಪಿಕೆ ಅಪ್ಪಿಂಗ
ಎರಿತಾವನ್ನೋ ಹಂಗ
ಕೂಡ್ಯಾವ ಮೋಡ-ಸುತ್ತೆಲ್ಲ ನೋಡ."

ಎನ್ನುತ್ತಾರೆ, ಧಾರವಾಡದ ಶ್ರಾವಣ ಸೌಂದರ್ಯವನ್ನು ಹಾಡುವ ಕವಿ-ಮಯೂರ ಬೇಂದ್ರೆ. ಆಗಿನ ಗಾಳಿಯ ಅಬ್ಬರವೇನು ಕಡಿಮೆಯಲ್ಲ. ಕಾಡು-ಮೇಡುಗಳನ್ನೆಲ್ಲ ಆದು ಹಬ್ಬಿ ತಬ್ಬುತ್ತದೆ- "ಕುಣಿದಾವ ಗಾಳಿ ಭೈರವನ ರೂಪ ತಾಳಿ- ಕುಣಿವ್ಹಾಂಗ ರಾವಣಾ."



ಪಂಪನಿಗೆ "ಬಂದ ಮಾಮರ"ನ ಮೇಲೆ ಎಲ್ಲಿಲ್ಲದ ಮೋಹ!

## ಪಂಪನ ನಾಡು

ಆದರೇನು? ವರ್ಷದ ಭೀಕರತೆಯ ಪರಿಣಾಮವೇ ವಸಂತನ ಬೆಡಗಲ್ಲವೆ? ಇದೋ ಮಲೆನಾಡು ನಗು ನಗುತ್ತ ಕವಿಯ ಮನವನ್ನು ಹರ್ಷದ ಹೊನಲಲ್ಲಿ ಮುಳುಗಿಸುತ್ತದೆ. ಆಗ ನಿಸರ್ಗದೇವಿ ಅನಂತ ಔದಾರ್ಯದಿಂದ, ಸುಖ ಪಟ್ಟಿಯಿಂದ, ಸೌಂದರ್ಯವನ್ನು ಭೂರಿ ಎರಚುತ್ತಾಳೆ. ದೂರದ ಊರಿನಲ್ಲಿ ಕಾರಣಾಂತರದಿಂದ ನೆಲಸಬೇಕಾಗಿ ಬಂದ ಪಂಪನ ಕವಿಚೇತನಕ್ಕೆ ಬನವಸೆಯ ಆ ರಮ್ಯತೆಯ ನೆನಪೂ ಚೇತೋಹಾರಿ. "ಅರಿಕೇಸರಿಯಿಟ್ಟೊಡಂ", ವೆಂಗಿಪಳುವಿನ ಬೋಳು ಬಯಲಿನಿಂದ ಆ ಕವಿಯ ಮನಸ್ಸು ಮಲೆನಾಡಿಗೆ ಧಾವಿಸುತ್ತದೆ;

"ಸೊಗಯಿಸಿ ಬಂದ ಮಾಮರನೆ ತಳ್ತಲೆವಳ್ಳಿಯೆ
ಪೂತಜಾತಿ ಸಂ
ಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ
ನಲ್ಲರ ಒಲ್ಮೊಗಂ
ನಗೆಮೊಗದೊಳ್ ಪಳಂಚಲೆಯೆ ಕೂಡುವನಲ್ಲರೆ,
ನೋರ್ಪೊಡೆ ಆವಬೆ
ಟ್ಟುಗಳೊಳಂ ಆವ ನಂದನವನಂಗಳೊಳಂ ಬನವಾಸಿ
ದೇಶದೋಳ್."

ಇದು ಬನವಸೆಯ ನಾಡು. ಅಲ್ಲಿಯ ನಂದನವನ ಒಂದು ನಲ್ನುಡಿ, ಒಮ್ಮೆ ಸೋಂಕಿದ ತೆಂಕಣಗಾಳಿ, ಸಾಕು, ಪಂಪನ ಹೃದಯವನ್ನು ತಣಿಸುವುದಕ್ಕೆ. ಇಂತಹ ನಾಡಿನಲ್ಲಿ ಹುಟ್ಟುವುದಕ್ಕೂ ಪೂರ್ವಪುಣ್ಯ ಬೇಕು. ಹುಟ್ಟಿದರೆ ಹುಟ್ಟಬೇಕು ಅಲ್ಲಿ—ಮಾನವನಾಗಿ. ಹಾಗಿಲ್ಲವೋ, ಒಂದು ಕೋಗಿಲೆಯ ಮರಿಯಾಗಿ, ಮರಿದುಂಬಿಯಾಗಿ, ಹುಟ್ಟಿದರೂ ಸಾಕು. ಇದು ಪಂಪನ ಬಯಕೆ!

ವೃಕ್ಷರಾಜನಾದ ಮಾಮರನನ್ನು ವರ್ಣಿಸದ ಮಲೆನಾಡಿನ ಕವಿಯಿಲ್ಲ. ಮಾಮರ, ಮಲೆನಾಡಿನ ತಾಜಾ ವೃಕ್ಷ! ಪಂಪನಿಗಂತೂ "ಬಂದ ಮಾಮರ"ನ ಮೇಲೆ ಎಲ್ಲಿಲ್ಲದ ಮೋಹ!

"ತಳಿರೊಳ್ ನೀನೆ ಬೆಡಂಗನ್ಯೆ ನನೆಗಳೊಳ್ ನೀ ನೀರನ್ಯೆ
ಮುಪ್ಪಸಂ
ಕುಳದೊಳ್ ನೀನೆ ವಿಳಾಸಿಯ್ಯೆ ಮಿಡಿಗಳೊಳ್ ನೀಂ
ಚೆಲ್ವನ್ಯೆ ಪಣ್ತವ
ಣ್ಗಳೊಳಂ ಪೆರತೇನೋ ನೀನೆ ಭುವನಕ್ಕಾರಾಧ್ಯ
ನೈ, ಭೃಂಗ ಕೋ

ಕಿಳ ಕೀರ ಪ್ರಿಯ ಚೂತರಾಜ ತರುಗಳ್ ನಿನ್ನಂತೆ
ಚೆನ್ನಂಗಳೇ!"
(ಆದಿಪುರಾಣ)

ಭೃಂಗ ಕೋಕಿಲಾದಿ ಕೀಟ-ಪಕ್ಷಿಗಳಿಗೆಲ್ಲ ಪ್ರಿಯ ವಂತ್ತೆ ಈ ಮಲೆನಾಡಿನ ಮಾಮರ.

ಮಲೆನಾಡು, ಮಾಮರವಲ್ಲದೆ ಉಳಿದ ತರುರಾಜಿಗಳಿಗೂ ಸಮೃದ್ಧವಾಗಿದೆ. ಅವುಗಳ ನೋಟ ಭವ್ಯ ಮನೋಹರ. ಧೀರ-ಗಂಭೀರ. ಈ ಗಹನಕಾಂತಾರವನ್ನು ನೋಡುತ್ತ ಇದು ಗಿರಿಯೋ, ಕರಿಯೋ, ಕರೀಂದ್ರನೋ ಎಂಬ ಭ್ರಾಂತಿಯುಂಟಾಗುತ್ತದೆ, ಕವಿ ಗುಣವರ್ಮನಿಗೆ:

"ಗಿರಿಯಿದು, ಕರಿಯಿದು ಕರಿಯಿದು! ಗಿರಿಯಿದು
ಗಿರಿಯಲ್ತು
ಕರಿಯಿದಲ್ತು ಕರೀಂದ್ರಂ
ಗಿರಿವರಮಿದು ಕರಿವರ ಮೆಂ। ದೆದರಿಯಲ್
ಗಹನದೊಳಗೆ ಗಿರಿಯಂ ಕರಿಯಂ"
(ಶೂದ್ರಕ-ಕಾವ್ಯಸಾರದೀಪ)

ಮಹಾಕವಿ ಪೊನ್ನನು ಕಂಡ ಮಲೆನಾಡಿನ ಮಹಾವನವಿದು:

"ನಯಮಳವಟ್ಟ ಪಚ್ಚೆ, ಇಂಗುಳಿಕ, ತಳಿರ್ತ ಅಶೋಕ,
ಮುಳ್ಳಲರ್ದ
ಸಂಪಗೆ, ಕಡುಗರ್ಪ ಭೃಂಗ ಕೋಟಲೆ, ಎಸೆದಿರ್ದ ನೀಲಗಿರಿ ಮಲ್ಲಿಗೆ"ಗಳು ಸಮೃದ್ಧವಾಗಿರುವುದರಿಂದ "ಬರೆದಿಟ್ಟ ಚಿತ್ರದ ಬನಕ್ಕೆಣೆ"ಯಾಗಿದೆ ವನ.
(ಶಾಂತಿ ಪುರಾಣ)

## ವನ್ಯಮೃಗಗಳ ಬೀಡು

ಈ 'ಕರಂ ರಮಣೀಯಂ' ಆಗಿರ್ಪ ಮಲೆನಾಡಿನ ವನ, ಅಬ್ಬರಿಸುವ ಭಯಂಕರ ವನ್ಯಮೃಗಗಳ ಬೀಡು. ಚಂದ್ರದ್ರೋಣ ಪರ್ವತದ ತಪ್ಪಲಲ್ಲಿ, ಸಮೀಪದ ದ್ವಾರಾವತಿಯಲ್ಲಿ-ಹೊಯ್ಸಳ ಅರಸನ ಆಸ್ಥಾನ ಕವಿ ನಾಗಚಂದ್ರ, ಅಂತಹ ವನವನ್ನು ಕಣ್ಣಾರೆ ಕಂಡವನಿರಬೇಕು. ಹಾಗಲ್ಲದೆ ಇಂತಹ ಉಕ್ತಿ ಅವನಿಂದ ಹೇಗೆ ಸಾಧ್ಯ? ವನ-ವನಾಂತರಾಳದಲ್ಲಿ ಭೋರ್ಗರೆವ ಹುಲಿಯಿದು.

"ಜಡಿಯುತ್ತುಂ ಬಾಲಮಂ ಕಣ್ಣುರಿಯುನುರೆ
ಜಿಹ್ವಾನಲಂ ಪೆರ್ಚೆ ಬಾಯ್ವಿ
ಟ್ಟೊಡೆವನ್ನಂ ಗರ್ಜಿಸುತ್ತುಂ ಪವನಜವದೆ
ಮೇಲ್ವಾಯ್ದು ಪೊಯ್ದುತ್ತು ಕೆಯ್ಯೇ
ವೆಡೆಯಿಂ ಬಾಯ್ದೆರ ಬಾಯಿಂದೊಡನೆ ರುಧಿರ
ಮುಂ ಖಂಡಮುಂ ಸೂಸುವನ್ನಂ
ಸಿಡಿಲೆಂಬಾಶಂಕೆಯಂ ಪೆಣ್ಬುಲಿ ಪಡೆದು ಮೃಗೀರಕ್ತ
ಸೇವಾನುರಕ್ತಂ"
(ಪಂಪ ರಾಮಾಯಣ)

ಈ ಭೀಕರತೆಗೆ ಬಣ್ಣ ಬಳಿದಂತೆ ಅಲ್ಲಿಯ ವರ್ಷಋತು. 'ಕರಿಯ ರಾಕ್ಷಸ ಭೂಭಾಗದಲ್ಲಿ ಕಾಲೂರಿ ನಿಂತಿದ್ದಾನೆ. ಸಿಡಿಲಿನ ದಪ್ಪ ಕಿಡಿಗಳನ್ನು ಉಗುಳುತ್ತಿದ್ದಾನೆ. ಗಗನ ಸಮಸ್ತವನ್ನೂ ವ್ಯಾಪಿಸಿ ಸೀಳುತ್ತಾನೆ. ಕಾರ್ಮೋಡಗಳ ಕೇಶರಾಶಿಯನ್ನು ಬಿಚ್ಚಿ ಹರಡಿದ್ದಾನೆ. ಮಿಂಚಿನ ಕೋರೆದಾಡೆಗಳು ಹೊಳೆಯುತ್ತಿವೆ. ಚಂದ್ರ ಸೂರ್ಯರನ್ನು ನುಂಗಿ ಬೇಸಗೆಯನ್ನು ಬೆಚ್ಚಿಸಿ ಬರುತ್ತಾನೆ.'



ಬನವಾಸಿಯ ಮಧುಕೇಶ್ವರ ಕವಿಯನ್ನು ಮುಗ್ಧಗೊಳಿಸಿದ.

"ಉಗುಳುತ್ತುಂ ಸಿಡಿಲೆಂಬ ತೋರ ಕಿಡಿಯಂ
ಕಾಲೂರಿ ಭೂಭಾಗದೊಳ್
ಗಗನಾಭೋಗ ಮನೆಯ್ದೆ ಸೀಳ್ದು ಘನವೇಣೀ ಬಂಧಮಂ ಬಿರ್ಚಿ ಮಿಂಚುಗಳೆಂಬ ಉಳ್ಕುವ ದಾಡೆಗಳ್ ಪೊಳೆಯೆ ಚಂದ್ರಾದಿತ್ಯರಂ ನುಂಗಿ ಬೇಸಗೆಯಂ ಬೆರ್ಚಿಸಿ ಗರ್ಜಿಸುತ್ತ ಮೊಗೆದಂ ಕಾರೆಂಬ ಕಾಳಾಸುರಂ."
(ಮಲ್ಲಿನಾಥ ಪುರಾಣ)

ಇಂತಹ ವರ್ಷಾಕಾಲದಲ್ಲಿ ತೋಳು ಬೀಸಿ ಚಾಮರ ವಾಡಿಸುವ ಮಲೆನಾಡಿನ ಹೆಮ್ಮೆಯ ವೃಕ್ಷ ಅಡಿಕೆ, ಕವಿ ಶಿಶುಮಾಯಣನಿಗೆ ಭೂದೇವಿಗೆ ಅಜನು ನಿರ್ಮಿಸಿದ ಛತ್ರದಂತೆ ತೋರಿಬರುತ್ತದೆ.

"ಇಳೆಯೆಂಬ ಸತಿಗೆ ಅಜ ಪೊಳೆವ ಪಚ್ಚೆಯ ಛತ್ರಗಳನು ನಿರ್ಮಿಸಿದನೆಂಬಂತೆ
ಪಲವು ಹೊಂಬಾಳೆಯ ತಳೆದು ಪೂಗಾಳಿಗಳ್ ಲಘು ಫಲದಿನೊಪ್ಪುತಿಹವು"ಅಡಕೆಯ ವೃಕ್ಷಗಳು

ಅಡಕೆಯಂತೆಯೇ ಹಲಸು, ಮಲೆನಾಡಿನ ಫಲವೇ ಹೌದು. ಮುಳ್ಳಿಡಿದ, ಸವಿಫಲದ ಈ ಹಲಸು ಸೋಮರಾಜನಿಗೆ ಕಂಡ ರೀತಿಯಿದು:

"ನುಡಿಗುಡದನಿಶಂ ಸುಮ್ಮನೆ ಕೊಡುವ ಮಹಾಪಾ
ನಿಯಂತಿರೆ ಅಲರೇರಿದ, ಸೊಂಪಿಡಿದ, ಇನಿವಣ್ಣಳನೆ.
ಲ್ಲರ್ಗೆ ಎಡೆವಿಡದೆ ಈಯುತ್ತಮ್ ಒಪ್ಪುಗುಂ
ಪನಸಕುಜಂ"
(ಶೃಂಗಾರ ಸಾರ)

## ತಪೋಭೂಮಿ

ಈ ಮೌನಿ-ದಾನಿಯ, ಮಾಧುರ್ಯರಸದ ಗುಣಗಳೇ ಇಲ್ಲಿಯ ಜನದ ಮೈಗೂಡಿದೆಯೆ? ರಸಿಕರೂ ತುಂಬು



ಗದ್ದೆಗಳ ನೋಟ ಅವನನ್ನು ಮಿಡಿಯಿತು.

## ಸರ್ವಜ್ಞ ಕಂಡ ಮಲೆನಾಡು

ಕುಲವಿಲ್ಲದವನೊಬ್ಬ। ಮಲೆನಾಡಿನೊಳು ಹುಟ್ಟಿ।
ಸಲೆ ದಂಡು ತಂದು ಮುರಿದಿಕ್ಕಿದಾ ಮೇಲೆ।
ನೆಲೆಗೆ ನಿಂದಾನು ಸರ್ವಜ್ಞ.

ಬೊಮ್ಮನಾಗಿರಿಯಲ್ಲಿ। ಹೆಮ್ಮಗನು ತಂದೆಯೂ।
ಹಮ್ಮಿನವರನ್ನು ಮುರಿದಿಕ್ಕೆ ಮಲೆನಾಡು।
ನಿರ್ಮೂಲವಕ್ಕು ಸರ್ವಜ್ಞ.

ಕಾಡೆಲ್ಲ ಕಸುಗಾಯಿ। ನಾಡೆಲ್ಲ ಹೆಗ್ಗಿಡವು।
ಆಡಿದ ಮಾತು ನಿಜವಿಲ್ಲ, ಮಲೆನಾಡ।
ಕಾಡು ಸಾಕೆಂದ ಸರ್ವಜ್ಞ.

ಅಲ್ಲವರಿಷಿಣವುಂಟು। ಬೆಲ್ಲ ಬಿಳಿಎಲೆಯುಂಟು।
ಒಳ್ಳೆ ಹಲಸುಂಟು ಮೆಲ್ಲಲ್ಕೆ ಮಲೆನಾಡ।
ನಲ್ಲೆನ್ನಬಹುದೆ ಸರ್ವಜ್ಞ.

ಕಿಚ್ಚುಂಟು ಕೆಸರುಂಟು। ಬೆಚ್ಚನ ಮನೆಯುಂಟು।
ಇಚ್ಛೆಗೆ ಬರುವ ಸತಿಯುಂಟು, ಮಲೆನಾಡ।
ಮೆಚ್ಚ ನೋಡೆಂದ ಸರ್ವಜ್ಞ.

ಬೆಲ್ಲ ಗೆಣಸುಗಳುಂಟು। ಅಲ್ಲಲ್ಲಿ ನೀರುಂಟು।
ನೆಲ್ಲೋಗರುಂಟು, ನೆಳಲುಂಟು, ಕೆರೆಕುಂಟೆ।
ಎಲ್ಲೆಲ್ಲು ಉಂಟು ಸರ್ವಜ್ಞ.

(ಸಂಗ್ರಹ: ಎಸ್ ಎಸ್. ಬಿ.)

ಜೀವನದ ಸೊಗಸನ್ನು ಬಲ್ಲವರೂ ಆದ ಮಲೆನಾಡಿನವರ ಬದುಕಿನ ಮೂಲವೇ ತ್ಯಾಗ-ಆದರೆ ನೀರಸ ವೈರಾಗ್ಯವಲ್ಲ. ಅಕ್ಕರೆ, ನಲವು ತುಂಬಿದ ಬದುಕು ಅದು. ಈ ಯೋಗ-ಭೋಗ ಸಮನ್ವಯವನ್ನು ಆದಿಕವಿಯು ನುಡಿಯುತ್ತಿದ್ದಾನೆ:

"ಚಾಗದ, ಭೋಗದ, ಅಕ್ಕರೆಯ,ಗೊಟ್ಟಿಯ ಗೇಯದ
ಅಲಂಪಿನಿಂಪುಗಳ್ಗೆ ಆಗರಮಾದ" ನಾಡು ಇದು.

ಮಧುಮಹೋತ್ಸವದ ಸವಿಯಲ್ಲಿ ಗುಂಪಿನಲ್ಲಿ-ಬಾಳುವ ಒಂಟಿ ಬಡುಕರಲ್ಲದ ಜನ ಇಲ್ಲಿಯವರು. ಸಯುವಿನಯುಗಳೇ ಮೂರ್ತಿವೆತ್ತಂತಹ ಜನ, ಈ ಮಲೆನಾಡವರು. ಮಧುಮಹೋತ್ಸವದ ವಸಂತ ಅವರ ಮತ್ತು ನಾಡಿನ ನಿಸರ್ಗದ ಸೊಂಪನ್ನು ಕೆರಳಿಸುತ್ತದೆ: ಧಾರವಾಡದ ಮುಳಗುಂದದ ಶುದ್ಧ ಮಲೆನಾಡಿನ ಕವಿ ನಯಸೇನನಿಗೆ ಈ ವೈಭವ ಹೀಗೆ ತೋರುತ್ತಿದೆ–

"ವನಜಂಗಳ್ ದಳವೇರೆ ಚೂತಲತೆಗಳ್
ನೀರೇರೆ ಶೀತಾಂಶು ತೊ
ಟ್ಟನೆ, ಪೂರ್ವಾದ್ರಿಯನೇರೆ ಮನ್ಮಥಗಜಂ
ಸೊರ್ಕೇರೆ ಪೊನ್ನುಯ್ಯಲಂ
ವನಜಾತಾಕ್ಷಿಯರೇರೆ ಕಾಮನ ಸರಲ್ ಕೂರ್ಪೇರೆ
ಪುಂಡ್ರೇಕ್ಷು ಚಾ
ಪನ ಚಾಪಂ ಕೊಲೆಗೇರೆ ಬಂದುದು ವಸಂತಂ
ಸಂತತೋತ್ಸಾಹಂ"
(ಧರ್ಮಾಮೃತ)

ಈ ಉತ್ಸಾಹ, ವೈಭವಗಳಂತೆಯೇ ಮಲೆನಾಡು ತಪೋಭೂಮಿಯೂ ಹೌದು. ಇಲ್ಲಿನ ನದೀನದಗಳು, ಕಂದಮೂಲಿಕೆಗಳು ಅವರ ಕಸಸನ್ನು ತಣಿಸುತ್ತವೆ. ಅಂತಃಕರಣ ಶುದ್ಧಿಯನ್ನೂ ಉಂಟುಮಾಡುತ್ತವೆ. ಅವರ ತಪಸ್ಸು ಸಿದ್ಧಿಸುತ್ತದೆ. ಭಕ್ತಕವಿ ಚಾಮರಸ ನೆನ್ನುತ್ತಾನೆ: ಪರ್ವತಮಾಲೆಗಳ ಸೊಬಗು ಸಮೃದ್ಧಿಯನ್ನು ಕುರಿತು:

"ನಿಧಿಯ ಚಿಂತಾಮಣಿ, ದಿವ್ಯೌಷಧಿಯ ಪರುಷದ ಕಣಿ, ಸುಲಲಿತ ಸುಧೆಯ ಬಿಲ, ಸಿದ್ಧರಸ, ಪಾದುಕೆ, ಅಂಜನವ ವಿಧಿವಿಧಾನದ ವಸ್ತುಗಳ ಶಮ್ಮಿದಿರಲಿ ಅರಸುವ ಸಾಧಕರ ತವನಿಧಿ." ಪರ್ವತಗಳ ಎತ್ತರವೋ, ಕಂದಕಗಳ ಆಳವೋ? "ಏರಿ ನೋಡಲು ಸತ್ಯಲೋಕಕೆ ಹಾರಿಸುವ ಗಿರಿಶಿಖರಗಳು ಮಿಗೆ ಮೀರಿ ಹೊಕ್ಕೊಡೆ ಸಪ್ತಪಾತಾಳದ ಸಘಾಡಿಕೆಯ ತೋರಿಸುವ ಬಿಂಕದ ಬಿಲಂಗಳು, ಸಾರಿ ಸಾಧಕರೇನ ಬಗೆದರೆ ಹೇರಿಕೊಡುವ ಸುವಸ್ತುಗಳ್" ಗಣಿ ಮಲೆನಾಡು.

## ಒಲುಮೆಯ ಗೂಡು

ಹೀಗೆ ಸಮೃದ್ಧವಾದ, ರುದ್ರ ರಮಣೀಯವಾದ ವಿಹಂಗ ಕೂಜನಭರಿತವಾದ ಈ ಮಲೆನಾಡನ್ನು ಕಂಡು ಕವಿ ಹೃದಯವು ಅರಳುತ್ತದೆ; ಭಾವಗದ್ಗದವಾಗುತ್ತದೆ. ಅದರ ನೆನಪೂ ಮುದವನ್ನು ಮನಕ್ಕೆ ತಂದು, ತಾನಿರುವ ಬೋಳುಬಯಲಿಗೆ ಬೇಸರಿಸುತ್ತದೆ.

ಬೇಸರಾಗಿದೆ ಬೋಳು ಬಯಲು...
ಹೋಗುವೆನು ನಾ, ಹೋಗುವೆನು ನಾ ನನ್ನ
ಒಲುಮೆಯ ಗೂಡಿಗೆ
ಮಲೆಯ ನಾಡಿಗೆ ಮಲೆಯ ಬೀಡಿಗೆ ಸಿರಿಯ
ಚೆಲುವಿನ ರೂಢಿಗೆ

ಏಕೆಂದರೆ ಅದು ತಾನು ಕಂಡು, ನಲಿದು,. ಅನುಭವಿಸಿದ ನಾಡು.

"ಬಿಳಿಯ ತಿಂಗಳ ಸಿರಿಬನಂಗಳ
ಮನೆಯ ಮಂಗಳ ನಾಡಿಗೆ
ವನವಿಹಂಗ ಸ್ವನ ತರಂಗಿತ
ಪಾವನ ಸಂಗಕೆ
ಹೋಗುವೆನು ನಾ, ಹೋಗುವೆನು ನಾ ನನ್ನ
ಒಲುಮೆಯ ಗೂಡಿಗೆ
ಮಲೆಯ ನಾಡಿಗೆ ಮಲೆಯ ಬೀಡಿಗೆ ಸಿರಿಯ
ಚೆಲುವಿನ ರೂಢಿಗೆ"

ಎಂದು ಸಹೃದಯನ ಹೃದಯವೂ ಮಾರ್ದನಿಯಿತ್ತರೆ ಅಚ್ಚರಿಯೇನು!



# ಮಲೆನಾಡು ಜನ-ಜೀವನ

ಡಾ. ಕೃಷ್ಣಾನಂದ ಕಾಮತ



ಇದು ಯುರೋಪ ಖಂಡದಷ್ಟು ವೈವಿಧ್ಯಪೂರ್ಣವಾಗಿದೆ

★

ನಾವು ಸಾವಿರಾರು ರೂಪಾಯಿ ವೆಚ್ಚಮಾಡಿ ವಿಹಾರಕ್ಕೆಂದು ಯುರೋಪಖಂಡಕ್ಕೊ, ಅಮೇರಿಕೆಗೋ, ಜಪಾನಕ್ಕೋ ಹೋಗಿ ಬರುತ್ತೇವೆ. ಅಲ್ಲಿಯ ನಿಸರ್ಗ ಸೌಂದರ್ಯವನ್ನು, ಜನಜೀವನವನ್ನು ದಿನ, ವಾರ, ಮಾಸಗಳು ಕಳೆದುಹೋದರೂ ಮರೆಯದೇ ಅತಿಥಿಗಳಿಗೆ ವಿವರಿಸುತ್ತೇವೆ. ಆದರೆ ನಮ್ಮ ರಾಜ್ಯವನ್ನೇ ಸರಿಯಾಗಿ ನೋಡಿ ತಕ್ಕ ಮಟ್ಟಿಗೆ ತಿಳಿದುಕೊಂಡಿದ್ದೇನೆ ಎಂದು ಎದೆ ತಟ್ಟಿ ಹೇಳಬಲ್ಲ ಕನ್ನಡಿಗರೆಷ್ಟು? ಮಲೆನಾಡಿನ ಸೃಷ್ಟಿಸೌಂದರ್ಯ, ಅಲ್ಲಿಯ ಜನಜೀವನ ಯುರೋಪಖಂಡದಷ್ಟು ವೈವಿಧ್ಯಪೂರ್ಣವಾಗಿದೆ ಎಂದರೆ ಯಾರೂ ಅಪನಂಬಿಕೆ ತೋರಿಸಬಾರದು. ಕೊಡಗು ಸ್ವಿಝರ್ಲಂಡಿನಂತೆ ಸೊಬಗಿನ ಬೀಡಾದರೆ, ಹಾಸನ ಇಟಲಿಯಂತೆ ಇತಿಹಾಸದ ತೆರೆದ ಅಧ್ಯಾಯದಂತೆ ಇದೆ. ಸಹ್ಯಾದ್ರಿ ಆಲ್ಪ್ಸ್ ಪರ್ವತದಂತೆ ರಮಣೀಯವಾಗಿದ್ದರೆ ಶರಾವತಿ ರ್‍ಹೈನ್ ನದಿಯಂತೆ ನಿತ್ಯೋಪಯೋಗಿಯಾಗಿದೆ. ಹೀಗಿದ್ದರೂ ನಮ್ಮ ಬಳನಾಡಿನ ಜನ ಗುಡ್ಡ, ಬೆಟ್ಟ, ನದಿಕೊಳ್ಳ, ಅರಬೀ ಸಮುದ್ರ ನೋಡಿಲ್ಲವೆಂದರೆ ಅತಿಶಯೋಕ್ತಿ ಆಗಲಾರದು. ಇವುಗಳನ್ನು ನೀವು ನೋಡದಿದ್ದರೆ ಮಲೆನಾಡಿಗೆ ಬನ್ನಿ. ಭಾರತದಲ್ಲಿಯ ಈ ಯುರೋಪಿಗೆ.

## ವೈವಿಧ್ಯಪೂರ್ಣ

ಮಲೆನಾಡು ಎಂದು ಸರ್ವಸಾಧಾರಣವಾಗಿ ಕರೆದುಕೊಳ್ಳುವ ಮೈಸೂರು ರಾಜ್ಯದ ಪಶ್ಚಿಮ ಪ್ರದೇಶ ವೈವಿಧ್ಯಪೂರ್ಣವಾಗಿದೆ. ಏರು, ದಿನ್ನೆಗಳು, ಗಿರಿ-ಕಂದರಗಳೊಳಗಿಂದ ಹಾದು ಹೋಗುವ ಡೊಂಕು ಡೊಂಕಾದ ರಸ್ತೆಗಳು, ಜುಳುಜುಳು ಹರಿಯುವ ಹಳ್ಳಗಳು ಕಾಡಾನೆಯೂ ಕಾಣದಂತೆ ಹಬ್ಬಿದ ದಟ್ಟವಾದ ಅರಣ್ಯಗಳು, ನೀರಿನ ಸೌಕರ್ಯವಿರುವ ಬಯಲಾದ ಪ್ರದೇಶದಲ್ಲಿ ಅಡಿಕೆ, ತೆಂಗು, ಮಾವು, ಹಲಸು, ಮೆಣಸಿನಕಾಳು, ಯಾಲಕ್ಕಿ, ಬಾಳೆ, ವೀಳ್ಯದಎಲೆ, ಹೊತ್ತು ನಿಂತ ತೋಟಗಳು, ಸಾವಿರಾರು ಎಕರೆ ಭೂಮಿಗೆ ನೀರುಣಿಸುವ ತುಂಗಾ-ಭದ್ರಾ ನದಿಗಳು, ಎತ್ತರದಿಂದ ಕೆಳಗೆ ಧುಮುಕಿ ಲಕ್ಷಾಂತರ ಮನೆಗಳನ್ನು ಬೆಳಗಿ, ನೂರಾರು ಕೈಗಾರಿಕೆಗಳನ್ನು ನಡಿಸುವ ಶರಾವತಿ, ನೂರಾರು ಮೈಲುಗಳ ಕಡಲದಂಡೆ, ರುದ್ರ-ಪ್ರಶಾಂತ ಕಡಲು, ಅರಣ್ಯ ಸಂಪತ್ತನ್ನು ಹೆಚ್ಚಿಸಲು ನಾಲ್ಕು ತಿಂಗಳಕಾಲ ಸತತ ಸುರಿಯುವ ಮಳೆ, ಪರಶುರಾಮನ ನಾಡಿನಲ್ಲಿ ಎಂದೆಂದಿಗೂ ಪೌಷ್ಟಿಕ ಆಹಾರಕ್ಕೆ ಕೊರತೆಯಾಗದಂತೆ ದೊರೆಯಬಹುದಾದ ಹೇರಳ ಮೀನು. ಇವುಗಳೆಲ್ಲದರ ಜೊತೆ ಒಂದಾಗಿ ಜೀವನ ನಡೆಸುತ್ತಿರುವ ಜನ ಜನಾಂಗಗಳು, ಇವೆಲ್ಲ ಮಲೆನಾಡಿನ ಜೀವಾಳವಾಗಿವೆ. ವಿದ್ಯುತ್ತು ಖನಿಜ, ಆಹಾರ ಸಂಪತ್ತು ವಿಪುಲವಾಗಿದ್ದರೂ ಇವು ರಾಜ್ಯದ ಮತ್ತು ದೇಶದ ಇತರ ಅಂಗಗಳಿಗೆ ಪೋಷಕವಾಗಿವೆಯೇ ಹೊರತು ಮಲೆನಾಡಿನ ಪ್ರದೇಶಕ್ಕಲ್ಲ. ಇಲ್ಲಿ ವಾಹನ, ರಸ್ತೆ, ರೇಲು, ಕಾರಖಾನೆ, ಬಂದರ ಸೌಕರ್ಯ ಮುಂತಾದವುಗಳ ಅಭಾವದಿಂದಾಗಿ ಜನ



ಮಲೆನಾಡು ಸೌಂದರ್ಯದ ಬೀಡು

ಆಗಾಗ ತಮ್ಮ ತಾಯ್ನೆಲೆ ಬಿಟ್ಟು ಮುಂಬಯಿಗೊ ಬೆಂಗಳೂರಿಗೋ ವಲಸೆ ಹೋಗುವದುಂಟು. ಮಲೆನಾಡಿನ ಸಂಪತ್ತನ್ನು ಸರಿಯಾಗಿ ಬೆಳೆಸಿಕೊಂಡರೆ ರಾಜ್ಯದಲ್ಲಿ ಈಗಿರುವ ಜನಸಂಖ್ಯೆಯ ಎರಡುಪಟ್ಟು ಜನರಿಗೆ ಉದ್ಯೋಗ, ಬಟ್ಟೆ-ಬರೆ, ಅನ್ನ-ನೀರು, ಸಂಪತ್ತು ಒದಗುವಂತೆ ಇದೆ ಎಂದರೆ ಅತಿಶಯೋಕ್ತಿಯಾಗಲಾರದು.

ಯಾವ ಪ್ರದೇಶಕ್ಕೆ ಮಲೆನಾಡು ಎಂದು ಕರೆಯಬೇಕು ಎಂಬುದರ ಬಗ್ಗೆ ಒಮ್ಮತವಿಲ್ಲ. ಸಹ್ಯಾದ್ರಿಯ ಆಸರೆಯಲ್ಲಿ ಗುಡ್ಡ-ಬೆಟ್ಟ, ಗಿರಿ-ಕಂದರ, ವಿಪುಲಮಳೆ, ದಟ್ಟ ಅರಣ್ಯವುಳ್ಳಂಥ ಪ್ರದೇಶ ಮಲೆನಾಡು ಎಂದು ನಾವು ಒಪ್ಪಿಕೊಂಡರೂ, ಉತ್ತರಕನ್ನಡ, ದಕ್ಷಿಣ ಕನ್ನಡ, ಕೊಡಗು, ಹಾಸನ, ಚಿಕ್ಕಮಗಳೂರು, ಶಿವಮೊಗ್ಗ ಜಿಲ್ಲೆಗಳು ಮಲೆನಾಡಿನಲ್ಲಿ ಸಮಾವೇಶಗೊಳ್ಳುತ್ತವೆ. ಇಲ್ಲಿಯ ಉಡಿಗೆ-ತೊಡಿಗೆ, ರೀತಿ-ನೀತಿ, ಮದುವೆ-ಮುಂಜಿ, ಆದರ-ಸತ್ಕಾರಗಳಲ್ಲಿ ಬಹಳಷ್ಟು ವೈವಿಧ್ಯ ಇರುವದರಿಂದ ಈ ಜನಜೀವನವನ್ನು ತಿರುಳಿನ ರೂಪದಲ್ಲಿ ಹೇಳಲು ಯತ್ನಿಸುವದು ಸುಲಭದ ಮಾತಲ್ಲ. ಹೀಗಾಗಿ ಅಪವಾದಗಳೆಷ್ಟೋ ಹೊರಡಬಹುದು.

ಮುಖ್ಯವಾಗಿ ಕನ್ನಡ-ಕೊಂಕಣಿ, ತುಳು, ಕನ್ನಡ, ಕೊಡಗು ಭಾಷೆಗಳನ್ನು ಈ ಜನ ಮಾತನಾಡುತ್ತಿದ್ದರೂ ಒಂದು ಭಾಗದವರು, ಒಂದು ಜಾತಿಯವರು ಇನ್ನೊಬ್ಬರಿಗೆ ಅರ್ಥವಾಗದಷ್ಟು ಭಿನ್ನವಾಗಿ ಒಂದೇ ಭಾಷೆಯನ್ನು ಆಡುವರು. ಉತ್ತರ ಕನ್ನಡದ ಕೊಂಕಣಿಗರು ಮರಾಠಿ ಶಬ್ದಗಳನ್ನೂ, ಸೇರಿಸಿದರೆ ದಕ್ಷಿಣ ಕನ್ನಡದವರು ಕನ್ನಡ ಶಬ್ದಗಳನ್ನೂ ಚಿಕ್ಕಮಗಳೂರಿನ ಜನ ಇಂಗ್ಲಿಷ್ ಶಬ್ದಗಳನ್ನು ಸೇರಿಸುವರು. ಕೆಲವರು ವ್ಯಾಕರಣಬದ್ಧವಾದ ಪುಸ್ತಕೀಯ ಕನ್ನಡ ಮಾತನಾಡಿದರೆ, ಕೆಲವರು ಹಳೆಗನ್ನಡ(ಹವೀಕರು) ಇನ್ನುಕೆಲವರು ಗ್ರಾಮ್ಯಭಾಷೆ ಮಾತನಾಡುವರು. ಹಲವರಿಗೆ ಮೀನು ಇಲ್ಲದೇ ಒಂದೂ ಊಟ ಹೋಗದಾದರೆ ಮೀನಿನ ಹೆಸರು ತೆಗೆದರೇ ವಾಂತಿಮಾಡುವ ಕುಲೀನ ಬ್ರಾಹ್ಮಣರಿದ್ದಾರೆ. ಹಾಲಕ್ಕಿ ಗೌಡರಂತಹ ಸರಳ ಮುಂದಮತಿಗಳಿದ್ದಾರೆ. ಕೊಂಕಣಿ

ಫೋಟೊ.
ಕೃಷ್ಣಾನಂದ ಕಾಮತ

ಜನ, ಉಡುಪಿಯ ಬ್ರಾಹ್ಮಣರಂತಹ ಕುಶಾಗ್ರಮತಿಯ, ವ್ಯವಹಾರ ಕುಶಲರಿದ್ದಾರೆ. ಮಳೆಯು ಪಾಲನ್ನೇ ತರುವ ಕೊಡವರಿದ್ದಾರೆ. ಹಲವು ಉತ್ತಮ ಕಲಾಕಾರ, ಸಾಹಿತಿ, ವಿಜ್ಞಾನಿ, ಕವಿ, ರಾಜಕಾರಣಿ ನೃತ್ಯಕಾರ, ಯಕ್ಷಗಾನಕೋವಿದ, ನಾಟಕಕಾರರನ್ನು ರಾಜ್ಯಕ್ಕಷ್ಟೇ ಅಲ್ಲ ದೇಶಕ್ಕೇ ಮಲೆನಾಡು ಒದಗಿಸಿದೆ. ಜನಜೀವನ, ಆಚಾರ-ವಿಚಾರ, ಸಂಸ್ಕೃತಿಗಳ ತಳಹದಿಯ ಮೇಲೆ ಮಲೆನಾಡನ್ನು ಮೂರು ವಿಭಾಗಗಳನ್ನಾಗಿ ಮಾಡಬಹುದು. ಘಟ್ಟದ ಕೆಳಗಿನ ಕರಾವಳಿಯ ಉತ್ತರ, ದಕ್ಷಿಣ ಕನ್ನಡಜಿಲ್ಲೆಗಳು ಮೊದಲನೇ ಗುಂಪಿಗೆ ಸೇರಿದರೆ ಎಲ್ಲ ದೃಷ್ಟಿಯಲ್ಲಿಯೂ ತನ್ನತನವನ್ನು ಕಾಯ್ದುಕೊಂಡುಬಂದ ಕೊಡಗು ಎರಡನೇ ಗುಂಪಿಗೆ, ಘಟ್ಟದ ಮೇಲಿನ ಶಿವಮೊಗ್ಗ, ಚಿಕ್ಕಮಗಳೂರ, ಹಾಸನ ಜಿಲ್ಲೆಗಳು ಮೂರನೇ ಗುಂಪಿಗೆ ಸೇರುತ್ತವೆ. ರಾಜ್ಯ ಪುನಾರಚನೆಯ ಪೂರ್ವದಲ್ಲಿ ಹಳೇ ಮೈಸೂರಿಗೆ ಸೇರಿದ ಮೂರನೆಯ ಗುಂಪಿಗಷ್ಟೇ ಮಲೆನಾಡೆಂದು ಕರೆದು ಅಲ್ಲಿಯ ಜನಜೀವನ ಹೆಚ್ಚಾಗಿ ಸಾಹಿತ್ಯದಲ್ಲಿ ನಿರೂಪಿಸಿದೆಯಾದ್ದರಿಂದ ಈ ಲೇಖನದಲ್ಲಿ ಮೊದಲಿನ ಮತ್ತು ಎರಡನೇ ಗುಂಪಿಗೆ ಹೆಚ್ಚು ಪ್ರಾಧಾನ್ಯ ಕೊಡಲಾಗಿದೆ.

## ಸಾರಸ್ವತ ಬ್ರಾಹ್ಮಣರು

ಗೋವಾದಿಂದ ಪೋರ್ಚುಗೀಜರ ಧರ್ಮಪರಿವರ್ತನೆಗೆಅಂಜಿ ಓಡಿಬಂದ ಕೊಂಕಣಿ ಮಾತನಾಡುವ ಆರ್ಯವಂಶಜರ ಮತ್ತು ಪ್ರಾಚೀನಕಾಲದಿಂದಲೂ ನೆಲೆಗೊಂಡ ದ್ರಾವಿಡವಂಶಜರ ಸಹಜೀವನವನ್ನು ಈ ಜಿಲ್ಲೆಗಳಲ್ಲಿ ಕಾಣಬಹುದು. ಕೊಂಕಣಿಗರೆಂದು ಕರೆಯಲ್ಪಡುವ ಸಾರಸ್ವತ ಬ್ರಾಹ್ಮಣರು ಬಂಗಾಲಿ ಬ್ರಾಹ್ಮಣರಂತೆ. ಮತ್ಸ್ಯಭಕ್ಷಿಗಳಾಗಿದ್ದರಿಂದ ಇತರ ಮಡಿವಂತರು ಅವರನ್ನು ಬ್ರಾಹ್ಮಣರೆಂದು ಪರಿಗಣಿಸುವದಿಲ್ಲ. ಮಾರವಾಡಿಗಳಂತೆ ತಮ್ಮ ಹುಟ್ಟುನಾಡು ಬಿಟ್ಟು ಹೆಚ್ಚಿನ ಸೌಕರ್ಯಗಳಿರುವ ಪ್ರದೇಶಗಳಿಗೆ ಹೋಗಿ ನೆಲೆಸಿದ ಈ ಜನರಲ್ಲಿ ಹೆಚ್ಚಿನ ವ್ಯವಹಾರ ಕುಶಲತೆ ಕಾಣಬಹುದು. ವ್ಯಾಪಾರ, ನೌಕರಿ, ಕೃಷಿಗಳಲ್ಲಿ ವಿಶಿಷ್ಟ ಸ್ಥಾನವನ್ನು ಈ ಜನರು ಕಾದುಕೊಂಡಿದ್ದಾರೆ. ಹಿಂದಿನ ಕಾಲದ ಗೃಹಿಣಿಯರು ಒಂಭತ್ತು ಗಜದ ಸೀರೆಯನ್ನು ಮಹಾರಾಷ್ಟ್ರಿಗರಂತೆ ಕಚ್ಚೆಹಾಕಿ ಉಟ್ಟು, ಕೂದಲಿನ ತುರುಬು ಹಾಕಿಕೊಂಡರೆ ನವಯುವತಿಯರು ಆರು ಗಜಸೀರೆ, ಲಂಗ, ವಿವಿಧ ಕೇಶಾಲಂಕಾರಗಳನ್ನು ಬಳಕೆಯಲ್ಲಿತಂದಿದ್ದಾರೆ. ಇದರಂತೆ ಧೋತರವೂ ಕ್ರಮಕ್ರಮೇಣ ಮಾಯವಾಗುತ್ತ ಬಂದಿದೆ. ಹಿಂದೆ ಅವಿಭಕ್ತ ಕುಟುಂಬಗಳು ಸಾಮಾನ್ಯವಾಗಿದ್ದರೂ ಇತ್ತೀಚೆಗೆ ಚಿಕ್ಕ ಸಂಸಾರಗಳೇ ಸಾಮಾನ್ಯ. ವಿದ್ಯೆ-ಬುದ್ಧಿಗಳೇ ಇವರ ಪಿತ್ರಾರ್ಜಿತ ಸಂಪತ್ತಿಯಾದ್ದರಿಂದ ಪ್ರತಿಯೊಬ್ಬನೂ ತನ್ನಿಂದಾದಷ್ಟು ಉಚ್ಚಶಿಕ್ಷಣವನ್ನು ಮಕ್ಕಳಿಗೆ ಕೊಡಲು ಯತ್ನಿಸುತ್ತಾನೆ. ಬಡವಿದ್ಯಾರ್ಥಿಗಳ ಸಹಾಯಕ್ಕೆಂದು ಕೆಲ ಸಹಕಾರಿ ಸಂಸ್ಥೆಗಳೂ ಇವೆ. ಗಳಿಸಿದ ಹಣಕ್ಕಿಂತ ಶೇಖರಿಸಿದ ಹಣ ತನ್ನದು ಎಂಬಮಾತಿನಲ್ಲಿ ವಿಶ್ವಾಸವಿಟ್ಟದ್ದರಿಂದ ವಿನಾಕಾರಣ ದುಂದುಮಾಡುವ ಜನವಲ್ಲ. ಸೋಮಾರಿಗಳನ್ನು ತೀರ ನಿಂದ್ಯವಾಗಿ ಈ ಸಮಾಜ ಕಾಣುವದು. ಕೆಲಸದ ನಿಮಿತ್ತ ಪರ ಊರಿಗೆ ಹೋದಾಗ ಹೋಟೇಲಿಗೆ ಹೋಗುವದಕ್ಕಿಂತ ಆಪ್ತರಲ್ಲಿ ಬೀಡುಬಿಡುವದು ವಾಡಿಕೆ. ಬಂದ ಅತಿಥಿಗಳಿಗೆ ಮೀನಿನ ವ್ಯಂಜನಗಳು, ಸಿಹಿಪದಾರ್ಥಗಳನ್ನೂ ಮಾಡಿ ಬಡಿಸುವರು. ಅತಿಥಿಗಳು ಮನೆಯ ಮಕ್ಕಳಿಗೆ ಚಿಕ್ಕಪುಟ್ಟ ಕಾಣಿಕೆ ತರುವರು. ಅಪರೂಪಕ್ಕೆ ಬರುವ ಸುಮಂಗಲಿಯರಿಗೆ ಸೀರೆ, ಕಣವಾಗಲಿ ತೆಂಗಿನಕಾಯಿಯಾಗಲಿ ಉಡಿತುಂಬಿ ಕುಂಕುಮ ಹಚ್ಚುವರು.

ಇತ್ತೀಚೆಗೆ ಮುಂಜಿಯ ವೈಭವ ಕೆಲಮಟ್ಟಿಗೆ ಕಡಿಮೆಯಾದರೂ ಮದುವೆಗಳ ಖರ್ಚು ಹೆಚ್ಚುತ್ತಲೆ ನಡೆದಿದೆ. ವರದಕ್ಷಿಣೆಯೂ ಏರುತ್ತಲಿದೆ. ಹೀಗಾಗಿ ಮಧ್ಯಮ ವರ್ಗದ ಕುಮಾರಿಯರು ತಂದೆಯ ಈ ಭಾರವನ್ನು ಕಡಿಮೆ ಮಾಡಲು ತಾವೂ ಕಲಿತು ನೌಕರಿಮಾಡಿ ಧನ ಸಂಪಾದನೆಯ ಜೊತೆಗೆ ಪತಿಯನ್ನೂ ಸಂಪಾದಿಸುವರು. ಹಿಂದೆ



ರಂಗೇರಿಸುವ ಅಡಿಕೆ

ಮದುವೆ ೪-೫ದಿನಗಳವರೆಗೆ ನಡೆಯುತ್ತಿದ್ದರೂ ಈಗ ಒಂದೇ ದಿನದಲ್ಲಿ ಮುಗಿಸುವರು. ಅದೂ ದೇವಸ್ಥಾನದಲ್ಲಿ ಅಥವಾ ಸಾರ್ವಜನಿಕ ಕಲ್ಯಾಣ ಮಂಟಪಗಳಲ್ಲಿ ಮಾಡುವರು. ಸೋದರನ ಮಗಳನ್ನು ಸೋದರಿಯ ಮಗನಿಗೆ ಕೊಡುವದು ಹಕ್ಕಿನ ಸಂಬಂಧವೆನಿಸಿಕೊಳ್ಳುತ್ತದೆ. (ಆದರೆ ಮಾತುಲ ವಿವಾಹ ನಿಷಿದ್ಧವಿದೆ.)ಮದುವೆ ಉದ್ದನ್ನು ಬೀಸುವದರಿಂದ ಪ್ರಾರಂಭವಾಗಿ ಮದುಮಗನು ಕಾಶೀಯಾತ್ರೆಗೆ ಹೊರಟಾಗ ಮಾವನು ಅಗ್ಗಟ್ಟಿ, ಮಗಳನ್ನು ಕೊಡುವೆನೆಂದು ಮನ ಒಲಿಸಿ ಕರೆತರುವನು. ಕನ್ಯೆಯ ಸೋದರಮಾವನು ಅವಳನ್ನು ಮಂಟಪಕ್ಕೆ ಕರೆತರುವನು. ಹೆಂಗಳೆಯರ ಕೊಂಕಣಿ ಹಾಡುಗಳು ನಡೆದಾಗ ಅಗ್ನಿ ಸಾಕ್ಷಿಯಾಗಿ ಪತಿ-ಪತ್ನಿಯರಾಗುವರು.ನವದಂಪತಿಗಳ ಹೊಸ ಸಂಸಾರಕ್ಕೆ ಸಹಾಯವಾಗಲೆಂದು ದಿನಬಳಕೆಯ ಅನೇಕ ಸಾಮಾನುಗಳನ್ನು ಆತ್ಮೀಯರುಉಡುಗೊರೆಯ ರೂಪದಲ್ಲಿ ಕೊಡುವರು. ಪತಿಗೆ ೨೫ವರ್ಷ ಪತ್ನಿಗೆ ೨೦ವರ್ಷಗಳು ಸಾಮಾನ್ಯವಾಗಿ ಮೀರಿರುವದರಿಂದ ಅವರು ತಮ್ಮದೇ ಸಂಸಾರ ಹೂಡುವರು. ಊಟದಲ್ಲಿ ಚಪಾತಿ-ಭಕ್ರಿಗಳಿಲ್ಲ. ಅನ್ನದೋಸೆ, ಅಕ್ಕಿಯ ತಿಂಡಿಗಳೇ ಹೆಚ್ಚು. ಗೊಜ್ಜು, ಪಲ್ಯ, ಬೇಳೆ ಹುಳಿ ಮುಂತಾದವುಗಳಿಗೆಲ್ಲ ವಿಪುಲವಾಗಿ ತೆಂಗಿನಕಾಯಿ ಉಪಯೋಗಿಸುವರು. ಮುಂಜಾನೆ ದೋಸೆ, ಇಡ್ಲಿ, ಉಪ್ಪಿಟ್ಟು ತಿಂದು ಚಹಾ-ಕಷಾಯ(ಜೀರಿಗೆ ಕೊತ್ತಂಬರಿ-ಬಡೇಸೋಪಿನ ಕಾಢಾಕ್ಕೆ ಹಾಲು-ಸಕ್ಕರೆ ಬೆರಸಿದ್ದು) ಕುಡಿದು ಹತ್ತು-ಹನ್ನೊಂದು ಗಂಟೆಗೆ ಬಿಸಿಲಿನ ತಾಪದಿಂದ ಸಂರಕ್ಷಿಸಿಕೊಳ್ಳಲು ಗಂಜಿ ಊಟ ಮಾಡುವರು. ಮಧ್ಯಾಹ್ನ ೧-೨ಗಂಟೆಗೆ ಊಟ, ೩-೪ ತಾಸುಗಳನಂತರ ಮಾಡಿಟ್ಟ ತಿಂಡಿಯೊಂದಿಗೆ ಚಹಾ ಕುಡಿದು ತಿರುಗಿ ರಾತ್ರೆ ಊಟಮಾಡುವರು.

ಕಾರವಾರದಿಂದ ಕೋಚಿನದವರೆಗೆ ತನಕ ಕರಾವಳಿ ಪ್ರದೇಶದಲ್ಲಿ ಹರಡಿದ ಸಾರಸ್ವತ ಬ್ರಾಹ್ಮಣರು



ವಿಪುಲವಾದ ನೀರು.

ತಮ್ಮ ಪರಿಸರದ ವ್ಯಾಪಾರವನ್ನು ನಿಯಂತ್ರಿಸುವದರಿಂದ ಸಮಾಜದಲ್ಲಿ ಗಣ್ಯಸ್ಥಾನಗಳಿಸಿರುವರು. ದಕ್ಷಿಣ ಕನ್ನಡದ ಪೈ ಕುಟುಂಬದವರು ಬ್ಯಾಂಕಿಂಗ್ ಕ್ಷೇತ್ರದಲ್ಲೂ ಶಿಕ್ಷಣ ಕ್ಷೇತ್ರದಲ್ಲೂ ಎತ್ತಿದ ಕೈ. ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳುವದರಲ್ಲಿ ದೇಶದ ಮತ್ತು ಜಗತ್ತಿನ ವಿವಿಧ ಭಾಗಗಳಿಗೆ ಹೋದರೂ ಕೊಂಕಣಿ ಜನ ತಮ್ಮತನವನ್ನು ಬಿಟ್ಟುಕೊಡುವದಿಲ್ಲ.

## ಹವೀಕರು

ಹವೀಕರು ಸ್ಥಾನಿಕ ದ್ರಾವಿಡ ಬ್ರಾಹ್ಮಣರು. ಕೊಂಕಣಿಗರ ತೀವ್ರ ಪ್ರತಿಸ್ಪರ್ಧಿಗಳು. ಒಕ್ಕಲುತನ-ತೋಟಗಾರಿಕೆಗಳು ಮೂಲ ವ್ಯವಸಾಯವಾದರೂ ಕಲಿತವರು, ಕೋರ್ಟು, ಕಚೇರಿ, ಶಿಕ್ಷಣ ಸಂಸ್ಥೆಗಳಲ್ಲಿ ನೌಕರಿ ಮಾಡುತ್ತಾರೆ. ಸಹ್ಯಾದ್ರಿಯ ಸೆರಗಿನಲ್ಲಿ ಹರಿಯುವ ನೀರಿನ ಅನುಕೂಲವಿದ್ದಲ್ಲಿ ಇವರ ತೋಟಗಳು ಪ್ರಸಿದ್ಧವಿವೆ. ಸೂರ್ಯನೊಂದಿಗೆ ಎದ್ದು ದಿನವಿಡೀ ಬೆನ್ನು ಮುರಿದು ದುಡಿಯುವರು. ತಮ್ಮ ತೋಟಗಳಲ್ಲಿ ಬಾಳೆ, ವೀಳ್ಯದೆಲೆ, ಯಾಲಕ್ಕಿ, ಮೆಣಸಿನಕಾಳು, ಅಡಿಕೆ ಮುಂತಾದವನ್ನು ಬೆಳೆಯುವದರಿಂದ ಕೈತುಂಬ ಸಂಪಾದನೆ ಮಾಡುವರು. ಇಷ್ಟಾದರೂ ಧನಸಂಚಯದ ರೂಢಿ ಇವರಿಗಿಲ್ಲ. ತಿಂಗಳಿಗೆ ಎರಡುಸಾವಿರ ಉತ್ಪನ್ನವಿದ್ದರೆ ಇಪ್ಪ-ತ್ತೊಂದನೂರು ಖರ್ಚುಮಾಡುವ ಜನರಿದ್ದಾರೆ. ಉಂಡುಟ್ಟು ಸುಖಪಡೆಯುವದರಲ್ಲಿ ವಿಶ್ವಾಸವಿಟ್ಟ ಜನ. ಬಟ್ಟೆಬರೆಗಳನ್ನು ಉದ್ರಿಯಾಗಿ ತರಬೇಕಾಗುವದು. ಅಂತೆಯೇ ಚಕ್ರಬಡ್ಡಿಗಿಂತಲೂ ಹೆಚ್ಚು ಬಡ್ಡಿಯನ್ನು ತೆರಬೇಕಾಗುವದೆಂದು ತಿಳಿದಿದ್ದರೂ ಹಾಗೆ ಮಾಡದೇ ಬೇರೆದಾರಿ ಇಲ್ಲ ಎಂಬರು. ಕೆಲವರು ಜ್ಯೋತಿಷ, ಜಾತಕ, ಪೌರೋಹಿತ್ಯದ ಕೆಲಸಮಾಡಿದರೆ ಕೆಲವರು ಉತ್ತಮ ಸಂಸ್ಕೃತ ಪಂಡಿತರಿದ್ದಾರೆ. ಪ್ರೌಢ ಸ್ತ್ರೀಯರು ಒಳಕಚ್ಚೆಹಾಕಿ ಏಳುವಾರಿನ ಸೀರೆಗಳನ್ನು ಹೊರಕಚ್ಚೆಯಿಲ್ಲದೇ ಪಾದಗಳಿಂದ ಸ್ವಲ್ಪ ಮೇಲ್ಪದಿಗೆ ಉಡುವರು. ಹಿಂದಿನ ಕಾಲದಲ್ಲಿ ಕಣದ ರವಕೆಗಳು ಸಾಮಾನ್ಯವಾಗಿದ್ದರೂ ಈಗ ಆಧುನಿಕ ಬ್ಲೌಜ್‌ಗಳು ಕಂಡುಬರುತ್ತವೆ. ಗಂಡಸರು ಕೆಲಸದ ವೇಳೆಯಲ್ಲಿ ಮಾರುದ್ದ ಕಚ್ಚೆಯನ್ನು, ಧೋತರವನ್ನೋ ಧರಿಸಿದರೆ ಹೊರಗೆ ಹೋಗುವಾಗ ಧೋತರ ಶರ್ಟ, ರುಮಾಲು-ಟೊಪ್ಪಿಗೆಗಳನ್ನು ಧರಿಸುವರು. ಸಿಹಿತಿಂಡಿಗಳೆಂದರೆ ಬಲು ಇಷ್ಟ. ವೀಳ್ಯವನ್ನು ಸದಾಕಾಲ ಮೆಲ್ಲುವರು. ದೋಸೆ, ಅವಲಕ್ಕಿ, ಕಷಾಯ ಅಥವಾ ಚಾ, ನಾಷ್ಟಾ, ಅನ್ನದೂಟದಲ್ಲಿ ಮೊಸರು, ಮಜ್ಜಿಗೆ, ತೆಂಗಿನಕಾಯಿಗಳ ಉಪಯೋಗತುಂಬ. ವ್ಯಂಜನಗಳ ವೈವಿಧ್ಯವೂ ಸಾಕಷ್ಟು. ಗೊಜ್ಜು, ತಂಬಳಿ, ಸಾರು, ಹುಳಿ, ಹಸಿ, ತಾಳ್ಯ,(ಪಲ್ಯ) ಇತ್ಯಾದಿಗಳು ಬೇಕೇಬೇಕು. ಪ್ರತಿಯೊಂದನ್ನು ಅನ್ನದೊಡನೆ ಮಿಶ್ರಣಮಾಡಿ ಉಣ್ಣುವರು. ತುಪ್ಪ, ಸಕ್ಕರೆ ಧಾರಾಳವಾದ ಉಂಡಿಗಳು, ತುಪ್ಪಬಸಿಯುವ ಕೇಶರಭಾತ, ಶಿರಾ, ಜಲೇಬಿಗಳು ಅವರ ಪ್ರೀತಿಯ ತಿಂಡಿಗಳು. ಮನೆಗೆ ಯಾರೇ ಬರಲಿ ಅವರಿಗೆ ಮಜ್ಜಿಗೆ, "ಪಾಲೀರು"(ಹಾಲು-ನೀರು) ಎಳನೀರು, ಶರಬತಗಳನ್ನು ಕೊಟ್ಟು ಎಲೆಯಡಿಕೆ ಇರಿಸುವರು. ಶೂದ್ರಾದಿಗಳಿಗೆ ಬೆಲ್ಲನೀರು, ವೀಳ್ಯ ದೊರೆಯುವವು. ಆಪ್ತೇಷ್ಟರಿಗೆ ಹಬ್ಬದೂಟದ ಉಪಚಾರವಾಗುವದು. ಆತಿಥ್ಯಕ್ಕೆ ಹೆಸರಾದ ಜನ.



[illegible] ಎಲೆ [illegible] ತೆಂಗು [illegible]



ಪಾಪ್ಶಿಕ ಮೀನು

ಇವರ ಮನೆಮಾತು ಹಳೆಗನ್ನಡವಾದ್ದರಿಂದ ಅಚ್ಚಗನ್ನಡಿಗನಿಗೂ ಅವರ ಮಾತು ಅರ್ಥವಾಗುವದು ಕೊಂಚ ಬಿಗಿ. "ಓ ಅಬ್ಬೆ, ಎಂಗೆ ಒರಕೇ ಬತ್ತಿಲ್ಲೆ, ಎಂತಾ ಮಾಡೊವೊ ತಿಳಿತಿಲ್ಲೆ"(-ಅವ್ವಾ, ನನಗೆ ನಿದ್ದೆ ಬಾರದು ಏನು ಮಾಡಬೇಕೆಂದೂ ತೋಚದು). ಹೊರಗೆ ದಿನ ಬಳಕೆಯ ಕನ್ನಡ ಮಾತನಾಡುವರು. ಮಗನಿಗೆ ಮಾಣಿ, ಮಗಳಿಗೆ ಕೂಸೆ ಎಂದು ಕರೆಯುವರು. ಹೆಣ್ಣುಮಕ್ಕಳನ್ನೆಲ್ಲ ನಪುಂಸಕಲಿಂಗದಲ್ಲಿ ಸಂಬೋಧಿಸುವದು ವಾಡಿಕೆ. ಹಳ್ಳಿಗಳಲ್ಲಿಯೇ ಇವರ ವಾಸವಿದ್ದುದರಿಂದ ಹೊಳೆಯಾಚೆ ಮಗಳನ್ನು ಕೊಡುವದೆಂದರೆ ಯಾವದೋ ವಿದೇಶಕ್ಕೆ ಕಳಿಸಿದಂತೆ ಭಾವಿಸುತ್ತಿದ್ದರು. ಹಿಂದಕ್ಕೆ ಹೆಣ್ಣು ತರಲು "ತೀರ"(ತೆರ) ಕೊಡಬೇಕಾಗುತ್ತಿತ್ತು. ಈಗ ವರದಕ್ಷಿಣೆಯೂ ಕಾಣಿಸಿಕೊಳ್ಳಹತ್ತಿದೆ. ಘಟ್ಟದ ಮೇಲೆ ವರದಕ್ಷಿಣೆಗೆ ಅಷ್ಟು ಮಹತ್ವಕೊಡುವದಿಲ್ಲ. ಚಿಕ್ಕವಯಸ್ಸಿನ ಅಂದರೆ ೧೪-೧೬ವರ್ಷದ ಕನ್ಯೆ, ೧೮-೨೦ ವರ್ಷದ ವರ ತೀರಸಾಮಾನ್ಯವಾಗಿದ್ದಾರೆ. ಮೂವತ್ತು ವರ್ಷದ ವರ ಶಿವರ್ಷದ ಹುಡುಗಿಯನ್ನು ಮದುವೆಯಾದದ್ದು ಇದೆ. ಐವತ್ತು ವರ್ಷದ ವರನಿಗೆ ೧೮ ವರ್ಷದ ಕುಮಾರಿಯನ್ನು ಕೊಟ್ಟು ಮದುವೆಮಾಡಿದವರೂ ಇದ್ದಾರೆ. ಇಂಥ ಪ್ರಸಂಗಗಳಲ್ಲಿ ಸ್ತ್ರೀಯರಿಗಿಂತ ಮುಂಚೆಯೇ ಗಂಡಂದಿರು ಸ್ವರ್ಗಲೋಕಕ್ಕೆ ಆತುರವಾಗಿ ಹೋಗುವದರಿಂದ "ಅಮ್ಮದಿಕ್ಕ"ರ(ವಿಧವೆಯರ) ಸಂಖ್ಯೆ ಹೆಚ್ಚಿದೆ. ಮುಂಡನ- ಕೆಂಪುಸೀರೆಗಳಿಂದ ಸಮಾಜ ಅವರ ಪರಿಶುದ್ಧತೆಯನ್ನು ಕಾಯುಲು

ಮತ್ತಿಸತು. ಅಂತೆಯೇ "ಗಣಪತಿ, ನಾಮದೇವ, ಬೊಕ್ಕಕೊಟಿ ಅಬ್ಬಕ್ಕ" ಇತ್ಯಾದಿ ಗಾದೆಮಾತು ಅವರಲ್ಲಿ ಪ್ರಚಲಿತವಿದೆ. ಇಂಥ ವಿಳಾಯ ಮನೆಯವರ ಜೀವನ ಮಾಡಬೇಕಾಗದೇ ಇದ್ದೀತೆ? ತಮ್ಮ ಕುಲದ ಉದ್ಧಾರವಾಗಬೇಕೆಂದು ಆಗಾಗ ಕೋಗ "ಮಾಮ್ಮ" (ಸೌಮ್ಯ ನೀತಿ) ಪಾಠದ ಪದ್ಧತಿ ಪಠಿಗಳಲ್ಲಿ ಇತ್ತು. ಹೀಗಾಗಿ ಎಷ್ಟೋ ಬೇರೆಜಾತಿ ಅತಿಥಿಗಳು ತಾವೇ ಬಾವಿಯಿಂದ ನೀರು ಸೇದಿ ಅಡಿಗೆಮಾಡಿ ಉಣ್ಣುತ್ತಿದ್ದರು.

ಕೊಂಕಣಿಗರಂತೆಯೇ ಸೋದರ ಮಾವನ ಮಗಳನ್ನು ಮದುವೆಯಾಗುವರು. ಜಾತಕದ ಹೊಂದಾಣಿಕೆ ನೋಡಿ ಒಂದು ವಾರದೊಳಗೆ ಮುಹೂರ್ತ ಇಟ್ಟು, ಕಾಯಿ-ಬೆಲ್ಲ ತಿನ್ನುವರು. ಮದುಮಗನು ಮನೆಯಲ್ಲಿಯೇ ಬಾಸಿಂಗಕಟ್ಟಿಕೊಂಡು ಆಪ್ತೇಷ್ಟರೊಂದಿಗೆ ಮದು-ಮಗಳ ಮನೆಗೆ ಹೋಗುವನು. ಅತಿಥಿಗಳಿಗೆ ಕಾಲಿಗೆ ನೀರುಕೊಟ್ಟು, ತಿಂಡಿ ಪಾನಕಕೊಟ್ಟು, ಅತ್ತರ ಹಚ್ಚಿ, ಪನ್ನೀರು ಸಿಂಪಡಿಸಿ ಗಾಳಿಬೀಸಿ ಸತ್ಕರಿಸುವರು. ಬಂದ ವರಿಗೆ ತೆಂಗಿನಕಾಯಿ ಜೊತೆಗೆ ಒಂದುರೂಪಾಯಿ. ಕಿರಿಯರಿಗೆ ಹತ್ತು ಪೈಸೆ ದಕ್ಷಿಣೆಕೊಡುವರು. ಮದುವೆ ಯಲ್ಲಿ ಒಬ್ಬಳು ಹಾಡುವಾಗ ಉಳಿದವರು ಸೋಬಾನೆ" ಎನ್ನುವರು. ವಿವಾಹದ ನಂತರ "ಸಟ್ಟಮುಡಿ"(ನೆಂಟರ ಊಟ) ನಡೆಯುವದು. ಇಂತಹ ಸಮಯದಲ್ಲಿ ಮನೋ ಹರ (ಕದಲಿಬಾಳೆ + ತುಪ್ಪ + ಬೆಲ್ಲ) ಪಾಯಸ. ರವೆ ಲಾಡು, ಪಂಚಕಜ್ಜಾಯ ಹೋಳಿಗೆ ಮಾಡುವರು. ಘಟ್ಟದ ಮೇಲೆ ಜಿಲೇಬಿಮಾಡುವದು ರೂಢಿ. ಮದುವೆ ಯಲ್ಲಿ ತೆಂಗಿನಕಾಯಿಗಳನ್ನು ಹೇರಳವಾಗಿ ಹಂಚುವರು. ಮದುಮಗಳನ್ನು ಮನೆ ತುಂಬಿಸಿ, ೬ಕೆ ಹೊಸ್ತಿಲು ದಾಟಿದ ನಂತರ ಬೆಲ್ಲ-ಕಾಯಿ ಹಂಚುವರು. ಆ ಸಮಯ ದಲ್ಲಿ ಪತಿ-ಪತ್ನಿಯರಿಗೆ ತೆಂಗಿನ ಚಿಪ್ಪನ್ನು ಕೊಡುವನು ಮತ್ತು ಇದನ್ನು ಪ್ರಥಮ ಪ್ರಸೂತಿಯಲ್ಲಿ ಬಳಸು ವರು. ಹೆಗಡೆ. ಭಟ್ಟ. ಶಾಸ್ತ್ರಿಗಳು ಹೆಚ್ಚಾಗಿ ರೂಢಿಯಲ್ಲಿ ಇರುವ ಹೆಸರುಗಳು. ಅಜ್ಜನ ಹೆಸರು ಮೊಮ್ಮಗನಿಗೆ ಇಡುವದು ಸಾಮಾನ್ಯವಿದ್ದಂತೆ ತಂದೆಯ ಹೆಸರನ್ನು ಮಗನಿಗೆ ಇಡುವರು. ಆದರೆ ಮಗನನ್ನು 'ಮಾಣಿ' ಯೆಂದು ಕರೆಯುವದರಿಂದ ಹೆಸರಿನ ಗೊಂದಲ ಏಳುವ ದಿಲ್ಲ. ಸ್ಮಾರ್ತ, ಶಿವಳ್ಳಿ, ವೈಷ್ಣವರೆಂಬ ಒಳಪಂಗಡ ಗಳಿದ್ದು, ಹೆಬ್ಬಾರರು, ಮತ್ತು ಇಪ್ಪತ್ತನಾಲ್ಕರವ ರೊಂದಿಗೆ ಈ ಪಂಗಡಗಳು ಅಷ್ಟಾಗಿ ಬೆರೆಯುವದಿಲ್ಲ.

## ಸೇರುಗಾರರು

ಉತ್ತರ ಕನ್ನಡದ 'ಸೇರುಗಾರ'ರು ಒಂದೊಮ್ಮೆ ಉತ್ತಮ ಯೋಧರಾಗಿದ್ದರೂ ಇಂದು ಕೃಷಿಯನ್ನು ಕೈಕೊಂಡಿದ್ದಾರೆ. ಒಳ್ಳೆಯ ದೃಢಕಾಯರು. ಶಿಕ್ಷಣದಲ್ಲಿ ಅಷ್ಟೊಂದು ಮುಂದುವರಿದವರಲ್ಲ. ಒತ್ತಕ್ಷರಗಳೇ ಹೆಚ್ಚಾಗಿರುವ ಇವರ ಕೊಂಕಣಿಮಾತಿನ ಪದ್ಧತಿಯೇ ಬೇರೆ. ಕಾಯಿಪಲ್ಲೆ ಬೆಳೆಯುವದು. ಚಕ್ಕಡಿಹೊಡೆಯು ವದು, ಹಾಲು, ಹೈನದವ್ಯಾಪಾರ. ಹೆಂಗಳೆಯರು ಎಂಟು ಗಜದ ಸೀರೆ ಮತ್ತು ಕುಪ್ಪಸ-ರವ್ಲಾದ ಬಣ್ಣದವು ಗಳನ್ನು ತೊಟ್ಟು ದೊಡ್ಡ ಕುಂಕುಮ ಧರಿಸುವರು. ಪುರುಷರು ಧೋತರ ಉಟ್ಟು, ಜನಿವಾರ ಧರಿಸಿ ಬರಿ ಮೈಯಲ್ಲಿ ಇರುವದೇ ಹೆಚ್ಚು. ಹಿಂದೊಮ್ಮೆ ತಾವು ಬ್ರಹ್ಮಕ್ಷತ್ರಿಯರೆಂದು ಸಾಧಿಸಿದ್ದರು. ಇತ್ತೀಚೆಗೆ ತಾವು ಮಾಂಸಾಹಾರಿಗಳು, ಮೇಲಿನ ವರ್ಗಕ್ಕೆ ಸೇರಿಲ್ಲ. ಸರಕಾರವು ಹಿಂದುಳಿದ ವರ್ಗಗಳಿಗೆ ಕೊಡುವ ರಿಯಾ ಯತಿ ತಮಗೂ ದೊರೆಯಬೇಕು ಎಂದು ವಾದಿಸುತ್ತಿ ದ್ದಾರೆ. ಅವಲಕ್ಕಿ ಚಹಾಗಳ ನಾಶ್ತಾ, ಕುಚ್ಚಲಕ್ಕಿಯ ಅನ್ನ-ಮೀನಿನ ವ್ಯಂಜನದ ಮಧ್ಯಾಹ್ನದೂಟ. ಊಟ ದಲ್ಲಿ ಹೆಚ್ಚು ವೈವಿಧ್ಯವಿಲ್ಲ. ಅನ್ನದ ಪ್ರಮಾಣ ಮಾತ್ರ ಹೆಚ್ಚು. ಹಬ್ಬಹುಣ್ಣಿಮೆಗಳಲ್ಲೂ ಕುಚ್ಚಿಗಿ ಅಕ್ಕಿಯದೇ ಪ್ರಯೋಗ. ವರನ ಕಡೆಯವರು ವಧೂ ಶೋಧ ನಡೆಸು ವರು. ಅಕ್ಕಿ, ಬೆಲ್ಲಗಳ ಪ್ರಮಾಣದಲ್ಲಿ ವಧುದಕ್ಷಿಣೆ ನಿರ್ಧಾರವಾಗುವದು.

ಮದುಮಗನು ಮದುವೆಗೆ ಭಾವೀಮಾವನ ಮನೆಗೆ ಬಂದಾಗ ಸೀಮಂತ ಪೂಜೆಮಾಡಿ, ಮೆರವಣಿಗೆ ತೆಗೆದು ಮದ್ದು-ಗುಂಡುಹಾರಿಸಿ ಕರೆದುಕೊಂಡು ಹೋಗುವರು. ಇಂಥ ಸಮಾರಂಭಗಳಲ್ಲಿ ಅನ್ನದ ದೊಡ್ಡರಾಶಿಯೇ ಬೇಕಾಗುವದರಿಂದ ದೊಡ್ಡಹೊಡತೊಡಿ ಬೆಂಕಿ ಮಾಡಿ ಅದರಮೇಲೆ ಅಕ್ಕಿ ಬೇಯಿಸಿ ತೆಂಗಿನಗರಿಗಳಿಂದ ಸೋಸಿ ಚಾಪೆಗಳಮೇಲೆ ಹರಪಿ ಆಪ್ತಮಾಡುವರು. ಕಡಲೆಬೇಳೆ ಪಾಯಸ ಹಚ್ಚಿನ ಪಕ್ವಾನ್ನವೆನ್ನಿಸುವದು. ಯಾವುದೋಂದು ಕಾರಣದಮೇಲೆ ಜಗಳಪ್ರಾರಂಭ ವಾಗಿ ಬಾಯಿಂದ ಕೈಗೆ ಹತ್ತಿ ತಾವೊಮ್ಮೆ ಕ್ಷತ್ರಿಯ ಕುಲಕ್ಕೆ ಸೇರಿದವರೆಂದು ತೋರಿಸಿಕೊಂಡಾಗಲೇ ಮದು ವೆಗೆ ಮೋಜು ಬರುವದು. ಬಂದ ಅತಿಥಿಗಳೆಲ್ಲ ಸೊಂಟ ಕ್ಕೊಂದು ಅಂಗವಸ್ತ್ರಬಿಗಿದುಕೊಂಡು ಮದುವೆ ಊಟ ತಯಾರಿಸುವದರಲ್ಲಿ ಸಹಾಯಮಾಡುವರು. ಊಟ ವಾದ ನಂತರ ಪಾತ್ರೆಗಳನ್ನೆಲ್ಲ ಬೇಗಿಯೇ ಅತಿಥಿಗಳು ಮನೆಗೆ ಮರಳುವರು. ಉತ್ತರದ "ಸರದಾರಜಿ"ಯರನ್ನು ಇವರು ಸ್ವಭಾವದಲ್ಲಿ ಹೋಲುತ್ತಾರೆ. ಹೀಗಾಗಿ ಎಂಥ ವನಿಗೂ ಅವರ ಹೊಲದಲ್ಲಿ ಸೇಂಗಾ, ಕಬ್ಬು ಕದಿಯಲು ಸಾಹಸ ಸಾಲದು. ಒಮ್ಮೆ ಸಿಕ್ಕು ಬಿದ್ದವರನ್ನು ಚರ್ಮ ಸುಲಿದುಹೋಗುವಂತೆ ಬಡಿಯುತ್ತಾರೆ. ನಿತ್ಯಜೀವನ ದಲ್ಲೂ ಇವರೊಂದಿಗೆ ಇತರರು ಹೆಚ್ಚಿನ ಸಾವಧಾನ ದಿಂದ ವರ್ತಿಸುತ್ತಾರೆ. ಒಮ್ಮೆ "ಲಂಕಾದಹನ"ಯಕ್ಷ ಗಾನವನ್ನು ಏರ್ಪಡಿಸಿದ್ದಾಗ ಕೊನೆಯಲ್ಲಿ ರಾವಣನು ರಾಮನೊಂದಿಗೆ ಕಾದಾಡಿ ಸೋಲಬೇಕಲ್ಲವೇ? ಬಲಿಷ್ಠ ನಾದರೂ ರಾವಣನು ದೈತ್ಯನಿದ್ದುದರಿಂದ ರಾಮನಿಗೆ ಸೋಲಬೇಕಾಯಿತೆಂದು ರಾಮಾಯಣ ಹೇಳುತ್ತದೆ. ಆದರೆ ಈ ನಾಟಕದ ರಾಮ-ರಾವಣನಿಗೆ ವೈಯಕ್ತಿಕ ದ್ವೇಷವಿದ್ದುದರಿಂದ ಕೊನೆಯ ಸೀನಿನಲ್ಲಿ ಇಬ್ಬರಿಗೂ ಕೈಗೆ ಕೈ ಹತ್ತಿತು. ಬಲಿಷ್ಠನಾದ ರಾವಣ ಪಾತ್ರಧಾರಿ ರಾಮನನ್ನು ಚೆನ್ನಾಗಿ ಥಳಿಸಿದ. ಪರದೆಯ ಹಿಂದೆ ನಿಂತವರು ಕಂಗಾಲಾಗಿ "ಮೇಲು"ಧ್ವನಿಯಲ್ಲಿ ನೀನು ಸೋತಂತೆ ನಟಿಸುಎಂದು ರಾವಣನಿಗೆ ಬೇಡಿಕೊಂಡರೂ ಅವನ ಸಿಟ್ಟು ನೆತ್ತಿಗೇರಿ ನಾನು ಏಕೆ ಸಾಯಬೇಕು? ಅವನನ್ನು ನಿರ್ನಾಮ ಮಾಡಿದಾಗಲೇ ನನಗೆ ನೆಮ್ಮದಿ ಎಂದು ಗರ್ಜಿಸಿದ. ನಾಲ್ಕು ಜನ ಬಲಿಷ್ಠರು ಬಂದು ರಾವಣನನ್ನು ಎಳೆದೊಯ್ದಾಗಲೇ ನಾಟಕ ಮುಕ್ತಾಯ ವಾಯಿತು.



ಊಟಕ್ಕೆ ಅಕ್ಕಿ

ದಕ್ಷಿಣದಲ್ಲಿಯ 'ಸೇರೆಗಾರ' ಜನಾಂಗ ಇವರಿ ಗಿಂತ ಭಿನ್ನರಾಗಿದ್ದಾರೆ. ಇವರು ಕನ್ನಡ ಮಾತಾ ಡುವವರಿದ್ದು ಕ್ಷತ್ರಿಯ ವರ್ಣಕ್ಕೆ ಸೇರಿದವರಲ್ಲ. ಉಪ್ಪುಂದದ ದಕ್ಷಿಣ ಪ್ರದೇಶದಲ್ಲಿ ಹೆಚ್ಚಾಗಿ ಹರಡಿ ದ್ದಾರೆ. ಗಂಡಸರು ದೀರ್ಘದೇಹಿಗಳಾಗಿ ಕೃಷ್ಣವರ್ಣ ದವರು. ತಲೆಗೆ ಕೆಂಪು ಏಲವಸ್ತ್ರದ ರುಮಾಲು. ದಪ್ಪ ಅರಿವೆಯ ನಾಲ್ಕು ಜೇಬುಗಳುಳ್ಳ ಶರ್ಟು, ಮೊಣ ಕಾಲಿಗಿಂತ ಸ್ವಲ್ಪ ಕೆಳಗೆ ಬರುವ ಮುಂಡ, ಕಾಲಿಗೆ ಚಟ್ ಚುರ್ ಸಪ್ಪಳ ಮಾಡುವ ದಪ್ಪವಾದ ಚಪ್ಪಲಿಗಳನ್ನು ಧರಿಸುವರು. ಸದಾ ವೀಳ್ಯದಿಂದ ತುಂಬಿದ ಬಾಯಿ. ಸ್ತ್ರೀಯರು ಎರಡೂ ಬದಿಗೆ ಮೂಗು ಚುಚ್ಚಿಸಿಕೊಂಡು ಆಭರಣ ಧರಿಸುತ್ತಾರೆ. ಹುಲಿಯ ಪಟ್ಟೆಗಳನ್ನು ಹೋಲುವ ಬಟ್ಟೆಯ ಲಂಗಾ, ಅದರ ಮೇಲೆ ಅಚ್ಚಬಣ್ಣ ದ ಅರ್ಧ ಸೀರೆ ತೊಡುವರು. ಮಣ್ಣಿನಗೋಡೆ, ತಾಳೆ ಎಲೆ ಅಥವಾ ತೆಂಗಿನಗರಿಗಳ ಚಪ್ಪರವಿರುವ ಇವರ ಮನೆಗಳು ತೀರ ಚಿಕ್ಕವಿರುವದರಿಂದ ಜೀವನದ ಬಹು ಭಾಗವನ್ನು ಸೂರ್ಯಚಂದ್ರರ ನೇರ ಆಶ್ರಯದಲ್ಲಿ ಕಳೆಯುತ್ತಾರೆ. ಗಂಡಸರು ಹೆಂಗಸರು ಕೂಡಿಯೇ ಜೀತ ದಾಳುಗಳಾಗಿ ಹೊಲ, ತೋಟಗಳಲ್ಲಿ, ಕಟ್ಟಡ ಕಟ್ಟುವ ದರಲ್ಲಿ ದುಡಿಯುತ್ತಾರೆ. ಹಡಗದಿಂದ ಮೀನು ಸಾಗಿ

ಸುವದು, ಒಣಗಿಸುವುದು, ಹಣ್ಣುಕಾಯಿ ಮಾರುವದು ಮುಂತಾದವನ್ನು ಹೆಂಗಸರು ಮಾಡುವರು. ಗಂಡಸರು ಚಕ್ಕಡಿ – ಟ್ರಕ್ಕುಗಳಲ್ಲೂ ಕೆಲಸ ಮಾಡುವರು. ಬಿಸಿಲಿನ ತಾಪದಿಂದ ಸಂರಕ್ಷಣೆ ಪಡೆಯಲು ತಲೆಗೆ ಅಡಿಕೆ ಹಾಳೆಯ ಹ್ಯಾಟನ್ನು ಧರಿಸುವರು.

## ವಾಣಿಗಳು, ಬಂಟರು

ವಾಣಿಗಳು ವೈಶ್ಯ ವರ್ಣಕ್ಕೆ ಸೇರಿದವರು. ಕೊಂಕಣಿ-ಕನ್ನಡ ಮಾತೃಭಾಷೆಯುಳ್ಳ ಎರಡು ಉಪಪಂಗಡಗಳು ಅವರಲ್ಲಿವೆ. ಬಂಗಾರದಿಂದ ಎಲೆಅಡಿಕೆ ಮಾರುವ ತನಕ ವ್ಯಾಪಾರದ ಬಹುವಿಧಗಳನ್ನು ಕರಗತಮಾಡಿಕೊಂಡಿದ್ದಾರೆ. ಧನಿಕರಿದ್ದರೂ ಕೈ ಬಿಗು. ಮನೆಯ ವಹಿವಾಟ ಹೆಣ್ಣು ಮಕ್ಕಳಿಗೆ ಒಪ್ಪಿಸಿ ತಾವು ವ್ಯಾಪಾರದಲ್ಲಿ ತೊಡಗಿರುತ್ತಾರೆ. ಆಳುಗಳನ್ನು ಮನೆಗೆಲಸಕ್ಕೆ ಹಚ್ಚುವ ಪದ್ಧತಿಯಿಲ್ಲ. ಹೀಗಾಗಿ ಮನೆಯೊಡತಿ ಮೈತುಂಬ ಬಂಗಾರವಿಟ್ಟುಕೊಂಡರೂ ಮನೆಗೆಲಸಕ್ಕೆ ಮುಂದು.



ತಿಂಡಿಗೆ ಇಡ್ಲಿ-ದೋಸೆ

ಮೀನು ಪ್ರೀತಿಯ ಆಹಾರವಾದರೂ ಮಾಂಸವನ್ನು ಬಳಸುವುದು ತೀರ ಕಡಿಮೆ. ಜೀವನದಲ್ಲೆಲ್ಲ ವ್ಯವಹಾರದಷ್ಟೇ ಮುಂದು. ಈಶ್ವರಭಕ್ತರಿದ್ದಂತೆ ವಿಷ್ಣುಭಕ್ತರೂ ಹೌದು. ಬಟ್ಟೆ, ಬರೆ ಆಹಾರಗಳು ಬಹಳ ಮಟ್ಟಿಗೆ ಕೊಂಕಣಿಗರಂತೆ. ಗೋವೆ ಪೋರ್ಚುಗೀಜರ ಕೈಯಲ್ಲಿದ್ದಾಗ ಪಟ್ಟ ಪಳ್ಗಿ ಈಗ ಇವರಿಗಿಲ್ಲ. ಆಗಿನ ಗೋವೆಯಲ್ಲಿ ಸಿಗದ ಸಾಮಾನುಗಳನ್ನು ಭಾರತದಿಂದ ಸಾಗಿಸಿ ಅಲ್ಲಿಂದ ಸೆರೆ, ಬಂಗಾರಗಳನ್ನು ಭಾರತಕ್ಕೆ ತಂದು ತುಂಬ ಶ್ರೀಮಂತರಾದವರಿದ್ದಾರೆ.

ದಕ್ಷಿಣ ಕನ್ನಡದ ಬಂಟರು ಲಿಪಿಯಿಲ್ಲದ ತುಳುಭಾಷೆಯನ್ನು ಮಾತನಾಡುವ ಜನ. ಅವರದೂ ವ್ಯಾಪಾರದಲ್ಲಿ "ಎತ್ತಿದ ಕೈ. ಉಡುಪಿ ಬ್ರಾಹ್ಮಣರ ಹೊಟೇಲ" ಎಂದು ಹೋಟೇಲ ವ್ಯವಸಾಯ ನಡೆಸುವ ಅದೆಷ್ಟೋ ಬಂಟರಿದ್ದಾರೆ. ಚಿಕ್ಕವರಿರುವಾಗಲೇ ವ್ಯಾಪಾರದತ್ತ ಒಲವು ಇರುವದರಿಂದ ಶಿಕ್ಷಣಕ್ಕೆ ಪ್ರಾಮುಖ್ಯತೆ ಕೊಂಚ ಕಡಿಮೆಯೇ. ಸಿರಿವಂತರು, ಉಡಿಗೆ ತೊಡಿಗೆಗಳಲ್ಲಿ ಅತ್ಯಾಧುನಿಕರನ್ನು ಓಂದೆ ಹಾಕುತ್ತಾರೆ. ಅಂತೆಯೇ ಅರೆ ಮೈ ತೋರಿಸುವ ಗಿಡ್ಡ ಕುಪ್ಪಸ ತೊಟ್ಟು, ತುಟಿಗೆ ಬಣ್ಣ ಸವರಿ, ಬಾಬಕಟ್ ಧರಿಸಿದ ಬಂಟ ಮಹಿಳೆಗೆ ಇಂಗ್ಲಿಷ್ ಬಾರದಿದ್ದರೆ ಅಚ್ಚರಿಯಾಗಬೇಕಾಗಿಲ್ಲ.

ಬಂಟರಲ್ಲಿ ಕೃಷಿಕರಿದ್ದಾರೆ, ಹಂಚಿನ ಕೈಗಾರಿಕೆಯಲ್ಲಿ ತೊಡಗಿದವರಿದ್ದಾರೆ. ಮನೆಗಳಲ್ಲಿ ಕೋಳಿ, ಮೀನು ಮಾಂಸಗಳ ಅಡಿಗೆಯೇ ಹೆಚ್ಚು. ಅತಿಥಿಗಳು ಬಂದಾಗ ಇವುಗಳ ಪ್ರಮಾಣ ಹೆಚ್ಚು. ಉಳ್ಳವರು ಮನೆಯಲ್ಲಿ ನೌಕರ – ಚಾಕರರನ್ನು ಇಟ್ಟುಕೊಳ್ಳುತ್ತಾರೆ. ಇವರು ಹೆಚ್ಚು ನಿಸರ್ಗ ಪ್ರೇಮಿಗಳಿದ್ದಿರಬೇಕು. ಅಂತೆಯೇ ನಿಸರ್ಗದ ಮಡಿಲಿನಲ್ಲಿ ಪ್ರಾತರ್ವಿಧಿಗಳನ್ನು ಪೂರೈಸುತ್ತಾರೆ. ತುಂಬ ರಸಿಕರು. ಅಂತೆಯೇ ಹಬ್ಬ – ಹುಣ್ಣಿಮೆಗಳಲ್ಲಿ ಹುಚ್ಚೆದ್ದು ಹಾಡುವರು, ಕುಣಿಯುವರು. ಇತ್ತೀಚೆಗೆ ತಮ್ಮ ಭಾಷೆಯಲ್ಲಿ ಚಲಚ್ಚಿತ್ರಗಳನ್ನು ತೆಗೆಯಲು ಪ್ರಾರಂಭಿಸಿದ್ದಾರೆ. ಇವರಲ್ಲಿ ಅಳಿಯ ಸಂತಾನ ಪದ್ಧತಿ ಇದೆ! ತಂದೆಯ ಆಸ್ತಿಯಲ್ಲಿ ಮಗಳಿಗೂ ಅವಳ ಮಕ್ಕಳಿಗೂ ಸಮನಾದ ಪಾಲು ದೊರೆಯುತ್ತದೆ. ಅಂತೆಯೇ ಗೃಹಕೃತ್ಯದಲ್ಲಿ ಗೃಹಿಣಿಯ ಮಾತೇ ಕೊನೆಯದು. ಪಾಲಕರೇ ವಿವಾಹಗಳನ್ನು ಘರ್ಪಡಿಸುವರು. ವಿವಾಹ ಕಾಲದಲ್ಲಿ ಮದುವೆಗೆ ಆಪ್ತೇಷ್ಟರು ದೂರದೂರದಿಂದ ಬರುವರು.

## ಹಾಲಕ್ಕಿ ಗೌಡರು

ಹಾಲಕ್ಕಿ ಗೌಡರು ಉತ್ತರಕನ್ನಡ ಜಿಲ್ಲೆಯ ಕರಾವಳಿ ಪ್ರದೇಶದಲ್ಲಿ ಬೀಡುಬಿಟ್ಟ ಜನಾಂಗ. ಅವರಂತಹ ನಿಷ್ಠಾವಂತ, ಸಂಭಾವಿತ, ಅಳ್ಳೆದೆಯ ಸರಳಜೀವಿಗಳು ಮಲೆನಾಡಿನಲ್ಲಿ ಬೇರೊಬ್ಬರಿಲ್ಲ. ಊರ ಹೊರಗೆ ಜನ ಜಂಗುಳಿಯಿಂದ ದೂರ, ಗಿರಿಕಂದರಗಳಲ್ಲಿ ಸಾಗುವಳಿಯಿದ್ದಲ್ಲೆಲ್ಲ ಇವರ ವಸತಿ ಕಂಡು ಬರುತ್ತದೆ. ಮಣ್ಣು ಗೋಡೆಯ ಹುಲ್ಲಿನ ಛಾವಣಿಯ ಮನೆಯ ಮುಂದೆ ಕಿರಿದಾದೊಂದು ಮಾಡು. ಅದೇ ಅವರ ದೇವಸ್ಥಾನ.



• ಜೀವನದಲ್ಲಿ ಸಗುಮುಖ

ಮನೆಯುವರ, ಅತಿಥಿಗಳ ಬೈಠಕಶಾಲೆ. ಒಂದು ಕಡೆ ಬತ್ತದ ರಾಶಿ. ಇನ್ನೊಂಡೆದೆ ನಾಯಿ, ಬೆಕ್ಕು, ಕೋಳಿ, ದನಕರುಗಳ ವಾಸಸ್ಥಾನ. ಬಾಗಿಲಹೊರಗೆ ಮಸಾಲೆ ಅರೆಯುವ (ರುಬ್ಬುವ) ಕಲ್ಲು. ಕಪ್ಪುಮಡಕೆ, ಎಲುಮಿನಿಯಮ್ ತಟ್ಟೆ, ತೆಂಗಿನ ಚಿಪ್ಪಿನ ಸೌಟು ಇವರ ಪಾತ್ರೆ ಪಡಗಳು. ಸೂರ್ಯನೊಂದಿಗೆ ಎಚ್ಚತ್ತು, ರಾತ್ರಿ ನೆನೆ ಹಾಕಿದ ಸಮಪ್ರಮಾಣದ ಅಕ್ಕಿ ರಾಗಿಗಳನ್ನು ರುಬ್ಬಿ ಗೃಹಿಣಿ 'ಅಂಬಲಿ' ಕಾಸುತ್ತಾಳೆ. ಹಸಿದಾಗೊಮ್ಮೆ ತಿಟ್ಟೆಯಲ್ಲಿ ಅಂಬಲಿ ಸುರಿದು ಕುಡಿದು ಕೆಲಸಕ್ಕೆ ಹೊರಡುವರು. ಹೊಲದಲ್ಲಿ ಗಂಡಸರು ಹೆಂಗಸರು ಮೈ ಮುರಿದು ದುಡಿಯುವರು. ಜೊತೆಗೆ ಅಡವಿಗೆ ಹೋಗಿ ಕಟ್ಟಿಗೆ, ಕಂಟಿಯ ಹಣ್ಣುಹಂಪಲು ತಂದು ತಾವು ಬೆಳೆಸಿದ ಕಾಯಿಪಲ್ಲೆಯೊಂದಿಗೆ ಮಾರಿ ಬಂದ ಹಣದಿಂದ ಮಕ್ಕಳಿಗೆ ಚುರಿಮುರಿಬೆಲ್ಲ, ಮೀನು, ಕಾಳುಕಡಿ ತಂದು ಮನೆಗೆ ಬಂದು ಅಡಿಗೆ ಮಾಡಿ ಊಟ ಮಾಡುವರು. ಪ್ರತಿದಿನದ ದುಡಿಮೆಯಲ್ಲಿ ಕೊಂಚವನ್ನಾದರೂ ಉಳಿಸಿ ಮಡಕೆಯಲ್ಲಿಹಾಕಿ ನೆಲದಲ್ಲಿಯೋ ಗೋಡೆಯಲ್ಲಿಯೋ ಹೂಳಿಡುವರು. ಮದುವೆಗೆ ಮನೆಕಟ್ಟಲಿಕ್ಕೆ ಇಲ್ಲವೇ ಎತ್ತುಕೊಳ್ಳಲಿಕ್ಕೆ ಈ ಹಣದ ಉಪಯೋಗವಾಗುವದು. ಗಂಡಿಗಿಂತ ಹೆಚ್ಚು ದುಡಿಯಬೇಕಾಗಿದ್ದರಿಂದಲೊ ಏನೋ ಇವರಲ್ಲಿ ಹೆಣ್ಣಿಗೆ ಬರಗಾಲ.

ಅಂತೆಯೇ ವಧೂದಕ್ಷಿಣೆಯನ್ನು ಅಕ್ಕಿ, ಬೆಲ್ಲ, ತೆಂಗಿನ ಕಾಯಿಗಳ ರೂಪದಲ್ಲಿ ಕೊಡಬೇಕಾಗುವದು. ಮದುವೆ ಕಾಲದಲ್ಲಿ ಹೆಣ್ಣು ಪ್ರಾಯಕ್ಕೆ ಬಂದಿರುವದಿಲ್ಲ. ಪ್ರೌಢ ಹೆಣ್ಣಿಗೆ ವಧು ದಕ್ಷಿಣೆ ಹೆಚ್ಚು. ಹೀಗಾಗಿ ವಿಷಮ ವಿವಾಹಗಳು ಹೆಚ್ಚು. ನಾಲ್ವತ್ತು ವರ್ಷದ ಗೌಡನಿಗೆ ಹದಿನಾಲ್ಕು ವರ್ಷದ ಹೆಂಡತಿಯಿರುವುದು ಅಚ್ಚರಿಯಲ್ಲ. ಅವಿವಾಹಿತ ಪ್ರೌಢ ("ಬೋಳಮುಂಡೆ ಕಲಾಶಾ")ನು ಅಣ್ಣನ ವಿಧವೆಯನ್ನು ಮದುವೆಯಾಗುವುದುಂಟು. ಮದುವೆಯಾಗುವ ಹುಡುಗಿಯರು ಮೈಮೇಲೆ ಸೆರಗು ಹೊದೆಯುವೇ ಟೊಂಕದ ಸುತ್ತಲೂ ಸೀರೆಯ ತುಣುಕನ್ನು ಸುತ್ತಿಕೊಳ್ಳುವಳು. ಮದುವೆಯ ನಂತರ ಸೆರಗನ್ನು ಸುತ್ತಿ 'ಜೀಟಿ' ಕಟ್ಟಲಾರಂಭಿಸುವಳು. ಒಳಗಚೆ

ಮುಟ್ಟಿರೂ ಕುಪ್ಪಸ ಧರಿಸುವದಿಲ್ಲ. ಕೊರಳ ತುಂಬ ಅರಗಿನ, ಕಾಜಿನ ಮಣಿಗಳ ಸರಗಳನ್ನು ಧರಿಸುವ ವಾಡಿಕೆ ತಲೆಯ ಮೇಲೆ ಭಾರವಾದ ಹೊರೆ ಹೊತ್ತಾಗ ಕೊರಳಿಗೆ ಹೆಚ್ಚಿನ ಸಹಾಯ ಸಿಗಲೆಂದು ಧರಿಸುತ್ತಿರಬೇಕು! ಬಿಡುವಿಲ್ಲದ ಜೀವನದಲ್ಲಿ ಸ್ನಾನ ಸ್ವಚ್ಛತೆಗೆ ಅವಕಾಶ ಕಡಿಮೆ. ಸ್ನಾನಮಾಡುವಾಗಲೂ ಸರಗಳ ಭಾರ ಕಡಿಮೆ ಮಾಡುವದಿಲ್ಲ. ವರ್ಷಕ್ಕೊಮ್ಮೆ ಸ್ನಾನ ಮಾಡುತ್ತಿದ್ದ ಗೌಡತಿಯ ಸರಗಳಲ್ಲಿ ಚೇಳು ಸಂಸಾರ ಹೂಡಿತ್ತಂತೆ! ಪುರುಷರು ಹಿಂದಿನ ಕೂದಲು ಬೆಳೆಸಿ 'ಮಂಡೆ' ಬಿಡುವರು. ಕಿವಿಗಳಲ್ಲಿ ಒಂಟಿಗಳು ಸೊಂಟಕ್ಕೆ ಕಚ್ಚೆ, ತಲೆಯ ಮೇಲೆ ರುಮಾಲೊಂದು ಧರಿಸುವರು. ಅದನ್ನು ಅಂಗಡಿಯಿಂದ ಸಾಮಾನು ತರುವಾಗ, ಚೀಲದಂತೆಯೂ, ಕೈಕಾಲು, ಬೆವರು ಒರೆಸುವಾಗ ಟಾವೆಲ್‌ದಂತೆಯೂ ಮಲಗುವಾಗ ಗಾದಿಯಂತೆಯೂ ಬಳಸುವದುಂಟು. ...

## ಗೌಡತಿಯರು

ಕನ್ನಡದ ಅಭಿಮಾನಿಗಳಿಗೆ ಗೌಡರು ಆಡುವ ಭಾಷೆ ಕನ್ನಡವೇ ಎಂದು ಅನುಮಾನ ಬರುವಷ್ಟು ಗ್ರಾಮ್ಯ ಕನ್ನಡ ಮಾತಾಡುತ್ತಾರೆ. ಅವರಿಗೆ ಚ, ಶ, ಳ,ಗಳ ಸರಿಯಾದ ಉಪಯೋಗ ತಿಳಿಯದು. ಷೇಟ್ ಬ್ಯಾಂಕ್ (ಸ್ಟೇಟ್‌ಬ್ಯಾಂಕ್) ಮೊಲಗಾಲ (ಮಳೆಗಾಲ) ಚಟುವಟಿಕೆ (ಷಟವಟಿಕೆ) "ಒಡೆದಿರು ದನಾದು ತಿಂತ್ರು. ನಂಗೆ ಹಾಲು ಕೊಡತ್ರು" (ಒಡೆಯರು [ಧಣಿಗಳು] ಒಳ್ಳೆಯದನ್ನು ತಿನ್ನುತ್ತಾರೆ. ನಮಗೆ ಹಾಳಾದ್ದನ್ನು ನೀಡುತ್ತಾರೆ) ಇದು ಅವರ ಭಾಷೆಯ ರೀತಿ. "ಸೋಮಿ ಸುಕ್ರಿಬೆಟ್ಟಕ್ಕೆ ಹೋದಾಗ ಅಲ್ಲೊಂದು ಮಂಗ ಕೂಗುತ್ತಿತ್ತು" ಇದನ್ನು ಹಾಲಕ್ಕಿ ಗೌಡರ ಭಾಷೆಯಲ್ಲಿ ಹೇಳುವದಾದರೆ "ಸೋಮಿ, ಚುಕ್ರಿ. ಬೆಟ್ಟಕ್ಕೆ ಹೋಗಿತ್ತ್ಯೊ ಅಲ್ಲೊಂದು ಮಂಗಾ ಕೊಂಯಗುಡಿತ್ಯೊ" "ಹಾ"ಎಂದರೆ ಹೌದು ಎಂದಂತೆ. ಇವರಿಗೆ ಲೆಕ್ಕ ತಿಳಿಯದು. ವ್ಯವಹಾರ ಜ್ಞಾನವೂ ಕಡಿಮೆ. ಹೀಗಾಗಿ ಅಪನಂಬಿಕೆ. ಯಾವವೇ ವ್ಯಾಪಾರ ಮಾಡಲಿ ಹತ್ತು ಸಲ ಲೆಕ್ಕ ಮಾಡಿ, ಇಪ್ಪತ್ತು ಸಲ ಎಣಿಸಿ ಹಣ ತೆಗೆದುಕೊಳ್ಳುವರು. ವ್ಯಾಪಾರ ಮಾಡಿ ಸಂಜೆಗೆ ನಾಲ್ಕಾರು ಗೌಡತಿಯರು ಕೂಡಿಕೊಂಡು ಮನೆಗೆ ಹೋಗುವದು ರೂಢಿ. ಅಂದಿನ ಎಲ್ಲ ಚಟುವಟಿಕೆಗಳನ್ನು ವಿಮರ್ಶಿಸಿ ಹಣದ ಲೆಕ್ಕಾಚಾರ ಒಪ್ಪಿಸುವಾಗ ಇನ್ನೊಬ್ಬಳು ಅದನ್ನು ಬೇರೀಜು ಮಾಡಿ ಹೇಳಿದಾಗ ಹಣ ಸರಿಯಾಗಿದೆ ಎಂದು ಹೇಳಬೇಕು. ಅವರ ಹಳ್ಳಿಗಳಲ್ಲಿ ಜಗಳ, ವೈಮನಸ್ಸು ಕಳವು, ಕೊಲೆ, ದರೋಡೆ ಯಾವುವೂ ಇಲ್ಲ. ಆದರೆ ಮುಂದುವರಿದ ಸಮಾಜದ ಕಾಮುಕರು ಈ ಸರಳ ಮುಗ್ಧೆಯರನ್ನು ಬಲಿ ತೆಗೆದುಕೊಳ್ಳುವದುಂಟು. ಇಂಥ ಸಂದರ್ಭಗಳಲ್ಲಿ ಊರ ಹಿರಿಯರು ಸೇರಿ ಕೊಟ್ಟ ನಿರ್ಣಯವೇ ಕೊನೆಯದೆಂದು ಒಪ್ಪಿಕೊಳ್ಳುವರು. ಇವರ ಬೆಪ್ಪುತನದ ಕತೆಗಳು ಉತ್ತರ ಕನ್ನಡದಲ್ಲಿ ಜನಜನಿತವಾಗಿವೆ. ಒಮ್ಮೆ ಗೌಡತಿಯರು ಕಾಡಿಗೆ ಹೋದಾಗ ಕಾಡುಕೋಳಿಯ ಮೊಟ್ಟೆಗಳನ್ನು ನೋಡಿ ಅವು ಯಾವ ಪ್ರಾಣಿಯದೆಂದು ಊಹಿಸಿ ಚರ್ಚಿಸಿ ನಿರ್ಣಯಕ್ಕೆ ಬಾರದೆ 'ನರಿ ಮೊಟ್ಟೆ' ಇರಬಹುದೆಂದು ಸರ್ವಾನುಮತದಿಂದ ಊಹಿಸಲಾಯಿತು. ಕೊನೆಗೆ ಪೇಟೆಯಲ್ಲಿ ಅದೇ ಹೆಸರಿನಿಂದ ಮಾರಲು ತಂದಾಗ ನಗೆಗೇಡಿಯಾದರು. ಇಂದಿಗೂ ಅವರ ಜನರನ್ನು 'ನರಿಮೊಟ್ಟೆ' ಎಂದು ಕರೆದರೆ ಸಿಟ್ಟಿಗೇಳುವರು. ಇನ್ನೊಮ್ಮೆ ಸೊಪ್ಪಿಗೆಂದು ಇಪ್ಪತ್ತು ಗೌಡತಿಯರು ದಟ್ಟ ಅಡವಿಗೆ ಹೋದಂತೆ ತಿರುಗಿ ಎಣಿಸುವಾಗ ಕೇವಲ ಹತ್ತೊಂಭತ್ತು ಜನ ಇದ್ದುದ್ದು. ನೋಡಿ ಎಲ್ಲರೂ ಗೋಳೋ ಎಂದು ಅತ್ತರು. ದಾರಿಹೋಕನೊಬ್ಬ ವಿಷಯ ತಿಳಿದು ಎಣಿಸಿದಾಗ ಇಪ್ಪತ್ತು ಜನ ಸರಿಯಾಗಿದ್ದರು. ಪ್ರತಿಯೊಬ್ಬಳೂ ತನ್ನನ್ನು ಬಿಟ್ಟು ಎಣಿಸುತ್ತಿದ್ದಳು!



ಮುದಿಯಲು ಗಟ್ಟಿ ದೇಹ!



ಇರಲೊಂದು ಮನೆ

ಹಾವು ಸಾಗುವಳಿ ಮಾಡುವ ಭೂಮಿ ಒಡೆಯನದೆಂದು ಹೆಚ್ಚಿನ ಭಯಭಕ್ತಿ ಹಲವರಿಗಿದೆ. ತಮ್ಮ ತಾತನ ಕಾಲದಿಂದ ನಡೆದು ಬಂದಷ್ಟೇ ಪ್ರಮಾಣದ ಕಾಳುಕಡಿ ತಲುಪಿಸುವವರಿದ್ದಾರೆ. ಪರರ ಪಾಲಿನದನ್ನು ತಾನು ನುಂಗಿದರೆ ದೇವರು ಕ್ಷಮಿಸಲಿಕ್ಕಿಲ್ಲ ಎಂಬ ಸರಳ ನಂಬಿಕೆ ಅವರದು. ಚೌತಿಹಬ್ಬ, ದೀಪಾವಳಿಗಳಲ್ಲಿ ಒಡೆಯನಿಗೆ ಎಂದು ಹಣ್ಣುಹಂಪಲು ಕಾಳುಕಡಿ ತಲುಪಿಸಿ ಬರುವನು. ಇವರಿಗೆ ಸುಗ್ಗಿ ಹಬ್ಬ ಬಲು ಸಡಗರದ ಹಬ್ಬ. ಆರು ತಿಂಗಳು ಮೊದಲಿನಿಂದಲೂ ತಯಾರಿ ನಡೆಯುತ್ತದೆ. ರಾತ್ರಿಯೂಟ ಮುಗಿಸಿ ಸಾಮೂಹಿಕವಾಗಿ ಹಾಡುವ ರೂಢಿ ಮಾಡಿಕೊಳ್ಳುವರು. ಹಬ್ಬದ ದಿನ ತಲೆಗೆ ರುಮಾಲು ಕಟ್ಟಿ, ಬಣ್ಣಬಣ್ಣದ ಬೆಂಡಿನ ತುರಾಯಿ ಕಟ್ಟಿ ಮೈಗೆ ಬಣ್ಣದ ಅಂಗಿ ಹಾಕಿ, ಧೋತರವುಟ್ಟು, ಗೆಜ್ಜೆಕಟ್ಟಿ, ಒಬ್ಬರು ಹಾಡುತ್ತ ಉಳಿದವರು ಚೋಹೋವ್ ಚೋಹೋವ್‌ಎನುತ್ತ ಸಾಮೂಹಿಕವಾಗಿ ನೃತ್ಯ ನಡೆಸುವರು. ಹೆಚ್ಚಾಗಿ ತನ್ನ ಒಡೆಯರ ಮನೆಯಲ್ಲಿ ಊರ ಮುಖಂಡರ ಮನೆಯಲ್ಲಿ ನರ್ತಿಸುವರು. ಇವರಲ್ಲಿ ಮದುವೆಗಳು ಮಳೆಗಾಲದ ಪ್ರಾರಂಭದಲ್ಲಿ. ಮದುಮಗನು ದೇವಸ್ಥಾನದ ಭಟ್ಟರಿಂದ ಮುಹೂರ್ತವನ್ನು ಹುಡುಕಿಸಿ ಎರಡೆರಡು ಬಾಸಿಂಗ ಕಟ್ಟಿಕೊಂಡು ಮದುಮಗಳ ಮನೆಗೆ ಬಂದು ಮದುವೆಯಾಗಿ ಪಾಯಸದ ಊಟ ಉಂಡು ತಿರುಗಿ ಮನೆಗೆ ಹೋಗುವನು. ತೆಂಗಿನ, ಅಡಿಕೆಯಗಿಡಗಳನ್ನು ಬಳುವಳಿಯಾಗಿ ಕೊಡುವ ರೂಢಿಯಿದೆ. ಚೊಚ್ಚಲ ಬಾಣಂತನ ತಾಯ ಮನೆಯಲ್ಲಿ ಮುಗಿಸಿ ಮಗುವಿನೊಂದಿಗೆ ತೊಟ್ಟಿಲನ್ನೂ ಹೊತ್ತು ಹಾಡುತ್ತ ಪತಿಗೃಹಕ್ಕೆ ಹೋಗುವದು ವಾಡಿಕೆ.

ಹಾವು ಹುಲಿಗಳ ಛಾಯಾಚಿತ್ರವನ್ನು ತೆಗೆಯುವದಕ್ಕಿಂತ ಗೌಡತಿಯರ ಚಿತ್ರ ತೆಗೆಯುವದು ಬಿಗುವಿನದೆಂದು ಅದನ್ನು ಯತ್ನಿಸಿದಾಗ ತಿಳಿಯಿತು. ಒಂದು ಅಂಗಳದಲ್ಲಿ ಗೌಡತಿಯೊಬ್ಬಳು ಗಳದ ಬತ್ತವನ್ನು ಸರಿಪಡಿಸುತ್ತಿದ್ದಳು. ಕೆಮರಾಧಾರಿಯನ್ನು ಪಿಸ್ತೂಲಧಾರಿಯೆಂದು ತಿಳಿದುಕೊಂಡಂತೆ ಓಡಿಬಿಟ್ಟಳು. ಇನ್ನೊಬ್ಬಳು ಛಾಯಚಿತ್ರ ತೆಗೆಸಿಕೊಂಡರೆ ಆಯುಷ್ಯ

ಕಡಿಮೆಯಾಗುವದೆಂದು ಬೋಧಿಸಿದಳು. ಇನ್ನೊಬ್ಬ ಗೌಡ ಫೋಟೋ ತೆಗೆದರೆ ರಕ್ತಕಾರಿ ಸಾಯುತ್ತಾರೆಂಬ ತನ್ನ ನಂಬಿಕೆಯನ್ನು ಸಡಿಲಿಸಲು ಒಪ್ಪಲೇ ಇಲ್ಲ.

## ನಾಡವರು

'ನಾಡವರು' ಉತ್ತರ ಕನ್ನಡದ ಅಂಕೋಲಾ ತಾಲೂಕಿನಲ್ಲಿ ಹೆಚ್ಚಾಗಿ ಬೀಡು ಬಿಟ್ಟವರು. ಒಳ್ಳೆಯ ದೃಢಕಾಯರು. ಕೃಷ್ಣವರ್ಣದವರು. ಪುರುಷರು ಕಚ್ಚೆ ಉಟ್ಟು, ತಲೆಗೆ ರುಮಾಲು ಸುತ್ತಿ, ಧೋತರದಿಂದ ಮೈ ಮುಚ್ಚಿಕೊಂಡರೆ ಸ್ತ್ರೀಯರು ಗಂಟು ಹಾಕಿ ಸೀರೆ ಉಡುವರು. ಕೃಷಿಯೇ ಜೀವನೋಪಾಯವಿದ್ದರಿಂದ ಹಳ್ಳಿಯ ವಾಸ್ತವ್ಯ ಹೆಚ್ಚು. ಮನೆಗಳನ್ನು ಮಣ್ಣಿನಿಂದ ಇಲ್ಲವೇ ಕಲ್ಲಿನಿಂದ ಕಟ್ಟಿ ಓರಣವಾಗಿಡುವರು. ಥಳಥಳ ಕನ್ನಡಿಯಂತೆ ಹೊಳೆಯುವ ನೆಲವನ್ನು ತಯಾರಿಸುವದರಲ್ಲಿ ಈ ಜನ ಹೆಸರುವಾಸಿ. ಹಾಲು ಹೈನದ ವೃತ್ತಿಯನ್ನೂ ಕೈಕೊಂಡಿರುತ್ತಾರೆ. ತಿಂಡಿ – ತೀರ್ಥಗಳ ವೈವಿಧ್ಯವಿಲ್ಲ. ಮೀನು ಅನ್ನ ಭರ್ಜರಿಯಾಗಿ ಬೇಕು. ಮನೆಗೆ ಬಂದವರಿಗೆ ಬೆಲ್ಲ ನೀರು ಕೊಟ್ಟು ನಂತರ ತಿನ್ನಲು ಹಸಿಸೇಂಗಾಕಾಯಿ – ಬೆಲ್ಲ ಕೊಡುವರು. ಬಂದವರು ಮರಳುವಾಗ ಮೊಗ್ಗೆಕಾಯಿ ಅಥವಾ ಇನ್ನಾವದಾದರೂ ತರಕಾರಿ ಕೊಟ್ಟು ಕಳಿಸುವರು. ಮದುವೆಗಳಲ್ಲಿ ಹಳ್ಳಿ ಹಳ್ಳಿಗಳಿಂದ ಆಪ್ತರು ನೆರೆಯುವರು. ಕನ್ಯೆಯ ತಂದೆ ವರನ ಕಡೆಯವರಿಗೆ ಹೆಚ್ಚಿನ ಆದರ ಸತ್ಕಾರ ಒದಗಿಸಬೇಕಾಗುತ್ತದೆ. ಹಲವಾರು ಬಾರಿ ಇದಕ್ಕಾಗಿ ಕಲಹಗಳೂ ಆಗುವದುಂಟು. ತೋಳ್ಬಲದೊಂದಿಗೆ ಸಿಡುಕಿನ ಸ್ವಭಾವವೂ ಸೇರಿದ್ದರಿಂದ ಕೈಗೆ ಕೈ ಹತ್ತಿದರೆ ಬಿಡಿಸುವದು ಕಷ್ಟ. ನಾಡವರು ಕೊನೆಯ ಅಕ್ಷರವನ್ನು ರಾಗವಾಗಿ ಎಳೆದು ಗ್ರಾಮೀಣ ಕನ್ನಡವನ್ನು ಮಾತನಾಡುವರು, "ನೀ ಯಾವಾಗ ಬಂದಿss ಭಾವಾss ಎಂತಾ ಅಂತ್ನಾss? (ನೀನು ಯಾವಾಗ ಬಂದೆ? ಭಾವನು ಏನು ಅನ್ನುತ್ತಾನೆ)" ಇತ್ಯಾದಿ.

## ಗುಡಿಗಾರರು

ಗುಡಿಗಾರರು ಮಲೆನಾಡಿನ ಸೃಷ್ಟಿ ಸೌಂದರ್ಯವನ್ನು ಗಂಧದಲ್ಲಿ ಕಟ್ಟಿಗೆಯಲ್ಲಿ, ಬಣ್ಣದಲ್ಲಿ ಚಿತ್ರಿಸಿ ನಾಡಿನವರಿಗೂ ಹೊರ ನಾಡಿನವರಿಗೂ ನಮ್ಮ ಕಲೆಯ ಸಿರಿಯ ಪರಿಚಯ ಮಾಡಿಕೊಟ್ಟಿದ್ದಾರೆ. ಅವರ ಕಲೆ ಬಹುಮುಖವಾದದ್ದು. ಮದುವೆ ಮುಂಜಿಗಳಿರಲಿ ಹಬ್ಬ – ಜಾತ್ರೆಗಳಿರಲಿ ಗುಡಿಗಾರರ ಕಲೆಯ ದರ್ಶನವಿಲ್ಲದೇ ನಡೆಯಲಾರವು. ಕೊಂಕಣಿ – ಕನ್ನಡ ಎರಡನ್ನೂ ಮಾತನಾಡುವ ಈ ಜನ ಆರ್ಯ ವಂಶದವರೊ ದ್ರಾವಿಡ ವಂಶಜರೋ ಎಂದು ಹೇಳುವದು ಕಷ್ಟ. ಉತ್ತಮ ಕಲಾಕಾರರಿದ್ದರೂ ಆದರ ಬೆಲೆಯರಿತು ಪ್ರೋತ್ಸಾಹಿಸುವವರು ಇಲ್ಲವಾದ್ದರಿಂದ ಗುಡಿಗಾರರು ಬಡವರಿದ್ದು ತೀರಸಾಮಾನ್ಯ ಜೀವನ ನಡೆಸುತ್ತಿದ್ದಾರೆ. ಮದುವೆಯ ಮುನ್ನಾದಿನ ಉಪನಯನದ ಪದ್ಧತಿ ಇವರಲ್ಲಿದೆ. ಒಮ್ಮೆ ಹೀಗೆ ಉಪನಯನವಾದ ಮೇಲೆ ಗುಡಿಗಾರ ವರನೊಬ್ಬನ ಮದುವೆಯಲ್ಲಿ ಏನೋ ಜಗಳ ಬಂದಿತು. ಹೆಣ್ಣಿನ ಕಡೆಯವರು ಮದುವೆ ನಿಲ್ಲಿಸಿದರು. ಗೃಹಸ್ಥನಾಗಲು ಬಂದ ವರ ಪ್ರೌಢ ವಟುವಿನ ಕಾಷಾಯ ವೇಷದಲ್ಲಿ ಹೊರಬಿದ್ದಾಗ ನೋಡಿ ನಗದ ಜನರೇ ಇರಲಿಲ್ಲ.

'ಕಲಾವಂತರು' ಎಂಬ ಕುಲ ಕರಾವಳಿ ಪ್ರದೇಶದಲ್ಲಿ ಬೆಳೆದು ಬಂದಿತ್ತು. ರಸಿಕ ಶ್ರೀಮಂತರ ಆಶ್ರಯದಲ್ಲಿ ವೇಶ್ಯಾವೃತ್ತಿ ಕೈಕೊಂಡ ಕುಲವಾಗಿದ್ದರೂ ಸಮಾಜದಲ್ಲಿ ಒಂದು ಪ್ರಕಾರದ ಸ್ಥಾನಮಾನ ಪಡೆದ ವರ್ಗವಾಗಿತ್ತು. ಎಷ್ಟೋ ಕಲಾವಂತ ಸ್ತ್ರೀಯರು ಗರತಿಯರಂತೆ ಒಬ್ಬನನ್ನೇ ನಂಬಿ ಪರಿಶುದ್ಧ ಜೀವನ ನಡೆಸುತ್ತಿದ್ದರು. ಹಾಡುಗಾರಿಕೆ ನೃತ್ಯಗಳಲ್ಲೂ ಪ್ರಾವೀಣ್ಯತೆ ಪಡೆದಿದ್ದ ಇವರು ದೇವಸ್ಥಾನಗಳಲ್ಲಷ್ಟೇ ಅಲ್ಲದೇ ಮದುವೆ – ಮುಂಜಿಗಳಲ್ಲೂ ಹಾಡು ನೃತ್ಯಗಳಲ್ಲಿ ಭಾಗವಹಿಸುತ್ತಿದ್ದರು. ಕಲಾವಂತ ಸುಂದರಿಯರು ಸಜ್ಜಾಗಿ ಚಾಮರ ಬೀಸಲು ಹೊರಡದಿದ್ದರೆ ದೇವರು ಮೆರವಣಿಗೆಗೆ ಹೊರಡಲು ನಿರಾಕರಿಸಿ ಬಿಡುತ್ತಿದ್ದರು.



ಮುದುಕನಿಗೂ ಬಂಗಾರ

ಸಮಾಜದ ಕಟ್ಟು ನಿಟ್ಟುಗಳಿಂದಾಗಿ ಈ ಕುಲದವರಿಗೆ ಮದುವೆ ಸುಲಭವಾಗಿದ್ದಿಲ್ಲವಾದ್ದರಿಂದ ಎಷ್ಟೋ ಜನ ಮುಂಬೈ ಕಡೆಗೆ ಹೋಗಿ ಬೇರೆ ಜಾತಿಯವರೊಂದಿಗೆ ಮದುವೆ ಮಾಡಿಕೊಂಡು ನೆಲೆಸಿದರು. ಸರಕಾರದ ಭೂಧೋರಣೆಯಿಂದ ಹೊಲದೊಡೆಯರು ಬಡವರಾಗುತ್ತ ನಡೆದುದರಿಂದ ಅವರನ್ನು ನಂಬಿದ ಹಲವು ಕಲಾವಂತ ಸ್ತ್ರೀಯರು ಗಂಟುಮೂಟೆ ಕಟ್ಟಿ ಧನಿಕ ಭಕ್ತರು ಸಿಗುವ ಔದ್ಯೋಗಿಕ ಪಟ್ಟಣಗಳಿಗೆ ವಲಸೆ ಹೋದರು. ಕಲಾವಂತರ ಬಳಗ ಕುಗ್ಗುತ್ತ ನಡೆದಿದೆ.

## ಅಂಬಿಗರು

ಅಂಬಿಗರಲ್ಲಿ ಕನ್ನಡ – ಕೊಂಕಣಿ ಮಾತ್ರ ಭಾಷೆ ಇರುವ ಎರಡು ಮುಖ್ಯಭೇದ. ಮೀನು ಹಿಡಿಯುವವರಿಗಿಂತ ನಾವೆ ನಡೆಸುವವರು ಮೇಲು ಜಾತಿಯವರೆನಿಸಿಕೊಳ್ಳುತ್ತಾರೆ. ಆದರೆ ಇತ್ತೀಚೆಗೆ ಮುಖ್ಯ ನದಿಗಳಿಗೆಲ್ಲ ಸೇತುವೆಗಳ ನಿರ್ಮಾಣವಾಗಿ ನಾವೆಗಳ ಬೇಡಿಕೆ ಕಡಿಮೆಯಾದ್ದರಿಂದ ಮತ್ತು ಮೀನಿನ ಬೆಲೆ ಏರಿದ್ದರಿಂದ ನಾವಿಕರೂ ಮೀನುಗಾರರ ಕೆಲಸ ಕೈಕೊಳ್ಳುತ್ತಿದ್ದಾರೆ. ಯಾಂತ್ರಿಕ ನಾವೆಗಳು ಬಂದಾಗಿನಿಂದ ಮೀನುಗಾರಿಕೆಗೆ ಹೆಚ್ಚಿನ ಪ್ರೋತ್ಸಾಹ ದೊರಕಿದೆ. ಉತ್ತಮ ಮೀನುಗಳ ರಾಶಿಯೇ ಬರ್ಫದಲ್ಲಿ ತುಂಬಿ ಮಲ್ಪೆ ಬಂದರಕ್ಕೆ ಬರುವದು. ಅಲ್ಲಿ ಅವನ್ನು ಸರಿಪಡಿಸಿ ಡಬ್ಬಿಗಳಲ್ಲಿ ತುಂಬಿ ಪರದೇಶಗಳಿಗೆ ಕಳಿಸುವರು. 'ಖಾರವಿ'ಗಳು ಕೊಂಕಣಿ ಮಾತನಾಡುವವರಾದರೆ 'ಹರಕಂತ್ರರು' ಕನ್ನಡ ಮಾತನಾಡುವವರು. ಆದರೆ ಗಾಬಿತರು ಮರಾಠಿ ಮಿಶ್ರಿತ ಕೊಂಕಣಿ ಮಾತನಾಡುವರು. ಮೀನುಗಾರಿಕೆಯನ್ನೇ ವೃತ್ತಿಯನ್ನಾಗಿ ಅವಲಂಬಿಸಿದ ಜನ ಇನ್ನೂ ಕತ್ತಲಿದ್ದಾಗಲೇ ಎದ್ದು ದೂರ ಸಮುದ್ರದಲ್ಲಿ ಹೋಗಿ ಬಲೆಗಳಲ್ಲಿ ಮೀನು ಹಿಡಿದು ತಂದು ಮಾರಿ ಉದರ ನಿರ್ವಹಣೆ ಮಾಡುವರು. ಗಾಳದಿಂದಲೂ ಮೀನು ಹಿಡಿಯುವರು. ಹಣವಂತರು ನಾಯಲೋನಿನ ಬಲೆಗಳನ್ನು ಉಪಯೋಗಿಸಿದರೆ ಬಡವರು ತಮ್ಮ ಬಲೆಗಳನ್ನು



ಮೀಯಲೊಂದು ಬಚ್ಚಲು

ಕಾವೇ ಹೆಸೆದುಕೊಳ್ಳುವರು. ಲಾಂಚ ಇದ್ದವರಿಗೆ ಹೇರಳ ಮೀನಿನ ರಾಶಿ ಸಿಕ್ಕರೂ ಅವುಗಳಲ್ಲಿ ಉತ್ತಮ ವಾದವನ್ನು ಆರಿಸಿ ವಿದೇಶಕ್ಕೆ ಕಳಿಸಿ, ಮಾರಬೇಕಾದ ವನ್ನು ಮಾರಿ ಕೆಲವನ್ನು ಒಣಗಿಸುವರು. ತಿನ್ನಲು ನಿರುಪಯೋಗಿಯಾದ ಮೀನುಗಳನ್ನು ಕ್ಷಾರಕ್ಕಾಗಿ ಬಳ ಸುವರು. ಲಕ್ಷಗಟ್ಟಲೆ ಮೀನುಗಳನ್ನು ದಂಡೆಗೆ ತಂದು ಹಾಕಿದಾಗ ನಾಯಿ, ಕಾಗೆ, ಹದ್ದುಗಳು ಹೊಟ್ಟೆ ಬಿರಿ ಯುವಷ್ಟು ತಿಂದರೂ ಉಳಿದವು ನಾರುತ್ತ ಬೀಳುವ ದರಿಂದ ಅಂತಹ ದಂಡೆಯ ಮೇಲೆ ವಾಕರಿಕೆ ಬರು ವಂತಹ ದುರ್ನಾತ ಇರುವದು ಸ್ವಾಭಾವಿಕ. ಬಹುಶಃ ಮೀನು ತಿನ್ನದವರು ಇದೇ ಮೀನಿನ ಸುವಾಸನೆ ಎಂದು ತಿಳಿದುಕೊಳ್ಳುವರೋ ಏನೋ! ಮೀನಿನ ನಿಜವಾದ ರುಚಿ ಸವಿದವರಿಗೆ ಮಾತ್ರ ನಿಜಸ್ಥಿತಿಯ ಅರಿವು ಇರು ವದು.

ಅವರು ಕಡು ಬಡವರಾದರೂ ಅತಿಥಿಗಳು ಬಂದಾಗ ಸಾಲಮಾಡಿಯಾದರೂ ಯೋಗ್ಯತೆಗೆ ಮೀರಿ ಸತ್ಕರಿಸುವರು. ಮಳೆಗಾಲ ಪ್ರಾರಂಭವಾದ ನಂತರ ಮೀನುಗಾರಿಕೆ ನಿಂತು ಹೋಗುವುದರಿಂದ ಆ ಕಾಲದಲ್ಲಿ ಮದುವೆ ಇತ್ಯಾದಿಗಳತ್ತ ಗಮನ ಹಾಕುವರು. ಬೇಸಿಗೆ ಯಲ್ಲಿ ವಿಪುಲ ಮೀನು ದೊರೆತ ವರ್ಷ ಹೆಚ್ಚಿನ ಸಂಖ್ಯೆ ಯಲ್ಲಿ ಮದುವೆಗಳು ಜರಗುವವು. ದೇವರ ಪ್ರಸಾದ ಕೊಟ್ಟು, ಭಟ್ಟರು ಹೇಳಿದ ಮುಹೂರ್ತದಲ್ಲಿ ಮದುವೆ ಗಳನ್ನು ನೆರವೇರಿಸುವರು.

## ನವಾಯತರು

ಉತ್ತರ ಕನ್ನಡ ಜಿಲ್ಲೆಯ ಭಟಕಳದಲ್ಲಿ ಬೀಡು ಬಿಟ್ಟ ನವಾಯತರು (ನವ + ಆಯತ = ಹೊಸದಾಗಿ ಬಂದವರು) ಕೊಂಕಣಿ ಮಾತನಾಡುವವರಿದ್ದು ಉಳಿದ ಮುಸಲ್ಮಾನರಿಗಿಂತ ತೀರ ಭಿನ್ನವಾಗಿದ್ದಾರೆ. ಮಧ್ಯ ಯುಗದಲ್ಲಿ ವ್ಯಾಪಾರಕ್ಕೆ ಬಂದು ಕರ್ನಾಟಕದ ಕರಾವಳಿ ಯಲ್ಲಿ ತಳವೂರಿದ ಅರಬ ವಂಶದವರು ಇವರು ಎಂದು ಹೇಳಲಾಗುತ್ತಿದೆ. ಗೌರವರ್ಣದ ಸ್ಫುರದ್ರೂಪಿ ಗಳಿದ್ದು ವ್ಯಾಪಾರದಲ್ಲಿ ಕುಶಲರು. ಇದಕ್ಕಾಗಿ ಕಲಕತ್ತಾ ದಿಂದ ಕೊಲೊಂಬೊದ ವರೆಗೆ ಹರಡಿ ಹೋದರೂ ಕುಟುಂಬಗಳನ್ನು ಹುಟ್ಟೂರಿನಲ್ಲಿಯೇ ಬಿಡುವ ವಾಡಿಕೆ ಯಿದೆ. ಭಟಕಳದಲ್ಲಿರುವ ಅತ್ಯಾಧುನಿಕ ಇವರ ಗೃಹ ಗಳನ್ನು ನೋಡಬಹುದಾಗಿದೆ. ಗಂಡಸರು ತಲೆಗೊಂದು ಬಿಳಿ ಕರವಸ್ತ್ರ ಸುತ್ತಿ, ಸೊಂಟಕ್ಕೆ ಬಣ್ಣ ಬಣ್ಣದ ಲುಂಗಿ ಸಿಗಿಸಿ, ಕಾಲಲ್ಲಿ ಹಗುರವಾದ ಚಪ್ಪಲಿ ಧರಿಸುವರು.



ಸ್ವಾವಲಂಬನ



ದುಡಿಮೆಯ ಹೆಣ್ಣು

ಹೆಣ್ಣು ಮಕ್ಕಳು ಸೀರೆ, ಉದ್ದ ತೋಳಿನ ಕುಪ್ಪಸ ತೊಟ್ಟರೂ ಬುರುಖಾ ಧರಿಸುವರು. ಉರ್ದು ಮಿಶ್ರಿತ ಕೊಂಕಣಿಯನ್ನು ರಾಗವಾಗಿ ಮಾತನಾಡುವರು. ವ್ಯವ ಹಾರಕ್ಕಾಗಿ ಅಶುದ್ಧ ಕನ್ನಡದ ರೂಢಿಯನ್ನು ಮಾಡಿ ಕೊಂಡಿದ್ದಾರೆ. "ನಿಮಗೆ ನಾವು ಹೇಳಿದಾವ ಒಂದು ಹೆನ್ನು ಒಂದು ಗಂದು ಕೋಲಿ ಕೊಡಬೇಕು." (ನಮಗೆ ಒಂದು ಕೋಳಿ ಹೇಂಟೆ ಕೊಡಬೇಕೆಂದು ಹೇಳಿರಲಿಲ್ಲವೇ) ದಿನಾಲೂ ಊಟದಲ್ಲಿ ಮೀನು - ಮಾಂಸ ಬೇಕೇ ಬೇಕು. ಬಂಧ ಅತಿಥಿಗಳೊಡನೆ ಮನೆಯವರೂ ಜೊತೆಯಾಗಿ ದೊಡ್ಡ ತಾಟಿನಲ್ಲಿ ಉಣ್ಣುವರು. ವಿವಾಹದ ರಾತ್ರಿ ಮದುಮಕ್ಕಳಿಗೆ ಒಬ್ಬರ ಮುಖ ಇನ್ನೊಬ್ಬರಿಗೆ ಕಾಣ ದಂತೆ ಹೂಗಳಿಂದ ಮುಚ್ಚಿ ಬಿಡುವರು. ಅತಿಥಿಗಳಿಗೆ ಬಿರಿಯಾನಿ (ಮಾಂಸದ ಅನ್ನ) ಸೇವಿಗೆ ಪಾಯಸ ಬಡಿ ಸುವದು ವಾಡಿಕೆ. ದಾರಜಿಗಳೆಂಬ ಮುಸಲ್ಮಾನ ಕೊಂಕಣಿ ಗರು ಮೀನುಗಾರಿಕೆಯ ವ್ಯವಸಾಯ ಮಾಡುತ್ತಿದ್ದು ತುಂಬ ಬಡ ಜನಾಂಗ. ಇವರಲ್ಲದೆ ಮಾಪಿಳ್ಳೆಗಳು ಶಿಯಾ ಮತ್ತು ಸುನ್ನಿಗಳೂ ಈ ಪ್ರದೇಶದಲ್ಲೆಲ್ಲ ನೆಲೆಸಿ ದ್ದಾರೆ.

## ಕ್ರಿಶ್ಚಿನ್ನರು

ಪ್ರೊಟೆಸ್ಟೆಂಟರು ದಕ್ಷಿಣದಿಂದ ಮಲೆನಾಡಿಗೆ ಬಂದರೆ ಕೆಥೋಲಿಕ್‌ರು ಗೋವಾದಿಂದ ಬಂದರು. ಬಲಾತ್ಕಾರದಿಂದ ಮತಾಂತರಗೊಳಿಸಿದ ಕ್ರಿಶ್ಚಿನ್ನರಿಗೆ ರಕ್ತಗತವಾಗಿ ಬಂದ ಕೆಲ ರೂಢಿಗಳನ್ನು ಅನುಕರಿಸಲೂ ಪೋರ್ಚುಗೀಜರು (೧೫೬೦ ರಲ್ಲಿ) ಪ್ರತಿಬಂಧಿಸಿದ್ದ ರಿಂದ ಹಲವರು ಕ್ರಿಶ್ಚಿಯನ್ನರು ಉತ್ತರ ಕನ್ನಡ ಜಿಲ್ಲೆ ಗಳಿಗೆ ಹೋಗಿ ನೆಲೆಸಿದರು. ಬಿದನೂರು ಅರಸರು (೧೫೬೫–೧೭೬೩ ಕ್ರಿ.ಶ.) ಅವರಿಗೆ ಆಶ್ರಯವನ್ನಿತ್ತು ಹಲವರಿಗೆ ಭೂಮಿಯನ್ನು ಉಂಬಳಿಯಾಗಿ ಇತ್ತರು. ಇಂದಿಗೂ ಹಲವಾರು ಕೆಥೊಲಿಕ್ ಕುಟುಂಬಗಳು ಪೈ, ಪ್ರಭು, ನಾಯಕ ಎಂಬ ತಮ್ಮ ಪೂರ್ವಜರ ಹಿಂದು ಹೆಸರುಗಳನ್ನು ಧರಿಸುತ್ತಾರೆ. ಪ್ರೊಟೆಸ್ಟೆಂ ಟರು ಶಿಕ್ಷಣ ಆಸ್ಪತ್ರೆಯ ಸೇವೆಗಳನ್ನು ಕೈಕೊಂಡರೆ ಕೆಥೋಲಿಕರು ವಾದ್ಯ ಬಾರಿಸುವದು, ಮೀನಿನ ವ್ಯಾಪಾರ ಜೊತೆಗೆ ಕಟ್ಟಡದ ವ್ಯಾಪಾರವನ್ನು ಕೈಗೊಂಡಿದ್ದಾರೆ. ಹಿಂದು ಗಳಂತೆಯೇ ಸೀರೆ ಕುಪ್ಪಸ ಉಟ್ಟರೂ ಮದುವೆಯ ನಂತರವೇ ಪ್ರೌಢ ಕ್ರಿಶ್ಚಿನ್ನ ಹುಡುಗಿ ಸೆರಗು ಹೊದೆ ಯಲಾರಂಭಿಸುತ್ತಾಳೆ. ಧೋತರವನ್ನು ಅಚ್ಚುಕಟ್ಟಾಗಿ ಉಡುವದರಲ್ಲಿ ಮಂಗಳೂರಿನ ಕಿರಿಸ್ತಾನರು ಹಿಂದು ಗಳನ್ನೂ ಹಿಂದೆ ಹಾಕಿದ್ದಾರೆಂದರೆ ಅತಿಶಯೋಕ್ತಿಯಾಗ ಲಾರದು. ಕೆಥೋಲಿಕರ ಮನೆಮಾತು ಕೊಂಕಣಿ. ಊಟದಲ್ಲಿ ಅಕ್ಕಿ, ಮೀನು, ತೆಂಗಿನಕಾಯಿಗಳ ಉಪ ಯೋಗ ಹೆಚ್ಚು. ನಾತಾಳ (ಕ್ರಿಸ್‌ಮಸ್) ಹಬ್ಬವನ್ನು ಊರ 'ಫೆಸ್ತ'(ಜಾತ್ರೆ)ಗಳಲ್ಲಿ ಆಚರಿಸುವ ಪದ್ಧತಿ ಯಿದೆ. ಈ ಫೆಸ್ತಗಳಲ್ಲಿ ಹಿಂದೂಗಳೂ ಭಾಗವಹಿಸು ತ್ತಾರೆ. ಸುಗ್ಗಿ ಹಬ್ಬಕ್ಕೆ ಬೆಳೆಯನ್ನು ಚರ್ಚಿಗೆ ತಂದು ಪೂಜಿಸಿ ದೇವರಿಗೆ ಅರ್ಪಿಸಿ ಉಳಿದುದನ್ನು ಬಾಗಿಲಿಗೆ ಕಟ್ಟುವರು. ಪಾಲಕರೇ ನಿರ್ಧರಿಸಿದ ಮದುವೆಗಳು ಚರ್ಚುಗಳಲ್ಲಿ ನಡೆಯುವವು. ಮದುವೆಗಳಲ್ಲಿ ಕುಡಿತ ಕುಣಿತಗಳ ಪದ್ಧತಿಯಿದೆ.

## ಕರ್ನಾಟಕದ ಕಾಶ್ಮೀರ

ಕೊಡುಗು ಜಿಲ್ಲೆ ಬೇರೆಯೇ ನಾಡು ಎನಿಸುವ ಮಟ್ಟಿಗೆ ಇತರ ಪ್ರದೇಶಕ್ಕಿಂತ ಭಿನ್ನವಾಗಿದೆ. ಉತ್ತರಕ್ಕೆ ಹೇಮಾವತಿ ನದಿ, ದಕ್ಷಿಣಕ್ಕೆ ಬ್ರಹ್ಮಗಿರಿ ಬೆಟ್ಟ, ಪಶ್ಚಿ ಮಕ್ಕೆ ದಕ್ಷಿಣ ಕನ್ನಡ, ಪೂರ್ವಕ್ಕೆ ಮೈಸೂರ ಜಿಲ್ಲೆ ಯಿಂದ ಸುತ್ತುವರಿಯಲ್ಪಟ್ಟ ಈ ಪ್ರದೇಶಕ್ಕೆ 'ಕರ್ನಾ ಟಕದ ಕಾಶ್ಮೀರ' ವೆಂದರೆ ತಪ್ಪಾಗಲಾರದು. ಮೈಸೂರು, ಕೇರಳ, ತಮಿಳುನಾಡುಗಳ ನಡುವಿನ ತಂಟೆಗೆ ಕಾರಣ ವಾದ ಕಾವೇರಿ ನದಿ ಬ್ರಹ್ಮಗಿರಿಯಲ್ಲಿ ಜನ್ಮವೆತ್ತಿ ೪೭೦ ಮೈಲು ಹರಿದು ಬಂಗಾಲ ಉಪಸಾಗರಕ್ಕೆ ಕೂಡು ತ್ತದೆ. ಕೊಡಗಿನ ಸಂಸ್ಕೃತಿ ಕಾವೇರಿ ನದಿಯ ದಂಡೆಯಲ್ಲಿ ಯೇ ಬೆಳೆದು ಬಂದಿದೆ. ಜೋಡು ಕೋಡಿನ ಬೆಟ್ಟ, ಕೋಟೆ ಬೆಟ್ಟ, ತುಂಬೆ ಮಲೆ, ಸೋಮನ ಬೆಟ್ಟಗಳು ತಲೆ ಎತ್ತಿ ಎತ್ತರವಾಗಿ ಬೆಳೆದು ಪ್ರದೇಶಕ್ಕೆ ಭವ್ಯತೆ



ನನಗೂ ಹೆರಳು

ಕೊಟ್ಟಿವೆ. ೧೦೦-೧೫೦ ಇಂಚು ಮಳೆಯಾಗುವ ಪ್ರದೇಶ. ದಟ್ಟವಾದ ಕಾಡು, ಗುಡ್ಡಬೆಟ್ಟಗಳು, ಸಮುದ್ರ ಪಾತಳಿಯಿಂದ ಮೂರು ಸಾವಿರಕ್ಕಿಂತ ಹೆಚ್ಚು ಅಡಿ ಎತ್ತರಗಳು ಜನಜೀವನದ ಮೇಲೆ ಹೆಚ್ಚಿನ ಪ್ರಭಾವ ಬೀರಿವೆ. ಕೊಡವರ ಮೈಬಣ್ಣ ಅವರು ಆರ್ಯವಂಶಜರು ಇರಬಹುದೆಂದು ಸೂಚನೆಯಿತ್ತರೂ ಅವರ ಭಾಷೆ ದ್ರಾವಿಡ ಭಾಷೆಯಾಗಿದೆ.

ಕೊಡವರು ಸಾಕಷ್ಟು ಎತ್ತರಗಾತ್ರದ ದೃಢಕಾಯರು. ಸುಂದರ ಗಂಭೀರ ವ್ಯಕ್ತಿತ್ವವುಳ್ಳವರು.



ಹವೀಕ ತೋಟಿಗಾರ

ಸಾಹಸಿಗಳು, ಸಮರಶೂರರೆಂದು ಖ್ಯಾತಿ ಪಡೆದವರು. ಸಾಂಪ್ರದಾಯಿಕವಾಗಿ ಪುರುಷರು ಉದ್ದವಾದ ಶ್ವೇತ ನಿಲುವಂಗಿಯನ್ನು ಧರಿಸಿ ನಡುವೆ ಗೇಣಗಲದ ರೇಶ್ಮೆ ಪಟ್ಟಿ ಬಿಗಿದು, ಬದಿಗೆ ಹರಿತವಾದ ಕವಚವುಳ್ಳ ಕತ್ತಿಯನ್ನು ಧರಿಸುವರು. ತಲೆಗೆ ಜರಿ ರುಮಾಲು ಕೈಯಲ್ಲಿ ಕೋಲು ಹಿಡಿಯುವದು ರೂಢಿ. ಹೆಂಗಳೆಯರ ಉಡಿಗೆಯೂ ವೈಶಿಷ್ಟ್ಯಪೂರ್ಣವಾಗಿದೆ. ಸೀರೆಯ ನೀರಿಗೆಗಳೆಲ್ಲ ಹಿಂಬದಿಗೆ ಬರುವಂತೆ ಸಿಗಿಸಿ ಸೆರಗನ್ನು ಎಡ ಕಂಕುಳೊಳಗಿಂದ ಒಯ್ದು ಭುಜದ ಮೇಲೆ ಕ್ಲಿಪ್ ಅಥವಾ ಪಿನ್ನಿನಿಂದ ಜೋಡಿಸುವರು. ಸುಂದರ ಮೈಕಟ್ಟು ಉಳ್ಳವರು ಈ ಉಡಿಗೆಯಲ್ಲಿ ಇನ್ನಷ್ಟು ಆಕರ್ಷಕವಾಗಿ ತೋರುತ್ತಾರೆ. ಉದ್ದ ತೋಳಿನ ಕುಪ್ಪಸಗಳು ರೂಢಿಯಲ್ಲಿವೆ. ಸೆರಗು ಸದಾಕಾಲ ಇದ್ದಲ್ಲಿಯೇ ಇರುವದರಿಂದ ಎರಡೂ ಕೈಗಳೂ ಸ್ವತಂತ್ರವಾಗಿ ಬಿಡುವವು. ಚಲನವಲನಕ್ಕೆ ಅನುಕೂಲವಿರುವ ಉಡುಪು. ಕೊಡವರು ಶಿವರಾತ್ರಿ, ಯುಗಾದಿ, ವಿಷ್ಣು ಸಂಕ್ರಮಣ, ಸುಬ್ರಹ್ಮಣ್ಯ ಷಷ್ಠೀ ಹಬ್ಬಗಳ ಜೊತೆಗೆ ತಮ್ಮವೇ ಹಬ್ಬಗಳಾದ ಹುತ್ತರಿ, ತುಲಾಸಂಕ್ರಮಣ, ಆಯುಧ ಪೂಜೆಗಳ ಹಬ್ಬಗಳನ್ನು ಹೆಚ್ಚಿನ ಉತ್ಸಾಹದಿಂದ ಆಚರಿಸುವರು.

## ಹುತ್ತರಿ ಹಬ್ಬ

ಡಿಸೆಂಬರ ತಿಂಗಳಿನಲ್ಲಿ ರೋಹಿಣಿ ನಕ್ಷತ್ರದಲ್ಲಿ ಬರುವ ಹತ್ತು ದಿನದ ಹುತ್ತರಿ(ಸುಗ್ಗಿ ಹಬ್ಬ)ಯನ್ನು ಸಂಭ್ರಮದಿಂದ ಆಚರಿಸುವರು. ದೂರ ದೂರದಿಂದ ತಮ್ಮ ಊರಿಗೆ ಬಂದು, ಬಾಗಿಲು, ಮನೆ, ಬೀದಿಗಳನ್ನು ಹೂವು, ತುರಾಯಿಗಳಿಂದ ಶೃಂಗರಿಸುವರು. ಮುತ್ತೈದೆಯರು ಅಕ್ಕಿ ಹಿಟ್ಟಿನಿಂದ ಮಡಕೆ, ಬಾಗಿಲು, ಗೋಡೆಗಳ ಮೇಲೆ ಸುಂದರ ನಕ್ಷೆಗಳನ್ನು ಬಿಡಿಸುವರು. ಫಲಾಹಾರದ ನಂತರ ಹೊಸಬಟ್ಟೆ ಧರಿಸಿ ದೇವರಿಗೆ ನಮಿಸಿ ವಾದ್ಯದೊಂದಿಗೆ ಹೊಲಕ್ಕೆ ತೆರಳಿ ಹೊಸ ಬೆಳೆಯನ್ನು ಸಾಂಕೇತಿಕವಾಗಿ ಕೊಯ್ದು ಊರವರಿಗೆ ಹಂಚಿ, ಉಳಿದ ಧಾನ್ಯದಿಂದ ಹಬ್ಬಕ್ಕಾಗಿ ಬಂಗಾರ, ನಾಣ್ಯ, ಕಲ್ಲಿನ ಹರಳುಗಳನ್ನು ಸೇರಿಸಿ ಪಾಯಸ ಮಾಡುವರು. ಹೊನ್ನು ಸಿಕ್ಕವನನ್ನು ಸಿರಿವಂತನಾಗುವನೆಂದು ಭಾವಿಸಿದರೆ, ನಾಣ್ಯ ಸಿಕ್ಕವನು ಭಾಗ್ಯವಂತನೆಂದೂ ಹರಳು ಸಿಕ್ಕವ ದೃಢಕಾಯನಾಗುವನೆಂದೂ ತಿಳಿಯುವ ಸಂಪ್ರದಾಯವಿದೆ. ನಂತರದ ಒಂದು ವಾರದಲ್ಲಿ ಜಾತಿ-ಲಿಂಗ-ವಯಸ್ಸಿನ ಭೇದ ಮರೆತು ಸಾರ್ವಜನಿಕ ಸ್ಥಳಗಳಲ್ಲಿ ಕೋಲಾಟವಾಡುವರು. ಅಕ್ಟೋಬರದಲ್ಲಿ ಬರುವ ತುಲಾಸಂಕ್ರಮಣದಲ್ಲಿ ಕಾವೇರಿ ನದಿಯನ್ನು ಪೂಜಿಸಲು ಉಗಮ ಸ್ಥಾನಕ್ಕೆ ಧಾವಿಸಿ ಅಲ್ಲಿ ಮಿಂದು ಪೂಜಿಸುವರು. ಸೆಪ್ಟಂಬರದಲ್ಲಿ 'ಕೈಲುಪೊಳ್ದು' (ಆಯುಧ ಪೂಜೆ)ಯ ಸಮಯದಲ್ಲಿ ತಮ್ಮ ದನಕರು, ನೇಗಿಲು ಆಯುಧಗಳನ್ನು ಪೂಜಿಸಿ, ವಿವಿಧ ಶಾರೀರಿಕ ಕ್ರೀಡಾಸ್ಪರ್ಧೆಗಳಲ್ಲಿ ಭಾಗವಹಿಸುವರು. ನಂತರ ನಗಾರಿ, ಬೇಟೆನಾಯಿಗಳ ಸಮೇತವಾಗಿ ಬೇಟೆಗೆ ಹೊರಡುವರು. ಸಾಹಸದಿಂದ ಹುಲಿಯ ಬೇಟೆಯಾಡಿದವರಿಗೆ ಸನ್ಮಾನಿಸುವ ಸಲುವಾಗಿ ಅವರು ಕೊಂದ ಬೇಟೆಯನ್ನೂ ಕೋವಿಯನ್ನೂ ಹೂಗಳಿಂದ ಶೃಂಗರಿಸಿ ಹೆಂಗಳೆಯರು ತಿಲಕ ಹಚ್ಚಿ ಆರತಿ ಬೆಳಗಿ ಬೇಟೆಯೊಡನೆ ವಿವಾಹ ಮಾಡುವರು. ಇಂತಹರು ಕಲ್ಲಿಮೀಸೆ ಬೆಳೆಸಿ ತಮ್ಮ ಶೌರ್ಯವನ್ನು ಜಗತ್ತಿಗೆ ಸಾರುವರು. ದಟ್ಟ ಅರಣ್ಯದಲ್ಲಿ ಕಾಡಿನಂತೆ ಬೆಳೆದ ಕಾಫಿ ತೋಟಗಳಲ್ಲಿ ವಾಸಿಸುವ ಜನರು ಆತ್ಮರಕ್ಷಣೆಗಾಗಿ ಕೋವಿಗಳನ್ನು ಸದಾ ಕಾಲವೂ ತಮ್ಮ ಬಳಿಯಲ್ಲಿಟ್ಟಿರುತ್ತಾರೆ. ತೋಟಗಳು, ಊರಿಂದ ಹತ್ತಾರು ಮೈಲಿ ದೂರದಲ್ಲಿರುವದರಿಂದ ಓಡಾಟಕ್ಕೆ ಮೋಟಾರ ಸಾಯಕಲ್, ಜೀಪ್ ಇಲ್ಲವೇ ಕಾರನ್ನು ಇಟ್ಟಿರುತ್ತಾರೆ. ಮನೆಯಲ್ಲಿ ಸಿದ್ಧವಾದ ಅಡಿಗೆಯನ್ನು ಟೇಬಲ್ಲಿನ ಮೇಲೆ ತಂದಿಟ್ಟು ಎಲ್ಲರೂ ಒಟ್ಟಿಗೆ ಕುಳಿತು ತಮಗೆ ಬೇಕಾದಷ್ಟನ್ನು ಬಡಿಸಿ ಪಾಶ್ಚಾತ್ಯರ ಪದ್ಧತಿಯಂತೆ ಉಣ್ಣುವರು. ನೆರೆಹೊರೆಯ ಊರುಗಳ ಜಾತ್ರೆಗಳಲ್ಲಿ ನವಜನಾಂಗದವರು ತಮ್ಮ ಜೀವನದ ಸಂಗಾತಿಯನ್ನು ಆರಿಸಿಕೊಳ್ಳುವ ಪರಿಪಾಠವು ಇವರಲ್ಲಿ ಬೆಳೆದು ಬಂದಿದೆ. ಮದುಮಗಳನ್ನು ರೇಶಿಮೆಸೀರೆಯಿಂದ ಅಲಂಕರಿಸಿ ತಲೆಯ ಮೇಲೆ ಒಂದರ ಮೇಲೊಂದರಂತೆ ಮೂರು ಬಿಂದಿಗೆಗಳನ್ನಿಟ್ಟು ಶಸ್ತ್ರಧಾರಿಯಾದ ಮದುಮಗನ ಮುಂದೆ ನಿಲ್ಲಿಸಲು ಬಂದ ಅತಿಥಿಗಳು ಸುರಾಪಾನ ಮಾಡಿ ಎಡಗೈ ಸೊಂಟದ ಮೇಲಿಟ್ಟು ಬಲಗೈಯನ್ನು ಹವೆಯಲ್ಲಿ ತೂರುತ್ತ ನರ್ತಿಸುವರು. ಹಲಗೆ-ಕಹಳೆಗಳ ನಾದದಲ್ಲಿ ವಿವಾಹ ನೆರವೇರುವದು. ಪುತ್ರೋದಯವಾದಾಗ ಅವನು ಶೂರನಾಗಲೆಂಬ ಹಾರೈಕೆಯಿಂದ ಬಿಲ್ಲು ಬಾಣಗಳನ್ನು ಕೊಡುವ ವಾಡಿಕೆಯಿದೆ. ಮನೆಯಲ್ಲಿ ಸಾವು ಸಂಭವಿಸಿದರೆ ಊರವರಿಗೆ ತಿಳಿಯುವಂತೆ ಗುಂಡನ್ನು ಹಾರಿಸುವರು. ಕುಡಿಯರು ಅರಣಗಳಲ್ಲಿ ವಾಸಿಸಿ, ಕಾಫಿ ತೋಟಗಳಲ್ಲಿ ಜೀತದಾಳಾಗಿ ದುಡಿಯುವರು. ಮಾಪಿಳ್ಳೆಗಳು ಬಯಲು ಪ್ರದೇಶದಲ್ಲಿ ವ್ಯಾಪಾರದಲ್ಲಿ ತೊಡಗಿರುವರು. ಇದರಂತೆ



ಹುಗು ಕೃಷಿಗಾರ

ಒಂಟರು, ಕಿರಿಸ್ತಾನರು, ಮುಸಲ್ಮಾನರು ವ್ಯಾಪಾರ-ಸಾಗಾಟ, ಕೃಷಿಗಳಲ್ಲಿ ತೊಡಗಿರುವರು.

## ಲಿಂಗಾಯತ, ಒಕ್ಕಲಿಗರು

ಶಿವಮೊಗ್ಗ, ಚಿಕ್ಕಮಗಳೂರು, ಹಾಸನ ಜಿಲ್ಲೆಗಳಲ್ಲಿ ಲಿಂಗಾಯತ, ಒಕ್ಕಲಿಗ(ಗೌಡ) ಮತ್ತು ವೈಶ್ಯರು ಸಮಾಜದಲ್ಲಿ ಪ್ರಭಾವಶಾಲಿಗಳಾಗಿದ್ದಾರೆ. ಕೃಷಿ, ವ್ಯಾಪಾರಗಳಲ್ಲಿ ಮುಂದುವರೆದ ಲಿಂಗಾಯತರು ರಾಜಕಾರಣದಲ್ಲಿಯೂ ವರ್ಚಸ್ಸು ಬೀರುತ್ತಿದ್ದಾರೆ. ಜಂಗಮರನ್ನೊಳಗೊಂಡ ಬಣಜಿಗರ ಗುಂಪನ್ನು ಸಾದರ ವೀರಶೈವರು ಸ್ಪರ್ಧಿಸುತ್ತಾರೆ. ಸಿರಿಗೆರೆಯ ಜಗದ್ಗುರುಗಳು ಸಾದರ ಲಿಂಗಾಯತರ ಮುಖಂಡತ್ವ ವಹಿಸಿ ಕಳೆದ ೧೫-೨೦ ವರ್ಷಗಳಿಂದ ಶಿಕ್ಷಣದಿಂದ ತಮ್ಮ ಸಮಾಜವನ್ನು ಮೇಲಕ್ಕೆತ್ತಲು ಯತ್ನಿಸುತ್ತಿದ್ದಾರೆ. ಸಿರಿವಂತರು ಅಕ್ಕಿ, ಗೋದಿಯನ್ನು ಉಪಯೋಗಿಸಿದರೆ ಬಡವರು ರಾಗಿಯನ್ನು ಉಪಯೋಗಿಸುವರು. ಉತ್ತರ



ಕೊಂಕಣಿಗರ ವಿವಾಹ



ಗೃಹಮುಖಿ ಗೌಡತಿ

ಕರ್ನಾಟಕದ ಲಿಂಗಾಯುತರಂತೆ ಖಾರ– ಅಡಿಗೆ, ರೊಟ್ಟಿ ಹಿಂಡಿಗಳ ಪ್ರಯೋಗ ಕಡಿಮೆ. ಮಾತು, ನಡತೆ, ಇರುವಿಕೆಗಳೆಲ್ಲ ಉತ್ತರದವರಿಗಿಂತ ಶ್ರೇಷ್ಠವೆಂದು ಹೆಮ್ಮೆ ಪಡುವರು. ಸ್ತ್ರೀಯರು ತಲೆಯ ಮೇಲೆ ಸೆರಗು ಹೊದೆಯುವದಿಲ್ಲ. ಮದುವೆಯನ್ನು ಕನ್ಯೆಯ ಮನೆಯಲ್ಲಿಯೇ ಮಾಡಿದರೂ ಕೆಲವು ಧನಿಕರು ತಮ್ಮ ಮನೆಯಲ್ಲಿಯೇ ಮದುವೆ ಮಾಡಿಕೊಡಬೇಕೆಂದು ಆಗ್ರಹ ಪಡಿಸುವರು. ಮದುವೆಯಲ್ಲಿ ಹುಗ್ಗಿ–ಹೋಳಿಗೆಗಳನ್ನು ಮಾಡುವರು. ದೀಪಾವಳಿ, ಯುಗಾದಿ, ಶಿವರಾತ್ರಿ, ನಾಗಪಂಚಮಿ ಹಬ್ಬಗಳನ್ನು ಆಚರಿಸುವರು. ಒಕ್ಕಲಿಗರು ಕೃಷಿಯ ಹೊರತಾಗಿ ರಾಜಕಾರಣ ಕ್ಷೇತ್ರದಲ್ಲೂ ಹೆಚ್ಚೆಚ್ಚು ಭಾಗವಹಿಸುತ್ತಿದ್ದಾರೆ. ಮೀನು, ಮಾಂಸಗಳೆಂದರೆ ಇವರಿಗೆ ತುಂಬ ಇಷ್ಟ. ಅಂತೆಯೇ ಸಾಮೂಹಿಕವಾಗಿ ಬೇಟೆಗೆ ಹೋಗಿ ಕಾಡುಹಂದಿಯ ಬೇಟೆಯಾಡಿ ಸಾಮೂಹಿಕ ಔತಣ ಏರ್ಪಡಿಸುವರು. ಪ್ರತಿಯೊಬ್ಬ ಒಕ್ಕಲಿಗನ ಮನೆಮುಂದೆ ತುಳಸಿ ಕಟ್ಟೆ ಕಂಡುಬರುವದು. ಅದಕ್ಕೆ ಬೇರೆಯೇ ಭಾವಣೆಯಿದ್ದು ಜಾಗಟೆ ಶಂಖಗಳನ್ನು ಅಲ್ಲಿಯೇ ಇಡುವರು. ಮದುಮಗನ ತಾಯಿ ಮದುವೆಗೆ ಹೋಗದೇ ಮನೆಯಲ್ಲಿರುವಳು. ವೈಶ್ಯರು ಹೆಚ್ಚಾಗಿ ವ್ಯಾಪಾರದಲ್ಲಿ ತೊಡಗಿರುವರು. ಮದುವೆಗಳಲ್ಲಿ ಹೆಚ್ಚಿನ ವರದಕ್ಷಿಣೆಯ ಪರಿಪಾಠವಿದೆ. ತಮ್ಮದೇ ಆದ ಶಾಲೆ – ಕಾಲೇಜ, ವಸತಿಗೃಹ, ಬ್ಯಾಂಕಗಳನ್ನು ಮಾಡಿಕೊಂಡಿದ್ದಾರೆ.

## ಒಕ್ಕಲಿಗರು

ಹಾಸನ, ಚಿಕ್ಕಮಗಳೂರು, ಶಿವಮೊಗ್ಗ ಜಿಲ್ಲೆಗಳಲ್ಲಿ ಒಕ್ಕಲಿಗರ ಜನಾಂಗಕ್ಕೆ ಗೌಡರೆಂದು ಕರೆಯುವದು ವಾಡಿಕೆ. ಆದರೆ ಇವರನ್ನು ಹಾಲಕ್ಕಿ ಗೌಡರೊಡನೆ ಹೋಲಿಸಬಾರದು. ಮೈಸೂರರಾಜ್ಯದಲ್ಲಿ ರಾಜಕಾರಣ, ಉದ್ದಿಮೆ, ಇನ್ನಿತರ ಕ್ಷೇತ್ರಗಳಲ್ಲಿ ಒಕ್ಕಲಿಗರು ತಮ್ಮದೇ ವಿಶಿಷ್ಟ ಸ್ಥಾನ ಪಡೆದಿದ್ದಾರೆ. ತಮ್ಮ ಸಮಾಜದ ಏಳ್ಗೆಯಾಗಬೇಕಾದರೆ, ಮುಂದೆ ಬರಬೇಕಾದರೆ, ರಾಜಕಾರಣದಲ್ಲಿ ತಮ್ಮ ಕೈವಾಡ ಇದ್ದಿರಲೇಬೇಕೆಂದು ಮನಗಂಡು ತಮ್ಮ ಪ್ರಭಾವದ ಕ್ಷೇತ್ರಗಳಿಂದ ಚುನಾಯಿತರಾಗಿ ರಾಜ್ಯದ ಮಂತ್ರಿಮಂಡಲದಲ್ಲಿ ತಮ್ಮ ಸ್ಥಾನವನ್ನು ಕಾಯ್ದಿರಿಸಿಕೊಂಡು, ತಮ್ಮ ಜನರಿಗೆ ಸರ್ವ ರೀತಿಯ ಸಹಾಯಮಾಡುತ್ತಾರೆ. ಧನಿಕರಲ್ಲಿಯೂ ಬಾಹ್ಯಾಡಂಬರ ಕಡಿಮೆ. ಗಂಡಸರು ಧೋತರವನ್ನೋ ಮುಂಡವನ್ನೋ ಉಟ್ಟು ಶರ್ಟ ಧರಿಸಿ ತಲೆಗೆ ವಸ್ತ್ರವನ್ನು (ಕಿರಿ ಮುಂಡಾಸ) ಸುತ್ತಿದರೆ ಹೆಂಗಸರು ಕಚ್ಚೆಹಾಕದೇ ಸೀರೆ ಉಟ್ಟು ಕುಪ್ಪುಸ ತೊಡುವರು. ಪ್ರತಿಯೊಂದು ಮನೆಯ ಮುಂದೆ ತುಳಸಿ ಕಟ್ಟೆಯೊಂದು ಇದ್ದೇತೀರಬೇಕು. ಅಲ್ಲಿ ಒಂದು ಶಂಖ, ಝಾಗಟೆ, ಪೂಜಾಸಾಹಿತ್ಯಗಳು ಸದಾಕಾಲ ಇರುತ್ತವೆ. ಗಂಡು ಹೆಣ್ಣು ವೀಳ್ಯ ಜಗಿಯುವದು ಹೆಚ್ಚು. ಇವರಲ್ಲಿ ಸುರಾಪಾನ ಪ್ರಚಲಿತವಿದೆ. ಉಪ್ಪಿಟ್ಟು, ದೋಸೆ-ಇಡ್ಲಿಗಳ ಉಪಹಾರ, ಕಾಫಿಗಳನ್ನು ಸೇವಿಸುವರು. ಅನ್ನ–ಸಾರುಗಳೊಂದಿಗೆ ಮೀನು – ಮಾಂಸಗಳ ವ್ಯಂಜನಗಳು ಇವರಿಗೆ ಬೇಕೆಬೇಕು. 'ತೋಟಾ' ನೀರಿನಲ್ಲಿ ಹಾಕಿ ಅದರಿಂದ ಉಂಟಾದ ಸ್ಫೋಟದಿಂದ ಮೀನುಗಳು ಸತ್ತು ಮೇಲಕ್ಕೆ ಬಂದಾಗ ಹಿಡಿಯುವರು. ಕಾಡುಹಂದಿಯ ಮಾಂಸವೆಂದರೆ ಇವರಿಗೆ ಬಲು ಪ್ರೀತಿ. ಅಂತೆಯೇ ಪರಿಸರದವರೆಲ್ಲ ಒಟ್ಟಾಗಿ ಹಂದಿ ಬೇಟೆಗೆಂದು ಕಾಡಿಗೆ ಹೋಗುವರು. ಶೌರ್ಯದಿಂದ ಹಂದಿಯ ಬೇಟೆಯಾಡಿದಾಗ ಆದ ಪ್ರಯಾಸವನ್ನು ಮರೆತು ಬೇಟೆಯ ಪಾಲುಮಾಡಿ ಹಂಚಿಕೊಳ್ಳುವರು. ಅಂತಹ ದಿನಗಳಲ್ಲಿ ಕೇರಿ ಕೇರಿಗಳಲ್ಲಿ ಹಬ್ಬದ ಸಡಗರ. ಪಾಲಕರು ಏರ್ಪಡಿಸಿದ ತರುಣ ವಯಸ್ಸಿನ ವಿವಾಹಗಳೇ ಹೆಚ್ಚು. ಜನ್ಮತಾರೀಖು ನೋಡಿಸಿ ಆಚಾರ್ಯರಿಂದ ಜಾತಕಗಳನ್ನು ಮಾಡಿಸುವ ರೂಢಿ ಇಲ್ಲದ್ದರಿಂದ ವರನಿಗೆ ಈ ಕನ್ಯೆ ತರಬೇಕೆಂದು ನಿರ್ಧರಿಸಿದ್ದೇವೆ. ಮದುವೆಗೆ ಒಪ್ಪಿಗೆಯಿದ್ದರೆ ಪ್ರಸಾದವಾಗಬೇಕೆಂದು ದೇವರ ವಿಗ್ರಹಗಳಿಗೆ ಬೇಡಿಕೊಳ್ಳುವರು. ಒಪ್ಪಿಗೆ ಸಿಕ್ಕರೆ ಒಳ್ಳೆಯ ಮುಹೂರ್ತವನ್ನು ಪಂಡಿತರೇ ಹುಡುಕಿಕೊಡಬೇಕು. ಮಗನ ಮದುವೆಗೆ ತಾಯಿ ಹೋಗಕೂಡದೆಂಬ ನಿಷೇಧವಿದೆ. ಉಳಿದ ಬಳಗದವರೆಲ್ಲ ಹಲಗೆ ಮುಂತಾದ ಹಳೆಯ ಮಂಗಳ ವಾದ್ಯಗಳೊಂದಿಗೆ ಮದುಮಗಳ ಮನೆಗೆ ಬಂದು ಮದುವೆ ಮುಗಿಸಿಕೊಂಡು ಅದೇ ದಿನ ಮರಳುವರು



ಸೆರೆಗಾರ ಸ್ತ್ರೀ

* * * *

## ಪ್ರಸಿದ್ಧಿಯ ಫಲ

ವಿಶ್ವವಿಖ್ಯಾತ ಕಲಾಕಾರ ಪಿಕಾಸೋನಿಗೆ ತನ್ನ ತಾರುಣ್ಯದ ದಿನಗಳಲ್ಲಿ ಹಣದ ತೊಂದರೆ ಬಹಳ ಇದ್ದಿತು. ಕ್ಯಾನ್‌ವಾಸ್ ಕೊಳ್ಳಲೂ ಸಹ ಹಣವಿರುತ್ತಿರಲಿಲ್ಲ. ಆಗ್ಗೆ ತನ್ನ ಗೆಳೆಯನೊಬ್ಬನ ಜೊತೆ ಕೊಠಡಿಯೊಂದರಲ್ಲಿ ಹೇಗೋ ಕಾಲಹಾಕುತ್ತಿದ್ದ. ನೆಲಕ್ಕೆ ಹಾಸಿದ್ದ ಕಲ್ಲುಗಳ ಮೇಲೆಯೇ ಚಿತ್ರಗಳನ್ನು ರಚಿಸುತ್ತಿದ್ದ. ಅವನು ಪ್ರಸಿದ್ಧಿಯನ್ನು ಪಡೆದ ಕೂಡಲೇ ಆತನ ಪ್ರಾರಂಭದ ಕೃತಿಗಳನ್ನು ಕೊಳ್ಳಲು ಕಲಾವಸ್ತುಗಳ ವ್ಯಾಪಾರಿಗಳು ಇಡೀ ಪ್ಯಾರಿಸ್ ನಗರವನ್ನೇ ಶೋಧಿಸಿದರು.

ಕೊನೆಗೆ ಅವರು ಯೌವನ ಕಾಲದಲ್ಲಿ ಪಿಕಾಸೋ ವಾಸಿಸುತ್ತಿದ್ದ ಕೊಠಡಿಯನ್ನು ಕಂಡುಹಿಡಿದರು. ಪಿಕಾಸೋ ಚಿತ್ರ ರಚಿಸಿದ್ದ ಆ ಹಾಸುಗಲ್ಲುಗಳು ಸಾವಿರಾರು ಪೌಂಡುಗಳಿಗೆ ಮಾರಾಟವಾದವು.

–ಟಿ. ವ್ಹಿ. ವೆಂಕಟರಮಣಯ್ಯ

ಪ್ರಾಚೀನ ಶಿಲ್ಪಕಲೆಯ ತವರಾದ ಮಲೆನಾಡು ಭಾರತೀಯ ಶಿಲ್ಪಕಲೆಗೆ ಮಹತ್ವದ ಕಾಣಿಕೆ ನೀಡಿದೆ. ಬೇಲೂರು, ಹಳೇಬೀಡಿನ ದೇವಾಲಯಗಳ ಶಿಲ್ಪವೈಭವವು ಪೌರ್ವಾತ್ಯ ಪಾಶ್ಚಿಮಾತ್ಯ ಕಲಾವಿಮರ್ಶಕರಿಂದ ಪ್ರಶಂಸಿಸಲ್ಪಟ್ಟಿದೆ. ಈ ಕಲೆಯ ದೇಗುಲಗಳನ್ನು ಜನತೆ ಅರಿಯಬೇಕು, ರಕ್ಷಿಸಬೇಕು.


ಶ್ರವಣಬೆಳಗೊಳದ ಗೊಮ್ಮಟೇಶ್ವರ

# ಮಲೆನಾಡಿನ ವಾಸ್ತುಶಿಲ್ಪ ಕಲಾವೈಭವ

× ಡಾ॥ ಎ. ವಿ. ನರಸಿಂಹಮೂರ್ತಿ

ಸೌಂದರ್ಯರೂಪಿಯಾದ ದೈವಶಿಲ್ಪಿಯು ಮಲೆನಾಡಿಗೆ ನಿಸರ್ಗಸೌಂದರ್ಯವನ್ನು ಯಥೇಚ್ಛವಾಗಿ ನೀಡಿ ಅದು ನಿಸರ್ಗಸೌಂದರ್ಯದ ಖನಿಯಾಗುವಂತೆ ಮಾಡಿದ್ದರೆ, ಮಾನವ ಶಿಲ್ಪಿಯು ತನ್ನ ಕೈಚಳಕದಿಂದ, ವಾಸ್ತುಶಿಲ್ಪ ಕಲೆಯಿಂದ ಹೇರಳವಾಗಿ ದೊರೆಯುವ ಕಲ್ಲಿನಲ್ಲಿ ರಮಣೀಯವೂ ದಿವ್ಯವೂ ಆದ ಸುಂದರ ಮೂರ್ತಿಶಿಲ್ಪಗಳನ್ನು ನಿರ್ಮಿಸಿ ಮಲೆನಾಡನ್ನು ಸುಂದರ ಶಿಲ್ಪಗಳ ಆಗರವನ್ನಾಗಿ ಮಾಡಿದ್ದಾನೆ. 'ಭಾರತೀಯ ಶಿಲ್ಪದಲ್ಲಿ ದೈವಶಿಲ್ಪಿಗೂ ಮಾನವಶಿಲ್ಪಿಗೂ ಸ್ಪರ್ಧೆಯು ನಡೆಯುತ್ತಿದೆಯೋ ಎಂಬಂತೆ ಭಾಸವಾಗುತ್ತದೆ' ಎಂಬ ಆನಂದಕುಮಾರಸ್ವಾಮಿಯ ಮಾತು, ಮಲೆನಾಡನ್ನು ಕುರಿತೇ ಹೇಳಿದ್ದೆ ಎಂದು ಅನುಮಾನ ಬರುವಷ್ಟು ಸತ್ಯವಾಗಿದೆ. ಆಕಾಶ ಸರ್ವೇಕ್ಷಣ ದೃಷ್ಟಿಯಿಂದ ಮಲೆನಾಡನ್ನು ನೋಡಿದರೆ ಅದೊಂದು ಉತ್ತಮ ಬಯಲು ಶಿಲ್ಪಾಗಾರದಂತೆ ಕಾಣಬರುತ್ತದೆ. ಫಲವತ್ತಾದ ಮತ್ತು ಸಂಪದ್ಭರಿತವಾದ ಪ್ರಾಚೀನ ಬನವಾಸಿ ಪ್ರಾಂತ್ಯದಲ್ಲಿ ಮಲೆನಾಡಿನ ಕೆಲವು ಭಾಗಗಳು ಸೇರಿದ್ದವು. ಬನವಾಸಿ ಪ್ರಾಂತ್ಯದ ಒಡೆತನವನ್ನು ಸಂಪಾದಿಸುವ ದೃಷ್ಟಿಯಿಂದ ಕರ್ಣಾಟಕದ ಎಲ್ಲ ರಾಜಮನೆತನಗಳು ಒಂದಲ್ಲ ಒಂದು ವಿಧದಿಂದ ಮಲೆನಾಡಿನೊಡನೆ ಸಂಪರ್ಕವನ್ನು ಬೆಳೆಸಿಕೊಂಡವು. ಇದರಿಂದ ವಾಸ್ತುಶಿಲ್ಪಕ್ಕೆ ವಿಶೇಷ ಪ್ರೋತ್ಸಾಹ ಸಿಕ್ಕಿದಂತಾಗಿದೆ. ಕರ್ಣಾಟಕದ ಎಲ್ಲ ರಾಜಮನೆತನಗಳ ಶಿಲ್ಪಿಗಳಿಗೂ ಮಲೆನಾಡು ಆಸರೆಯಾಯಿತು ಇದರಿಂದ ವೈವಿಧ್ಯಮಯ ಶಿಲ್ಪಸಂಪ್ರದಾಯವು ಬೆಳೆಯಲು ಅನುಕೂಲವಾಯಿತು.

ಮಲೆನಾಡಿನಲ್ಲಿ ವಾಸ್ತುಶಿಲ್ಪ ಯಾವಾಗ ಪ್ರಾರಂಭವಾಯಿತು ಎಂದು ಹೇಳಲು ದೊರಕಿರುವ ಆಧಾರಗಳು ಸಾಲದು. ಮೌರ್ಯರ ಕಾಲದಲ್ಲಿ ಮರದಿಂದ ವಾಸ್ತುಶಿಲ್ಪ ಕೃತಿಗಳು ನಿರ್ಮಿತವಾಗುತ್ತಿದ್ದವು. ಆ ರೀತಿಯ ಕೃತಿಗಳು ಮಲೆನಾಡಿನ ಯಾವ ಭಾಗದಲ್ಲಿಯೂ ಉಳಿದು ಬಂದಿಲ್ಲ. ನೇರವಾಗಿ ಅಶೋಕನ ಸರ್ಕಾರದೊಂದಿಗೆ ಸಂಪರ್ಕವನ್ನು ಹೊಂದಿದ್ದ ಮಾಸ್ಕಿಯಂತಹ ನಗರದಲ್ಲೇ ಆ ಕಾಲದ ಮರದ ಕಟ್ಟಡಗಳು ಉಳಿದುಬಂದಿಲ್ಲವೆಂಬುದನ್ನು ಗಮನಿಸಬೇಕು.

ಅನಂತರ ಮಲೆನಾಡಿನ ಕೆಲವು ಭಾಗಗಳು ಶಾತವಾಹನರ ಆಳ್ವಿಕೆಗೆ ಸೇರಿದವು. ಇತ್ತೀಚೆಗೆ ಕರ್ಣಾಟಕದ ಪ್ರಾಚೀನ ನಗರಗಳಲ್ಲೊಂದಾದ ಬನವಾಸಿಯಲ್ಲಿ ಮುರಾತತ್ವ ಉತ್ಖನನಗಳು ನಡೆಯುತ್ತಿವೆ. ಇವುಗಳಿಂದ ಬನವಾಸಿಯ ಪ್ರಾಚೀನತೆಯ ಬಗೆಗೆ ಹೊಸ ವಿಷಯಗಳು ಬೆಳಕಿಗೆ ಬರುತ್ತಿವೆ. ಈ ಅಗೆತಗಳಿಂದ ಎರಡು ಇಟ್ಟಿಗೆಯ ಕಟ್ಟಡಗಳು ಕಂಡುಹಿಡಿಯಲ್ಪಟ್ಟಿವೆ. ಇವುಗಳು ಬೃಹದಾಕಾರದ ಕಟ್ಟಡಗಳಾಗಿದ್ದು ಗಜಪೃಷ್ಠಾಕೃತಿಯಲ್ಲಿವೆ. ಇವು ದೇವಾಲಯಗಳಿರಬಹುದು. ಇವುಗಳಲ್ಲಿ ಎರಡು ಇಲ್ಲವೇ ಮೂರು ಸಮಾನಾಂತರ ಒಳಗೋಡೆಗಳಿವೆ. ಈಗ ಹೀನಸ್ಥಿತಿಯಲ್ಲಿದ್ದರೂ ಬನವಾಸಿಯು ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಾಲದಲ್ಲಿ, ಈ ಕಟ್ಟಡಗಳು ಭವ್ಯ ದೇವಮಂದಿರಗಳಾಗಿದ್ದುವೆಂಬುದು ಸುಲಭವಾಗಿ ತಿಳಿದುಬರುತ್ತದೆ. ಈ ರೀತಿಯ ಉತ್ಖನನಗಳು ಮುಂದುವರಿದಲ್ಲಿ ಇನ್ನೂ ಭವ್ಯವಾದ ಶಾತವಾಹನರ ಕಾಲದ ವಾಸ್ತುಶಿಲ್ಪಕೃತಿಗಳು ಬೆಳಕಿಗೆ ಬರುವುದರಲ್ಲಿ ಸಂದೇಹವಿಲ್ಲ.

## ಅತ್ಯಂತ ಪ್ರಾಚೀನ ಶಿಲ್ಪ

ಬನವಾಸಿಯ ಮಧುಕೇಶ್ವರ ದೇವಾಲಯದ ಅಂಗಳದಲ್ಲಿ ಕ್ರಿ. ಶ. ಎರಡನೆಯ ಶತಮಾನಕ್ಕೆ ಸೇರಬಹುದಾದ ನಾಗಶಿಲ್ಪವಿದೆ. ಇದೇ ಮಲೆನಾಡಿನ ಅತ್ಯಂತ ಪ್ರಾಚೀನ ಶಿಲ್ಪವೆನ್ನಬಹುದು. ಈ ನಾಗಶಿಲ್ಪದ ಸುತ್ತಲೂ ಬ್ರಾಹ್ಮಿಲಿಪಿಯ ಬರಹವಿದೆ. ಉತ್ತಮ ಶಿಲ್ಪವೆಂದು ಹೇಳಲಾಗದಿದ್ದರೂ ಈ ನಾಗಶಿಲ್ಪವು ಕರ್ಣಾಟಕದಲ್ಲಿಯೇ ಪ್ರಾಚೀನತಮವಾದುದು ಎಂಬುದು ಗಮನಾರ್ಹವಾದುದು. ಈಗ ಉತ್ತರ ಕನ್ನಡ ಜಿಲ್ಲೆಗೆ ಸೇರಿರುವ ಬನವಾಸಿ ಪ್ರಾಚೀನ ಕಾಲದಿಂದಲೂ ಸಾಂಸ್ಕೃತಿಕ ದೃಷ್ಟಿಯಿಂದ ಮಲೆನಾಡಿಗೆ ಸೇರಿದ್ದಿತೆಂದು ಗೊತ್ತಾಗುತ್ತದೆ. ಕರ್ಣಾಟಕದ ಪ್ರಾಚೀನತಮ ಶಿಲ್ಪವು ಮಲೆನಾಡಿಗೆ ಸೇರಿದುದು ಎಂಬುದು ಗಮನಿಸಬೇಕಾದ ಅಂಶ.

## ಪ್ರಾಚೀನ ದೇವಾಲಯ

ಬನವಾಸಿಯ ಕದಂಬರ ಆಳ್ವಿಕೆಗೆ ಮಲೆನಾಡಿನ ಕೆಲವು ಭಾಗಗಳು ಸೇರಿದ್ದವು. ಈ ಕದಂಬರು ಕರ್ಣಾಟಕದಲ್ಲಿ ವಾಸ್ತುಶಿಲ್ಪದ ತಳಹದಿಯನ್ನು ಹಾಕಿದವರೆಂದರೆ ಅತಿಶಯೋಕ್ತಿಯಲ್ಲ. ಕದಂಬರು ದೇಗುಲಗಳನ್ನು ಕಟ್ಟುವಾಗ ಗರ್ಭಗೃಹ ಮತ್ತು ಸುಖನಾಸಿ ಎಂಬ ಎರಡು ಭಾಗಗಳನ್ನು ಬೇರೆ ಬೇರೆಯಾಗಿ ಕಟ್ಟುವ ಪದ್ಧತಿಯನ್ನು ಪ್ರಾರಂಭಿಸಿದರು. ಕದಂಬರ ಚರಿತ್ರೆಯನ್ನು ವಿಸ್ತಾರವಾಗಿ ತಿಳಿಸುವ ತಾಲಗುಂದದ ಶಾಸನವು ಇತಿಹಾಸದಲ್ಲಿ ಬಲು ಪ್ರಸಿದ್ಧವಾದುದು. ಶಿಕಾರಿಪುರ ತಾಲೂಕಿನ ಈ ಕುಗ್ರಾಮ ಕದಂಬರ ಕಾಲದಲ್ಲಿ ಸ್ಥಾನಗುಂಡೂರು ಎಂಬ ಹೆಸರಿನ ಪ್ರಸಿದ್ಧ ಅಗ್ರಹಾರವಾಗಿದ್ದಿತು. ಇಲ್ಲಿನ ಪ್ರಣವೇಶ್ವರ ದೇವಾಲಯವು ದಕ್ಷಿಣ ಭಾರತದಲ್ಲೇ ಅತ್ಯಂತ ಪ್ರಾಚೀನ ದೇವಾಲಯವೆಂದು ತಿಳಿದುಬರುತ್ತದೆ. ಐಹೊಳೆಯ ದುರ್ಗಾ ದೇವಾಲಯವಾಗಲೀ ಅಥವ ಮಹಾಬಲಿಪುರದ ಗುಹಾಂತರ ದೇವಾಲಯಗಳಾಗಲೀ ಪ್ರಣವೇಶ್ವರ ದೇವಾಲಯಕ್ಕಿಂತ ಪ್ರಾಚೀನವಾದುವಲ್ಲವೆಂಬುದು ವಿದ್ವಾಂಸರ ಮತ.



ಬಳ್ಳಿಗಾವೆಯ ಕೇದಾರೇಶ್ವರ ದೇವಸ್ಥಾನ.

ಅಂದರೆ ದಕ್ಷಿಣ ಭಾರತದ ಅತ್ಯಂತ ಪ್ರಾಚೀನ ದೇವಾಲಯವನ್ನು ಹೊಂದಿರುವ ಗೌರವ ಮಲೆನಾಡಿಗೆ ಸೇರುತ್ತದೆ. ಇದು ಕೇವಲ ಪ್ರಾಚೀನತೆಯ ದೃಷ್ಟಿಯಿಂದ ಮಾತ್ರವಲ್ಲದೆ ಇನ್ನೂ ಅನೇಕ ದೃಷ್ಟಿಗಳಿಂದ ಪ್ರಾಮುಖ್ಯ ಪಡೆದಿದೆ. ಇಲ್ಲಿರುವ ಪ್ರಣವೇಶ್ವರ ಲಿಂಗವನ್ನು ಶಾತಕರ್ಣಿಯೇ ಮೊದಲಾದ ಮಹಾರಾಜರು ಪೂಜಿಸುತ್ತಿದ್ದರೆಂದು ತಾಲಗುಂದದ ಶಾಸನದಿಂದ ಗೊತ್ತಾಗುತ್ತದೆ. ಅಂದರೆ ಇಲ್ಲಿನ ಗರ್ಭಗೃಹ ಕ್ರಿ. ಶ. ಎರಡನೆಯ ಶತಮಾನದಲ್ಲಿಯೇ ಅಸ್ತಿತ್ವದಲ್ಲಿದ್ದು ಶಾತಕರ್ಣಿಯಂತಹ ರಾಜರುಗಳನ್ನು ಆಕರ್ಷಿಸಿದ್ದಿತೆಂಬುದು ಖಚಿತವಾಗುತ್ತದೆ. ಈ ದೇವಾಲಯದ ಗರ್ಭಗುಡಿಯ ದ್ವಾರದ ಕಂಬದ ಮೇಲೆ ಕದಂಬರಾಜ ಮೃಗೇವರ್ಮನ ರಾಣಿ ಪ್ರಭಾವತಿಯ ಶಾಸನವೊಂದಿದೆ. ಪ್ರಣವೇಶ್ವರ ಲಿಂಗವು ಆರು ಅಡಿ ಎತ್ತರವಾಗಿಯೂ ಐದು ಅಡಿ ಸುತ್ತಳತೆಯುನ್ನುಳ್ಳದ್ದಾಗಿದ್ದು ಭವ್ಯತೆಯ ಪ್ರತೀಕವಾಗಿದೆ. ಇತ್ತೀಚಿನ ಜೀರ್ಣೋದ್ಧಾರ ಕಾರ್ಯಗಳಿಂದ ಈಗ ಈ ದೇವಾಲಯದಲ್ಲಿ ಪ್ರಾಚೀನ ಅಂಶಗಳು ಕಡಿಮೆಯಾಗಿರುವುದು ದುರದೃಷ್ಟಕರ. ಬನವಾಸಿಯಲ್ಲಿರುವ ಕದಂಬರ ಕುಲದೈವ ಮಧುಕೇಶ್ವರನ ದೇವಾಲಯದ ಗರ್ಭಗುಡಿ ಕದಂಬರ ಕಾಲಕ್ಕೆ ಸೇರಿದುದು. ಇದರ ಮುಂದಿರುವ ಭಾಗಗಳು ಚಾಳುಕ್ಯರ ಕಾಲಕ್ಕೆ ಸೇರಿದುವು.

ಕದಂಬರ ಕಾಲದ ದೇವಾಲಯಗಳು ಹಾಳಾಗಿ ಅವುಗಳಲ್ಲಿನ ಮೂರ್ತಿಶಿಲ್ಪಗಳು ವಿಶೇಷವಾಗಿ ದೊರಕಿಲ್ಲ. ಶಿವಮೊಗ್ಗ ಜಿಲ್ಲೆಯಲ್ಲಿರುವ ಜಂಬೆಹಳ್ಳಿಯಲ್ಲಿ ಕದಂಬ ದೇವಾಲಯ ಹಾಳಾಗಿದ್ದರೂ ಅಲ್ಲಿ ಮಹಿಷಾಸುರಮರ್ದಿನಿ ವಿಗ್ರಹವೊಂದು ದೊರಕಿದೆ. ಇದೊಂದು ಅಪೂರ್ವ ಕದಂಬ ಶಿಲ್ಪಕಲಾಕೃತಿಯೆಂದು ಪರಿಣತರಿಂದ ಪರಿಗಣಿಸಲ್ಪಟ್ಟಿದೆ. ನಾಲ್ಕು ಭುಜಗಳನ್ನುಳ್ಳ ದೇವಿಯು ಮಹಿಷನ ರೂಪದಲ್ಲಿರುವ ರಕ್ಕಸನನ್ನು ಮೆಟ್ಟಿದ್ದಾಳೆ. ದೇವಿಯ ಇತರ ಕೈಗಳಲ್ಲಿ ತ್ರಿಶೂಲ, ಖಡ್ಗ ಮತ್ತು ಶಂಖಗಳಿವೆ. ಲೀಲಾಜಾಲವಾಗಿ ಅನಾಯಾಸದಿಂದ ರಕ್ಕಸನನ್ನು ಸಂಹರಿಸುತ್ತಿರುವ ದುರ್ಗಾದೇವಿಯ ಸುಂದರ ಮುಖ ನಮ್ಮನ್ನು ಬಹುವಾಗಿ ಆಕರ್ಷಿಸುತ್ತದೆ.

ಗಂಗರ ಕಾಲದ ಶಿಲ್ಪಕೇಂದ್ರವಾದ ಶ್ರವಣಬೆಳಗೊಳವು ಅರೆ ಮಲೆನಾಡು ಎಂದು ಹೇಳಬಹುದು. ಇಲ್ಲಿಯ ಗೋಮಟೇಶ್ವರ ವಿಗ್ರಹ ವಿಶ್ವದಲ್ಲೇ ಅತ್ಯಂತ ಎತ್ತರವಾದ ಮತ್ತು ಸುಂದರವಾದ ಶಿಲ್ಪಗಳಲ್ಲೊಂದು. ಗಂಗರ ಕಾಲದ ಕಂಚಿನ ವಿಗ್ರಹಗಳು ಮಲೆನಾಡಿನ ಅನೇಕ ದೇವಾಲಯಗಳಲ್ಲಿ ಹಂಚಿಹೋಗಿವೆ. ಅದರಲ್ಲಿಯೂ ಜೈನಬಸ್ತಿಗಳಲ್ಲಿರುವ ಸಣ್ಣ ಪ್ರಮಾಣದ ಜಿನಮೂರ್ತಿಗಳಲ್ಲಿ ಅನೇಕವು ಗಂಗರ ಕಾಲದವೆಂದು ಗೊತ್ತಾಗುತ್ತದೆ.

## ಬಳ್ಳಿಗಾವೆ

ಉತ್ತರ ಕರ್ಣಾಟಕದಲ್ಲಿ ಉಗಮ ಹೊಂದಿ ಅಲ್ಲಿಯೇ ಬೆಳವಣಿಗೆಯನ್ನು ಹೊಂದಿ ಪ್ರವರ್ಧಮಾನಕ್ಕೆ ಬಂದ ಚಾಲುಕ್ಯ ವಾಸ್ತುಶಿಲ್ಪ ಶೈಲಿಯು ಕಾಲಕ್ರಮದಲ್ಲಿ ಮಲೆನಾಡಿಗೂ ಹಬ್ಬಿತು. ಮಲೆನಾಡಿನಲ್ಲಿರುವ ಚಾಲುಕ್ಯಶೈಲಿಯ ದೇವಾಲಯಕ್ಕೆ ಶಿರಾಳಕೊಪ್ಪದ ಸಮೀಪದಲ್ಲಿರುವ ಬಳ್ಳಿಗಾವೆ ಒಂದು ಕೇಂದ್ರಸ್ಥಳ. ಒಂದು ದೃಷ್ಟಿಯಿಂದ ನೋಡುವುದಾದರೆ ಐಹೊಳೆ ಮತ್ತು ಪಟ್ಟದಕಲ್ಲುಗಳಷ್ಟೇ ಮುಖ್ಯವಾದ ನಗರ ಬಳ್ಳಿಗಾವೆ. ಇದು ಈಗ ಒಂದು ಕುಗ್ರಾಮವಾಗಿದ್ದರೂ ಪ್ರಾಚೀನ ಕಾಲದಲ್ಲಿ ಸುಪ್ರಸಿದ್ಧ ಧಾರ್ಮಿಕ ಮತ್ತು ಸಾಂಸ್ಕೃತಿಕ ಕೇಂದ್ರವಾಗಿದ್ದು ಬನವಾಸಿ ನಾಡಿನ ರಾಜಧಾನಿಯೂ ಆಗಿದ್ದಿತು. ಇಲ್ಲಿ ಒಂದು ವಿಶ್ವವಿದ್ಯಾನಿಲಯವೇ ಇದ್ದಿತು. ಇಂತಹ ಶ್ರೇಷ್ಠ ನಗರವು ಮಹಮ್ಮದೀಯರ ದಾಳಿಗಳಿಗೆ ತುತ್ತಾಗಿ ಇಲ್ಲಿನ ಶಿಲ್ಪಗಳು ನಾಶವಾದವು. ಇಂದಿಗೂ ಈ ಗ್ರಾಮದಲ್ಲೆಲ್ಲ ಭಿನ್ನವಾದ ಸುಂದರ ಶಿಲ್ಪಗಳು ಅಲ್ಲಲ್ಲಿ ಬಿದ್ದಿರುವುದು ಕಾಣಬರುತ್ತದೆ. ಬಳ್ಳಿಗಾವೆಯಲ್ಲಿರುವ ದೇವಾಲಯಗಳಲ್ಲಿ ಪ್ರಸಿದ್ಧವಾದವು ಕೇದಾರೇಶ್ವರ, ಕೈಟಭೇಶ್ವರ, ಸೋಮೇಶ್ವರ, ತ್ರಿಪುರಾಂತಕೇಶ್ವರ ಮತ್ತು ಪಂಚಲಿಂಗ ದೇವಾಲಯಗಳು. ಇವುಗಳಲ್ಲಿ ಕೇದಾರೇಶ್ವರ ದೇವಾಲಯ ಬಲು ಸುಂದರವಾದದ್ದು. ಇದೊಂದು ತ್ರಿಕೂಟಾಚಲ. ಈ ದೇವಾಲಯದ ಮುಂದೆ ಇರುವ ಹೊಯ್ಸಳ ಲಾಂಛನ ಶಿಲ್ಪವು ಅನಂತರದ ಕಾಲದ್ದೆಂದೂ ವಿದ್ವಾಂಸರು ಊಹಿಸಿದ್ದಾರೆ. ಇಲ್ಲಿನ ಶಿಲ್ಪಗಳು ಹಳೇಬೀಡು ಮತ್ತು ಬೇಲೂರು ಶಿಲ್ಪಗಳಷ್ಟು ಉತ್ತಮವಾಗಿಲ್ಲದಿದ್ದರೂ ಹೊಯ್ಸಳ ಶಿಲ್ಪಕ್ಕೆ ಇದೇ ಬುನಾದಿ ಇರಬಹುದೆಂದು ಊಹಿಸಲು ಅವಕಾಶವಿದೆ. ಕೇದಾರೇಶ್ವರ ದೇವಾಲಯದಲ್ಲಿ ಮೂರು ಗರ್ಭಗೃಹಗಳೂ, ಸುಖನಾಸಿ ಮತ್ತು ಮಂಟಪಗಳಿವೆ. ಮೂರು ಗರ್ಭಗೃಹಗಳ ಮೇಲೆಯೂ ವಿಮಾನಗಳಿವೆ. ಕ್ರಿ. ಶ. ೧೦೭೦ರಲ್ಲಿ ಕಟ್ಟಲಾದ ತ್ರಿಪುರಾಂತ



ಹಳೇಬೀಡು ದೇವಾಲಯ

ಕೇಶ್ವರ ದೇವಾಲಯವು ದ್ವಿಕೂಟಾಚಲ. ಇಲ್ಲಿನ ಸುಖನಾಸಿ ಮುಂದಿರುವ ಬಾಗಿಲುವಾಡವು ರಮಣೀಯವಾದ ಶಿಲ್ಪಗಳಿಂದ ಆವೃತವಾಗಿದೆ. ಇಲ್ಲಿರುವ ಶಿಲ್ಪಗಳಲ್ಲಿ ಈಶ್ವರನು ತ್ರಿಪುರಾಸುರನನ್ನು ಸಂಹಾರ ಮಾಡುವ ದೃಶ್ಯ ಬಲು ನಾಜೂಕಾಗಿದ್ದು ಹೊಯ್ಸಳ ಶೈಲಿಯನ್ನು ನಮ್ಮ ಗಮನಕ್ಕೆ ತರುತ್ತದೆ. ದಕ್ಷಿಣದ ಕಡೆಯಲ್ಲಿ ಜಾಲಂಧ್ರಗಳಿದ್ದು ಇಲ್ಲಿ ನರ್ತನ ಭಂಗಿಯಲ್ಲಿರುವ ನಾಗಿನಿಯರ ಶಿಲ್ಪಗಳಿವೆ. ತ್ರಿಪುರಾಂತಕೇಶ್ವರ ದೇವಾಲಯದ ಶಿಲ್ಪಗಳಲ್ಲಿ ನಯನ ಮನೋಹರವಾದವುಗಳೆಂದರೆ ಪಂಚತಂತ್ರದ ಕಥೆಯನ್ನು ಹೇಳುವ ಶಿಲ್ಪ ಫಲಕಗಳು. ಒಂದು ಕಡೆ ಮೊಸಳೆ ಮತ್ತು ಕಪಿಯ ಕಥೆ ಇದೆ. ಇದರಲ್ಲಿ ಮೊಸಳೆಯು ಕಪಿಯನ್ನು ಹೊತ್ತುಕೊಂಡು ಹೋಗುವ ಮತ್ತು ಕಪಿಯು ತಪ್ಪಿಸಿಕೊಳ್ಳುವ ದೃಶ್ಯ ಬಲು ಸುಂದರವಾಗಿದೆ. ಜಗಳಾಡುವ ಎರಡು ಟಗರುಗಳ ಮಧ್ಯೆ ನರಿಯು ಪ್ರವೇಶಿಸಿ, ತಪ್ಪಿಗಾಗಿ ಪ್ರಾಣ ಕಳೆದುಕೊಳ್ಳುವ ದೃಶ್ಯ, ಎರಡು ಹಂಸಗಳು ಆಮೆಯನ್ನು ಹೊತ್ತುಕೊಂಡು ಹೋಗುವುದು. ಆಮೆಯು ಬಾಯಿ ತೆರೆದು ಸಾಯುವುದು ಮುಂತಾದ ಕಥೆಗಳು ಬಲು ನಾಜೂಕಾಗಿವೆ. ವಾಯುವ್ಯ ಗೋಡೆಯ ಗೂಡಿನಲ್ಲಿರುವ ಮಹಿಷಾಸುರಮರ್ದಿನಿ ಒಂದು ಸುಂದರ ಶಿಲ್ಪ. ಸುಂದರ ಸ್ತ್ರೀಯರು ಕೋಲಾಟವನ್ನು ಆಡುತ್ತಿರುವ ಶಿಲ್ಪಫಲಕವು ನಯನಮನೋಹರವಾಗಿದೆ. ನವರಂಗದಲ್ಲಿರುವ ಕಂಭಗಳು ಚರಕಯಂತ್ರದ (ಲೇತ್) ಮೇಲೆ ತಿರುಗಿಸಿ ಮಾಡಿದವುಗಳಾಗಿರುವುದರಿಂದ ಕನ್ನಡಿಯಂತೆ ಹೊಳೆಯುತ್ತವೆ. ಪಂಚಲಿಂಗ ದೇವಾಲಯದ ಉಮಾಮಹೇಶ್ವರ ಶಿಲ್ಪ ಚಾಲುಕ್ಯ ಶಿಲ್ಪದಲ್ಲಿಯೇ ಅತ್ಯಂತ ಸುಂದರಮೂರ್ತಿ. ಪಾರ್ವತಿಯನ್ನು ಎಡದ ತೊಡೆಯ ಮೇಲೆ ಕೂರಿಸಿಕೊಂಡು ಶಿವನು ಒಂದು ಕೈಯನ್ನು ಆಕೆಯ ಹೆಗಲ ಮೇಲೆ ಇರಿಸಿದ್ದಾನೆ. ಈಶ್ವರನ ಪಾದವು ನಂದಿಯ ಬೆನ್ನಮೇಲೆ ಇದೆ. ಶಿವನ ಜಟಾಮುಕುಟ, ಯಜ್ಞೋಪವೀತ, ಮಕರಕುಂಡಲಗಳು ಸ್ಫುಟವಾಗಿ ಕಾಣುತ್ತವೆ. ಈಶ್ವರನ ಮುಖದ ಮಂದಹಾಸ ಬಲು ಸುಂದರವಾಗಿದೆ. ಪಾರ್ವತಿಯ ಗುಂಗುರು ಕೂದಲು ಗಾಳಿಯಲ್ಲಿ ಆಡುತ್ತಿವೆಯೋ ಎಂಬಂತೆ ಭಾಸವಾಗುತ್ತದೆ. ಉಮಾಮಹೇಶ್ವರನ ಎರಡು ಕಡೆಗಳಲ್ಲಿಯೂ ಕುಮಾರ ಮತ್ತು ಗಣಪತಿ ನಿಂತಿದ್ದಾರೆ. ಒಟ್ಟಿನಲ್ಲಿ ಇದೊಂದು ಅಪೂರ್ವ ಶಿಲ್ಪ. ಇದೇ ದೇವಾಲಯದಲ್ಲಿರುವ ಇತರ ಶಿಲ್ಪಗಳೆಂದರೆ ಬಲಿ ಮತ್ತು ವಾಮನ, ಸಂಗೀತಗಾರರು, ರತಿ–ಮನ್ಮಥ, ಗಜಾಸುರಮರ್ದನ ಮೂರ್ತಿ, ಅಷ್ಟದಿಕ್ಪಾಲಕರು ಮತ್ತು ಸ್ತ್ರೀ ವಿಗ್ರಹಗಳು. ಈ ದೇವಾಲಯದಲ್ಲಿದ್ದ ಎರಡು ದ್ವಾರಪಾಲಕ ವಿಗ್ರಹಗಳು ಬೆಂಗಳೂರಿನ ಮ್ಯೂಸಿಯಂನಲ್ಲಿವೆ.

## ತಾರಾಭಗವತಿ

ಬಳ್ಳಿಗಾವೆಯಲ್ಲಿ ಬೌದ್ಧ ಮತ್ತು ಜೈನ ಶಿಲ್ಪಗಳೂ ದೊರಕಿವೆ. ಇಲ್ಲಿರುವ ಕೆರೆಯ ದಂಡೆಯ ಮೇಲೆ ಯಾರೂ ಗಮನಿಸದೆ ಬಿದ್ದಿರುವ ತಾರಾಭಗವತಿಯ ಉತ್ತಮ ಶಿಲ್ಪವಿದೆ. ಈ ಸುಂದರವಾದ ಮೂರ್ತಿಯು ಭಿನ್ನವಾಗಿ ಬಿದ್ದಿದೆ. ಇದು ಯಾವ ಅಂತರಾಷ್ಟ್ರೀಯ ಮ್ಯೂಸಿಯಂನಲ್ಲಾದರೂ ಇಡಲು ಯೋಗ್ಯವಾದ ಮತ್ತು ಭಾರತ ದೇಶದಲ್ಲಿ ಹೆಚ್ಚು ಸಂಖ್ಯೆಯಲ್ಲಿ ದೊರೆಯದಿರುವ ಶಿಲ್ಪ. ಬಳ್ಳಿಗಾವೆಯಲ್ಲಿ ಭಿನ್ನವಾದ ಜಿನ ಮೂರ್ತಿಯ ಶಿಲ್ಪಗಳೂ ಕಾಣುತ್ತವೆ. ಎಲ್ಲ ದೃಷ್ಟಿಗಳಿಂದಲೂ ಬಳ್ಳಿಗಾವೆಯನ್ನು ನೋಡಿದರೆ ಮತಧರ್ಮ ಸಾಮರಸ್ಯ ಮಲೆನಾಡಿನಲ್ಲಿ ಹೇಗೆ ಇದ್ದಿತೆಂಬುದಕ್ಕೆ ಇದೊಂದು ಉತ್ತಮ ನಿದರ್ಶನ.

ಬಳ್ಳಿಗಾವೆಯಲ್ಲಿ ಗಮನಿಸಬೇಕಾದ ಮತ್ತೊಂದು ಶಿಲ್ಪವೆಂದರೆ ಭೇರುಂಡೇಶ್ವರ ಸ್ತಂಭ. ಒಂದೇ ಕಲ್ಲಿನ ಈ ಸ್ತಂಭ ಸುಮಾರು ಮೂವತ್ತು ಅಡಿ ಎತ್ತರವಾಗಿದೆ. ಅರ್ಧ ಮಾನವಾಕೃತಿ ಮತ್ತು ಮಿಕ್ಕರ್ಧ ಪಕ್ಷಿಯಾಕೃತಿಯ ಈ ಶಿಲ್ಪವು ಅಪೂರ್ವವಾದುದು.

ಚಾಲುಕ್ಯ ಶೈಲಿಯ ದೇವಾಲಯಗಳನ್ನು ಆನವಟ್ಟಿ, ಕುಪ್ಪೆಗದ್ದೆ, ಬನವಾಸಿ ಮುಂತಾದ ಕಡೆಗಳಲ್ಲಿಯೂ ಕಾಣಬಹುದು. ಆದರೆ ಇವುಗಳಲ್ಲಿ ಯಾವುವೂ ಬೆಳಗಾವಿಯ ದೇವಾಲಯದಷ್ಟು ಪ್ರಾಮುಖ್ಯ ಪಡೆಯಲಿಲ್ಲ.



ಬನವಾಸಿಯ ಮಧುಕೇಶ್ವರ ದೇವಾಲಯದ ನಾಗಶಿಲ್ಪ

## ಚನ್ನಕೇಶವ ಮತ್ತು ಹೊಯ್ಸಳೇಶ್ವರ

ಕಲ್ಯಾಣದ ಚಾಲುಕ್ಯರ ನಂತರ ಮಲೆನಾಡಿನ ಅನೇಕ ಭಾಗಗಳಿಗೆ ಹೊಯ್ಸಳರೇ ಒಡೆಯರಾದರು. ಹೊಯ್ಸಳ ರಾಜರು ಶೂರರು ಮತ್ತು ಧೀರರು ಮಾತ್ರವಲ್ಲದೆ ಕಲಾಪಕ್ಷಪಾತಿಗಳಾಗಿದ್ದು ಭಾರತದ ಇತಿಹಾಸದಲ್ಲೇ ತಮ್ಮ ಅನುಪಮ ಕಲಾಕೃತಿಗಳಿಂದ ಅಮರರಾಗಿದ್ದಾರೆ. ಹೊಯ್ಸಳ ದೇವಾಲಯಗಳಲ್ಲಿ ಉತ್ತಮವಾದವು ಎಂದು ಪರಿಗಣಿತವಾಗಿರುವ ಬೇಲೂರಿನ ಚನ್ನಕೇಶವ ಮತ್ತು ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯಗಳು ಭಾರತೀಯ ಶಿಲ್ಪ ಸಂಪ್ರದಾಯಕ್ಕೆ ಮಲೆನಾಡಿನ ಹೆಮ್ಮೆಯ ಕಾಣಿಕೆ ಎಂದು ಹೇಳಬಹುದು. ಮಲೆನಾಡಿನ ಈ ಅಮೂಲ್ಯ ಕೃತಿಗಳನ್ನು ನೋಡದ ರಸಿಕನಿಲ್ಲ. ಅವುಗಳನ್ನು ಕುರಿತು ಕೇಳದ ಶ್ರೀಸಾಮಾನ್ಯನಿಲ್ಲ. ಅವುಗಳನ್ನು ಮನಸಾರೆ ಮೆಚ್ಚಿ ಹೊಗಳದ ಕಲಾಚರಿತ್ರಕಾರನಿಲ್ಲ. ಆನಂದಕುಮಾರಸ್ವಾಮಿ, ಫರ್ಗ್ಯುಸನ್, ಪರ್ಸಿಬ್ರೌನ್, ರೌಲೆಂಡ್, ಹ್ಯಾವೆಲ್ ಮುಂತಾದ ಪಾಶ್ಚಾತ್ಯ ವಿದ್ವಾಂಸರುಗಳಿಗೆ ಈ ದೇವಾಲಯಗಳನ್ನು ಎಷ್ಟು ಹೊಗಳಿದರೂ ಸಾಲದು. ಒಟ್ಟಿನಲ್ಲಿ ಮಲೆನಾಡಿನ ಶಿಲ್ಪವೈಭವಕ್ಕೆ ಇವು ತಿಲಕಪ್ರಾಯವಾಗಿವೆ.



ಶ್ರೀ ಕೇದಾರೇಶ್ವರ ದೇವಾಲಯದ ನವರಂಗ



ನರ್ತಿಸುತ್ತಿರುವ ಮದನಿಕಾ ವಿಗ್ರಹ.

ಬೇಲೂರಿನ ವಿಜಯನಾರಾಯಣ ದೇವಾಲಯವು ಬಹು ವಿಶಾಲವಾದ ದೊಡ್ಡ ಅಂಗಳದ ಮಧ್ಯದಲ್ಲಿದೆ. ಇದರ ಜೊತೆಗೆ ಇದೇ ಅಂಗಳದಲ್ಲಿ ಕಪ್ಪೆ ಚೆನ್ನಿಗರಾಯ, ವೀರನಾರಾಯಣ, ಅಮ್ಮನವರ ಗುಡಿ ಮುಂತಾದವೂ ಇವೆ. ಪೂರ್ವಾಭಿಮುಖವಾಗಿರುವ ಬೇಲೂರು ವಿಜಯನಾರಾಯಣ ದೇವಾಲಯವನ್ನು ವಿಷ್ಣುವರ್ಧನನು ತಾನು ವೈಷ್ಣವನಾದುದರ ಸ್ಮರಣಾರ್ಥವಾಗಿ ನಿರ್ಮಿಸಿದನೆಂದು ತಿಳಿಯುತ್ತದೆ. ಎತ್ತರವಾದ ಜಗುಲಿಯ ಮೇಲೆ ದೇವಾಲಯ ನಿರ್ಮಾಣವಾಗಿರುವುದರಿಂದ ಅದರ ಠೀವಿಯು ಎದ್ದು ಕಾಣುತ್ತದೆ. ಗರ್ಭಗುಡಿ, ಸುಖನಾಸಿ ಮತ್ತು ನವರಂಗಗಳನ್ನು ಹೊಂದಿರುವ ಈ ದೇವಾಲಯದ ಹೊರಗೋಡೆಗಳು ಶಿಲ್ಪಫಲಕಗಳಿಂದಲೇ ನಿರ್ಮಿತವಾಗಿವೆ. ಇವುಗಳಲ್ಲಿರುವ ಚಿತ್ರಪಟ್ಟಿಕೆಗಳಲ್ಲಿ ಆನೆಗಳು, ಮಣಿತೋರಣ, ಬಳ್ಳಿಗಳು ಮುಂಚಾಚಿರುವ ಗೂಡುಗಳು, ಕಂಬಗಳು, ಸೂರುಗಲ್ಲು, ಕಟಾಂಜನಗಳಿವೆ. ಅನಂತರ ಜಾಲಂಧ್ರಗಳಿವೆ. ಈ ಜಾಲಂಧ್ರಗಳಲ್ಲಿ ವಿಷ್ಣುವರ್ಧನನ ದರ್ಬಾರು, ತ್ರಿವಿಕ್ರಮಾವತಾರ, ಕಾಳೀಯಮರ್ದನ, ಹಿರಣ್ಯಕಶಿಪು ಸಂಹಾರ ಮುಂತಾದ ಕಥೆಗಳಿವೆ.

## ಮದನಿಕೆ

ಜಾಲಂಧ್ರಗಳ ಪಕ್ಕದಲ್ಲಿ ಸ್ತಂಭಗಳೂ ಅದರ ಮೇಲೆ ಸೂರಿಗೆ ಆಧಾರವಾಗಿ ಸುಂದರ ಸ್ತ್ರೀ ವಿಗ್ರಹಗಳೂ ನಿಲ್ಲಿಸಲ್ಪಟ್ಟಿವೆ. ಈ ರೀತಿ ನಲವತ್ತು ವಿಗ್ರಹಗಳಿದ್ದವು. ಈ ಮದನಿಕೆ ವಿಗ್ರಹಗಳು ಲೋಕಪ್ರಸಿದ್ಧ ಶಿಲ್ಪಗಳಾಗಿವೆ. ಒಂದು ಶಿಲ್ಪವು ಕಾಲಿಗೆ ಚುಚ್ಚಿರುವ ಮುಳ್ಳನ್ನು ತೆಗೆಸಿಕೊಳ್ಳುವ ಭಂಗಿಯಲ್ಲಿದೆ. ಅದರ ಕೆಳಗೆ ಮತ್ತೊಂದು ಸಣ್ಣ ವಿಗ್ರಹವು ಸೂಜಿಯನ್ನು ಹಿಡಿದು ಮುಳ್ಳನ್ನು ತೆಗೆಯುತ್ತಿದೆ. ಇನ್ನೊಂದು ಮದನಿಕೆ ವಿಗ್ರಹವು ಕೈಯಲ್ಲಿ ವೀಳ್ಯವನ್ನು ಹಿಡಿದುಕೊಂಡಿದೆ. ಇನ್ನೊಂದರಲ್ಲಿ ಲತಾಗೃಹದ ಹಣ್ಣಿನ ಮೇಲೆ ಕುಳಿತಿರುವ ನೊಣವು, ಅದರ ಮೇಲೆ ಹಾರುವುದಕ್ಕೆ ಸಿದ್ಧವಾಗಿ ಕುಳಿತಿರುವ ಹಲ್ಲಿಯೂ ಬಹು ಸೂಕ್ಷ್ಮ ಕೆತ್ತನೆಯ ಕೆಲಸ. ಇನ್ನೊಂದು ವಿಗ್ರಹದಲ್ಲಿ ಹೆಣ್ಣೊಂದು ತಾನು ಉಟ್ಟ ಬಟ್ಟೆಯಲ್ಲಿ ಚೇಳು ಕಂಡಿದ್ದರಿಂದ ಬಟ್ಟೆಯನ್ನು ಬಿಚ್ಚಿ ಹಾಕಿದಂತೆಯೂ, ಚೇಳು ಕೆಳಗೆ ಬಿದ್ದಂತೆಯೂ ಕಾಣುತ್ತದೆ. ಈ ಶಿಲಾಬಾಲಿಕೆಯರ ವಿಗ್ರಹಗಳು ಪ್ರೇಕ್ಷಕರನ್ನು ಮೂಕರನ್ನಾಗಿ ಮಾಡುತ್ತವೆ. ಹೊರಗಿನ ಈ ಶಿಲ್ಪಗಳನ್ನು ನೋಡಿ ವಿಸ್ಮಯಗೊಂಡರೆ ದೇವಾಲಯದ ಒಳಗಿನ ಶಿಲ್ಪಗಳು ಇನ್ನೂ ವಿಶೇಷ ಕಲಾಕೌಶಲ್ಯದಿಂದ ಕೂಡಿದವುಗಳಾಗಿದ್ದು ನಮ್ಮನ್ನು ದಿಗ್ಭ್ರಮೆಗೊಳಿಸುತ್ತವೆ. ಇಲ್ಲಿ ರಮಣೀಯತೆಯು ಮೂರ್ತಿವೆತ್ತಂತೆ ಕಾಣುತ್ತದೆ. ಗರ್ಭಗುಡಿಯಲ್ಲಿರುವ ಕೇಶವದೇವರ ವಿಗ್ರಹವು ಬಹು ಮುದ್ದಾದ ಮೂರ್ತಿಶಿಲ್ಪ. ಸುಮಾರು ಆರು ಅಡಿ ಎತ್ತರದ ಕೇಶವನು ಶಂಖ, ಚಕ್ರ, ಗದೆ ಮತ್ತು ಪದ್ಮಧಾರಿಯಾಗಿ ಹಸನ್ಮುಖಿಯಾಗಿ ನಿಂತಿದ್ದಾನೆ. ಈ ವಿಗ್ರಹದ ಹಿಂಭಾಗದ ಪ್ರಭಾವಳಿಯೂ ಸುಂದರವಾಗಿ ಶಿಲ್ಪಿತವಾಗಿದೆ. ಸುಖನಾಸಿಯ ದ್ವಾರದ ಎರಡು ಕಡೆಗಳಲ್ಲಿಯೂ ಸುಂದರ ದ್ವಾರಪಾಲಕ ವಿಗ್ರಹಗಳಿವೆ. ಈ ಬಾಗಿಲುವಾಡದಲ್ಲಿ ಬಹು ನಾಜೂಕಾದ ಕೆತ್ತನೆಯ ಕೆಲಸವಿದೆ. ನವರಂಗದ ಮುಖ್ಯ ಆಕರ್ಷಣೆಯೆಂದರೆ ವೈವಿಧ್ಯಮಯವಾದ ಕಂಬಗಳು. ಒಂದು ಕಂಬ ಇನ್ನೊಂದರಂತಿಲ್ಲ. ಇಲ್ಲಿರುವ ನರಸಿಂಹಸ್ತಂಭವು ಹಿಂದಿನ ಕಾಲದಲ್ಲಿ ತಿರುಗುತ್ತಿದ್ದಿತೆಂದು ಹೇಳುತ್ತಾರೆ. ಕೇವಲ ಕಡಲೆ ಕಾಳಿನಷ್ಟು ಗಾತ್ರದ ಬಸವಣ್ಣನ ಶಿಲ್ಪವಿರುವುದು ಈ ಕಂಬದಲ್ಲಿ. ಇಷ್ಟು ಸೂಕ್ಷ್ಮ ಕೆತ್ತನೆಯಲ್ಲಿಯೂ ಬಸವಣ್ಣನ ಎಲ್ಲ ಅಂಗಾಂಗಗಳು ಸ್ಫುಟವಾಗಿ ರೂಪಿತವಾಗಿರುವುದು ಶಿಲ್ಪಿಯ ಕಲಾಸಾಧನೆ. ಇದೇ ಕಂಬದಲ್ಲಿ ಒಂದು ಸ್ವಲ್ಪ ಜಾಗವನ್ನು ಕೆತ್ತನೆಯ ಕೆಲಸ ಮಾಡದೆ ಹಾಗೆಯೇ ಬಿಟ್ಟಿದೆ. ಇಷ್ಟೊಂದು ಉತ್ತಮ ಶಿಲ್ಪಿಗಳು ಯಾರಾದರೂ ಇದ್ದರೆ ಕೆತ್ತಲಿ ಎಂದು ಜಾಗ ಬಿಟ್ಟಿದ್ದಾರೆಂದು ಪ್ರತೀತಿ. ನವರಂಗದ ಮಧ್ಯೆಯಿರುವ ನಾಲ್ಕು ಕಂಬಗಳ ತುದಿಯಲ್ಲಿ ಮದನಿಕೆ ವಿಗ್ರಹಗಳಿವೆ. ಇಲ್ಲಿನ ಒಂದು ಮದನಿಕೆಯ ಶಿಲ್ಪದ ಕೈ ಬಳೆಗಳನ್ನು ತಿರುಗಿಸಬಹುದು. ಮತ್ತೊಂದು ಶಿಲ್ಪದ ಕಿರೀಟವನ್ನು ಎತ್ತಿ ಇಡಬಹುದು. ಈ ನಾಲ್ಕು ಕಂಬಗಳ ಮಧ್ಯೆ ಗೋಳಾಕಾರದ ಭುವನೇಶ್ವರಿಯಿದೆ. ಮಧ್ಯದಲ್ಲಿ ಕಮಲದ ಮೊಗ್ಗಿನಾಕಾರದ ಕಲ್ಲು ಇಳಿಬಿದ್ದಿದೆ. ಇದರಲ್ಲಿರುವ ಹಿರಣ್ಯಕಶಿಪು ಸಂಹಾರ ಬಲು ನಾಜೂಕಾದ ಕೆಲಸ. ಒಟ್ಟಿನಲ್ಲಿ ಬೇಲೂರಿನ ಚೆನ್ನಕೇಶವ ದೇವಾಲಯ ಮಲೆನಾಡಿನ ಶಿಲ್ಪಸೊಬಗಿನ ಗಣಿ.



ಮುಕುರದಲ್ಲಿ ಮುಖವನ್ನೀಕ್ಷಿಸುತ್ತಿರುವ ಮದನಿಕೆ.



ಬೇಲೂರು ದೇವಸ್ಥಾನದ ಹೊರಗಡೆಯಿರುವ ಮೋಹಿನಿ.

## ದಾಸೋಜ ಮತ್ತು ಚಾವಣ

ಇದರ ಪಕ್ಕದಲ್ಲಿರುವ ಕಪ್ಪೆಚೆನ್ನಿಗರಾಯ ದೇವಾಲಯದ ವಿಷಯದಲ್ಲಿ ಒಂದು ದಂತಕಥೆಯಿದೆ. ಆದರೆ ಈ ದೇವಾಲಯವನ್ನು ನಿರ್ಮಿಸಿದರೆಂದು ಹೇಳಲಾದ ಜಕಣಾಚಾರಿ ಮತ್ತು ಡಂಕಣಾಚಾರಿ ಕೇವಲ ಊಹಾಪ್ರಪಂಚದ ವ್ಯಕ್ತಿಗಳು. ಮಲೆನಾಡಿನವರೇ ಆದ ದಾಸೋಜ ಮತ್ತು ಅವನ ಮಗ ಚಾವಣ ಬಳ್ಳಿಗಾವೆ ಗ್ರಾಮದವರು. ಇವರು ಬೇಲೂರು ದೇವಾಲಯದ ಅನೇಕ ಶಿಲ್ಪಗಳನ್ನು ಕೆತ್ತಿದರೆಂದು ಶಿಲ್ಪಗಳ ಕೆಳಗೆ ಅವರು ಬರೆದಿರುವ ಹೆಸರಿನಿಂದ ಗೊತ್ತಾಗುತ್ತದೆ.

ವ ಃಲೇನಾಡಿನ ಈ ಈರ್ವ ಶ್ರೇಷ್ಠ ಶಿಲ್ಪಿಗಳೇ ಜಕಣಾಚಾರಿ ಮತ್ತು ಡಂಕಣಾಚಾರಿಯಿರಬೇಕೆಂದು ಊಹಿಸಬಹುದು. ದಾಸೋಜನಿಗೆ 'ಬಿರುದು ರೂವಾರಿ ಗೊಂದಲ ಬಡಿವ' ಎಂದೂ ಚಾವಣನಿಗೆ 'ಬಿರುದು ರೂವಾರಿ ಮದನ ಮಹೇಶ' ಎಂಬ ಬಿರುದೂ ಇದ್ದವು.

ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯ ಭಾರತೀಯ ವಾಸ್ತುಶಿಲ್ಪದಲ್ಲಿಯೇ ಅತ್ಯುನ್ನತ ಸ್ಥಾನ ಪಡೆಯಲು ಯೋಗ್ಯ ಕೃತಿ ಎಂದು ಪರ್ಸಿ ಬ್ರೌನ್ ಹೇಳುತ್ತಾನೆ. ಶಿಲ್ಪಕಲಾ ದೃಷ್ಟಿಯಿಂದ ಇದು ಬೇಲೂರನ್ನು ಮೀರಿಸುತ್ತದೆ. ಗೋಡೆಗಳ ಹೊರಮುಖದಲ್ಲಿ ಒಂದರ ಮೇಲೊಂದರಂತೆ ಚಿತ್ರಪಟ್ಟಿಕೆಗಳಿವೆ. ಇಲ್ಲಿಯೂ ಅನೇಕ ಮದನಿಕೆ ಶಿಲ್ಪಗಳಿದ್ದು ಈಗ ಅವು ನಾಶವಾಗಿದ್ದು ಕೆಲವು ಮಾತ್ರ ಉಳಿದಿವೆ. ದೇವಾಲಯದ ಹಿಂಭಾಗದಲ್ಲಂತೂ ಗೋಡೆಯು ಉತ್ತಮ ಶಿಲ್ಪಗಳಿಂದ ಕಿಕ್ಕಿರಿದಿದೆ. ಶಿವ, ವೇಣುಗೋಪಾಲ, ಗಣೇಶ, ಸರಸ್ವತಿ, ಬ್ರಹ್ಮ, ನರಸಿಂಹ, ದುರ್ಗಿ, ರಾವಣ, ರಾಮ ಹರಿಹರ,ಹೀಗೆ ದೇವತೆಗಳ ಸಾಲೇ ಇದೆ. ಇನ್ನಾವ ಕರ್ಣಾಟಕದ ದೇವಾಲಯದಲ್ಲೂ ಈ ರೀತಿಯ ನಿರ್ದುಷ್ಟವಾದ ಅಂಗಾಂಗ, ಸನ್ನಿವೇಶ ಮತ್ತು ಸಾಮಂಜಸ್ಯ ಇರುವ ಶಿಲ್ಪಗಳಿಲ್ಲ. ಹಿಂದೂ ಪೌರಾಣಿಕ ಪ್ರಪಂಚವೇ ನಮ್ಮ ಕಣ್ಣಮುಂದೆ ನಿಂತಂತೆ ಭಾಸವಾಗುತ್ತದೆ.



ಸುಂದರ ಕಲಾಕೃತಿಯುಳ್ಳ ಅಕ್ಕನ ಬಸದಿಯ ಗೋಪುರದ ದೃಶ್ಯ.

## ವಾಸಂತಮ್ಮ ದೇವಾಲಯ

ಬೇಲೂರಿನ ಮಾರ್ಗಮಧ್ಯದಲ್ಲಿರುವ ದೊಡ್ಡ ಗದ್ದವಳ್ಳಿಯ ಲಕ್ಷ್ಮೀದೇವಾಲಯವು ಚತುಷ್ಕೂಟ ದೇವಾಲಯಕ್ಕೆ ಉತ್ತಮ ಉದಾಹರಣೆ. ತರಿಕೆರೆ ತಾಲೂಕಿನಲ್ಲಿರುವ ಅಮೃತಾಪುರದ ಅಮೃತೇಶ್ವರ ದೇವಾಲಯವು ಪ್ರಸಿದ್ಧ ಶಿಲ್ಪಿ ಮಲ್ಲಿತಮ್ಮನಿಂದ ನಿರ್ಮಿತವಾದುದು. ಈ ದೇವಾಲಯದಲ್ಲಿ ರಾಮಾಯಣದ ಶಿಲ್ಪಫಲಕಗಳು ಬಹು ರಮಣೀಯವಾಗಿವೆ. ಶಿರಾಳಕೊಪ್ಪಕ್ಕೆ ಸಮೀಪದಲ್ಲಿರುವ ಕುಬಟೂರಿನಲ್ಲಿರುವ ದೇವಾಲಯದಲ್ಲಿ ಕೆಲವು ಉತ್ತಮ ಶಿಲ್ಪಗಳಿವೆ. ಚಿಕ್ಕಮಗಳೂರಿಗೆ ಸಮೀಪದಲ್ಲಿರುವ ಮರಳೆ, ತೀರ್ಥಹಳ್ಳಿಗೆ ಸಮೀಪದಲ್ಲಿರುವ ಹುಂಚ, ಅಂಗಡಿ, ಹಳೆಬೀಲೂರು, ಭದ್ರಾವತಿ, ಬೆಳವಾಡಿ, ಕೂಡ್ಲಿ, ಉದ್ರಿ, ಪುರಮುಂತಾದ ಕಡೆಗಳಲ್ಲಿ ಹೊಯ್ಸಳ ಶೈಲಿಯ ದೇವಾಲಯಗಳಿವೆ. ಹುಂಚದಲ್ಲಿ ಜೈನಶಿಲ್ಪಗಳು ವಿಶೇಷವಾಗಿವೆ. ಸಾಂತಾರರ ರಾಜಧಾನಿಯಾಗಿದ್ದ ಇಲ್ಲಿ ಅನೇಕ ಜೈನಬಸದಿಗಳಿವೆ. ಬಾಹುಬಲಿ, ಪಾರ್ಶ್ವನಾಥ, ಜ್ವಾಲಾಮಾಲಿನಿ, ಯಕ್ಷ – ಯಕ್ಷಿಣಿಯರ ಶಿಲ್ಪಗಳು ಇಲ್ಲಿ ದೊರಕಿವೆ., ಮೂಡಿಗೆರೆಗೆ ಸಮೀಪದಲ್ಲಿರುವ ಅಂಗಡಿಯಲ್ಲಿರುವ ವಾಸಂತಮ್ಮ ದೇವಾಲಯವೇ ಹೊಯ್ಸಳರ ಮೂಲದೇವತೆ ವಾಸಂತಿಕೆಯೆಂದು ನರಸಿಂಹಾಚಾರ್ಯರು ಅಭಿಪ್ರಾಯಪಡುತ್ತಾರೆ. ಅದು ಸತ್ಯವಾದಲ್ಲಿ ಕರ್ಣಾಟಕದಲ್ಲಿ ನೂರಾರು ದೇವಾಲಯಗಳನ್ನು ನಿರ್ಮಿಸಿದ ಹೊಯ್ಸಳರ ಮೂಲಸ್ಥಾನವು ಮಲೆನಾಡೆಂಬುದು ವ್ಯಕ್ತವಾಗುತ್ತದೆ. ಈ ದೃಷ್ಟಿಯಿಂದಲೂ ಅಂಗಡಿಯ ದೇವಾಲಯವು ಮುಖ್ಯವಾದುದು.



ಶೃಂಗೇರಿ ವಿದ್ಯಾಶಂಕರ ದೇವಾಲಯ

## ವಿದ್ಯಾಶಂಕರ ದೇವಾಲಯ

ಹೊಯ್ಸಳರ ಅನಂತರ ಪ್ರಸಿದ್ಧಿಗೆ ಬಂದ ವಿಜಯನಗರದ ಕಾಲದ ವಾಸ್ತುಶಿಲ್ಪಕ್ಕೆ ಶೃಂಗೇರಿಯ ವಿದ್ಯಾಶಂಕರ ದೇವಾಲಯವು ಉತ್ತಮ ಉದಾಹರಣೆ. ಶೃಂಗೇರಿಯು ದೇವಾಲಯಗಳ ನಗರ. ಇಲ್ಲಿ ಸುಮಾರು ಐವತ್ತು ದೇವಾಲಯಗಳಿವೆ. ಇಲ್ಲಿನ ಮುಖ್ಯ ದೇವಾಲಯಗಳೆಂದರೆ ವಿದ್ಯಾಶಂಕರ, ಜನಾರ್ದನ, ಶಾರದಾಂಬ, ಹರಿಹರ ಮತ್ತು ಬೆಟ್ಟದ ಮಲ್ಲಿಕಾರ್ಜುನ. ಶಿಲ್ಪಕಲಾ ದೃಷ್ಟಿಯಿಂದ ನಮ್ಮನ್ನು ವಿಶೇಷವಾಗಿ ಆಕರ್ಷಿಸುವುದು ವಿದ್ಯಾಶಂಕರ ದೇವಾಲಯ. ಕ್ರಿ. ೧೩೩೮ – ೫೮ರಲ್ಲಿ ವಿದ್ಯಾಶಂಕರ ಸ್ವಾಮಿಗಳ ಸ್ಮರಣಾರ್ಥವಾದ ಈ ದೇವಾಲಯವು ನಿರ್ಮಿತವಾಯಿತು. ಹೊಯ್ಸಳ ಮತ್ತು ದ್ರಾವಿಡ ಶೈಲಿಗಳ ಸುಮಧುರ ಸಂಗಮವೇ ಈ ದೇವಾಲಯದ ವೈಶಿಷ್ಟ್ಯ. ದೂರದಿಂದ ನೋಡಿದರೆ ಹೊಯ್ಸಳ ದೇವಾಲಯದಂತೆ ಕಾಣುತ್ತದೆ. ಎತ್ತರವಾದ ಜಗಲಿ



ಇಕ್ಕೇರಿಯ ಅಘೋರೇಶ್ವರ ದೇವಾಲಯ.

ಯ ಮೇಲೆ ನಿಂತಿರುವ ಈ ದೇವಾಲಯವು ಹೊಯ್ಸಳರ ಕಾಲದ ಬಳಪದ ಕಲ್ಲಿನಿಂದ ಮಾಡಿದ್ದಲ್ಲ. ಆದರೆ ಹೊರಭಾಗದಲ್ಲಿ ಅಲಂಕಾರಿಕ ಪಟ್ಟಿಕೆಗಳಿವೆ. ಇದರಲ್ಲಿ ಒಂದು ಗರ್ಭಗುಡಿ, ಸುಖನಾಸಿ, ಅದನ್ನು ಹೊಂದಿಕೊಂಡಂತೆ ಅರ್ಧವರ್ತುಲಾಕಾರದ ಪ್ರದಕ್ಷಿಣೆ ಮತ್ತು ಅದಕ್ಕೆ ಸೇರಿದಂತೆ ನವರಂಗವಿದೆ. ಗರ್ಭಗೃಹದ ಹೊರಗೋಡೆಯಲ್ಲಿರುವ ಗೂಡುಗಳಲ್ಲಿ ಬ್ರಹ್ಮ-ಸರಸ್ವತಿ, ಲಕ್ಷ್ಮೀ ನಾರಾಯಣ ಮತ್ತು ಉಮಾ - ಮಹೇಶ್ವರ ಶಿಲ್ಪಗಳಿವೆ. ಗೋಡೆಗಳ ಹೊರಮುಖದಲ್ಲಿ ಚಿತ್ರ ಪಟ್ಟಿಕೆಗಳಲ್ಲಿ ಅಶ್ವಪಂಕ್ತಿ, ಗಜಪಂಕ್ತಿ, ಪುರಾಣೇತಿಹಾಸಗಳ ಕಥೆಗಳು ಮತ್ತು ಆಚಾರ್ಯ ಶಂಕರರ ಜೀವನಕ್ಕೆ ಸಂಬಂಧಿಸಿದ ಕಥೆಗಳು ರೂಪಿತವಾಗಿವೆ. ನವರಂಗದ ಕಂಬಗಳು ದ್ರಾವಿಡ ರೀತಿಯಲ್ಲಿವೆ. ಈ ಹನ್ನೆರಡು ಕಂಬಗಳು ಮೇಷಾದಿ ದ್ವಾದಶ ರಾಶಿಗಳಿಂದ ಗುರುತಿಸಲ್ಪಟ್ಟಿವೆ. ಇದೊಂದು ಇಲ್ಲಿಯ ವೈಶಿಷ್ಟ್ಯ.

ಕಿಗ್ಗ (ಕೊಪ್ಪ ತಾಲೂಕು)ದಲ್ಲಿರುವ ಋಷ್ಯ ಶೃಂಗೇಶ್ವರ ದೇವಾಲಯವು ದ್ರಾವಿಡ ಶೈಲಿಯ ದೇವಾಲಯ. ನವರಂಗದಲ್ಲಿರುವ ಕಂಬಗಳಲ್ಲಿ ಋಷ್ಯ ಶೃಂಗ ಮುನಿಯ ಕಥೆಯು ಶಿಲ್ಪಿತವಾಗಿದೆ. ಋಷ್ಯಶೃಂಗನನ್ನು ನರ್ತಕಿಯರು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಲೋಮಪಾದನ ಅರಮನೆಗೆ ಕೊಂಡೊಯ್ಯುತ್ತಿರುವ ದೃಶ್ಯ ರಮಣೀಯವಾಗಿದೆ.

# ಇಕ್ಕೇರಿಯ ಅಘೋರೇಶ್ವರ

ಕೆಳದಿ ಅರಸುಗಳ ಕಾಲದ ದೇವಾಲಯವನ್ನು ಮುಖ್ಯವಾಗಿ ಇಕ್ಕೇರಿಯಲ್ಲಿ ಕಾಣುತ್ತೇವೆ. ಇಕ್ಕೇರಿಯ ಅಘೋರೇಶ್ವರ ದೇವಾಲಯವು ಕಲ್ಲಿನಿಂದ ನಿರ್ಮಿಸಿದ ವಿಶಾಲವಾದ ದ್ರಾವಿಡ ರೀತಿಯ ಕಟ್ಟಡ. ಉತ್ತರಾಭಿಮುಖವಾಗಿರುವ ಈ ದೇವಾಲಯವು ಎತ್ತರವಾಗಿದ್ದು ಬಹು ಸುಂದರವಾದ ದ್ವಾರಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಮೂವತ್ತೆರಡು ಸ್ತ್ರೀಶಿಲ್ಪಗಳಿವೆ. ಸುಖನಾಸಿಯ ಮುಂಭಾಗದ ದ್ವಾರದ ಪಕ್ಕದಲ್ಲಿರುವ ಗೂಡುಗಳಲ್ಲಿ ಗಣೇಶ, ಸುಬ್ರಹ್ಮಣ್ಯ, ಭೈರವ ಮತ್ತು ಮಹಿಷಾಸುರಮರ್ದಿನಿ ಶಿಲ್ಪಗಳಿವೆ. ಮಂಟಪದಲ್ಲಿ ನುಣುಪಾದ ಕಂಬಗಳಿವೆ. ಗೋಡೆಗಳಲ್ಲಿ ಜಾಲಂಧ್ರಗಳಿವೆ. ನಂದಿಮಂಟಪದಲ್ಲಿ ಬೃಹದಾಕಾರದ ನಂದಿವಿಗ್ರಹವಿದೆ. ಸುಖನಾಸಿ ದ್ವಾರದ ಮುಂಭಾಗದಲ್ಲಿ ಮೂವರು ಪುರುಷರು ಈಶ್ವರನಿಗೆ ನಮಿಸುತ್ತಿರುವ ರೀತಿಯಲ್ಲಿ ಶಿಲ್ಪಿತರಾಗಿದ್ದಾರೆ. ಇವರು ಕೆಳದಿಯ ರಾಜರಾದ ಸದಾಶಿವ ನಾಯಕ ಭದ್ರಪ್ಪನಾಯಕ, ಮತ್ತು ಹುಚ್ಚ ಸಂಕಣ್ಣ ನಾಯಕರೆಂದು, ಅವರ ತಲೆಯ ಸಮೀಪದಲ್ಲಿರುವ ಬರಹದಿಂದ ತಿಳಿಯುತ್ತದೆ. ಈ ದೇವಾಲಯದಲ್ಲಿರುವ ಮೂವತ್ತೆರಡು ಭುಜಗಳುಳ್ಳ ವೀರಭದ್ರನ ಕಂಚಿನ ವಿಗ್ರಹವು ಗಮನಾರ್ಹವಾದುದು.

ಕಿ. ಶ. ಹದಿನೆಂಟನೆಯ ಶತಮಾನದಲ್ಲಿ ನಿರ್ಮಿತವಾದ ದೇವಾಲಯಗಳಲ್ಲಿ ಕಡೂರಿಗೆ ಸಮೀಪದಲ್ಲಿರುವ ಜಂಬಿಟಿಗೆ ಮುಖ್ಯವಾದುದು. ಇಲ್ಲಿನ ನೀಲಕಂಠೇಶ್ವರ ದೇವಾಲಯ ಕಗ್ಗಲ್ಲಿನ ಕಟ್ಟಡ. ಕಾಳಣ್ಣನೆಂಬ ಶಿಲ್ಪಿಯು ಇದರ ಕರ್ತೃವೆಂದು ಅಲ್ಲಿನ ಶಾಸನವೊಂದರಿಂದ ಗೊತ್ತಾಗುತ್ತದೆ. ರಾಮಾಯಣ, ಮಹಾಭಾರತ ಮತ್ತು ಭಾಗವತ ಪುರಾಣಗಳ ಕಥೆಗಳು ಇಲ್ಲಿನ ಗೋಡೆಗಳ ಮೇಲೆ ವಿಶೇಷವಾಗಿವೆ.

ಇತ್ತೀಚಿನ ದೇವಾಲಯಗಳಲ್ಲಿ ಶೃಂಗೇರಿಯ ಶಾರದಾಂಬಾ ದೇವಾಲಯ ಮುಖ್ಯವಾದುದು. ಇದು ಕಗ್ಗಲ್ಲಿನಲ್ಲಿ ಮಾಡಲಾದ ದ್ರಾವಿಡ ರೀತಿಯ ದೇವಾಲಯ. ಪೂರ್ವಾಭಿಮುಖವಾದ ಈ ದೇವಾಲಯದಲ್ಲಿ ಗರ್ಭಗೃಹ, ಸುಖನಾಸಿ, ನವರಂಗಗಳಿವೆ. ಸುಖನಾಸಿಯ ಮುಂಭಾಗದಲ್ಲಿರುವ ಕಂಭಗಳಲ್ಲಿ ಮಹಿಷಾಸುರಮರ್ದಿನಿ, ರಾಜರಾಜೇಶ್ವರಿ ಶಿಲ್ಪಗಳಿವೆ. ಇವು ನಯನಮನೋಹರ ಶಿಲ್ಪಗಳಾಗಿದ್ದು ಇತ್ತೀಚಿನ ಶಿಲ್ಪಗಳ ಕಲಾ ಕೌಶಲಕ್ಕೆ ಸಾಕ್ಷಿಯಾಗಿವೆ.

ಕ್ರಿ. ಶ. ಒಂದನೆಯ ಶತಮಾನದಿಂದ ಪ್ರಾರಂಭವಾಗಿ ಇತ್ತೀಚಿನ ವರೆಗೂ ಮಲೆನಾಡಿನಲ್ಲಿ ವಿವಿಧ ಶೈಲಿಯ, ವಿವಿಧ ರಾಜಮನೆತನಗಳ ದೇವಾಲಯಗಳು ಸೃಷ್ಟಿಯಾಗುತ್ತಾ ಬಂದು, ಒಂದು ಶಿಲ್ಪಸಂಪ್ರದಾಯವನ್ನು ಬೆಳೆಸಿಕೊಂಡು ಬಂದುವೆಂಬುದು ಈ ಮೇಲಿನ ಸಂಗತಿಗಳಿಂದ ಗೊತ್ತಾಗುತ್ತದೆ. ಈ ಶಿಲ್ಪ ಸಂಪ್ರದಾಯದ ಭವ್ಯ ಕುರುಹಾಗಿ ಉಳಿದಿರುವ ಕೆಲವೇ ಶ್ರೇಷ್ಠ ಶಿಲ್ಪಗಳನ್ನು ಸುರಕ್ಷಿತವಾಗಿ ಕಾಪಾಡಿಕೊಂಡು ಬರುವುದು ಎಲ್ಲರ ಆದ್ಯಕರ್ತವ್ಯವಾಗಿದೆ.




ಸಾ. ಶಿ. ಮರುಳಯ್ಯ

ಎಂ. ಎ., ಪಿಎಚ್. ಡಿ.

ಸ್ವಾಮಿ,
ನೀವು ಏನೇ ಹೇಳಿ,
ನನಗಂತೂ ಮಲೆನಾಡು ಅಚ್ಚುಮೆಚ್ಚು!
'ಅರಂಕುಶವಿಟ್ಟೊಡಂ ನೆನೆವುದೆನ್ನ ಮನಂ...'
ಏಕೆಂದು ಕೇಳುವಿರಾ?
ಕೇಳಿ--

ಮಲೆನಾಡಿನ ಜಿಗಣೆಗಳೆಲ್ಲಾ ಮಾರ್ವಾಡಿ ಅಂಗಡಿಗೆ
ವಲಸೆ ಹೋಗಿ ಬಹುದಿನಗಳಾದುವು.
ನನ್ನ ನೆತ್ತರು ವ್ಯಥಾ ಪೋಲಾಗುವುದಿಲ್ಲ ಅಲ್ಲಿ;
ಬಸಿದಷ್ಟೂ ಬೆಲೆಯುಂಟು ಬೆವರಿಗೆ.
ಬಯಲು ಸೀಮೆಯಂತೆ ಬತ್ತಲೆ ನಿಲ್ಲಬೇಕಾಗಿಲ್ಲ!

ದುಷ್ಟಮೃಗಗಳಿಗೆ ದೌಷ್ಟ್ಯವೇ ಗೊತ್ತಿಲ್ಲ-
ಎಲ್ಲದನ್ನೂ ಪೋಲೀಸ್ ಠಾಣೆಗೆ ಮಾರಿಕೊಂಡು
ಸುಮ್ಮನೇ ಗಸ್ತು ತಿರುಗುತ್ತಿವೆ.
ಅಕಸ್ಮಾತ್ ಮನುಷ್ಯ ಪ್ರಾಣಿಯೊಂದು
ಹೂಂಕರಿಸಿದರೆ ಸಾಕು,
ಕೂಡಲೇ ಗೊಟಕ್ ಅಂದರೂ ಅಂದವೆ!
ಅವಕ್ಕೆ ತುಂಬಾ ಭಯ--
"ಕಲಿಕಾಲ ಕೆಟ್ಟದ್ದು
ನರರು, ಸುರರು ಅಸುರರಿಗಿಂತ ಬಲ್ಲಿದರು,
ಆದ್ದರಿಂದ
ಇದ್ದು ಇಲ್ಲದ ಹಾಗೆ ಇರುತ್ತೇನೆ..."

ಅನ್ನುತ್ತಿವೆ.
ಪಾಪ! ಇದೇ ಅವರ ದೈನಂದಿನ ಗಾಯತ್ರಿ
ಅವಕ್ಕೆ ಸುಮ್ಮನೆ ಹೇಳಿಬಿಡಿ 'ಸುರಾತ್ರಿ'
ದೇವರು,
ಕಂಕನರಿಗಳೆಲ್ಲಾ ಬಂಕಿನವರ ಮನೆಸೇರಿ ಬಿಟ್ಟವೆ.
ಅಲ್ಲಿ ಒಂದೂ ಇಲ್ಲ.
ತುಂಡು ಮಾಂಸಕ್ಕಾಗಿ-

'ನೀನೆನಗೆ ಕಾಮದೇನಂ
ಇಂದ್ರಂ
ಚಂದ್ರಂ'

ಎಂದೆಲ್ಲ ಹೊಗಳಿದ್ದೂ ಹೊಗಳಿದ್ದೆ!
ಬೆನ್ನು ತೋರಿಸಿದಾಗ ಕೊಟ್ಟದ್ದು ಮಾತ್ರ ಗುದ್ದೆ!
ಆದರೂ

ಶಿಷ್ಟಹಕ್ಕಿಗಳ ಬಳಗದಲ್ಲಿ ಒಂದು ಸಂತಾಪಸೂಚಕ ಸಭೆ!
ಅಲ್ಲಿ ಪಟ್ಟ ಸಂತಾಪ ಇಷ್ಟೇ-
'ಅಯ್ಯೋ.
ಕನ್ನಡದ ಕಾಜಾಣ, ಕೋಗಿಲೆಗಳೆಲ್ಲಾ
ಇತ್ತೀಚೆಗೆ ಕಾಗೆ ಗೂಗೆಗಳಾದುವಲ್ಲಾ'--ಎಂದು.
ಈ ಕಾಂಡೊಲೆನ್ಸನ್ನು ಕಂಡೆಮ್ ಮಾಡುವುದಾದರೆ
Condone ಮಾಡೋಣ Delay.

ಮಲೆನಾಡಿನಲ್ಲಿದ್ದ ಮಲೇರಿಯಾ ಈಗಿಲ್ಲ,
ಆದಕ್ಕೆ ಹಿಸ್ಟೀರಿಯಾ, ಡಿಫ್ತೀರಿಯಾ, ಸಿಫಿಲಿಸ್ ಕ್ಷಯ;
ಅಲ್ಲಿ ಹಾಳಾಗಿ ಇಲ್ಲಿ ಊರಾಗಿ,
ಡಾಕ್ಟರನ ಸಿರಿಂಜ್, ಸ್ತೆತಸ್ಕೋಪ್ ಸೇರಿದುವು!
ವಿಕ್ಟರಿ! ವಿಕ್ಟೋರಿಯಾ!!

ಹೆಬ್ಬಾವುಗಳೆಲ್ಲಾ P. W. D. ಗೆ ಅರ್ಜಿ ಹಾಕಿ
ಬಾಗಿಲು ಕಾಯ ಹತ್ತಿದ ಮೇಲೆ ಅಲ್ಲಿ ಒಂದು
ವಳ್ಳೆಪಿಂಗನೂ ಸಿಗುತ್ತಿಲ್ಲ ಸ್ವಾಮಿ,
ಔಷಧಿಗೆ ಬೇಕೆಂದರೂ ಒಂದು ಹಾವಿಲ್ಲ ಅಲ್ಲಿ.
ಏಡಿ, ಸೀಗಡಿ ಎಲ್ಲಾ ಸತ್ತು ಶತಮಾನಗಳಾದುವು.

ಕಾಡೆಲ್ಲಾ ಮಡಿದ ಮೇಲೆ
ಈಗ,
ಮಲೆನಾಡು ಕಳೆತುಂಬಿದ ಬೀಡಾಗಿದೆ.
ಅಲ್ಲಿ ಅರಳುವ ಹೂವಿನಲ್ಲಿ ಗೊಬ್ಬರದ ವಾಸನೆ ಇಲ್ಲ!
ಮಾಗಿದ ಹಣ್ಣಿನಲ್ಲಿ ಒಳಚರಂಡಿಯ ರಾಡಿ ಆಸಾರ ಇಲ್ಲ!
ಆದರೆ,
ಅದೇ ತುಂಗೆ,
ತಾನು ಎಂದೆಂದಿಗೂ ಸಹಸ್ರ ತರಂಗೆ!
ಪರಮಪಾವನೆ,
ಗತಶತದ ಸಾಕ್ಷಿ,
ಭವಿತವ್ಯದ ಚೈತ್ಯಾಕ್ಷಿ!
ಹಸಿ ಮೈಯ ಹೊರಳಿಸುತ ಉರುಳುವಳು ಅನವರತವಾಗಿ!
ಸ್ವಾಮಿ,
ನೀವು ಏನೇ ಹೇಳಿ,
ನನಗಂತೂ ಮಲೆನಾಡು ಅಚ್ಚುಮೆಚ್ಚು.
'ಮರಿದುಂಬಿಯಾಗಿ--ಮೇಣ್--ಕೋಗಿಲೆಯಾಗಿ
ಪುಟ್ಟುವುದು ನಂದನದೊಳ್...'
ಇದೇ ನನ್ನ ಅಂತಿಮ ಬಯಕೆ,
ಅಲ್ಲ-ಬೇಡಿಕೆ!

* * * * * * * * * *

ಮಲೆನಾಡು ನಿಸರ್ಗಸೌಂದರ್ಯದ ಬೀಡು. ಅಲ್ಲಿ ಪ್ರವಾಸ ಮಾಡುವುದು ಜೀವನದಲ್ಲಿಯ ಒಂದು ಮಹಾ ಸಾಧನೆಯಿದ್ದಂತೆ. ಜನ ಉದಾರಿಗಳು. ಅತಿಥಿ ಸತ್ಕಾರದಲ್ಲಿ ಎತ್ತಿದ ಕೈ. ಉದ್ಯಮಶೀಲರು. ಅನೇಕ ಉದ್ಯಮಗಳನ್ನು ಸಾಹಸದಿಂದ ಕೈಕೊಂಡು ನಡೆಸುತ್ತಿದ್ದಾರೆ. ಅದು ಯಾರಿಗೂ ಎಂಥವರಿಗೂ ಕಣ್ಣು ತಣಿಸುವುದು; ಮುದ ನೀಡುವುದು.

# ಮುದವ ನೀಡಿತು ಮಲೆನಾಡು!

(ಪ್ರವಾಸ ಕಥನ)

ಶಂಕರ ಪಾಟೀಲ

ಮಲೆನಾಡನ್ನು ನಾನು ಮೊದಲು ಕಂಡುದು ಈಗ ಮೂರುವರೆ ದಶಕಗಳ ಪೂರ್ವದಲ್ಲಿ, ನಾನಿನ್ನೂ ಎಳೆಯುನಿದ್ದಾಗ. ಆಗಿನ್ನೂ ಹಾಯಸ್ಕೂಲ ವಿದ್ಯಾರ್ಥಿ. ನಮ್ಮ ತಂದೆಯವರು ಚಿಕಿತ್ಸೆಗಾಗಿ ಶಿರ್ಶಿಗೆ ಹೋದಾಗ. ಆಗ ಅಲ್ಲಿ ಪಂಡಿತ ವೈದ್ಯರು ಆಯುರ್ವೇದ ಚಿಕಿತ್ಸೆಯಲ್ಲಿ ಗಟ್ಟಿಗರೆನಿಸಿದ್ದರು. ಸ್ವತಃ ದಿನಾಲು ಬೆಳಿಗ್ಗೆ ತಮ್ಮ ಸಸ್ಯೋದ್ಯಾನದಲ್ಲಿ ತಿರುಗಾಡಿ ತಮಗೆ ಬೇಕಾದ ಗಿಡಮೂಲಿಕೆಗಳಿಂದ ಔಷಧಿಗಳನ್ನು ಸಿದ್ಧಪಡಿಸುತ್ತಿರುವುದನ್ನು ಕಂಡು ಆಚ್ಚರಿಗೊಂಡಿದ್ದೆ. ಅದಕ್ಕಿಂತ ಹೆಚ್ಚಾಗಿ ಅವರು ತಮ್ಮಲ್ಲಿ ಚಿಕಿತ್ಸೆಗಾಗಿ ಬರುವ ರೋಗಿಗಳಿಗಾಗಿ ಒಂದು ಕೋಣೆಯು, ಎರಡು ಕೋಣೆಯು ಧರ್ಮಶಾಲೆಯನ್ನು ಏರ್ಪಡಿಸಿದ್ದು ಈ ಎಳೆಯನ ಕುತೂಹಲವನ್ನು ಕೆರಳಿಸಿತ್ತು. ಶಿರ್ಶಿಯ ಏರುತಗ್ಗಾದ ರಸ್ತೆಗಳು, ಅಂಕುಡೊಂಕಾದ ಓಣಿಗಳು, ಕರಿಹಂಚಿನ ಮನೆಗಳು, ಮಾರಿಕಾಂಬೆ ಹಾಗೂ ಅವಳ ಭಯಾನಕ ಕೋಣನಿಗಿಂತಲೂ ನನ್ನಲ್ಲಿ ಒಂದು ಬಗೆಯ ವಿಶೇಷ ಪರಿಣಾಮವನ್ನು ಬೀರಿದ್ದುವು. ಅಲ್ಲಿಂದಲೇ ಒಂದು ದಿನದ ಮಟ್ಟಿಗೆ ಗೋಕರ್ಣಕ್ಕೆ ಹೋಗಿ ಬಂದಿದ್ದೆ. ನನಗೆ ತಿಳಿಯದೇ ಮಹಾಬಲೇಶ್ವರನ ಮೇಲೆ ಕಾಲು ಇರಿಸಿದ ಘಟನೆಯಾಗಲಿ, ಕೋಟಿತೀರ್ಥದಲ್ಲಿ ಸ್ನಾನಮಾಡಿ ಒದ್ದೆ ಬಟ್ಟೆಯಿಂದ ಸಾಗರಕ್ಕೆ ಹೋಗಿ ಮಳಲಿನಲ್ಲಿ ನಡೆದದ್ದಾಗಲಿ, ಅಲ್ಲಿ ಸ್ನಾನಮಾಡಿ ಮಹಾಬಲೇಶ್ವರನನ್ನು ಅರ್ಚಿಸಿದ್ದಾಗಲಿ ನನಗೆ ಮಹತ್ವದ್ದೂ ಅನಿಸಿರಲಿಲ್ಲ. ಅಲ್ಲಿಗೆ ಹೋಗುವಾಗ–ಬರುವಾಗ ಏರಿಳಿಯುವ, ಇಳಿದು ಏರುವ, ಇಳಿವಾಗ ಮೇಲಕ್ಕೆ ಕಾಣುವ ಘಟ್ಟದ ರಸ್ತೆ, ಒಂದು ತುದಿಯು ಆಳವಾದ ಪ್ರಪಾತ ಇನ್ನೊಂದು ಬದಿಯು ಗಗನಚುಂಬಿತ ವೃಕ್ಷಗಳು, ಪರ್ವತರಾಜಿಗಳು ನನ್ನ ಮೇಲೆ ಆಳವಾದ ಪರಿಣಾಮ ಬೀರಿದ್ದವು. ಆ ಪ್ರದೇಶದ ಬಗೆಗೆ ಒಂದು ಬಗೆಯ ಆಕರ್ಷಣೆಯನ್ನು ನನ್ನಲ್ಲಿ ಮೂಡಿಸಿದ್ದವು. ಅದರ ಜೊತೆಗೆ ಪಂಡಿತ ವೈದ್ಯರು ಮಲೆನಾಡಿನ ಅತಿಥಿ ಸತ್ಕಾರದ ವಿಶಿಷ್ಟ ಪರಂಪರೆಯ ದರ್ಶನಮಾಡಿಸಿದ್ದರು. ಅವರು ರೋಗಿಗಳನ್ನು ರೋಗಿಗಳಂತೆ ಕಾಣದೇ ತಮ್ಮ ಅತಿಥಿಗಳಂತೆಯೇ ಕಾಣುತ್ತಿದ್ದರು. ನನ್ನ ತಂದೆಯವರೊಂದಿಗೆ ಅವರ ಬಳಿಗೆ ಹೋದ ನಾನು ಈ ಸವಿ ಉಂಡು ಬಂದೆ. ಕಷಾಯ ಕುಡಿದೆ ಹಲವಾರು ಬಾರಿ. ಕಷಾಯವೆಂದರೆ ಔಷಧದ ಕಷಾಯವಲ್ಲ; ಅದೊಂದು ಸಿಹಿಯಾದ ಪೇಯ.

ಎಳೆತನದಲ್ಲೇ ನನ್ನ ಮನಸ್ಸನ್ನು ಸೂರೆಗೊಂಡ ಮಲೆನಾಡಿನ ವಿವಿಧ ಪ್ರದೇಶಗಳನ್ನು ಮತ್ತೆ ನೋಡಲು ಸಿಕ್ಕದ್ದು ಈಚಿಗಿನ ವರುಷಗಳಲ್ಲಿ; ಹಂತಹಂತವಾಗಿ ಈ ಸಂಚಾರವನ್ನು ಪೂರೈಸಿದೆ. ಆದರೆ ಈ ಸಂಚಾರ ಯಾವ ಕಾಲಕ್ಕೂ, ಯಾವ ಸಂದರ್ಭದಲ್ಲೂ ನನ್ನ ಮನದಲ್ಲಿ ಹಸಿರಾಗಿ ನಿಂತಿದೆ; ನಿಲ್ಲುವುದು. ಮತ್ತೆ ನನಗೆ ಮಲೆನಾಡಿನ ದರ್ಶನ ತೊಡಗಿದ್ದು ಉತ್ತರ ಕನ್ನಡ ಜಿಲ್ಲೆಯಿಂದ. ಕಾರವಾರದಲ್ಲಿ ಜರುಗಿದ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸಲು ಹೋಗಬೇಕಾಗಿ ಬಂದಾಗ. ಘಟ್ಟದ ರಸ್ತೆಯಲ್ಲಿ ಬಸ್ಸು ಏರಿಳಿಯುವಾಗ ಆ ನಿಸರ್ಗದ ಚೆಲುವನ್ನು, ಶರಾವತಿ ಕೊಳ್ಳಗಳಲ್ಲಿ ಧುಮುಕುತ್ತ ಸಾಗುವ ನಯನ ಮನೋಹರ ದೃಶ್ಯಾವಳಿಯನ್ನು ನೋಡಲು ಎರಡು ಕಣ್ಣುಗಳು ಸಾಲವು ಎಂದೆನಿಸಿತು. ಕಾರವಾರದಲ್ಲಿದ್ದ ಮೂರು ದಿನವೂ ತೆಂಗು ಕಂಗಿನ ಬನಗಳನ್ನು ನೋಡುವುದು, ಕೋಡಿಬಾಗಕ್ಕೆ ಹೋಗಿ ದೃಶ್ಯಾವಳಿ ನೋಡುತ್ತ ನಿಲ್ಲುವುದು, ಸದಾಶಿವಗಡ ಭಾಗಕ್ಕೆ ಹೋಗಿ ಕಂಣುಕಾಣುವವರೆಗೂ ವ್ಯಾಪಿಸಿದ ಹಸಿರು ಹಸಿರನ್ನು ಕಂಣಲ್ಲಿ ತುಂಬಿಕೊಳ್ಳುವುದು ಇದೇ ಕೆಲಸ. ನನ್ನ ಸ್ನೇಹಿತರಾದ ಶ್ರೀ ತಿಪ್ಪೇಸ್ವಾಮಿಯವರು ಈ ಅನೇಕ ದೃಶ್ಯಗಳನ್ನು ತಮ್ಮ ಚಿತ್ರಗಳಲ್ಲಿ ಸೆರೆಹಿಡಿದರು. ಆದರೆ ಆ ಭಾಗ್ಯವಿಲ್ಲದ ನಾನು ಕೇವಲ ಕಣ್ಣುಗಳಲ್ಲಿ ಆ ಚೆಲುವನ್ನು ತುಂಬಿಕೊಂಡೆ. ಅಷ್ಟೇ ಸಮಾಧಾನ. ಕಾರವಾರದ ಕರಾವಳಿ, ತೀರದಲ್ಲಿ ಪವಡಿಸಿದ ಗ್ರಂಥಾಲಯ, ಎತ್ತರದಲ್ಲಿ ಡಿ.ಸಿ. ಆಫೀಸಿನಿಂದ ಕಾಣುವ ನೋಟ ಅಲ್ಲಿಯ ಸೊಬಗನ್ನೂ, ಜನಜೀವನದ ಪಡಿನೆಳಲನ್ನೂ ತೋರಿದವು. ಅಪಾರವಾದ ಸಾಗರರಾಶಿಯಂತಿರುವ ಜ್ಞಾನವನ್ನು ಗ್ರಂಥಗಳಿಂದ ವಿದ್ಯಾದಾಹದ ಜನರಿಗೆ ಮಾಡಿಕೊಡುವ ಆ ಜನರ ಸಾಹಸದ ದ್ಯೋತಕವಾಗಿ ಆ ಗ್ರಂಥಾಲಯ [illegible] ನನಗೆ ಭಾಸವಾಯಿತು. ಈ ಜನ ಸ್ವಭಾವತಃ ಶಾಂತರಾಗಿರುವವರೇಕೆ ಎಂಬುದನ್ನು ಅರ್ಥಮಾಡಿಕೊಂಡೆ. ಯಕ್ಷಗಾನ ಪ್ರಸಂಗವನ್ನು ಮೊದಲ ಸಲ ಇಲ್ಲಿ ನೋಡಿದೆ, ಆನಂದಿಸಿದೆ. ತಣಿದೆ. ದೂರದಲ್ಲಿ ನಿಂತ ಹಡಗಕ್ಕೆ ಆದಿರು ಸಾಗಿಸುವ ದೃಶ್ಯ ಕಂಡು ಬೇಗ ಇಲ್ಲಿಗೊಂದು ಉತ್ತಮ ಬಂದರವಾಗಬೇಕು ಎಂದುಕೊಂಡೆ.

## ಅಂಕೋಲದಲ್ಲಿ

ಈ ಸಂದರ್ಭದಲ್ಲಿ ಅಂಕೋಲವನ್ನು ಬಳಸಿ ಹೋಗಿದ್ದೆನಾದರೂ ಅದನ್ನು ಮಳೆಗಾಲದ ಮಧ್ಯದಲ್ಲಿ ನೋಡಿದುದು ಕಳೆದ ವರುಷವಷ್ಟೆ; ಅಲ್ಲಿಯ ನನ್ನ ಸ್ನೇಹಿತರು ಅಂತಃಕರಣಪೂರ್ವಕವಾಗಿ ಬರಮಾಡಿಕೊಂಡಾಗ. ಶ್ರೀ ದಿನಕರ ದೇಸಾಯರ ಕರ್ಮಭೂಮಿ ಇದು. ಅವರ ಪರಿಶ್ರಮದ ಸಫಲತೆಯ ದ್ಯೋತಕವಾಗಿ ನಿಂತ ಗೋಖಲೆ ಕಾಲೇಜಿನ ಹಿಂಬದಿಯ ದಿಬ್ಬದಿಂದ ನೋಡಿದಾಗ ಒಂದೆಡೆ ಕಣ್ಣು ಹರಿಯುವವರೆಗೂ ಸಾಗರದ ವಿಸ್ತಾರ. ಇನ್ನೊಂದೆಡೆಗೆ ಸಹ್ಯಾದ್ರಿಯ ಶಿಖರಗಳೆರಡು ಏರಿಳಿದು ಒಂದುಗೂಡುವ ಭಾರಿ ದೃಶ್ಯ. ಅಲ್ಲಿ ಕೂತರೆ ಏಳುವ ಮನಸ್ಸೇ ಆಗದು; ಬೇರೇನೂ ಮನದಲ್ಲಿ ಸುಳಿಯದು. ಪ್ರಕೃತಿದೇವಿಯ ಮಡಿಲಲ್ಲಿ ಪವಡಿಸಿರುವ ಈ ಊರು, ಈ ಜನ ಎಂಥ ಭಾಗ್ಯವಂತರು, ಎಂಬ ಅಸೂಯೆ ಮೂಡದಿರುವುದಿಲ್ಲ. ಜನ ತುಂಬ ಸ್ನೇಹಶೀಲರು. ತಂತಮ್ಮ ಪಾಲಿನ ಕೆಲಸವನ್ನು ತುಂಬ ಸಂತೋಷದಿಂದ ನಿರ್ವಹಿಸುವರು. ನನಗೆ ಮಾತನಾಡುತ್ತಿದ್ದಂತೆ ಹೊತ್ತಿನ ಪರಿವೆಯೇ ಇರುತ್ತಿರಲಿಲ್ಲ. ನಾನಿಳಿದ ಸ್ಥಳಕ್ಕೆ ಮರಳುವಾಗ ತುಂಬ ಹೊತ್ತು. ನನ್ನೊಡನೆ ಬಂದ ಜವಾನನಿಗೆ, "ಎಷ್ಟು ಹೊತ್ತಾಯಿತಲ್ಲ. ಇನ್ನು ಮೇಲೆ ನೀವು ಅಲ್ಲಿಗೆ ಹೋಗಬೇಕಲ್ಲಪ್ಪಾ" ಎಂದೆ. ಆದರೆ ಅವನು ಹೇಳಿದ ಮಾತು, "ನೀವು ಬಂದವರು ಸಂತೋಷದಿಂದ ಹೊತ್ತು ಕಳೆವುದೇ ನಮಗೊಂದು ಸಂತೋಷದ ಸಂಗತಿ" ನನ್ನನ್ನು ನಿಜವಾಗಿ ಚಕಿತಗೊಳಿಸಿತು. ಸೇವಾಜೀವನದಲ್ಲೂ ಎಷ್ಟೊಂದು ಆತ್ಮೀಯತೆ! ನಾನಲ್ಲಿಗೆ ಹೋದುದು ಗಣೇಶನ ಹಬ್ಬದ ಸಂದರ್ಭದಲ್ಲಿ. ಅಲ್ಲಿಯ ಎರಡು ರಾತ್ರಿಗಳೂ ಒಂದು ವಿಶಿಷ್ಟ ವಾದ್ಯದ ವಿಚಿತ್ರಕಾರವಾದ ವಾದ್ಯ-ಮಾಧುರ್ಯ ನನಗೆ ಕೇಳಿ ಬಂದಿತು. ಅದು ಘಟವಾದ್ಯವೆಂದೂ ಗಣೇಶನಹಬ್ಬದಲ್ಲಿ ಮಾತ್ರ ಬಾರಿಸಲಾಗುವದೆಂದೂ ನನಗೆ ತಿಳಿಯಿತು. ನಾನದಕ್ಕೆ ಎಷ್ಟೊಂದು ಮುಗ್ಧನಾಗಿದ್ದೆನೆಂದರೆ ಒಂದು ವರುಷದ ನಂತರವೂ ಈಗಲೂ ಆ ನಾದ ಕಿವಿಯಲ್ಲಿ ನಿನದಿಸುವಂತೆ ಭಾಸವಾಗುತ್ತಿದೆ. ಜೇನು, ಗೋಡಂಬಿಯಿಲ್ಲದೇ ಇಲ್ಲಿಂದ ಅತಿಥಿಗಳು ಮರಳುವಂತಿಲ್ಲ. ಅದರ ಜೊತೆಗೆ ಇಲ್ಲಿಯ ಗುಡಿಗಾರರ ಕಲಾತ್ಮಕ ಹಸ್ತಕೌಶಲ ಮರೆಯುವುದೂ ಸಾಧ್ಯವಿಲ್ಲ. ನಮ್ಮ

ರಾಷ್ಟ್ರಪತಿಗಳನ್ನೂ, ವಿದೇಶಿ ಅತಿಥಿಗಳನ್ನೂ ಮೆಚ್ಚಿಗೊಳಿಸಿದ ಅನೇಕ ಕಲಾಕೃತಿಗಳು ಇಲ್ಲಿ ಕತ್ತನೆಗೊಂಡುವು. ಆದರೆ ಅವರ ದೀನ-ಹೀನ ಸ್ಥಿತಿ ಮಾತ್ರ ಹಾಗೆಯೇ ಉಳಿದಿರುವದನ್ನು ಕಂಡಾಗ ತುಂಬ ಮರುಕವುಂಟಾಗುತ್ತದೆ.

## ಹೊನ್ನಾವರದಲ್ಲಿ

ಪಶ್ಚಿಮದ ರಾಷ್ಟ್ರೀಯ ಹೆದ್ದಾರಿಯಿಂದ ಹೊನ್ನಾವರಕ್ಕೆ ಹೋಗುವುದು ಬಲು ಮೋಜು. ಉಮಾತೆಯನ್ನು ಬಳಸಿಕೊಂಡು ಶರಾವತಿಯನ್ನು ದಾಟಿ ಹೋಗಬೇಕು. ಮಾರ್ಗದಲ್ಲಿ ಅನೇಕ ಚಿಕ್ಕ ಊರುಗಳು. ವಿ. ಸೀ. ಅವರು ಹೊನ್ನಾವರ ಕಾಲೇಜ್ ಪ್ರಿನ್ಸಿಪಾಲರಾಗಿದ್ದಾಗ ಒಮ್ಮೆ ನೇರವಾಗಿ ಹೋಗಿ ಬಂದಿದ್ದೆ. ಶಿರ್ಶಿಯಿಂದ ಕುಮಟೆಗೆ ಇಳಿವಾಗ ಘಟ್ಟದ ದಾರಿಯನ್ನು ಸೀಳಿಕೊಂಡು ಡೊಂಕುಮಾರ್ಗದಲ್ಲಿ ಹೊರಳುತ್ತ, ಹಿಂದಿನ ರಸ್ತೆಯನ್ನು ಕಣ್ಣಿಗೆ ಕಾಣ



ಕಾರವಾರದ ಮೀನುಗಾರರು ಶ್ರಮನಿರತರಾದಾಗ

ಸುತ್ತ ಬಸ್ಸು ಹೋಗುವಾಗ ಕಾಣುವ ದೃಶ್ಯ ಕಣ್ಣಿಗೆ ಹಬ್ಬವನ್ನುಂಟುಮಾಡುವಂಥದು. ಘಟ್ಟದ ಪ್ರದೇಶವೇ ತುಂಬ ಸುಂದರವಾದುದು. ಹೊನ್ನಾವರದಲ್ಲಿಯೂ ಗೋಕರ್ಣದಂತೆ ವಿಸ್ತಾರವಾದ ಬೇಲೆ ಇದೆ. ಶರಾವತಿ ನದಿ ಸಾಗರವನ್ನು ಸೇರುವ ನೋಟ ನಯನಮನೋಹರವಾಗಿದೆ; ಪ್ರವಾಸಿಕರನ್ನು ಸೆಳೆದು ನಿಲ್ಲಿಸುತ್ತದೆ. ನಾನಲ್ಲಿ ಹೆಚ್ಚು ಹೊತ್ತು ಕಳೆಯಲು ಸಾಧ್ಯವಾಗಲಿಲ್ಲವಾದರೂ ಅಲ್ಲಿದ್ದಷ್ಟು ಹೊತ್ತು ಸುಖವಾಗಿ ಕಳೆದುಹೋಯಿತು. ನಾನು ಎರಡನೇ ಸಲ ಹೋದಾಗ ಸಾಹಿತಿ ಸ್ನೇಹಿತರಾದ ಶ್ರೀ ಸೇವ ನಮಿರಾಜ ಮಲ್ಲರು ಅಲ್ಲಿದ್ದರು. ಅವರಿಂದಾಗಿ ಅಲ್ಲಿಯ ಎಳೆಯರ ಸಾಹಿತ್ಯಕ ಚಟುವಟಿಕೆಗಳ ಪರಿಚಯ ನನಗಾಯಿತು. ಅವರು ಸದ್ದುಗದ್ದಲವಿಲ್ಲದೇ ಸಾಹಿತ್ಯ ಕೃಷಿಗೆ ತೊಡಗಿದುದನ್ನು ಅರಿತೆ. ಯಕ್ಷಗಾನ ಕಲಾವಿದರಲ್ಲಿ ಹಿರಿಯರೂ ಪ್ರಮುಖರೂ ಆದ ಪರಮಯ್ಯ ಹಾಸ್ಯಗಾರರನ್ನು ನಾನಿಲ್ಲಿ ಕಂಡೆ. ಎಂಭತ್ತೇಳು ವರುಷದ ವಯೋವೃದ್ಧರು. ಹೊನ್ನಾವರದಿಂದ ನಾಲ್ಕೈದು ಮೈಲು ದೂರದ ಕರ್ಕಿಯಲ್ಲಿ ಅವರ ವಾಸ. ಮಕ್ಕಳು ಮಾತ್ರ ಹೊನ್ನಾವರದಲ್ಲಿರುವರು. ಅವರನ್ನು ಕಾಣುವ ಅಪೇಕ್ಷೆಯಿಂದ ನಾನು ಹೋದಾಗ ಈ ವೃದ್ಧರು ನನಗೆ ತೊಂದರೆ ಬೇಡವೆಂದು ತಾವೇ ಈ ಅಂತರವನ್ನು ನಡೆದು ತೊಂದರೆ ವಹಿಸಿ ಹೊನ್ನಾವರಕ್ಕೆ ಬಂದರು. ಅವರು ಬರುವಷ್ಟರಲ್ಲಿ ನಾವು ಕಾಫಿ ಸಮಾರಾಧನೆ ಪೂರೈಸಿದ್ದೆವು. ಅವರ ಮೊಮ್ಮಗ ಆ ಹೊತ್ತಿಗೆ ತಾಳ ಮದ್ದಲೆ ಠೇಂಕರಿಸಿದರು. ಆ ನಾದ ಕೇಳಿದಾಕ್ಷಣವೇ ಪರಮಯ್ಯನವರು ಸ್ಫೂರ್ತಿ ತುಂಬಿದವರಂತೆ ಯಕ್ಷಗಾನದ ಪ್ರಾಯೋಗಿಕವಾದ ವಿವರಣೆ ನೀಡಲು ಮುಂದಾದರು. ಹಾಡು ಹೇಳುತ್ತ ನೃತ್ಯದ ವಿನ್ಯಾಸವನ್ನು ತೋರಿಸತೊಡಗಿದರು. ಯಕ್ಷಗಾನದ ವಿವಿಧ ಪರಿಗಳನ್ನು ವಿವರಿಸಿದರು. ಆದರೆ ಅಷ್ಟರಿಂದ ಅವರಿಗೆ ಸಮಾಧಾನವಾಗಲಿಲ್ಲ. "ನೀವೊಮ್ಮೆ ಕರ್ಕಿಯಲ್ಲಿ ಉಳಿಯಬೇಕು. ನಮಗೆ ಮುಂಚಿತವಾಗಿ ತಿಳಿಸಿ ಒಂದು ಚಿಕ್ಕ ಪ್ರಸಂಗವನ್ನಾದರೂ ನೀವು ಸವಿಯಬೇಕು" ಎಂದರು. "ನಮ್ಮೂರಿಗೆ ಬಾರದೇ ನಮ್ಮ ಆತಿಥ್ಯ ಸ್ವೀಕರಿಸದೇ ಹೋಗುತ್ತೀರಲ್ಲ" ಎಂಬ ಅಳುಕನ್ನು ತೋರಿಸಿದರು. ಈ ವೃದ್ಧರನ್ನು ದಣಿಸುತ್ತಿದ್ದೇನಲ್ಲ ಎಂದು ಸಂಕೋಚಗೊಂಡಿದ್ದ ನನ್ನ ಮನಸ್ಸು ಅವರ ಉತ್ಸಾಹದಿಂದ ಮುದಗೊಂಡಿತು. ಶರಾವತಿಗೆ ಉದ್ದವಾದ ಸೇತುವೆಯೊಂದನ್ನು ನಿರ್ಮಿಸತೊಡಗಿದ್ದರು. ಈಗದು ಪೂರೈಸಿ ಸಂಚಾರ ಪ್ರಾರಂಭವಾಗಿದೆ. ಉತ್ತರ ಕನ್ನಡ ಜಿಲ್ಲೆ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ನೇರ ಸಾರಿಗೆ ಸಂಪರ್ಕಕ್ಕೆ ಅನುವು ಮಾಡಿಕೊಟ್ಟಿದೆ. ಶರಾವತಿಯ ಆಚೆಯ ದಡಕ್ಕೆ ನಾವೆಯಿಂದ ಹೋದರೆ ಮಂಗಳೂರು ಹಂಚಿನ ಕಾರಖಾನೆ ನೋಡಸಿಗುವುದು. ಸಹಕಾರಿ ರಂಗದಲ್ಲಿಯ ಈ ಕಾರಖಾನೆ ತುಂಬಾ ಯಶಸ್ವಿಯಾಗಿ ನಡೆದಿದ್ದು ಶೇರುದಾರರಿಗೆ ಲಾಭಾಂಶವನ್ನು ನೀಡುತ್ತಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಇದೊಂದು ಉತ್ತಮ ಉದ್ದಿಮೆಯಾಗಿ ಬೆಳೆಯಬಹುದು ಎಂಬುದಕ್ಕೆ ಇದು ನಿದರ್ಶನವಾಗಿ ನಿಂತಿದೆ.

## ಗೋಕರ್ಣ ಕ್ಷೇತ್ರ

ಗೋಕರ್ಣವು ಉತ್ತರ ಕನ್ನಡ ಜಿಲ್ಲೆಯ ಅನೇಕ ಕರ್ನಾಟಕದ ಖ್ಯಾತ ಕ್ಷೇತ್ರಗಳಲ್ಲಿ ಒಂದು. ಆ ಮೊದಲು ಒಂದೆರಡು ಸಲ ಹೋಗಿ ಬಂದಿದ್ದೆ. ಅಲ್ಲಿಯ ಕೋಟಿತೀರ್ಥ, ಗಣಪತಿ ದೇವಸ್ಥಾನ, ಸಮುದ್ರ ಸ್ನಾನ, ಮಹಾಬಲೇಶ್ವರನ ಮಹಾಪೂಜೆ, ಕಾಳಿ ದೇವಿಯ ಸಂದರ್ಶನ ಎಲ್ಲವನ್ನು ಹಲವಾರು ಬಾರಿ ಪೂರೈಸಿದ್ದೆ. ಕ್ಷೇತ್ರ ವಿಧಿವಿಧಾನಗಳನ್ನು ಸಾಂಗಗೊಳಿಸಿದ್ದೆ. ಅಲ್ಲಿಯ ವೀರಶೈವ ಮಠದ ಪರಿಚಯ ಮಾಡಿಕೊಂಡಿದ್ದೆ. ಶಿವರಾತ್ರಿಗೆ ನೆರೆದ ಜಾತ್ರೆಯ ಸೊಗಸನ್ನು, ಗೊಂದಲವನ್ನು ಸವಿದಿದ್ದೆ. ಆದರೂ ಅಂಕೋಲೆಗೆ ಹೋದಾಗ ನನ್ನ ಮಿತ್ರರಾದ ಪ್ರಿನ್ಸಿಪಾಲ ನಾಯಕರು ಗೋಕರ್ಣಯಾತ್ರೆಯ ವಿಷಯವನ್ನು ಪ್ರಸ್ತಾಪಿಸಿದಾಗ ಹಿರಿಯ ಸಾಹಿತಿ ಸ್ನೇಹಿತರಾದ ಶ್ರೀ ಗೌರೀಶ ಕೈಕಿಣಿಯವರನ್ನು ಕಾಣುವದಿಲ್ಲವೇ ಎಂದಾಗ ಮತ್ತೊಮ್ಮೆ ಹೋಗದಿರಲು ಆಗಲಿಲ್ಲ. ಅವರನ್ನು ಕಾಣಲು ಪ್ರಕೃತಿಯ ಮಡಿಲಲ್ಲಿ ಎತ್ತರವಾದ ದಿನ್ನಲೆಯಲ್ಲಿ ತಲೆಯೆತ್ತಿ ನಿಂತಿರುವ ಅವರ ಕರ್ಮಭೂಮಿ ಹಾಯಸ್ಕೂಲಿಗೆ ಹೋದೆವು. ಅವರಿಗೆ ಅಚ್ಚರಿ-ಸಂತೋಷ. ಅವರನ್ನು ಮತ್ತೆ ಕಂಡು ಮಾತನಾಡಿದ್ದು ನನಗೂ ಹರ್ಷವನ್ನುಂಟುಮಾಡಿತ್ತು. ಅಲ್ಲಿಂದ ಅವರ ಮನೆಗೆ ಹೋಗಿ ಅವರ ಆತಿಥ್ಯ ಸ್ವೀಕರಿಸಿ ಜೊತೆಗೆ ಸುತ್ತಾಡಲು ಹೋದೆವು. ಸಾಹಿತ್ಯದ ರಸಮಯ ಚರ್ಚೆ, ಕೈಕಿಣಿಯವರ ಆಕರ್ಷಕ ಮಾತುಗಾರಿಕೆ, ಅಲ್ಲಿ ಸಮಯ ಹೇಗೆ ಕಳೆದ ಎಂಬುದೇ ತೋಚಲಿಲ್ಲ. ಮತ್ತೊಮ್ಮೆ ಮಹಾಬಲೇಶ್ವರನ ದರ್ಶನವೂ ಲಭಿಸಿತು. ಮಂತ್ರದೃಷ್ಟಾರ ದೈವರಾತರ ಆಶ್ರಮವೂ ಇಲ್ಲಿದೆ. ಗೋಕರ್ಣ ಅವರ ಕರ್ಮಭೂಮಿ. ಅವರು ಆ ಸಂದರ್ಭದಲ್ಲಿ ಉತ್ತರ ಭಾರತದ ಸಂಚಾರದಲ್ಲಿದ್ದುದರಿಂದ ಅವರನ್ನು ಅವರ ಊರಿನಲ್ಲಿ ಕಂಡು ಮಾತನಾಡುವ ಸುಯೋಗ ಲಭ್ಯವಾಗಲಿಲ್ಲ. ವೇದಪಾರಂಗತರ ತವರೂರು ಎನಿಸಿದ ಗೋಕರ್ಣ ಅವರಿಂದಾಗಿ ಮತ್ತೊಮ್ಮೆ ಹೆಮ್ಮೆಯಿಂದ ತಲೆಯೆತ್ತಿ ನಿಂತಿರುವ ಮಾತನ್ನು ನಾನು ಹೃದಯಸ್ಥಗೊಳಿಸಿಕೊಂಡೆ. ಆದರೆ ಇಂಥದೊಂದು ಪುರಾಣ ಪ್ರಸಿದ್ಧ ಯಾತ್ರಾಸ್ಥಳವನ್ನು, ನೈಸರ್ಗಿಕ ಪ್ರವಾಸಧಾಮವನ್ನು ನಮ್ಮ ಜನರಾಗಲಿ, ಸರಕಾರವಾಗಲಿ ಆಕರ್ಷಕವಾಗಿ ಬೆಳೆಸುತ್ತಿಲ್ಲವಲ್ಲ; ಪ್ರಗತಿಗೊಳಿಸುತ್ತಿಲ್ಲವಲ್ಲ ಎಂಬ ಒಂದು ಬಗೆಯ ನಿರಾಶಾ ಭಾವದಿಂದ ನಾನು ಅಲ್ಲಿಂದ ಹೊರಟು ಬಂದೆ.

## ಶಿರೀಷಪುರ

ನನ್ನಲ್ಲಿ ಮಲೆನಾಡಿನ ಆಕರ್ಷಣೆಯುಂಟು ಮಾಡಿದ ಶಿರ್ಶಿಯನ್ನು, ಶಿರೀಷಪುರವನ್ನು ಮತ್ತೊಮ್ಮೆ ಕಂಡುದು ಗಣಪತಿ ಉತ್ಸವದ ಸಂದರ್ಭದಲ್ಲಿ; ನನ್ನ ಸಾಹಿತಿ ಮಿತ್ರರ ಆಗ್ರಹದಿಂದಾಗಿ. ಕಥೆಗಾರ ಟಿ.ವಿ. ಶಾಸ್ತ್ರಿಯವರು ಈ ನಿಮಿತ್ತವಾಗಿ ಪರಿಚಿತರಾದರು. ಇನ್ನೂ ಅನೇಕ ಹಿರಿ-ಕಿರಿಯ ಸಾಹಿತಿಗಳನ್ನು ನಾನು ಮುಖತಃ ಕಂಡೆ. ಶಿರ್ಶಿಯ ಹೆಸರು ಎಲ್ಲೆಡೆಗೂ ಕೇಳಿ ಬರುವಂತೆ ಮಾಡಿದ ಮಾರಿಕಾಂಬೆಯ ದೇವಾಲಯವನ್ನು ಈ ಸಂದರ್ಭದಲ್ಲಿ ನಾನು ಮತ್ತೊಮ್ಮೆ ಸಂದರ್ಶಿಸಿದೆ. ಈಗ ದೇವಾಲಯ ಬೆಳೆದು ನಿಂತಿತ್ತು. ಸಾಹಿತಿಗಳ ಸನ್ಮಾನವನ್ನು ದೇವಾಲಯ ಸಮಿತಿ ನಡೆಸುತ್ತಿತ್ತು. ಅವರ ವ್ಯಾಖ್ಯಾನಮಾಲೆ ಏರ್ಪಡಿಸುತ್ತಿತ್ತು. ವಿದ್ವತ್ಪೂರ್ಣ ಲೇಖನಗಳ ಸಂಗ್ರಹಗಳನ್ನು ಪ್ರಕಟಿಸಲಾರಂಭಿಸಿತ್ತು. ದೇವಾಲಯ ವಿಶಾಲವಾದ ಸಭಾಂಗಣವನ್ನು ಹೊಂದಿತ್ತು. ಮಾ



ಮಧುಕೇಶ್ವರ ದೇವಾಲಯ

ಕಾಂತಿ ಬಲಿಗೊಳ್ಳುವುದನ್ನು ನಿಲ್ಲಿಸಿದ್ದಳು. ಅವಳ ಮುಖವು ಮಂಗಳಾರತಿಯ ಹೊಂಬೆಳಕಿನಲ್ಲಿ ಪ್ರಶಾಂತವಾಗಿ ಕಂಗೊಳಿಸಿತು. ತಾಯಿ ವರದ ಹಸ್ತವನ್ನು ನೀಡಿ ನಿಂತಿದ್ದಳು. ನನ್ನ ಮನ ಈ ಭವ್ಯವಾದ ನೋಟದಿಂದ ತುಂಬ ಮುದಗೊಂಡಿತ್ತು; ಪ್ರಫುಲ್ಲವಾಯಿತು. ಪ್ರವಾಸದ ದಣಿವು ಆರಿ ಹೋಯಿತು. ಮಹಿಳೆಯರೇ ನಡೆಸುವ ಸಹಕಾರಿ ಸಂಘವೊಂದು ಇಲ್ಲಿದೆ. ಆತಿಥೇಯರಲ್ಲಿ ಎರಡೆರಡು ಬಗೆಯ ಸಿಹಿ ತಿನಿಸುಗಳ ಊಟ. ಜಡೆ ಮಾಸ್ತರರ ಮನೆ ಮಲೆನಾಡಿನ ವಿಶೇಷ ಬಗೆಯದು. ಮನೆಯ ಬಳಿಯೇ ಪುಟ್ಟ ಅಡಿಕೆ-ತೆಂಗಿನ ತೋಟ. ಮಲೆನಾಡಿನ ವಿಶಿಷ್ಟ ಬಗೆಯ ಚಚ್ಚಲು. ಅದೇ ವಿಶಿಷ್ಟವಾದ ಸೌಹಾರ್ದತೆ; ಸ್ನೇಹಶೀಲತೆ. ಸಹೃದಯಶೀಲತೆ. ಆ ವಿಶಿಷ್ಟ ವಾತಾವರಣ ನನಗೆ ತುಂಬ ಹಿಡಿಸಿತು. ಒಂದೇ ಸವನೆ ಮಳೆ ಬರುತ್ತಿದ್ದರೂ ನನ್ನ ದೃಷ್ಟಿಯೆಲ್ಲ ಮನಸ್ಸಿನಲ್ಲಿ ಆ ತೋಟದಲ್ಲಿ ಎತ್ತರವಾಗಿ ಬೆಳೆದು ನಿಂತ ತೆಂಗು ಕೌಂಗುಗಳತ್ತ. ಬಹುಶಃ ಮಾಸ್ತರರು ತಮ್ಮ ಮಾತಿನತ್ತ ಇವರ ದೃಷ್ಟಿಯೇ ಇಲ್ಲವಲ್ಲ ಎಂದು ನನ್ನ ಮೌನದ ಬಗೆಗೆ ಎಂದುಕೊಂಡಿದ್ದರೂ ಇರಬಹುದು. ಇಲ್ಲಿಯ ಅಡಿಕೆ ಬೆಳೆಯ ಸೊಬಗನ್ನು ತೋಟದಲ್ಲಿ ಕಾಣುವುದು ಒಂದು ಬಗೆಯಾದರೆ ಬೆಳೆಗಾರರ ಸಹಕಾರಿ ಸಂಘದಲ್ಲಿ ನೋಡುವುದೇ ಒಂದು ಬಗೆ. ಊರ ಹೊರಗೆ ವಿಶಾಲವಾದ ಕಟ್ಟಡವನ್ನು ಈ ಸಂಘ ನಿರ್ಮಿಸಿಕೊಂಡಿದೆ. ರಾಶಿ ರಾಶಿಯಾಗಿ ಬಿದ್ದಿರುವ ಅಡಿಕೆ, ಅದನ್ನು ಹಸನುಗೊಳಿಸುವಲ್ಲಿ, ಆರಿಸುವಲ್ಲಿ, ವರ್ಗೀಕರಿಸುವಲ್ಲಿ ತೊಡಗಿದ ನೂರಾರು ಕೆಲಸಗಾರರು, ಮೆಣಸು, ಏಲಕ್ಕಿಗಳನ್ನು ಹಸನುಗೊಳಿಸುವ ವಿಭಾಗ ಕಣ್ಣಿಗೆ ಹಬ್ಬವನ್ನುಂಟು ಮಾಡುವಂಥವು. ಜಡೆಮಾಸ್ತರು ಅಂದು ಬಂದಿರಲಿಲ್ಲವಾದ್ದರಿಂದ ವ್ಯವಸ್ಥಾಪಕರು ಎಲ್ಲವನ್ನೂ ತೋರಿಸಿದರು. ಅಡಿಕೆಯ ವಿವಿಧ ಜಾತಿಗಳನ್ನು ವಿವರಿಸುತ್ತ ರಾಸೋರಾಸ ಮತ್ತು ಚಾಲಿ ಮುಖ್ಯವೆಂದರು. ಇವುಗಳಲ್ಲಿ ಉಪವರ್ಗಗಳು. ಅವುಗಳಿಗೆ ಸೇರಿದ ಒಳ ವಿಭಾಗಗಳು. ಅಡಿಕೆ ಪೇಟೆಯಲ್ಲಿ ಶಿರ್ಸಿಯದು ಪ್ರಸಿದ್ಧವಾದುದು ಮತ್ತು ತುಂಬ ದೊಡ್ಡದು. ವರುಷಕ್ಕೆ ಒಂದುವರಿ-ಎರಡು ಲಕ್ಷ ಕ್ವಿಂಟಲ್‌ಗಳ ವ್ಯಾಪಾರವಾಗುತ್ತಿದ್ದು ೪–೫ ಕೋಟಿ ರೂ ವ್ಯವಹಾರ ನಡೆಯುತ್ತಿದೆ. ಮೆಣಸು, ಏಲಕ್ಕಿಗಳ ವ್ಯಾಪಾರವೂ ಲಕ್ಷಗಟ್ಟಲೆ ರೂಪಾಯಿಗಳದು. ಅಡಿಕೆ ಮತ್ತು ಸಾಂಬಾರ ಪದಾರ್ಥಗಳು ಇಲ್ಲಿಯವರ ಜೀವನಾಡಿ. ಅವುಗಳ ಕೃಷಿ, ಅಭಿವೃದ್ಧಿ, ವ್ಯವಹಾರಗಳಲ್ಲಿ ಅವರು ತುಂಬ ಪಳಗಿದವರು. ಇಲ್ಲಿಯ ಈ ಸರಕುಗಳು ಹೋಗುವುದು ಮಾತ್ರ ಮುಂಬಯಿಗೇ. ಮಹಾರಾಷ್ಟ್ರ ಹಾಗೂ ಗುಜರಾತಗಳು ಇವುಗಳಿಗೆ ಮುಖ್ಯವಾದ ಪೇಟೆಗಳು.

## ಕೇಂದ್ರನಾಡಿ

ಈ ಹಿಂದೆ ನಾನು ಚಿಕ್ಕವನಿದ್ದಾಗ ಕಂಡಿದ್ದ ಪಂಡಿತ ವೈದ್ಯರು ಈಗ ಇಲ್ಲ. ಅವರ ಮಕ್ಕಳು ಅದೇ ವ್ಯವಸಾಯದಲ್ಲಿ ಮುಂದುವರಿದಿದ್ದಾರೆಂದು ಕೇಳಿದೆ. ಈಚೆಗೆ ಕಾರವಾರ ಜಿಲ್ಲೆಯ ಸಾಹಿತಿಗಳೆಲ್ಲ ಸೇರಿಕೊಂಡು ಸಹಕಾರಿ ಪ್ರಕಾಶನ ಸಂಘವೊಂದನ್ನು ನಿರ್ಮಿಸಿಕೊಂಡಿದ್ದಾರೆ. ನಾನು ಹೋದಾಗ ಆ ಬಗೆಗೆ ವಿಚಾರ ಮಾತ್ರ ನಡೆದಿತ್ತು. ಶಿರಸಿಯಲ್ಲಿ ಉದಯೋನ್ಮುಖ ಸಾಹಿತಿಗಳ ಸಂಖ್ಯೆಯೂ ದೊಡ್ಡದು. ಅನೇಕರು ನಮ್ಮ ಪತ್ರಿಕೆಯ ಬಳಗದವರು. ಕೆಲವರನ್ನು ಮಾತ್ರ ಕಂಡು ಮಾತನಾಡಲು ನನಗೆ ಸಾಧ್ಯವಾಯಿತು. ಮಲೆನಾಡು, ಮಲೆನಾಡಿನ ವರ್ಣಮಯ ಹಿನ್ನೆಲೆ ಇವರಲ್ಲಿ ಅನೇಕರಿಗೆ ಸ್ಫೂರ್ತಿ ನೀಡಿದೆ; ವಸ್ತುವೊದಗಿಸಿದೆ ಎಂಬ ಮಾತನ್ನು ನಾನು ಅರಿತೆ. ಇಲ್ಲಿಯ ನಗರಸಭೆ ಶತಮಾನ ಉತ್ಸವವನ್ನು ಈಚೆಗಷ್ಟೇ ಆಚರಿಸಿತ್ತು. ಒಂದು ಪ್ರಾಚೀನ ಗ್ರಂಥಾಲಯವೂ ಇಲ್ಲಿದೆ. ಅದು ಈಚೆಗಷ್ಟೇ ಸಮಾರಂಭವನ್ನು ಆಚರಿಸಿತು. ಶಿರಸಿ ಈ ಎಲ್ಲ ದೃಷ್ಟಿಯಿಂದ ಉತ್ತರ ಕನ್ನಡ ಜಿಲ್ಲೆಯ ಕೇಂದ್ರನಾಡಿ ಎಂದು ನಾನೆಂದುಕೊಂಡೆ. ಅದಕ್ಕನುಗುಣವಾಗಿ ಈಚೆಗೆ, ಇಲ್ಲೊಂದು ಕಾಲೇಜ್ ರೂಪಗೊಂಡಿದೆ.

ಶಿರ್ಸಿ ಇನ್ನೊಂದು ದೃಷ್ಟಿಯಿಂದಲೂ ಕೇಂದ್ರಬಿಂದು. ಅದರ ಸುತ್ತಮುತ್ತ ಅನೇಕ ಐತಿಹಾಸಿಕ; ಪೌರಾಣಿಕ ಕ್ಷೇತ್ರಗಳು ವ್ಯಾಪಿಸಿರುವವು. ಪ್ರೇಕ್ಷಣೀಯವಾದ ಸ್ಥಳಗಳಿವೆ. ಮಾಗೋಡ ಜಲಪಾತ ಉಂಚಳ್ಳಿಯ ಧಬಧಬೆ, ಶಿವಗಂಗಾ ಪ್ರಪಾತ, ಯಾಣಗಳಂಥ ನೈಸರ್ಗಿಕ ಆಕರ್ಷಣೆಗಳೂ, ಬನವಾಸಿ, ಸೋಂದೆ, ಚಂದ್ರಗುತ್ತಿಗಳಂಥ ಚಾರಿತ್ರಿಕ ಸ್ಥಳಗಳೂ, ಧಾರ್ಮಿಕ ಕೇಂದ್ರಗಳೂ ಇವೆ. ನನ್ನ ಸ್ನೇಹಿತರು ಇವುಗಳಲ್ಲಿ ಕೆಲವು ಸ್ಥಳಗಳಿಗಾದರೂ ನನ್ನನ್ನು ಕರೆದೊಯ್ಯಬೇಕೆಂದು ಹಂಬಲಿಸಿದರು. ಆದರೆ ಸಮಯಾಭಾವದಿಂದಾಗಿ ನಾನು ಬನವಾಸಿಯ ಹೊರತಾಗಿ ಬೇರಾವ ಸ್ಥಳವನ್ನೂ ಸಂದರ್ಶಿಸಲಾಗಲಿಲ್ಲ. "ಆರಂಕುಶ ಮಿಟ್ಟೊಡಂ ನೆನೆವುದೆನ್ನಮನಂ ಬನವಾಸಿದೇಶಮಮ್" ಎಂದು ಪಂಪ ಕವಿ ಬಣ್ಣಿಸಿದ ಬನವಾಸಿ ದೇಶವನ್ನು ನೋಡಿ ಅದರ ಸೃಷ್ಟಿಸೌಂದರ್ಯವನ್ನು ಸವಿಯಲು ನನಗೆ ಅವಕಾಶ ದೊರೆತುದು ನಿಜವಾಗಿಯೂ ತುಂಬ ಸಂತಸವುಂಟುಮಾಡಿತು. ಮಧುಕೇಶ್ವರ ದೇವಾಲಯ ನೀಡುವ ಆ ಶಿಲ್ಪ ವೈಭವದ ನೋಟವನ್ನು ನೋಡಿ ತಣಿಯಬೇಕಲ್ಲದೆ ಬಣ್ಣನೆಯಿಂದ



ವರದಾ ತೀರದ ರಮಣೀಯ ದೃಶ್ಯ

ಅರಿವುದು ಸಾಧ್ಯವಿಲ್ಲ. ಮಧುಲಿಂಗೆ ಮಧುವರ್ಣದಲ್ಲಿ ಕಂಗೊಳಿಸುವುದು ನಿಜವಾಗಿಯೂ ಕಣ್ಣಿಗೊಂದು ಹಬ್ಬ. ಚಾರಿತ್ರಿಕ ದೃಷ್ಟಿಯಿಂದ ಹಾಗೂ ಸೃಷ್ಟಿ ಸೊಬಗಿನ ದೃಷ್ಟಿಯಿಂದ ಇದೊಂದು ಅಪೂರ್ವವಾದ ಪ್ರವಾಸಿ ಕೇಂದ್ರ. ಈಚೆಗೆ ದೇವಾಲಯವನ್ನು ಪುನರುಜ್ಜೀವನಗೊಳಿಸಲು ಪ್ರಾಚ್ಯವಸ್ತು ಶಾಖೆ ಯತ್ನಿಸುತ್ತಿದೆ. ಪ್ರವಾಸಿಕರಿಗೆ ನಾನಾ ವಿಧ ಸೌಲಭ್ಯಗಳನ್ನು ಒದಗಿಸಲು ದೇವಸ್ಥಾನ ಸಮಿತಿಯ ಚೇರಮನ್ನರಾದ ಒಡೆಯರ ಅವರು ಶ್ರಮಿಸುತ್ತಿದ್ದಾರೆ.

ದಾಂಡೇಲಿ, ಆ ಅರಣ್ಯದ ಬಣ್ಣನೆಯಿಲ್ಲದೇ ಈ ಜಿಲ್ಲೆಯ ಅರಿವು ಪೂರ್ಣವೆನಿಸದು. ಎಲ್ಲ ಬಗೆಯ ವೃಕ್ಷಗಳು ಇಲ್ಲಿ ಬೆಳೆಯುತ್ತವೆ, ನಿಜವಾಗಿ ಇದು ದಟ್ಟವಾದ ಅರಣ್ಯ. ಮುಗಿಲು ಮುಟ್ಟುವಂಥ ಎತ್ತರ. ಬಿದಿರಿನ ಮೇಳೆಗಳು ಇಲ್ಲಿ ತುಂಬ. ಆ ನಿಮಿತ್ತ ಭವ್ಯವಾದ ಕಾಗದ ಕಾರಖಾನೆಯೊಂದು ಇಲ್ಲಿ ತಲೆಯೆತ್ತಿದೆ. ದಾಂಡೇಲಿ ಒಂದು ಉತ್ತಮ ಪಟ್ಟಣವಾಗಿ ನಿರ್ಮಿತವಾಗಿದೆ. ಈ ಕಾರಖಾನೆಯನ್ನು ನೋಡಲು ಹೋದಾಗ ಆ ವ್ಯವಸ್ಥಾಪಕರು ಅಡವಿಯ ಮಧ್ಯದಲ್ಲಿ ನಮಗಾಗಿ ಏರ್ಪಡಿಸಿದ ಭೋಜನಕೂಟ ನನಗೆ ಅವಿಸ್ಮರಣೀಯ ಘಟನೆಯಾಗಿದೆ. ಅಲ್ಲಿ ಕೋಗಿಲೆಗಳು ಹೆಚ್ಚು. ಅದನ್ನು ಕೋಕಿಲ ಬನವೆಂದೇ ಕರೆವರು. ಸಾಯಂಕಾಲ, ಸುತ್ತುಮುತ್ತು ವೃಕ್ಷರಾಜಿ. ಗ್ಯಾಸ್ ದೀಪದ ಬೆಳಕು. ಕುಹು ಕುಹು ನಿನಾದ. ಸೊಗಸಾದ ಗುಜರಾಥಿ ಊಟ. ಮನದಾನಂದ ಹೆಚ್ಚಿಸಲೇನು ಬೇಕು. ಇಲ್ಲಿ ವನ್ಯ ಮೃಗಗಳ ರಕ್ಷಣಾಲಯವೊಂದಿದೆ. ಹುಲಿ, ಚಿರತೆ, ಆನೆಗಳನ್ನು ಇಲ್ಲಿ ಕಾಣಬಹುದು. ಹಾವುಗಳೂ ತುಂಬ. ಕಾಳಿಂಗ ಸರ್ಪಗಳಿಗೆ ಆಗರ. ಮನುಷ್ಯನಿಗಿಂತ ಹೆಚ್ಚು ಎತ್ತರವಾಗಿ ಅವು ಬಾಲದ ಮೇಲೆ ನಿಂತಾಗ ಎಂಥ ಗಂಡೆದೆಯ ಗಂಡಸಿನ ಗುಂಡಿಗೆಯೂ ನಡುಗುವಂಥ ಭಯಾನಕ ದೃಶ್ಯವದು! ಮಲೆನಾಡಿನ ಸೃಷ್ಟಿ ಸೌಂದರ್ಯ ಸವಿಯುವಾಗ ಈ ಸವಿಯೂ ಬೇಕು, ಅಲ್ಲವೆ?



ಸಾಗರದ ಗುಡಿಗಾರರ ಕೈ ಕುಸುರಿನ ಬಾಸಿಂಗಗಳು

## ದಾರುಣ ಸ್ಥಿತಿ

ನಾನು ಮಲೆನಾಡಿನ ಮತ್ತೊಂದು ಪ್ರವಾಸವನ್ನು ತೊಡಗಿದ್ದು ಶಿವಮೊಗ್ಗ ಜಿಲ್ಲೆಯ ಸಾಗರದಿಂದ. ಈ ಮೊದಲೊಮ್ಮೆ ನನ್ನ ಸ್ನೇಹಿತರಾದ ಶ್ರೀ ಉಡುಪರ ಆಗ್ರಹದ ಮೇರೆಗೆ ಇಲ್ಲಿಯ ಕೆಲ ಸ್ಥಳಗಳನ್ನು ಸಂದರ್ಶಿಸಿದ್ದೆ. ಮಲೆನಾಡಿನ ಬಗೆಗೆ ಅವರಿಂದ ನನ್ನ ಮಮತೆಯನ್ನು ಹೆಚ್ಚಿಸಿಕೊಂಡಿದ್ದೆ. ಈ ಸಲ ಹುಬ್ಬಳ್ಳಿಯಿಂದ ನೇರವಾಗಿ ಸಾಗರ ಸೇರುವದೆಂದು ನಿರ್ಧರಿಸಿ ಹಾನಗಲ್ಲ ಮಾರ್ಗವಾಗಿ ಪ್ರಯಾಣ ಬೆಳಸಿದೆ. ಅದು ಇತಿಹಾಸ ಪ್ರಸಿದ್ಧ ಇಕ್ಕೇರಿಯವರೆಗೆ ಹೋಗುವ ಬಸ್ಸು ಎಂದು ನನಗೆ ಹೊರಡುವಾಗ ತುಂಬ ಆನಂದ. ಬಸ್ಸು ಹೊರಟು ಸಾಗರ ಸೇರಿದಾಗ ನಾನು ಎಂಟು ಗಂಟೆ ಪ್ರಯಾಣಿಸಬೇಕಾಗುವದೆಂಬ ಕಲ್ಪನೆಯೇ ಇರಲಿಲ್ಲ. ಬಹಳವಾದರೆ ಮೂರು ಗಂಟೆಯ ಹೊತ್ತಿಗೆ ಅಲ್ಲಿ ಸೇರಬಹುದೆಂದು ನಮ್ಮ ಸ್ನೇಹಿತರಿಗೆ ಬರೆದಿದ್ದೆ. ಅವರು ಕಾದು ಕಾದು ಸುಸ್ತಾಗಿದ್ದರೆ ನಾನು ಪಯಣಿಸಿ, ಕೂತು, ಮೈಕೈ ಹೊರಳಿಸಿ ಸುಸ್ತು. ಅಲ್ಲಿ ಇಳಿವಾಗ ನಮ್ಮಿಬ್ಬರ ಮುಖಗಳನ್ನು ನಾವೇ ನೋಡಿಕೊಂಡೆವಲ್ಲ ಎಂಬ ಸಂತೋಷ. ಆ ಮೊದಲೇ ಇಕ್ಕೇರಿ–ಕೆಳದಿಗಳನ್ನು ನೋಡಿ ಅಲ್ಲಿಯ ದೇವಾಲಯಗಳ ಶಿಲ್ಪ ವೈಭವಗಳನ್ನು ಕಣ್ಣಾರೆ ಕಂಡು ಮನಸೋತಿದ್ದೆ. ಕೆಳದಿ ದೇವಾಲಯದಲ್ಲಿಯ ಆ ಭವ್ಯವಾದ ಬೊಂಬೆಗಳು, ಶಿವಪ್ಪನಾಯಕನ ಗಜಕಟ್ಟಿಗೆ ಕಲ್ಲಿನ ಜಾಗಟೆ, ಇಕ್ಕೇರಿ ಅಘೋರೇಶ್ವರ ದೇವಾಲಯದ ಕುಸುರು ಕುಸುರಾದ ಶಿಲ್ಪ ನೋಡತಕ್ಕುದು; ಮೆಚ್ಚತಕ್ಕದು. ಹೀಗಾಗಿ ನಾನು ಮತ್ತೊಮ್ಮೆ ಅಲ್ಲಿಗೆ ಹೋಗಬೇಕಾಗಿರಲಿಲ್ಲ. ಅನೇಕ ಹಿರಿಯ ಸಾಹಿತಿಗಳನ್ನು ಸತ್ಕರಿಸಿದ, ಕನ್ನಡದ ಕಾರ್ಯಕ್ರಮಗಳನ್ನು ಭಕ್ತಿಪುರಸ್ಸರವಾಗಿ ನೆರವೇರಿಸುತ್ತ ಬಂದ ಸಾಗರ ಕನ್ನಡಸಂಘದ ಅಧ್ಯಕ್ಷರಾದ ಶ್ರೀ ಮಹಾಬಲೇಶ್ವರ ಭಟ್ಟರು ನಾನು ಕೆಲ ಸ್ನೇಹಿತರನ್ನು ತಮ್ಮ ಮನೆಯಲ್ಲಿ ಕಾಣುವಂತೆ ಏರ್ಪಡಿಸಿದ್ದರು. ಶ್ರೀ ಭಟ್ಟರು ಸ್ವತಃ ಕವಿಗಳು, ವಿಮರ್ಶಕರು, ಕೃಷಿಗಾರರು. ಅವರ ಹಿರಿತನದಲ್ಲಿ ಕನ್ನಡ ಸಂಘದ ಸಾಧನೆ ಅಪೂರ್ವ. ಅಲ್ಲಿಯೇ ಸಾಗರ ಅಡಿಕೆ ಬೇಸಾಯಗಾರ ಸಂಘದ ಅಧ್ಯಕ್ಷ ಶ್ರೀ ಎಲ್. ಟಿ. ತಿಮ್ಮಪ್ಪ ಹೆಗಡೆ ಅವರನ್ನು ಕಂಡು ಮಾತನಾಡುವ ಅವಕಾಶ ನನಗೆ ಲಭಿಸಿತು. "ಸಾಗರ ಬೆಟ್ಟ" ಎಂದು ಇಲ್ಲಿಯ ಅಡಿಕೆ ತುಂಬ ಪ್ರಸಿದ್ಧವಾಗಿರುವುದು. ಮುಂಬಯಿ, ಆ ಮೂಲಕ ಉತ್ತರ ಭಾರತಕ್ಕೆ ಅದು ರಫ್ತಾಗುವುದು, ಅವರಿಂದ ಈ ಅಡಿಕೆ ಕೃಷಿಯ ಬಗೆಗೆ ಸಾಕಷ್ಟು ತಿಳಿದುಕೊಂಡೆ, ಸಾಗರ ಪೇಟೆಯೊಂದೇ ವರುಷಕ್ಕೆ ಮುಕ್ಕಾಲು ಲಕ್ಷ ಕ್ವಿಂಟಲ್ ಅಡಿಕೆಯನ್ನು ಒದಗಿಸುವದೆಂದು ಅವರು ತಿಳಿಸಿದರು. ಸುಮಾರು ನಾಲ್ಕು ಕೋಟಿ ರೂ.ಗಳ ವ್ಯವಹಾರ ನಡೆಯುವುದು. ಈ ಬೆಲೆ ಕಡಿಮೆಯಾಗಿರುವದೆಂದೂ ಅದು ಹೆಚ್ಚಿದರೂ ಮಧ್ಯಸ್ಥರಿಗೆ ಹೋಗಿ ಬೇಸಾಯಗಾರರಿಗೆ ನೇರ ಪ್ರಯೋಜನ ದೊರೆವುದಿಲ್ಲವೆಂದು ಅವರ ಅಭಿಪ್ರಾಯ. ಚಾಲಿ ಮತ್ತು ಬಿಳಿಬೆಟ್ಟ ಎಂದು ಇಲ್ಲಿ ಅಡಿಕೆಯನ್ನು ವಿಭಾಗಿಸುವರು. ಇದು ಸುಮಾರಾಗಿ ಸಣ್ಣ ಬೆಟ್ಟ. ಶಿರ್ಶಿಗಿಂತ ಸಣ್ಣದು; ಶಿರ್ಶಿಯದು ಮಂಗಳೂರಿಗಿಂತ ಕಿರಿದು. ಮಂಗಳೂರಿನದೇ ತುಂಬ ದೊಡ್ಡ ಬೆಟ್ಟ ಎಂದವರು ತಿಳಿಸಿದರು. ಬೆಲೆ ಕೂಡ ಮಂಗಳೂರಿನದಕ್ಕೆ ಹೆಚ್ಚು. ನಂತರ ಶಿರ್ಶಿಯದು; ಕೊನೆಗೆ ಸಾಗರದ್ದು. ಗುಜರಾಥ ಹಾಗೂ ಮಧ್ಯಪ್ರದೇಶಗಳಿಗೆ ಹೆಚ್ಚಾಗಿ ಇಲ್ಲಿಯ ಅಡಿಕೆ ಹೋಗುವುದು ಅದರ ಪೂರ್ಣ ನಿಯಂತ್ರಣ ಮಾತ್ರ ಮುಂಬಯಿ ವ್ಯಾಪಾರಸ್ಥರಿಂದ ನಡೆಯುವುದು. ಹಾಗೇಕೆ ಎಂಬ ಸಂದೇಹವನ್ನು ಪರಿಹರಿಸುತ್ತ ಸರಕಾರದಿಂದ, ಬ್ಯಾಂಕುಗಳಿಂದ ರೈತರಿಗೆ ನೇರವಾಗಿ ಹೆಚ್ಚಿನ ಸಹಾಯ ದೊರೆಯುವುದಿಲ್ಲ. ಮುಂಬಯಿ ವ್ಯಾಪಾರಿ ಖರೀದಿಸಿ ಅಹಮ್ಮದಾಬಾದ ವ್ಯಾಪಾರಿಗೆ ಮಾರುವನು; ಅವನು ರಾಜಕೋಟ ವ್ಯಾಪಾರಿಗೆ, ಹೀಗೆ ಸರಕು ಕೈಯಿಂದ ಕೈಗೆ ಹೋಗುವಾಗ ಬೆಲೆ ಹೆಚ್ಚುತ್ತಲೇ ಹೋಗುತ್ತದೆ, ಸಾಗರದ ಇಮ್ಮಡಿ ಬೆಲೆ ಅಲ್ಲಿರುತ್ತದೆ. ಆದರೆ ಸಾಗರದ ಕೃಷಿಕನಿಗೆ ಮಾತ್ರ ಸಾಗರದಷ್ಟು ನಿರಾಸೆ; ಮಲೆನಾಡಿನ ಇನ್ನೊಂದು ಮುಖ್ಯ ಅಡಿಕೆ ಕೇಂದ್ರದ ಈ ದಾರುಣ ಸ್ಥಿತಿಯ ಚಿತ್ರ ನನ್ನನ್ನು ತುಂಬ ಕಂಗೆಡಿಸಿತು. ಹೀಗಾದರೆ ನಮ್ಮ ಮಲೆನಾಡಿನ ಕೃಷಿಕರ ಉದ್ಧಾರವಾಗುವುದು ಯಾವಾಗ?

ಮಲೆನಾಡಿನಲ್ಲಿ ಬೆಳೆವ ಶ್ರೀಗಂಧ, ಎಣ್ಣೆ-ಸಾಬೂನುಗಳ ಉತ್ಪಾದನೆಗೆ ಕಾರಣವಾಗಿರುವಂತೆ ದೇಶದ ನಾನಾ ಭಾಗಗಳಲ್ಲಿ, ವಿದೇಶಗಳಲ್ಲಿ ಪರಿಮಳ ಬೀರಿರುವಂತೆ, ಗಂಧದ ಕೆತ್ತನೆ ಕೆಲಸ ನಮ್ಮವರಿಗಿಂತ ಹೆಚ್ಚಾಗಿ ವಿದೇಶಿಯರನ್ನೇ ಆಕರ್ಷಿಸಿದೆ. ಮರುಳು ಮಾಡಿದೆ. ಹೆಚ್ಚು ಬೆಲೆಯ, ಸುಂದರ ಕುಸುರಿನ, ಕಲಾಕುಶಲದ ಕೆತ್ತನೆಯ ಕಲಾಕೃತಿಗಳನ್ನು ನೋಡುವುದು ನಿಜವಾಗಿ ಕಣ್ಣಿಗೆ ಒಂದು ಹಬ್ಬವೇ. ಸಾಗರ ಇದಕ್ಕೆ ತವರೂರು. ಸೊರಬ-ಸಾಗರಗಳ ತೊಂಭತ್ತು ಗುಡಿಕಾರರು ಸದಸ್ಯರಿರುವ ಒಂದು ಸಹಕಾರಿ ಸಂಸ್ಥೆ ಇದೆ. ಅವರು ಸುಮಾರು ೫೦ ಸಾವಿರ ರೂ.ಗಳ ವ್ಯವಹಾರ ವರ್ಷಕ್ಕೆ ನಡೆಸುವರು. ಆದರೆ ಅವರಿಗೆ

ಇದು ಸಾಲದು. ಶ್ರೀ ದೇವಪ್ಪನವರು ಇದರ ಅಧ್ಯಕ್ಷರು. ಅವರು ತಮ್ಮ ಸ್ವಂತ ಅಂಗಡಿಯನ್ನು ಇರಿಸಿಕೊಂಡಿದ್ದಾರೆ. ವಿದೇಶಗಳಿಗೆ ತಮ್ಮ ಸರಕು ಹೆಚ್ಚಾಗಿ ಹೋಗುವದಾದರೂ ಸರಕಾರದ ನಿರಾಸಕ್ತಿಯಿಂದ ಈ ಉದ್ದಿಮೆಗೆ ಬಲವಾದ ಪೆಟ್ಟು ತಗಲಿದೆ ಎಂದವರು ತಿಳಿಸಿದರು. ಈ ಸರಕುಗಳು ಒಮ್ಮೆಲೇ ಖರ್ಚಾಗುವದಿಲ್ಲ; ಬಂಡವಲದ ಕೊರತೆ ಬರುವುದು. ಗುಡಿಗಾರರು ಬಡವರು. ಹೀಗಾಗಿ ಉತ್ತೇಜನ ಕಡಿಮೆಯಾಗಿ ಅನೇಕರು ಬೇರೆ ಬೇರೆ ಉದ್ಯಮಗಳಿಗೆ ಸಾಗುತ್ತಿದ್ದಾರೆ. ಸರಕಾರವು ಸಹಾಯ ನೀಡಲು ಮುಂದಾದರೆ ಮಾತ್ರ ಈ ಉದ್ಯಮ ಉಳಿದು ಬಾಳಬಹುದು ಎಂದು ಹೇಳಿದರಲ್ಲದೇ ಈ ಕಲಾವಿದರಿಗೆ ತರಬೇತಿ ಕೇಂದ್ರ ತೆರೆಯಬೇಕೆಂದೂ, ಅವರಿಗಾಗಿ ಉತ್ಪಾದನ ಕೇಂದ್ರವೊಂದನ್ನು ಏರ್ಪಡಿಸಿ ಕೊಡಬೇಕೆಂದೂ, ಅದು ಸರಕಾರದ ಅವಶ್ಯವಾದ ಕರ್ತವ್ಯವೆಂದೂ ಅವರು ಕಳಕಳಿಯಿಂದ ತಿಳಿಸಿದರು. ಅವರ ಮಾತು ನಿಜ. ಸರಕಾರ ಈ ಪ್ರಶ್ನೆಯತ್ತ ತೆರೆದ ಕಣ್ಣಿನಿಂದ ನೋಡಬೇಕು ಎಂದು ನನಗೂ ಅನಿಸಿತು.

## ಜೋಗದ ಜಲಪಾತ

ನಾನು ಇಲ್ಲಿಂವಲೆ ಮೊದಲ ಬಾರಿಗೆ ಕವಿಯೊಬ್ಬರು ನೀಡಿದ "ಸಾಯೋದ್ರಾಗೊಮ್ಮೆ ನೋಡಬೇಕು ಜೋಗದ ಗುಂಡಿ" ಆದೇಶವನ್ನು ಪಾಲಿಸಿದೆ. ಜೋಗದ ಜಲಪಾತ ನೋಡಬೇಕೆಂಬ ತವಕ ಎಷ್ಟೊ ದಿನಗಳಿಂದ ನನ್ನ ಮನದಲ್ಲಿ ತಕತಕ ಕುಣಿಯುತ್ತಿದ್ದರೂ ಅದು ಸಾಧ್ಯವಾದುದು ಈ ಮಲೆನಾಡಿನ ಪ್ರವಾಸದ ಸಂದರ್ಭದಲ್ಲಿ. ಸಾಗರದಿಂದ ಬೆಳಗ್ಗೆ ನಾನು, ಶ್ರೀನಿವಾಸ ಉಡುಪರು, ಛಾಯಾಗ್ರಾಹಕ ಕೇಸರಸಿಂಗರು ಹೊರಟೆವು. ಸಾಗರದಿಂದ ತುಂಬ ಸಮೀಪ. ಮುಕ್ಕಾಲು ಗಂಟೆಯಷ್ಟು ನಾವು ಪ್ರಯಾಣಿಸಿರಬಹುದು. ನೆಲದಿಂದ ಮಂಜು ಮೇಲೆ, ಮೇಲೆ ಮೇಲಕ್ಕೆ ಏರಿ ಹೋಗುವ ಒಂದು ಅಪೂರ್ವ ದೃಶ್ಯ. ಗರ್ಜನೆಯೋಪಾದಿಯ ನಿನಾದ ಕಣ್ಣು-ಕಿವಿಗಳಿಗೆ ತಾಗಿದಾಗ ನನ್ನ ಹೃದಯ ಸಂತಸದಿಂದ ತುಂಬಿ ಹೋಯಿತು; ಮನಸ್ಸು ಅತ್ತ ಧಾವಿಸತೊಡಗಿತು. ಕಣ್ಣುಗಳು ಸುಂದರ ದೃಶ್ಯಕ್ಕಾಗಿ ತಡಕಾಡತೊಡಗಿದವು. ಮೊದಲು ಉತ್ತರ ಕನ್ನಡ ಜಿಲ್ಲೆಯ ಭಾಗದಿಂದ ಈ ಜಲಪಾತವನ್ನು ನೋಡಿದೆ. ಪ್ರಶಾಂತವಾದ ಸ್ಥಳ. ಸುತ್ತಲೂ ನಿಸರ್ಗದ ಚೆಲುವು. ಎದುರುಗಡೆ ಭೋರ್ಗರೆಯುತ್ತ ಒಂಭೈನೂರು ಅಡಿಯಿಂದ ಕೆಳಕ್ಕೆ ಧುಮ್ಮಿಕ್ಕುವ ಶರಾವತಿಯ ರುದ್ರ ಮನೋಹರ ದೃಶ್ಯ. ಮನಸ್ಸು ಸಮಾಧಾನಗೊಂಡಿತು. ಯಾವ ಯಾವ ಭಾಗದಿಂದ ಹೇಗೆ ಕಾಣುತ್ತಿವೆ ಎಂದು ಸುತ್ತತೊಡಗಿದೆ. ಒಂದೊಂದು ಭಾಗದಿಂದ ಒಂದೊಂದು ನೋಟ; ಕಣ್ಣು ಸೆಳೆವ, ಮನ ಮುದಗೊಳಿಸುವ ದೃಶ್ಯಮಾಲಿಕೆ. ನಿಸರ್ಗದ ಈ ಸೃಷ್ಟಿಯ ಚೆಲುವನ್ನು ಹೀರಲು ಎರಡೇ ಕಣ್ಣುಗಳು ಸಾಲವು; ಇಷ್ಟೇ ಸಮಯ ಸಾಲದು ಎಂದುಕೊಳ್ಳುತ್ತ ಶಿವಮೊಗ್ಗ ಭಾಗಕ್ಕೆ ಹೊರಟೆ. ಅಲ್ಲಿ ವಿದ್ಯುದಾಗರ ಆಫೀಸು, ರಕ್ಷಣಾಲಯ, ವಿಶ್ರಾಂತಿಭವನಗಳು ಉಂಟು. ಅಂದು ಬೆಳಗ್ಗೆ ಸಾಗರದಲ್ಲಿ ಬಿದ್ದ ಅವಿರತವಾದ ಮಳೆ ಅದರ ರಭಸ ನೋಡಿದಾಗ ಈ ನೋಟವನ್ನು ನಾನು ಕಾಣುವೆನೇ ಎಂದು ತುಂಬ ಭಯಭೀತನಾಗಿದ್ದೆ. ಕೇಸರಸಿಂಗರಂತೂ ನಿಸರ್ಗದ ಮುನಿಸಿನಿಂದ ಕಂಗಾಲಾಗಿದ್ದರು. ಆದರೆ ನಮ್ಮ ಈ ಕಳವಳವನ್ನು ಅರ್ಥಮಾಡಿಕೊಂಡಂತೆ ನಿಸರ್ಗ ಈ ಹೊತ್ತಿಗೆ ನಮ್ಮ ಮೇಲೆ ಪ್ರಸನ್ನವಾಗಿ ಸೂರ್ಯನ ಹೊಂಗಿರಣಗಳು ಹೊರಬರತೊಡಗಿದ್ದವು. ಮನಸ್ಸು ಮುದಗೊಂಡು ಉಲ್ಲಾಸಮಯವಾಯಿತು. ಕೇಸರಸಿಂಗರು ಕುಣಿದು ಕುಪ್ಪಳಿಸತೊಡಗಿದರು. ಅನೇಕ ದೃಶ್ಯಗಳನ್ನು ಸೆರೆಹಿಡಿದರು. ಆದರೆ ಕೆಲ ವಿಶೇಷ ದೃಶ್ಯಗಳನ್ನು ಸೆರೆಹಿಡಿಯಲು, ಲಿಂಗನಮಕ್ಕಿ ಅಣೆಕಟ್ಟನ್ನು ಚಿತ್ರೀಕರಿಸಲು ಅಧಿಕಾರಿಗಳು ರಕ್ಷಣಾ ನಿಯಮಗಳನ್ನು ಹೇಳಿ ಅವಕಾಶ ನಿರಾಕರಿಸಿದಾಗ ಇದ್ದುಬಿದ್ದ ಉತ್ಸಾಹ ರಭರ್ರನೆ ಇಳಿದು ಹೋಯಿತು. ಆದರೆ ದೃಶ್ಯಗಳನ್ನು ಮನಸ್ಸಿನಲ್ಲಾದರೂ ಹುದುಗಿರಿಸಿಕೊಳ್ಳೋಣವೆಂದು ಮಹಾತ್ಮಾ ಗಾಂಧಿ ವಿದ್ಯುದಾಗರವನ್ನು ನಿರೀಕ್ಷಿಸಲು ತೆರಳಿದೆವು. ಶಿಖರದಿಂದ ನದಿಯ ಪಾತಳಿಗೆ ೯೩೦ ಅಡಿ ಇಳಿದು ಹೋಗಬೇಕು. ಹತ್ತು ನೂರ ಇಪ್ಪತ್ತು ಅಡಿಗಳಷ್ಟು ದೀರ್ಘವಾದ ಟ್ರಾಲಿ



← ಮುಂಬಯಿ ಬಂಗ್ಲೆಯ ಭಾಗದಿಂದ ಜಲಪಾತದ ರಮ್ಯ ನೋಟ



→ ಮಲೆನಾಡಿನ ಕನ್ನೆಯರು ಝರಿ ನೀರು ಹಿಡಿಯುತ್ತಿರುವರು



ಸಾಗರದ ರಸ್ತೆಯ ಬದಿಯಿಂದ ಕಾಣುವ ಲಿಂಗನಮಕ್ಕಿ ನೋಟ

ಮಾರ್ಗವನ್ನು ರಚಿಸಿರುವರು. ಅಲ್ಲದೇ ೧೨೨೦ ಮೆಟ್ಟಿಲುಗಳೂ ಇವೆ. ಕೆಳಗೆ ಹೋಗುವಾಗ ಅತ್ತಿತ್ತ ನೋಡಿದಾಗ ತುಂಬ ಹೆದರಿಕೆ ಬರುವುದು. ಕೆಳಗಿನ ವಿದ್ಯುದ್ದಾಗರದ ದೃಶ್ಯ ಕುತೂಹಲ ಕೆರಳಿಸುವಂಥದು. ಮೇಲಿನಿಂದ ನೋಡಿದಾಗ ಚುಕ್ಕೆಯಂತೆ ಕಾಣುವ ಕಟ್ಟಡ ಅಲ್ಲಿಗೆ ಹೋಗಿ ನೋಡಿದಾಗ ತುಂಬ ಅದ್ಭುತವಾಗಿ ಗೋಚರಿಸುವುದು. ಈ ನಿಸರ್ಗದ ಸೊಬಗನ್ನು ಸವಿದು ಮಾನವನಿರ್ಮಿತ ಲಿಂಗನಮಕ್ಕಿಯ ಸೊಬಗನ್ನು ಸವಿಯಲು ಹೋದಾಗ ಹೊತ್ತು ತುಂಬಾ ಆಗಿತ್ತು. ದ್ವಾರಪಾಲಕರೂ ಸಮಯದ ನಿರ್ಬಂಧ ಹೇಳಿ ಬೇಗ ಬೇಗ ಸಾಗಬೇಕೆಂದರು. ನಾನು ಹೋದ ಆ ಸಂದರ್ಭದಲ್ಲಿ ನೀರೂ ಅಷ್ಟಿರಲಿಲ್ಲ. ಛಾಯಾಗ್ರಹಣಕ್ಕಂತೂ ಅವಕಾಶವೇ ಇರಲಿಲ್ಲ. ಅದನ್ನು ಕಣ್ತುಂಬ ನೋಡಿದೆನಾದರೂ ಮನಸ್ಸು ಮುದಗೊಳ್ಳಲಿಲ್ಲ; ತಣಿಯಲಿಲ್ಲ. ಅಯ್ಯೋ ನಮ್ಮ ಸರಕಾರವೆ! ಈ ಸೊಬಗನ್ನು ಪುನಸಾರೆ ಸವಿಯುವ ಭಾಗ್ಯವನ್ನು ನಮ್ಮ ಜನಕ್ಕೆ ನೀಡುತ್ತಿಲ್ಲವಲ್ಲ! ವಿದೇಶಿಯರಿಗೆ ಇರುವ ಸೌಲಭ್ಯಗಳು ನಮ್ಮವರಿಗೆ ಇಲ್ಲವಲ್ಲ ಎಂಬ ನೋವಿನಿಂದ ವಾಪಸ್ಸಿಂದ ಹೊರಟು ಬಂದೆ.

ಸಾಗರ ಒಂದು ಕಾಲಕ್ಕೆ ಸದಾಶಿವನಗರವಾಗಿತ್ತಂತೆ. ಸದಾಶಿವ ನಾಯಕ ಕಟ್ಟಿಸಿದ ಒಂದು ಗಣಪತಿ ದೇವಾಲಯ,- ಈಗ ಅದು ಈಶ್ವರ ದೇವಾಲಯ-ವಿದೆ. ಅದ್ಭುತವೆಂದರೆ ಅದರ ಕಂಪೌಂಡ ಗೋಡೆಗೆ ಹೊಂದಿ ಮಸೀದಿಯೊಂದಿದೆ. ಇದೊಂದು ಧಾರ್ಮಿಕ ಸಹಜೀವನವೊ ಏನೊ! ಇಲ್ಲಿ ನಾ ಡಿಸೋಜರಂಥ ಉದಯೋನ್ಮುಖ ಸಾಹಿತಿಗಳನ್ನು ಕಂಡೆನಾದರೂ ಸಾಹಿತ್ಯ ಕ್ಷೇತ್ರದಲ್ಲಿ ಅಪೂರ್ವ ಸೇವೆಸಲ್ಲಿಸುತ್ತಿರುವ ಕೆ.ವಿ. ಸುಬ್ಬಣ್ಣ ಅವರನ್ನು ಕಾಣುವದಾಗಲಿಲ್ಲ. ನಾನು ಹೋದ ಸಂದರ್ಭದಲ್ಲಿ ಅವರು ಅಲ್ಲಿರಲಿಲ್ಲ.

## ಮೂಕಾಂಬಿಕೆ

ಸಾಗರದಿಂದ ಅಗಸ್ತ್ಯರು ಪ್ರತಿಷ್ಠಾಪಿಸಿದ ಗಣಪತಿಯಿರುವ ಕಾರಗಡಿ, ನಗರ ಮಾರ್ಗವಾಗಿ ಕೊಲ್ಲೂರ ಘಟ್ಟವನ್ನು ಇಳಿದು ದಕ್ಷಿಣ ಕನ್ನಡ ಜಿಲ್ಲೆಯ ಕೊಲ್ಲೂರಿಗೆ ಇಳಿದೆ. ಕಾರಂತರ ಹಲವಾರು ಕಾದಂಬರಿಗಳಲ್ಲಿ ಕೊಲ್ಲೂರಿನ ಮೂಕಾಂಬಿಕೆಯ ವರ್ಣನೆ ಬರುತ್ತದೆ. ಸುತ್ತಲೂ ಚಕ್ರಾಕಾರದಲ್ಲಿ ಪರ್ವತಗಳು, ಮಧ್ಯದಲ್ಲಿ ಕೊಲ್ಲೂರು. ದೇವಾಲಯದ ಮಹಾದ್ವಾರದ ಬಳಿ ನಿಂತರೆ ಎದುರುಗಡೆ ಕೊಡಚಾದ್ರಿ ಕಂಗೊಳಿಸುವುದು. ಹಿಂದೊಮ್ಮೆ ನಗರಕ್ಕೆ ಹೋದಾಗ ಶ್ರೀ ಸುಬ್ರಮಣ್ಯ ಉಡುಪರು ಜೀಪಿನಲ್ಲಿ ಅದನ್ನು ಏರಿದ ಸಾಹಸ ಬಣ್ಣಿಸಿದ್ದರು. ಅದನ್ನು ಏರುವ ತವಕವನ್ನು ನನ್ನಲ್ಲೂ ಮೂಡಿಸಿದ್ದರು. ಆದರೆ ದೂರದಿಂದಲೇ ಅದರ ನೋಟವನ್ನು ಸವಿದು ನಾನು ತೃಪ್ತನಾದೆ. ದೇವಾಲಯ ತುಂಬ ಚೊಕ್ಕಟವಾಗಿದೆ. ದೇವಿಗೆ ಭಕ್ತರು ಬಹಳ, ಕಾರಿನಲ್ಲಿ, ಬಸ್ಸುಗಳಲ್ಲಿ ಸಂಖ್ಯೆ ಸಂಖ್ಯೆಯಾಗಿ ಬರುವರು. ನಾನು ಹೋದಾಗ ಮಧ್ಯಾಹ್ನದ ಪೂಜೆಯ ಹೊತ್ತು. ಕಣ್ತುಂಬ ಮೂಕಾಂಬಿಕೆಯನ್ನು ದರ್ಶಿಸಿದೆ. ಆದಿ ಶಂಕರಾಚಾರ್ಯರು ಕೇರಳದಿಂದ ಮೊದಲು ಇಲ್ಲಿಗೆ ಬಂದು ದೇವಿಯನ್ನು ಅರ್ಚಿಸಿದರೆಂದೂ ತಪಸ್ಸು ಮಾಡಿದರೆಂದೂ ಹೇಳುತ್ತಾರೆ. ಅವರು ತಪಸ್ಸು ಮಾಡಿದ ಗುಹೆಯೊಂದನ್ನು ತೋರಿಸುತ್ತಾರೆ. ಆ ಸ್ಥಾನ ನಿಜವಾಗಿ ಪ್ರಶಾಂತವಾಗಿದೆ. ಅಂತೆಯೇ ಏನೊ ಇಲ್ಲಿ ಕೇರಳದ ಸಾಧುಗಳ ಸಂಖ್ಯೆ ಅಪಾರ. ಅವರಿಗೆ ಇಲ್ಲಿ ತಪಸ್ಸು ಸಿದ್ಧಿಸುವದಂತೆ. ಶಂಕರ ಮಠವೂ ಇದೆ. ಕೇರಳದ ಸಾಧುಗಳೇ ಕಟ್ಟಿಕೊಂಡ ಒಂದು ಧರ್ಮಶಾಲೆಯೂ ಇದೆ. ರಾಮಕೃಷ್ಣಾಶ್ರಮದ ಶಾಖೆಯೂ ಇದೆ. ಭಕ್ತರಿಗಾಗಿ ಆಧುನಿಕ ವಸತಿ ಗೃಹವೊಂದನ್ನು ನಿರ್ಮಿಸಲಾಗುತ್ತಿದೆ.

ಮೂಕಾಂಬಿಕೆಯ ಅಸಂಖ್ಯ ಭಕ್ತರು ಕೊಟ್ಟ ಕಾಣಿಕೆಗಳು, ದೇವಿಯ ಅಪೂರ್ವ ಆಸ್ತಿಯಿಂದ ದೇವಿ ವೈಭವ ಸಂಪನ್ನಳೆನಿಸಿದ್ದಾಳೆ. ಅವಳ ಬಂಗಾರದ ಆಭರಣಗಳು ಕಣ್ಣು ಕೋರೈಸುತ್ತಿವೆ. ಒಂದು ಅಪೂರ್ವವಾದ ಪಚ್ಚೆ ಲಕ್ಷಾಂತರ ರೂಪಾಯಿ ಬೆಲೆ ಬಾಳುವಂಥದು. ಭಕ್ತರು ಅವನ್ನು ಕಣ್ಣಿಣಿಯುವಂತೆ ನೋಡಿ ದಂಗು ಬಡಿದು ನಿಲ್ಲುವರು. ಅಲ್ಲಿಯ ಪ್ರಶಾಂತ ವಾತಾವರಣ, ನಿಸರ್ಗದ ಚೆಲುವಿನ ಮಧ್ಯದಲ್ಲಿ ಪವಡಿಸಿದ ರೀತಿ ಕಂಡಾಗ ಕಾರಂತರು ಈ ದೇವಿಯನ್ನು ಇಷ್ಟೇಕೆ ಬಣ್ಣಿಸಿದರು ಎಂದು ತಾನೇ ಅರ್ಥವಾಗುವುದು.

ಅಲ್ಲಿಂದ ನಾವು ತಿರುಗಿ ಬಂದು ತಂಗಿದ್ದು ಶ್ರೀ ಶ್ರೀನಿವಾಸ ಉಡುಪರ ಊರು ಹೆಸಿಯದಲ್ಲಿ. ಮಲೆನಾಡಿನ ಒಂದೆರಡು ಮನೆಗಳ ಹಳ್ಳಿ. ಆದರೆ ಈಗ ಅಲ್ಲಿ ವಿದ್ಯುದ್ದೀಪವೂ ಇದೆ. ಆಧುನಿಕ ಸೌಕರ್ಯಗಳಿವೆ. ಆದರೂ ಮನೆಯ ಪಕ್ಕದಲ್ಲೇ ಕೊಳ್ಳಕ್ಕೆ ತಾಗಿ ಅಡಿಕೆ-ತೆಂಗಿನ ತೋಟ; ವೀಳ್ಯದೆಲೆಯ ಬಳ್ಳಿಗಳು, ಬಾಳೆ ತೋಟವಿದೆ. ಅಬ್ಬೆಯಿಂದಲೇ ನೀರಿನ ಪೂರೈಕೆ. ಆ ನೀರು ಬಚ್ಚಲದವರೆಗೂ ಹರಿದು ಬರುವುದು. ಹೆಚ್ಚಿನ ನೀರು ತಾನೇ ತಾನಾಗಿ ಹರಿದು ತೋಟ ಸೇರುವುದು. ಕೊರಕಲದಲ್ಲಿ ಈ ಬನಗಳು. ಮನೆಯಿಂದ ಅಲ್ಲಿಗೆ ಹೋಗಿ ಬರಲು ತೆಂಗಿನ-ಅಡಿಕೆಯ ಮರಗಳನ್ನು ಸೇರಿಸಿದ ಸಂಕವೊಂದು. ಅಲ್ಲಿಯವರು



ಕೊಲ್ಲೂರಿನ ಮೂಕಾಂಬಿಕಾ ದೇವಾಲಯ



ನಗರದ ಕೋಟೆಯಿಂದ ಕಾಣುವ ಹಳೆಯ ಕೆರೆ

ಸರಾಗವಾಗಿ ಹೋಗಿ ಬರುವರು. ನನಗೆ ಮಾತ್ರ ತುಂಬ ಭೀತಿಯೆನಿಸುತ್ತಿತ್ತು. ಚತುಷ್ಪಾದಿಯಾಗಿಯೇ ಒಂದು ಸಲ ಹೋಗಿ ಬಂದೆ. ನಂತರ ನನ್ನ ಸ್ನೇಹಿತರು ನೆರವಿಗೆ ಬರಬೇಕಾಯಿತು. ಇದೊಂದು ನನ್ನ ಮಟ್ಟಿಗೆ ಹೊಸ ಅನುಭವವೇ!

ಹನಿಯದಲ್ಲಿ ಶ್ರೀ ಉಡುಪರ ಸೋದರ ಮಾವಂದಿರು, ಮಲೆನಾಡಿನಲ್ಲಿ ಹವೀಕರಲ್ಲಿಯ ಕೆಲ ವಿಶೇಷಗಳನ್ನು ವಿವರಿಸಿದರು. ಅವುಗಳಲ್ಲಿ ನನ್ನನ್ನು ಆಕರ್ಷಿಸಿದ್ದು ಮದುವೆಯ ಸಂದರ್ಭದಲ್ಲಿ ಅವರು ಆಚರಿಸುವ ಒಂದು ವಿಧಾನ. ಜಾತಕ ಕೂಡಿ ಬರ ದಿದ್ದರೆ ದೇವರ ಪ್ರಸಾದ ಕೇಳುವರು, ಆಗಲೂ ಸರಿಯಾಗಿ ಇತ್ಯರ್ಥವಾಗದಿದ್ದರೆ ಕಾಗೆ ಶಕುನ ಕೇಳು ವರಂತೆ. ಮೊರದಲ್ಲಿ ಅರ್ಧಸೇರು ಅಕ್ಕಿಯ ಎರಡು ರಾಸಿ ಮಾಡಿ ಒಂದರಲ್ಲಿ ಇದ್ದಲು ಇನ್ನೊಂದರಲ್ಲಿ ಅರಿಷಿಣ ಬೇರು ಹುಗಿದಿಡಬೇಕು. ಅದನ್ನು ಚಪ್ಪರ ದಲ್ಲಿರಿಸಿ ಕಾಯಬೇಕು. ಕಾಗೆ ಅರಿಷಿಣ ಮುಟ್ಟಿದರೆ ಶುಭ; ಲಗ್ನ ಆಗಬಹುದು ಎಂದು ಬಗೆಯುತ್ತಾ ರಂತೆ. ಅದು ಸ್ವಾನುಭವವೆಂದೂ ಅವರು ಹೇಳಿ ದಾಗ ನನಗೆ ತುಂಬ ಸೋಜಿಗವೆನಿಸಿತು.

## ಕಲ್ಬಾಳೆ

ನಾನು ಮೊದಲೊಮ್ಮೆ ನೋಡಿದ್ದ ನಗರಕ್ಕೆ ಮತ್ತೊಮ್ಮೆ ಹೋಗಿ, ಸುಬ್ರಮಣ್ಯ ಉಡುಪರು ಇರಲಿಲ್ಲ, ಅವರ ಅಣ್ಣ ಸೀತಾರಾಮಣ್ಣ ಇದ್ದರು; ಅವರಲ್ಲಿ ಆತಿಥ್ಯ ಸ್ವೀಕರಿಸಿ ಅಲ್ಲಿಯ ಕೋಟೆ, ಅರಮನೆಗಳನ್ನು ಮತ್ತೊಮ್ಮೆ ನೋಡಿ ಘಟ್ಟದ ಪ್ರದೇಶ ನೋಡುವ ತವಕವಿದ್ದುದರಿಂದ ಹುಲಿಕಲ್ ಘಾಟಿಗೆ ಹೋದೆ. ಇದನ್ನೇ ಬಾಳೇಬರಿಘಾಟು, ಹೈದರಿ ಘಾಟ ಎಂದೂ ಕರೆಯುತ್ತಾರೆ. ಅಲ್ಲಿಯ ಮಾರ್ಗದ ಮಧ್ಯದಲ್ಲಿರುವ ಚಂಡಿಕಾಂಬಿಕಾ ದೇವಾಲಯ ನೋಡಿದೆ. ಅಲ್ಲಿಂದ ಕಣಿವೆ-ಕೊಳ್ಳದ ನೋಟ ಮನ ತುಂಬಿದರೆ ೫೦–೬೦ ಅಡಿ ಬಂಡೆಗಲ್ಲಿನಲ್ಲಿ ಕಲ್ಬಾಳೆ ಬೆಳೆದಿರುವ ನೋಟ ಅಚ್ಚರಿಗೊಳಿಸುವಂಥದು. ಒಂದೊಂದು ಬಂಡೆಯಲ್ಲಿ ೬೦–೭೫ ಗಿಡಗಳು! ಆದರೆ ಈ ಬಾಳೆಯ ಉಪಯೋಗ ಕೇವಲ ಎಲೆಗೋಸ್ಕರ ಮಾತ್ರ. ಅದರ ಕಾಯಿ, ಹಣ್ಣು ಉಪಯುಕ್ತವಿಲ್ಲ.

ಇದಕ್ಕೂ ಮೋಜೆಂದರೆ ಕಡಿದಾದ ಈ ಬಂಡೆಗಳನ್ನು ಮಲೆನಾಡಿನ ಈ ಜನ ಸರಾಗವಾಗಿ ಏರಿ ಈ ಎಲೆ ಕತ್ತರಿಸಿ ಮಾರುವುದು. ನಿಸರ್ಗದೊಂದಿಗೆ ಮಾನವನ ಸೆಣಸಾಟ. ಅಚ್ಚರಿಯ ಮೇಲೆ ಅಚ್ಚರಿ. ಈ ಘಟ್ಟದ ರಸ್ತೆಯ ಮೇಲೆ ಅಡ್ಡಾಡಿದಾಗ ಮೈನವಿರೆದ್ದಿತು! ರೋಮಾಂಚನವಾಯಿತು. ಅಲ್ಲಿಯ ಸೂರ್ಯಾಸ್ತ ದಿಬ್ಬವನ್ನೇರಿ ಸುತ್ತಲಿನ ರಮಣೀಯ ನೋಟ ನೋಡಿದಾಗ ಅಲ್ಲಿಂದ ಕದಲಲು ಮನಸ್ಸೇ ಆಗಲಿಲ್ಲ. ಮತ್ತೆ ಮತ್ತೆ ನಿಸರ್ಗದ ಸೊಬಗನ್ನು ಕಣ್ಣಲ್ಲಿ ತುಂಬಿಕೊಳ್ಳಬೇಕು, ಆನಂದವನ್ನು ಅನುಭವಿಸ ಬೇಕು ಎಂದೆನಿಸುತ್ತಿತ್ತು. ಆದರೆ ಆ ಸಾಯಂಕಾಲ ನಾನು ತೀರ್ಥಹಳ್ಳಿ ಸೇರಿ ನಮ್ಮ ವ್ಯಂಗ್ಯಚಿತ್ರ ಕಲಾವಿದರೂ, ಸ್ನೇಹಿತರೂ ಆದ ಶ್ರೀ ಕೆ.ಆರ್. ಸ್ವಾಮಿಯವರನ್ನು ಕಾಣಬೇಕಿತ್ತು. ಹೀಗಾಗಿ ಈ ಮಾರ್ಗವಾಗಿ ತೀರ್ಥಹಳ್ಳಿಯ ಕೊನೆಯ ಬಸ್ಸನ್ನು ನಾವು ಹೇಗೊ ಏರಿ ನಿಂತೆವು. ಹೇಗೆ ಏರಿದೆವು? ನಿಜ. ಏರಿದೆವು ಎನ್ನುವುದಕ್ಕಿಂತ ನುಗ್ಗಿದೆವು. ನಾಲವ ತ್ತೈದು ಪ್ರವಾಸಿಕರು ಪಯಣಿಸಬೇಕಾದ ಆ ಬಸ್ಸಿ ನಲ್ಲಿ ನಾವು ೭೫ ಜನ! ಹೇಗೆ ಕುಳಿತಿರಬೇಕು ಹೇಗೆ ನಿಂತಿರಬೇಕು! ನಾವು ನಿಂತ ಭಂಗಿ ಚೆಲುವು ನೆನಿಸಿ ಕೊಂಡರೆ ಈಗಲೂ ಮೈ ಜುಮ್ಮೆನ್ನುವುದು. ಎರಡು ಗಂಟೆಗಳ ಕಸರತ್ತನ್ನು ಪೂರೈಸಿ ತೀರ್ಥಹಳ್ಳಿಯಲ್ಲಿ ಕೊನೆಗೊಮ್ಮೆ ನಾವು ಇಳಿದಾಗ ಮೈ ಕೈ ಮುಟ್ಟಿ ನೋಡಿಕೊಂಡೆವು. ನಮ್ಮ ಸ್ನೇಹಿತರ ಮುಖ ನೋಡಿ ದಾಗಲೇ ಒಂದು ಬಗೆಯ ಸಮಾಧಾನ. ಮತ್ತೊಂದು ರಾತ್ರಿಯನ್ನು ಒಂಟಿ ಮನೆಯ ಮಲೆನಾಡಿನ ಗ್ರಾಮ ದಲ್ಲಿ ಕಳೆದೆವು. ಈಗಲೂ ಮನೆಯ ಸುತ್ತ ಸುಂದರ ವಾದ ನೋಟ. ನಮ್ಮ ತರುಣ ಮಿತ್ರರಾದ ಶ್ರೀ ಸ್ವಾಮಿ, ಅವರ ತಂದೆ ಕಮಕೋಡು ನರಸಿಂಹ ಶಾಸ್ತ್ರಿಗಳು ಸಂಕದ ಹೊಳೆಯ ತಮ್ಮ ಮನೆಯನ್ನು ಕೃಷಿನಿಲಯ ಎಂದು ಕರೆದುದು ಯಥಾರ್ಥವೆನಿ ಸಿತ್ತು. ಶಾಸ್ತ್ರಿಗಳು ಒಳ್ಳೇ ವಿದ್ವಾಂಸರು, ಸಾಹಿತಿಗಳು ಅವರನ್ನು ಕಂಡು ಮಾತನಾಡಿದ್ದು ಸಂತೋಷತಂ ದಿತು. ಅಲ್ಲಿಯ ಕೆಲಸದ ಹೆಣ್ಣಾಳುಗಳು ತಲೆ ಗೊಂದು ಟೊಪ್ಪಿ ಧರಿಸುವುದರ ವಿವರಣೆ ಪಡೆ ದೆವು. ಬಿಸಿಲಿನ ಬೇಗೆ ತಟ್ಟದಂತೆ ಅದು ರಕ್ಷಣೆ ನೀಡುವುದು. ಅಗ್ಗದಲ್ಲಿಯೂ ದೊರೆಯುವುದು. ಆದರೆ ಅವರು ತುಂಬ ನಾಚುಗುಳಿಗಳು. ಅಪರಿಚಿತ ರೆದುರು ಹೆಣ್ಣಾಳುಗಳಂತೂ ಇರಲಿ, ಗಂಡಾಳೂ ಬರುವದಿಲ್ಲ; ಮುಖ ತೋರುವದಿಲ್ಲ. ಛಾಯಾ ಚಿತ್ರದಲ್ಲಿ ಅವರನ್ನು ಸೆರೆಹಿಡಿಯುವದಂತೂ ಇನ್ನೂ ಕಷ್ಟದ ಕೆಲಸ. ಆದರೂ ನಮ್ಮ ಕೇಸರಸಿಂಗರು ಅವರ ಮನವೊಲಿಸಿ ತುಂಬ ಉತ್ತಮವಾದ ರೀತಿ ಯಲ್ಲಿ ಅವರನ್ನು ಚಿತ್ರದಲ್ಲಿ ಸೆರೆಹಿಡಿದರು. ಮಲೆ ನಾಡಿನ ಅತಿಥ್ಯದ ಸವಿಯನ್ನು ನಾವು ಇಲ್ಲಿ ಮತ್ತೊ ಮ್ಮೆ ಕಂಡೆವು. ಅದು ಅವಿಸ್ಮರಣೀಯ.

## ಕವಿಶೈಲಿ

ತೀರ್ಥಹಳ್ಳಿಯಿಂದ ಶಿವಮೊಗ್ಗೆಗೆ ತೆರಳುವ ದಿನ ಬೆಳಿಗ್ಗೆ ಮಲೆನಾಡಿನಲ್ಲಿ ಹುಟ್ಟಿ, ಅದರಿಂದ ಸ್ಫೂರ್ತಿ ಪಡೆದು ರಾಷ್ಟ್ರಕವಿಯೆನಿಸಿದ ಕುವೆಂಪು ಅವರ ಕುಪ್ಪಳ್ಳಿ ಹಾಗೂ ಅವರು ಜನಿಸಿದ ಹಿರಿ



ಸಾಹಸಕ್ಕಾಗಿ ಕೈಮಾಡಿ ಕಠಿಣ ಕಲ್ಬಾಳೆ



←
ಮಲೆನಾಡಿನಲ್ಲಿ
ಸಮತೂಕದ
ಒಂದು ಸರ್ಕಸ್



ಹೊರಗೆ ಕಾಣಿಸಿಕೊಳ್ಳಲು ನಾಚುವ ಕೆಲಸಗಾರರು

ಕೊಡುಗೆಗಳನ್ನು ನೋಡಿಕೊಂಡು ಬಂದೆ. ಹಲವಾರು ಸ್ನೇಹಿತರೂ ನನ್ನ ಜೊತೆಗೆ ಬಂದಿದ್ದರು. ಕುಪ್ಪಳ್ಳಿಯಲ್ಲಿ ಶೇಷಪ್ಪಗೌಡರು ನಮ್ಮನ್ನು ಬರಮಾಡಿಕೊಂಡರು. ತುಂಬ ಆತಿಥ್ಯ ನೀಡಿದರು. ಅದೂ ಒಂದೇ ಮನೆಯ ಗ್ರಾಮ. ಕವಿವರ್ಯರದೊಂದೇ ಮನೆ. ಅವರು ಬಾಳಿ-ಬದುಕಿದ ಮನೆ. ಮನೆಯ ಹಿಂದುಗಡೆ ಸ್ವಲ್ಪ ದೂರ ನಡೆದು ಕಿರುಗುಡ್ಡವನ್ನು ಏರಿಹೋದರೆ ಕವಿಶೈಲ ಸಿಕ್ಕಿತು. ಆ ಕವಿಶೈಲದ ಮೇಲೆ ಕುಳಿತು ಕಂಡಿರಬಹುದಾದ ನಿಸರ್ಗದ ಚೆಲುವು, ಸೊಬಗು ಅವನ ಮನದಲ್ಲಿ ಮೂಡಿ ಬಂದ ಸ್ಫೂರ್ತಿ, ರಚಿಸಿದ ಕಾವ್ಯ ಇವುಗಳನ್ನು ಕಲ್ಪನೆ ಮಾಡಿ ತಿಳಿಯಲು ಸಾಧ್ಯವಿಲ್ಲ, ಅಲ್ಲಿ ಅನುಭವಿಸಿಯೇ ತಿಳಿಯಬೇಕು ಎಂಬುದು ಸ್ವಾನುಭವದಿಂದ ನಾನಂದುಕೊಂಡೆ. ಈ ಮೊದಲು ಅಲ್ಲಿ ನವಿಲುಗಳು ತುಂಬ ನರ್ತಿಸುತ್ತಿದ್ದವೆಂದೂ ವಿಪುಲವಾಗಿ ಗುಂಪುಕಟ್ಟಿಕೊಂಡು ತಿರುಗುತ್ತಿದ್ದವೆಂದೂ ಹೇಳಿದರು, ಆದರೆ ಆಗ ಮಾತ್ರ ಇರಲಿಲ್ಲ. ಅಲ್ಲಿಂದ ಕಾಣುವ ಗಿರಿ-ಶಿಖರಗಳ ರಮಣೀಯ ನೋಟ ನಿಜಕ್ಕೂ ಮನಕ್ಕೆ ಮುದ ನೀಡುವಂಥದು. ಅನೇಕ ಹಿರಿಯ ಸಾಹಿತಿಗಳ ಹೆಸರುಗಳೂ ಅಲ್ಲಿ ಕೆತ್ತಿರುವುದನ್ನು ಕಂಡೆ. ಅಲ್ಲಿಂದ ಅವರು ಜನಿಸಿದ ಗ್ರಾಮಕ್ಕೆ ಹೋಗಿ ಬಂದೆ. ಆ ಸ್ಥಳದಲ್ಲಿ ಒಂದು ಅಪೂರ್ವ ಸ್ಮಾರಕ ನಿರ್ಮಿಸುವ ವಿಚಾರ ನಡೆದುದು ತಿಳಿದಾಗ ತುಂಬ ಹರುಷವಾಯಿತು, ಮರಳಿ ಬರುವಾಗ ಪುಟ್ಟಪ್ಪನವರ ನೆಂಟರು ವೆಂಕಟಪ್ಪಗೌಡರಲ್ಲಿ ಮತ್ತೆ ಆತಿಥ್ಯ. ಮಧ್ಯಾಹ್ನ ತೀರ್ಥಹಳ್ಳಿಯಲ್ಲಿ ಸ್ನೇಹಿತರ ಸೊಗಸಾದ ಭೋಜನ ಸಮಾರಂಭ. ಅನೇಕ ಸ್ನೇಹಿತರ ಪರಿಚಯವಾಯಿತು, ಇಷ್ಟೆಲ್ಲ ಪೂರೈಸಿದ ಮೇಲೆ ತೀರ್ಥಹಳ್ಳಿಯ ಪರಿಚಯದ ಸಂಚಾರ; ಪುಟ್ಟಪ್ಪನವರು ತಮ್ಮ ಮೊದಲ ಕಾದಂಬರಿಯಲ್ಲಿ ಬಣ್ಣಿಸಿದ ಕಲ್ಲುಸಂಕ, ಮಡುಗಳನ್ನು ಕಂಣಾರೆ ಕಂಡಾಗ ಆ ಬಣ್ಣನೆಯ ಚೆಲುವಾದ ನೋಟ ಕಣ್ಣೆದುರು ಸುಳಿದು ಹೋಯಿತು. ಅದೊಂದು ಅಪೂರ್ವವಾದ ಅನುಭವ. ಸ್ನೇಹಿತರನ್ನು ಬೀಳ್ಕೊಂಡು ಶಿವಮೊಗ್ಗೆಗೆ ಬಂದಾಗ ಮನದಲ್ಲಿ ಒಂದು ಮೂಲೆಯುಲ್ಲಿ ಮುದವಿದ್ದರೆ, ಈ ಸ್ನೇಹಿತರನ್ನು ಬೇಗ ಅಗಲಿ ಬಂದೆನಲ್ಲ ಎಂಬ ನೋವು. ಅಲ್ಲದೇ ಈ ವರೆಗೆ ನನ್ನೊಂದಿಗೆ ಪ್ರವಾಸದಲ್ಲಿ ಪಾಲ್ಗೊಂಡಿದ್ದ ಶ್ರೀನಿವಾಸ ಉಡುಪರೂ ಇಲ್ಲಿಂದ ನಮ್ಮನ್ನು ಬೀಳ್ಕೊಂಡು ಹೋದರು. ನಾನು ಮಲೆನಾಡಿನ ಪ್ರವಾಸಕ್ಕೆ ಬರುವಂತೆ ಮಾಡಿದ ಮೊದಲಿಗರು ಅವರು. ನನ್ನ ಎಳೆತನದ ಆಕರ್ಷಣೆ ಗರಿಗೆದರಿ ನಿಲ್ಲುವಂತೆ ಅದಕ್ಕೆ ನೀರೆರೆದವರು. ನನ್ನ ಆತ್ಮೀಯರನ್ನು ಅಗಲುವಂಥ ವೇದನೆ. ಶಿವಮೊಗ್ಗದ ಅಂದಿನ ರಾತ್ರಿಯನ್ನು ನಾನು ಮಲೆನಾಡಿನ ವಿಶೇಷ ಭೋಜ್ಯಗಳು, ರೀತಿ ನೀತಿಗಳನ್ನು ಅವರಿಂದ ಮತ್ತೆ ಮತ್ತೆ ಕೇಳುವಲ್ಲಿ, ಕೇಳಿದ್ದನ್ನು ಅರಗಿಸಿಕೊಳ್ಳುವಲ್ಲಿ ಕಳೆದೆ. "ಊಟಕ್ಕೆ ಒಂದು ತಂಬುಳಿ, ಇರೋ



ಕಾಗದ ಕಾರಖಾನೆಯ ಹೊರನೋಟ

ಎಂಬ ಮಲೆನಾಡಿನ ಗಾದೆಯೊಂದನ್ನು ಹೇಳಿದಾಗ ಮಲೆನಾಡಿನ ಸಾರಸರ್ವಸ್ವ ಅದರಲ್ಲಿ ಅಡಗಿದೆಯೆಂದು ನನಗನಿಸಿತು. ಅಲ್ಲದೇ ನಗರದಲ್ಲಿ ಉಡುಪರ ಮನೆಯಲ್ಲಿ ಮಲೆನಾಡಿನ ಈ ತಿನಿಸುಗಳನ್ನು ನಮಗೆ ರುಚಿ ನೋಡಿಸಿಯೂ ಬಿಟ್ಟರು. ಅವು ರುಚಿಕರವಾಗಿರುವ ದರೊಂದಿಗೆ ಆರೋಗ್ಯಕರವೂ ಆಗಿದ್ದವು.

ಈ ಹಿಂದೊಮ್ಮೆ ಭದ್ರಾವತಿಗೆ ಹೋಗಿ ಬಂದಿದ್ದೆ. ಕಾಗದ ಕಾರಖಾನೆ, ಸಿಮೆಂಟ್ ಕಾರಖಾನೆ, ಕಬ್ಬಿಣದ ಕಾರಖಾನೆಗಳ ಸಮೀಪಕ್ಕೆ ಸುಳಿದಿದ್ದೆ. ಆದರೆ ಮಲೆನಾಡಿನ ಈ ಮೂರು ಮಹಾ ಉದ್ದಿಮೆಗಳ ಪರಿಚಯ ಮಾಡಿಕೊಂಡಿರಲಿಲ್ಲ. ಶಿವಮೊಗ್ಗ ಜಿಲ್ಲೆಯ ಪ್ರಸಿದ್ಧ ಅಧಿಕಾರಿಗಳಾದ ಶ್ರೀ ಪಿ. ಷಣ್ಮುಖಪ್ಪನವರು ಆ ಬಗೆಗಿನ ಏರ್ಪಾಡನ್ನು ಮಾಡಿ ಅವುಗಳನ್ನು ಕಣ್ಣಾರೆ ಕಾಣುವ ಅವಕಾಶವನ್ನು ಒದಗಿಸಿಕೊಟ್ಟರು. ಕಾಗದ ಕಾರಖಾನೆಗೆ ನಾವು ಹೋದಾಗ ಸಂಬಂಧಿಸಿದ ಅಧಿಕಾರಿಗಳು ಇರದ್ದರಿಂದ ತುಂಬ ಹೊತ್ತು ಕಾದೆವು. ಆದರೆ ಇಷ್ಟ ಪೂರ್ಣವಾಗಿ ಕೈಗೂಡಲಿಲ್ಲ. ಕಾರಖಾನೆಯನ್ನೇನೋ ನೋಡಿದೆ. ಅನೇಕ ಘಟ್ಟಗಳಲ್ಲಿ ಅದರ ನಿರ್ಮಿತಿಯನ್ನು ನಿರೀಕ್ಷಿಸಿದೆ. ತಂತ್ರಗಾರಿಕೆಯನ್ನು ಅರಿತೆ. ನಿಮಿಷಾರ್ಧದಲ್ಲಿ ರೀಮುಗಟ್ಟಲೆ ಕಾಗದವನ್ನು ಎಣಿಸಿ ಬಂಡಲು ಕಟ್ಟುವದನ್ನು ಕಂಡು ವಿಸ್ಮಿತನಾದೆ. ಆದರೆ ಇಲ್ಲಿಯೂ ರಕ್ಷಣಾ ನಿಯಮಗಳು. ನಮ್ಮ ಜನತೆಗಾಗಿ ಅದರ ಸಚಿತ್ರ ಪರಿಚಯ ಮಾಡಿಕೊಡುವ ಅವಕಾಶವಿಲ್ಲ. ಕಾಗದದ ಕಥೆಯನ್ನು ಚಿತ್ರಗಳಲ್ಲಿ ಸೆರೆಹಿಡಿದು ತೋರುವ ಅವಕಾಶವಿಲ್ಲ. ದೂರದಿಂದ ಕಾರಖಾನೆಯ ಹೊರನೋಟದ ಒಂದು ಚಿತ್ರವನ್ನು ತೆಗೆದುಕೊಳ್ಳಲು ಅದು ಹೇಗೊ ಅನುಮತಿ ದೊರೆತಿತ್ತೆನ್ನಿ. ಅಷ್ಟಾದರೂ ಆಯಿತಲ್ಲ ಎಂಬ ಸಮಾಧಾನದಿಂದ ಅಲ್ಲಿಂದ ಹೊರಟು ಬಂದೆವು.

## ಶ್ರೀ ಚಂದಪ್ಪ ಪಾಟೀಲರು

ಉಕ್ಕು ಕಬ್ಬಿಣ ಕಾರಖಾನೆಯ ಹೊಸ ಚೇರಮನ್ನರಾದ ಶ್ರೀ ಚಂದಪ್ಪ ಪಾಟೀಲರು ತುಂಬ ವರ್ಣಮಯ ವ್ಯಕ್ತಿ. ಸರಕಾರದ ವಿವಿಧ ಮಹತ್ವದ-ಹೊಣೆಗಾರಿಕೆಯ ಹುದ್ದೆಗಳನ್ನು ನಿರ್ವಹಿಸಿ ಈ ಅತಿ ಮಹತ್ವದ ಸ್ಥಾನ ಪಡೆದ ಶ್ರೀ ಪಾಟೀಲರು ಗುಲಬುರ್ಗಾ ಜಿಲ್ಲೆಯ ಗಡಿಭಾಗದವರು. ಅವರು ಕನ್ನಡ, ಅವರ ಹೆಂಡತಿ ಮರಾಠಿ, ಮಕ್ಕಳು ಹಿಂದಿ, ಇಂಗ್ಲೀಷ, ಮರಾಠಿ ಮಾತನಾಡುವವರು. ನಗುನಗುತ್ತ ಈ ಮಾತು ಹೇಳಿದ ಪಾಟೀಲರು, "ಹೀಗಿದ್ದರೂ ನಮಗೆ ಭಾಷಾ ಸಮಸ್ಯೆಯೆನಿಸುವದಿಲ್ಲ" ಎಂದು ಹೇಳಿ, ಮನಸ್ಸು ಮಾಡಿದರೆ ಈ ಸಮಸ್ಯೆಗೆ ಅವಕಾಶ ದೊರೆಯದಂತೆಯೇ ನಡೆದುಕೊಳ್ಳಬಹುದು ಎಂದರು. ದಕ್ಷ ಅಧಿಕಾರಿಗಳೆಂದು ಅವರು ಹೆಸರಾಗಿದ್ದಾರೆ. ಭದ್ರಾವತಿಯ ಕಾರಖಾನೆಯ ದುಃಸ್ಥಿತಿಯನ್ನು ಸುಧಾರಿಸಲು ಅವರು ನಾನಾ ಕ್ರಮಗಳನ್ನು ನಿಯೋಜಿಸುತ್ತಿದ್ದಾರೆ; ಅವಿರತವಾಗಿ ಶ್ರಮಿಸುತ್ತಿದ್ದಾರೆ. ಅವರಿಗೆ ಈ ಕಾರಖಾನೆ ಸಂಪೂರ್ಣ ಲಾಭದಾಯಕವಾಗುವ ಭರವಸೆಯಿದೆ. ತಾನೂ ಸಹ ಒಬ್ಬ ಕೆಲಸಗಾರನೆಂದು ಹೇಳಿಕೊಳ್ಳುವ ಅವರು, "ಕೆಲಸಗಾರರು, ವ್ಯವಸ್ಥಾಪಕರು ಎಂಬ ಭೇದವಿಲ್ಲ" ಎನ್ನುತ್ತಾರೆ. ಎಲ್ಲರಿಗೂ ಸಾಕಷ್ಟು ಸಂಬಳ ದೊರೆಯುತ್ತಿದೆ. ಇಲ್ಲಿ ಕನಿಷ್ಟ ಸಂಬಳ ೨೪೪ ರೂ. ಇದೆ. ಸದ್ಯ ಅಷ್ಟಿ ಹೆಸ್ಸೊಂದು ...

... ನಿಯರ ಬಗೆಗೆ ತುಂಬ ಭರವಸೆಯಿದೆ. "ನಮ್ಮ ಇಂಜಿನಿಯರರು ತುಂಬ ಒಳ್ಳೆ ಕೆಲಸಗಾರರು. ಅವರು ಅದ್ಭುತರಾಗಿದ್ದಾರೆ" ಎಂದರು. ಈ ಕಾರಖಾನೆಯ ಬಂಡವಳ ನಾನು ಹೋದಾಗ ಅವರು ತಿಳಿಸಿದ ಮೇರೆಗೆ ೫೫ಕೋಟಿ ರೂ. ಇದ್ದಿತು. ಈಚೆಗೆ ಕೇಂದ್ರ ಸರಕಾರ ಅದರಲ್ಲಿ ಪಾಲ್ಗೊಂಡಿದ್ದು ಹತ್ತು-ಹನ್ನೆರಡು ಕೋಟಿಗಳಷ್ಟು ಹೆಚ್ಚಿದೆ. ಸದ್ಯ ೭೭ಸಾವಿರ ಟನ್ ಉತ್ಪಾದಿಸುತ್ತಿರುವ ಈ ಕಾರಖಾನೆಯ ಸಾಮರ್ಥ್ಯವನ್ನು ೧। ಲಕ್ಷ ಟನ್ನಿಗೆ ಏತ್ತರಿಸುವ ಹಂಬಲವನ್ನು ಅವರು ಇರಿಸಿಕೊಂಡಿದ್ದಾರೆ. ಅದಕ್ಕನುಗುಣವಾಗಿ ಮೊದಲ ಮೂರು ಕುಲಿಮೆಗಳ ಜೊತೆಗೆ ಈಗ ಎರಡು ಹೊಸವನ್ನು ಸೇರಿಸಲಾಗಿದೆ.

## ಉಕ್ಕಿನ ಕಾರಖಾನೆ

ಈ ಉಕ್ಕಿನ ಕಾರಖಾನೆಯನ್ನು ವಿವರವಾಗಿ ನೋಡಲು ಹಂತ ಹಂತವಾಗಿ ಪರಿಚಯ ಮಾಡಿಕೊಳ್ಳಲು ದಿನಗಳಾದರೂ ಬೇಕು. ನಮ್ಮೊಂದಿಗೆ ಕಾರಖಾನೆಯ ದರ್ಶನ ಮಾಡಿಸಲು ಬಂದ ಶಿಫ್ಟ್ ಇಂಜಿನಿಯರ ಸುಂದ್ರನ್ ತುಂಬ ಚೂಟಿಯಾದವರು. ಮೈಸೂರು ಮಾದರಿ ನಾಡಾಗಿ ಮಾಡಿದ ಬೀಡು ಕಬ್ಬಿಣದ ಈ ಗೂಡನ್ನು ಹಂತ ಹಂತವಾಗಿ ವಿವರವಾಗಿ ಅದರ ಪೂರ್ಣ ಪರಿಚಯವಾಗುವಂತೆ ನಮಗೆ ತೋರಿಸಿದರು. ಅದಿರು ಇತರ ವಸ್ತುಗಳೊಂದಿಗೆ ಸೇರಿ ಉಕ್ಕಾಗಿ ಪರಿವರ್ತನ ಹೊಂದಿ ನಾನಾ ಆಕಾರ, ರೂಪಗಳನ್ನು ತಳೆವ ಬಗೆಯನ್ನು ನಾವು ಕಂಡೆವು. ಕಬ್ಬಿಣದ ಚೂರುಗಳನ್ನು ಮತ್ತೆ ಶುದ್ಧಗೊಳಿಸಿ ನಾನಾ ಆಕಾರದಲ್ಲಿ ಅದನ್ನು ಪುನಃ ಸಿದ್ಧಪಡಿಸು...

... ಕಂಡಂತೆ ಹೊಳೆಯುತ್ತ ನಾನಾ ಆಕಾರಗಳನ್ನು ಪಡೆವ ನೋಟ ಅದ್ಭುತವಾದದ್ದು. ಕಾದು ಕೆಂಪಗಾದ ಈ ಸಳಿಗಳು ಕಾಲಲ್ಲಿ ಹರಿದು ಬರುತ್ತವೆಯೋ ಎಂಬ ಭಯವು ಕೂಡ ಆಗುವುದು. ಅದನ್ನು ಮಯನ ಅದ್ಭುತ ಸೃಷ್ಟಿಗೆ ಹೋಲಿಸಬಹುದೆಂದು ನನಗೆ ತೋರಿತು.

ನಿಜವಾಗಿಯೂ ತುಂಬ ಪ್ರಗತಿಪರ ರೈತರೆನಿಸಿದ ಶ್ರೀ ದೇವಂಗಿ ರತ್ನಾಕರ ಅವರನ್ನು ನಾನಿಲ್ಲಿ ಕಂಡು ಮಾತನಾಡಿದೆ. ಅವರು ಹೊಸ ಬಗೆಯಲ್ಲಿ ಅಡಿಕೆ ಕೃಷಿ ಮಾಡಿದ್ದಾರೆ. ಒಂದು ಗಿಡದ ನೆರಳು ಇನ್ನೊಂದರ ಗೊಂಚಲಿಗೆ ಬೀಳುವಂತೆ ಗಿಡಗಳನ್ನು ನೆಟ್ಟಿರುವರು. ಆ ಅಂದವಾದ ನೋಟ ನನ್ನನ್ನು ತುಂಬ ಬೆರಗುಗೊಳಿಸಿತು. ಅವರು ಭತ್ತದಲ್ಲಿಯೂ ಎರಡು ಮೂರು ಬೆಳೆ ತೆಗೆಯುತ್ತಾರೆ. ಎಕರೆಗೆ ೧೮ ಪಲ್ಲದ ಬದಲು ಈಗ ೭೦–೮೦ ಪಲ್ಲ ಭತ್ತವನ್ನು ಬೆಳೆಸುತ್ತಾರೆ. ಅವರು ಸ್ವತಃ ಕೃಷಿಕರಾಗಿರುವದರೊಂದಿಗೆ ಅಡಿಕೆ ಮಾರಾಟಗಾರರೂ ಆಗಿದ್ದಾರೆ. ಶಿವಮೊಗ್ಗದಿಂದ ೬೦ಕೆ.ಜಿ. ತೂಕದ ಒಂದೂ ಕಾಲು ಲಕ್ಷ ಮೂಟೆಗಳು ಪ್ರತಿ ವರುಷ ಮಾರಾಟವಾಗುವದಾಗಿ ತಿಳಿಸಿದರು. ಇಲ್ಲಿಯ ಬೆಟ್ಟ ಮಾತ್ರ ಸಣ್ಣದು. ನೆಟ್ಟ ಆರು ವರುಷದಲ್ಲಿ ಫಸಲು ಬರುವುದು. ಆದರೆ ಈ ವಿಷಯವಾಗಿ ಇನ್ನೂ ಶೋಧವಾಗಬೇಕೆಂದವರು ಹೇಳಿದರು. ಅವರು ಉತ್ತಮ ತಳಿಯ ರಾಸುಗಳನ್ನು ಸಾಕಿದ್ದಾರೆ.

## ಗಿರಿಧಾಮ ಕೆಮ್ಮಣ್ಣುಗುಂಡಿ

ಶಿವಮೊಗ್ಗದಿಂದ ತರಿಕೇರಿ ಮಾರ್ಗವಾಗಿ ಚಿಕ್ಕ



→ ಶಿವಮೊಗ್ಗೆಯಲ್ಲಿ ಶ್ರೀ ರತ್ನಾಕರ ಅವರ ತೋಟದಲ್ಲಿ ಹೊಸ ಬಗೆಯ ಅಡಿಕೆ ಕೃಷಿ

ಮಂಗಳೂರು ಜಿಲ್ಲೆಯಲ್ಲಿರುವ ತುಂಬ ಆಹ್ಲಾದಕರ ಆದರೆ ಅಪ್ರಸಿದ್ಧ ಗಿರಿಧಾಮ ಕೆಮ್ಮಣ್ಣುಗುಂಡಿ ಯನ್ನು ಪ್ರವೇಶಿಸಿದೆ. ಗಿರಿಮಾರ್ಗದಲ್ಲಿ ಸಾಗಿ ಬರ ಬೇಕು. ಎರಡೂ ಪಕ್ಕದಲ್ಲಿ ಕಾಫಿ ತೋಟ. ನಾನು ಹೋದಾಗ ಕಾಫಿಗಿಡಕ್ಕೆ ಔಷಧಿ ಸಿಂಪಡಿಸಿದ್ದ ರೆಂದು ಕಾಣುತ್ತದೆ. ಸುವಾಸನೆಯ ಬದಲು ವಿಷಮ ವಾಸನೆ ತೇಲಿ ಬರುತ್ತಿತ್ತು. ಇಲ್ಲಿಯ ತೋಟ ಗಾರಿಕೆ ಅಧಿಕಾರಿಗಳಾದ ಶ್ರೀ ಟಿ.ಕೆ. ಕಂಬಯ್ಯನವರು ತುಂಬ ಉತ್ಸಾಹಶಾಲಿಗಳು. ಕೆಮ್ಮಣ್ಣುಗುಂಡಿ ಆಕರ್ಷಕ ವೈವಿಧ್ಯಮಯ ಗಿರಿಧಾಮವಾಗುವಂತೆ ಶ್ರಮಿಸಿದ್ದಾ ರವರು. ಹಿಮಾಲಯದ ಕುಲೂಕೊಳ್ಳದಲ್ಲಿ ಕಾಣು ವಂತೆ, ಟೇರೇಸ್‌ಗಾರ್ಡನ್ನಿನಿಂದ ಹೊಸ ಸೌಂದರ್ಯ ವನ್ನು ಈ ಧಾಮಕ್ಕೆ ತಂದು ಕೊಟ್ಟಿದ್ದಾರೆ. ಹತ್ತು ಸಾವಿರ ರೂಪಾಯಿ ವೆಚ್ಚಮಾಡಿ ರಚಿಸಿದ ಈ ತೋಟ ಈಗಾಗಲೇ ಅವರಿಗೆ ಫಸಲು ಕೊಟ್ಟಿದೆ. ಆ ತೋಟ ದಲ್ಲಿ ಮೆಟ್ಟಿಲು ಮೆಟ್ಟಿಲುಗಳಲ್ಲಿ ಬೆಳೆದ ಹಸಿರು ತರಕಾರಿ, ನೀರು ತಾನೇ ತಾನಾಗಿ ಹರಿದು ಬೀಳುವು ದು ಕಣ್ಣಿಗೊಂದು ಹಬ್ಬ. ಅತಿ ಕೆಳಗೆ ಕೆಲಸಮಾಡುವ ಕೆಲಸದಾಳುಗಳು ಗೊಂಬೆಗಳಂತೆ ಕಾಣುತ್ತಿದ್ದರು. ಈ ತೋಟವನ್ನು ಕ್ರಮಿಸಿ ಕೆಲ ಅಂತರದ ಮುಂದೆ ಹೋದರೆ ಸಾಂತ ಜಲಪಾತ ಸಿಕ್ಕುವುದು. ಇದು ಕಿರಿದು. ಆದರೆ ಇಲ್ಲಿಂದ ಕಾಣುವ ಗಿರಿ ಕಂದರಗಳ ನೋಟ ನಯನಮನೋಹರವಾದುದು. ನಾಲ್ಕು ತ್ರೇಳು ನೂರು ಅಡಿ ಎತ್ತರದಲ್ಲಿರುವ ಈ ಗಿರಿ ಧಾಮ ಬಡವರ ಕಾಮಧೇನು. ಹೆಚ್ಚು ವೆಚ್ಚ ವಿಲ್ಲದೇ ಸುಖವಾಗಿ ಇಲ್ಲಿರಬಹುದು. ಸುಂದರ ಹೆಸರಿನ ಸುಖಾಸೀನದ ಅಂದವಾದ ಕುಟೀರಗಳು. ಈ ಕುಟೀರಗಳ ಹೊರಭಾಗದಲ್ಲಿ ಕುಳಿತು ನೋಡಿ ದರೂ ಕಣ್ಣು ಹರಿವವರೆಗೆ ವನಶ್ರೀಯನ್ನು ಕಾಣ ಬಹುದು; ಹೃದಯಸ್ಥಗೊಳಿಸಬಹುದು. ಸುಂದರ ವಾದ ಚೊಕ್ಕಟವಾದ ಹೂದೋಟ, ಗೃಹತೋಟ. ಸುಮಾರು ಐದುನೂರು ಜಾತಿಯ ಅಂದಚಂದದ ಬಣ್ಣಗಳ, ಒಂದೇ ಗಿಡದಲ್ಲಿ ಹಲವಾರು ಬಣ್ಣಗಳಿಂದ ನಯನಾಕರ್ಷಕವಾದ, ಗುಲಾಬಿಗಳನ್ನು ನೋಡ ಬಹುದು. ಇನ್ನೂ ಅನೇಕ ಬಗೆಯ ಹೂಗಳು ನಿಮ್ಮನ್ನು ಇಲ್ಲಿ ಕೈ ಮಾಡಿ ಕರೆಯುತ್ತಿವೆ. ಇದ ಕ್ಕಿಂತ ಮಿಗಿಲಾಗಿ ಪರ್ವತಶ್ರೇಣಿಗಳು ಶಂಕುವಿನಾ ಕಾರದಲ್ಲಿ ತೋರಿಕೆಗೆ ಬರಡಂತೆ ಕಂಡರೂ ಮನಸ್ಸನ್ನು ತನ್ನತ್ತ ಸೆಳೆದುಕೊಳ್ಳುತ್ತಿವೆ. ನನಗಂತೂ ಆ ಪರ್ವತ ಶ್ರೇಣಿಗಳನ್ನು ನೋಡಿದಷ್ಟೂ ಸಾಲದು ಎನಿಸಿತು. ಮತ್ತೆ ಮತ್ತೆ ನೋಡುತ್ತ ನಿಲ್ಲುತ್ತಿದ್ದೆ. ಅವುಗಳೇನೊ ಒಂದು ಮೂಕ ಸಂದೇಶ ಬೀರುವಂತೆ ತೋರುತ್ತಿ ದ್ದವು! ಕವಿ ಹೃದಯವಾಗಿದ್ದರೆ ಕಾವ್ಯದ ಬುಗ್ಗೆ ಚಿಮ್ಮುತ್ತಿತ್ತೇನೊ! ನಾನೂ ಒಂದೆರಡು ಸಾಲು ಗಳನ್ನು ಗುಣಗುಣಿಸಿದೆ. ಆದರೆ ಮನಸ್ಸು ಹೇಳಿತು: "ಸವಿ. ಸವಿ. ಈ ದೃಶ್ಯವ ಸವಿ. ನೀನೊಮ್ಮೆ ಇಲ್ಲಿಂದಿ ಳಿದು ನಿನ್ನ ಬೆಳವಲ ನಾಡು ಸೇರಿದರೆ ಮತ್ತೆ ಇಂಥ ಗಿರಿಶಿಖರ ಕಂಡೀಯಾ? ಅದರ ಚೆಲುವು, ಕಂಗೊಳಿ ಸೀತೆ" ಹೀಗಾಗಿ ನಾನು ಮೂಕನಾಗಿ ಅತ್ತ ದೃಷ್ಟಿ ಸುತ್ತಲೇ ನಿಲ್ಲುತ್ತಿದ್ದೆ. ನಾನಲ್ಲಿಂದ ಇಳಿದು ಬರು ವಾಗಲೂ ನನ್ನ ಮನಸ್ಸೆಲ್ಲ ಅತ್ತವೇ ಹರಿಯುತ್ತಿತ್ತು. ನಿಜವಾಗಿಯೂ ಆ ನೋಟ ಮನಕ್ಕೆ ನೆಮ್ಮದಿ ನೀಡು ತ್ತಿತ್ತು; ಮುದಗೊಳಿಸುತ್ತಿತ್ತು. ಜೀವನದ ಭವ್ಯತೆ ಯನ್ನು, ಉತ್ತುಂಗತೆಯನ್ನು ಈ ಗಿರಿಶಿಖರ ತೋರುತ್ತವೆಯೊ ಎಂದುಕೊಂಡೆ ನಾನು. ಅದನ್ನು ಕಣ್ಣು-ಮನಗಳಲ್ಲಿ ತುಂಬಿಕೊಂಡೆ!

ಈ ನಿಸರ್ಗದ ಚೆಲುವಿನ ಜೊತೆಗೆ ಕಬ್ಬಿಣದ ಅದಿರನ್ನು ತಣಿಗೆಬೈಲು ಪ್ರದೇಶಕ್ಕೆ ಸಾಗಿಸಲು ಹಾಕಿದ ರೋಪವೇ ಇನ್ನೊಂದು ಆಕರ್ಷಣೆ. ಕಣಿವೆ ಮಾರ್ಗದ ಗುಂಟ ಅದಿರು ತುಂಬಿದ ಬಕೆಟ್ಟುಗಳು ಇಳಿಯು ವುದು ಮಕ್ಕಳಿಗೇಕೆ ಹಿರಿಯರಿಗೂ ನಿಂತು ನೋಡು ವಂತೆ ಮಾಡುವ ನೋಟ. ನಾನು ಹೋದಾಗ ಬೇಸಿ ಗೆಯ ಕೊನೆ. ಪ್ರವಾಸಿಕರು ಕಡಿಮೆಯೆಂದರೂ ಗದ್ದಲ ವಿತ್ತು. ಆದರೂ ದಟ್ಟಣೆ ಕಡಿಮೆ. ಶ್ರೀ ಕಂಬಯ್ಯ ನವರು ಹೇಳಿದಂತೆ ಅದರ ಪ್ರಚಾರ ಅಷ್ಟು ಆಗಿಲ್ಲ.



ಕೆಮ್ಮಣ್ಣುಗುಂಡಿಯ ಟೆರೇಸ್ ಗಾರ್ಡನ್ : ಕಂಬಯ್ಯನವರ ಫಲಕಾರಿ ಪರಿಶ್ರಮದ ನಿದರ್ಶನ

ಹಾಗೆ ಆದಾಗ ಈ ಗಿರಿಧಾಮ, ಈ ನಿಸರ್ಗದ ಚೆಲುವಿನ ತಾಣ ಸಾಕಷ್ಟು ಪ್ರವಾಸಿಕರನ್ನು ಆಕರ್ಷಿಸದಿರದು.

## ಬೆಟ್ಟದಿಂದ ಬಟ್ಟಲಿಗೆ

ಅಲ್ಲಿಂದ ನೇರವಾಗಿ ಚಿಕ್ಕಮಗಳೂರಿನ ಬಸ್ಸು ದೊರಕಿದ್ದರೆ ಶ್ರೀ ಮಾಸ್ತಿಯವರು ತುಂಬ ಬಣ್ಣಿಸಿದ ಬಾಬಾಬುಡನ್‌ಗಿರಿಯನ್ನು ನೋಡಿಕೊಂಡು ಹೋ ಗಲು ಆಗುತ್ತಿತ್ತು. ಅದು ಇನ್ನೂ ಎತ್ತರವಾದ ಸ್ಥಳ. ದತ್ತಾತ್ರೇಯ ಪೀಠ ಅಲ್ಲಿದೆ. ನಾನಾ ಬಗೆಯ ಗಿಡ ಮೂಲಿಕೆ ಬೆಳೆವ ಸ್ಥಳ. ಅಲ್ಲಿಯ ಕಾಫಿ ಶ್ರೇಷ್ಠವೆಂದು ಹೆಸರು ಪಡೆದಿದೆ. ಮನಸ್ಸಿಗೊಂದು ಅರೆಕೊರೆ. ಬಣ್ಣನೆ ಯಿಂದಲೇ ಅದರ ನೋಟದ ಬಗೆಗೆ ತೃಪ್ತಿ ತಳೆಯ ಬೇಕಾಯಿತು. ಚಿಕ್ಕಮಗಳೂರು ಹೆಸರಾದ ಕಾಫಿ ಕೇಂದ್ರ. ಸುತ್ತಲೂ ಕಾಫಿ ತೋಟಗಳು ಆವರಿಸಿವೆ. ನಾನು ಹೋದ ಸಂದರ್ಭ ಹೂ ಬಿಡುವ ಕಾಲವೂ ಅಲ್ಲ; ಹಣ್ಣು ಬಿಡುವ ಕಾಲವೂ ಅಲ್ಲ, ಆದರೂ ಕಾಫಿ ತೋಟ ದಲ್ಲಿ ಸುತ್ತಾಡಿ ಅನುಭವಿಸುವ ತವಕ. ಬಿ. ಎಚ್.ವಿ ಪೈ ಅವರ ವಸಂತಕೂಲ ತೋಟ ಊರಿನ ಸಮೀಪ ವಿದ್ದುದರಿಂದ ಅದು ತುಂಬಾ ದೊಡ್ಡದೂ ಇದ್ದುದ ರಿಂದ ಅದನ್ನು ನಿರೀಕ್ಷಿಸಿದೆ. ನನ್ನ ಸುದೈವದಿಂದ ಒಂದೆ ರಡು ಗಿಡಗಳಲ್ಲಿ ಹೂವು ಕಾಣಿಸಿತು. ಕೆಲಗಿಡಗಳಲ್ಲಿ ಹಣ್ಣೂ ಇತ್ತು. ಕಾಫಿ ಹೂವಿನ ಪರಿಮಳ ಸಿಕ್ಕಿದರೆ, ಹಣ್ಣಿನ ಆಕಾರ ರಚನೆ ನೋಡಲು ದೊರೆಯಿತಲ್ಲ ಎಂಬ ಸಂತೋಷ. ಕಾಫಿ ತೋಟದಲ್ಲಿ ಕೃಷಿಯ ವಿವರ ಗಳನ್ನು ಅರಿತೆ. ಅಲ್ಲಿಯೇ ನರ್ಸರಿ ಏರ್ಪಡಿಸಿದ್ದನ್ನೂ ಕೆಲಸಗಾರರು ಕೆಲಸದಲ್ಲಿ ತೊಡಗಿದ್ದನ್ನೂ ಕಂಡೆ. ನಂತರ ಶ್ರೀ ಪೈಯವರೊಂದಿಗೆ ಮಾತನಾಡುವಾಗ ಕಾಫಿ ಉದ್ಯಮದ ಚಿತ್ರವೇ ನನಗೆ ಸಿಕ್ಕಿತು. ಮಲೆನಾಡಿನ ಮುಖ್ಯವಾದ ಕೃಷಿ ಉದ್ಯಮಗಳಲ್ಲಿ ಇದು ಪ್ರಮುಖ ವಾದುದು. ಭಾರತದಲ್ಲಿ ಒಂದು ಲಕ್ಷ ಟನ್ ಕಾಫಿ ಉತ್ಪ ತ್ತಿಯಾಗುತ್ತಿದ್ದರೆ ಬಹುಪಾಲು ಮೈಸೂರು ರಾಜ್ಯದ ಚಿಕ್ಕಮಗಳೂರು ಕೊಡಗು, ಹಾಸನ ಹಾಗೂ ಮೈಸೂರು ಜಿಲ್ಲೆಗಳಿಂದ ಬರುವುದು. ಇದು ತುಂಬ ಪರಿಶ್ರಮದ ಉದ್ದಿಮೆ. ಕಾಫಿ ಬೆಳೆಯುವವರು ಕೃಷಿಕರಾದರೂ ಅದು ಹಣ್ಣಾಗಿ, ಅದರ ಬೀಜಗಳು ಬೇರ್ಪಟ್ಟ ನಂತರ ಸರ ಕಾರದ ನಿಯಂತ್ರಣ. ಅವರ ಮುಖಾಂತರವೇ ಎಲ್ಲಾ ವ್ಯವಹಾರ ಸಾಗಬೇಕು. ಕೃಷಿಯೂ ಅಷ್ಟೇ. ಒಂಭತ್ತು ದಿನಗಳ ವರೆಗೆ ಇದ್ದ ಮೊಗ್ಗು ಏಪ್ರಿಲ ಮೇ ತಿಂಗಳ ಹೊತ್ತಿಗೆ ಹೂಬಿಟ್ಟರೆ ಜೂನದಲ್ಲಿ ಕಾಯಿ, ಡಿಸೆಂಬರ ದಲ್ಲಿ ಹಣ್ಣಾಗಿ ಫಸಲು ಬರುವುದು. ಜಾನೇವರಿ ಯಲ್ಲಿ ಕೃಷಿ ಪೂರ್ಣವಾಗುವುದು. ಆದರೆ ಕೃಷಿಕಾರ್ಯ ಇಡೀ ವರುಷ ಸಾಗಬೇಕು. ಮೊದಲ ೫ ವರ್ಷ ಫಸಲನ್ನು ನಿರೀಕ್ಷಿಸುವಂತಿಲ್ಲ. ಎರಡನೇ ವರುಷದಲ್ಲಿ ೩ ಅಡಿ ಬೆಳೆದರೆ ೩ನೇ ವರುಷದಲ್ಲಿ ೪ ಅಡಿ. ಗಿಡದ ಪರಮಾ ವಧಿ ಬೆಳವಣಿಗೆ ೪½ ಅಡಿ. ಭೂಮಿ ಪೂರ್ಣ ಸಮ ತಟ್ಟಾಗಿರಬಾರದು. ಇಳಿಜಾರು ಬಹಳವಾಗಿರಬಾರದು. ಎತ್ತರ ಕನಿಷ್ಠ ೩,೨೦೦ ಅಡಿ. ಅತಿಯೆಂದರೆ ೬ ಸಾವಿರ ಅಡಿ. ಮಳೆ ೬೦–೭೦ ಅಂಗುಲ ಬೇಕು. ಗಿಡಗಳ ನಡುವಿನ ಅಂತರ ೮ ಅಡಿ ಇರಬೇಕು. ಒಂದು ಎಕರೆಗೆ ಒಂದು ಸಾವಿರಾಇನೂರು ಗಿಡಗಳು. ಒಂದು ಗಿಡಕ್ಕೆ ಫಸಲು ಬರತೊಡಗಿದ ನಂತರ ೨೦ರಿಂದ ೫೦



ರಮಣೀಯವಾಗಿ ಕಂಗೊಳಿಸಿ ಮನಸೆಳೆವ ಚಾರವಾಡಿ ಘಟ್ಟ

ಪೌಂಡು ಉತ್ಪಾದನೆ ದೊರೆವುದು. ಒಂದು ವರ್ಷ ಅಧಿಕವಾಗಿ ಬಂದರೆ ಮರುವರ್ಷ ಆ ಗಿಡದಿಂದ ಉತ್ಪಾದನೆ ಸಿಕ್ಕುವದಿಲ್ಲ. ಮೂರು ಸಲ ಹಣ್ಣುಗಳನ್ನು ಆರಿಸುವುದು ಆನಂತರ ಕಾಯಿಗಳನ್ನು ಕತ್ತರಿಸಿ ಹಾಕಲಾಗುವುದು. ಕೃಷಿ ಮಾತ್ರ ಹನ್ನೆರಡು ತಿಂಗಳೂ ನಡೆಯಬೇಕು. ಇಂಥ ಒಂದು ತೋಟಕ್ಕೆ ಸುಮಾರು ೧೫೦ ಕೆಲಸಗಾರರು ಬೇಕು. ಬೆಟ್ಟದಿಂದ ಬಟ್ಟಲಿಗೆ ಬರುವ ವರೆಗಿನ ಕಾಫಿಯ ಈ ಕಥೆ ತುಂಬ ರೋಮಾಂಚಕವೂ ರೋಚಕವೂ ಆಗಿದೆ. ಅಲ್ಲದೇ ಅದನ್ನು ಶ್ರೀ ಪೈಯವರಂತಹ ಉದ್ಯಮಿಗಳ ಬಾಯಿಯಿಂದಲೇ ಕೇಳಬೇಕು ಎನಿಸಿತು. ಅವರು ಹೇಳುತ್ತಿದ್ದಂತೆ ಹೊತ್ತು ಸರಿದುದೂ ಗೊತ್ತಾಗಲಿಲ್ಲ.

## ಶೃಂಗೇರಿ

ಈ ಜಿಲ್ಲೆಗೇ ಸೇರಿದ, ಶಂಕರಾಚಾರ್ಯರು ಅದ್ವೈತ ಪೀಠ ಸ್ಥಾಪಿಸಿದ ಶೃಂಗೇರಿಯನ್ನು, ಜಗದ್ಗುರುಗಳನ್ನು ನಾನು ಕಂಡು ಸಂದರ್ಶಿಸಿದ್ದೆ. ಶಿವಮೊಗ್ಗೆಯಿಂದಲೇ ನೇರವಾಗಿ ಹೋಗಿದ್ದೆ. ಆದರೆ ಬಸ್ಸು ಪಯಣಿಸುತ್ತಲೇ ಇತ್ತು; ಕೈ ಮಾಡಿದಲ್ಲಿ ನಿಲ್ಲುತ್ತಿತ್ತು. ಸಾಯಂಕಾಲ ಶೃಂಗೇರಿ ತಲುಪಿ ಶಾರದಾಂಬೆಯ ದರ್ಶನ ಮಾಡಿದಾಗ ಮನಸ್ಸು ತಣಿಯಿತು. ತುಂಬ ಸುಂದರವಾದ ಮೂರ್ತಿ. ರತ್ನಖಚಿತ ಆಭರಣಗಳಿಂದ ಶೋಭಿತಳಾದ, ಹಸನ್ಮುಖಿಯಾದ ದೇವಿಯು ಭಕ್ತರಿಗೆ ವರದ ಹಸ್ತನೀಡುವಂತೆ ಕಂಡಿತು. ಅಂದೇ ರಾತ್ರಿ ಚಂದ್ರಮೌಳೀಶ್ವರನ ಪೂಜಾ ನಿರತ ಜಗದ್ಗುರುಗಳನ್ನು ಕಂಡೆ. ಮರುದಿನ ಅವರ ಸಂದರ್ಶನವನ್ನು ಮಾಡಿದೆ. ವಿದ್ಯಾಶಂಕರ ದೇವಾಲಯದ ಶಿಲ್ಪವೈಭವ ಕಣ್ಣಾರೆ ಕಾಣಬೇಕು. ಹನ್ನೆರಡು ಕಂಬಗಳು, ನವಗ್ರಹಗಳು, ಬಸವ, ಆನೆ, ಕಲ್ಲಿನ ಚೆಂಡುಗಳು ಹೀಗೆ ಅಪೂರ್ವ ಶಿಲ್ಪವನ್ನು ನಾವಿಲ್ಲಿ ಕಾಣುತ್ತೇವೆ. ಯಾತ್ರಿಕರಿಗಾಗಿ ಮಠದವರು ಅನೇಕ ಸೌಕರ್ಯಗಳನ್ನು ಕಲ್ಪಿಸಿದ್ದಾರೆ. ತುಂಗಾತೀರದಲ್ಲಿ ಪವಡಿಸಿದ ಈ ಕ್ಷೇತ್ರ ಪ್ರಶಾಂತ ವಾತಾವರಣದಿಂದ ಶಾಂತ ಜೀವನಕ್ಕೆ ತುಂಬ ಪೇಳಿ ಮಾಡಿಸಿದಂತಿದೆ. ಇಲ್ಲಿ ಎಷ್ಟು ಸಮಯ ಕಳೆದರೂ ಬೇಸರವೆಂಬುದಿಲ್ಲ.

ಇಲ್ಲಿಂದ ಆಗುಂಬೆ ಸೋಮೇಶ್ವರ ಮಾರ್ಗವಾಗಿ ಉಡುಪಿಗೆ ಬಂದು ಶ್ರೀ ಹರಿದಾಸ ಭಟ್ಟರು ಪ್ರಿನ್ಸಿಪಾಲರಾಗಿರುವ ಎಂ. ಜಿ. ಎಂ. ಕಾಲೇಜಿನ ಅತಿಥಿ ಗೃಹದಲ್ಲಿ ತಂಗಿದ್ದೆ, ಹಿಂದಿನ ಸಲ ಮುದ್ದಣ ಸಂಚಿಕೆಗಾಗಿ ಪ್ರಯಾಣಿಸಿದಾಗ. ಉಡುಪಿ ಅಷ್ಟಮಠಗಳ ಬೀಡು. ಶ್ರೀಕೃಷ್ಣನ ಪರಮ ಸನ್ನಿಧಾನ. ನಾನು ಹೋದಾಗ ಪೇಜಾವರ ಶ್ರೀಗಳವರು ಪರ್ಯಾಯಪೀಠಸ್ಥರು. ಸಂತೋಷದಿಂದ ಬರಮಾಡಿಕೊಂಡು ಕುಶಲ ಸಂಭಾಷಣೆ ನಡೆಸಿದರು. ಅನೇಕ ಲೇಖಕ ಸ್ನೇಹಿತರೂ ದೊರೆತರು. ಇದಕ್ಕಿಂತ ಹೆಚ್ಚಾಗಿ ನಾನು ತಂಗಿದ್ದ ಎಂ. ಜಿ. ಎಂ. ಕಾಲೇಜು ಬನದ ಮಧ್ಯದಲ್ಲಿದ್ದಂತಿತ್ತು. ಹೀಗಾಗಿ ನನಗದು ನೈಸರ್ಗಿಕ ವಾತಾವರಣ ಒದಗಿಸಿತ್ತು. ಆಧುನಿಕ ವಿಶ್ವಾಮಿತ್ರ ಸೃಷ್ಟಿಕರ್ತ ಡಾ. ಟಿ. ಎಂ.ಎ. ಪೈ ಅವರನ್ನು ಮಣಿಪಾಲದಲ್ಲಿ ಕಂಡು ಮಾತನಾಡಿದೆ. ಅವರ ಅಮೋಘ ಸೃಷ್ಟಿಯನ್ನು ಕಂಡು ಅದರ ಹಿನ್ನೆಲೆಯನ್ನು ಅರಿತೆ.ದಕ್ಷಿಣ ಕನ್ನಡ,ಆ ಮೂಲಕ ಮೈಸೂರಿನಹೆಸರನ್ನು ಅರ್ಥನಕ್ಷೆಯಲ್ಲಿ ಮೂಡಿಸಿದ ಪ್ರಮುಖ ಬ್ಯಾಂಕುಗಳಲ್ಲಿ ಒಂದಾದ ಸಿಂಡಿಕೇಟ್ ಬ್ಯಾಂಕಿನ ಮುಖ್ಯ ಕಚೇರಿಯ ಭವ್ಯವಾದ ಸೌಧ, ಅಲ್ಲಿಯ ಚೊಕ್ಕವಾದ ಕೆಲಸದ ಪದ್ಧತಿಯನ್ನು ನಿರೀಕ್ಷಿಸಿದೆ. ಕೋಟಿಗಟ್ಟಲೆ ವ್ಯವಹರಿಸುವ ಕೃಷಿಕರಿಗೆ, ಉದ್ದಿಮೆದಾರರಿಗೆ ನಾನಾ ರೀತಿಯ ನೆರವು ನೀಡುವ ಈ ಬ್ಯಾಂಕು ನಮ್ಮ ಜನತೆಯ ಬೆನ್ನೆಲುಬು. ನಾನು ಲಕ್ಷಿಸಿದ ಇನ್ನೊಂದು ಅಂಶವೆಂದರೆ ಇಲ್ಲಿಯ ವಿದ್ಯಾರ್ಥಿಗಳ ಆಸಕ್ತಿ, ಶಿಸ್ತುಪಾಲನೆ, ಪ್ರಿನ್ಸಿಪಾಲ ಶ್ರೀ ಹರಿದಾಸ ಭಟ್ಟರೊಂದಿಗೆ ಆ ವಿಷಯವಾಗಿ ಮಾತನಾಡಿದೆ. ಪ್ರಾಥಮಿಕ ಶಿಕ್ಷಣದಿಂದಲೂ ಇತ್ತ ಲಕ್ಷ್ಯ ಪೂರೈಸುವದರಿಂದ ಇದು ಸಾಧ್ಯವೆಂಬ ಅಭಿಪ್ರಾಯ ಅವರು ವ್ಯಕ್ತಪಡಿಸಿದರು. ಪ್ರಾಧ್ಯಾಪಕರೂ ಹೊಣೆಗಾರಿಕೆ ನಿರ್ವಹಿಸಬೇಕೆಂದರು. ಆ ಸಂದರ್ಭದಲ್ಲಿಯೇ ಮುದ್ದಣನ ನಂದಳಿಕೆ ಸಂದರ್ಶಿಸಿ ಬಂದದ್ದು. ಆ ನೆನಪು ಇನ್ನೂ ಹಸಿರಾಗಿ ಉಳಿದಿದೆ.

## ಧರ್ಮಸ್ಥಳ

ಈ ಸಲ ದಕ್ಷಿಣ ಕನ್ನಡ ಜಿಲ್ಲೆಯನ್ನು ಚಿಕ್ಕಮಗಳೂರಿನಿಂದ ಪ್ರವೇಶಿಸಿದೆ. ಬಹುದಿನಗಳಿಂದ ಕಾಣಬೇ



ಧರ್ಮಸ್ಥಳದ ಮಂಜುನಾಥೇಶ್ವರ ದೇವಾಲಯ



ಕೋಟೆಕಾರದಿಂದ ಕಾಣುವ ಸಾಗರದ ರುದ್ರಗಂಭೀರ ದೃಶ್ಯ

ಕಿರಿದಿದ್ದ ಧರ್ಮಸ್ಥಳಕ್ಕೆ ಹೋದೆ. ಚಾರಮಾಡಿ ಘಟ್ಟವನ್ನು ಇಳಿದು. ಆಗ ಮತ್ತೆ ಆಗುಂಬೆಘಟ್ಟವನ್ನು ಇಳಿದುದು ಅತಿ ಕಡಿದಾದ ತಿರುವುಗಳನ್ನು ದಾಟಿದುದು ನೆನಪಿಗೆ ಬಂದವು. ಅಲ್ಲಿಯಂತೆ ಇಲ್ಲೂ ಕೆಲವು ಕಡಿದಾದ ತಿರುವುಗಳಿವೆ. ಅವನ್ನು ದಾಟುವಾಗ ಬಸ್ಸು ತೀರ ಕೊರಕಲಿನ ವರೆಗೆ ಬಂದು ಹೊರಳುತ್ತದೆ. ಆಗ ಮೈನವಿರೇಳುವ ದೃಶ್ಯವದು. ಸುಮಾರು ೨೦ ಮೈಲುಗಳಷ್ಟಿರುವ ಘಟ್ಟದ ಮಾರ್ಗವನ್ನು ದಾಟಲು ಬಸ್ ಚಾಲಕನಿಗೆ ಒಂದೂವರೆ ಗಂಟೆ ಬೇಕಾಯಿತು. ಆ ಮಾರ್ಗ ಇಳಿದು ಬಂದಾಗ ಪ್ರವಾಸಿಕರಂತೆ ಅವನಿಗೂ ಆನಂದವೋ ಆನಂದ. "ನೋಡಿ ಸ್ವಾಮಿ ಗಾಡಿ ಹೇಗೆ ಸಲೀಸಾಗಿ ಇಳಿದು ಬಂತು" ಎಂದ. ಅವನ ಹಿಂದಿನ ಸ್ಥಳದಲ್ಲೇ ಕುಳಿತಿದ್ದ ನನಗೆ, ಅವನ ಕಸರತ್ತು ನೋಡಿದವನಿಗೆ ಆ ಮಾತು ಯಥಾರ್ಥವಾದುದು ಎನಿಸಿತು. ಚಾಲಕ ಬೆವತು ರಾಡಿಯಾಗಿದ್ದ. ಆದರೆ ಅದರ ಪರಿವೆಯಿಲ್ಲದೇ ಬಸ್ಸು ನಡೆಸುತ್ತಿದ್ದ. ನಾನು ಧರ್ಮಸ್ಥಳ ತಲುಪಿದಾಗ ಶ್ರೀ ವೀರೇಂದ್ರ ಹೆಗ್ಗಡೆಯವರು ಇದ್ದಿರಲಿಲ್ಲ. ನನಗೆ ಸ್ವಲ್ಪ ಮಟ್ಟಿಗೆ ನಿರಾಸೆಯೆನಿಸಿತು. ಅವರನ್ನು ಸಂದರ್ಶಿಸಬೇಕು. ಮಾತನಾಡಬೇಕು ಅವರು ನಡೆಸುತ್ತಿರುವ ಸಾಹಿತ್ಯ ಸಮ್ಮೇಳನ ವಿಶ್ವಧರ್ಮ ಪರಿಷತ್ತುಗಳ ಬಗೆಗೆ ಕೇಳಿ ತಿಳಿದಿದ್ದೆ. ನಾನು ಅವರಿಂದ ಹೆಚ್ಚಿನ ಅಂಶಗಳನ್ನು ಅರಿಯಲು ಆತುರನಾಗಿದ್ದೆ. ಅವರ ಅರಮನೆ, ಮಂಜುನಾಥೇಶ್ವರ ದೇವಾಲಯ, ಅಲ್ಲಿಯ ಹರಕೆ ಪದ್ಧತಿ ಮೊದಲಾದುವನ್ನೆಲ್ಲ ಈಕ್ಷಿಸಿ ಬರುವ ಹೊತ್ತಿಗೆ ಊಟದ ಹೊತ್ತಾಗಿತ್ತು. ನನ್ನೊಂದಿಗೆ ಬಂದಿದ್ದ ಕೇಸರಸಿಂಗರು ಅರಮನೆಯಲ್ಲೇ ಊಟದ ಏರ್ಪಾಡು ಇರುವವಾಗಿ ಹೇಳಿದ್ದರು. ನಾವಲ್ಲಿಗೇ ಹೋದೆವು. ಅಂದು ಒಬ್ಬ ಹಿರಿಯ ಅಧಿಕಾರಿಗಳು ಬಂದಿದ್ದರು. ಅವರ ಪರಿಚಯವೂ ಆಯಿತು. ಆದರೆ ಊಟದ ವೇಳೆಗೆ ಅವರನ್ನು ಎಬ್ಬಿಸಿ ನಮ್ಮನ್ನು ಕೆಲ ಹೊತ್ತು ಕೂರಿಸುವಂತೆ ಹೇಳಿದರು. ಧರ್ಮಸ್ಥಳದ ಅನ್ನದಾನ, ಅತಿಥಿ ಸತ್ಕಾರದ ಬಗೆಗೆ ತುಂಬ ಕೇಳಿದ್ದ ನನಗೆ ಇದು ಸೋಜಿಗದಾಯಕವಾಯಿತು. ಬಹುಶಃ ಹೆಗ್ಗಡೆಯವರು ಇಲ್ಲದಿರುವಾಗ ಹೀಗೆ ನಡೆಯಿತು ಏನೋ ಏನೋ ಎಂದುಕೊಂಡೆ. ಆದರೆ ಊಟವಾದೊಡನೆ ಅಲ್ಲಿ ನಿಲ್ಲಲು ಮನಸ್ಸಾಗದೇ ಮಂಗಳೂರಿಗೆ ಹೊರಟೇ ಬಿಟ್ಟೆ.

## ಆ ಮುಸಲಧಾರೆ

ಮಂಗಳೂರಿನಲ್ಲಿ ನಾನು ಇಳಿದಾಗ ಮಲೆನಾಡಿನ ಮಳೆ ನನ್ನನ್ನು ಸ್ವಾಗತಿಸಿತು. ಬಸ್ಸು ಇಳಿದು ಹೊಟೇಲಿಗೆ ಹೋಗುವುದೇ ಕಷ್ಟವಾಯಿತು. ಮಂಗಳೂರಲ್ಲಿದ್ದ ಎರಡು ದಿನಗಳ ಕಾಲ ಧಾರಾಕಾರವಾಗಿ ಮಳೆ ಹನಿಯಿತು. ಆ ಮುಸಲಧಾರೆಯನ್ನು ಯಾವ ಶಬ್ದಗಳಲ್ಲಿ ಬಣ್ಣಿಸಬೇಕೋ ನನಗೆ ಅರ್ಥವಾಗಲಿಲ್ಲ. ಬಹುಶಃ ಮಲೆನಾಡಿನ ಎಲ್ಲ ಅಭಿರುಚಿಗಳ ಭಕ್ಷ್ಯಭೋಜ್ಯಗಳ, ಅತಿಥಿ ಸತ್ಕಾರದ ಪರಿಚಯ ಮಾಡಿಕೊಂಡವನಿಗೆ ಮಲೆನಾಡಿನ ಮಳೆಯ ಪರಿಚಯವಿಲ್ಲದಿದ್ದರೆ, ತನ್ನ ಉಲ್ಲೇಖ ಅವನ ಲೇಖನದಲ್ಲಿ ಬಾರದೇ ಹೋದರೆ ಎಂದು ಮಳೆಗೂ ಗಾಬರಿಯಾಯಿತೇನೋ! ಒಂದು ವಾರ ಮುಂಚಿತವಾಗಿ ಅದು ಮಲೆನಾಡನ್ನು ಅಪ್ಪಿಕೊಂಡು, ನನಗೂ ಅದರ ಸುಖವಾದ ಸವಿಯನ್ನು ಉಣಬಡಿಸಿತು. ನಾನೂ ನನ್ನ ಸ್ನೇಹಿತರೂ ಆ ಮಳೆಯಲ್ಲಿಯೇ ನೆನೆದು ಎರಡು ದಿನಗಳ ಕಾಲ ಸುತ್ತಾಡಿದೆವು. ಕೋಟೆಕಾರದ ಶ್ರೀ ಅಮ್ಮೆಂಬಳ ಶಂಕರ ನಾರಾಯಣರನ್ನು ನೋಡಲು ಹೋದಾಗ ಸಮುದ್ರದ ರುದ್ರಗಂಭೀರ ದೃಶ್ಯವೊಂದು ಕಾಣಲು ಸಿಕ್ಕಿತು. ಕೋಟೆಕಾರದ ಸೋಮೇಶ್ವರ ದೇವಾಲಯದಿಂದ ಕಾಣುವ ಬಂಡೆ ವಿಶಾಲವಾದುದು ಕಡಿದಾದುದು. ದಿವಂಗತ ಕಡೆಂಗೋಡ್ಲು ಶಂಕರಭಟ್ಟರು ರಚಿಸಿದ ಹೊನ್ನಿಯ ಮದುವೆಯ ಕಾವ್ಯದಲ್ಲಿ ಈ ಬಂಡೆಯ ಪಾತ್ರ ಪ್ರಮುಖವಾದುದು ಎಂದು ತಿಳಿದಾಗ ಸೋಜಿಗವೆನಿಸಿತು. ಪೋರ್ತುಗೀಜರೊಂದಿಗೆ ಹೋರಾಡಿದ ಉಳ್ಳಾಲದ ರಾಣಿ ಅಬ್ಬಕ್ಕನ ಕೋಟೆಯ ಅವಶೇಷಗಳಿವೆ. ಉಳ್ಳಾಲದಲ್ಲಿ ಗೇರುಬೀಜ ಸಂಶೋಧನ ಕೇಂದ್ರವೊಂದಿದೆ. ಮೈಸೂರು ಕೃಷಿ ವಿಶ್ವವಿದ್ಯಾಲಯ ಇಲ್ಲಿ ಗೇರುಬೀಜದ ಕೃಷಿಗೆ ಸಂಬಂಧಿಸಿದ ಸಂಶೋಧನೆ ನಡೆಸುತ್ತಿದೆ. ಅಲ್ಲಿಯ ಅಧಿಕಾರಿಗಳಾದ ಶ್ರೀ ಬಿ. ವಿದ್ಯಾಚಂದ್ರ ಅವರು ತುಂಬ ಉತ್ಸಾಹಿಗಳು. ಸಂಶೋಧನೆ ಯಾವ ಮಟ್ಟದಲ್ಲಿದೆ? ಎಷ್ಟು ಪ್ರಯೋಜನಕಾರಿಯಾಗುತ್ತಿವೆ ಎಂಬುದನ್ನೆಲ್ಲ ವಿವರಿಸಿದರು. ಸಸಿಗಳನ್ನು ತಯಾರು ಮಾಡಲು ಹೊಸ ವಿಧಾನವನ್ನು ಅವರು ಅನುಸರಿಸುತ್ತಿದ್ದು ತೋಟದಲ್ಲಿ ಸುಲಭವಾಗಿ ಬೆಳೆಯಲು ಸಾಧ್ಯವಾಗುವಂತೆ ಏರ್ಪಡಿಸಬಹುದೆ ಎಂಬುದನ್ನು ಅವರೀಗ ಪರಿಶೀಲಿಸುತ್ತಿದ್ದಾರೆ. ಈ ಹೊಸ ವಿಧಾನ ಪ್ರಯೋಗಾತ್ಮಕವಾಗಿದ್ದು ಅದು ಯಶಸ್ವಿಯಾದರೆ ಐದಾರು ಪಟ್ಟು ಹೆಚ್ಚು ಬೆಳೆ ಬರುವದಾಗಿ ತಿಳಿಸಿದರು. ಐದು ವರ್ಷಗಳ ನಂತರ ಬೆಳೆ ಬರಲಾರಂಭವಾಗಿ ಗಿಡ ೭೫ ವರುಷ ಕಾಲ ಬಾಳಬಹುದೆಂದರು. ಭಾರತದ ಬೇರೆ ಬೇರೆ ಭಾಗಗಳಿಂದ ತರಿಸಿದ ೧೧೧ ಜಾತಿಗಳೂ ವಿದೇಶಗಳಿಂದ ಬಂದ ೯ ಜಾತಿಗಳೂ ಇಲ್ಲಿವೆ. ಸಾಮಾನ್ಯವಾಗಿ ಮಾರ್ಚ್-ಏಪ್ರಿಲದಲ್ಲಿ ಹಣ್ಣು ಬಿಡುವ ದಿನ. ಆದರೆ ನಾವು ಹೋದಾಗ ಒಂದೆರಡು ಗಿಡಗಳಲ್ಲಿ ನಮ್ಮ ಸುದೈವದಿಂದ ಆಕಸ್ಮಿಕವಾಗಿ ಬಿಟ್ಟ ಹಣ್ಣು ನೋಡಲು ಸಿಕ್ಕಿತು.

## ಗೇರುಬೀಜ-ಹಂಚು

ಇದು ಕೃಷಿ ವಿಭಾಗವಾದರೆ, ಬಂದ ಫಸಲನ್ನು ಹಸನುಗೊಳಿಸಿ ಅದರ ಸಿಪ್ಪೆ ಸುಲಿದು, ಆರಿಸಿ ಪೇಟೆಗೆ ಕಳುಹಿಸುವುದೇ ಒಂದು ವಿಧ. ಇಂಥ ಕೆಲ ಕಾರಖಾನೆಗಳು ಮಂಗಳೂರಲ್ಲಿವೆ. ಈ ಕೆಲಸಕ್ಕಾಗಿ ಉಪಯೋಗಿಸುವ ವಿಧಾನವನ್ನು ರಹಸ್ಯವಾಗಿಡುವ ಉದ್ದೇಶದಿಂದ ಸಂದರ್ಶಕರಿಗೆ ಅಲ್ಲಿ ಅವಕಾಶವಿಲ್ಲ. ನನ್ನ ಸ್ನೇಹಿತರ ಪ್ರಯತ್ನದಿಂದಾಗಿ ಮಿರ್ಜಾ ಗೋವಿಂದ ಅಣ್ಣಪ್ಪ ಪೈ ಗೇರುಬೀಜ ಕಾರಖಾನೆಯನ್ನು ಸಂದರ್ಶಿಸಿ ಅಲ್ಲಿಯ ಕಾರ್ಯವಿಧಾನವನ್ನು ಅರಿಯಲು ಸಾಧ್ಯವಾಯಿತು. ಮಾಲಿಕರು ನಾನು ದೂರದಿಂದ ಬಂದವನೆಂದು ಗಮನಿಸಿ ಕೆಲ ಆಯ್ದ ಕೆಲಸಗಳ ಫೋಟೋ ತೆಗೆಯಲು ಅನುಮತಿಸಿದರು. ಗೇರುಬೀಜವನ್ನು ನೀರಲ್ಲಿ ನೆನೆಯಿಸುವುದರಿಂದ ವಿಧಾನ ಮೊದಲ್ಗೊಂಡು ಡಬ್ಬಗಳಲ್ಲಿ ತುಂಬುವ ವರೆಗೆ ಹತ್ತು, ಹನ್ನೆರಡು ಘಟ್ಟಗಳಲ್ಲಿ ಈ ಕೆಲಸ ಸಾಗುವುದು. ಅವರ ಈ ಗೋಡಂಬಿ ಹೆಚ್ಚಾಗಿ ಅಮೇರಿಕ – ರಶಿಯ ಹಾಗೂ ಬರ್ಲಿನಗಳಿಗೆ ಹೋಗುವದಾಗಿ ತಿಳಿಯಿತು. ಈ ಕಾರಖಾನೆಯಲ್ಲಿ ಕೆಲಸ ಮಾಡುವವರಲ್ಲಿ ಹೆಚ್ಚಾಗಿ ಸ್ತ್ರೀಯರು. ಇಲ್ಲಿಯ ಹನ್ನೆರಡು ನೂರು ಕೆಲಸಗಾರರಲ್ಲಿ ಕೇವಲ ೫೦ಜನ ಪುರುಷ ಕೆಲಸಗಾರರು. ನಾಜೂಕಾದ ಕೆಲಸಕ್ಕೆ ನಾಜೂಕಾದ ಕೈಯೇ ಬೇಕು ಅಲ್ಲವೇ? ಮಲೆನಾಡಿನ ಈ ಪ್ರಮುಖವಾದ ಫಸಲು ವಿದೇಶವಿನಿಮಯ ಗಳಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತಿದೆಯೆನ್ನುವಾಗ ಈ ಉದ್ದಿಮೆಯ ಬಗೆಗೆ ಮಲೆನಾಡು ಅಭಿಮಾನ ಪಡುವುದು ಸ್ವಾಭಾವಿಕ.

ಮಂಗಳೂರು ಹಂಚು ಎಲ್ಲೆಡೆಗೂ ಪ್ರಸಿದ್ಧ. ತಾಳಿಕೆ – ಬಾಳಿಕೆಗೆ ಹೆಸರಾದ ಈ ಹಂಚು ತಯಾರಿಸುವ ಅನೇಕ ಕಾರಖಾನೆಗಳು ಇಲ್ಲಿವೆ. ಇಲ್ಲಿಯೂ ಸ್ತ್ರೀ ಕೆಲಸಗಾರರು ಅಧಿಕ ಸಂಖ್ಯೆಯಲ್ಲಿ ಕೆಲಸಮಾಡುವರು. ಮಣ್ಣು ಕಲಿಸಿ ಹಂಚು ತಯಾರಿಸುವ ವರೆಗೆ ಹತ್ತೆಂಟು ಘಟ್ಟಗಳಲ್ಲಿ ಅದರ ಕೆಲಸ ಸಾಗುವದು. ಹಂಚು ನಿರ್ಮಾಣದೊಂದಿಗೆ ಹೂಜಿ ಮೊದಲಾದ ಇತರ ಕೆಲ ಉಪಕರಣಗಳನ್ನೂ ಇವರು ಅಚ್ಚುಕಟ್ಟಾಗಿ ನಿರ್ಮಿಸುವರು. ಮಂಗಳೂರು –ಈಗ ಕಿರಿ ಬಂದರಾಗಿದ್ದರೂ ಇಷ್ಟರಲ್ಲಿಯೇ ಸರ್ವಋತು ಬಂದರವನ್ನು ಹೊಂದಲಿದೆ. ಸದ್ಯದ ಬಂದರದಿಂದ ಉತ್ತರಕ್ಕೆ ೭ ಮೈಲುಗಳ ಮೇಲಿರುವ ಈ ಹೊಸ ಬಂದರು ಭರದಿಂದ ಸಿದ್ಧವಾಗುತ್ತಿದ್ದು ಪೂರ್ಣಗೊಂಡಾಗ ೧೭ ಬರ್ಥ್‌ಗಳನ್ನು ಹೊಂದಲಿದೆ. ಮಂಗಳೂರನ್ನು ರೇಲ್ವೆಯಿಂದ ರಾಜ್ಯದ ಇತರ ಭಾಗಗಳಿಗೆ

ಜೋಡಿಸುವ ಹಾಸನ – ಮಂಗಳೂರು ರೇಲ್ವೆ ರಚನೆ ಭರದಿಂದ ಸಾಗಿದೆ. ಅನೇಕ ಘಟ್ಟಗಳಲ್ಲಿ ಅದು ಪೂರೈಸುತ್ತ ಬಂದಿದೆ. ಈ ರೈಲು ಪೂರ್ಣವಾಗಿ ಮಲೆನಾಡಿನಲ್ಲಿ ಸಾಗುವದರಿಂದ ಮಲೆನಾಡಿನ ವನಶ್ರೀ ಸೊಬಗು ಕಣ್ತಣಿಯೇ ನೋಡಬಹುದು ಅನುಭವಿಸಬಹುದು. ನಾನು ಪುತ್ತೂರಿಗೆ ಹೋಗುವ ದಾರಿಯಲ್ಲೆಲ್ಲ ಅನೇಕ ಸ್ಥಳಗಳಲ್ಲಿ ಈ ಕೆಲಸದ ಪ್ರಗತಿಯನ್ನು ಕಂಡೆ. ಸುರತ್ಕಲ್ ಪ್ರಾದೇಶಿಕ ಇಂಜನಿಯರಿಂಗ ಕಾಲೇಜ್ ದರ್ಶನದೊಂದಿಗೆ ಖ್ಯಾತ ವಿದ್ವಾಂಸರು ಸಾಹಿತಿಗಳು ಆದ ಪದ್ಮನಾಭ ಸೋಮಯಾಜಿ ಅವರ ಪರಿಚಯವೂ ಆಯಿತು.

ಮಂಗಳೂರಲ್ಲಿ ಕರ್ನಾಟಕ ಬ್ಯಾಂಕದ ಮುಖ್ಯ ಕಚೇರಿಯಿದೆ. ದಕ್ಷಿಣ ಕನ್ನಡ ಜಿಲ್ಲೆ ರಾಜ್ಯಕ್ಕೆ ಬಂಡವಳ ನೀಡುವಲ್ಲಿ ಮುಂದಾಗಿರುವದಕ್ಕೆ ಈ ಪ್ರಮುಖ ಬ್ಯಾಂಕ್‌ಗಳು ಕಾರಣ. ರಾಜ್ಯದಲ್ಲಿ ಮತ್ತು ಹೊರಗೆ ಅನೇಕ ಶಾಖೆಗಳನ್ನು ಹೊಂದಿರುವ ಈ ಬ್ಯಾಂಕು ಮಲೆನಾಡಿನ ಆರ್ಥಿಕ ಜೀವನದಲ್ಲಿ ಒಂದು ಜೀವನಾಡಿಯಂತಿರುವುದು. ಇದೀಗ ಈ ಬ್ಯಾಂಕಿನ ಮುಖ್ಯ ಕಚೇರಿಯ ಭವ್ಯವಾದ ಹೊಸ ಕಟ್ಟಡವೂ ನಿರ್ಮಾಣವಾಗಿರುವುದು. ಇನ್ನೊಂದು ಬ್ಯಾಂಕು ಕೆನರಾ ಬ್ಯಾಂಕಿಂಗ್ ಕಾರ್ಪೋರೇಶನ್ನದ ಮುಖ್ಯ ಕಚೇರಿಯೂ ಇಲ್ಲಿದೆ.

## ತಿಂಡಿ ತಿನಿಸುಗಳು

ಪುತ್ತೂರು – ಸುಳ್ಯ ಭಾಗದಲ್ಲಿ ರಬ್ಬರಿನ ತೋಟ ನಿರ್ಮಾಣವಾಗುತ್ತಿರುವ ಸುದ್ದಿ ತಿಳಿದಿದ್ದೆ. ಆದರೆ ಈ ರಬ್ಬರು ಗಿಡಗಳು ಇನ್ನೂ ಬೆಳೆದು ನಿಲ್ಲಬೇಕು ಅಷ್ಟೇ ಎಂದು ಅಲ್ಲಿಗೆ ಹೋದನಂತರ ತಿಳಿಯಿತು. ಕರ್ನಾಟಕದ ಖ್ಯಾತ ಸಾಹಿತಿಗಳು, ಸಾಹಸಗಳಲ್ಲಿ ಎತ್ತಿದ ಕೈ ಎನಿಸಿದ ಶಿವರಾಮ ಕಾರಂತರು ಆಗ ಊರಲ್ಲಿರಲಿಲ್ಲ. ಅವರು ಆ ರೀತಿ ಮೊದಲು ತಿಳಿಸಿಯೂ ಇದ್ದರು. ಕಳೆದ ಬಾರಿ ಹೋದಾಗ ಅವರಲ್ಲಿ ತಂಗಿ ಆತಿಥ್ಯವನ್ನು ಸವಿದೂ ಇದ್ದೆ. ಈ ಸಲ ನನ್ನ ಸಾಹಿತಿ ಮಿತ್ರರಾದ ಶ್ರೀ ವ ನಮಿರಾಜ ಮಲ್ಲರು ಉತ್ತರ ಕರ್ನಾಟಕದ ಸುತ್ತಾಟ ಪೂರೈಸಿ ತಮ್ಮದೇ ಆದ ಪುತ್ತೂರಿಗೆ ಬಂದಿದ್ದರು. ಹೊನ್ನಾವರದಲ್ಲಿ ಕಂಡ ನಂತರ ಅವರನ್ನು ಕಾಣಲು ಆಗಿರಲಿಲ್ಲ. ಅಂದು ಅವರಲ್ಲಿ ತಂಗಿ ಮಲೆನಾಡಿನ ಮುಖ್ಯವಾಗಿ ದಕ್ಷಿಣ ಕನ್ನಡದ ಜಾನಪದ ಸಾಹಿತ್ಯದ ವಿಷಯವಾಗಿ ಚರ್ಚಿಸಿದೆ. ಅವರು ಜನಪದ ಸಾಹಿತ್ಯವನ್ನು ಚೆನ್ನಾಗಿ ಅಭ್ಯಸಿಸಿದವರು. ಇಡೀ ದಿನ ತುಂಬ ಮಳೆ ತೊಡಗಿದ್ದರಿಂದ ಹೊರಗೆ ಸಂಚರಿಸುವುದು ಮಾತ್ರ ಆಗಲಿಲ್ಲ. ಶ್ರೀಮತಿ ಮಲ್ಲರು ಅಂದು ಎರಡೂ ಹೊತ್ತು, ಮಲೆನಾಡಿನ ಅನೇಕ ಹೊಸ ಹೊಸ ಭಕ್ಷ್ಯಗಳನ್ನು ನಮಗೆ ನೀಡಿದರು. ಈ ಹೊತ್ತಿಗೆ ಮಲೆನಾಡಿನ ಹಲವಾರು ಭಕ್ಷ್ಯಭೋಜ್ಯಗಳು, ತಿಂಡಿ ತಿನಸುಗಳು ನನಗೆ ಪರಿಚಿತವಾಗಿದ್ದುವು. ತಂಬುಳಿ ( ಸೊಪ್ಪುಗಳಿಂದ ತಯಾರಿಸಿದ ಪಳದ್ಯ ) ಗೆಣಸಿನ ಸಾಸಿವೆ, ಮಾವಿನಕಾಯಿಯ ಗೊಜ್ಜು, ಅಪ್ಪೆಹುಳಿ ಗೊಜ್ಜು, ಮಾವಿನ ಹಣ್ಣಿನ ಪಾನಕ, ಪಲ್ಯ, ರಸಾಯನ, ಮಾವಿನ ಹಣ್ಣಿನ ಸಾಸಿವೆ, ಅಮಟೆಕಾಯಿ ರಸ, ಅತ್ರಾಸ ( ನಮ್ಮಲ್ಲಿಯ ಅನ್ನರಸ ) ಹಲಸಿನ ಹಪ್ಪಳ, ಬಣ್ಣ ಸವತೆ ಹುಳಿ, ಹೀಗೆಲ್ಲಾ ಉಣಬಡಿಸಿದ್ದರು. ಇಲ್ಲಿ ಶ್ರೀಮತಿ ಮಲ್ಲರು ಹಲಸಿನ ಹಣ್ಣಿನಿಂದ ಮಾಡಿದ ಎರಡು ಮೂರು ತಿನಿಸುಗಳನ್ನು ನೀಡಿ ಅವುಗಳ ಪರಿಚಯ ಮಾಡಿಸಿದರು. ಮಲೆನಾಡಿನ ಪೂರ್ಣವಾಗಿ ಅಲ್ಲದಿದ್ದರೂ ಬಹುಮಟ್ಟಿಗಿನ ತಿನಿಸುಗಳನ್ನು ನಾನು ಪರಿಚಯ ಮಾಡಿಕೊಂಡ ಸಮಾಧಾನವಿತ್ತು.

## ಮಡಿಕೇರಿಯಲ್ಲಿ

ಪುತ್ತೂರಿನಿಂದ ಮಡಿಕೇರಿಗೆ ಬರುವಾಗ ತುಂಬ ಮಳೆ. ಮಳೆಗಾಲದಲ್ಲಿ ಈ ಘಟ್ಟದ ಕೆಲ ಸ್ಥಳಗಳಲ್ಲಿ ಮಾರ್ಗ ಬಿರುಕು ಬಿಡುವದುಂಟಂತೆ. ನಾವು ಬರುವಾಗ ಹಾಗೇನೂ ಸಂಭವಿಸಲಿಲ್ಲ. ಮಡಿಕೇರಿಯಲ್ಲಿ ನಾವು ಇಳಿದಾಗ ಮಳೆರಾಯ ಸ್ವಲ್ಪಮಟ್ಟಿಗೆ ಬಿಡುವು ಕೊಟ್ಟು ಕೃಪೆ ತೋರಿದ್ದ. ಈ ಹಿಂದೊಮ್ಮೆ ಮಡಿಕೇರಿಯನ್ನು ಸಂದರ್ಶಿಸಿ ರಾಜಾಸೀಟು, ಅರಸರ ಗದ್ದಿಗೆಗಳು, ಅಲ್ಲಿಂದ ಕಾಣುವ ಕೊಡಗಿನ ವನಶ್ರೀಯ ಸುಂದರವಾದ ನೋಟ ತೇಗಿನ ಬನ, ನೀಲಗಿರಿಯ ತೋಟ, ಕೊಳ್ಳ ಕಣಿವೆಗಳನ್ನು ನೋಡಿ ಆನಂದಿಸಿದ್ದೆ. ಮನವು ಹರುಷದಿಂದ ಉಕ್ಕೇರಿತು. ಸ್ವತಂತ್ರ ಭಾರತಕ್ಕೆ ಇಬ್ಬರು ಮಹಾ ದಂಡನಾಯಕರನ್ನು ಒದಗಿಸಿದ, "ಹುಲಿಯ ಹಾಲನು ಮೆದ್ದ" ಕೊಡವರ ಆತಿಥ್ಯವನ್ನು ಸವಿದಿದ್ದೆ. ನನ್ನ ಲೇಖಕ ಮಿತ್ರರಾದ ಶ್ರೀ ಬಿ. ಡಿ. ಸುಬ್ಬಯ್ಯನವರು ಮಡಿಕೇರಿಯ ಪರಿಚಯ ಮಾಡಿಸಿದರು. ಹಿರಿಯರ ಸಂದರ್ಶನ ಮಾಡಿಸಿದರು. ಕೊಡಗು ಪತ್ರಿಕೆಯ ಸಂಪಾದಕರಾದ ಶ್ರೀ ಬಿ. ಡಿ. ಗಣಪತಿ ಅವರನ್ನು ಕಂಡು ಮಾತನಾಡಿದೆ. ಜನಪ್ರಿಯ ಸಾಹಿತಿ ಭಾರತೀಸುತರನ್ನು ಕಂಡು ಮಣಿದೆ. ರಾಜ್ಯದಲ್ಲಿಯೇ ಈಜುಗೊಳ ಹೊಂದಿದ ಒಂದೇ ಒಂದಾದ ಹಾಯಸ್ಕೂಲನ್ನು, ಅಲ್ಲಿನ ಶಿಸ್ತಿನ ಮುಖ್ಯಾಧ್ಯಾಪಕರನ್ನು ಕಂಡೆ. ಆಕಸ್ಮಿಕವಾಗಿ ಊರಲ್ಲಿಯೇ ಇದ್ದ ನಿವೃತ್ತ ಮಹಾದಂಡನಾಯಕರಾದ ಜನರಲ್ ಕಾರ್ಯಪ್ಪನವರನ್ನು ಕಂಡು ಗೌರವ ಅರ್ಪಿಸಿದೆ. ಅವರು ನಿಸರ್ಗದ ಚೆಲುವಿನ ಮಧ್ಯದಲ್ಲಿ ನಿವಾಸವನ್ನು ಕಟ್ಟಿಕೊಂಡಿದ್ದು, "ರೋಶನಾರಾ" ಎಂದು ಮನೆಗೆ ಯಥಾರ್ಥ ನಾಮಾಂಕಿತವಿರಿಸಿರುವರು. ಅಂಥ ಹಿರಿಯರು ನನ್ನಂಥ ಎಳೆಯನನ್ನು ಅತ್ಯಂತ ಸ್ನೇಹದಿಂದ ಬರಮಾಡಿಕೊಂಡು ಹೇಗೆ ಏನು ಎಂದು ಕುಶಲ ಸಂಭಾಷಣೆ ನಡೆಸಿದರು. ಭಾರತದ – ಭಾರತೀಯರ ಜೀವನ ಉದಾತ್ತವಾಗಬೇಕೆಂಬ ಕಳಕಳಿ ವ್ಯಕ್ತಪಡಿಸಿದರು. ಅವರೊಂದಿಗೆ ಮಾತನಾಡಿದುದು ಒಂದು ಅಪೂರ್ವ ಅನುಭವವೇ ಸರಿ.

ಕೊಡಗು ಕಾಫಿಯ ಬೀಡು. ಕಿತ್ತಳೆಯ ನಾಡು. ಅಲ್ಲವೆ? ಅವೆರಡರ ಕೃಷಿ ಪರಿಚಯ ನಾನು ಮಾಡಿಕೊಳ್ಳಬೇಕಿತ್ತು. ನನ್ನ ಸ್ನೇಹಿತರು ಅದಕ್ಕಾಗಿ ಅವಕಾಶ ಮಾಡಿಕೊಟ್ಟರು. ಚೆಟ್ಟಳ್ಳಿ ಫಾರ್ಮ್ ಏಸಿಯದಲ್ಲೇ ಅತಿ ಮಹತ್ವದ್ದು. ೩೫೦ ವಿಧದ ಕಿತ್ತಳೆಯನ್ನು ಇಲ್ಲಿ ಬೆಳೆಯುತ್ತಿದ್ದಾರೆ. ಮಾವು ಹುಲುಸಾಗಿ ಬೆಳೆಯುತ್ತಿದೆ. ಅನಾನಸ್, ಕಾಫಿಗೂ ಇಲ್ಲಿ ಅವಕಾಶವಿದೆ. ಒಂದೊಂದು ಕಿತ್ತಳೆ ಗಿಡ ಒಂದು ಸುಗ್ಗಿಗೆ ಕನಿಷ್ಠ ೫೦೦–೬೦೦ ಫಲ ನೀಡುತ್ತದೆಯಂತೆ. ೫ ಸಾವಿರದ ವರೆಗೂ ಬರಬಹುದೆಂದು ಅಲ್ಲಿಯ ಅಧಿಕಾರಿಗಳು ತಿಳಿಸಿದರು. ಬೀಜದ ಸಸಿಯಿಂದ ೮ ವರುಷಗಳ ನಂತರ ಫಲ ಬರುತ್ತಿದ್ದರೆ ಕಟಿಂಗ್ ಸಸಿಯಿಂದ ೬ ವರುಷಗಳ ನಂತರ ಫಲವನ್ನು ಪಡೆಯಬಹುದು. ಒಂದೇ ಗಿಡದಲ್ಲಿ ಎಂಟು ಜಾತಿಯ ಕಿತ್ತಳೆಯನ್ನು ನಾನು ಕಂಡೆ. ಬೇಸಿಗೆಯ ಸುಗ್ಗಿ ಮುಗಿದಿತ್ತು. ಮಳೆಗಾಲದ ಸುಗ್ಗಿಗೆ ಇನ್ನೂ ಅವಕಾಶವಿತ್ತು. ಆದರೂ ಫಲಭರಿತ ಅನೇಕ ಗಿಡಗಳನ್ನು ನಾನು ಕಂಡೆ. ದಿನಾಲೂ ನೂರಾರು ಜನರು ಈ ಫಾರ್ಮುಗಳನ್ನು ನೋಡಲು ಬರುವರು. ನಿಜವಾಗಿ ಇದು ಸುಂದರವಾದ ನೋಟ. ಅಲ್ಲಿ ತಿರುಗಾಡಿದಾಗ ಮನ ಮುದಗೊಂಡಿತು. ತಿರುಗಿದಷ್ಟೂ ತಿರುಗಬೇಕೆನಿಸುತ್ತಿತ್ತು. ಮಾರ್ಗಗಳಲ್ಲಿ ನಂದಿ, ಮತ್ತಿ, ಟೀಕ ಅಡವಿಗಳು. ತುಂಬ ಎತ್ತರವಾಗಿ ಬೆಳೆದ ನಂದಿಮರವನ್ನು ಸ್ನೇಹಿತರು ತೋರಿಸಿ ಎರಡು ಭವ್ಯ ಕಟ್ಟಡಗಳಿಗೆ ಅದರ ಕಟ್ಟಿಗೆ ಸಾಕು ಎಂದರು.

ಇಕ್ಕೆಲಗಳಲ್ಲಿ ಕಾಫಿ ತೋಟಗಳು, ಹಲವೆಡೆ ರಬ್ಬರಿನ ತೋಟ, ಕೊಳ್ಳ ಕಂದಕಗಳು ಇರುವ ಸಂಪಾಜೆ ಘಟ್ಟದಲ್ಲಿ ಸಾಗಿ ಬರುವುದೇ ಒಂದು ಸೊಗಸುಗಾರಿಕೆ. ಆದರೆ ಈ ಸಲ ಮಳೆ ಇದ್ದುದರಿಂದ ಕೆಲಮಟ್ಟಿಗೆ ತೊಂದರೆಯೆನಿಸಿತು. ಮೂವತ್ತೊಂಭತ್ತು ನೂರು ಅಡಿ ಎತ್ತರದ ಮಡಿಕೇರಿ ಪ್ರವಾಸಿಕರನ್ನು ಕೈಮಾಡಿ ಕರೆಯುತ್ತಿದೆ: 'ಸೌಂದರ್ಯದ ಸ್ಥಳಗಳನ್ನು ನೋಡಬನ್ನಿ ನಿಸರ್ಗದ ಸೌಂದರ್ಯ ಸವಿಯ ಬನ್ನಿ' ಎಂದು. ಅಲ್ಲಿ ಇದ್ದಷ್ಟು ದಿನವೂ ವನಶ್ರೀಯ ಮಧ್ಯದಲ್ಲಿ ತಿರುಗುವುದು, ಸೃಷ್ಟಿ ಸೌಂದರ್ಯವನ್ನು ಮನದಣಿಯೇ ಸವಿಯುವುದು ನಡೆದೇ ಇರುತ್ತದೆ. ಹಾಗಿಲ್ಲದೇ ಹೋದರೆ ಅಲ್ಲಿಯ ವರೆಗೆ



ಚೆಟ್ಟಳ್ಳಿಯ ಹಣ್ಣಿನ ಫಾರ್ಮಿನಲ್ಲಿ ಕಿತ್ತಳೆ ವೃಕ್ಷರಾಜಿ

ಹೋಗಿದ್ದು ವ್ಯರ್ಥವೆನಿಸುತ್ತದೆ. ಅಲ್ಲಿಯ ಪ್ರಾಣಿ ರಕ್ಷಣಾಲಯವೂ ನೋಡುವಂಥದೆಂದು ನನ್ನ ಸ್ನೇಹಿತರು ಹೇಳಿದರೂ ಅದೊಂದು ಉಳಿದೇ ಹೋಯಿತು. ಮರಳುವಾಗಲೂ ಕಾಫಿತೋಟಗಳ ಮಧ್ಯದಲ್ಲಿ ಹಾಯ್ದು ಬರುವಾಗ, ಸುತ್ತು ಸುತ್ತಾದ ರಸ್ತೆಗಳಲ್ಲಿ ಕಾರು ಸಾಗುವಾಗ ಸುತ್ತಲಿನ ನೋಟ ರಮ್ಯವಾಗಿ ತೋರುವುದು. ಕುಶಾಲನಗರದ ಬಳಿ ತಿಬೇಟ ನಿರಾಶ್ರಿತರಿಗಾಗಿ ನಿರ್ಮಿಸಿದ ಪುನರ್ನಿವೇಶನ ಕೇಂದ್ರವಿದೆ. ಅಲ್ಲಿ ಅಸಂಖ್ಯ ತಿಬೇಟಿಯರು ಉಣ್ಣೆ ಸ್ವೆಟರು, ವಸ್ತ್ರಗಳನ್ನು ಮಾರಲು ಹೊತ್ತು ತಿರುಗುವದನ್ನು ಕಾಣಬಹುದು. ಹುಣಸೂರಿಗೆ ಬಂದನಂತರ ವನಶ್ರೀ ಕಡಿಮೆಯಾಗಿ ಬಯಲು ನಾಡಿನ ಶೋಭೆ ಕಾಣತೊಡಗುವುದು.

## ಶಿಲ್ಪ ವೈಭವ

ಹಾಸನ ಜಿಲ್ಲೆಯ ಬಹುಭಾಗ ಮಲೆನಾಡಿಗೆ ಸೇರಿದ್ದರೂ ಸಕಲೇಶಪುರದ ಪ್ರದೇಶ ಹೊರತು ಪಡಿಸಿದರೆ ಅಂಥ ಕಾಡುಮೇಡು ಕಂಡುಬರುವದಿಲ್ಲ. ಆದರೆ ಶಿಲ್ಪ ವೈಭವದ ಕೇಂದ್ರಸ್ಥಾನವಿದಾಗಿರುವುದು. ಹಾಸನದಿಂದ ಚೆನ್ನಾರಾಯಪಟ್ಟಣ ಅಲ್ಲಿಂದ ಶ್ರವಣಬೆಳ್ಗೊಳಕ್ಕೆ ನಾನು ಹೋಗಿದ್ದೆ. ಈ ಮಾರ್ಗ ಮಾತ್ರ ಕೆಲಭಾಗದಲ್ಲಿ ತೋಟಗಳ ಮಧ್ಯದಲ್ಲಿ ಸಾಗುವದು. ಶ್ರವಣಬೆಳಗೊಳ ಒಂದೆಡೆಗೆ ಗೋಮಟೇಶ್ವರನ ಭವ್ಯಮೂರ್ತಿಯನ್ನು ಹೊಂದಿದ್ದರೆ ಇನ್ನೊಂದೆಡೆಗೆ ಅನೇಕ ಶಿಲಾಶಾಸನ, ಬಸದಿ, ದೇವಾಲಯಗಳನ್ನು ಹೊಂದಿದೆ. ಜೈನರ ತುಂಬ ಪ್ರಸಿದ್ಧವಾದ ತೀರ್ಥಯಾತ್ರೆಯ ಕೇಂದ್ರವಿದು. ನಾನು ಮಹಾಮಸ್ತಕಾಭಿಷೇಕದ ಹಿಂದಿನ ದಿನಗಳಲ್ಲಿ ಹೋದಾಗ ಯಾತ್ರಿಕರ ಸೌಕರ್ಯಕ್ಕಾಗಿ ತುಂಬ ಸೌಲಭ್ಯಗಳನ್ನು ಕಲ್ಪಿಸುತ್ತಿರುವುದನ್ನು ಕಂಡೆ. ಊರವರು ನಂತರ ತುಂಬ ಉತ್ಸಾಹದಿಂದ ಸಾಹಿತ್ಯ ಸಮ್ಮೇಳನವನ್ನು ಜರುಗಿಸಿದರು. ಆದರೂ ಪ್ರವಾಸಿಕರಿಗೆ ಅವಶ್ಯಕವಾದ ಸೌಲಭ್ಯಗಳು ಸಾಲವು ಎಂದೇ ನನಗನಿಸಿತು. ಬೇಲೂರು – ಹಳೇಬೀಡಿನ ಪ್ರವಾಸ ಇನ್ನೊಂದು ಅನುಭವವನ್ನು ಕಲಿಸಿತು. ಹಳೇಬೀಡು ದಾಟಿ ಬೇಲೂರಿಗೆ ಹೋದವವನನ್ನು ಅಪರಿಚಿತನೆಂದು ಮತ್ತೆ ಹಳೇಬೀಡಿಗೆ ಬಸ್ಸಿನವ ಕರೆತಂದ. ಹಳೆಬೀಡೇನೊ ನೋಡಿದೆ. ಆದರೆ ಬೇಲೂರಿನಲ್ಲಿ ದೇವಾಲಯ ಬಾಗಿಲು ಮುಚ್ಚಿತ್ತು. ಅರ್ಚಕರು ಹೇಗೋ ಅರ್ಧಗಂಟೆ ಬಾಗಿಲು ತೆಗೆದು ಚನ್ನಕೇಶವ ಸ್ವಾಮಿಯ ಭವ್ಯ ಮೂರ್ತಿಯ ದರ್ಶನಮಾಡಿಸಿದರು. ಅಷ್ಟೇ ಧನ್ಯಭಾವ ಮೂಡಿತು. ಇಲ್ಲಿಯೂ ಪ್ರವಾಸಿಕರಿಗೆ ಸಾಕಷ್ಟು ಸೌಲಭ್ಯಗಳು, ಅನುಕೂಲಗಳು ಇರುವುದಿಲ್ಲ. ಆದರೆ ಈ ಎಲ್ಲ ಪ್ರವಾಸಿ ಕೇಂದ್ರಗಳಿಗೆ ಹೋಗಬಹುದಾದ ಕೇಂದ್ರ ಸ್ಥಳದಲ್ಲಿರುವ ಹಾಸನ 'ಬಡವರ ನೀಲಗಿರಿ' ಎನಿಸಿದೆ. ಮಲೆನಾಡ ಇಂಜನಿಯರಿಂಗ ಕಾಲೇಜನ್ನು ಅದು ಹೊಂದಿದೆ.

## ಬೆಳಗಾವಿ-ಖಾನಾಪುರ

ಬೆಳಗಾವಿ ಜಿಲ್ಲೆಯ ಬೆಳಗಾವಿ ಹಾಗೂ ಖಾನಾಪೂರ ತಾಲೂಕುಗಳು ಮಾತ್ರ ಮಲೆನಾಡಿನ ಪ್ರದೇಶಗಳು. ಸಹ್ಯಾದ್ರಿ ಘಟ್ಟದ ಸಾಲು ಇಲ್ಲಿ ಪ್ರವೇಶಿಸಿದೆ. ಇಲ್ಲಿಯೇ ಮಳೆಯೂ ಹೆಚ್ಚು ಬೀಳುವುದು. ಆದರೂ ನಾನೀಗ ಮೇಲೆ ಬಣ್ಣಿಸಿದ ಮಲೆನಾಡು – ಮಳೆಯನಾಡು ಇಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ. ಬೆಳಗಾವಿ ರಾಜ್ಯದ ಒಂದು ಡಿವಿಜನ್ನಿನ ಕೇಂದ್ರವಾಗಿರುವಂತೆ ಶಿಕ್ಷಣ ಕೇಂದ್ರದಲ್ಲಿ ಮುಂದುವರಿದುದು. ಈಚೆಗೆ ಅಲುಮಿನಿಯಂ ಕಾರಖಾನೆ ಇಲ್ಲಿ ತಲೆಯೆತ್ತಿದೆ. ಅನೇಕ ಸಣ್ಣಪುಟ್ಟ ಉದ್ದಿಮೆಗಳೂ ಇಲ್ಲಿವೆ. ಊರು ವಿಸ್ತಾರವಾಗಿದ್ದರೂ ಓಣಿಗಳು ಸಣ್ಣವು, ಅಲ್ಲಿ ರಸ್ತೆಗಳು ಇನ್ನೂ ಕಿರಿಯವು. ಅ. ಭಾ. ಕಾಂಗ್ರೆಸ ಅಧಿವೇಶನ ಜರುಗಿಸಿದ ಈ ಊರು ಬೆಳಗಾವಿ. ದಿ.ದೇಶಪಾಂಡೆ ಗಂಗಾಧರರಾಯರು, ಬೆಳವಿ ದತ್ತೋಪಂತರು ಮೊದಲಾಗಿ ಧುರೀಣರ ಕರ್ಮಭೂಮಿ. ಈಚೆಗೆ ಮೂರು ನಾಲ್ಕು ಸಲ ನಾನು ಬೇರೆ ಬೇರೆ ಕಾರಣಗಳಿಗಾಗಿ ಬೆಳಗಾವಿಗೆ ಹೋಗಿ ಬಂದೆ. ಈ ಪಟ್ಟಣದ ಪ್ರಮಾಣದಿಂದ ಇಲ್ಲಿ ಉತ್ತಮ ಹೊಟೆಲ್ಲುಗಳು ತುಂಬ ಹೆಚ್ಚಿವೆ. ಸಾಹಿತಿಗಳಲ್ಲಿ ಈಚೆಗೆ ಉತ್ಸಾಹವೂ ಕಂಡುಬರುತ್ತಿದೆ. ಇದ್ದೆಲ್ಲಕ್ಕಿಂತ ಹೆಚ್ಚಾಗಿ 'ಸಂಯುಕ್ತ ಕರ್ನಾಟಕ' ಜನ್ಮ ತಾಳಿದ್ದು ಇಲ್ಲಿ; ಬೆಳೆದದ್ದು ಇಲ್ಲಿ. ಜನ ಉತ್ಸಾಹಿಗಳು, ಉದ್ಯಮಶೀಲರು.

## ಅಪಘಾತ, ಧೈರ್ಯ, ಸ್ಫೂರ್ತಿ

ನನ್ನ ಸಂಚಾರದಲ್ಲಿ ಮಲೆನಾಡಿನಲ್ಲಿ ನಾನು ಕಂಡ ಇನ್ನೊಂದು ವಿಶೇಷವೆಂದರೆ ಜನ ತಂತಮ್ಮ ಕರ್ತವ್ಯದಲ್ಲಿ ನಿರತರಾಗಿರುವುದು. ನಿರ್ಲಿಪ್ತ ಮನೋಭಾವದವರು. ಅರ್ಥಾತ್ ತಾವಾಯಿತು ತಮ್ಮ ಕೆಲಸಾಯಿತು. ಅವರು ಚೆನ್ನಾಗಿ ಕೆಲಸ ಮಾಡಲು, ಪ್ರಗತಿಪರರಾಗಲು ಬಹುಶಃ ಇದೇ ಕಾರಣವೇನೋ: ಅವರ ಸಾಹಸಪ್ರವೃತ್ತಿಗೂ ಇದೇ ಸ್ಫೂರ್ತಿಯಾಗಿರಬೇಕು. ಈ ಪ್ರವಾಸವನ್ನು ಪೂರೈಸಿ ಬೆಂಗಳೂರಿನಿಂದ ನಾನು ರಾತ್ರಿಯ ಎಸ್.ಟಿ. ಲಗ್ಝುರಿ ಬಸ್ಸಿನ ಹುಬ್ಬಳ್ಳಿಗೆ ಪ್ರಯಾಣಿಸಿದೆ. ಬೆಂಗಳೂರಿನಿಂದಲೇ ತಡವಾಗಿಹೊರಟ ಬಸ್ಸು ಕೇವಲ ಅರ್ಧಗಂಟೆ ಪ್ರಯಾಣಿಸಿ ೧೮ ಮೈಲು ಬಂದಿರಬೇಕು. ನಿದ್ದೆಯ ಜೊಂಪು. ಆದರೆ ಒಮ್ಮೆಲೇ ಧಡಕ್ ಎಂದು ಸಪ್ಪಳ. ಬಸ್ಸು ನಿಂತುಬಿಟ್ಟಿದೆ. ನನ್ನ ಸಹ ಪ್ರಯಾಣಿಕ ನೆತ್ತರು ನೆತ್ತರು ಎಂದು ಕೂಗುತ್ತಿದ್ದಾನೆ. ಇನ್ನೊಂದು ಬದಿಯಿಂದ ಹುಡುಗನೊಬ್ಬ 'ಅಮ್ಮಾ, ಅಮ್ಮಾ ರಕ್ತ' ಎಂದು ಬೊಬ್ಬೆಯಿಡುತ್ತಿದ್ದಾನೆ. ನನಗೆ ಒಂದು ನಿಮಿಷ ಇದೇನು ಎಂದು ತೋಚಲಿಲ್ಲ. ಬಸ್ಸು-ಲಾರಿ ಢಿಕ್ಕಿ ಹೊಡೆದು ಅಪಘಾತ ಸಂಭವಿಸಿದೆ ಎಂದು ತಿಳಿಯಲು ಸ್ವಲ್ಪ ಸಮಯಬೇಕಾಯಿತು. ಅಷ್ಟರಲ್ಲಿಯೇ ಕೆಲ ಪ್ರವಾಸಿಕರು ಕೆಳಗಿಳಿದು ಹೋಗಿದ್ದರು. ನನಗೆ ಒಮ್ಮೆಲೇ ಎದ್ದು ನಿಲ್ಲಲು ಬರಲಿಲ್ಲ. ಎದ್ದು ನಿಂತಾಗ ಕಾಲ ಮೇಲಿದ್ದ ಕಬ್ಬಿಣಪಟ್ಟಿ ಜಾರಿಬಿತ್ತು. ನನ್ನ ಕನ್ನಡಕ ಮೂಗಿನ ಮೇಲಿರಲಿಲ್ಲ. ಅದು ಹಾರಿ ಹೋಗಿ ಎಲ್ಲೋ ಬಿದ್ದಿತ್ತು. ಮೇಲಿನ ಸಾಮಾನು ಭುಜದ ಮೇಲೆ ಬಿದ್ದು ಮೈ – ಕೈ ನೋಯುತ್ತಿತ್ತು. ಆದರೂ ಸಾವರಿಸಿಕೊಂಡು ಎದ್ದು ದಿಕ್ಕುಪಾಲಾಗಿದ್ದ ನನ್ನ ಸಾಮಾನುಗಳನ್ನು ಒಂದುಗೂಡಿಸಿದೆ. ಮುಖ್ಯವಾಗಿ ನಾನು ಮಂಗಳೂರಿನ ಸ್ನೇಹಿತರಿಂದ ತಂದ ಹಳೆಯ ಪತ್ರಿಕೆಗಳ ಫೈಲುಗಳ ಚಿಂತೆ ನನಗೆ. ಸುದೈವದಿಂದ ಚೀಲದ ಇತರ ಕೆಲ ಸಾಮಾನುಗಳು ಎಲ್ಲೋ ಹೋಗಿದ್ದರೂ ಫೈಲು ಭದ್ರವಾಗಿತ್ತು. ಆಗ ಮನಸ್ಸಿಗೆ ಸಮಾಧಾನ; ನೆಮ್ಮದಿ. ಇಷ್ಟಾಗುವಾಗ ಜನ ನೆರೆದಿದ್ದರು. ನಾನು ನೇರಾಗಿ ಎದ್ದು ನಿಲ್ಲಲು ಬಾರದಾದಾಗ ಕಾಲಿಗೆ ಗಾಯವಾಗಿದೆ ಎಂಬುದು ಗೊತ್ತಾಯಿತು. ತುಂಬ ತೀವ್ರಗಾಯಗೊಂಡು ರಕ್ತಸ್ರಾವವಾಗುತ್ತಿದ್ದ ಗಾಯಾಳುಗಳನ್ನು ಹೊತ್ತು ಬಸ್ಸೊಂದು ಬೆಂಗಳೂರಿಗೆ ಹೊರಟಿತು. ನಮ್ಮ ಡ್ರಾಯವರ ಗಾಯಗೊಂಡಿದ್ದ. ಕಂಡಕ್ಟರ ಮುಂಗಾಣದಾಗಿದ್ದ. ನಮ್ಮ ಪಾಡು ನಾವೇ ನೋಡಿಕೊಳ್ಳಬೇಕಾಯಿತು. ತುಂಬ ಸಾಮಾನು. ಮೈ-ಕೈ ನೋಯುತ್ತಿದ್ದರೂ ಗಾಯಗೊಂಡ ಕಾಲಿನಿಂದಲೇ ಬೆಂಗಳೂರಿನಿಂದ ಹೊರಟ ಮತ್ತೊಂದು ಬಸ್ಸಿನಲ್ಲಿ ಹೇಗೋ ಸ್ಥಳ ದೊರಕಿಸಿ ಹುಬ್ಬಳ್ಳಿಗೆ ಬಂದು ಮುಟ್ಟಿದೆ. ಈ ಅಪಘಾತದಿಂದ ಪಾರಾದ ಸಮಾಧಾನ ಒಂದೆಡೆಗಾದರೆ ಅದನ್ನು ಧೀರತನದಿಂದ – ಧೈರ್ಯದಿಂದ ಎದುರಿಸಲು ಮಲೆನಾಡು ನನಗೆ ಸ್ಫೂರ್ತಿ ನೀಡುತ್ತದೆ ಎಂಬ ಆನಂದ ಇನ್ನೊಂದೆಡೆಗೆ. ಆ ಪ್ರವಾಸದ ಈ ಹೃದಯಸ್ಥ ಕಥನವನ್ನು ನಿಮ್ಮೆದುರು ಇಡಲು ಅವಕಾಶ ದೊರೆತುದು ಸಣ್ಣ ಮಾತೇ! ●●

# ಕನಸಿನ ಬಳ್ಳಿ

## ಡಾ. ಎನ್. ಬಿ. ಮೊಗಸಾಲೆ

ಸೋಮವಾರ, ಮಾರ್ಚ್ ದಿನಾಂಕ ಒಂದು.

ವಾರ್ಡಿಗೆ ಕಾಲಿರಿಸಿದಾಗ ವಸಂತಿ ಇನ್ನೂ ನೆಲದ ಕಸ ತೆಗೆಯದಿದ್ದುದನ್ನು, ನೆಲ ಒರಸದಿದ್ದುದನ್ನು ನೋಡಿ ವಾರ್ಡಿನ ಬಾಗಿಲಲ್ಲೇ ನಿಂತು ಕೂಗಿದಳು.

"ರಾಮೂ, ರಾಮೂ."

ರಾಮು – ವಾರ್ಡ್‌ಬಾಯ್ ಓಡಿ ಬಂದ.. ಅವನಿಗೆ ಸ್ಪಷ್ಟವಾಗಿ ತಿಳಿದಿತ್ತು, ತನ್ನನ್ನು ಏಕೆ ಕರೆದುದು ಎಂದು. ಆತ ಏನು ಎನುವುದಕ್ಕಿಂತ ಮುಂಚೆಯೇ ವಸಂತಿ ವಾಚು ನೋಡುತ್ತ ಹೇಳಿದಳು.

"ಏನು ಇದು? ಏಳೂವರೇ ಗಂಟೆ ದಾಟಿದರೂ ಕಸ ತೆಗೆಯಲಾಗಲಿಲ್ಲವಾ? ಡಾಕ್ಟರ್ ಬಂದರೆ ಏನೂಂತಾರೆ ಎಂದು ನಿನಗೆ ಗೊತ್ತಿಲ್ಲವಾ. ನಿನಗೆ?"

"ಆ ವಾರ್ಡಿನ ಸಿಸ್ಟರ್ ಕರೆದರಮ್ಮ. ಇಲ್ಲದಿದ್ರೆ ಆಗ್ಲೆ ತೆಗೆದಾಗುತ್ತಿತ್ತು" ರಾಮು ನುಸುಳಿಕೊಳ್ಳುವಂತೆ ಆಡಿದ.

"ಗೊತ್ತೊ?" ಎಂದು ವಸಂತಿ ತಿರುಗಿ ಸಹ ನೋಡದೆ "ಹೂಂ ತೆಗೆಯೋ ಬೇಗ" ಎಂದವಳೆ ಒಂದನೆ ಬೆಡ್‌ನ ತಲೆಯ ಮೇಲೆ ಗೋಡೆಯಲ್ಲಿ ತೂಗುಹಾಕಿದ 'ಕೇಸ್‌ಶೀಟ್' ಮೇಲೆ ಕೈ ಹಾಕಿ "ಹೇಗಿದೆಯಪ್ಪ ಕಾಲು ನೋವು?" ಎಂದಳು.

ಇಂಜನಿಯರಿಂಗ್ ವಿದ್ಯಾರ್ಥಿಯೊಬ್ಬ ಬಸ್ಸು ಅವಘಡದಲ್ಲಿ ಕಾಲು ಮುರಿದುಕೊಂಡಿದ್ದ. ಕಾಲಿಗೆ ಉದ್ದಕ್ಕೂ ಬೇಂಡೇಜು ಹಾಕಿ ಹಾಸಿಗೆಯ ಕೆಳಗೂ ತಲೆದಿಂಬಿರಿಸಿ ಅದರ ಮೇಲೆ ಕಾಲಿಟ್ಟು ಮಲಗಿದ್ದ ಆತ.

"ಇನ್ನೂ ಕಾಲು ಎತ್ತೋಕೆ ಆಗೋದಿಲ್ಲ ಸಿಸ್ಟರ್" ಎಂದ ಆತ.

ವಸಂತಿ ಕೇಸ್‌ಶೀಟಿನ ಹಿಂದೆ ಇದ್ದ ಹಳದಿ ಲಕೋಟೆಯ ನಡುವೆ ಇದ್ದ ಎಕ್ಸ್‌ರೇ ಫೋಟೋ ನೋಡಿ ಮೌನವಾಗಿ ಮುಂದೆ ಹೆಜ್ಜೆ ಹಾಕಿದಳು.

"ನಿನ್ನೆಯವರು ಇವತ್ತು ಬರೋದಿಲ್ವ ಅಮ್ಮ" ತಲೆನರೆತ ಮುದುಕನೊಬ್ಬ ವಸಂತಿ ಬಂದುದನ್ನು ಕಂಡು ಎದ್ದು ಕುಳಿತು ಕೇಳಿದ.

"ಇಲ್ಲ ಅಜ್ಜಯ್ಯ ಇವತ್ತು ಅವಳಿಗೆ ಬೇರೆ ವಾರ್ಡು. ಇನ್ನೊಂದು ತಿಂಗಳು ನಾನು ಈ ವಾರ್ಡಿಗೆ.

ನಿನ್ನೆಯ ದಿನ ಮೇಟ್ರನ್ ಹೇಳಿದ್ದಳು, ಎಲ್ಲಾ ಸಿಸ್ಟರ್ಸ್‌ಗಳಿಗೆ ಬದಲಾದ ವಾರ್ಡಿನ ವಿವರ.

ಅಯ್ಯೋ! ಕಳೆದ ತಿಂಗಳ ಡ್ಯೂಟಿಯಲ್ಲಿ ತನ್ನ ವಾರ್ಡಿಗೆ ಇದ್ದ ಡಾಕ್ಟ್ರು, ಆ ಮೂರ್ತಿ – ನೆನೆದಾಗ ವಸಂತಿಗೆ ಏನೇನೋ ಆಯಿತು.

ಸೇವೆಯ ಆದರ್ಶ ಹೊತ್ತು, ಎಲ್ಲರೂ ಆಸ್ಪತ್ರೆಗೆ ಬರುತ್ತಾರೆ. ನರ್ಸುಗಳು, ಡಾಕ್ಟರುಗಳು. ಆದರೆ ಇಲ್ಲಿ ಬಂದ ಮೇಲೆ ಆ ಸೇವೆ ಇಲ್ಲದೆ ಹೋಗಿ, ಎಲ್ಲ ಯಾಂತ್ರಿಕವಾಗಿ ಅದರ ಮಧ್ಯೆ ಮನಸ್ಸು ವಿಕಾರವಾಗಿ ಹೀನಕೃತ್ಯಕ್ಕೆ ಇಳಿಯುವಷ್ಟರ ತನಕ ದುಡುಕುತ್ತಾರೆ. ಕಡೆಗೆ ಡಾಕ್ಟರ್ ಮೂರ್ತಿಯೊಬ್ಬನೇ ಸಾಕಲ್ಲ, ಇದಕ್ಕೆ ಉದಾಹರಣೆ? ಅವನು ವಾರ್ಡಿಗೆ ಬರುವುದು ಡ್ಯೂಟಿಗಾಗಿ ಅಲ್ಲ– ಸಿಸ್ಟರ್‌ಗಳೊಡನೆ ಚಕ್ಕಂದವಾಡಲು!

"ನಿನ್ನೆ ರಾತ್ರೆ ನಿದ್ದೇನೆ ಇಲ್ಲವ್ಮಾ. ನಿನ್ನೆ ಇದ್ದ ಸಿಸ್ಟರ್‌ಗೆ ಹೇಳಿದೆ. ಎಲ್ಲಾ ನಾಳೆಯಿಂದ ಸರಿಯಾಗುತ್ತೆ, ಎಂದರಮ್ಮ. ಹನ್ನೆರಡು ದಿವ್ಸ ಆಯಿತಮ್ಮ ಇಲ್ಲಿಗೆ ಬಂದು. ಇನ್ನೂ ಸ್ವಲ್ಪನೂ ಕಿಮ್ಮು ವಾಸಿ ಇಲ್ಲ"!

ಕೇಸ್ ಶೀಟು ಹಿಡಿದು ಆಲೋಚಿಸುತ್ತಿದ್ದ ವಸಂತಿಗೆ ಮತ್ತೊಬ್ಬ ವೃದ್ಧ ಹೇಳಿದ. ವಸಂತಿ ಅದನ್ನು ಹಾಗೆ ಅಲ್ಲಿರಿಸಿ ಸಂತೈಸುವ ಧ್ವನಿಯಲ್ಲಿ ಹೇಳಿದಳು. "ಈವತ್ತು ಹೊಸ ಡಾಕ್ಟ್ರು ಬರ‍್ತಾರೆ ಅಜ್ಜಯ್ಯ. ಅವರಿಗೆ ಹೇಳಿ. ಸಂಜೆ ಒಂದು ಇಂಜೆಕ್ಷನ್ ಕೊಟ್ಟುಬಿಡೋಣ."

ಮುದುಕ ತಲೆಯಲ್ಲಾಡಿಸಿದ್ದು ನೋಡಿ, ವಸಂತಿ ಮುಂದೆ ಹೋದಳು... 'ಇನ್ನು ಯಾವನು ಬರ‍್ತಾನಪ್ಪ ಈ ವಾರ್ಡಿಗೆ ಡಾಕ್ಟ್ರು? ಎಲ್ಲಾದರೂ ಡಾಕ್ಟರ್ ಸದಾನಂದ ಬಂದರೆ?'

ಸದಾನಂದ!

ನೆನಸಿದಾಗಲೇ ವಸಂತಿಗೆ ರೋಮಾಂಚನ ಆದಹಾಗೆ ಆಯ್ತು. ಎಂತಹ ಗಂಭೀರ ವ್ಯಕ್ತಿತ್ವ. ದುಂಡಗಾದ ಮುಖ. ಗುಂಗುರು ಗುಂಗುರು ಕೂದಲು, ನಸು ಹಳದಿ ಬಣ್ಣ; ಹೊಳೆಯುವ ಎರಡು ಕಣ್ಣುಗಳು. ಈ ಆಸ್ಪತ್ರೆಯಲ್ಲಿ ಅವರಂಥವರು ಒಬ್ಬರೂ ಇಲ್ಲ!

ಸದಾನಂದ! ಒಮ್ಮೆಯಾದರೂ ತನ್ನನ್ನು ಮೂರ್ತಿಯ ಹಾಗೆ ನೋಡಿದ್ದುಂಟೇ? ಸುಮ್ಮಸುಮ್ಮನೆ ಹರಟೆ ಕೊಚ್ಚಲು ಕಾಲು ಕೆದಕಿದ್ದುಂಟೇ? ಎಷ್ಟು ಶಿಸ್ತು. ಅಚ್ಚುಕಟ್ಟು ಅವರ ಕೆಲಸ! ಪ್ರತಿಯೊಂದು ಕೇಸುಗಳ ಬಗೆಗೂ ಎಷ್ಟೊಂದು ಪರ್ಸನಲ್ ಇಂಟರೆಸ್ಟ್ ತೆಗೆದುಕೊಳ್ಳುತ್ತಾರೆ ಅವರು? ಒಬ್ಬ ಪ್ರೈವೇಟ್ ಡಾಕ್ಟ್ರು ಕೂಡ ಆ ರೀತಿ ಪೇಶಂಟ್ಸ್‌ಗಳನ್ನು ನೋಡೋಕಿಲ್ಲ!

ನೆನಸಿದಂತೆ ವಸಂತಿಯ ಮನಸ್ಸಿನಲ್ಲಿ ಏನೋ ತಳಮಳವಾಯಿತು! ಇಲ್ಲ–ತಾನು ಖಂಡಿತ ಅವರಿಗೆ ಸೋಲಬಾರದು. ಮನಸ್ಸು ಗಟ್ಟಿ ಮಾಡಿಕೊಂಡಿರಬೇಕು. ಅವನನ್ನೇ ಮರೆತುಬಿಡಲು ಯತ್ನಿಸಬೇಕು. ಕೈಗೆ ಎಟುಕದ



ಡಾಕ್ಟ್ರಿಗೆ ಯಾಕೆ ಆಸೆ ಪಡಬೇಕು. ಎಂದಾದರೂ ಅವರು ತನ್ನನ್ನು ಮದುವೆಯಾಗಲು ಸಾಧ್ಯವೇ? ತಾನೋ ಬಡ ನರ್ಸು! ಅದಕ್ಕಿಂತಲೂ ಹೆಚ್ಚು ವಿಧವೆ.

ಮತ್ತೆ ಅವಳ ಮನಸ್ಸು, ಹಿಂದಿನ ದಿನಗಳ ಕಡೆಗೆ ಓಡಿತು. ಅಷ್ಟರಲ್ಲಿ – ವಾರ್ಡಿನ ಬಾಗಿಲಲ್ಲಿ ಶೂವಿನ ಸದ್ದು ಕೇಳಿಸಿತು. ವಸಂತಿ ತಿರುಗಿ ನೋಡುತ್ತಾಳೆ, ಡಾಕ್ಟರ್ ಸದಾನಂದ!

"ಗುಡ್ ಮಾರ್ನಿಂಗ್ ಡಾಕ್ಟರ್."

"ಗುಡ್ ಮಾರ್ನಿಂಗ್"

ನಾಲ್ಕು ಕಣ್ಣುಗಳು ಒಮ್ಮೆ ಕೂಡಿದವು. ಯಾವುದೋ ಅವ್ಯಕ್ತ ಆನಂದ ಅವರಿಬ್ಬರಿಗೂ. "ನೀವಾ ಈ ಸಲ?" ಎಂದು ಕೇಳಬೇಕೆನಿಸಿತು ವಸಂತಿಗೆ. ಆದರೆ ಆಕೆ ಬಾಯಿ ತೆರೆಯಬೇಕೆನ್ನುವಷ್ಟರಲ್ಲೇ —

"ಇಲ್ಲಿ ಬನ್ನಿ" ಎಂದ ಸದಾನಂದ.

ಪ್ರತಿಯೊಂದು ಬೆಡ್‌ಗಳನ್ನು ನೋಡಿಯಾಯಿತು. ಅವರವರ ರೋಗಗಳಿಗೆ ತಕ್ಕಂಥ ಚಿಕಿತ್ಸೆ ಬರೆದಾಯಿತು. ಲೈಸೋಲಿನ್ ಬೇಸಿನ್‌ಗೆ ಕೈ ಮುಳುಗಿಸಿ ತೊಳೆಯುತ್ತ ಸದಾನಂದ ಕಣ್ಣೆತ್ತಿ ನೋಡಲಾರದೆ ಬೇಸಿನ್ನು ಹಿಡಿದ ವಸಂತಿಯ ಸುಂದರ ಕೈಗಳನ್ನು ನೋಡುತ್ತಾ ಹೇಳಿದ–

"ನೋಡಿ, ಆ ಒಂದನೇ ಬೆಡ್ಡಿನ ಪೇಶಂಟನ್ನು ಎಕ್ಸ್‌ರೇಗೆ ಕಳುಹಿಸಿ. ಪಾಪ ಇಂಜನಿಯರಿಂಗ್ ಸ್ಟೂಡೆಂಟ್! ಎಲುಬು ಸರಿ ಕೂಡಿಕೊಂಡಿದೆಯೋ ನೋಡೋಣ? ಟ್ರಾಲಿಯವನಿಗೆ ಹೇಳಿ. ಹ್ನ?"

"ಎಸ್ ಸರ್, ನೋಡಿ ಆ ಮೂರನೆ ಬೆಡ್ಡಿನ ಅಜ್ಜಯ್ಯನವರಿಗೆ ನಿದ್ದೆಯೇ ಇಲ್ಲವಂತೆ. ನಿಮ್ಮತ್ರ ಹೇಳಲೇ ಇಲ್ಲ. ಹೆದರಿಕೊಂಡುಬಿಟ್ಟಾಂತ ಕಾಣುತ್ತೆ. ಏನಾದರೂ ಇಂಜೆಕ್ಷನ್..."

"ಛೆ ! ಛೆ! ಅದೇನೂ ಬೇಡ. ರಾತ್ರೆ ಒಂದು ಗಾರ್ಡಿನಾಲ್ ಟ್ಯಾಬೆಲೆಟ್ಸ್ ಕೊಟ್ಟುಬಿಡಿ".

"ಯಸ್ ಸಾರ್."

ಡಾಕ್ಟರ್ ಸದಾನಂದ ಮುಂದೆ ಹೋದ, ಅವನೆಲ್ಲಿ ಹೊರಟು ಹೋಗಿಬಿಡ್ತಾನೇನೋ ಎಂಬ ಅಂಜಿಕೆಯಿಂದ ವಸಂತಿಯ ಎದೆ ಢವಗುಟ್ಟತೊಡಗಿತು. ಅವಸರವಾಗಿ ಪಕ್ಕದ ಕೊಠಡಿಗೆ ಹೋಗಿ – "ಸರ್ ಸಿರಂಜ್ ಸ್ಟೆರಲೈಸ್ ಮಾಡಿಟ್ಟಿದ್ದೆ.ತರಲಾ?" ಎಂದಳು. (ಇನ್ನು ಹತ್ತು ನಿಮಿಷ ಅವನ ಸಾಮೀಪ್ಯಸುಖ ಸಿಗಬಹುದಲ್ಲಾ ಎಂಬ ಆಸೆ)

"ಯಸ್ ಕೊಡಿ, ಬ್ರಿಕ್ ಮಾಡಿಕೊಡುತ್ತೇನೆ" ಡಾ. ಸದಾನಂದ ಇಂಜೆಕ್ಷನ್ ಕೊಟ್ಟು – ಮೈನರ್ ಆಪರೇಶನ್ ಥೇಟರಿನತ್ತ ಹೆಜ್ಜೆ ಹಾಕಿದ.

ಅವನು ಹೋಗುವುದನ್ನೇ ನೋಡುತ್ತ, ಒಂದು ಕ್ಷಣ ಏನೋ ಕಳೆದುಕೊಂಡಂತೆ ಆದ ವಸಂತಿ, ಮನಸಿನಲ್ಲೇ, ಅಲ್ಲ ಅವರಿಗೂ ನನಗೂ ಯಾವ ಸಂಬಂಧ? ಯಾಕೆ ನನ್ನ ಮನಸ್ಸು ಹೀಗೆ ಅವರಿಗಾಗಿ ಚಡಪಡಿಸುತ್ತಿದೆ? ತಾನು ಅವರನ್ನು ಪ್ರೇಮಿಸುವುದು?

'ಛೆ! ವಿಧವೆಗೂ ಪ್ರೇಮಿಸುವ ಹಕ್ಕುಂಟೆ? ತನಗೆ ಪುನರ್ವಿವಾಹವೆ ಇಲ್ಲ ಎಂದುದರಿಂದಲೇ ಅಲ್ಲವೇ ತಾನು ಈ ವೃತ್ತಿಗೆ ಬಂದದ್ದು! ತಾನೇಕೆ ಸ್ವಚ್ಛವಾಗಿರುವ ಈ ಮನಸ್ಸನ್ನು ಅವನ ವಿಷಯವಾಗಿ ಚಿಂತಿಸಿ ಕೆಡಿಸಿಕೊಳ್ಳಬೇಕು. ಖಂಡಿತ ನಾಳೆಯಿಂದ ತಾನು ದೃಢ ಮನಸ್ಕಳಾಗಬೇಕು.'

ವಸಂತಿ ಯೋಚಿಸುತ್ತ ರೋಗಿಗಳಿಗೆ ಔಷಧಿ ಕೊಡುತ್ತ ಬಂದಳು. ಅಷ್ಟರಲ್ಲಿ ಹೊರಗಿನಿಂದ ಮೈನರ್ ಓ. ಟಿ.ಯ ಅಟೆಂಡರ್ ಬಂದು ಕೂಗಿದ, "ಸಿಸ್ಟರ್".

"ಕಹಿ ಇದ್ದರೂ ಕುಡೀಬೇಕಪ್ಪಾ, ಮತ್ತೆ ಉಬ್ಬಸ ಹೇಗೆ ಕಡಿಮೆಯಾಗುತ್ತದೋ?" ಎಂದು ಕಂಟಕೋರ ಹುಡುಗನೊಬ್ಬನಿಗೆ ವಸಂತಿ ಹೇಳುತ್ತಿರುವವಳು ತಿರುಗಿ,

"ಏನು" ಎಂದಳು ಕುತೂಹಲದಿಂದ.

"ಮೈನರ್ ಓ. ಟಿ. ಯ ನರ್ಸು 'ಆಫ್'ನಲ್ಲಿದ್ದರಂತೆ. ಎಲ್ಲಾ ರೆಡಿಯಾಗಿದೆ ನಿಮ್ಮನ್ನು ಬರಲಿಕ್ಕೆ ಹೇಳಿದ್ರು ಡಾಕ್ಟ್ರು."

ಗೊತ್ತಿದ್ದರೂ ಯಾವುದೋ ಅವ್ಯಕ್ತ ಆನಂದದಿಂದ ಹೇಳಿದಳು ವಸಂತಿ "ಯಾರು ಸದಾನಂದ ಡಾಕ್ಟ್ರಾ"?

"ಹೂನಮ್ಮ".

"ಹೋಗೋ ಈಗ್ಲೆ ಬಂದ್ಬಿಟ್ಟೆ ಅಂತ ಹೇಳು" ಎಂದು ವಸಂತಿ ಪಕ್ಕದ ವಾರ್ಡಿಗೆ ಹೋಗಿ ಸಿಸ್ಟರ್ ಶಾರದೆಗೆ,

"ಶಾರದಾ ಪ್ಲೀಸ್– ಸ್ವಲ್ಪ ನನ್ನ ವಾರ್ಡಿಗೆ ಬಂದು, ಎಂಟು, ಹತ್ತು, ಹನ್ನೊಂದನೆ ಬೆಡ್ಡಿಗೆ ಮದ್ದುಕೊಟ್ಟು ಬರ್ತೀಯಾ. ನನಗೆ ಮೈನರ್ 'ಓ.ಟಿ' ಯಿಂದ ಕರೆ ಬಂದಿದೆ" ಎಂದಳು.

ೱ ೱ ೱ

ಆಪರೇಶನ್ ಮುಗಿಸಿ ಸೂಚರ್ಸ್ ಹಾಕಿ ಬ್ಯಾಂಡೇಜ್ ಮಾಡು ಎಂದು ವಸಂತಿಗೆ ಹೇಳಿ ಕೋಟು ಕಳಚಿ ಕೈ ತೊಳೆದುಕೊಂಡು ಬಾಗಿಲು ನೂಕಿ ಹೊರಗೆ ಬಂದ ಡಾ. ಸದಾನಂದ. ಪ್ಯಾಂಟಿನ ಕಿಸೆಯಿಂದ ಸಿಗರೇಟು ಕೇಸ್ ತೆಗೆದು ಮೆಲ್ಲನೆ ಕಡ್ಡಿಗೀರಿ ಸಿಗರೇಟು ಸುಟ್ಟುಕೊಂಡ. ಸಿಗರೇಟು ಸೇದುತ್ತಿದ್ದಾಗ ಅವನ ಮನಸ್ಸು ಪೂರ್ತಿ ವಸಂತಿಯಿಂದ ತುಂಬಿಹೋಗಿತ್ತು. ಫ್ಲಾರೆನ್ಸ್ ನೈಟಿಂಗೇಲಳ ಹಾಗೇ ಸೇವೆಯನ್ನೇ ಮುಖ್ಯ ಉದ್ದೇಶವಾಗಿರಿಸಿಕೊಂಡ ಅವಳ ಬಗ್ಗೆ ದಿನದಿಂದ ದಿನಕ್ಕೆ ಅವನ ಮನಸ್ಸು ಹತ್ತಿರ ಬಂದಿತ್ತು. ಯಾಕೆ ಅವಳನ್ನು ತಾನು ಮೆಚ್ಚಿದೆ? ಅವಳ ಕತೆ ಗೊತ್ತಿದ್ದೂ ಗೊತ್ತಿದ್ದೂ ತನ್ನ ಮನಸ್ಸು ಮತ್ತೂ ಮತ್ತೂ ಅವಳನ್ನು ತುಂಬಿಕೊಳ್ಳಲು ಯಾಕೆ






# ನಿಯಮಿತವಾಗಿ ಫೋರ್‌ಹೆನ್ಸ್ ಟೂಥ್‌ಪೇಸ್ಟ್‌ನಿಂದ ಬ್ರಶ್-ಮಾಡುವುದರಿಂದ ಒಸಡುಗಳ ತೊಂದರೆಗಳನ್ನು ಹಾಗೂ ದಂತಕ್ಷಯವನ್ನು ತಡೆಯಲು ಸಾಧ್ಯ.




ಯಾಕೆಂದರೆ ಫೋರ್‌ಹೆನ್ಸ್ ಟೂಥ್‌ಪೇಸ್ಟ್ ಹಲ್ಲು ಮತ್ತು ಒಸಡು ಇವೆರಡರ ರಕ್ಷಣೆಯನ್ನು ಮಾಡುತ್ತದೆ. ದಂತವೈದ್ಯರಿಂದ ಸೃಷ್ಟಿಸಲ್ಪಟ್ಟ ಫೋರ್‌ಹೆನ್ಸ್ ಟೂಥ್‌ಪೇಸ್ಟ್‌ನಲ್ಲಿ ಒಸಡುಗಳಿಗಾಗಿ ವಿಶೇಷ ಘಟಕಗಳು ಇವೆ. ಒಸಡುಗಳ ತೊಂದರೆಗಳನ್ನು ಹಾಗೂ ದಂತಕ್ಷಯವನ್ನು ತಡೆಗಟ್ಟಲು ಅತ್ಯುತ್ತಮ ಉಪಾಯವೆಂದರೆ ದಿನಾಲೂ ಬೆಳಿಗೆ ಮತ್ತು ರಾತ್ರಿ ನಿಯಮಿತವಾಗಿ ಫೋರ್‌ಹೆನ್ಸ್ ಟೂಥ್‌ಪೇಸ್ಟ್‌ನಿಂದ ಹಲ್ಲುಗಳನ್ನು ಉಜ್ಜಿ ಸ್ವಚ್ಛಗೊಳಿಸಬೇಕು. ಈ ಮಹತ್ವದ ಅಭ್ಯಾಸವನ್ನು ನಿಮ್ಮ ಮಗುವಿಗೆ ಕಲಿಸಬೇಕಾದ ಸಮಯವು ಈಗಲೇ ಬಂದಿದೆ. ಅಹುದು. ಈ ವಯದಲ್ಲಿಯೇ, ಅವಳಿಗೆ ಕಲಿಯಲು ಉತ್ಸಾಹವಿರುವಾಗಲೇ ಕಲಿಸಿರಿ. ಆದುದರಿಂದ, ಇಂದೇ ಪ್ರಾರಂಭಿಸಿರಿ.

**ಫೋರ್‌ಹೆನ್ಸ್‌ದಿಂದ ದಂತರಕ್ಷಣೆಯನ್ನು ಗೈಯುವ ಅಭ್ಯಾಸ ಬಾಲ್ಯದಲ್ಲಿದ್ದರೆ ಒಳ್ಳೆಯದು.**

**ಫೋರ್‌ಹೆನ್ಸ್**
ದಂತವೈದ್ಯರಿಂದ
ಸೃಷ್ಟಿಸಲ್ಪಟ್ಟ ಟೂಥ್‌ಪೇಸ್ಟ್.

---

*ಉಚಿತ!* "ಹಲ್ಲುಗಳ ಮತ್ತು ಒಸಡುಗಳ ರಕ್ಷಣೆ" ಎಂಬ ಬೋಧಪ್ರದವಾದ, ವರ್ಣರಂಜಿತ ಪುಸ್ತಿಕೆಯು ಹತ್ತು ಭಾಷೆಗಳಲ್ಲಿ* ದೊರೆಯುತ್ತದೆ: ಮ್ಯಾನರ್ಸ್ ಡೆಂಟಲ್ ಎಡ್ವೈಜರಿ ಬ್ಯೂರೋ, ಪೋಸ್ಟ್ ಬ್ಯಾಗ್ 10031, ಮುಂಬಯಿ-1 ಬಿಆರ್. ಇವರಿಗೆ ಬರೆಯಿರಿ.

ಹೆಸರು ______________ ವಯಸ್ಸು - (KVID)

ವಿಳಾಸ ______________



* 20 ಪೈಸೆ ಸ್ಟ್ಯಾಂಪು (ಅಂಚೆ ವೆಚ್ಚಕ್ಕಾಗಿ) ಕಳಿಸಿರಿ ಮತ್ತು ಇಂಗ್ಲಿಷ್, ಹಿಂದಿ, ಮರಾಠಿ, ಗುಜರಾತಿ, ಉರ್ದು, ಬಂಗಾಳಿ, ತಮಿಳು, ತೆಲುಗು, ಮಲಯಾಳಂ, ಕನ್ನಡ ಇವುಗಳಲ್ಲಿ ಯಾವ ಭಾಷೆಯ ಪುಸ್ತಿಕೆ ಬೇಕೋ ಅದರ ಕೆಳಗೆ ಗೆರೆ ಎಳೆಯಿರಿ.

-203D KAN



ಯಂತ್ರಿಸುತ್ತಿದೆ? ಇದರ ಕೊನೆ ಹೇಗೆ? ಎಷ್ಟೋ ವೇಳೆ ರಾತ್ರಿ ಒಬ್ಬನೇ ಹಾಸಿಗೆಯಲ್ಲಿ ಅಂಗಾತ ಮಲಗಿ ಲೈಟ್ ಆಫ್ ಮಾಡಿ ಮೇಲೆ ತಿರುಗುವ ಫ್ಯಾನನ್ನೇ ನೋಡುತ್ತ ಯೋಚಿಸಿದ್ದ! ಯೋಚನೆಗೆ ಉತ್ತರ ಸಿಕ್ಕಿದುದಕ್ಕಿಂತಲೂ ಹೆಚ್ಚು ಅವಳನ್ನು ತಾನು ಪ್ರೀತಿಸಿದರೆ ಅದೇನು ತಪ್ಪೇ? ಎಂದು ಅವನ ಬುದ್ಧಿ ತರ್ಕಿಸುತ್ತಿತ್ತು.

ಹೊಗೆಯನ್ನುಗುಳಿ ಕುತ್ತಿಗೆಯ ಹಿಂದೆ ಟವೆಲಿನಿಂದ ಒರಸುತ್ತ ಸದಾನಂದ ಮುಂದೆ ಹೆಜ್ಜೆ ಇಟ್ಟ. ಅವನ ಹಿಂದಿನಿಂದಲೇ ಅನುಸರಿಸುತ್ತಿದ್ದ ವಸಂತಿ ಅವನ [illegible] ಬೇಕಂತಲೇ ಕೇಳಿದಳು,

"ಸರ್, ಪೇಶಂಟ್ಸಿಗೆ ಪೆನ್ಸಿಲಿನ್ ಕೊಡಲಿಕ್ಕೆ ಹೇಳಲೇನು?"

"ಹ್ಞೂ, ಅವಶ್ಯ ಹೇಳಿ" ವಸಂತಿಯನ್ನು ಕಣ್ತುಂಬ ನೋಡಿ ಮುಗುಳ್ನಕ್ಕು ಆತ ಮುಂದೆ ಸಾಗಿದ. ವಸಂತಿ ಕಾಲುದಾರಿಯಿಂದ ಸಾಗಿ ಅವಳ ವಾರ್ಡಿನತ್ತ ತಿರುಗಿದಳು.

ವಾರ್ಡಿಗೆ ತಾಗಿ ಇರುವ ಕೊಠಡಿಯಲ್ಲಿ ಹೋಗಿ ಹತ್ತು ನಿಮಿಷ ಸದಾನಂದ ಕುಳಿತುಕೊಂಡ. ಇನ್ನೇನು, ಗಂಟೆ ನೋಡಿ ಊಟಕ್ಕೆ ಏಳುವುದರಲ್ಲಿದ್ದ. ಅಷ್ಟರಲ್ಲಿ ಬಂದ ವಸಂತಿ ಇಂಜನಿಯರಿಂಗ್ ಸ್ಟೂಡೆಂಟ್‌ನ ಕಾಲಿನ, ತಿರುಗಿ ತೆಗೆಸಿದ ಎಕ್ಸರೆಯನ್ನು ತಂದು ತೋರಿಸಿದಳು. ಅವಳ ಕೈಯಿಂದ ತೆಗೆದುಕೊಳ್ಳುತ್ತಾ ಒಮ್ಮೆ ಸೂಕ್ಷ್ಮವಾಗಿ ನೋಡಿ "ಗುಡ್, ಸರಿಯಾಗಿ ಕೂಡಿಕೊಂಡಿದೆ" ಎಂದ ಸದಾನಂದ. ವಸಂತಿಯ ಮುಖದಲ್ಲಿ ಮಂದಹಾಸ ಮಿಂಚಿತು. ಅವಳು ಅದನ್ನು ತಿರುಗಿ ಇರಿಸಲು ಹೋದಾಗ ಸದಾನಂದ ಎದ್ದು ಹೊರಟುಹೋದ.

ವಸಂತಿಗೆ ಅವನು ಅಷ್ಟು ಥಕ್ಕನೆ ಹೋದಾನೆಂದು ಅನಿಸಿರಲಿಲ್ಲ. ಆದರೆ ಆ ಬೇಸರಕ್ಕಿಂತಲೂ ಹೆಚ್ಚು ಆ ದಿನವೇ ಅವಳಿಗೆ ಸಂತೋಷದಾಯಕವಾಗಿತ್ತು! ಮೂರು ತಿಂಗಳ ಮೇಲೆ ಸದಾನಂದ ಮತ್ತು ಅವಳು ತಿರುಗಿ ಒಂದೇ ವಾರ್ಡಿಗೆ ಬಂದಿದ್ದಾರೆ! ಸದಾನಂದನೆಂದರೆ, ಇತರ ಎಲ್ಲಾ ಡಾಕ್ಟರರಿಗಿಂತಲೂ ಆಕೆಗೆ

ಹೆಚ್ಚು ಗೌರವ, ಅಭಿಮಾನ. ಏನೂ ಕೆಲಸವಿಲ್ಲದುದ ರಿಂದ ಹಿಂದಿನ ದಿನ ಓದಿ ಇರಿಸಿದ್ದ ಕಾದಂಬರಿ ಹಿಡಿದು ಓದಲು ಕುಳಿತಳು ವಸಂತಿ. ಪುಸ್ತಕದ ಒಳಗಿನ ಅಕ್ಷರ ಗಳಲ್ಲಿ ಸದಾನಂದನ ದುಂಡಗಿನ ಮುಖ ಕಾಣುತ್ತಿತ್ತೇ ವಿನಾ ಕತೆ ಮುಂದೆ ಸಾಗಿರಲಿಲ್ಲ. ಅಷ್ಟರಲ್ಲಿ ಹೊರಗಿ ನಿಂದ ಬಂದ ಶಾರದೆ, ಬಂದವಳೇ ಮೂವತ್ತೆರಡೂ ಹಲ್ಲನ್ನು ತೋರಿಸುತ್ತಾ ಹೇಳಿದಳು.

"ಏನೇ ವಸಂತಿ, ನಿನ್ನ ಡಾಕ್ಟ್ರು ಬಿಟ್ಟುಹೋದ್ರಾ ನಿನ್ನ! ಪಾಪ, ಅದಕ್ಕೆ ಈಗ ಕಾದಂಬರಿ ಪಠಣವೇ?" ಅವಳ ಮಾತಿನಿಂದ ಆದ ಬೇಸರದಿಂದ ಮುಖ ಬಿಳಿಚಿ ಕೊಂಡ ವಸಂತಿ ತಗ್ಗಿದ ಸ್ವರದಲ್ಲೇ ಹೇಳಿದಳು.

"ಏನೇ, ಶಾರದಾ ಅದೇನು ಹಾಗೆನ್ನುತ್ತೀಯಾ?"

"ಮತ್ತೆ ಹೇಗೆ ಹೇಳ್ಬೇಕು ಮಾರಾಯ್ತಿ? ನಮ್ಮಾಚೆ ಮುಖ ಕೂಡ ತಿರುಗಿಸದ ಆ ಡಾಕ್ಟ್ರು ನೀನು ಅಂದ್ರೆ ಬಾಯಿ ಬಿಡ್ತಾನೆ ಅನ್ತಿದ್ದಾರೆ ಎಲ್ಲ".

"ಹೋಗೆ, ಸುಮ್ಮ ಸುಮ್ಮನೆ ಹಾಗೆಲ್ಲ ಹೇಳಬಾರದು. ನೀವೆಲ್ಲಾ ಭಾರಿ 'ಸುಭಗ'ರು ಅಂತ ಕಾಣುತ್ತೆ!"

ಅಷ್ಟರಲ್ಲಿ ಒಬ್ಬ ರೋಗಿ- "ಸಿಸ್ಟರ್ ನೀರು", ಎಂದು ಕೂಗಿಕೊಂಡ. ಮತ್ತೆ ಶಾರದೆ ಏನು ಹೇಳುತ್ತಾಳೆ ಎಂಬುದನ್ನು ಕೇಳಲು ಮನಸ್ಸಿಲ್ಲದ ವಸಂತಿ ಎದ್ದು ನೀರು ಕೊಡಲು ಹೋದಳು.

ಮರದಿಂದ ಬಿದ್ದಿದ್ದ ಅವನ ಪಕ್ಕೆಲುಬು ತುಂಡಾಗಿತ್ತು. ಎದೆಗೆ ಪ್ಲಾಸ್ಟರ್ ಹಾಕಿತ್ತು. ಅವನಿಗೆ ನೀರು ಕೊಡುತ್ತಾ ವಸಂತಿ ಗಂಟೆ ನೋಡಿಕೊಂಡಳು. ಹೊಟ್ಟೆ ತಾಳ ಹಾಕಿದುದಕ್ಕೆ ವಸತಿ ಗೃಹದತ್ತ, ತುಸು ಕಡೆದು ನಿಧಾನವಾಗಿ ಹೆಜ್ಜೆ ಹಾಕಿದಳು.

× × ×

ಚಾಪೆ ಹಾಸಿಕೊಂಡು ಮಲಗಿದಾಗ ವಸಂತಿಗೆ ನೆನಪಾಯಿತು. ಸಂಜೆ ವಾರ್ಡಿಗೆ ಬಂದಿದ್ದ ಸದಾನಂದ ಒಬ್ಬ ರೋಗಿಯ ಬಗ್ಗೆ ಇಂಜೆಕ್ಷನ್ ತರಿಸುವ ಬಗ್ಗೆ ಹೇಳಿದ್ದರು. ತಾನು ಹೂಂಗುಟ್ಟಿ ತರಿಸಬೇಕೆಂದಿದ್ದಾಗ ಸಿಸ್ಟರ್ ರಾಜೀವಿ ತನ್ನೊಂದಿಗೆ ಹರಟೆಗೆ ನಿಂತು, ಕಡೆಗೆ ಎದ್ದುಕೊಂಡು ನೇರ ಬಂದಿದ್ದಳು ಅವಳು.

'ಹಾ ಎಂತಹ ಮರೆವು ತನಗೆ. ನಾಳೆ ಡಾಕ್ಟರ ರಿಂದ ಸುಮ್ಮನೆ ಬಯ್ಯಿಸಿಕೊಳ್ಳಬೇಕು! ಪಾಪ! ಆ ರೋಗಿಗೂ ಏನಾಗುತ್ತೋ ಏನೋ?' ವಸಂತಿ ಮಗ್ಗುಲು ಮಗಚುತ್ತಾ ಆಲೋಚಿಸಿದಳು.

ಹಾಗೆ ಮಲಗಿದ್ದಲ್ಲಿಗೆ ವಸಂತಿಯ ಕಣ್ಣಮುಂದೆ ಗತಜೀವನದ ಘಟನೆಗಳೆಲ್ಲ ಒಂದೊಂದೆ ಸುಳಿದು ಮಾಯವಾದವು.

× × ×

ಹೈಸ್ಕೂಲಿನ ಅಧ್ಯಾಪಕರಾದ ರಾಮರಾಯರಿಗೆ ಲಕ್ಷ್ಮಿಯಲ್ಲಿ ಕಡೆಗೂ ಮಕ್ಕಳಾದುದೇ ಹಲುವತ್ತರ ಗಡಿಯಲ್ಲಿ. ಲಕ್ಷ್ಮೀ ಮೋಹನನಿಗೆ ಜನ್ಮವಿತ್ತು, ಒಡನೆಯೇ ಈ ಲೋಕದ ಋಣ ತೀರಿಸಿಕೊಂಡು, ಮಗುವನ್ನೂ ತಂದೆಯನ್ನೂ ತಬ್ಬಲಿಯಾಗಿ ಮಾಡಿ ಹೋಗಿದ್ದಳು. ರಾಯರು ತಿರುಗಿ ಮದುವೆ ಮಾಡಿಕೊಳ್ಳಲೋ ಬೇಡವೊ ಎನ್ನುವ ಪರಿಸ್ಥಿತಿಯಲ್ಲಿ ಅವರ ಸೋದರಿಕೆಯಲ್ಲೇ ಇಪ್ಪತ್ತಾರು ದಾಟಿದರೂ ಮದುವೆಯಾಗದೆ ಇದ್ದ ಗೌರಿಯನ್ನು ಒಂದು ದಿನ ಅವಳ ತಂದೆಯೇ ಬಂದು ಕೇಳಿದಾಗ ತನ್ನ ಮನೋಭಿಲಾಷೆ ಇದ್ದರೂ ತೋರ್ಪಡಿಸಿಕೊಳ್ಳದೆ ತಬ್ಬಲಿಯನ್ನು ಸಾಕುವ ನೆವದಲ್ಲಿ ಕಡೆಗೂ ರಾಯರು ಮನೆ ತುಂಬಿಸಿಕೊಂಡರು.

ಎರಡು ವರ್ಷದ ಮೇಲೆ ಗೌರಿ ವಸಂತಿಯನ್ನು ಹಡೆದಳು. ಹೆಸರಿಗೆ ಮೋಹನನಾದರೂ ಅವನಿಗಿಂತ ಅಂಗಸೌಷ್ಠವದಲ್ಲಿ ಹೆಚ್ಚಿನ ಲಾವಣ್ಯವನ್ನು ಪಡೆದಿದ್ದಳು, ವಸಂತಿ. ತಬ್ಬಲಿ ಎಂಬ ಪ್ರೇಮ ಮೋಹನನ ಮೇಲೆ ರಾಮರಾಯರಿಗಿದ್ದರೂ ಎಳೆಹರೆಯದ ಹೆಂಡತಿಯ ಮೇಲಿನ ಪ್ರೀತಿ, ವಸಂತಿಯ ಸರಸ ಆಟಗಳಿಂದ ರಾಯರು ವಸಂತಿಯ ಪಕ್ಷಪಾತಿಗಳಾಗಿದ್ದರು.

ಗೌರಿ ಮೋಹನನನ್ನು ತನ್ನ ಮಗನಂತೆ ನೋಡಿಕೊಂಡಿದ್ದರೂ ಮೋಹನನಿಗೆ ಅಪ್ಪ ಚಿಕ್ಕಮ್ಮ ಮತ್ತು ತಂಗಿಯನ್ನೇ ಹೆಚ್ಚಾಗಿ ಪ್ರೀತಿಸುತ್ತಾರೆಂದೂ ದಿನ ದಿನಕ್ಕೆ ಅನಿಸತೊಡಗಿತು. ಆ ಅನಿಸಿಕೆ ಕ್ರಮೇಣ ವಸಂತಿಯ ಮೇಲೆ ಅವನು ಬೆಳೆದಂತೆ ದ್ವೇಷದ ರೂಪವನ್ನು ತಾಳುತ್ತಾ ಬೆಳೆದು ಬಂತು.

ಮುಂದೆ ಗೌರಿ ಒಂದೆರಡು ಹೆಣ್ಣುಮಕ್ಕಳಿಗೇ ಜನ್ಮವಿತ್ತಳೇ ಹೊರತು ಅವಳಿಗೆ ಗಂಡುಮಗುವನ್ನು ಹಡೆಯುವ ಪುಣ್ಯವಿರಲಿಲ್ಲ. ಇದರಿಂದ ರಾಯರು ಮೋಹನ ತನ್ನ ಉತ್ತರಾಧಿಕಾರಿಯೆಂಬಂತೆ ಅವನ ವಿದ್ಯಾಭ್ಯಾಸಕ್ಕೆ ಹೆಚ್ಚು ಮಹತ್ವ ಕೊಟ್ಟರು.

ರಾಯರು ವಿದ್ಯಾಪಕ್ಷಪಾತಿಗಳಾದುದರಿಂದ ವಸಂತಿಯನ್ನು ಶಾಲೆಗೆ ಹೋಗಲು ಹಚ್ಚಿದರು. ಮಕ್ಕಳು ಬೆಳೆದು ಹೈಸ್ಕೂಲಿನ ತರಗತಿಗಳಲ್ಲಿ ಓದುತ್ತಿದ್ದಾಗ ರಾಯರ ಜೀವನದಲ್ಲಿ ನೆಮ್ಮದಿ ನೆಲೆಸಿತ್ತು.

ಆ ವರುಷ ವಸಂತಿ ಮ್ಯಾಟ್ರಿಕ್ಯುಲೇಷನ್ನಿಗೆ ಓದುತ್ತಿರುವಾಗ ಹಠಾತ್ತನೆ ರಾಯರಿಗೆ 'ಮೆನೆಂಜೈಟಿಸ್' ತಗಲಿತು. ಆಸ್ಪತ್ರೆಯಲ್ಲಿದ್ದುಕೊಂಡು ಕೆಲ ದಿವಸ ಚಿಕಿತ್ಸೆ ಪಡೆದರೂ ರಾಯರ ಕಾಯಿಲೆ ವಾಸಿಯಾಗಲಿಲ್ಲ. ಕೊನೆಗೊಂದು ದಿನ, ಮೂರು ಹೆಣ್ಣುಮಕ್ಕಳು, ಒಬ್ಬ ಪ್ರಾಯಕ್ಕೆ ಬಂದ ಹುಡುಗ–ಮೋಹನ, ಇನ್ನೂ ಎಳೆ ಹರೆಯದ ಹೆಂಡತಿ ಇವರೆಲ್ಲರ ಕಣ್ಣುಗಳಲ್ಲಿ ನೀರು ತುಂಬಿಸಿ ರಾಯರು ಆಸ್ಪತ್ರೆಯಲ್ಲೇ ಅಸುನೀಗಿದರು.

ತಂದೆಯ ಆಕಸ್ಮಾತ್ ಮರಣದಿಂದ ತತ್ತರಿಸಿ ಹೋದ ಮೋಹನ ತನ್ನ ವಿದ್ಯಾಭ್ಯಾಸವನ್ನು ಅರ್ಧ ದಲ್ಲೇ ನಿಲ್ಲಿಸಿ ನೌಕರಿಗೆ ಮೊರೆಹೋದ. ತಂದೆ ಅವನಿಗೆ ಮಾಡಿಟ್ಟ ಸಂಪಾದನೆ ಎಂದರೆ ದೊಡ್ಡ ಸಂಸಾರ. ಅಂತೂ ಓದಿದ ಪ್ರಾಯಶ್ಚಿತ್ತಕ್ಕೆ ವಸಂತಿಗೆ ಪರೀಕ್ಷೆಗೆ ಕಟ್ಟಲು ಹೇಳಿ ಮೋಹನ ಅವಳ ವರಾನ್ವೇಷಣೆಗೆ ಮನ ಮಾಡಿದ.

ತನ್ನ ಅಲ್ಪ ಸಂಪಾದನೆಯಲ್ಲಿ ತನ್ನದಲ್ಲದೆ ಈ ಹೊಟ್ಟೆ ಹೊರಿಸುವುದೂ ಮೋಹನನಿಗೆ ಬಹಳ ಕಷ್ಟಕ್ಕೆ ಇಟ್ಟುಕೊಂಡಿತು. ವಸಂತಿಯಾದರೂ ಮದುವೆಯಾಗಿ ಹೋದರೆ ಎಷ್ಟೋ ಸುಖ ಅನಿಸಿತ್ತು, ಅವನಿಗೆ. (ತನ್ನ ಅಪ್ಪನಿಗೆ-ತನಗಿಂತಲೂ ಹೆಚ್ಚು ಅವಳಲ್ಲಿ ಪ್ರೀತಿ ಇತ್ತು. ಅವರ ಕೊಂಡಾಟದ ಮಗಳು ಅವಳು).

ಮದುವೆ ಮಾಡುವುದು ಮನೆ ಕಟ್ಟುವುದು ಎರಡೂ ಸುಲಭವಲ್ಲ – ಎನ್ನುವುದರ ಪ್ರತ್ಯಕ್ಷ ಅನುಭವವಾಯಿತು ಮೋಹನನಿಗೆ. ಹುಡುಗಿ ಸಲಕ್ಷಣವಾಗಿದ್ದರೂ ಎಷ್ಟು ಹಾಕುತ್ತೀರಿ ಚಿನ್ನ? ವರದಕ್ಷಿಣೆ ಎಷ್ಟು ಕೊಡ್ತೀರಾ? ಎಂದು ಕೇಳದ ಗಂಡುಗಳೇ ಸಿಗುವುದು ಅಪರೂಪವಾಗಿರುವಾಗ– ತಾನು ಏನು ಹಾಕಿ ವಸಂತಿಯನ್ನು ಮದುವೆಮಾಡಬಲ್ಲೆ?

ಗೌರಿಗೆ ಮೋಹನ ಅಂತೂ ವಸಂತಿಯನ್ನು 'ದಾಟಿಸುವ' ಆಲೋಚನೆಯಲ್ಲಿ ಇದ್ದನಷ್ಟೆ ಹೊರತು ಅವಳಿಗೆ ತಕ್ಕ ವರಾನ್ವೇಷಣೆಯಲ್ಲಿದ್ದಾನೆಂದು ಅನಿಸಿರಲೂ ಇಲ್ಲ. ಒಂದು ದಿನ ಚಿಕ್ಕ ತಾಯಿ, ಮಗನಿಗೆ ಭಾರಿ ಚರ್ಚೆಯೂ ನಡೆಯಿತು. ಕಡೆಗೆ ಇಬ್ಬರ ಮಧ್ಯೆ ಬಂದ ವಸಂತಿಯೇ ಹೇಳಿದಳು–

"ಮನೆಯ ಕಷ್ಟ ಎಲ್ಲಾ ನನಗೆ ಗೊತ್ತಮ್ಮ; ನಾನೇ ನೌಕರಿ ಹಿಡಿದು ಅಣ್ಣನಿಗೆ ಸಹಾಯ ಮಾಡುತ್ತೇನೆ."

ಮೋಹನನಿಗೆ ಈ ಮಾತು ವಸಂತಿ ತನ್ನನ್ನು ಅಣಕಿಸುವಂತೆ ಅನಿಸಿತು. "ಹ್ಞೂ. ಇನ್ನು ಇದೊಂದು ಬಾಕಿ. ನೀನು ದುಡಿದು ನಾನು ತಿನ್ನಬೇಕಂತಲೊ!



ಅಪ್ಪ ಸತ್ತಮೇಲೆ ಸರಿಯಾಗಿ ನಮ್ಮನ್ನು ನೋಡಿಕೊಳ್ಳಲಿಲ್ಲ ಎಂಬ ಅಪವಾದಕ್ಕೆ ನೀನು ನೌಕರಿ ಹಿಡಿಯೋದು. ನೀನು ನೌಕರಿ ಹಿಡಿಯೋದೂ ಬೇಡ ಏನೂ ಬೇಡ" ಎಂದವನೆ ದಡದಡನೆ ಮೆಟ್ಟಲಿಳಿದು ಹೊರಗೆ ಹೋದ. ಕೊನೆಗೆ ಒಮ್ಮೆ ಎಚ್.ಎಂ.ಟಿ.ಯಲ್ಲಿ ನೌಕರನಾಗಿದ್ದ ಸುಂದರನಿಗೆ ಹೇಗೋ ಗಂಟುಬಿದ್ದ, ಮೋಹನ. ಹುಡುಗಿಯನ್ನು ನೋಡಿ ಸುಂದರ ಮೆಚ್ಚಿಕೊಂಡ. ವಸಂತಿಯೂ ಸುಂದರನನ್ನು ಮೆಚ್ಚಿಕೊಂಡಳು. ಮದುವೆಯೂ ನಿಶ್ಚಯವಾಯ್ತು.

ತನ್ನ ಶಕ್ತ್ಯಾನುಸಾರವಾಗಿ ಮೋಹನ ವಸಂತಿಯ ಮದುವೆಯನ್ನು ಮಾಡಿದ. 'ಸಂಗನಿಕೇತ'ದಲ್ಲಿ ಸಾಮಾನ್ಯ ಮಟ್ಟದಲ್ಲಿ ಮದುವೆ ನಡೆಯಿತು.

ಮದುವೆಯ ನಂತರ ಸುಂದರ ವಸಂತಿಯನ್ನು ಕರೆದುಕೊಂಡು ಹೊರಟ. ಇಬ್ಬರೂ ಒಂದೇ ಊರಿನವರಾಗಿರುವಾಗ 'ಹನಿಮೂನ್'ಗೆ ಅಲ್ಲಿ ಏನಿದೆ? ತನ್ನಲ್ಲಿ ನಾಲ್ಕು ಕಾಸು ಕೂಡಿಹಾಕಿದ್ದು ಇದ್ದುದರಿಂದ ಸುಂದರ ಮದುವೆಯ ನಾಲ್ಕರಲ್ಲೇ ಊಟಿಗೆ ಹೊರಡುವ 'ಪ್ರೋಗ್ರಾಂ' ಹಾಕಿದ.

ಗಂಡ–ಹೆಂಡರೊಂದಿಗೆ ವಸಂತಿಯ ಸಣ್ಣ ತಂಗಿಯೂ ಹೊರಟು ನಿಂತಳು. ಮೂವರೂ ಒಂದು ಮುಂಜಾನೆ ಹೊರಟು, ಊಟಿ ತಲುಪಿದರು.

ಊಟಿಯ ನಿಸರ್ಗ ಸೌಂದರ್ಯ ಸವಿಯುತ್ತ ಹೊಸ ದಂಪತಿಗಳು ಮೈಮರೆತ್ತಿದ್ದರು. ಅಲ್ಲಿನ ಸರೋವರಗಳನ್ನು ದೋಣಿಯಲ್ಲಿ ಸುತ್ತಿ, ಗುಡ್ಡಬೆಟ್ಟಗಳನ್ನು ಹತ್ತಿ ಇಳಿದು ಅವರು ಸ್ವರ್ಗವನ್ನೇ ಭೂಲೋಕಕ್ಕೆ ಇಳಿಸಿಕೊಂಡರು.

ಆದರೆ ವಸಂತಿಯ ಜೀವನದಲ್ಲೇ ಅದು ದುರ್ದಿನವಾಗಿತ್ತು. ಆ ದಿನದ ಸೂರ್ಯ – ತಾನು ಮುಳುಗುವುದರೊಳಗೆ–ವಸಂತಿಯ ಜೀವನದಲ್ಲೇ ಬೇರೆ ಒಂದು ಅಧ್ಯಾಯ ಪ್ರಾರಂಭವಾಗುವುದನ್ನು ನೋಡಿದ.

ಸುಂದರ 'ಸ್ವಿಮಿಂಗ್ ಪೂಲ್'ನಲ್ಲಿ ಈಜಲು ಹೋದವ ಯಾಕೋ ಮೇಲೆ ಬರಲೇ ಇಲ್ಲ. ಆ ಕೊಳದ ನೀರಿನಲ್ಲಿ ಮುಳುಗಿ ಸಾಯುವುದನ್ನು ವಿಧಿ ಅವನ ಹಣೆಯಲ್ಲಿ ಬರೆದಿದ್ದಿರಬೇಕು. ಅದನ್ನು ನೋಡಲೆಂಬಂತೆಯೇ ವಸಂತಿ ಅವನ ಕೈಹಿಡಿದಿದ್ದಳು.

ಮದುವೆ ಆಗಿ ಬರೇ ಹತ್ತು ದಿನ! ತನಗೆ ವೈಧವ್ಯ ಬಂದಾಗ – ಅಲ್ಲೇ ವಸಂತಿ ಮೂರ್ಛೆಹೋದಳು. ಪ್ರಥಮ ಚಿಕಿತ್ಸೆ ನಡೆದು ಸ್ಮೃತಿ ಬಂದ ನಂತರ ಮುಂದಿನ ದಾರಿಯೇ ಕಾಣಸದಾಗಿತ್ತು ಅವಳಿಗೆ. ಮನೆಗೆ ಹೋಗಿ ಮಾಡುವುದಾದರೂ ಏನು? ಹೆತ್ತವರಿಗೆ, ಭೂಮಿಗೆ ಭಾರವಾಗುವುದಕ್ಕಿಂತ ತಾನು ಸುಂದರನ ಅಸುವನ್ನು ಕಸಿದುಕೊಂಡ ಅದೇ ಕೊಳದಲ್ಲಿ ಬಿದ್ದು ಯಾಕೆ ಸಾಯಬಾರದು ಎಂದು ಅನ್ನಿಸಿತ್ತು, ಅವಳಿಗೆ! ಆದರೆ ಒಟ್ಟಿಗೆ ಬಂದ ತಂಗಿಗೆ ಬೇಕಾಗಿ ಜೀವ ಹಿಡಿದುಕೊಂಡು ಅವಳು ಊರಿಗೆ ಮರಳಿದ್ದಳು.

ಗೌರಿಗಾಗಲೀ ಮೋಹನನಿಗಾಗಲಿ, ವಸಂತಿಯ ಭವಿಷ್ಯದ ಬಗ್ಗೆ ಏನೂ ಯೋಚಿಸಲೂ ಸಾಧ್ಯವಾಗಲಿಲ್ಲ. ಅವರು ಹೆಜ್ಜೆ ಮೂಡದ ಹಾದಿಯ ಪಥಿಕರು.

ಮಂಜು ಮುಸುಕಿದ ದಾರಿಯನ್ನು ನೋಡುತ್ತ ಇದ್ದ ವಸಂತಿಯ ಜೀವನದಲ್ಲಿ ಒಂದು ಆಶ್ಚರ್ಯಕರ ಬದಲಾವಣೆ ಆಯಿತು. ಅದಕ್ಕೆ ಕಾರಣ ಅವಳ ಕಣ್ಣಿಗೆ ಬಿದ್ದ 'ಫ್ಲಾರೆನ್ಸ್ ನೈಟಿಂಗೇಲ್'ರ ಜೀವನ ಚರಿತ್ರೆ.

ಆ ಪುಸ್ತಕ ಓದಿ ಮುಗಿಸಿ ಆದ ಮೇಲೆ ವಸಂತಿಗೆ ಅನಿಸಿತು. "ತಾನು ಯಾಕೆ ರೋಗಿಗಳ ಸೇವೆಯಲ್ಲಿ ಕೃತ್ಯಳಾಗಬಾರದು? ತಾನೇಕೆ ನರ್ಸ್ ಆಗಬಾರದು?"

ಬಹಳ ದಿನ ಯೋಚಿಸಿದ ಮೇಲೆ, ಕಡೆಗೂ ಒಮ್ಮೆ ತಾಯಿಯ ಎದುರು ಹೇಳಿದಳು. ವಸಂತಿ. ಕೇಳಿ ದಂಗುಬಡಿದಂತಾಯಿತು ಗೌರಿಗೆ. ಬ್ರಾಹ್ಮಣರೂ ನರ್ಸು ಕೆಲಸ ಕಲಿಯುವುದೇ? ನರ್ಸಾಗಿ ನಿಮ್ನಜಾತಿಯವರಂತೆ ಆಸ್ಪತ್ರೆಯಲ್ಲಿ ದುಡಿಯುವುದೇ?

ಆದರೂ ಮಗಳ ಮನಸ್ಸಿನ ವಿರುದ್ಧ ಆಡುವ



ಮನಸ್ಸು ಆ ತಾಯಿಗಿಲ್ಲ. ಮೋಹನನಿಗೂ ವಸಂತಿ ಪರಿಹರಿಸಲಾರದ ಪ್ರಶ್ನೆಯಾಗಿದ್ದಳು. ತಾವು ಇಬ್ಬರೂ ಇದಕ್ಕೆ ಒಪ್ಪಿಗೆ ಕೊಡದಿದ್ದರೆ ಅವಳೇನಾದರೂ ಹೇಳದೆ ಕೇಳದೆ ಓಡಿಹೋದರೆ? ಅಥವಾ ಆತ್ಮಹತ್ಯೆ ಮಾಡಿಕೊಂಡರೆ?

ಸೇವೆ ಎಂದರೆ ಎಲ್ಲವೂ ಒಂದೇ! ನರ್ಸ್ ಆಗಲಿ, ಡಾಕ್ಟರೇ ಆಗಲಿ. ಆ ವೃತ್ತಿ ಸೇವಾದೃಷ್ಟಿಯಿಂದ ಕಲಿಯಬೇಕು. ಸೇವೆಯಲ್ಲಿ ಮೇಲುಕೀಳು ಭೇದವಿಲ್ಲ. ಯಾರೂ ಯಾವ ವೃತ್ತಿಯನ್ನೂ ನಡೆಸಬಹುದು. ಎಂದಿತ್ತು ವಸಂತಿಯ ಮನೋಭೂಮಿಕೆ.

ಹಾಗೆ ಅಂದು ಮೆಟ್ಟಿಲು ಇಳಿದು ಬಂದವಳು– ಎರಡು ವರ್ಷದ ನರ್ಸ್ ಶಿಕ್ಷಣ ಪೂರೈಸಿ ಮನೆಗೆ ಹೋಗಿದ್ದಳು. ತಿರುಗಿ ಹತ್ತು–ಹದಿನೈದು ದಿನಗಳಲ್ಲೇ ಅವಳಿಗೆ ಈ ಜನರಲ್ ಆಸ್ಪತ್ರೆಯಲ್ಲಿ ನೌಕರಿ ದೊರಕಿತ್ತು.

ಅಬ್ಬ! ತಾನು ಬಂದು ಎರಡೂವರೇ ವರ್ಷ ಆಯಿತು ಈ ಆಸ್ಪತ್ರೆಗೆ! ಇನ್ನು ಒಂದು ವರ್ಷದಲ್ಲಿ ವಸಂತಿ ಸ್ಟಾಫ್ ನರ್ಸ್!

ಘಟನೆಗಳು ಕಣ್ಣಮುಂದೆ ಚಲನಚಿತ್ರದಂತೆ ಓಡಿಹೋದಾಗ – ಅವಳ ಕಣ್ಣು ಒದ್ದೆಯಾಯಿತು. ಕವಚಿ ಮಲಗಿ ತಲೆದಿಂಬನ್ನು ಕಚ್ಚಿ ದುಃಖವನ್ನು ಹತ್ತಿಕ್ಕಿಕೊಳ್ಳಲು ಹವಣಿಸಿದಳು. ಆದರೂ ದಿಂಬು ಒದ್ದೆಯಾಯಿತು – ಕಣ್ಣೀರಿನಿಂದ.

ಸುಂದರ!

ಸದಾನಂದ!

ಮತ್ತೇನೂ ಅವಳಿಗೆ ಯೋಚಿಸಲು, ನೆನೆಸಲು ಆಗಲಿಲ್ಲ. ಮನಸ್ಸು, ದುಃಖಿಸಿ ದಣಿಸಿ, ಕಡೆಗೆ ಸಾಂತ್ವನ ಮಾಡಿಕೊಂಡ ಎಷ್ಟೋ ಹೊತ್ತಿನ ಮೇಲೆ ನಿದ್ದೆ ಬಂದ ವಸಂತಿಗೆ ತಿರುಗಿ ಎಚ್ಚರವಾದುದು – ಬೆಳಗ್ಗೆ ಪಕ್ಕದ ಕೋಣೆಯ ಶಾರದೆಯು 'ಅಲಾರಾಂ' ಬಡಿದಾಗ.

೨

ಕಿಟಕಿಯ ಸಂದಿನಿಂದ ಇಣುಕಲು ಕೈಚಾಚಿದ ಬೆಳಗಿನ ಕಿರಣದ ಸ್ಪರ್ಶದಿಂದ ಸೆಕೆಗೆ ಚಾಪೆ ಬಿಟ್ಟು ನೆಲದಲ್ಲಿ ಮಲಗಿಕೊಂಡ ವಸಂತಿ ಮೈ ಮುರಿದು ಎದ್ದಳು. ಹಾಸಿಗೆಯನ್ನು ಸುತ್ತಿ ಪಕ್ಕದ ಬೆಂಚಿನ ಮೇಲೆ ಇರಿಸಿ, ಬ್ರಶ್ಶಿನಿಂದ ಹಲ್ಲುಜ್ಜುತ್ತಾ ಹೊರಗೆ ಬರುವಾಗ ಅಕ್ಕಪಕ್ಕದ ವಸತಿಗೃಹದ ಕೊಠಡಿಗಳಲ್ಲಿ ಚೈತನ್ಯ ತುಂಬಿತ್ತು.

ಮುಖ ತೊಳೆದು ಬರುವಾಗ ಹಾಲಿನವ ಬಂದಿದ್ದ. ಪಕ್ಕದ ಕೊಠಡಿಯ ರಾಜೀವಿ ಹಾಲು ತೆಗೆದುಕೊಂಡು, ಅವಳ ಬೆಕ್ಕಿಗೆ ಹಾಕುತ್ತಿದ್ದಳು. ಬೆಕ್ಕು ಬಾಲವನ್ನು ಮೇಲೆತ್ತಿ, ರೋಮ ನಿಗುರಿಸಿ 'ಮಿಯಾಂವ್' ಎನ್ನುತ್ತಿತ್ತು.

ಹಾಲು ತೆಗೆದುಕೊಂಡು ಒಳಗೆ ಹೋಗಿ ಒಲೆ ಊದಿದಳು. ಕಾಫಿಗೆ ನೀರಿಟ್ಟು ತಲೆಬಾಚಿಕೊಂಡಳು. ಕಾಫಿ ತೀರಿಸಿದ ಮೇಲೆ ಬಾತ್ ರೂಮಿಗೆ ಹೋಗಿ ಸ್ನಾನ ತೀರಿಸಿ ಬರುವಾಗ ಸಮೀಪದ ಕೊಠಡಿಯ ರಾಜೀವಿ ಹೊರಟು ನಿಂತಾಗಿತ್ತು.

"ಏನೇ ವಸಂತಿ ಈ ದಿನ ಯಾಕೆ ಇಷ್ಟು ಲೇಟು?"

"ನಿನ್ನೆ ರಾತ್ರಿ ಸೆಖೆಗೆ ನಿದ್ದೆ ಬೀಳಲೇ ಇಲ್ಲ. ಏಳುವಾಗ ಸ್ವಲ್ಪ ತಡವಾಯ್ತು."

ವಸಂತಿ ಅವಸರವಾಗಿ ಡ್ರೆಸ್ಸು ಮಾಡಿದಳು. ರಾಜೀವಿ ಅವಳ ಕೊಠಡಿಗೆ ಬಂದು ಬೀಗ ಹಾಕಿ ಬರುವ ವಸಂತಿಯ ಕೊಠಡಿಯಲ್ಲಿ ಕುಳಿತುಕೊಂಡು ಹರಟ ತೊಡಗಿದಳು.

ಬಿಳಿಯ 'ಫ್ರಾಕ್' ತೊಟ್ಟು, ಬಿಳಿಯ ಕಾಲುಚೀಲ ಮತ್ತು ಬಿಳಿಯ ಪಾದರಕ್ಷೆ ಹಾಕಿ, ಬಾಬ್ ಮಾಡಿದ ತಲೆಕೂದಲ ಮೇಲೆ ಬಿಳಿಯ 'ಹುಡ್'(ಶಿರಸ್ತ್ರಾಣ) ಧರಿಸಿದ ವಸಂತಿ "ಯಸ್ ಹೋಗೋಣ" ಎಂದು ಕಡೆಗೆ ಕನ್ನಡಿಯ ಎದುರು ನಿಂತು ಹೇಳಿದಳು.

"ನಿಮಗೆ ನರ್ಸ್‌ಡ್ರೆಸ್ಸು ಭಾರಿ ಒಪ್ಪುತ್ತೆ" ಎಂದು ಯಾವುದೋ ಸಂದರ್ಭದಲ್ಲಿ ಡಾ. ಸದಾನಂದ ಹೇಳಿದ ಮಾತಿನ ನೆನಪಾಯಿತು ವಸಂತಿಗೆ. ಸದಾನಂದ ಎಂದು ನೆನಸಿದಾಗಲೇ ಅವಳ ಮನಸ್ಸು ಯಾವಾಗ ಅವನ ಮುಖದರ್ಶನವಾದೀತೋ ಎಂದು ಕಾತರಗೊಂಡಿತು.

ಇಬ್ಬರೂ ವಸತಿಗೃಹ ಬಿಟ್ಟು ಮುಂದೆ ನಡೆದರು. ದಾರಿಯ ಅಕ್ಕಪಕ್ಕದಲ್ಲಿ ಮಳೆಗಾಲದಲ್ಲಿ ಉದ್ದಕ್ಕೂ ಹಸಿರುಹುಲ್ಲು ತುಂಬಿ ರಮಣೀಯವಾಗಿ ತೋರುತ್ತಿದ್ದುದು ಈಗ ಬರೇ ಸಪ್ಪೆ ಎನಿಸಿದೆ. ಎಡದ ಮಗ್ಗುಲಲ್ಲಿ ಎದ್ದುನಿಂತ ಆಸ್ಪತ್ರೆ, ಬಲದ ಮಗ್ಗುಲಲ್ಲಿ ಹಾದು ಹೋಗುವ ರಸ್ತೆ, ಅದರಲ್ಲಿರುವ ವಾಹನಗಳು – ಎಲ್ಲದರ ಮೇಲೆ ಕಣ್ಣು ಹಾಯಿಸುತ್ತ ಅವರು ಮುಂದೆ ಸಾಗುತ್ತಿದ್ದಂತೆ ಎದುರಿನಿಂದ ನೈಟ್ ಡ್ಯೂಟಿ ಮುಗಿಸಿದ ನರ್ಸುಗಳು ಬರುತ್ತಿದ್ದರು.

"ವಸಂತಿ, ನೋಡೆ ಅಲ್ಲಿ ಬರ್‍ತಿದ್ದಾಳಲ್ಲ" ಆ ಎಡ್ವರ್ಡ್ ಎಂತಹ ಗಂಡುಬೀರಿ ಗೊತ್ತಾ? ಅವಳು ಯಾವಾಗಲೂ ಮೇಲ್ ನರ್ಸುಗಳೊಂದಿಗೆ, ಡಾಕ್ಟರ್ ಮೂರ್ತಿ, ರಮೇಶರೊಂದಿಗೆ ಮೇಲಿಗೆ ಬಿದ್ದೇ ಮಾತಾ

ಹೋದು! ಯಾಕಪ್ಪ ಇವುಗಳೆಲ್ಲ ಇಲ್ಲಿಗೆ ಬರೋದು"? ರಾಜೀವಿ ಮೆಲ್ಲನೆ ವಸಂತಿಯ ಕಿವಿಯಲ್ಲಿ ಪಿಸುಗುಟ್ಟಿದಳು.

"ಹುಶ್ ಸಾಕುಮಾಡೇ ನಿನ್ನ ಕತೆ? ಯಾರಿಗೆ ಗೊತ್ತಿಲ್ಲದ್ದು ಇವೆಲ್ಲಾ? ಇವೆಲ್ಲಾ ಕಾಮನ್(Common) ಎಲ್ಲಾ ಆಸ್ಪತ್ರೆಗಳಲ್ಲೂ!"

ಇವರು ಮಾತನಾಡುತ್ತಿದ್ದಂತೆ ಇವರನ್ನು ನೋಡಿಯೂ ನೋಡಿದವಳ ಹಾಗೆ ಎಡ್ವರ್ಡ್ ಅವರಿಗೆ ತಾಗಿಕೊಂಡೇ ಕತ್ತುಕೊಂಕಿಸುತ್ತಾ ಮುಂದೆ ಹೋದಳು.

ಸ್ವಲ್ಪ ಮುಂದೆ ಕೋಟು ಧರಿಸಿ ಸ್ಟೆತಸ್ಕೋಪನ್ನು ಕುತ್ತಿಗೆಯಲ್ಲಿ ತೂಗಬಿಟ್ಟು ಬರುತ್ತಿದ್ದ ಡಾ. ಮೋಹನ್ ಅವನನ್ನು ಕಂಡೊಡನೆ ಇಬ್ಬರೂ "ಗುಡ್ ಮಾರ್ನಿಂಗ್" ಹೇಳಿದರು. ಅವನು ಕೋತಿಯ ಹಾಗೆ ನಕ್ಕು ಮುಂದೆ ಹೋದೊಡನೆ ವಸಂತಿ ಹೇಳಿದಳು. "ಪಕ್ಕಾ ಆಸಾಮಿ ಇವನು; ಹ್ಞೂ, ಕೃಷ್ಣನ ಮತ್ತೊಂದು ಅವತಾರ".

ಆಸ್ಪತ್ರೆಯ ಮೆಟ್ಟಿಲು ಬಂತೆನ್ನುವಾಗ ಇಬ್ಬರೂ ಮಾತು ನಿಲ್ಲಿಸಿದರು. ಅವರವರ ವಾರ್ಡಿನತ್ತ ಹೆಜ್ಜೆ ಹಾಕಿದರು.

ವಾರ್ಡಿನ ಸುತ್ತ ಒಂದು ರೌಂಡ್ ಹಾಕಿ ಬಂದು ಅವರವರ ಕಾಹಿಲೆ ಬಗ್ಗೆ ವಿಚಾರಿಸುತ್ತಿದ್ದಾಗಲೇ ಡಾ. ಸದಾನಂದ ಬಂದ.

"ಗುಡ್ ಮಾರ್ನಿಂಗ್ ಸಾರ್",

"ಗುಡ್ ಮಾರ್ನಿಂಗ್".

ವಸಂತಿ ಡಾಕ್ಟರರ ಬೆನ್ನಹಿಂದೆಯೇ ಲೈಸೋಲ್ ಬೇಸಿನ್ ಹಿಡಿದು ತಿರುಗಿದಳು. ಸದಾನಂದ ಎಲ್ಲರನ್ನೂ ವಿಚಾರಿಸುತ್ತಾ ಕೊನೆಯ ಪೇಶಂಟಿನ ಹತ್ತಿರ ಬಂದಾಗ ಸರ್ಜನ್ ಬಂದರು.

ಸರ್ಜನ್ ಬೆಳಗ್ಗೆ ಎಲ್ಲಾ ವಾರ್ಡುಗಳಿಗೂ ಒಂದು 'ರೌಂಡ್' ಹಾಕಿ ಹೋಗುತ್ತಿದ್ದರು. ಅವರು ಬರುವಾಗ ರೋಗಿಗಳ ಯಾಕೆ, ನರ್ಸುಗಳ ಪಾದರಕ್ಷೆಯ ಸದ್ದು ಕೂಡ ಕೇಳಿಸುತ್ತಿರಲಿಲ್ಲ. ಅವರೊಂದಿಗೆ ಮೇಟ್ರನ್ ಕೂಡ ಬಂದಿದ್ದಳು.

ಸರ್ಜನ್ ಒಮ್ಮೆ ವಾರ್ಡನ್ನು ನೋಡಿ ಸದಾನಂದನಿಗೆ ಹೇಳಿದರು – "ಓ. ಟಿ. (ಆಪರೇಶನ್ ಥೇಟರ್) ಯಲ್ಲಿ ಒಂದು ಗ್ಯಾಸ್ಟ್ರಿಕ್ ಅಲ್ಸರ್ ಕೇಸಿದೆ. ಮತ್ತೆ ಮಾಡೋಣ, ನಾನು ಬರ್ತೇನೆ",

"ಯೆಸ್ ಸಾರ್",

ಹೆಚ್ಚಾಗಿ ಮೇಜರ್ ಆಪರೇಶನ್‌ಗಳನ್ನು ಸರ್ಜನರೇ ಮಾಡುತ್ತಿದ್ದರು. ಅವರಿಗೆ ಸಹಾಯಕರಾಗಿ ಅವರು ಉಳಿದವರಲ್ಲಿ ಹೆಚ್ಚಾಗಿ ಕರೆಯುತ್ತಿದ್ದುದು ಡಾ. ಸದಾನಂದನನ್ನೇ. ಸದಾನಂದನ ಕಾರ್ಯದಕ್ಷತೆ, ಕೈಕುಶಲತೆ ಅವರಿಗೆ ತುಂಬ ಹಿಡಿಸಿತ್ತು. ಅದಕ್ಕಾಗಿಯೇ ಅವರು ಅವನ ನೆರವಿಲ್ಲದೆ ಓ. ಟಿ. ಯೊಳಗೆ ಹೋಗುತ್ತಿರಲಿಲ್ಲ.

ಸರ್ಜನ್ ಮುಂದಿನ ವಾರ್ಡಿಗೆ ಹೋದ ಕೂಡಲೆ ವಸಂತಿ ಹೇಳಿದಳು.

"ಸಾರಿ ಡಾಕ್ಟರ್, ನಾನೊಂದು ತಪ್ಪುಮಾಡಿದ್ದೇನೆ".

"What"?

"ನಿನ್ನೆ ನೀವು ಇವನಿಗೆ ಇಂಜಕ್ಷನ್ ಹೇಳಿದ್ದೀರಲ್ಲ, ನಾನು ಮರೆತುಬಿಟ್ಟೆ".

"ಹ್ಞ? ಮರೆತುಬಿಟ್ರಾ? ಯಾಕೆ ಅಷ್ಟು ಬೇಜವಾಬ್ದಾರಿ? ನೋಡಿ ಇವರೇ ನೀವು ಹೀಗೆಲ್ಲ ಮರೆತುಬಿಟ್ರೆ ನಮ್ಗೂ ಎಷ್ಟು ಕೆಟ್ಟ ಹೆಸರೂಂತ ಗೊತ್ತೆ?"

ವಸಂತಿ ಮಾತನಾಡಲಿಲ್ಲ. ಆದರೆ ಅವಳ ಮುಖ ತುಂಬಾ ಸಪ್ಪೆಯಾಯಿತು. ಅವಳನ್ನೇ ಅರೆಕ್ಷಣ ನೋಡಿದ ಸದಾನಂದ, ಅವಳ ತಪ್ಪೊಪ್ಪಿಗೆಯನ್ನು ನೋಡಿ ಮನಸ್ಸಾ ಮೆಚ್ಚಿ ಹೇಳಿದ.

"Never mind. ಇನ್ನೆಲ್ಲಾ ಹಾಗೆಲ್ಲ ಮರೆತುಬಿಡಬೇಡಿರಿ. ಫಸ್ಟ್ warning ಇದು ನಿಮಗೆ!"

ಸದಾನಂದನ ಕೈಯಿಂದ ಅದೇ ಮೊದಲು ಆಕೆ ಹಾಗೆ ಅನಿಸಿಕೊಂಡಿದ್ದು. ಅವಳಿಗೆ ಸದಾನಂದ ತನ್ನಲ್ಲಿ ಇಷ್ಟು ಕಠೋರವಾಗಿ ವರ್ತಿಸಿಯಾನೆಂಬ ಕಲ್ಪನೆಯೇ ಇರಲಿಲ್ಲ. ಆದರೆ ಅವನ ಕರ್ತವ್ಯಶೀಲತೆಯು ಮುಂದೆ ಅವಳಿಗೆ ತನ್ನ ತಪ್ಪಿನ ನಿಜವಾದ ಅನುಭವವಾಯಿತು.

ಅಷ್ಟರಲ್ಲಿ ವಾರ್ಡ್‌ಬಾಯ್ ಓಡಿಬಂದ. "ಸರ್ ಎಮರ್ಜನ್ಸಿ ವಾರ್ಡಿಗೆ ಬರ್ಬೇಕಂತೆ. ಯಾರೋ ಒಬ್ಬರು ರಕ್ತ ಕಾರ್ತಿದ್ದಾರೆ".

ಡಾಕ್ಟರ್ ಸದಾನಂದ ಅಲ್ಲಿಯ ಕೆಲಸಗಳನ್ನು ಹಾಗೆ ಬಿಟ್ಟು ಮುಂದೆ ಹೆಜ್ಜೆ ಹಾಕಿದ. ಅವನ ಹಿಂದೆಯೇ ಕುತೂಹಲ ತಡೆಯದೆ ವಸಂತಿಯೂ ಅನುಸರಿಸಿ ಮುಂದೆ ನಡೆದಳು.

ಸದಾನಂದ ಹೋಗಿ ನೋಡಿದ್ದೇನು?

ತಾನು ದಿನಾಲೂ ಊಟಕ್ಕೆ ಹೋಗುತ್ತಿದ್ದ ಅಶೋಕ ಭವನದ ಪ್ರೊಪ್ರೈಟರ್ ಮಂಚದ ಮೇಲೆ



ಮಲಗಿದ್ದಾರೆ. ರಕ್ತ ಪಾಂತಿಯಾಗಿದೆ. ಅಕ್ಕಪಕ್ಕದಲ್ಲಿ ನರ್ಸುಗಳು, ಅವರ ಪೈಕಿಯವರು, ಇತರ ಡಾಕ್ಟರರು ಸೇರಿದ್ದಾರೆ.

ಪಕ್ಕದಲ್ಲಿದವನೊಬ್ಬನನ್ನು ಕೇಳಿದ ಸದಾನಂದ, "ಏನು? ಏನಾಗಿದೆ ಇವರಿಗೆ? ನಿನ್ನೆತನಕ ಹುಷಾರಿದ್ದರಲ್ಲ!"

"ಹೌದು ಸಾರ್! ನಿನ್ನೆ ಮಧ್ಯರಾತ್ರಿಗೆ ಹೇಳಿದ್ರು ಎದೆನೋವು ಅಂತ. ಗಾಬರಿ ಇದ್ದಿಲ್ಲ. ಬೆಳಗಾದ ಮೇಲೆ ಇಷ್ಟೆಲ್ಲಾ ಆಯಿತು ನೋಡಿ!" ಗದ್ಗದಿತ ಸ್ವರದಲ್ಲಿ ಹೇಳಿದ ಅವರ ಕಡೆಯಾತ.

"ಹಾರ್ಟ್ ಅಟ್ಯಾಕ್ ಇರಬೇಕ್ರಿ" ಎಂದರು ಪರೀಕ್ಷಿಸುತ್ತಿದ್ದ ಒಬ್ಬ ಡಾಕ್ಟರ್.

"ಯಸ್. ಸ್ವಲ್ಪ ದೂರ ನಿಲ್ಲಿ. ಗಾಳಿ ಸರಿ ಬರಲಿ? ಎಂದು ಸದಾನಂದ ಮುಂದೆ ಸರಿದ. ಅಷ್ಟರಲ್ಲಿ ಹಿಂದಿನಿಂದ ಯಾರೋ ಮೆಲ್ಲಗೆ ಕೂಗಿದರು – "ಸರ್ಜನ್."

ಇಬ್ಬರೂ ಡಾಕ್ಟರರೂ ತೊಲಗಿ ನಿಂತರು. ಸರ್ಜನ್ ರೋಗಿಯನ್ನು ಪರೀಕ್ಷಿಸಿದರು. ಸದಾನಂದನ ಮುಖ ನೋಡಿ ಹೇಳಿದರು. "ಕೊರೋನೊರಿ ಅಟ್ಯಾಕ್ ಡಾಕ್ಟರ್, ಟ್ರೈ ಮಾಡಿ ನೋಡಿ" ಎಂದು ಮುಂದೆ ಹೋದರು.

ಮೂವರು ಡಾಕ್ಟ್ರು ಅವನ ಚಿಕಿತ್ಸೆಗೆ ನಿಂತರು. ರೋಗಿಯ ಪ್ರಜ್ಞೆ ತಿರುಗಿ ಬರುವುದರಲ್ಲಿರಲಿಲ್ಲ. ಕಡೆಗೆ ಪಲ್ಸ್ ನೋಡಿ ಸದಾನಂದ ಹೇಳಿದ,

"ಇನ್ನು ಉಳಿದದ್ದು ಒಂದೇ ಓಕ್ಸಿಜನ್".



ಯಾರೋ ನರ್ಸ್ ಓಡಿಹೋಗಿ ತಂದುಕೊಟ್ಟರು. ಅದೂ ಕೊಟ್ಟಾಯಿತು. ಆದರೆ ರೋಗಿ ಉಳಿಯಲಿಲ್ಲ. ಅವನ ಎದೆಯ ಮೇಲಿನಿಂದ ಸ್ಟೆತಸ್ಕೋಪನ್ನು ತಿಂತೆಗೆಯುತ್ತ ಸದಾನಂದ ಉಸುರಿದ."ಓ ಮಾಯ್ ಗಾಡ್!"

ಹೊರಗೆ ಬರುವಾಗ ಸದಾನಂದನಿಗೆ ಅನಿಸಿತು ನಾವು ಮಾಡುವುದು ಇಷ್ಟೆ. ಪ್ರಕೃತಿಯ ವಿರುದ್ಧ ಮನುಷ್ಯನ ಹೋರಾಟ ಎಷ್ಟೊಂದು ಸೀಮಿತ! ಆದ್ದ ಏನಿದೆ, ಈ ಮನುಷ್ಯನಲ್ಲಿ? ಬರೀ ಒಂದು ಗುಳ್ಳೆಯ ಹಾಗೆ! ಇಲ್ಲವಾದರೆ ನಿನ್ನೆ ರಾತ್ರಿ ಹೋಟೆಲಿಗೆ ಹೋದಾಗ ನಗುಮುಖದಿಂದ ಸ್ವಾಗತಿಸಿದ ಈ ಮನುಷ್ಯ ಈಗ ಒಂಬತ್ತೂವರೆಗೆ ಹೆಣ.

ಸದಾನಂದ ಅದೇ ಯೋಚನೆಯಲ್ಲಿ ತನ್ನ ವಾರ್ಡಿನ ಪಕ್ಕದ ಕೊಠಡಿಯಲ್ಲಿ ಕುಳಿತು ಹೊರಗೆ ಕಿಟಕಿಯಲ್ಲಿ ನೋಡಿದ. ಕೆಂಪು ಸೈಕಲಿನಲ್ಲಿ ಬಂದ ಖಾಕಿ ವಸ್ತ್ರದ ವ್ಯಕ್ತಿ ಆಸ್ಪತ್ರೆಯ ವರಾಂಡದ ಒಳಗೆ ಹೊಕ್ಕಾಗ ಓ-ಯಾರಿಗೋ ಟೆಲಿಗ್ರಾಂ ಇರಬೇಕು ಎನಿಸಿತು ಅವನಿಗೆ. ಒಂದು ನಿಮಿಷದ ಮೇಲೆ, ವಾರ್ಡ್ ಬಾಯ್ ಅವನೊಂದಿಗೆ ಬಂದು ಮೆಲ್ಲಗೆ 'ಇವರೇ ಡಾ. ಸದಾನಂದ' ಎಂದಾಗ ಮಾತ್ರ ಅವನಿಗೆ ಗೊತ್ತು, ಅವನು ತನಗಾಗಿಯೇ ಬಂದದ್ದು ಎಂದು.

ದಸ್ಕತ್ತು ಹಾಕಿ ಕಾಗದ ತೆಗೆದುಕೊಂಡ. ಮನೆಯಿಂದ ಬಂದ 'ಎಕ್ಸ್‌ಪ್ರೆಸ್' ಲೆಟರ್. 'ಏನಪ್ಪಾ ಇಂತಹ ಅವಸರದ್ದು' ಎಂದು ಕುತೂಹಲದಿಂದಲೇ ಒಡೆದು ಓದಿದ.

ಬೆಂಗಳೂರು
ತಾ. ೧೦-೩-೫೬

"ಚಿರಂಜೀವಿ, ಸದಾನಂದನಿಗೆ- ಆಶೀರ್ವಾದ. ನಾವು ಕ್ಷೇಮ. ನಿನ್ನ ತಮ್ಮ ರಾಘವ ಕಲ್ಕತ್ತದಿಂದ ಬಂದಿದ್ದಾನೆ. ಎರಡು ದಿನದ ಮೇಲೆ ಅವನು ವಾಪಾಸು ಹೋಗುತ್ತಾನೆ. ಅವನ ಭೆಟ್ಟಿಗಾಗಿಯೂ ನಿನ್ನಲ್ಲಿ ಕೆಲವು ಪ್ರಾಮುಖ್ಯ ವಿಚಾರದ ಬಗ್ಗೆ ಮಾತನಾಡಬೇಕಾದುದರಿಂದಲೂ ಕೂಡಲೇ ಹೊರಟು ಬಾ. ಒಂದು ದಿನದ ಬಿಡುವಿನಲ್ಲಿ ಬಂದರೆ ಒಳ್ಳೇದು.

ಇತಿ ಆಶೀರ್ವಾದಗಳು,
ಎನ್. ಪರ್ವಪ್ಪಯ್ಯ."

ಕಾಗದ ಓದಿ ಹಾಗೇ ಮಡಚಿದ. ಮೌನದಲ್ಲಿ ನಿಂತು ಅವನನ್ನು ಮತ್ತು ಕಾಗದವನ್ನು ನೋಡುತ್ತಿದ್ದಳು ವಸಂತಿ. ಏನು ಅಂತಹ ಅವಸರದ ಪತ್ರ ಎಂಬಂತಿತ್ತು ಅವಳ ಕಣ್ಣಿನ ನೋಟ. ಸದಾನಂದನೇ ಕರೆದು ಅವಳಿಗೆ ಹೇಳಿದ. "ಏನೂ ಇಲ್ಲ. ಬರೀ ನಾಲ್ಕು ಲೈನು. ತಮ್ಮ ಬಂದದ್ದಕ್ಕೆ ಹೊರಟು ಬಾ ಅಂತ ಬೆಂಗಳೂರಿನ ಅಪ್ಪ ಬರೆದಿದ್ದಾರೆ ಅಷ್ಟೆ."

"ಓ ಹಾಗೇನಾ"!

ವಸಂತಿಯ ಕಣ್ಣುಗಳು ಅವನಿಗೆ ಕೃತಜ್ಞತೆ ಸೂಚಿಸಿದವು. ಆದರೆ ಮರುಕ್ಷಣದಲ್ಲೇ ಇನ್ನೊಂದು ದಿನ ಸದಾನಂದ ಇಲ್ಲದಿದ್ದರೆ- ಎಂಬ ಅನಿಸಿಕೆಯಿಂದ ಕಪ್ಪಾಗುವುದನ್ನು ನೆನಸಿದ. ತಾವರೆಯಂತಾದವು.

"ಯಸ್. ಬರ್ತೇನೆ" ಎಂದು ಸದಾನಂದ ಎದ್ದು ನಿಂತು ಮುಗುಳ್ನಕ್ಕ. ಕೊಠಡಿಯ ಬಾಗಿಲ ಹೊರಗೂ

ಹೋಗಿ ವಸಂತಿ ಅವನನ್ನು ಬೀಳ್ಕೊಟ್ಟಳು ಕಣ್ಣುಗಳಲ್ಲಿ ನೀರು ತುಂಬಿಸುತ್ತ.

× × ×

ಸಂಜೆ ಆಸ್ಪತ್ರೆಯ ಡ್ಯೂಟಿ ಮುಗಿಸಿ, ಸದಾನಂದ ಇಲ್ಲದುದರಿಂದ, ಅವನು ಇನ್ನೆಷ್ಟು ದಿನದಲ್ಲಿ ಬರುತ್ತಾನೊ? ಯಾಕೆ ದಿನಗಳು ಬೇಗ ಓಡಲಾರವು, ಎಂದು ಯೋಚಿಸುತ್ತ ವಸಂತಿ ವಸತಿಗೃಹದತ್ತ ಹೆಜ್ಜೆ ಹಾಕಿದಳು. ಈ ಯೋಚನೆಯಲ್ಲಿ ದಾರಿ ಸಾಗಿದ್ದು ಆಕೆಗೆ ತಿಳಿಯಲೇ ಇಲ್ಲ.

ವಸತಿಗೃಹ ಬಂತೆನ್ನುವಾಗ ಆಕೆಯ ಪ್ರಜ್ಞೆ ಜಾಗೃತವಾಯ್ತು. ಮೆಟ್ಟಲೇರುತ್ತ ಯಾಕೊ ವಿಸಿಟರ್ಸ್ ರೂಮಿನ ಕಡೆಗೆ ದೃಷ್ಟಿಯೋಡಿಸಿದಳು. ಸುಮಾರು ನಡುಹರೆಯದ ದೀನಮುಖದ, ಕೊಡೆ,



ಕೈ ಚೀಲಗಳನ್ನು ಹಿಡಿದುಕೊಂಡ ವ್ಯಕ್ತಿ ಅಲ್ಲಿ ಕುಳಿತಿತ್ತು. ವಸಂತಿ ಒಂದು ನಿಮಿಷ ಅಲ್ಲಿ ನಿಂತು ನೋಡಿದಳು. ಯಾರಾಗಿರಬಹುದು ಈತ? ಯಾರು ಬೇಕು ಇವರಿಗೆ?

ಅಷ್ಟರಲ್ಲಿ ಅದೇ ವ್ಯಕ್ತಿ ಎದ್ದುಕೊಂಡು ಹೊರಗೆ ಬಂದು ಔಪಚಾರಿಕವಾಗಿ ನಮಸ್ಕರಿಸಿ ಕೇಳಿದ.

"ರಾಜೀವಿ ಇದ್ದಾರಾಮ್ಮಾ?"

"ರಾಜೀವಿನಾ? ಓಹೋ! ಇದ್ದಾರೆ; ಇದ್ದಾರೆ. ನೀವೇನು ಆಗಬೇಕು ಅವರಿಗೆ?"

"ತಂದೆ."

"ಐ ಸಿ ಇಲ್ಲಿ ಬನ್ನಿ ಹನ್ನೆರಡನೇ ನಂಬ್ರದ ಕೊಠಡಿಯೇ ಅವಳದು, ಈಗಾಗಲೇ ಬಂದಿರಬಹುದು. ಅವರು; ಇಲ್ಲ ಇನ್ನೊಂದು ಹತ್ತು ನಿಮಿಷ ಅಷ್ಟೆ!"

ಬಂದಿದ್ದ ವ್ಯಕ್ತಿ ವಸಂತಿಯನ್ನು ಅನುಸರಿಸಿದ. ಓಣಿಯಲ್ಲಿ ನಡೆದು ಹೋದವಾಗ ಹನ್ನೆರಡನೇ ನಂಬ್ರದ ಕೊಠಡಿ ಸಿಕ್ಕಿತು. ಬಾಗಿಲಿಗೆ ಬೀಗಮುದ್ರೆ.

"ಪರವಾ ಇಲ್ಲ. ಪಕ್ಕದ್ದೇ ನನ್ನ ರೂಮು. ಅವಳು ಬರುವಷ್ಟರ ತನಕ ಇಲ್ಲೇ ಬಂದು ಕೂಡ್ರಿ".

ತನ್ನ ಕೊಠಡಿಯ ಬಾಗಿಲು ತೆರೆದು ಮಂಚದ ಕೂಳೆ ಹೊಸೆದು ಆಹ್ವಾನಿಸಿದಳು ವಸಂತಿ.

"ಯಾಕೆ-ಸುಮ್ಮನೆ" ಎನ್ನುತ್ತ ಆತ ಅನುಸರಿಸಿದ.

ಇಬ್ಬರು ಹತ್ತು ನಿಮಿಷ ಲೋಕಾಭಿರಾಮವಾಗಿ ಮಾತನಾಡಿದರು. ಅಷ್ಟರಲ್ಲೇ ಹೊರಗಿನಿಂದ ರಾಜೀವಿಯ ನಗು ಕೇಳಿಸಿತು. ವಸಂತಿ ಟಣ್ಣನೆ ಹೊರಗೆ ಜಿಗಿದು "ಏಯ್, ರಾಜೀವಿ ಎಷ್ಟೊತ್ತಾ ನಿನಗೆ"?

"ಹೊತ್ತೇನು ಬಂತು? ನೀನೆಲ್ಲಿ ಸಿಗ್ತೀಯಾ? ಅಂತ ನಿಂತಿದ್ದೇ. ಆದರೆ ನನ್ಗೆ ಹೇಳಬಿಡದೆ ಬಂದೇ ಬಿಟ್ಟೆ ನೀನು!"

[ಹೊರಡುವಾಗ ರಾಜೀವಿಯದ್ದು ನೆನಪಾಗಲಿಲ್ಲ ತನಗೆ. ತನ್ನ ತಲೆಯಲ್ಲಿ ಸುತ್ತುತ್ತಿದ್ದುದು ಒಬ್ಬನೇ-ಸದಾನಂದ, ವಸಂತಿ ತನ್ನಲ್ಲೇ ಹೇಳಿಕೊಂಡಳು.]

"Sorry ರಾಜೀವಿ, ಏನೋ ನೆನೆಸುತ್ತಾ ಬಂದ್ಬಿಟ್ಟೆ. ಇರಲಿ. ಮೊದಲು ರೂಮಿನ ಬಾಗಿಲು ತೆರೆ. ಆ ಮೇಲೆ ಹೇಳ್ತೇನೆ. ನಿನ್ನನ್ನು ಯಾರೋ ಕೇಳಿಕೊಂಡು ಬಂದ್ರು."

"ಕೇಳಿಕೊಂಡು ಬಂದ್ರಾ? ಯಾರಪ್ಪಾ ಅವರು?" ಅಷ್ಟರಲ್ಲೇ ವಸಂತಿಯ ರೂಮಿನಿಂದ ಆತ ಹೊರಗೆ ಬಂದಿದ್ದ.

ವಸಂತಿ ರಾಜೀವಿಯ ಬೆನ್ನಿಗೆ ಗುದ್ದಿ ಹೇಳಿದಳು.-

"ನೋಡು—ಇವರೇ."

'ಹ್ಞ! ಅಪ್ಪಯ್ಯ!"

ತಂದೆ-ಮಗಳಿಬ್ಬರದೂ ಅಪರೂಪದ ಭೇಟಿ. ಇಬ್ಬರೂ ಪರಸ್ಪರ ನೋಡಿಕೊಂಡು ಮುಗುಳು ನಕ್ಕರು. ಅವರಿಬ್ಬರೂ ಕೊಠಡಿಗೆ ಹೋದ ಮೇಲೆ ವಸಂತಿ ತನ್ನ ರೂಮಿಗೆ ಬಂದು ಬಾಗಿಲು ಹಾಕಿ ಹಾಸಿಗೆಗೆ ಮುಖ ಇಟ್ಟು ಹಿಂದಿನದೆಲ್ಲ ನೆನಪುಮಾಡಿಕೊಂಡು ತನಗೂ ಅಪ್ಪ ಇರುತ್ತಿದ್ದರೆ? ಎಂದು ಬಿಕ್ಕಳಿಸಿದಳು.

ಅವಳ ಬಿಕ್ಕಳಿಕೆ ನಿಂತುದು ಹೊರಗಿನಿಂದ ರಾಜೀವಿ ಬಾಗಿಲು ಗುದ್ದಿದಾಗ ಮಾತ್ರ. ಥಕ್ಕನೆ ಮುಖ ಒರಸಿಕೊಂಡು ಎದ್ದು ಎಳೆದು ತಂದ ಮಂದಹಾಸದಲ್ಲೇ ಬಾಗಿಲು ತೆರೆದಳು ವಸಂತಿ. ಕೈಯಲ್ಲಿ ಮಲ್ಲಿಗೆ ಕುಚ್ಚು ಹಿಡಿದು ನಿಂತಿದ್ದ ರಾಜೀವಿ. "ಇದೇನಾ ನೀನು ಮಾಡ್ತಿದ್ದುದು" ಎಂದಳು ಅವಳ ಮುಖ ಬಾತುಕೊಂಡುದನ್ನು ನೋಡಿ.

"ಏನಿಲ್ಲ, ರಾಜೀವಿ. ಯಾಕೋ ಅಪ್ಪನ ನೆನಪಾಯ್ತು."

"ಇಲ್ಲ, ಹಾಗೆಲ್ಲ ಬೇಸರಿಸಿಕೊಳ್ಳಬಾರದು ವಸಂತಿ. ನನ್ನ ನೋಡು ಅಪ್ಪನನ್ನು ನಗುಮುಖದಿಂದಲೇ ಈಗ ಬೀಳ್ಕೊಟ್ಟು ಬಂದೆ?!"

ಮತ್ತೆ ಗೆಳತಿಯರಿಬ್ಬರೂ ಹರಟೆಗೆ ತೊಡಗಿದರು. ಗಂಟೆ ಏಳು ದಾಟಿದ ಮೇಲೆ ಹೊರಟುನಿಂತ ರಾಜೀವಿ ಹೇಳಿದಳು

"ಸುಮ್ಮ ಸುಮ್ಮನೆ ಬೇಸರಿಸೋದಿದ್ರೆ—ನನ್ನ ರೂಮಿಗೆ ಬಂದುಬಿಡು. ಒಟ್ಟಿಗೆ ಊಟ ಮಾಡೋಣ".

"ಬೇಡ. ಬೇಡ ನೀನೇ ಇಲ್ಲಿ ಇದ್ದುಬಿಡು. ಹೋಗುವ– ಬರುವ ಕೆಲಸಾನೇ ಇಲ್ಲ."

"ಭಾರಿ ದೂರ ಅಂತ ಕಾಣುತ್ತೆ, ಅಲ್ವಾ?" ಎನ್ನುತ್ತ ರಾಜೀವಿ ಅಲ್ಲೇ ಕುಳಿತುಬಿಟ್ಟಳು.

ಆ ದಿನ ಯಾಕೊ ಒಲೆ ಉರಿಸಲು ಕೂಡ ವಸಂತಿಗೆ ಬೇಸರ. ಒಂದು ಕಡೆ ರಾಜೀವಿಯ ಅಪ್ಪ ಬಂದು ತನ್ನ ಹಿಂದಿನ ಕಳೆಗಳೆಲ್ಲ ಮರುಕಳಿಸಿದ್ದು. ಇನ್ನೊಂದು ಕಡೆ- ಸದಾನಂದ ಊರಿಗೆ ಹೊರಟು ಹೋದುದು. ಊಟ ಮಾಡದೆ ಹಾಗೇ ಮಲಗುವುದೇ ವಾಸಿ ಎನಿಸಿತ್ತು ಅವಳಿಗೆ. ಆದರೆ ರಾಜೀವಿಯನ್ನು ಒತ್ತಾಯಿಸಿ ಕುಳ್ಳಿರಿಸಿಯಾಗಿದೆಯಲ್ಲಾ. ಅವಳಿಗೇನು ಊಟಕ್ಕೆ ಧಾಡಿ?

ವಸಂತಿ ಒಲೆ ಉರಿಸಲು ಎದ್ದಾಗ ರಾಜೀವಿಯೇ ಮುಂದೆ ಬಂದಳು. "ನೋಡು, ನನ್ನ ರೂಮಿನಲ್ಲಿ ಕೋಸು ಗಡ್ಡೆ ಇದೆ. ತಗೊಂಡು ಬಾ" ಎಂದು ಬೀಗದ ಕೈ ಕೊಟ್ಟು ಕಳುಹಿಸಿದಳು. ವಸಂತಿ ಹೋಗಿ ಬೀಗ ತೆಗೆದು ಅಲ್ಲಿಲ್ಲಿ ಹುಡುಕಾಡಿ ತಂದು ಹೆಚ್ಚತೊಡಗಿದಳು. ರಾಜೀವಿ ಒಲೆ ಉರಿಸಿ, ಅನ್ನಕ್ಕೆ ನೀರಿಟ್ಟು, ಮಂಚದ ಮೇಲೆ ಕುಳಿತು ಹಾಡಲಾರಂಭಿಸಿದಳು.

ರಾತ್ರಿ ಊಟವಾದ ಮೇಲೆ ಇಬ್ಬರೂ ಒಂದೇ ಹಾಸಿಗೆಯ ಮೇಲೆ ಮಲಗಿದರು. ದೀಪ ನಂದಿಸಿ ಬಹಳ ಹೊತ್ತಿನ ತನಕ ಮಾತನಾಡುತ್ತಿದ್ದರು. ಮಾತುಕತೆ ಬೆಳೆದು ಬೆಳೆದು ಒಂದು ಹಂತ ಮುಟ್ಟಿದಾಗ ರಾಜೀವಿಗೆ ಜೊಂಪು ಹಿಡಿಯಿತು. ಅವಳು ನಿದ್ದೆಹೋದುದನ್ನು ನೋಡಿ ವಸಂತಿಯೂ ಸುಮ್ಮನೆ ಮಲಗಿಕೊಂಡಳು.

ರಾತ್ರಿ ನಿದ್ರೆಯಲ್ಲಿ..................

ವಸಂತಿ ಪಿಕ್‌ನಿಕ್‌ಗೆ ಹೋಗಿದ್ದಳು-ರಾಜೀವಿಯೊಂದಿಗೆ. ಅವರು ಹೋಗಿದ್ದ ಹೊಳೆಯ ಬದಿಯಲ್ಲಿ ಹುಲುಸಾಗಿ ಕಾಡು ಬೆಳೆದಿತ್ತು. ರಾಜೀವಿ ವಸಂತಿಯನ್ನು ಬಿಟ್ಟು ನದಿಯ ಪಕ್ಕದಲ್ಲಿದ್ದ ಕಲ್ಲುಗಳ ಮೇಲೆ ಕುಪ್ಪಳಿಸುತ್ತ ಕೆಳಗೆ ಕೆಳಗೆ ಹೋಗುತ್ತಿದ್ದಳು. ವಸಂತಿ ಕಾಡಿಗೆ ಬೆನ್ನುಹಾಕಿ ಒಬ್ಬಳೇ ಕುಳಿತು ನದಿಯ ನೀರು ಹರಿಯುವ ಸೌಂದರ್ಯವನ್ನೇ ಕಣ್ತುಂಬಿಸಿಕೊಳ್ಳುತ್ತಿದ್ದಳು.

ಹಠಾತ್ತನೆ ಹಿಂದಿನಿಂದ ಗರ್ಜನೆ ಕೇಳಿತು. ವಸಂತಿ ತಿರುಗಿ ನೋಡುತ್ತಾಳೆ. ಭೂತಾಕಾರದಲ್ಲಿ ನಿಂತಿದೆ ಹುಲಿ. ಹೊಳೆಯುವ ಕಣ್ಣು, ಮೈ ಮೇಲೆ ಉದ್ದಕ್ಕೂ ಕಪ್ಪು ಹಳದಿ ಪಟ್ಟೆಯ ಬರೆ. ಕೋರೆ ಹಲ್ಲು ತೆರೆದ ಬಾಯಿ!

ವಸಂತಿ ಸ್ವರ ಬಾರದೆ ಅವಾಕ್ಕಾಗಿ ಹಾಗೆಯೇ ನೋಡಿದಳು. ಹುಲಿ ಅವಳನ್ನೇ ನೋಡುತ್ತಾ ಬಾಲವನ್ನು ಎಡ ಬಲಕ್ಕೆ ಮೆಲ್ಲನೆ ಆಡಿಸುತ್ತಿತ್ತು. ನೋಡಿ

ನೋಡಿದ ಹಾಗೇ ಹುಲಿ ಕಡೆಗೆ ಒಮ್ಮೆಲೇ ವಸಂತಿಯು ಮೇಲೆ ಹಾರಿತು.

ವಸಂತಿ ಅಂಗಾತ ಬಿದ್ದಳು. ಹುಲಿ ಬಲವಾದ ತನ್ನೆರಡು ಕಾಲುಗಳನ್ನು ಅವಳ ತೊಡೆಯ ಮೇಲೆ ಇರಿಸಿತು. ಅದರ ಎರಡು ಕೈ ಅವಳ ಎದೆಯ ಮೇಲೆ ನೆಟ್ಟಿತ್ತು. ಮುಖ ವಸಂತಿಯ ಮುಖದ ಹತ್ತಿರ ಹತ್ತಿರವಾದಾಗ ತಾನು ಇನ್ನೇನು ಸಾಯುತ್ತೇನೆ. ತನ್ನನ್ನು ರಕ್ಷಿಸುವವರು ಯಾರೂ ಇಲ್ಲ ಎನ್ನುವಂತಾಗಿ ತನ್ನ ಎಲ್ಲಾ ಶಕ್ತಿಯನ್ನು ಪಯೋಗಿಸಿ ಚೀರುತ್ತಾಳೆ. ಅಷ್ಟರಲ್ಲಿ ಗುಂಡು ಹಾರಿಸಿದ ಸದ್ದು. ಹುಲಿ ಕಾಣದಾಗುತ್ತದೆ. ಹುಲಿಯ ಬದಲು ಗುಂಡು ಹೊಡೆದ ಸದಾನಂದ ಮುಗುಳು ನಗುತ್ತ "ಹೆದರಿದೆಯಾ"? ಎಂದು ಮುಂದೆ ಬರುತ್ತಾನೆ. ವಸಂತಿ ತನ್ನ ಪರಿವೆಯಿಲ್ಲದೆ ಓಡಿ ಹೋಗಿ ಅವನನ್ನು ಅಪ್ಪಿಕೊಳ್ಳುತ್ತಾಳೆ.

......ರಾಜೀವಿಗೆ ನಿದ್ದೆಗಣ್ಣುಗಳಲ್ಲಿ ಥಕ್ಕನೆ ಯಾರೋ ತನ್ನನ್ನು ಬಿಗಿಯಾಗಿ ಅಪ್ಪಿಕೊಂಡಂತಾಯಿತು. ಮೆಲ್ಲನೆ ತನ್ನನ್ನು ಅಪ್ಪಿಕೊಂಡ ವಸಂತಿಯ ಕೈಗಳನ್ನು ಬಿಡಿಸಿ ಅವಳ ಮೈ ಮುಟ್ಟಿ ಕುಲುಕಿಸಿದಳು....

"ವಸಂತಿ, ವಸಂತಿ"

ವಸಂತಿ ಥಕ್ಕನೆ ಎದ್ದು ಕುಳಿತಳು. ಅವಳಿಗೆ ತಕ್ಷಣ ಏನೂ ಹೊಳೆಯಲಿಲ್ಲ. ರಾಜೀವಿಯೇ ನಗುತ್ತಾ ಕೇಳಿದಳು.

"ಯಾಕೆ ನನ್ನನ್ನು ಅಷ್ಟು ಬಿಗಿಯಾಗಿ ಅಪ್ಪಿಕೊಂಡೆ".

"ಹಾಳು ಸ್ವಪ್ನ ಬಿತ್ತು. ಹೆದರಿಕೊಂಡುಬಿಟ್ಟೆ." ಎಂದಳು ವಸಂತಿ. ತಿರುಗಿ ಗೆಳತಿಯರಿಬ್ಬರೂ ಮುಸುಕೆಳೆದುಕೊಂಡು ನಿದ್ದೆಹೋದರು.

× × ×

ಮರುದಿನ ವಸಂತಿ ವಾರ್ಡ್ ಪ್ರವೇಶಿಸುವಾಗ ಮೊದಲ ದಿನದ ಉತ್ಸಾಹವಿರಲಿಲ್ಲ. ಸದಾನಂದ ಇಲ್ಲದ ಇಂದು ಬರೀ ಯಾಂತ್ರಿಕ ಕೆಲಸವಾಗಿ ಭಾಸವಾಗಿತ್ತು ಅವಳಿಗೆ. ಡಾ। ಸದಾನಂದನ ಬದಲಿಗೆ ಶ್ರೀನಿವಾಸನ್ ಬಂದುಹೋಗಿದ್ದ.

ಆರನೇ ಬೆಡ್ಡಿನ ಕೇಸ್ ಶೀಟ್ ನೋಡಿ ಶ್ರೀನಿವಾಸನ್ ಕೇಳಿದ "ಏನಪ್ಪಾ, ಜ್ವರ ಸಂಪೂರ್ಣ ಬಿಟ್ಟು ಬಿಡ್ತಾ? ಡಿಸ್‌ಚಾರ್ಜ್ ಮಾಡಿಬಿಡ್ತೇನೆ. ಊರಿಗೆ ಹೊರಟುಹೋಗು."

"ಇಲ್ಲ ಸ್ವಾಮಿ. ತುಂಬ ಬಡವನಾಗಿದ್ದೇನೆ. ಮಾರ್ಗ ಬಿಟ್ಟು ಹಳ್ಳಿಗೆ ಹೋಗೋಕೆ ನಾಲ್ಕು ಮೈಲು ಇದೆ ಸಾರ್. ಎರಡು ದಿವ್ಸ ಇದ್ದು ಹೋಗಿಬಿಡ್ತೀನಿ" ಟೈಫಾಯಿಡ್ ಜ್ವರದಿಂದ ಮುಕ್ತನಾದವ ಹೇಳಿದ.

"ಜ್ವರ ಬಿಟ್ಟ ಮೇಲೂ ಇಲ್ಲೇ ಇರ್ಬೇಕು ಅಂದ್ರೆ–ಇದೇನು ಮಾವನ ಮನೆಯೋ ನಿನ್ಗೆ? ನನ್ಗೇನಂತೆ ಸರ್ಜನ್ ಬಂದಾಗ ಕೇಳಿನೋಡು"

ಡಾಕ್ಟ್ರು ಹೋದ ಮೇಲೆ ಆರನೇ ಬೆಡ್ಡು ವಸಂತಿಯನ್ನು ಕೂಗಿದ "ಸಿಸ್ಟರ್, ಸಿಸ್ಟರಮ್ಮ" ವಸಂತಿ ಅವನ ಪಕ್ಕಕ್ಕೆ ಹೋಗಿ ಕೇಳಿದಳು.

"ಏನಾ, ಯಾಕೆ ಕರೀತಾ ಇದ್ದಿ?"

"ಡಾಕ್ಟರ್ ಸದಾನಂದ ಯಾವಾಗ ಬರ್ತಾರಮ್ಮ?"

"ನಂಗೇನು ಗೊತ್ತಪ್ಪ? ನಾಳೆ ಬರಬಹುದು. ನಿನಗ್ಯಾಕೋ ಅದೆಲ್ಲ?"

"ಹಾಗಲ್ಲಮ್ಮಾ, ನೋಡಿ. ಇವತ್ತಿಗೆ ನಾನು ಇಲ್ಲಿಗೆ ಬಂದುಬಿಟ್ಟು ಹದಿನೆಂಟು ದಿನ ಆಯ್ತು. ಡಾಕ್ಟರ್ ಸದಾನಂದ ಈ ವಾರ್ಡಿಗೆ ಬರುವವರೆಗೂ ನನಗೆ ಸ್ವಲ್ಪವೂ ಕಡಿಮೆ ಇರಲಿಲ್ಲ. ಅವರು ಬಂದ ಮೇಲೆ ಸರೀ ಪರೀಕ್ಷೆ ಮಾಡಿ ಏನೋ ಬೇರೆ ಮಾತ್ರೆ ಬರಕೊಟ್ರು. ನಾಲ್ಕೇ ದಿವಸದಲ್ಲಿ ತುಂಬ ಕಡಿಮೆ ಯಾಯ್ತು. ಅದಕ್ಕೆ ನಾನು ಇಲ್ಲಿಂದ ಹೋಗುವಾಗ ಅವರ ಹತ್ರ ಒಂದು ಫಸ್ಟ್‌ಕ್ಲಾಸ್ ಟಾನಿಕ್ಕು ಬರ್ಸಿಕೊಂಡು ಅವರ ಕಾಲು ಹಿಡಿದು ಹೋಗಬೇಕೆಂದಿದ್ದೇನೆ. ಆದರೆ ಈ ಡಾಕ್ಟ್ರು ಇವತ್ತೇ ಹೋಗಬೇಕೆಂದಿದ್ದಾರಲ್ಲ?"



ಡಾ। ಸದಾನಂದನ ಮೇಲೆ ಆ ರೋಗಿಗೆ ಇರುವ ಪ್ರೀತಿ, ವಿಶ್ವಾಸ ನೋಡಿ ವಸಂತಿಯ ಕಣ್ಣಲ್ಲಿ ಆನಂದ ಬಾಷ್ಪ ತುಂಬಿ ಬಂತು. ಅವಳು ಸಂತೈಸುವ ದನಿಯಲ್ಲಿ ಅವನಿಗೆ ಹೇಳಿದಳು.

"ನೀನೇನೂ ಹೆದರಿಕೋ ಬೇಡಪ್ಪ! ನಿನ್ಗೆ ಸಂಜೆ ಸ್ವಲ್ಪ ಜ್ವರ ಇತ್ತು ಅಂತ ಬರೆದುಬಿಡ್ತೇನೆ. ಮತ್ತೆ ಡಾಕ್ಟ್ರು ಬಾಯಿ ಮುಚ್ಚಿ ಕೂತುಕೊಂಡುಬಿಡ್ತಾರೆ. ಹ್ವ?"

ವಸಂತಿ ಅವನ ಟೆಂಪರೇಚರ್ ಚಾರ್ಟಿನಲ್ಲಿ ತಿದ್ದಿ ಬರೆದಳು. ರೋಗಿ ಅವಳ ಕಡೆ ನೋಡಿ ಮುಗುಳು ನಕ್ಕ, ಕೃತಜ್ಞತೆಯಿಂದ.

ದೂರದಿಂದ ಇದೆಲ್ಲವನ್ನು ಆಲಿಸಿ ನೋಡುತ್ತಿದ್ದ ಇಂಜನಿಯರಿಂಗ್ ಸ್ಟೂಡೆಂಟ್ ಮನದಲ್ಲೇ ಮುಗುಳು ನಕ್ಕ "ಅಬ್ಬ ಎಷ್ಟು ಸಹಾನುಭೂತಿ ಈ ಸಿಸ್ಟರಿಗೆ. ಫ್ಲಾರೆನ್ಸ್ ನೈಟಿಂಗೇಲನ ಹಾಗೆ!

ಡಾ। ಸದಾನಂದ ಇಲ್ಲದ ಆ ಎರಡು ದಿನಗಳಲ್ಲಿ- ವಾರ್ಡಿನ ಡ್ಯೂಟಿ ಮಾಡುವಾಗ ವಸಂತಿಗೆ ಆದ ಅನುಭೂತಿ ಇದು-ಯಾಕೆ ಗಂಟೆಯ ಮುಳ್ಳು ಇಷ್ಟು ನಿಧಾನವಾಗಿ ಚಲಿಸುತ್ತಿದೆ?

ಅಪರೂಪಕ್ಕೆ ಬ್ಯಾಡ್‌ಮಿಂಟನ್ ಆಡುತ್ತಿದ್ದ ಆಕೆ, ಆ ಎರಡು ದಿನಗಳಲ್ಲೂ ಸಂಜೆ ಉತ್ಸಾಹ ಇಲ್ಲದಿದ್ದರೂ ಆಡಲೇಬೇಕಾಯಿತು.

ಅವಳಲ್ಲಿದ್ದ ಉತ್ಸಾಹವನ್ನೇ ಡಾ। ಸದಾನಂದ ಬೆಂಗಳೂರಿಗೆ ಹೋಗುವಾಗ ಕಸಿದುಕೊಂಡು ಹೋಗಿದ್ದ. ಪ್ರತಿಫಲವಾಗಿ ಆಕೆ ಅವನ ಹೃದಯಕ್ಕೆ ಕನ್ನ ಹಾಕಿದ್ದಳು ರಹಸ್ಯವಾಗಿ!

—೩—

ಡಾ. ಸದಾನಂದ ಮನೆಯಿಂದ ಬಂದ ಎಕ್ಸ್‌ಪ್ರೆಸ್ ಕಾಗದವನ್ನು ಹಿಡಿದುಕೊಂಡೇ ಸರ್ಜನರ ಆಫೀಸಿಗೆ ಹೋದ. ಮನೆಯಿಂದ ಅಕಸ್ಮಾತ್ ಬಂದ ಕಾಗದದ ವಿವರವನ್ನು ಹೇಳಿದ. ಅದರಿಂದ ಎರಡು ದಿನದ ಕ್ಯಾಜುವಲ್ ರಜೆ ಪಡೆದು ಆಸ್ಪತ್ರೆಯ ಮೆಟ್ಟಲಿಳಿದ. ಖಾಲಿ ಟಾಂಗಾವನ್ನು 'ಹೈ ಹೈ' ಎಂದು ಹೊಡೆಯುತ್ತಿದ್ದ ಸಾಹೇಬನನ್ನು ಕೂಗಿ ನಿಲ್ಲಿಸಿ ಟಾಂಗಾ ಹತ್ತಿ ಬಸ್ ಸ್ಟಾಪ್‌ಗೆ ಬಂದ.

ಬೆಂಗಳೂರಿಗೆ ಟಿಕೆಟ್ ಪಡೆದು ಬಸ್ಸು ಏರಿ ಕುಳಿತದ್ದಾಯಿತು. ಸಮಯಕ್ಕೆ ಸರಿಯಾಗಿ ಬಸ್ಸು ಹೊರಟಿತು. ಬಸ್ಸಿಗಿಂತಲೂ ವೇಗವಾಗಿ ಅವನ ಮನಸ್ಸು ತಂದೆಯವರು ಬರೆದ ಪ್ರಾಮುಖ್ಯ ವಿಷಯ ಏನಾಗಿರಬಹುದು? ಎಂಬುದರ ಕುರಿತು ಆಲೋಚಿಸುತ್ತಿತ್ತು. ತಮ್ಮ ಬಂದಿದ್ದಾನೆ ಬಾ ಎಂದರೆ ಮಾತ್ರ ಬರುವುದಿಲ್ಲವೊ ಏನೊ ಎಂಬ ಸಂಶಯದಿಂದ ಹಾಗೆ ಬರೆದಿರಲಿಕ್ಕೂ ಸಾಕು. ಅಥವಾ ತಮ್ಮನ ಬಗ್ಗೆ ಏನಾದರೂ ವಿಷಯ ಗೊತ್ತಾಗಿರಲೂಬಹುದು! ಛೆ! ಅಷ್ಟು ಒಳ್ಳೇ ನೌಕರಿ ಇರುವಾಗ ಕಲ್ಕತ್ತದಿಂದ ಅದನ್ನು ಬಿಟ್ಟು ತಮ್ಮ ಬರಲು ಸಾಧ್ಯವೂ ಇಲ್ಲ!

ಬಸ್ಸು ಹೋಗುತ್ತಿದ್ದ ಹಾಗೆ – ಅದರ ವೇಗದಿಂದ ಬಲವಾಗಿ ಬೀಸುತ್ತಿದ್ದ ಗಾಳಿಗೆ ಜೊಂಪು ಹಿಡಿದಂತಾಯಿತು, ಅವನಿಗೆ. ಆ ಜೊಂಪಿನಲ್ಲೂ ಅವನ ಒಳಮನಸ್ಸಿನ ಸೂಕ್ಷ್ಮ ಪದರಿನ ಹಾಳೆಗಳು ಒಂದೊಂದೇ ಮೇಲೆದ್ದು ಗಾಳಿಗೆ ಹಾರತೊಡಗಿದವು.

...ಒಂದೇ ಸವನೆ ಮಳೆ ಸುರಿಯತೊಡಗಿದೆ. ಒನಕೆ ಗಾತ್ರದ ಮಳೆಗೆ ಕೆರೆ, ತೋಟಗಳು ತುಂಬಿ ನೀರು ಹರಿಯತೊಡಗಿವೆ. ಆದರೂ ಬಸ್ಸು ಒಂದೇ ಸವನೇ ಓಡುತ್ತಾ ಇದೆ. ಎದುರಿಗೆ ಭಾರೀ ಗಾತ್ರದ ಹೊಳೆ. ಹೊಳೆಯ ತುಂಬ ಕೆನ್ನೀರು. ನೀರು ಸಂಕವನ್ನು ಸ್ಪರ್ಶಿಸುತ್ತ ಹರಿದುಹೋಗುತ್ತಿತ್ತು. ಬಸ್ಸಿನ ಡ್ರೈವರ್ ಒಮ್ಮೆ ಬಸ್ಸು ನಿಲ್ಲಿಸಿ ನೋಡಿದ. ಮತ್ತೆ ಧೈರ್ಯ ತಂದುಕೊಂಡು ಮುಂದೆ ಓಡಿಸಿದ. ಇನ್ನೇನು ಬಸ್ಸು ಸಂಕ ದಾಟಿತು ಎನ್ನುವಾಗ ಸಂಕ ಮುರಿಯಿತು. ಬಸ್ಸು ನೀರು ಪಾಲಾಯ್ತು. ಸದಾನಂದ ನೀರಿನಲ್ಲಿ ತೇಲಿಹೋಗತೊಡಗಿದ. ಹೋಗುತ್ತಿದ್ದಂತೆ ಅವನಿಗೆ ಏನೋ ಆಸರೆ ಸಿಕ್ಕಿತು. ಅದನ್ನೇ ಗಟ್ಟಿಯಾಗಿ ಹಿಡಿದುಕೊಂಡ. ಆ ಆಸರೆ ಅವನನ್ನು ದಡ ಸೇರಿಸಿತು. ಅದು ಮತ್ತೇನೂ ಅಲ್ಲ, ಯಾರೋ ದಾಂಡಿಗನ ಕೈ ಇರಬೇಕು ಎಂದೆನಿಸಿತು ಅವನಿಗೆ. ಬಿದ್ದಲ್ಲಿಂದಲೇ ಅದನ್ನೊಮ್ಮೆ ಕಣ್ಣರಳಿಸಿ ನೋಡಿ ಕೃತಜ್ಞತೆ ಸೂಚಿಸಬೇಕೆನಿಸಿತು. ಆದರೆ ಕಣ್ಣು ಸರಿಯಾಗಿ ತೆರೆಯಲಾಗಲಿಲ್ಲ. ಕೆಂಪು ನೀರು ಕಣ್ಣಿಗೆ ಹಾಗಿ ಕಣ್ಣು ಬಲೆ ಬಲೆಯಾಗಿತ್ತು. ಕಡೆಗೂ ಯಾರಪ್ಪ ಈ ಪುಣ್ಯಾತ್ಮ ಎಂದು ಕಣ್ಣು ಬಾಯಿ ಬಿಟ್ಟು ನೋಡುತ್ತಾನೆ ಎದುರಿಗೆ ಸಿಸ್ಟರ್ – ವಸಂತಿ!

ಗಕ್ಕನೆ ವೇಗವಾಗಿ ಹೋಗುತ್ತಿದ್ದ ಬಸ್ಸು ನಿಂತಿತು. ಅದು ನಿಂತ ರಭಸಕ್ಕೆ ಮುಂದೆ ವಾಲಿದ ಸದಾನಂದ ಹಗಲು ಕನಸಿನಿಂದ ಎಚ್ಚರವಾದ. ಬಸ್ಸಿನ ಎದುರಿಗೆ ದನದ ಕರುವೊಂದು ಅಡ್ಡ ಬಂದಿದೆ.

ಹಗಲಲ್ಲೇ – ತನ್ನ ಮನಸ್ಸಿನಲ್ಲಿ ನಡೆಯುವ ವ್ಯಾಪಾರ ನೋಡಿ, ಸದಾನಂದನಿಗೆ ತನ್ನ ಬಗ್ಗೆ ಅಳಬೇಕೋ ನಗಬೇಕೊ – ಏನೊಂದು ತಿಳಿಯಲಿಲ್ಲ. ತಾನು ನಿಜವಾಗಿಯೂ ದಿನದಿಂದ ದಿನಕ್ಕೆ ವಸಂತಿಯನ್ನು ಅತಿಯಾಗಿ ಹಚ್ಚಿಕೊಳ್ಳುತ್ತಿದ್ದೇನಲ್ಲ!

'ಹೌದು ನಾನು ವಸಂತಿಯನ್ನು ಪ್ರೀತಿಸುತ್ತೇನೆ. ಯಾಕೆ ಪ್ರೀತಿಸಬಾರದು? ಏನಾಗಿದೆ ಅವಳಿಗೆ? ನಿಜವಾಗಿಯೂ ಅವಳು ಕುಮಾರಿಯೆ! ವೈಧವ್ಯ ಬಂದುದು ಬರೀ ತೋರಿಕೆಗೆ, ಸಮಾಜಕ್ಕೆ'!

ವಸಂತಿ! ?

ತಾನು ಪ್ರೀತಿಸುವುದು ಅವಳನ್ನೇ? ಅವಳ ದೇಹವನ್ನೇ? ತನ್ನೊಳಗೆ ಪ್ರಶ್ನಿಸಿಕೊಂಡ ಸದಾನಂದ. ಹೌದು ಅವಳ ಸೌಂದರ್ಯವನ್ನು ಅಲ್ಲ–ಪ್ರೀತಿಸುವುದು ಗುಣವನ್ನು, ಅವಳ ಸೇವಾಬುದ್ಧಿಯನ್ನು. ಅವಳ ಎಲ್ಲಾ ಕತೆಯನ್ನು ಸಾದ್ಯಂತವಾಗಿ ಹೇಳಿದ್ದಳಲ್ಲವೇ? ಯಾವುದೋ ಮಾತು ಕತೆಯಲ್ಲಿ ಅವಳ ಕುಟುಂಬದ ವಿಚಾರ ತಾನು ಆಸಕ್ತಿಯಿಂದ ಕೇಳಿದಾಗ ಅವಳು ಎಷ್ಟೊಂದು ವ್ಯಥತೆಯಿಂದ ಕಣ್ಣಿಗೆ ಕಟ್ಟುವ ಹಾಗೆ ಹೇಳಿದ್ದಳು. ನಿಜವಾಗಿಯೂ ಸುಂದರನಿಗೆ ಪುಣ್ಯವಿಲ್ಲ– ಇವಳೊಂದಿಗೆ ಬಾಳ್ವೆ ನಡೆಸಲು!

ಯೋಚಿಸುತ್ತಾ, ಯೋಚಿಸುತ್ತಾ, ಸದಾನಂದ ತನ್ನ ಬುದ್ಧಿಗೆ ಸವಾಲು ಹಾಕಿಕೊಂಡ. ತಾನು ನಿಜವಾಗಿಯೂ ವಸಂತಿಯನ್ನು ಪ್ರೀತಿಸುತ್ತೇನೆಯೋ? ಅಥವಾ ಅವಳ ಮೇಲಿನ ಅನುಕಂಪ ಪ್ರೀತಿಯ ರೂಪು ತಾಳಿಹುದೇ? ಅನುಕಂಪ ಪ್ರೀತಿಯಾಗಬಹುದೇ? ಛೆ! ಎಂದಿಗೂ ಸಾಧ್ಯವಿಲ್ಲ. ನಿಜವಾಗಿಯೂ ತಾನವಳನ್ನು ಪ್ರೀತಿಸುತ್ತೇನೆ. ಇದು ತನ್ನ ಆತ್ಮಸಾಕ್ಷಿಗೂ ಸತ್ಯ!

ಹಾಗಾದರೆ ಈ ಪ್ರೀತಿಯಿಂದ ಬರಬಹುದಾದ ಎಲ್ಲಾ ಅಡೆತಡೆಗಳಿಗೂ ನೀನು ಸಿದ್ಧನಾಗಿರಬೇಕು ಎಂದಿತು ಅವನ ಮನಸ್ಸು. ಅದೇನು ಮಹಾ? ಏನೇ ಆಗಲಿ ಈ ಸ್ನೇಹ ಕಡಿಯುವುದೇ ಇಲ್ಲ ಎಂದು ಮನಸ್ಸಿನಲ್ಲೇ ಶಪಥ ಮಾಡಿಕೊಂಡ ಆತ.

ಸದಾನಂದನ ಚಿಂತನೆ ಒಂದು ಹಂತಕ್ಕೆ ಬಂತೆನ್ನುವಾಗ ಬಸ್ಸು ತಾನು ತಲುಪಬೇಕಾದ ಸ್ಥಳದ ಹತ್ತಿರಕ್ಕೆ ಬಂದಿತ್ತು. ಬೆಂಗಳೂರಿನ ಪೇಟೆಯ ಒಳಗೆ ಬಸ್ಸು ಹೊಕ್ಕಾಗಲೇ ಅವನ ವಿಚಾರಸರಣಿಯೂ ಕಡಿದು ಬಿತ್ತು.

ಸದಾನಂದ ಇಳಿದ. ಮನೆಗೆ ಬಂದಾಗ ಹೊರಗೆ ಯಾರೂ ತೋರಲಿಲ್ಲ. ಬರಿಗೈಯಲ್ಲೇ ಸದಾನಂದ ಚಾವಡಿ ಹತ್ತಿ ಒಳಗೆ ಕಾಲಿರಿಸುತ್ತಿದ್ದಾಗ ಅಡಿಗೆ ಮನೆಯಿಂದ ಅವನ ತಾಯಿ ಸರೋಜಮ್ಮ ಇದಿರಾದರು.

"ಓ! ಸದಾನಂದ ಬಂದುಬಿಟ್ಟೆಯಾ? ಈಗ ನಿನ್ನನ್ನೇ ನೆನಸಿಕೊಂಡು ಅಪ್ಪ, ಮಗ ಮಾರ್ಕೆಟಿಗೆ ಹೋದರು" ಎಂದವಳೇ ಮಗ ಬಂದ ಸಂಭ್ರಮದಲ್ಲಿ ಒಳಗೆ ಹೋಗಿ ಒಂದು ಲೋಟ ಹಾಲು ತಂದಿಟ್ಟಳು.

ಸದಾನಂದ ಹಾಲು ಕುಡಿದು, ಕೈಸ್ತು ಕಾಲ. ಚಾವಡಿಯಲ್ಲಿ ಹ್ಯಾಪು ಹಾಕಿಕೊಂಡು ಬೇಚಿನ ಮೇಲಿದ್ದ

'ಮ್ಯಾಗಝಿನ್' ನೋಡುತ್ತ ಕುಳಿತ. ಹತ್ತಿರವೇ ಇದ್ದರೂ ಅಪರೂಪವಾಗಿದ್ದ ಮಗನನ್ನು ಕಣ್ತುಂಬ ನೋಡುತ್ತಾ ಸೋಫಾದ ಮೇಲೆ ಕುಳಿತಿದ್ದ ಸರೋಜಮ್ಮ ಅದು – ಇದು ಮಾತನಾಡತೊಡಗಿದಳು.

ಲೈಟು ಹಾಕಿ ಹತ್ತು ನಿಮಿಷ ಆಗುವಷ್ಟು ಹೊತ್ತಿಗೆ ಗೇಟನ್ನು ದಾಟಿ ಅಂಗಳಕ್ಕೆ ಕಾರು ಬಂತು. ಸದಾನಂದ ತಂದೆಯವರು ಬಂದರೆಂದು ಎದ್ದುನಿಂತು ಮೆಟ್ಟಲಿಳಿದ.

ಕಾರಿನಿಂದ ಇಳಿಯುತ್ತಲೇ ಅಪ್ಪ ಮಗ ಇಬ್ಬರೂ ಸದಾನಂದನನ್ನು ಸ್ವಾಗತಿಸಿದರು. ಎಲ್ಲರೂ ಒಟ್ಟಿಗೆ ಸೇರಿ ಚಾವಡಿಯಲ್ಲಿ ಕುಳಿತು ಊಟದ ತನಕ ಲೋಕಾಭಿರಾಮವಾಗಿ ಮಾತನಾಡತೊಡಗಿದರು.

ಮಕ್ಕಳು ಮಾತನಾಡುತ್ತಲೇ ಇರುವುದನ್ನು ನೋಡಿ ಸರೋಜಮ್ಮ ಊಟದ ನೆನಪು ಮಾಡಿದಳು. ಎಲ್ಲರೂ ಎಲೆಯ ಮುಂದೆ ಕುಳಿತು ತಮಾಷೆ ಮಾತನಾಡುತ್ತಾ, ಆಡುತ್ತಾ ಹೇಗೋ ಅಕ್ಕಿಯ ವಿಚಾರ ಬಂದಾಗ ನರ್ಸಪ್ಪಯ್ಯನವರು ಸದಾನಂದನಿಗೆ ಹೇಳಿದರು.

"ನೋಡೋ ಸದಾನಂದ! ಕಳೆದ ವರ್ಷವೂ ಕೋರ್ಟಿನಿಂದ ನಮಗೆ ಗೇಣಿ ಸರಿಯಾಗಿ ಬರಲಿಲ್ಲ. ಏನೂ ಬೆಳೆಯಲಿಲ್ಲ ನರ್ಸಪ್ಪಯ್ಯನವರೇ ಎಂದು ಬರೇ ಐವತ್ತು ಮುಡಿಯ ಅಕ್ಕಿಯ ಕ್ರಯವನ್ನಷ್ಟೇ ಸುಬ್ರಾಯ ಕಾರಂತರು ಕಳುಹಿಸಿದ್ದರು. ಈ ವರ್ಷವೂ ಅಷ್ಟೆ. ಮತ್ತೊಂದು ನೂರು ರೂಪಾಯಿ ಹೆಚ್ಚು. ಎಪ್ಪತ್ತು ಎಪ್ಪತ್ತೈದು ಮುಡಿ ಅಕ್ಕಿ ಬರೇ ಒಂದೇ ಫಸಲಿನಲ್ಲಿ ತೆಗೆಯಬಹುದಾದರೂ ವರ್ಷಕ್ಕೆ ಬರೇ ಎಪ್ಪತ್ತೈದು ಮುಡಿ ಕೂಡಾ ಗೇಣಿ ಕೊಡೋಕಾಗಕ್ಕಿಲ್ಲ ಕಾರಂತರಿಗೆ. ಕಳೆದ ವರ್ಷ ಈ ವರ್ಷ ಕಾರಂತರು ಮಾಡಿದ್ದು ನೋಡಿದ್ರೆ ಬರುವ ವರ್ಷಾನೂ ಇಷ್ಟೇ ಅವರು ಮಾಡೋದು ಅಂತ ಕಾಣುತ್ತೆ".

ನರ್ಸಪ್ಪಯ್ಯನವರ ಮಾತು ಮುಗಿಯುವ ಮೊದಲೆ ರಾಘವ ನಡುವೆ ಬಾಯಿಹಾಕಿ ಹೇಳಿದ.

"ಅದಕ್ಕೇನಂತೆ ಅಪ್ಪಯ್ಯ! ಹೇಗೂ ವಕಾಲತ್ತು ನಿಮಗೆ ಹೇಳಿಕೊಡಬೇಕಾಗಿಲ್ಲವಷ್ಟೆ! ದಾವೆ ಮಾಡಿ. ಮತ್ತೇನು?"

"ಎಂತಹ ದಾವೆಯೋ ರಾಘವ? ದಾವೆ ಮಾಡುತ್ತಾ ಹೋದರೆ ಕಡೆಯ ತನಕವೂ ಅದೇ ಗತಿ! ಕಾರಂತರಾದ್ದರಿಂದ ಪಾಪ ಅಷ್ಟಾದರೂ ಕೊಡುತ್ತಾರೆ. ಬೇರೆ ಯಾರಾದರೂ ಆಗಿದ್ದರೆ ಇಷ್ಟು ಕೊಡುವುದು ಇಷ್ಟರಲ್ಲೇ ಇದೆ" ಸದಾನಂದ ರಾಘವನ ಮಾತಿಗೆ ಪ್ರತ್ಯುತ್ತರ ಹೇಳಿದ. ನರ್ಸಪ್ಪಯ್ಯನವರು ಊಟ ಮುಗಿಸಿ ಏಳುತ್ತಾ ಹೇಳಿದರು. "ಅದಕ್ಕೇ ನಾನೂ ನಿನ್ನ ಅಮ್ಮನೂ ಸೇರಿ ಬೇರೆಯೇ ಒಂದು ಆಲೋಚನೆ ಮಾಡಿದ್ದೇವೆ. ಹೇಗೂ ನೀವು ಇಬ್ಬರೂ ಬಂದವರು ಇದ್ದೀರಿ. ಯಾವುದಾದರೊಂದು ಇತ್ಯರ್ಥಕ್ಕೆ ಬಂದರೆ ಎಲ್ಲಾ ಸುಲಭದಲ್ಲಿ ಪರಿಹಾರ ಆದ ಹಾಗೆ."

"ಅಂದರೆ ಏನು?" ಸದಾನಂದ ಕೇಳಿದ.

"ಇನ್ನೆಲ್ಲಾ ಆಸ್ತಿ – ಗೀಸ್ತೀ ಇಟ್ಟುಕೊಂಡು ಪ್ರಯೋಜನವಿಲ್ಲ ಸದಾನಂದ. ನೀನು ಹೇಗೂ ಹಳ್ಳಿ ಕಡೆ ಹೋಗುವ ಹಾಗೆ ಇಲ್ಲವಷ್ಟೆ! ರಾಘವ ಇಂಜಿನಿಯರ್ ಆಗಿ ಒಳ್ಳೇ ಕೆಲಸ ಹಿಡಿದ. ನಿನ್ನ ಅಮ್ಮನೋ ಪೇಟೆಯಲ್ಲಿ ಬೆಳೆದವಳು. ನಮ್ಮ ಪೈಕಿ ನಾನೊಬ್ಬ ಮಾತ್ರ ಅಲ್ಲಿ ಹುಟ್ಟಿದವ. ನಾನೂ ಈ ಮೇಜಿಸ್ಟ್ರೇಟ್ ಕೆಲಸದಿಂದ ನಿವೃತ್ತನಾದ ಮೇಲೆ ಅಲ್ಲಿಗೆ ಹೋಗ್ತೇನಾ? ಅದಕ್ಕೇ ಅದನ್ನು ಒಳ್ಳೆಯ ಕ್ರಯ ಬಂದರೆ ಮಾರಿಬಿಡೋಣಾಂತ; ಅಷ್ಟೆ".

"ಏನು ಪಿತ್ರಾರ್ಜಿತ ಆಸ್ತಿ ಮಾರೋದೇ?" ಸದಾನಂದ ಅನಿರೀಕ್ಷಿತವಾಗಿ ಬಂದ ವಿಷಯದಿಂದ ಆಶ್ಚರ್ಯಗೊಂಡ.

"ಹ್ಞೂ, ಪಿತ್ರಾರ್ಜಿತ ಆಸ್ತಿಯಾದರೇನಾಯ್ತು, ಸದಾನಂದ? ಮತ್ತೇನಪ್ಪ ಮಾಡೋದು? ನೀನೇನಾದರೂ ಹಳ್ಳಿಗೆ ಹೋಗ್ತೀಯಾ? ಹೋದರೂ ಯಾರು ಬರ್ತಾರೆ ಅಲ್ಲಿ ಔಷಧಿಗೆ? ನಿನಗೆ ಓದಿಸಲು ಮುಗಿಸಿದ ಹಣದ ಕಾಲಾಂಶವೂ ನಿನ್ನ ಜೀವಮಾನದಲ್ಲಿ ಅಲ್ಲಿ ಸಿಗಲಿಕ್ಕಿಲ್ಲ. ಅದಕ್ಕೆ ಆ ಆಸ್ತಿ ಮಾರಿ, ಆ ದುಡ್ಡಿನಿಂದ ಬೇರೇನಾದರೂ ಮಾಡಿಕೊಳ್ಳಬಹುದಲ್ಲ. ಏನಿಲ್ಲದಿದ್ದರೂ ಬ್ಯಾಂಕಿನಲ್ಲಿಟ್ಟರೆ ಬಡ್ಡಿಯಾದರೂ ಬಂದೀತು."

ಯಾವುದೇ ಉದ್ವೇಗವಿಲ್ಲದೆ ನರ್ಸಪ್ಪಯ್ಯನವರು ಮಗನಿಗೆ ಹೇಳಿದರು. ಸದಾನಂದ ರಾಘವನ ಮುಖ ನೋಡುತ್ತಾ ಹೇಳಿದ. "ನನಗೇನೂ ಇದರಲ್ಲಿ ಇಷ್ಟವಿಲ್ಲವಪ್ಪ! ಇನ್ನು ರಾಘವನ ಇಷ್ಟ!"

"ನನ್ನದು ಯಾವುದಕ್ಕೂ ಅಡ್ಡಿಯಿಲ್ಲ. ಎಲ್ಲಾ ನೀವಿಬ್ಬರೇ ನಿಶ್ಚಯಿಸಿದ್ದೆ. ಆದರೆ ಒಂದು ವಿಷಯ ಮಾತ್ರ ನಾನು ಹೇಳಬಲ್ಲೆ. ಈ ವರ್ಷದ ಮಟ್ಟಿಗೆ ಆಸ್ತಿ ಮಾರುವುದು ಬೇಡ. ಕಾರಂತರು ಏನು ಮಾಡ್ತಾರೆ,

ನೋಡೋಣ? ಬರುವ ವರ್ಷವೂ ಹೀಗೇ ಆದರೆ ಮತ್ತೆ ಏನಾದರೂ ಒಂದು ಮಾಡಲೇಬೇಕಷ್ಟೆ?"

ರಾಘವನ ಅನಿರೀಕ್ಷಿತ ಹೇಳಿಕೆಯನ್ನು ಕೇಳಿ ಸದಾನಂದ ಖಿಂಡುಣಂಗಾಗಿದಂತೆ ಹೇಳಿದ –

"ನನ್ನ ಅಭಿಪ್ರಾಯ ಇಷ್ಟು ಅಪ್ಪಯ್ಯ: ನೀವು ರಿಟಾಯರ್ಡ್ ಆದಮೇಲೆ ಊರಿಗೆ ಹೋಗಬೇಕು. ಕೃಷಿ ಕೆಲಸಕ್ಕೆ ಕೈ ಹಚ್ಚಬೇಕು. ಹತ್ತಾರು ತಲೆಮಾರಿನಿಂದ ಬಂದ ನಮ್ಮ ಆಸ್ತಿಯನ್ನು ಒಂದೇ – ಒಮ್ಮೆಲೇ ಕ್ಷಣಿಕ ನಿರ್ಧಾರದಲ್ಲಿ ಮಾರೋದು ಎಂದರೆ? ನಾವು ಕಲಿತ ವಿದ್ಯೆ– ಸಂಪಾದಿಸಿದ ಹಣ, ಯಾವುದೂ ಶಾಶ್ವತವಲ್ಲ; ಆಸ್ತಿ ಏನು ಹಾಳಾಗುವುದು? ಬಂಜೆಯಾಗುವುದು ಎಂದಿದೆಯಾ? ವಿದ್ಯಾವಂತರೆ ಹಳ್ಳಿಗೆ ಹೋಗದಿದ್ದರೆ ಮತ್ತೆ ಹಳ್ಳಿಯ ಉದ್ಧಾರ ಯಾವಾಗ?"

ಅಷ್ಟರ ತನಕ ಊಟ ಮಾಡುತ್ತಿದ್ದಲ್ಲಿಂದಲೇ ತಂದೆ ಮಕ್ಕಳ ವಾದವನ್ನು ಕೇಳುತ್ತಿದ್ದ ಸರೋಜಮ್ಮ ಕುಳಿತಲ್ಲಿಂದಲೇ ಹೇಳಿದಳು. "ನೀವು ಏನು ಬೇಕಾದರೂ ಮಾಡಿ, ನಾನು ಮಾತ್ರ ಹಳ್ಳಿಗೆ ಹೋಗುವ ಹಾಗಿಲ್ಲ. ನಿಮ್ಮ ಅಪ್ಪ ಬೇಕಾದ್ರೆ ಹೋಗಲಿ. ನಾನು ರಾಘವ ನೊಟ್ಟಿಗೆ ಕಲ್ಕತ್ತೆಗೆ ಹೋಗಿಬಿಡ್ತೇನೆ".

ಕ್ಷಣಕಾಲ ಎಲ್ಲರೂ ಸುಮ್ಮನಾದರೂ ಆಮೇಲೆ ಚೇತರಿಸಿಕೊಂಡ ಸದಾನಂದ ಹೇಳಿದ "ಹಾಗಾದರೆ ಈ ವರ್ಷದ ಮಟ್ಟಿಗೆ ರಾಘವ ಹೇಳಿದ ಹಾಗೆ ಮಾಡಿ. ಮುಂದಿನ ವರ್ಷ ಈ ವಿಷಯದ ಇತ್ಯರ್ಥಕ್ಕೆ ಬರೋಣ."

"ಏನೋ ಇನ್ನೆಲ್ಲ ನೀವೇ ಹೇಳಿದ್ದು. ನೀವೇ ಮಾಡಿದ್ದು. ಪ್ರಾಯಕ್ಕೆ ಬಂದವರಿದ್ದೀರಿ. ಆಲೋಚಿಸುವಷ್ಟು ಕಲಿತಿದ್ದೀರಿ. ಮತ್ತೇನು?"

× × × ×

ಮೆಜಿಸ್ಟ್ರೇಟ್ ನರ್ಸಪ್ಪಯ್ಯನವರ ಹುಟ್ಟೂರು ಕೋಳ್ಯೂರು, ಕಾಸರಗೋಡು ತಾಲೂಕಿನ ಒಂದು ಹಳ್ಳಿ ಇದು. ಇಲ್ಲಿಯ ಮುಖ್ಯ ಬೆಳೆ ಅಕ್ಕಿ ಮತ್ತು ಅಡಿಕೆ. ನರ್ಸಪ್ಪಯ್ಯನವರ ತಾತ – ಮುತ್ತಾತರಿಂದಲೇ ಅವರು ಅದೇ ಕೃಷಿಯನ್ನು ನಡೆಸುತ್ತಾ ಬಂದಿದ್ದಾರೆ. ಅದರಲ್ಲೇ ಸುಧಾರಿತ ಕ್ರಮಗಳನ್ನು ಅಳವಡಿಸಿದ್ದಾರೆ.

ಕೋಳ್ಯೂರು ಮತ್ತು ಕುರ್ಕ ಗ್ರಾಮಗಳು ಎರಡು ಕೂಡುವಲ್ಲಿ ಗಡಿಯ ಹಾಗೆ ದೊಡ್ಡ ಹೊಳೆ ಹರಿಯುತ್ತದೆ. ಆ ಊರಿನವರು ಅದನ್ನು ಕರೆಯುವುದು 'ಮುನ್ನಿಪ್ಪಾಡಿ ಹೊಳೆ' ಎಂತಲೇ. ನರ್ಸಪ್ಪಯ್ಯನವರ ಆಸ್ತಿ ಇರುವುದು ಈ ಹೊಳೆಯ ಪಕ್ಕದಲ್ಲೆ.

ಹೊಳೆಯಿಂದ ಸುಮಾರು ಮೂರು ಫರ್ಲಾಂಗು ದೂರದಲ್ಲಿ ಹಳೆಯ ಕಾಲದ ಹಂಚು ಹಾಕಿದ ಮನೆ, ಮೂಡುಮನೆ. ಆದಿಯಿಂದಲೂ ಅದು ಹೊಳ್ಳರ ಮನೆ. ಅವರ ಮನೆಯ ನೂರಿನ್ನೂರು ಗಜ ದೂರದಲ್ಲಿ ಪ್ರಸ್ತುತ ನರ್ಸಪ್ಪಯ್ಯನವರ ಒಕ್ಕಲಾಗಿರುವ ಸುಬ್ರಾಯ ಕಾರಂತರ ಮನೆ. ತಮ್ಮ ಸ್ವಂತ ಜಮೀನಿಲ್ಲದ ನರ್ಸಪ್ಪಯ್ಯನವರ ತಂದೆ ತೀರಿಹೋದಂದಿನಿಂದಲೂ ಕಾರಂತರು ನರ್ಸಪ್ಪಯ್ಯನವರ ಭೂಮಿಯನ್ನು ಸಾಗುವಳಿ ಮಾಡುತ್ತಾ ಬಂದಿದ್ದಾರೆ.

ನರ್ಸಪ್ಪಯ್ಯನವರ ತಂದೆ ರಾಮಹೊಳ್ಳರು ಮದುವೆಯಾದುದೇ ಮೂವತ್ತೆಂಟರಲ್ಲಿ. ಅವರಿಗೆ ಅವರ ಧರ್ಮಪತ್ನಿಯಲ್ಲಿ ಹುಟ್ಟಿದ ಒಂದೇ ಮಗು ನರ್ಸಪ್ಪಯ್ಯನವರು. ತನ್ನ ಮಗ ವಿದ್ಯಾವಂತನಾಗಬೇಕು ಎಂಬ ದೃಷ್ಟಿಯಿಂದ ರಾಮ ಹೊಳ್ಳರು ಮಗನ ವಿದ್ಯಾಭ್ಯಾಸದ ಬಗ್ಗೆ ಶ್ರದ್ಧೆವಹಿಸಿದ್ದರು. ಹೈಸ್ಕೂಲ್ ವಿದ್ಯಾಭ್ಯಾಸವನ್ನು ಮಂಜೇಶ್ವರದಲ್ಲಿ. ಮುಂದಿನ ಕಾಲೇಜು ವಿದ್ಯಾಭ್ಯಾಸ ಮಂಗಳೂರಿನಲ್ಲಿ ಮುಗಿಸಿದ ಮೇಲೆ ವಕಾಲತ್ತಿಗಾಗಿ ಮದ್ರಾಸಿನ ತನಕ ಕಳುಹಿಸಿದ್ದರು ರಾಮ ಹೊಳ್ಳರು.

ನರ್ಸಪ್ಪಯ್ಯನವರು ಮದ್ರಾಸಿನಲ್ಲಿ ವಕಾಲತ್ತು ಮುಗಿಸಿದ ಮೇಲೆ ಸರಕಾರಿ ವಕೀಲನಾಗಿ ಮಂಗಳೂರಲ್ಲಿ ಒಂದೆರಡು ವರ್ಷ ಕೆಲಸ ಮಾಡಿದರು. ಅನಂತರ ಬೆಂಗಳೂರಿನತ್ತ ಅವರ ಕಣ್ಣು ಬಿದ್ದು ಮುಂದೆ ಕೆಲವು ವರ್ಷಗಳಲ್ಲೇ ಮೇಜಿಸ್ಟ್ರೇಟರ ಹುದ್ದೆಗೆ ಸೇರಿದರು.

ಮಗ ಮಂಗಳೂರಿನಲ್ಲಿ ವಕಾಲತ್ತು ನಡೆಸುವಾಗಲೇ ಆಕಸ್ಮಾತ್ ಒಂದು ದಿನ ರಾಮ ಹೊಳ್ಳರು ಹೃದಯಾಘಾತದಿಂದ ಮೃತರಾದರು. ನರ್ಸಪ್ಪಯ್ಯ ತಂದೆಯ ಎಲ್ಲಾ ಪಿತೃಕಾರ್ಯಗಳನ್ನು ಮುಗಿಸಿ, ಜಮೀನನ್ನು ಸುಬ್ರಾಯ ಕಾರಂತರ ವಶಕ್ಕೊಪ್ಪಿಸಿ ವರ್ಷಕ್ಕೆ ಎಪ್ಪತ್ತೈದು ಮುಡಿ ಅಕ್ಕಿ ಗೇಣಿ ನಿಗದಿ ಮಾಡಿ ತಾಯಿಯನ್ನು ಕರೆಕೊಂಡು ಮಂಗಳೂರಿಗೆ ಬಂದವರು ಮುಂದೆ ಬೆಂಗಳೂರಿನವರಾದರು.

ತಾಯಿಯ ಅಪೇಕ್ಷೆಯ ಮೇರೆಗೆ ನರ್ಸಪ್ಪಯ್ಯನವರಿಗೆ ಮದುವೆಯೂ ನಿಶ್ಚಯವಾಯಿತು. ಬೆಂಗಳೂರಿನಲ್ಲೇ ಬೆಳೆದಿದ್ದ – ಓದಿದ್ದ ಸರೋಜಮ್ಮ ಶುಭ ಮುಹೂರ್ತದಲ್ಲಿ ನರ್ಸಪ್ಪಯ್ಯನವರ ಮನೆ ಮನಗಳನ್ನು ತುಂಬಿದ್ದಳು.

ಮದುವೆಯಾದ ಮೇಲೆ ಅವರಿಗೆ ಒಂದೆರಡು ಕಡೆಗಳಿಗೆ ವರ್ಗಾವಣೆಯಾಗಿತ್ತು. ದಕ್ಷ ಪ್ರಾಮಾಣಿಕರಾಗಿದ್ದ ಅವರು ಕಡೆಗೂ ಬೆಂಗಳೂರಿನಲ್ಲೇ ಈಚಿನ ನಾಲ್ಕು ವರ್ಷಗಳಿಂದ ಮೇಜಿಸ್ಟ್ರೇಟರಾಗಿಯೇ ಉಳಿದಿದ್ದರು.

ಸರೋಜಮ್ಮ ಸದಾನಂದನನ್ನು ಪಡೆದ ಮರುವರ್ಷ ನರ್ಸಪ್ಪಯ್ಯನವರು ತಾಯಿಯನ್ನು ಕಳೆದುಕೊಂಡರು. ತಾಯಿಯಿಲ್ಲದ ಆ ಮನೆಯಲ್ಲಿ ಅವರ ಬೇಸರಕ್ಕೆ ಸದಾನಂದ ಅವರು ವಂಶದ ನಲ್ಗುಡಿಯಾಗಿ ಬೆಳೆಯತೊಡಗಿದ.

ಸದಾನಂದನಿಗೆ ಜನ್ಮವಿತ್ತು ಮೂರು ವರ್ಷದ ಮೇಲೆ ರಾಘವನಿಗೆ ತಾಯಿಯಾದಳು ಸರೋಜಮ್ಮ. (ಆಮೇಲೆ ಅವರು ಹಡೆಯಲೇ ಇಲ್ಲ) ರಾಘವ ಹುಟ್ಟುವಾಗಲೇ ಬೆಳಬೆಳನಾಗಿ ದುಂಡಗಾಗಿದ್ದ. ಕಿರಿಯ ಮಗ ಮತ್ತು ಅವನ ಸರಸ ಆಟಪಾಠಗಳಿಂದ ಸದಾನಂದನಿಗಿಂತಲೂ ರಾಘವನೇ ತಂದೆತಾಯಂದಿರ ಪ್ರೀತಿಗೆ ಅತಿ ಪಾತ್ರನಾಗಿದ್ದ.

ಮುಂದೆ ವಿದ್ಯಾಭ್ಯಾಸದಲ್ಲೂ ಹಾಗೇಯೆ. ಸದಾನಂದ ಪುಸ್ತಕದ ಕೀಟವಾಗಿದ್ದ. ಅವನಾಯಿತು, ಅವನ ಓದಾಯಿತು. ಮಾತುಕತೆಯೂ ಕಡಿಮೆ. ರಾಘವನಾದರೋ ಇದಕ್ಕೆ ವ್ಯತಿರಿಕ್ತವಾದ ವ್ಯಕ್ತಿತ್ವವುಳ್ಳವನು. ಅಣ್ಣನಂತೆ ಓದಿನಲ್ಲಿ ಚುರುಕಾದರೂ ಕೂಡ ಆಟಗಳಲ್ಲೂ ಅತಿ ಭಾರಿ ಮುನ್ನಡೆದಿದ್ದ. ಎಷ್ಟು ಹೊತ್ತಿಗೂ ಅವನ ನಗುಮಾತುಗಳಿಂದ ಮನೆಯನ್ನು ನಂದನವಾಗಿರಿಸಿದ್ದ. ಈ ಗುಣಗಳಿಂದ ಬೆಳೆದ ಮಕ್ಕಳಿಬ್ಬರೂ ದೊಡ್ಡವರಾದ ಮೇಲೂ ರಾಘವನ ಮೇಲೆಯೇ ನರ್ಸಪ್ಪಯ್ಯ ದಂಪತಿಗಳಿಗೆ ಅತಿ ಪ್ರೀತಿ ನೆಲೆಸಿತ್ತು.

ಇಂಟರ್‌ಮೀಡಿಯೇಟ್ ಮುಗಿಸಿದ ಮೇಲೆ ಸದಾನಂದನ ಅಪೇಕ್ಷೆಯ ಮೇರೆಗೆ ನರ್ಸಪ್ಪಯ್ಯನವರು ಅವನನ್ನು ಮದ್ರಾಸಿನ ಮೆಡಿಕಲ್ ಕಾಲೇಜಿಗೆ ಸೇರಿಸಿದ್ದರು. ಐದು ವರ್ಷ ಕಲಿತು ಸದಾನಂದ ಎಂ. ಬಿ. ಬಿ. ಯಸ್. ಪಾಸು ಮಾಡಿಕೊಂಡು ಬಂದಿದ್ದ. ನರ್ಸಪ್ಪಯ್ಯನವರು ಮಗನಿಗೆ ಬೆಂಗಳೂರಲ್ಲೇ ಪ್ರೈವೇಟ್ ಪ್ರಾಕ್ಟೀಸ್ ಮಾಡುವಂತೆ ಹೇಳಿದ್ದರು. ಆದರೆ ಸದಾನಂದ ಇದಕ್ಕೆ ಸಮ್ಮತಿಸಲಿಲ್ಲ. ಅವನು ಸರಕಾರಿ ಡಾಕ್ಟರನಾಗಿ ಸೇರಿ ಬೇರೆ ಬೇರೆ ಕಡೆ ದುಡಿದು ಕಡೆಗೆ ಮೈಸೂರಿಗೆ ವರ್ಗಾವಣೆ ಹೊಂದಿ ಅಲ್ಲಿ ನೆಲೆಸಿದ್ದ.

ರಾಘವನಿಗೆ ಅಪ್ಪನ ಕೆಲಸದಲ್ಲೇ ಮನಸ್ಸಿದ್ದರೂ ನರ್ಸಪ್ಪಯ್ಯನವರು ಅವನ್ನೇ ಬಯಸಿದ್ದರೂ – ಸರೋ

ಜಮ್ಮನಿಗೆ ತನ್ನ ಪ್ರೀತಿಯ ಮಗ ಇಂಜನಿಯರಾಗ ಬೇಕೆಂದು ಮನಸ್ಸಿತ್ತು. ತಾಯಿಯ ಅಪೇಕ್ಷೆಯಂತೆ ರಾಘವ ಬೆಂಗಳೂರಿನಲ್ಲಿದ್ದುಕೊಂಡೇ ಇಂಜಿನಿಯರಿಂಗ್ ಪಾಸು ಮಾಡಿಕೊಂಡ.

ಹುಟ್ಟಿದಂದಿನಿಂದ ಮನೆ ಬಿಟ್ಟಿರದ ರಾಘವ ಕಲ್ಕತ್ತೆಯ ಫ್ಯಾಕ್ಟರಿಯಲ್ಲಿ ನೌಕರನಾಗಿ ಹೋಗುತ್ತಾನೆಂದಾಗ ಸರೋಜಮ್ಮನಿಗೆ ಅತೀವ ದುಃಖವಾಯ್ತು. ಒಬ್ಬ ಮಗನೂ ತನ್ನ ಕಣ್ಣೆದುರಿಗೆ ಇಲ್ಲವಲ್ಲಾ ಎಂಬ ಕೊರಗು. ಆದರೂ ಸಣ್ಣರೀತಿಯಲ್ಲಿ ಕಣ್ಣಂಚಿನಲ್ಲಿ ಉಕ್ಕುತ್ತಿದ್ದ ದುಃಖವನ್ನು ತೋರ್ಪಡಿಸದೆ ಆಶೀರ್ವದಿಸಿಯೇ ರಾಘವನನ್ನು ಕಳುಹಿಸಿದ್ದರು. ಸರೋಜಮ್ಮ, ಅವನ ಆರೋಗ್ಯದ ಬಗ್ಗೆ ತುಂಬಾ ಕಳಕಳಿ ವಹಿಸಿ ಉಪದೇಶ ಮಾಡಿ.

ಮಕ್ಕಳಿಬ್ಬರೂ ವಿದ್ಯಾವಂತರಾಗಿ ಅವರವರ ಇಷ್ಟದಂತೆ ಅವರವರಿಗೆ ನೌಕರಿ ದೊರೆತಿದ್ದನ್ನು ನೋಡಿ ನರ್ಸಪ್ಪಯ್ಯನವರು ನೆಮ್ಮದಿಯ ಬಾಳನ್ನು ನಡೆಸುತ್ತಿದ್ದರು.

× × × ×

ಹಾಸಿಗೆ ಹಾಸಿ ಮಲಗಿಕೊಂಡ ಮೇಲೂ ಸದಾನಂದನ ತಲೆಯಲ್ಲಿ ಸುಳಿಯುತ್ತಿದ್ದುದು ಒಂದೇ. ಪಿತ್ರಾರ್ಜಿತ ಆಸ್ತಿಯನ್ನು ಮಾರುವುದೆಂದರೆ ಏನು? ಅಪ್ಪನಿಗೆ ಯಾಕೆ ಒಂದಿಷ್ಟೂ ಹುಟ್ಟೂರಿನ ಬಗ್ಗೆ ವ್ಯಾಮೋಹ ಇಲ್ಲ?

ಸದಾನಂದ ಇಂಟರ್‌ಮಿಡಿಯೇಟಿನಲ್ಲಿ ಓದುತ್ತಿದ್ದಾಗ ಒಮ್ಮೆ ಕೋಳ್ಯೂರಿಗೆ ಹೋಗಿದ್ದ. ಬೆಂಗಳೂರಿನಿಂದ ಮಂಗಳೂರಿಗೆ – ಅಲ್ಲಿಂದ ರೈಲು ಹತ್ತಿ ಮಂಜೇಶ್ವರದಲ್ಲಿಳಿದು, ಕಾರು ಮಾಡಿಕೊಂಡು ಮೂಡುಮನೆಗೆ ಸದಾನಂದ, ತಂದೆಯೊಂದಿಗೆ ಹೋಗಿದ್ದ. ಸಂಜೆಯ ಹೊಂಬಿಸಿಲು ಗುಡ್ಡದ ಮೇಲೆ ಬಿದ್ದು ಅಲ್ಲಿ ಕಾರು ಹೋಗುತ್ತಿದ್ದಾಗ – ನದಿಯ ಇಕ್ಕೆಲಗಳಲ್ಲಿ ಹರಡಿ ನಿಂತ ಹಸಿರು ಪೈರು. ಅಲ್ಲಲ್ಲಿ ಎದ್ದು ನಿಂತ ಕಾಡುಗುಡ್ಡೆ; ಕಡೆಗೂ ತಮ್ಮದೆನಿಸಿದ್ದ ಹಳೇ ಕಾಲದ ಮಲೆ ಮನೆಯ ಎದುರು ಉದ್ದಕ್ಕೂ ಕಾಣುವ ಹಸಿರು ಬಯಲು ಎಲ್ಲಾ ನೋಡಿ ಸದಾನಂದನಿಗೆ ಬಹಳ ಹಿಡಿಸಿತ್ತು. ಪೇಟೆಯ ಯಾಂತ್ರಿಕ ಜೀವನದಿಂದ ಈ ಹಳ್ಳಿಯಲ್ಲಿ ಪ್ರಶಾಂತವಾಗಿರುವುದು ಎಷ್ಟೋ ವಾಸಿ ಎನಿಸಿತು, ಅವನಿಗೆ. ಆದರೆ ತಾನೊಬ್ಬನೇ ಇರಲಾಗುತ್ತದೆಯೇ? ಅಥವಾ ಕೃಷಿಯ ಬಗ್ಗೆ ತನಗೇನು ಗೊತ್ತು? ಇಲ್ಲಿರಲು ತಂದೆ ಒಪ್ಪಿಗೆ ನೀಡಬೇಕಲ್ಲ? ಎಂದು ಹಲವಾರು ಪ್ರಶ್ನೆ ಅವನಿಗೆ ಅವನೇ ಅಂದು ಹಾಕಿಕೊಂಡಿದ್ದ; ತರ್ಕಿಸಿದ್ದ. ಆದರೆ ತನ್ನ ಊರಿನ ಆಸ್ತಿಯ ವ್ಯಾಮೋಹ ಮಾತ್ರ ಆತನನ್ನು ಬಿಡಲಿಲ್ಲ. ಮುಂದೆ ಮದ್ರಾಸಿನಲ್ಲಿ ಕಲಿಯುತ್ತಿದ್ದಾಗ – ಬೀಚಿಗೆ ಹೋದಾಗ, ಅವನಿಗೆ ಕೋಳ್ಯೂರು ನೆನಪಾಗುತ್ತಿತ್ತು. ಬೀಚಿನಲ್ಲಿ ಕಿಕ್ಕಿರಿದ ಜನಸಂದಣಿ. ಹತ್ತಿರದಲ್ಲೇ ಕಡಲ ರುದ್ರಮನೋಹರ ನರ್ತನ. ಆದರೆ ಕೋಳ್ಯೂರಿನಲ್ಲೋ – ಮನೆಯ ಹಿಂಬದಿಯ ಗುಡ್ಡೆ ಏರಿ ಸಂಜೆಯ ಹೊತ್ತು ಕುಳಿತರೆ ಸೂರ್ಯನ ಕಿರಣಕ್ಕೆ ಪಳಪಳನೆ ಹೊಳೆಯುವ ಸಮುದ್ರ. ಅದರಲ್ಲಿ ಕಾಣುವ ಹಾಯಿ ದೋಣಿಗಳು. ಸಮುದ್ರದ ಈಚೆಗೆ ಕಾಣುವ ಗಾಳಿ ಮರಗಳ ಸಾಲುಸಾಲು. ಅವುಗಳ ನಡುವೆ ಹಾದು ಹೋಗುವ ರೈಲು – ಅದರ ಹೊಗೆಸುಳ್ಳಿ! ಆಕಾಶದಲ್ಲಿ ಅಲ್ಲಲ್ಲಿ ಬಿಳಿ ಮೋಡಗಳು. ಸಂಜೆಗೆ ಗೂಡಿಗೆ ಹೊರಟ ಹಕ್ಕಿಗಳ ಹಾಡು... ಇದೆಲ್ಲ ನೆನಸಿಕೊಳ್ಳುತ್ತಿದ್ದಂತೆ ಅವನಿಗೆ ತಾನು ಕೋಳ್ಯೂರಿನವನು ಎನ್ನುವ ಹೆಮ್ಮೆ ಎನಿಸುತ್ತಿತ್ತು.

ಊರಿನ ಬಗೆಗೆ ಇರುವ ಈ ಪ್ರೀತಿ ಅಭಿಮಾನದಿಂದಲೇ ಕೋರ್ಸು ಮುಗಿದ ಮೇಲೆ ಆತ ಒಬ್ಬನೇ ಒಮ್ಮೆ ಕೋಳ್ಯೂರಿಗೆ ಹೋಗಿದ್ದ. "ಇವನಿಗೆಂತಾ ಹುಚ್ಚಪ್ಪಾ–ಆ ಹಳ್ಳಿಯಲ್ಲಿ ಏನಿದೆ ಅಂತ ಅಲ್ಲಿಗೆ ಹೋಗ್ತಾನೊ? ಒಂದು ಸಿನೇಮಾ ನೋಡಬೇಕಾದರೆ, ಬೀಚಿಗೆ ಹೋಗಬೇಕಾದರೆ, ಯಾಕೆ, ಒಳ್ಳೆಯ ಬಟ್ಟೆ ತೆಗೆಯಬೇಕಾದರೆ ಮಂಗಳೂರಿಗೆ ಬರಬೇಕು. ಮತ್ತೇನಿದೆ ಅಲ್ಲಿ ಬರೇ ಮಣ್ಣು" ಎಂದು ಸರೋಜಮ್ಮ ಸದಾನಂದ ಕೋಳ್ಯೂರಿಗೆ ಹೊರಟು ನಿಂತಾಗ ಆಕ್ಷೇಪಿಸಿದ್ದಳು. ಆದರೆ ನರ್ಸಪ್ಪಯ್ಯನವರು ಏನೂ ಹೇಳದೆ "ಹೋಗುವುದಾದರೆ ಹೋಗಿಬರಲಿ. ನಿನಗೇನು ಅದರಿಂದ ತೊಂದರೆ" ಎಂದು ಮಗನ ಪಕ್ಷವನ್ನೇ ಹಿಡಿದು ಮಾತನಾಡಿದ್ದರು.

ಎಂ.ಬಿ.ಬಿ.ಎಸ್. ಮುಗಿಸಿ ಕೋಳ್ಯೂರಿಗೆ ಬಂದಾಗ ಸದಾನಂದನ ಮನದ ಮೇಲೆ ಕೋಳ್ಯೂರು ಮತ್ತೂ ಪ್ರಭಾವ ಬೀರಿತ್ತು. ತನ್ನಲ್ಲಿ ಸುಬ್ರಾಯ ಕಾರಂತರು ನಡೆಕೊಂಡ ರೀತಿ, ಹಳ್ಳಿಯವರು ತನ್ನ ಮೇಲೆ ತೋರಿಸುವ ಆದರ, ಅಭಿಮಾನ ಇವು ಅವನ ಮನಸ್ಸಿನ ಮೇಲೆ ಅಚ್ಚಳಿಯದೆ ನಿಂತಿದ್ದವು. ತಾನೇಕೆ ಇಲ್ಲೇ ಒಂದು ನರ್ಸಿಂಗ್ ಹೋಂ ತೆರೆಯಬಾರದು? ಎನ್ನುವಷ್ಟರ ತನಕದ ಯೋಚನೆ ಅವನ ತಲೆಗೆ ಹೊಕ್ಕಿತ್ತು. ಆದರೆ ಯಾವುದಕ್ಕೂ ದುಡಕಬಾರದು, ಎಂಬುದರಿಂದ ಅಂದಿಗೇ ಆ ಯೋಚನೆಯನ್ನು ಬಿಟ್ಟಿದ್ದ ಸದಾನಂದ.

ಹಿಂದಿನ ನೆನಪುಗಳು, ಕೋಳ್ಯೂರಿನ ಸೌಂದರ್ಯ ಆ ಸಮುದ್ರ ಗುಡ್ಡ ಹೊಳೆ, ಬಯಲು ಒಂದೊಂದೇ ಅವನ ಕಣ್ಣಮುಂದೆ ಹಾದು ಹೋದವು. ಮಲಗಿದಲ್ಲಿಗೆ ಸದಾನಂದ ನೆನಪಿನ ಮೆಲುಕು ಹಾಕಿ ಕೋಳ್ಯೂರನ್ನು ಕಣ್ಣಾರೆ ನೋಡಿದ. ಹಾಗೆ ನೋಡಿದಂತೆಯೇ ಖಂಡಿತವಾಗಿಯೂ ತಮ್ಮ ಜಮೀನನ್ನು ತಾನು ಮಾರಲು ಬಿಡಲೇ ಬಾರದು. ಒಂದು ವೇಳೆ ಅಪ್ಪ ಮಾರುವುದನ್ನು ನಿಶ್ಚಯ ಮಾಡಿದರೆ ತಾನು ಪ್ರತಿಭಟಿಸಿ ಕೋಳ್ಯೂರಿನಲ್ಲೇ ಹೋಗಿ ನೆಲೆಸುವ ಆಲೋಚನೆ ಮಾಡಬೇಕು ಎಂದುಕೊಂಡ ತನ್ನಲ್ಲೇ!

ಹಾಗಾದರೆ ತಾನು ಪ್ರೀತಿಸಿದ ವಸಂತಿಯ ಗತಿ? ಅವಳು ಹಳ್ಳಿಗೆ ಬರಲು ಒಪ್ಪಿಯಾಳೇ ಅಥವಾ ತಾನು ಅವಳನ್ನು ಹೇಗೆ ಅಲ್ಲಿಗೆ ಕರೆದೊಯ್ಯಲಿ? ಯಾವ ... ತ್ತಿಯನ್ನು ನಂಬಿ?

೨

ಮರುದಿನ ಹೊರಡುವ ರೈಲಿಗೆ ರಾಘವ ಕಲ್ಕತ್ತೆಗೆ ಹೊರಡುವದು ನಿಶ್ಚಯವಾಯ್ತು. ರಾಘವ ಬಂದು ಈಗಲೇ ಎಂಟು ದಿವಸವಾದುದರಿಂದ, ಅವನಿಗೆ ಹೋಗದೆ ನಿರ್ವಾಹವಿರಲಿಲ್ಲ. ಬೆಳಗ್ಗೆ ಕಾಫಿ ತೀರಿಸಿ, ಮುಖಕ್ಷೌರಮಾಡಿ ಸ್ನಾನ ಮುಗಿಸಿ ಕೋರ್ಟಿಗೆ ಹೊರಡುವಾಗ ನರ್ಸಪ್ಪಯ್ಯನವರು ಹೇಳಿದ್ದರು, ಸಂಜೆ ತಾನು ಕೋರ್ಟಿನಿಂದ ಬಂದ ಮೇಲೆಯೇ ರಾಘವ ಹೊರಟರೆ ಸಾಕು.

ನರ್ಸಪ್ಪಯ್ಯನವರು ಕೋರ್ಟಿಗೆ ಹೋದ ಮೇಲೆ ಅಣ್ಣ ತಮ್ಮ ಇಬ್ಬರೂ ಪೇಟೆಗೆ ಹೊರಟರು. ಒಂದೂವರೆ ವರ್ಷದಿಂದ ಅವರಿಬ್ಬರ ಭೆಟ್ಟಿಯಾಗಿರಲಿಲ್ಲ. ಉಳಿದ ಸ್ವಲ್ಪ ಸಮಯದಲ್ಲೇ ಎಲ್ಲಾ ವಿಚಾರಗಳನ್ನು ಚರ್ಚಿಸಿ, ವಾದಿಸಿ ಮಾರ್ಗದುದ್ದಕ್ಕೂ ಸಾಗಿದಾಗ– ಹೊತ್ತಾದುದೇ ಅವರಿಗೆ ತಿಳಿಯಲಿಲ್ಲ. ಹನ್ನೆರಡು ಗಂಟೆಯಾಯಿತು ಎನ್ನುವಾಗ ಇಬ್ಬರೂ ಮನೆಯತ್ತ ಹೊರಟರು.

ರಾಘವ ಹೊರಡುವುದರಿಂದ – ಸದಾನಂದ ಬಂದುದರಿಂದ ಆ ದಿನದ ಮಧ್ಯಾಹ್ನಕ್ಕೆ ಸರೋಜಮ್ಮ ಸೇವಿಗೆ ಪಾಯಸ, ಬಾಳೆಹಣ್ಣಿನ ಹಲ್ವ ಮಾಡಿದ್ದರು. ರಾಘವನಿಗೆ ಹಲ್ವ ಇಷ್ಟವಾದರೆ, ಸದಾನಂದನಿಗೆ ಪಾಯಸದ ಊಟ ಅಂದರೆ ಮೆಚ್ಚುಗೆ.

ಊಟವಾದ ಮೇಲೆ ತಾಯಿ ಮಗನನ್ನು ಹೊರ ಡಿಸುವ ಸಿದ್ಧತೆಯಲ್ಲಿ ಅಣಿಯಾದರು. ರಾಘವ ನಾಲ್ಕು ದಿನ ಬಂದಿದ್ದರೆ ಸಾಕು. ಮತ್ತೆ ಕಳುಹಿಸಲು ಸರೋಜಮ್ಮನಿಗೆ ಇಷ್ಟವಿಲ್ಲ. ಈ ಸಲ ಬಂದು ಎಂಟು ದಿವಸದಲ್ಲಿ ಮಗನಿಗೆ ತಾಯಿಯ ಆದರೋಪಚಾರ ಭಾರಿ ನಡೆದಿತ್ತು. ಪಾಪ, ಕಲ್ಕತ್ತೆಯಲ್ಲಿ ಒಬ್ಬನೇ ಬೇಯಿಸಿ ತಿನ್ನುತ್ತಾನಲ್ಲ! ಆಫೀಸಿನ ಕೆಲಸ ಬೇರೆ. ಜೊತೆಯಲ್ಲಿ ಅಡಿಗೆಯ ನೆವದಲ್ಲಿ ಕೈ ಮೈ ಸುಡುವ ತಾಪತ್ರಯ ಬೇರೆ. ಇದಕ್ಕೆಲ್ಲ ಪರಿಹಾರವೆಂದರೆ ಇನ್ನೊಂದು ಸಲ ರಾಘವ ಬರುವುದರೊಳಗೆ ಅವನಿಗೆ ಹೆಣ್ಣು ನಿಶ್ಚಯ ಮಾಡಬೇಕು. ಆಮೇಲೆ ತನಗೆ ಅವನ ಬಗ್ಗೆ ಯಾವ ಚಿಂತೆಯೂ ಇಲ್ಲ. ಆದರೆ ಅವನಿಂದ ಮೊದಲು ಆದಷ್ಟು ಬೇಗ ಸದಾನಂದನಿಗೆ ಮದುವೆಯಾಗುವುದು ಅವರಿಗೆ ಬೇಕಿತ್ತು. ಆದಕ್ಕೆ ಅವರು ಗಂಡನಿಗೆ ಹೇಳಿ ಸದಾನಂದನನ್ನು ತುರ್ತಾಗಿ ಕರೆಸಿದ್ದರು. ಒಂದೇ ಕಲ್ಲಿನಿಂದ ಎರಡು ಹಣ್ಣು ಉದುರಿಸುವಂತೆ – ಸದಾನಂದ ಬಂದಿದ್ದಾಗಲೇ ಆಸ್ತಿ ಮಾರಾಟದ ವಿಚಾರ ಅವನ ಮದುವೆಯ ಬಗ್ಗೆ ಯಾವುದನ್ನೂ ಶೀಘ್ರ ನಿರ್ಧಾರಕ್ಕೆ ಬರಬೇಕೆಂದು ಗಂಡ ಹೆಂಡತಿ ಹಂಚಿಕೆ ಹಾಕಿದ್ದರು.

ಕೋರ್ಟಿನಿಂದ ಬಂದ ನರ್ಸಪ್ಪಯ್ಯನವರು ರಾಘವನಿಗೆ ಹೇಳಿದರು. "ಆರೂವರೆಗೆ ಕಾರು ಬರುವಂತೆ ಹೇಳಿದ್ದೇನೆ. ಒಂದಿಷ್ಟು ಊಟ ಮಾಡಿಯೇ ಹೊರಡು".

ರಾಘವ ಊಟ ಮಾಡುತ್ತಿದ್ದಂತೆ ಅಂಗಳಕ್ಕೆ ಕಾರು ಬಂತು. ಅವಸರವಸರವಾಗಿ ಡ್ರೆಸ್ಸು ಮಾಡಿಕೊಂಡ ರಾಘವ ತನ್ನೆಲ್ಲಾ ಸಾಮಾನುಗಳೊಂದಿಗೆ ಹೊರಟು ನಿಂತ. ಸದಾನಂದ ಅವನನ್ನು ಕಳುಹಿಸಿ ಕೊಡಲು ರೈಲ್ವೇಸ್ಟೇಶನ್ನಿನ ತನಕ ಬರುತ್ತೇನೆಂದು ಕಾರು ಹತ್ತಿದ.

ತಂದೆ ತಾಯಿ ಇಬ್ಬರೂ ಕಾರು ಸ್ಟಾರ್ಟ್ ಆಗುವವಷ್ಟರ ತನಕ ಅಂಗಳದಲ್ಲೇ ನಿಂತಿದ್ದು ರಾಘವನಿಗೆ 'ಬೈಬೈ'ಹೇಳಿದರು. ಕಾರು ಗೇಟು ದಾಟಿ ಹೋಗುವಷ್ಟರ ತನಕ ಅದನ್ನೇ ನೋಡುತ್ತಿದ್ದ ಸರೋಜಮ್ಮ – ಒಳಗೆ ಬಂದವರೇ ಗಂಡನಿಗೆ ಹೇಳಿದರು. "ಪಾಪ, ತುಂಬ ಬಡಕಲಾಗಿದ್ದಾನೆ ರಾಘವ! ಬರುವ ವರ್ಷ ಹೇಗಾದರೂ ಮದುವೆ ಮಾಡಬೇಕು ಅವನಿಗೆ. ಇನ್ನು ಸದಾನಂದನ ಮದುವೆ ವಿಷಯ ಮರೀಬೇಡ್ರಿ. ರಾತ್ರಿ ಊಟದ ಮೇಲೆ ಎಲ್ಲಾ ಹೇಳಿ ಅಂದ್ರೆ".

ರಾತ್ರಿ ಊಟವಾದ ಮೇಲೆ ಚಾವಡಿಯಲ್ಲಿ ಸಿಗರೇಟು ಸೇದುತ್ತಾ ಕುಳಿತಿದ್ದ ನರ್ಸಪ್ಪಯ್ಯನವರು ಪತ್ರಿಕೆ ನೋಡುತ್ತಿದ್ದ ಸದಾನಂದನಿಗೆ ಹೇಳಿದರು.

"ರಾಘವ ಮೊದಲಿನಿಂದ ಸರಿ ಅರ್ಧ ಇಳಿದಿದ್ದಾನೆ. ಈಗೇಕೋ ಅವನಿಗೆ ಹೋಟೇಲಿನ ಊಟ ಸೇರೋದಿಲ್ಲವಂತೆ! ಆದಕ್ಕೇ ಸೆಲ್ಫ್ ಕುಕ್ಕಿಂಗ್ ಮಾಡ್ತಿದ್ದಾನಂತೆ. ಅದೂ ಉದಾಸೀನವಾದರೆ ಬರೇ ಕಾಫಿ ಮಾತ್ರ ರಾತ್ರೆಗೆ. ಯಾಕೋ ಅವನು ಒಂದಿಷ್ಟು ಆರೋಗ್ಯದ ಬಗ್ಗೆ ಕಾಳಜಿಯೇ ವಹಿಸೋದಿಲ್ಲ.

ಸದಾನಂದ ಹೂಂಗುಟ್ಟಿದ. ಅವನೂ ಪತ್ರಿಕೆ ಓದುವುದರಲ್ಲೇ ಮಗ್ನನಾಗಿದ್ದ. ಅಷ್ಟರಲ್ಲಿ ಒಳಗಿನಿಂದ ಹಾಲು ತಂದುಕೊಟ್ಟು ಸರೋಜಮ್ಮ ಹೇಳಿದರು–

"ಈ ವರ್ಷ ನಿನ್ನ ಅಪ್ಪ ನಿನಗೆ ಮದುವೆ ಮಾಡಬೇಕೂಂತ ಮನಸ್ಸು ಮಾಡಿದ್ದಾರೆ ಸದಾನಂದ. ಒಳ್ಳೇ ಕಡೆಯ ಒಂದು ಹುಡುಗಿಯೂ ಅವರ ಕಣ್ಣಿಗೆ ಬಿದ್ದಿದೆ"

"ಮದುವೆ?"

ಹಾಲು ಕುಡಿಯುತ್ತಿದ್ದ ಸದಾನಂದ ಆಕಸ್ಮಾತ್ ತನ್ನ ಮುಂದೆ ಬಂದು ನಿಂತ ಹೊಸ ಪ್ರಶ್ನೆ ನೋಡಿ ದಂಗಾದ.

"ಹ್ಞೂ, ಮದುವೇನೇ? ಅದೇನು ಹಾಗೆ ನಿನಗೆ?"

"ಸದ್ಯ ನಾನೇನೂ ಅದರ ಬಗ್ಗೆ ಯೋಚಿಸಿಲ್ಲಮ್ಮ?"

"ಯೋಚನೆ ಏನುಂಟೋ ಸದಾನಂದ. ಹುಡುಗಿ ನೋಡಿದರಾಯಿತು. ನೋಡಿ ಒಪ್ಪಿದರಾಯಿತು ಅಷ್ಟೆ!" ನರ್ಸಪ್ಪಯ್ಯನವರು ಮುಖ್ಯ ವಿಚಾರಕ್ಕೆ ಬಂದರು.

"ನಿಮಗೇನೊ ಅದು ಅಷ್ಟು ಸುಲಭ ಕಾಣಬಹುದು. ಆದರೆ ನನ್ನ ದೃಷ್ಟಿಯಲ್ಲಿ ಮದುವೆಯನ್ನು ಅಷ್ಟು ಸುಲಭವಾಗಿ ತೆಗೆದುಕೊಳ್ಳಲಾಗೋದಿಲ್ಲ!"

## ಹೊಸ ಸುದ್ದಿ



ರಾಜಕಾರಣಿಗೆ ಬೇಕು ಹೊಸ ಸುದ್ದಿ
ಇಲ್ಲದಿದ್ದರೆ ಬರುವದೆ ಇಲ್ಲ ನಿದ್ದಿ
ರಾತ್ರಿ ಕನಸಿನಲಿ ಬಂದಿದ್ದ ಗಾಂಧಿ
ಎಂದು ಹೇಳಿ ಕೊಟ್ಟ ಪತ್ರಿಕೆಗೆ ವರದಿ.

ಎಂ. ಗೋವಿಂದ.

"ಹಾಗಾದರೆ ಮತ್ತೇನಪ್ಪಾ ನಿನ್ನ ಆಲೋಚನೆ? ಮದುವೇನೇ ಬೇಡ ಅಂತೀಯಾ?"

"ಹಾಗಲ್ಲ, ಸದ್ಯ ಅದರ ಯೋಚನೆ ಮಾಡಲಿಲ್ಲ. ಮಾಡಬೇಕು ಅಂತ ಅಷ್ಟೆ".

"ಯೋಚನೆ – ಗೀಚನೆ ಏನೂ ಬೇಡ. ಸದ್ಯ ನಿನಗೆ ಇಷ್ಟ ಉಂಟೋ ಹೇಳು. ನಮ್ಮ ವಕೀಲ ವಾಸುದೇವ ರಾಯರ ಪರಿಚಯ ನಿನಗೆ ಉಂಟೋ ಇಲ್ಲವೋ? ಮಲ್ಲೇಶ್ವರ ಕ್ರಾಸ್ ರೋಡಿನಲ್ಲಿದ್ದಾರಲ್ಲ, ಅವರೇ. ಅವರ [illegible] ಶ್ರೀಮತಿ ಈ ವರ್ಷ ಬಿ.ಎ. ಪಾಸು ಮಾಡಿ [illegible]. ನೋಡಲು ಹಾಗೆಯೇ ಸುಲಕ್ಷಣವಾಗಿದ್ದಾಳೆ. ದೇಶಿ ಪತ್ರಿಕೆಯಲ್ಲಿ ಕತೆ, ಕವನ ಅಂತ ಬರೀತಾ ಇರ್ತಾಳೆ ಮೊನ್ನೆ ಯಾವುದೋ ವಿಷಯ ಮಾತನಾಡುವಾಗ ವಾಸುದೇವರಾಯರೇ ನಿನ್ನ ವಿಚಾರ ಎಲ್ಲಾ ಕೇಳಿದ್ರು. ಆಗಲೇ ನನ್ನ ಮನಸ್ಸಿಗೆ ಹೊಳೆಯಿತು. ಅವರ ಉದ್ದೇಶ ಇದೇ ಅಂತ. ಏನು ಹೇಳ್ತೀಯಾ ಸದಾನಂದ?"

ಸದಾನಂದ ಮಾತನಾಡಲಿಲ್ಲ. ಮೌನವಾಗಿಯೇ ಇದ್ದ. (ಅವನ ಮನಸ್ಸಿನಲ್ಲಿ ಆಗ ವಸಂತಿಯ ಪ್ರಶ್ನೆ ಬಂತು) ಅದನ್ನು ನೋಡಿದ ಸರೋಜಮ್ಮ ಗಂಡನಿಗೆ ಹೇಳಿದರು. "ಸದಾನಂದ ಮತ್ತೇನು ಹೇಳ್ತಾನೆ? ಹುಡುಗಿಯನ್ನು ನೋಡಿದರೆ ಹ್ಞೂ ಎನ್ನುತ್ತಾನೆ",

"ಹ್ಞೂ, ಅನ್ನೋದು ಅಷ್ಟು ಸುಲಭವಲ್ಲಮ್ಮ",

"ಮತ್ತೇನುಂಟೋ ಅದರಲ್ಲಿ? ವಾಸುದೇವ ರಾಯ ಅವಳ ದೊಡ್ಡಮಗಳಿಗೆ ಹತ್ತು ಸಾವಿರ ರೂಪಾಯಿ ಹತ್ತು ಪವನು ಚಿನ್ನ ಎಲ್ಲ ಕೊಟ್ಟು ಭಾರಿ ವಿಜೃಂಭಣೆಯಿಂದ ಮದುವೆ ಮಾಡಿದ್ರು. ನೀನಾಗ ಮದ್ರಾಸಿನಲ್ಲಿದ್ದೆ. ಅಳಿಯ ಎಂತಹ ಅನ್ನುತ್ತೀ? ಹೈಸ್ಕೂಲು ಹೆಡ್ಮಾಸ್ಟರ್. ಈಗ ನೀನು ಎಂ. ಬಿ. ಬಿ.ಎಸ್. ಡಾಕ್ಟ್ರು ಎಂದಾಗ ಕಾಲು ಹಿಡಿದು ಹುಡುಗಿ ಕೊಡ್ತಾರೆ. ಇನ್ನೂ ಯೋಚನೆ? ಎಂಥಾ ಯೋಚನೆ ಅದು?"

ಸರೋಜಮ್ಮನಿಗೆ ಸದಾನಂದನ ಮಾತು ಎಳ್ಳಷ್ಟೂ ಹಿಡಿಸಲಿಲ್ಲ. ಆದರೆ ಸದಾನಂದ ಅವಳ ಈ ಮಾತಿನಿಂದ ಪ್ರಭಾವಿತನಾಗಲಿಲ್ಲ. ಅವನು ಅವರಿಗೆ ತಿರುಮಂತ್ರ ಹಾಕುವಂತೆ ಹೇಳಿದ –

"ಅದೇನೇ ಇರಲಮ್ಮ. ಈಗ ಕೂತೇಳುವಷ್ಟರಲ್ಲೇ ನಾನೇನೂ ಹೇಳಲಾರೆ. ಮೈಸೂರಿಗೆ ಹೋಗಿ ನಾಲ್ಕು ದಿವಸ ಯೋಚಿಸಿ ಆಮೇಲೆ ಬರೆಯುತ್ತೇನೆ",

"ಆಲ್ ರೈಟ್. ನೀನು ಹೇಳಿದ ಹಾಗೆ ಮಾಡೋಣ" ನರ್ಸಪ್ಪಯ್ಯನವರು ಮಗನಿಗೆ ಸಮ್ಮತಿ ಕೊಟ್ಟರು. ಆದರೆ ಸರೋಜಮ್ಮ, "ರಾಘವ ಆದ್ರೆ ಈಗ್ಲೆ ಹ್ಞೂ ಅನ್ನುತ್ತಿದ್ದ. ಸದಾನಂದ ಮೊದ್ಲಿನಿಂದಲೂ ಹೀಗೇನೇ" ಎಂದು ತಮ್ಮಷ್ಟಕ್ಕೇ ಹೇಳಿಕೊಳ್ಳುತ್ತಾ ಅಡಿಗೆಕೋಣೆಗೆ ಹೋದರು.

× × × ×

ಮನೆಯಿಂದ ಹೊರಟು ಮೈಸೂರು ಸೇರಿದ ಮೇಲೂ ಸದಾನಂದನ ಮನಸ್ಸಿಗೆ ನೆಮ್ಮದಿ ಇರಲಿಲ್ಲ. ಆಸ್ಪತ್ರೆಗೆ ಹೋಗಿ ಅವನ ಡ್ಯೂಟಿ ಮಾಡುತ್ತಿದ್ದರೂ ಅವನ ಮನಸ್ಸಿನಲ್ಲಿ ಎದ್ದು ನಿಂತಿತು ಮದುವೆಯ ಭೂತಾಕಾರದ ಪ್ರಶ್ನೆ. ಒಂದು ಕಡೆ ತಾನು ವಸಂತಿಯನ್ನು ಪ್ರೇಮಿಸಿದ್ದರೆ, ಇನ್ನೊಂದು ಕಡೆ ಅಪ್ಪ ಅಮ್ಮ ಅಂತಿಮ ತೀರ್ಮಾನಕ್ಕೆಬಂದ ಹಾಗೆ ಮಾತನಾಡುತ್ತಾರೆ. ತಾನೆಲ್ಲಿಯಾದರೂ ವಸಂತಿಯನ್ನು ಪ್ರೇಮಿಸಿದ ವಿಷಯವನ್ನು ಹೇಳಿದ್ದೇ ಆದರೆ ಪ್ರಾಯಶಃ ಅವರು ಇದಕ್ಕೆ ಒಪ್ಪಿಗೆ ಈಯುವುದು ಕಷ್ಟ. ತಾನು ಅವರ ಮಾತು ಮೀರಿ ವಸಂತಿಯನ್ನು ಕೈ ಹಿಡಿಯಬಲ್ಲೆನಾದರೂ ಅದು ನ್ಯಾಯವೇ? ಪ್ರೀತಿಯ ಎದುರು ಹಳೆಯ ಕಟ್ಟು ಕಟ್ಟಳೆಗಳು, ಜಾತಿನೀತಿಗಳು ಕ್ಷುಲ್ಲಕವಾದರೂ ತಂದೆ-ತಾಯಿಯ ಮನ ನೋಯಿಸಿದರೆ ಹೇಗೆ?

ಇದೆಲ್ಲಕ್ಕಿಂತಲೂ ಹೆಚ್ಚಾಗಿ ವಸಂತಿ ತನ್ನನ್ನು ಪ್ರೀತಿಸಿದ್ದಾಳೆಂದು ಹೇಗೆ ತಿಳಿಯುವುದು. ಅವಳ ಹಾವಭಾವಗಳಿಂದ ತಿಳಿಯಬಹುದಾದರೂ ತಾನು ಅವಳಲ್ಲಿ ಈ ವಿಷಯವಾಗಿ ಚರ್ಚಿಸಲೇಬೇಕು. ಅವಳು ಪುನರ್‌ವಿವಾಹಕ್ಕೆ ಒಪ್ಪುವುದಾದರೆ, ಏನಾದರೂ ಸರಿ ತಾನು ಅವಳನ್ನು ಮದುವೆಯಾಗಿಯೇ ತೀರಬೇಕು; ಅದು ತನ್ನ ಧರ್ಮ!

ಗಳು – ಮಿಡಾಕ್ಟರ್‌ಗಳು ಎಲ್ಲರೂ ಹಣಕ್ಕಾಗಿ ಮಾನ ಮಾರಿದವರು? ಇವರ್‍ಯಾರೂ ತನ್ನನ್ನು ಪ್ರೀತಿಸಲು ಶಕ್ಯರಲ್ಲ. ಅವರ ಪ್ರೀತಿಗೆ ಪಾತ್ರರಾಗುವುದೆಂದರೆ ಬರೇ ಹಣ! ಹಣ!

ಸದಾನಂದ ಮನೋವೇದನೆಯಿಂದ ನರಳುತ್ತಿದ್ದ. ಆಸ್ಪತ್ರೆಯಲ್ಲಿ ವಸಂತಿಯನ್ನು ಕಂಡಾಗ ಒಂದು ರೀತಿಯ ಗಂಭೀರ ಮುಖಮುದ್ರೆ ತಾಳುತ್ತಿದ್ದ. ಬೆಂಗಳೂರಿಂದ ಬಂದ ಮೇಲೆ ಈತ ಯಾಕೆ ಹೀಗಾದ? ಮನೆಯಲ್ಲಿ ಏನು ನಡೆದಿರಬಹುದು? ಎಂಬ ಕುತೂಹಲ ವಸಂತಿಗೆ ಇದ್ದರೂ ಸಾಕಷ್ಟು ನಿಕಟ ಪರಿಚಯವಿದ್ದರೂ ಕೇಳುವ ಎದೆಗಾರಿಕೆ ವಸಂತಿಯಲ್ಲಿಲ್ಲ

ಎರಡು ದಿನಗಳಲ್ಲಿ ಯಾಂತ್ರಿಕವಾಗಿ ನಡೆಯುತ್ತಿತ್ತು ಸದಾನಂದನ ಡ್ಯೂಟಿ. ಎಷ್ಟು ಹೊತ್ತಿಗೂ ಅವನಿಗೆ ಚಿಂತನೆಯೇ ಮುಖ್ಯ ವಿಷಯ. ಹೀಗೆ ತಾನು ತಲೆ ಕೆಡಿಸಿಕೊಳ್ಳಬಾರದು ಎಂದು ಆರಾಮವಾಗಿರಲು ಪ್ರಯತ್ನಿಸಿದ. ಸಂಜೆ ಸಿನೆಮಾಕ್ಕೆ ಎಡೆಬಿಡದೆ ಎರಡೂ ದಿನವೂ ಹೋದ. ಯಾವಾಗಲೂ ಮನೋರಂಜನೆಯನ್ನು ಈಯುತ್ತಿದ್ದ ಸಿನಿಮಾಗಳು ಬರೇ ಚಿತ್ರಗಳಂತೆ ಅನಿಸಿದವು ಅವನಿಗೆ. ಅದರಿಂದಲೂ ಅವನಿಗೆ ನೆಮ್ಮದಿ ದೊರಕಲಿಲ್ಲ.

ಕಡೆಗೆ ಒಂದೆರಡು ದಿನಗಳಲ್ಲಿ ಸದಾನಂದ ಅಂತಿಮ ನಿರ್ಧಾರಕ್ಕೆ ಬಂದ. ತಾನು ವಸಂತಿಗೆ ಒಂದು ಸಣ್ಣ ವಿವರವಾಗಿ ಅಪ್ಪನಿಗೆ ತಿಳಿಸುವುದು. ಅನಂತರದ ಅವರ ಪ್ರತಿಕ್ರಿಯೆ ವ್ಯತಿರಿಕ್ತವಾಗಿ ಬಂದರೆ, ಸದ್ಯಕ್ಕೆ ಮದುವೆಯ ಆಲೋಚನೆಯನ್ನೇ ಕೈಬಿಟ್ಟುಬಿಡುವುದು. ವಸಂತಿಗೆ ಸಮಾಧಾನ ಹೇಳಿ ಈ ಪೇಟೆಯ ವಾತಾವರಣದಿಂದಲೇ ದೂರ ಉಳಿದು ಕೋಳ್ಯೂರಿಗೆ ಹೋಗಿ ಕೃಷಿಯೊಂದಿಗೆ ತಾನು ಪ್ರಾಕ್ಟೀಸ್ ಮಾಡುವುದು.

× × × ×

ವಸಂತಿಗೆ ಆಸ್ಪತ್ರೆಗೆ ಹೊರಡುವಾಗ ಮೊದಲಿನಷ್ಟು ಉತ್ಸಾಹವಿರಲಿಲ್ಲ. ಈ ತಿಂಗಳ ಮೊದಲಲ್ಲಿ ರಾತ್ರೆ ಕಳೆದು ಯಾವಾಗ ಬೆಳಗಾಗುವುದೋ ಎಂಬಷ್ಟು ಮಟ್ಟಗಿದ್ದ ಕಾತರ ಸದಾನಂದನ ಈಚೆಗಿನ ನಾಲ್ಕು ದಿವಸದ ವರ್ತನೆಯಿಂದ ಬೇಸರ ತರಿಸಿತ್ತು. ತಾನು ಏನಾದರೂ ಬಡ ನರ್ಸ್. ಮೇಲೆ ವಿಧವೆ. ತಾನು ಅವನನ್ನು ಬಯಸುವುದೇ ತಪ್ಪು. ನಿಜವಾಗಿಯೂ ಸದಾನಂದ ತನ್ನನ್ನು ಪ್ರೀತಿಸಲಾರ. ಪ್ರಾಯಶಃ ಇತರ ಡಾಕ್ಟರುಗಳ ಹಾಗೆ ತನ್ನಿಂದ ಕ್ಷಣಿಕ ಸುಖ ಪಡೆಯಲಿಕ್ಕಾಗಿ ಈ ರೀತಿಯ ಹೊಸ ಮುಖವಾಡ ಹಾಕಿಕೊಂಡಿದ್ದಾರೋ ಏನೋ? ಎಂದು ಅನಿಸಿತ್ತು ಅವಳಿಗೆ.

ಅಂದು ಕೂಡ ಹಾಗೆ ರಾಜೀವಿ ಬಂದು "ಇನ್ನೂ ಹೊರಡಲಿಲ್ಲವೇ ವಸಂತಿ? ಯಾಕೆ ಇಷ್ಟು ಉದಾಸೀನ ವಸಂತಿ" ಎಂದು ವಸಂತಿಯನ್ನು ಅವಸರಿಸಿದಳು. ಆಕೆ. ದಿನ ದಿನಕ್ಕೆ ಬೇರೆ ಬೇರೆ ರೋಗಿಗಳ ಮುಖ ನೋಡ ಬೇಕಾದದ್ದೇ ಹೊರತು ಮತ್ತೇನಿದೆ ಹೇಳು?"

"ಓ! ಭಾರೀ ಫಿಲಾಸಫಿಯೋ ವಸಂತಿ! ಎಂದೂ ಇಲ್ಲದ ವೈರಾಗ್ಯ – ಯಾವಾಗಿನಿಂದ?"

ಗೆಳತಿಯರಿಬ್ಬರೂ ಮಾತನಾಡುತ್ತಾ ಆಸ್ಪತ್ರೆಯ ಸಮೀಪ ಬಂದರು. ಸರ್ಜನರ ರೂಮಿನ ಎದುರು ಸದಾನಂದ ಯಾರದೋ ಕೈ ಕುಲುಕಿ ನಗಾಡುತ್ತ ಮಾತನಾಡುತ್ತಿದ್ದ. ಅವನನ್ನು ನೋಡಿದ ರಾಜೀವಿ ನಗುತ್ತಾ ವಸಂತಿಗೆ ಹೇಳಿದಳು.

"ಇವೊತ್ತು ಬೆಳಿಗ್ಗೆ ಯಾರ ಮುಖ ನೋಡಿದ್ದೀಯಾ ವಸಂತಿ? ಅಂತೂ ನಿನ್ನ ಬೆಕ್ಕು ಕಾಣಲಿಲ್ಲಾಂತ ಕಾಣುತ್ತೆ?"

"ಯಾಕೆ ಏನಾಗಿದೆ ನನಗೆ?"

"ಏನೂ ಇಲ್ಲ ಮತ್ತೆ ಸಂಜೆ ಹೇಳ್ತೇನೆ".

ರಾಜೀವಿ ಮತ್ತೆ ಅಲ್ಲಿ ನಿಲ್ಲಲಿಲ್ಲ. ಮಟಿದ ಜಿಂಕೆಯ ಹಾಗೆ ಬೇರೆ ದಾರಿ ಹಿಡಿದಳು. ಅವಳ ಮನಸ್ಸಿನಲ್ಲಿ ಏನಿತ್ತು ಎಂಬುದನ್ನು ಅರಿತ ವಸಂತಿ 'ಅಬ್ಬ ಎಲ್ಲರಿಗೂ ಗೊತ್ತಾಗಿದೆ, ನನ್ನ ವಿಷಯ. ಆದರೆ ಆಗಲಿ. ನಾನೇನು ಮಾಡಿದ್ದೇನೆ ಹಾಗೆ? ಶಾರದೆ, ರಮಾಳ ಹಾಗೆ?' ಎಂದು ತನಗೆ ತಾನೇ ಸಮಾಧಾನ ಮಾಡಿಕೊಂಡಳು.

ರೋಗಿಗಳ ಉಪಚಾರ ಮಾಡುತ್ತಿದ್ದಂತೆಯೇ

ಪಕ್ಕದ ವಾರ್ಡಿನಿಂದ 'ಡಿಸ್‌ಚಾರ್ಜ್' ಆಗಿ ಹೋಗುತ್ತಿದ್ದವನೊಬ್ಬ ಮೆಲ್ಲನೆ ಬಂದು ಬಾಗಿಲ ಬಳಿ ನಿಂತು ಕರೆದ. ವಸಂತಿ ತನಗೇನೋ ಸಂಭಾವನೆ ಕೊಡುತ್ತಾನೆಂದು ಗೊತ್ತಿದ್ದೂ ಬಾಗಿಲಿನ ಬಳಿ ಬಂದಳು. ಅವನು ಕವರು ಕಿಸೆಯಿಂದ ತೆಗೆಯುತ್ತಿದ್ದ ಹಾಗೆ ಡಾ. ಸದಾನಂದ ಅಲ್ಲಿಗೆ ಬರುವುದು ಕಾಣಿಸಿತು.

ವಸಂತಿ ಅಲ್ಲಿ ನಿಲ್ಲದೆ ಏನೂ ಆಡದೆ ಒಳಗೆ ಬಂದಳು. ಡಾ. ಸದಾನಂದ ಅವನನ್ನು ಒಮ್ಮೆ ನೋಡಿ ಒಳಗೆ ಹೊಕ್ಕ.

"ಗುಡ್ ಮಾರ್ನಿಂಗ್ ಸರ್".

"ಗುಡ್ ಮಾರ್ನಿಂಗ್. ನೋಡಿ ಅವನೇನೋ ನಿಮಗೆ ಕೊಡುತ್ತಿದ್ದಾನಲ್ಲ; ಹೋಗ್ರಿ ತಗೊಳ್ಳಿ".

ವಸಂತಿಗೆ ಸದಾನಂದನ ವರ್ತನೆಯಿಂದ ಗಲಿಬಿಲಿಯಾಯ್ತು. ಅವಳ ಬಾಯಿ ಒಣಗಿತು. ಏನಾಗುವುದೋ ಎಂಬ ಭಯದಿಂದ ಅವಳು ಅವನನ್ನೇ ನೋಡಿದಳಷ್ಟೇ ಹೊರತು ಮುಂದೆ ಕದಲಲಿಲ್ಲ. ಅವನೂ ಅವಳನ್ನು ನೋಡಿ ಹೇಳಿದ–

"ಅವನಿಗೆ ಕೊಡಲೇಬೇಕೂಂತ ಇದ್ರೆ ಹೋಗಿ ತಗೊಳ್ಳಿ, ಅದಕ್ಕೇನಂತೆ, ಅದೇನು ಲಂಚ ಅಲ್ಲ ತಾನೆ?"

ವಸಂತಿ ಮಾತನಾಡಲಿಲ್ಲ. ಅದಕ್ಕೆ (ಅವನೂ ವಸಂತಿಯನ್ನು ಕಾಯುತ್ತ ಕೂರಲಿಲ್ಲ) ಅವಳು ಲೈಸೋಲ್‌ನ ಬೇಸಿನ್ ಹಿಡಿದು ಸದಾನಂದನನ್ನೇ ಅನುಸರಿಸಿದಳು.

ಎಲ್ಲಾ ಬೆಡ್ಡುಗಳನ್ನು ನೋಡಿ ಆದಮೇಲೆ ಸದಾನಂದ ಅದಕ್ಕೆ ತಾಗಿರುವ ಕೊಠಡಿಗೆ ಬಂದ. ಅದರ ಒಳಗಿದ್ದ ಮೇಜಿನ ಮೇಲೆ ಇದ್ದ ನೀರನ್ನು ನೋಡಿ ಒರಸಲು ಬಂದ ವಸಂತಿಯ ಕೈ ಹಿಡಿದು ಸದಾನಂದ ಹೇಳಿದ.

"ಸಾರಿ ವಸಂತಿ. ಆಗ ನಾನು ನಿಮಗೆ ತೊಂದರೆ ಕೊಟ್ಟೆ. ನೀವು ತೆಗೆದುಕೊಳ್ಳಲೇ ಇಲ್ಲ; ಪಾಪ ಏನಾದರೂ ಕೊಡುತ್ತಿದ್ದ ಆತ ನಿಮಗೆ."

ವಸಂತಿಗೆ ಸದಾನಂದನ ಈ ವರ್ತನೆ ಅನಿರೀಕ್ಷಿತವಾಗಿತ್ತು. ಆಕಸ್ಮಾತ್ ಎಂದಾದರೂ ಅವಳ ದೇಹ ಅವನಿಗೋ ಅವನ ದೇಹ ಅವಳಿಗೋ, ಅಥವಾ ಕೈಬೆರಳುಗಳೋ ತಾಗಿರಬಹುದಲ್ಲದೆ, ಹೀಗೆ ನೇರವಾಗಿ ಅವಳ ಕೈಯನ್ನು ಇದು ತನಕ ಹೀಗೆ ಹಿಡಿದು ಅವಳ ಹೆಸರೆತ್ತಿ ಆತ ಕರೆದಿರಲಿಲ್ಲ. ಆದ್ದರಿಂದ ಏನೂ ಮಾಡಲು ತೋಚದೆ ನಕ್ಕು ಹೇಳಿದಳು–

"ಹಾಗೇನೂ ಇಲ್ಲ ಡಾಕ್ಟರ್".

ಸದಾನಂದ ಅವಳ ಕೈ ಬಿಟ್ಟ. ಅವಳು ದೂರ ಸರಿದು ನಿಂತಳು. ಅವನು ಒಮ್ಮೆ ಮುಗುಳುನಕ್ಕು, "ಹೋಗಿ, ರೋಗಿಗಳಿಗೆ ಒಮ್ಮೆ ಔಷಧಿ ಕೊಟ್ಟು ಬನ್ನಿ. ಆಮೇಲೆ ನಿಮಗೆ ಒಂದು ಪತ್ರ ಇದೆ..." ಎಂದು ತಡವರಿಸುತ್ತಲೇ ಹೇಳಿದ.

'ಪತ್ರ' ಎಂಬ ಶಬ್ದ ಕೇಳಿದೊಡನೆ ವಸಂತಿಗೆ ದಿಗಿಲಾಯಿತು. ಅಂಥಾದೇನಪ್ಪಾ ವಿಷಯ ಪತ್ರದಲ್ಲಿ. ಕುತೂಹಲ ಕ್ಷಣ ಕ್ಷಣಕ್ಕೂ ಏರುತ್ತಿದ್ದರೂ ಸದಾನಂದನಲ್ಲಿ ಅದೇನೆಂದು ಕೇಳಲಾಗದೆ ಅವಳು ವಾರ್ಡಿಗೆ ಹೋದಳು. ಅವಸರದ ಕೆಲಸ ಮುಗಿಸಿ ನೇರವಾಗಿ ಕೊಠಡಿಗೆ ಬಂದಳು.

'ಮೆಡಿಸಿನ್' ಪುಸ್ತಕದ ಪುಟಗಳನ್ನು ಮಗುಚಿ ಹಾಕುತ್ತಿದ್ದ ಸದಾನಂದ ತಲೆಯೆತ್ತಿ ಅವಳು ಬಂದುದನ್ನು ನೋಡಿದ. ಗಂಭೀರನಾಗಿ ಪ್ಯಾಂಟಿನ ಕಿಸೆಯಿಂದ ನಡುಗುವ ಕೈಯಲ್ಲಿ ಬರೆದ ಕಾಗದವನ್ನು ತೆಗೆದು ಅವಳಿಗೆ ಕೊಟ್ಟ.

ವಸಂತಿ ಕಾಗದವನ್ನು ಹಿಡಿದುಕೊಂಡು ಹಿಂದೆ ಸರಿದಳು. ಕಿಟಕಿಯ ಬಳಿಗೆ ಹೋಗಿ ನಿಂತು ಮೆಲ್ಲಗೆ ಅದರ ಒಳಗೆ ಬರೆದುದರ ಮೇಲೆ ಕಣ್ಣಾಡಿಸಿದಳು.

"ನಾನು ನಿಮ್ಮನ್ನು ಪ್ರೀತಿಸುತ್ತೇನೆ. ನೀನು ನಮ್ಮ ಮದುವೆಗೆ ಒಪ್ಪಿಗೆ ಕೊಡುವೆಯಾ?–ಡಾ. ಸದಾನಂದ"

ಬರೇ ಎರಡೇ ವಾಕ್ಯಗಳು. ಅವೂ ಇಂಗ್ಲಿಷಿನಲ್ಲಿ. ವಸಂತಿಗೆ ಈ ಅನಿರೀಕ್ಷಿತ ಪ್ರಶ್ನೆಯ ಪತ್ರದಿಂದ ಏನನ್ನುದೇಕೋ ತಿಳಿಯಲಿಲ್ಲ. 'ಒಪ್ಪಿದೇನೆ. ಒಪ್ಪಿದೇನೆ' ಎಂದು ಅವಳ ಮನಸ್ಸು ಹೇಳಿದರೂ ಅವಳ ಬುದ್ಧಿ ಚುರುಕಾಗಿಯೇ ಕೆಲಸ ಮಾಡಿತು. ಅವಳು ತನ್ನನ್ನೇ ಕುತೂಹಲದಿಂದ ನೋಡುತ್ತಿದ್ದ ಸದಾನಂದನ ಎದುರಿಗೆ ಬಂದು ಹೇಳಿದಳು.

"ಕ್ಷಮಿಸಿ, ಈಗಲೇ ಉತ್ತರಿಸಲಾರೆ. ಸಂಜೆ ಖಂಡಿತ ಹೇಳುತ್ತೇನೆ."

ಸದಾನಂದ ಮೌನವಾಗಿ ಹೋಗುಬಿಟ್ಟಿದ (ಅಬ್ಬ ಎಷ್ಟು ಅವಸರ ಈ ನರ್ಸಿಗೂ ಕೂಡ. ಇನ್ನೂ ಅದಕ್ಕೆ ಆಲೋಚನೆ ಬೇರೆ ಇದೆಯೇ) ವಸಂತಿಗೆ ಮಾತ್ರ ಆಡಿದ ಮೇಲೆ ಅನಿಸಿತು ತಾನು ಹಾಗೆ ಹೇಳಬಾರದಿತ್ತು, ಒಪ್ಪಿಗೆ ಕೊಡಬೇಕಿತ್ತು, ಎಂದು.

ಸದಾನಂದ ವಾರ್ಡು ಬಿಟ್ಟು ಹೋದ ಮೇಲೆ ವಸಂತಿಯ ತಲೆಯಲ್ಲಿ ಒಂದೇ, ತಾನು ಒಪ್ಪಿಗೆ ಕೊಡಲೇಬೇಕು. ಆದರೆ ತನ್ನ ಅಣ್ಣ, ಅಮ್ಮ ಇದಕ್ಕೆ ಒಪ್ಪಿಯಾರೆ? ಖಂಡಿತ ಒಪ್ಪಲಾರರು. ಆದರೆ ತಾನೇನು ಈಗ ಅವರ ಹಂಗಿನಲ್ಲಿದ್ದೇನೆಯೋ? ಅವರು ಮೊದಲು ನರ್ಸ್ ಕೆಲಸಕ್ಕೆ ತನಗೆ ಒಪ್ಪಿಗೆ ಕೊಡಲಿಲ್ಲವಲ್ಲ! ಈಗ ಹೇಗೆ ತಾನು ಕಳುಹಿಸುವ ಅಲ್ಪ ಹಣವನ್ನು ಪ್ರೀತಿ, ವಿಶ್ವಾಸದಿಂದ ಸ್ವೀಕರಿಸುತ್ತಾರೆ? ಹಾಗೆಯೇ ಮದುವೆಯಾದ ಮೇಲೆ ಸರಿ ದಾರಿಗೆ ಬಂದಾರು! ಒಂದು ವೇಳೆ ಬಾರದೇ ಇದ್ದರೂ ವಿಧವೆ ವಿವಾಹವಾದದ್ದು ಎಂದು ಬಹಿಷ್ಕರಿಸಿದರೂ ತನಗೆ ಸದಾನಂದನಿದ್ದಾನಲ್ಲ–ಪ್ರತ್ಯಕ್ಷ ದೇವತಾಸ್ವರೂಪನಾಗಿ!

ಆ ದಿನ ಸಂಜೆ ಅವಳು ಸದಾನಂದನಿಗೆ ಹೇಳಿದಳು "ನಿಮ್ಮ ಮೆಚ್ಚುಗೆಯೇ ನನಗೆ ಒಪ್ಪಿಗೆ" ಎಂದು.

× × × ×



-೫-

ರಾಘವ ಹೋಗಿ ಎಂಟು ದಿವಸವಾಗುತ್ತಾ ಬಂದರೂ ಅವನ ಕ್ಷೇಮಸಮಾಚಾರದ ವಿಚಾರ ಪತ್ರವೇ ಇಲ್ಲ.

ಆ ದಿನ ಅಂಚೆಯ ಪೇದೆ ಬಾಗಿಲು ತಟ್ಟಿ 'ಅಮ್ಮಾ, ಲೆಟರ್' ಎಂದಾಗ ಸರೋಜಮ್ಮನಿಗೆ ಜೀವ ಬಂದಂತಾಗಿತ್ತು. ಹಾಡುತ್ತಿದ್ದ ರೇಡಿಯೋವನ್ನು ಅಲ್ಲಿಗೇ ನಿಲ್ಲಿಸಿ ಅವಸರವಸರವಾಗಿ ಕಾಗದ ಒಡೆದು ನೋಡುತ್ತಾರೆ! ಸದಾನಂದನ ಅಕ್ಷರ. ಕತೆ ಬರೆದಂತೆ ಮೂರು ನಾಲ್ಕು ಹಾಳೆಗಳಲ್ಲಿ ಆತ ಬರೆದಿದ್ದಾನೆ. ಏನಪ್ಪಾ ಇದು ಇವನ ಪುರಾಣ- ಎಂದು ಸಾವಕಾಶವಾಗಿ ಓದಿದರು. ಓದುತ್ತಾ ಹೋದ ಹಾಗೆ ಅವರ ಹುಬ್ಬುಗಳು ಗಂಟಿಕ್ಕಿದವು. ತಾನು ಮೊದಲೇ ಹೀಗೆ ಅಂತ ಎಣಿಸಿದ್ದೆ. 'ಅವರಿ'ಗೆ ಸದಾನಂದ ಎಂದರೆ ಬಹಳ ಪ್ರೀತಿ. ಅವನನ್ನು ತಲೆಯ ಮೇಲೆ ಹೊತ್ತುದಕ್ಕೆ ಈಗ ಮಾಡಿದನಲ್ಲ! ಮುಖಕ್ಕೆ ಮಂಗಳಾರತಿ? ನೋಡುವಾ, ಎಲ್ಲಿ ತನಕ ಇವ ಬೆಳೆದಿದ್ದಾನೆ- ನೋಡಿಯೇ ತೀರಬೇಕು....ಮತ್ತೇನೇನೋ ಸರೋಜಮ್ಮ ಮನಸ್ಸಿನಲ್ಲಿ ಮುಂಡಿಗೆ ಮೆದ್ದು ನರ್ಸಪ್ಪಯ್ಯನವರು ಬರುವುದನ್ನೇ ಕಾದು ಕುಳಿತರು.

ಕೋರ್ಟು ಕೆಲಸ ಮುಗಿಸಿ, ಮನೆಗೆ ಬಂದು ಡ್ರೆಸ್ಸು ಕಳಚಿ ಕಾಫಿ ಕುಡಿಯುತ್ತಿದ್ದ ಹಾಗೆ ಸರೋಜಮ್ಮ ಗಂಡನಿರುವಲ್ಲಿಗೆ ಬಂದು ಅವರ ಹತ್ತಿರಕ್ಕೆ ಸದಾನಂದನ ಪತ್ರವನ್ನು ಎಸೆದಳು- "ನೋಡಿ, ನಿಮ್ಮ ದೊಡ್ಡ ಮಗನ ಕಾರುಬಾರು! ಎಂತಹ ಬುದ್ಧಿ ಬಂದಿದೆ ನಿಮ್ಮ ಕೊಂಡಾಟದ ಮಗನಿಗೆ! ತಂದೆ ತಾಯಿ ಎಂಬ ಪ್ರೀತಿ ಇಲ್ಲದಿದ್ದರೆ ಹೋಗಲಿ, ನಿಮ್ಮ ಗೌರವ. ಯೋಗ್ಯತೆಯನ್ನಾದರೂ ಅವನು ನೋಡಬೇಕೋ ಬೇಡವೊ?"

ಸರೋಜಮ್ಮ ಹೇಳುತ್ತಿದ್ದ ಹಾಗೆ ನರ್ಸಪ್ಪಯ್ಯನವರು ಕಾಗದವನ್ನು ಕೈಯಲ್ಲಿ ಹಿಡಿದು ಕಾಫಿಯನ್ನು ಒಮ್ಮೆಲೇ ಹೀರಿ ಚಾವಡಿಗೆ ಬಂದು ಹೇಳಿದರು! "ಒಮ್ಮೆಲೆ ಸಿಕ್ಕಾಪಟ್ಟೆ ಮಾತನಾಡಬೇಡ. ಏನಿದೆ ಅಂತ ಓದಿದ ಮೇಲೆ ಮಾತಾಡು."

"ಏನೇನು? ಮತ್ತೇನು, ನಿಮ್ಮ ಮಗ ಒಬ್ಬಳು ನರ್ಸನ್ನು ಲವ್ (Love) ಮಾಡಿದ್ದಾನಂತೆ.–ಲವ್."

"ಏನು ನರ್ಸನ್ನು ಲವ್ (Love)"

"ಹ್ಞ! ಎಲ್ಲಾ ಇದೆ ಅದರಲ್ಲಿ ಹರಿಕತೆ".

ಸರೋಜಮ್ಮ ಮತ್ತೆ ಅಲ್ಲಿ ನಿಲ್ಲಲಿಲ್ಲ. ಮನಸ್ಸಿನಲ್ಲೇ ಸದಾನಂದನನ್ನು ಥಳಿಸಬೇಕೆನ್ನುವಷ್ಟು ಸಿಟ್ಟಿನಿಂದ ಒಳಗೆ ಹೋಗಿ ಕಾಫಿಗ್ಲಾಸು ತೊಳೆದಿಟ್ಟು ಬಂದರು. ಪತ್ರವನ್ನು ಬಿಡಿಸಿ ತಾಳ್ಮೆಯಿಂದ ಓದುತ್ತಿದ್ದ ನರ್ಸಪ್ಪಯ್ಯನವರ ಎದುರಿಗೆ ಇದ್ದ ಸೋಫಾದಲ್ಲಿ ಕುಳಿತು ಗಂಡನನ್ನೇ ನೋಡತೊಡಗಿದರು, ಸರೋಜಮ್ಮ.

ಪತ್ರವನ್ನು ಓದಿಮುಗಿಸಿದ ಮೇಲೆ ನಿಟ್ಟುಸಿರು ಬಿಟ್ಟು, "ಹೀಗಾದಾನೆಂದು ಎಣಿಸಲಿಲ್ಲ ಸರೋಜ ಸದಾನಂದನಿಗೆ ಯಾಕೆ ಬಂತಪ್ಪಾ ಈ ಬುದ್ಧಿ" ಎಂದು ಹೆಂಡತಿಯ ಮುಖವನ್ನು ನೋಡಿದರು ವಿಷಾದದಿಂದ.

"ನಾನು ಮೊನ್ನೆಯೇ ಎಣಿಸಿದ್ದೆ ಅವನ ಮಾತಿನಿಂದ. ಇಲ್ಲವಾದರೆ ಮೂರು ನಾಲ್ಕು ದಿನ ಆಲೋಚನೆ ಮಾಡುವಂಥಾದ್ದು ಏನಿದೆ, ಇವನಿಗೆ ಮದುವೆಯಲ್ಲಿ? ಇದಕ್ಕೆಲ್ಲಾ ಹೊಣೆ ನೀವೇ. ಅವನನ್ನು ಬಹಳ ಪ್ರೀತಿಯಿಂದ ಸಾಕಿದಿರಿ, ಕಲಿಸಿದಿರಿ. ಈಗ ನಿಮಗೇ ತಿರುಮಂತ್ರ ಹಾಕಿದ." ಸರೋಜಮ್ಮ ಸದಾನಂದನ ಮೇಲೆ ಇದ್ದ ಸಿಟ್ಟನ್ನು ಗಂಡನ ಮೇಲೆ ತೋರಿಸಿಕೊಂಡಳು.

"ಹ್ಞೂ. ಸದಾನಂದ ಹಾಗೆ ಮಾಡಿದ. ನೀನು ನನ್ನ ಮೇಲೆ ದೋಷಾರೋಪಣೆ ಮಾಡು. ಅಂತೂ ನನಗೆ ನಡುನೀರಿನಲ್ಲಿ ಮುಳುಗುವ ಗತಿ!"

"ನಾನೇನು ಮಾಡಿದ್ದೇನೆ ದೋಷಾರೋಪ? ಇದ್ದದ್ದು ಇದ್ದ ಹಾಗೆ ಹೇಳಿದೆ. ನಾನು ಅವತ್ತೇ ಹೇಳಿದ್ದೆನಲ್ಲ, ಸರ್ಕಾರಿ ಕೆಲಸ ಬೇಡ. ಇಲ್ಲೇ ಪ್ರೈವ್ಹೇಟ್ ಶಾಪ್ ತೆರೆಯಲಿ ಅಂತ. ಆದರೆ ಅವ ಕೇಳಲಿಲ್ಲ ನೀವು ಒಪ್ಪಿಗೆ ಕೊಟ್ಟಿರಿ. ಅದಕ್ಕೆ ಅವ ಹೀಗಾದ".

## ಎಷ್ಟು ದಿನ ಬದುಕುವೆಯೋ




ರೋಗಿ ಮಂಚದ ಎದುರುಗಡೆಯು
ಟೇಬಲ್ ಮೇಲೆ
ಸಾಲಾಗಿ ಕುಳಿತ ಗುಳಿಗೆ, ಔಷಧಿಯು
ಹಿಂಡು
ದೈನ್ಯದಿಂದಲಿ ಬಂದು ರೋಗಿಯನು
ಕೇಳಿದವು
ಎಷ್ಟು ದಿನ ಬದುಕುವೆಯೋ
ನಮಗೆ ತಿಂದು.

-ಎಂ. ಗೋವಿಂದ

"ಅದೆಲ್ಲಾ ಸಾಯಲಿ ಬಿಡು. ಇನ್ನು ಕಳೆದುದರ ಬಗ್ಗೆ ಚಿಂತಿಸಿ ಮಾಡುವುದೇನು? ಮುಂದೆ ಏನು ಮಾಡಬೇಕೂಂತಲಾದರೂ ಹೇಳಬಾರದ ನನಗೆ?"

"ನಾನೇನಪ್ಪಾ ಹೇಳೋದು? ಹೇಳೋದೆಲ್ಲಾ ಹೇಳಿ ಆಗಿದೆ ಅವನಿಗೆ. ಇನ್ನು ನೀವೇ ಆಲೋಚನೆ ಮಾಡಿ. ನೀವೇ ನ್ಯಾಯಾಧೀಶರಿದ್ದುಕೊಂಡು ನನ್ನಲ್ಲಿ ಕೇಳಿದರೆ"?

"ಏನೂ ಆಲೋಚನೆ ಹೊಳೆಯೋದಿಲ್ಲಪ್ಪ. ನೋಡು, ಮೊನ್ನೆ ವಾಸುದೇವರಾಯರು ಕೋರ್ಟು ಮುಗಿದು ಬರುವಾಗ ಬನ್ನಿ ಅಂತ ಮನೆಗೆ ಆಮಂತ್ರಿಸಿದರು. ಅದು– ಇದು ಮಾತನಾಡುತ್ತ ಅವರಲ್ಲಿಗೆ ಹೋದೆ. ಅರ್ಧ ಗಂಟೆ ಹೊತ್ತು ಭಾರಿ ಪಟ್ಟಾಂಗ ಹೊಡೆದಿದ್ದೆವು. ಮಾತಿನ ನಡುವೆ ಶ್ರೀಮತಿಯೇ ಬಂದು ನಮಗೆ ಕಾಫಿಕೊಟ್ಟು ಹೋದರು. ಹುಡುಗಿ ಹೇಗೆ ಇದ್ದಾಳಂತೀಯಾ?! ಚಿನ್ನ! ಚಿನ್ನದ ಗೊಂಬೆಯ ಹಾಗೆ! ಪಾಪ! ವಾಸುದೇವರಾಯರು ಐಡಿಯಾ ಹಾಕಿದ್ದು ಇದೇ ಇರಬೇಕು. ಅದಕ್ಕೆ ಮನೆಗೆ ನನ್ನನ್ನು ಆಮಂತ್ರಿಸಿ ಮಗಳನ್ನು ತೋರಿಸಿದರು. ಮತ್ತೆ ಅವರೇ ಅವಳ ಬಗ್ಗೆ ನಾಲ್ಕು ಮೆಚ್ಚುಗೆಯ ಮಾತನಾಡಿದರು. ಕಡೆಗೆ ಹೊರಟು ಬರುವಾಗ ಗೇಟಿನ ತನಕ ಬಂದು ಬೇಕಂತಲೇ 'ನಿಮ್ಮ ದೊಡ್ಡ ಮಗ ಸದಾನಂದ ಬಂದಿದ್ದಾನಾ ಸದ್ಯ?' ಅಂದರು. 'ಇಲ್ಲ' ಅಂದೆ. ಆವಾಗಲೇ ನಾನೇನಾದರೂ ಅವನ ವಿಷಯ ತೆಗೆಯುತ್ತಿದ್ದರೆ ನೇರವಾಗಿ ಕೇಳಿಬಿಡುತ್ತಿದ್ದರೋ ಏನೊ. ಅಂತೂ ಇನ್ನು ತಲೆ ಎತ್ತಿ ನಡೆಯುವ ಹಾಗಿಲ್ಲ. ಅಷ್ಟು ಮಾಡುತ್ತಾನೆ ಈ ಸದಾನಂದ."

"ನಾನು ಹೇಳುವುದು ಕೇಳಿ. ನೀವು ಹೀಗೆ ಕುಳಿತರೆ ಅವನ ಚಕ್ಕಂದ ಇನ್ನೂ ಜಾಸ್ತಿಯಾಗುತ್ತೆ. ಅವನಿಗೆ ಪತ್ರ ಬರೆದು ಇಲ್ಲಿಗೆ ಕರೆಸಿ. ಆಮೇಲೆ ಇಲ್ಲಿ ಚೆನ್ನಾಗಿ ನಾಲ್ಕು ಬುದ್ಧಿವಾದ ಹೇಳಿ. ಅವನ ಕೆಲಸಕ್ಕೆ ರಾಜೀನಾಮೆ ಕೊಡಿಸಿ. ಮತ್ತೆ ಇಲ್ಲಿಯೇ ಪ್ರೈವ್ಹೇಟ್ ಪ್ರ್ಯಾಕ್ಟೀಸ್ ಮಾಡುವಂತೆ ಹೇಳಿ. ಇಲ್ಲ, ಮದುವೆ ಆಗಿಯೇ ಆಗುತ್ತೇನೆಂದರೆ ನನ್ನನ್ನೇ ಮರೆತುಬಿಟ್ಟು ಮಾಡಿಕೋ ಅಂತ ಹೇಳಿ. ಆಗ ಏನು ಮಾಡ್ತಾನೆ. ನೋಡೋಣ".

ಹೆಂಡತಿಯ ಮಾತು ಅಪಥ್ಯವಾಗಿ ಕಾಣಲಿಲ್ಲ ಅವರಿಗೆ. ಕೋರ್ಟಿನಲ್ಲಿ ಹಿಯರಿಂಗ್ ಕೇಳುವ ಹಾಗೆ ತಾಳ್ಮೆಯಿಂದ ಅವಳ ಮಾತುಗಳನ್ನು ಕೇಳಿ ಒಂದು ನಿಮಿಷ ಮೌನವಾದರು ನರ್ಸಪ್ಪಯ್ಯನವರು. ಆಮೇಲೆ ಹೇಳಿದರು, "ನೀನೇ ಹೇಳಿದ್ದು ಸರಿ ಸರೋಜ. ಯಾವುದಕ್ಕೂ ಅವನನ್ನು ಇಲ್ಲಿಗೆ ಕರೆಸೋಣ. ನಾಲ್ಕು ಬುದ್ಧಿವಾದದ ಮಾತು ಹೇಳಿ – ನನ್ನ ಮರ್ಯಾದೆ ತೆಗೆಯುತ್ತೀಯಾ – ಅಂತ ಕೇಳ್ತೇನೆ. ಪಾಪ, ಎಳೆ ಮನಸ್ಸು, ಏನೋ ಹುಚ್ಚು ಕಟ್ಟಿ 'ಲವ್ ಲವ್' ಅಂತ ಬರೆದಿರಬಹುದು. ನನ್ನ ವಾದ ಕೇಳಿದ ಮೇಲೆ ಸರಿದಾರಿಗೆ ಖಂಡಿತ ಬಂದಾನು. ಅಷ್ಟು ಧೈರ್ಯ ನನಗೆ ಇದೆ."

"ಏನೋ ನಿಮ್ಮ ಅದೃಷ್ಟ. ರಾಘವನ ಬಗ್ಗೆಯಾದರೆ ನಾನು ಖಂಡಿತ ಹಾಗೆ ಹೇಳುತ್ತಿದ್ದೆ. ಸದಾನಂದನ ಬಗ್ಗೆ ಹೀಗೆಯೇ ಅಂತ ಹೇಳಲಾಗೋದಿಲ್ಲ. ಆದರೂ ಈ ದಿನವೇ ಕಾಗದ ಬರೆದು ನೋಡಿ".

ಆ ದಿನ ರಾತ್ರಿ ನರ್ಸಪ್ಪಯ್ಯನವರಿಗೆ ನಿದ್ದೆಯೇ ಬರಲಿಲ್ಲ. ಸದಾನಂದನದೇ ಯೋಚನೆ ಅವರಿಗೆ... ಅಲ್ಲ, ಎಂತಹ ಹುಡುಗ ಬುದ್ಧಿ ಅವನಿಗೆ. ಅದೂ ಒಂದು ವಿಧವೆಯನ್ನು, ನರ್ಸ್ ವೃತ್ತಿ ಮಾಡುವವಳನ್ನು ಇವನು ಮದುವೆಯಾದರೆ ತನ್ನ ಮಾನ ಎಲ್ಲ ಗಾಳಿಗೆ ತೂರಿದ ಹಾಗೆ! ವಾಸುದೇವರಾಯರು ಕೇಳಿದರೆ ಏನು ಹೇಳಲಿಕ್ಕಿಲ್ಲ. ಕೋರ್ಟಿನಲ್ಲಿ ತಾನು ಹೇಗೆ ತಲೆ ಎತ್ತುವದು? ತನ್ನ ಊರಿನಲ್ಲಿ ಕೇಳಿದರೆ ಜನ ಏನೆಂದಾರು? ತಮ್ಮ ಕುಲ ಯಾವುದು? ಸ್ವರ್ಗಸ್ಥರಾದ ತನ್ನ ತಂದೆ ತಾಯಿಗಳಿಗೆ ಹೇಗೆ ಅನಿಸೀತು? ಇದು ತನ್ನ ಪ್ರಾರಬ್ಧಕರ್ಮ. ಮಕ್ಕಳಿಗೆ ಹುಡುಗಾಟಿಕೆಯಲ್ಲಿ ಯಾವುದರ ಪರಿವೆಯೂ ಇಲ್ಲ. ಏನೋ, ಸಮಾಜ ಸುಧಾರಣೆ ಮಾಡುತ್ತೇವೆ. ಆಕಾಶಕ್ಕೆ ಹಾರುತ್ತೇವೆ ಎಂದು ಆಗದ. ಹೋಗದ.

ಯೋಚಿಯಲ್ಲಿ ಇಟ್ಟುಕೊಂಡಿಲ್ಲ ಎಂದಿದ್ದರೆ, ತಮ್ಮ ಅಂತಸ್ತು ಮಾನ ಮರ್ಯಾದೆಯ ಕಲ್ಪನೆ ಇಟ್ಟುಕೊಂಡಿದ್ದರೆ, ಎಲ್ಲಾ ಆಗುತ್ತಿದ್ದುದು ಅಷ್ಟೆ!

ನರ್ಸಪ್ಪಯ್ಯನವರ ತಲೆಯಲ್ಲಿ ಯೋಚನೆಗಳು ಸುಳಿ ಸುಳಿದರೂ ಅವರು ಕಡೆಗೂ ನಿಶ್ಚಿಂತರಾಗಲಿಲ್ಲ. ಅಂತೂ ಮಗನಿಗೆ ಹೇಳಿ ನೋಡೋಣ. ನಮ್ಮ ಕರ್ತವ್ಯ ಮಾಡೋಣ ಎಂಬ ಸಿದ್ಧಾಂತಕ್ಕೆ ಅವರು ಬಂದಿದ್ದರು. ಫಲಾಫಲ ಎಲ್ಲಾ ದೇವರ ಇಚ್ಛೆ. ಆಗುವಂತಾದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ, ಎಂದು.

ಆದರೆ ಸರೋಜಮ್ಮನ ಮನಸ್ಸಿನಲ್ಲಿ ಸುಳಿಯುತ್ತಿದ್ದುದೇ ಬೇರೆ. ಅವಳದ್ದು ಪ್ರಬಲ ಆಕ್ಷೇಪ –ಸದಾನಂದ ಲವ್ ಮಾಡಿದ್ದಕ್ಕೆ ಅಲ್ಲ; ವಾಸುದೇವರಾಯರಂತವರು ಎಂಟು ಹತ್ತು ಸಾವಿರ ವರದಕ್ಷಿಣೆ ಕೊಟ್ಟು, ಹತ್ತಿಪ್ಪತ್ತು ಪವನು ಚಿನ್ನ ಹಾಕಿ, ಅದ್ದೂರಿಯಲ್ಲಿ ಕಾಲೇಜು ತುಳಿದ ಮಗಳನ್ನು ತಕ್ಷಣವೇ ಕೊಡಲು ಸಿದ್ಧರಾಗಿದ್ದಾಗ ಇವನಿಗೆ ಈ ನರ್ಸಿನ ಮೇಲೆ ಏಕೆ ಕಣ್ಣು? ಅವಳಲ್ಲಿ ಅಂತಹ ವಿಶೇಷ ಇರುವುದಾದರೂ ಏನು? ಮದುವೆ ಆಗಬೇಕಾದ್ದು ಸಂತಾನಕ್ಕಾಗಿ ಎಂಬ ಧ್ಯೇಯವಷ್ಟೇ ಹೊರತು ಪ್ರೇಮ, ಕಾಮಕ್ಕೆ ಅಲ್ಲಿ ಮನ್ನಣೆ ಇಲ್ಲ!

ತಾನು ಇವರ ಕೈ ಹಿಡಿದಂದಿನಿಂದ – ನರ್ಸಪ್ಪಯ್ಯನವರ ಆರ್ಥಿಕ ಅಭಿವೃದ್ಧಿ ದಿನೇ ದಿನೇ ಏರುತ್ತಿತ್ತು. ಅದಕ್ಕೆ ಕಾರಣ ತನ್ನ ಜಾತಕದ ಫಲ ಎಂಬ ಭಾವನೆ ಸರೋಜಮ್ಮನಿಗೆ. ಮಕ್ಕಳು ಹುಟ್ಟಿ ಮುಂದೆ ವಿದ್ಯಾವಂತರಾದಾಗ ಅವಳಿಗೆ ಅಪಾರ ಆನಂದವಾಗಿತ್ತು. ಮುಂದೆ ಅವರಿಗೆ ಒಳ್ಳೆಯ ಕಡೆಯಿಂದ ಮದುವೆಮಾಡಿಸಿ, ಅವರು ನೆಮ್ಮದಿಯಾಗಿರುವುದನ್ನು ನೋಡಬೇಕು, ಅವರು ಕೈ ತುಂಬ ದುಡಿಯಬೇಕು. ಶ್ರೀಮಂತ ಮನೆಯ ಹುಡುಗಿಯೇ ತಮ್ಮ ಮನೆಯ ಹೊಸ್ತಿಲು ತುಳಿಯಬೇಕು ಎಂಬೆಲ್ಲ ಕನಸುಗಳನ್ನು ಹೆಣೆದಿದ್ದಳು ಸರೋಜಮ್ಮ. ಆದರೆ ಸದಾನಂದನ ಈ ವರ್ತನೆ ಅವಳಿಗೆ ತಡೆಯಲಾರದ ವೇದನೆಗೆ ಕಾರಣವಾಯಿತು. ತನ್ನ ಆಶಾ ಸೌಧ ಕುಸಿಯುವುದನ್ನು ಯಾವ ಹೆಂಗಸೂ ತಡೆಯಲಾರಳಷ್ಟೆ! ಏನೇ ಆಗಲಿ ತಾನು ಬದುಕಿರುವವಷ್ಟರ ತನಕ ಸದಾನಂದ ನರ್ಸಮ್ಮನ ಕೈ ಹಿಡಿಯುವುದನ್ನೇ ನೋಡಬಾರದು ಎಂಬ 'ಭೀಷ್ಮಪ್ರತಿಜ್ಞೆ'ಯನ್ನು ಹಾಕಿದ್ದಳು, ಅವಳು.

ಮರುದಿನ ಕೋರ್ಟಿಗೆ ಹೊರಡುವುದಕ್ಕೆ ಮೊದಲು ಸದಾನಂದನಿಗೆ ನರ್ಸಪ್ಪಯ್ಯನವರು ಪತ್ರ ಬರೆದು ಹೆಂಡತಿಯ ಕೈಯಲ್ಲಿ ಕೊಟ್ಟು ಹೇಳಿದರು. "ಕೆಲಸದ ಹೆಣ್ಣಿನ ಕೈಯಲ್ಲಿ ಕೊಡು. ಟಪ್ಪಾಲು ಪೆಟ್ಟಿಗೆಗೆ ಹಾಕಿಬಿಡಲಿ".

ಆ ಪತ್ರದಲ್ಲಿ ಬರೆದುದು ಮುತ್ತಿನಂತಹ ನಾಲ್ಕು ಮಾತುಗಳು ಮಾತ್ರ!

ಬೆಂಗಳೂರು

ಚಿ. ಸದಾನಂದನಿಗೆ,

ಆಶೀರ್ವಾದಗಳು. ನಿನ್ನ ಪತ್ರ ತಲುಪಿ ಸಂಪೂರ್ಣ ಅಭಿಪ್ರಾಯವಾಯಿತು. ಆದರೆ ನಾನು ನಿನ್ನನ್ನು ಕಂಡು ಮಾತನಾಡದೆ, ಯಾವ ನಿರ್ಧಾರಕ್ಕೂ ಬರುವ ಹಾಗಿಲ್ಲ. ಒಂದು ಆದಿತ್ಯವಾರದಂದು ಬಿಡುವು ಮಾಡಿಕೊಂಡು ಬಾ. ನಿನ್ನ ಅಭಿಪ್ರಾಯವನ್ನು ಸಹಾನುಭೂತಿಯಿಂದಲೇ ಪರಿಶೀಲಿಸುತ್ತೇನೆ. ಉಳಿದ ವಿಚಾರ ಹಿಂದಿನಿಂದ.

ಇತಿ ಆಶೀರ್ವಾದಗಳು.
ಎಂ. ನರ್ಸಪ್ಪಯ್ಯ

ಆದಿತ್ಯವಾರ ಸದಾನಂದ ಮೈಸೂರಿನಿಂದ ಹೊರಟು ಹನ್ನೊಂದು ಗಂಟೆಯ ಹೊತ್ತಿಗೆ ಬೆಂಗಳೂರು ಸೇರಿದ. ಟ್ಯಾಕ್ಸಿ ಮಾಡಿಕೊಂಡು 'ಶ್ರೀಕೃಪ'ದ ತನಕ ಬಂದ. ಒಳಗಿನಿಂದ ಬಂದ ನರ್ಸಪ್ಪಯ್ಯನವರು ಮುಗುಳು ನಕ್ಕು ಮಗನನ್ನು ಸ್ವಾಗತಿಸಿದರು.

ಸದಾನಂದ ಡ್ರೆಸ್ಸು ಕಳಚಿ ಅಡಿಗೆಕೋಣೆಗೆ ಹೋದ. ಅಡಿಗೆಯಲ್ಲಿ ಮಗ್ನರಾಗಿದ್ದ ಸರೋಜಮ್ಮ ಏನೂ ಮಾತನಾಡದೆ ಒಂದು ಲೋಟ ಹಾಲು ಕೊಟ್ಟಳು. ಸದಾನಂದ ಮೌನವಾಗಿ ಅದನ್ನು ಹೀರಿ ಹೊರಗೆ ಚಾವಡಿಗೆ ಬಂದ. ನರ್ಸಪ್ಪಯ್ಯನವರು ಅವರ ಕೋರ್ಟು ಕಚೇರಿಯ ಕೆಲಸಗಳ ವಿಚಾರ ಪರ್ಯಾಲೋಚಿಸುತ್ತಿದ್ದವರು, "ಬಾ ಸದಾನಂದ ಕೂತ್ಕೋ. ಎಷ್ಟು ಗಂಟೆಯ ಬಸ್ಸಿಗೆ ಹೊರಟೆ"? ಎಂದರು ಲೋಕಾಭಿರಾಮವಾಗಿ.

"ಏಳೂಕಾಲದ್ದಕ್ಕೆ" ಎಂದ ಸದಾನಂದ.

"ನಾಳೆ ಹೋಗಿ ತಲಪಲೇಬೇಕೆ? ಅಥವಾ ಸಿ. ಎಲ್. ಹಾಕಿ ಬಂದಿದ್ದೀಯಾ?"

"ಹೇಗಾದರೇನಪ್ಪಾ, ಅಂತೂ ಹೋದರೆ ಒಳ್ಳೇದು."

"ರಾಘವನ ಕಾಗದ ಬಂದಿದೆ ಮೊನ್ನೆ. ಕುಶಾಲಾಗಿ ತಲುಪಿದ್ದೇನೆಂದು ಬರೆದಿದ್ದಾನೆ."

"ಹ್ಞೂ".

ಗಂಭೀರವಾಗಿ ಸಾಗಿತ್ತು ಅವರ ಮಾತುಕತೆ. ಸದಾನಂದ ಅಪ್ಪನೇ ವಿಷಯಕ್ಕೆ ಬರಲಿ ಎಂದು ಸುಮ್ಮನಾದರೆ, ನರ್ಸಪ್ಪಯ್ಯನವರು ಅವನೇ ಹೇಳಲಿ ಎಂದು ಮುಖ್ಯ ವಿಚಾರವನ್ನೇ ಎತ್ತಲಿಲ್ಲ.

ಊಟವಾದ ಹೊತ್ತಿಗೆ ಇಬ್ಬರೂ ಎದ್ದರು. ಊಟವೂ ಮೌನವಾಗಿ ಸಾಗಿತ್ತು. ಸರೋಜಮ್ಮನೂ ಅಷ್ಟು ಮಧ್ಯದಲ್ಲಿ ಹೆಚ್ಚೇನೂ ಮಾತನಾಡಲಿಲ್ಲ. ಮೂವರ ಮನಸ್ಸಿನ ಕೇಂದ್ರ ಒಂದೇ. ಅದರ ಸ್ಫೋಟವಾಗಲು ಮೂವರೂ ಕಾತರರಾಗಿದ್ದರು. ಆದರೆ ಸ್ಫೋಟಗೊಳಿಸುವವರಾರು ಎಂಬುದೇ ಪ್ರಶ್ನೆ. ಅದು ಸ್ಫೋಟಗೊಳಿಸುವಷ್ಟರ ತನಕ ಯಾವ ಮಾತುಕತೆಗೂ ಕಳೆಯಿಲ್ಲ. ಒಂದೋ ಸಪ್ಪೆ ಅಥವಾ ತೀರ ಗಂಭೀರ.

ಊಟದ ಮೇಲೆ ಸದಾನಂದ ರೇಡಿಯೋ ಹಾಕಿಕೊಂಡು ಕುಳಿತ. ನರ್ಸಪ್ಪಯ್ಯನವರು ತಮ್ಮ ವಿಶ್ರಾಂತಿ ಕೋಣೆಗೆ ಹೋಗಿ ಮಲಗಿಕೊಂಡರು. ಸರೋಜಮ್ಮ ಹತ್ತು ನಿಮಿಷ ಸದಾನಂದನ ಹತ್ತಿರ ಕುಳಿತು ರೇಡಿಯೋದ 'ಬೆಂಗಳೂರಿನ ಕಾರ್ಯಕ್ರಮ' ಮುಗಿಸಿಕೊಂಡು ಎದ್ದು ಒಳಗೆ ಹೋದರು.

ಹಗಲಿನ ಸಣ್ಣನಿದ್ದೆಯಿಂದ ಎದ್ದು ಮುಖತೊಳೆದುಕೊಂಡು ಚಾವಡಿಗೆ ಬಂದರು ನರ್ಸಪ್ಪಯ್ಯನವರು. ಗಂಡ ಎದ್ದುದನ್ನು ನೋಡಿ, ಕಾಫಿ ಸಿದ್ಧತೆಯಲ್ಲಿ ತೊಡಗಿದ್ದ ಸರೋಜಮ್ಮ – ತಂದೆ ಮಗ ಮಾತನಾಡುತ್ತಿದ್ದಂತೆ ಒಳಗೆ ಕಾಫಿಗೆ ಕರೆದರು. ಕಾಫಿ ಕುಡಿಯುತ್ತಿದ್ದಂತೆ ನರ್ಸಪ್ಪಯ್ಯನವರು ಸದಾನಂದನ ಕಡೆಗೆ ನೋಡಿ ಹೇಳಿದರು. "ಸಂಜೆ ಹೊತ್ತು ಲಾಲ್‌ಬಾಗಿಗೆ ಹೋಗೋಣ ಸದಾನಂದ. ನಾನು ಹೋಗದೆ ಬಹಳ ಸಮಯವಾಯ್ತು, ನೋಡು. ಈ ಕೋರ್ಟಿನ ವ್ಯವಹಾರವೇ ಹಾಗೆ. ಒಂದು ದಿನವೂ ಬಿಡುವಿಲ್ಲ".

ಸದಾನಂದ ಹ್ಞೂಗುಟ್ಟಿದ. ನರ್ಸಪ್ಪಯ್ಯನವರು ಲಾಲ್‌ಬಾಗಿಗೆ ಹೋಗೋಣ ಎನ್ನುವುದರ ಉದ್ದೇಶದ ಸ್ಪಷ್ಟ ಕಲ್ಪನೆ ಅವನಿಗಾಗಿತ್ತು. ಅವನ ಬುದ್ಧಿ ತರ್ಕಿಸಬೇಕಾದ ವಿಷಯಗಳ ಬಗ್ಗೆ ಮುಂಜಾಗರೂಕತೆಯ ಮುನ್ನೆಚ್ಚರಿಕೆ ವಹಿಸಿತು. ಆತ ತಿಂಡಿ ತಿಂದು ಕೈತೊಳೆದನು. ಕೊಠಡಿಗೆ ಹೋಗಿ ಡ್ರೆಸ್ಸು ಮಾಡಿ ಬಂದ.

ತಂದೆ ಮಗ ಇಬ್ಬರೂ ಹೊರಟು ಮಾರ್ಗಕ್ಕೆ ಇಳಿ



ಯುವುದನ್ನು ನೋಡಿದಳು ಸರೋಜಮ್ಮ. 'ತನ್ನೆದುರಿಗೆ ಇವರಿಗೆ ಪ್ರಸ್ತಾಪಿಸುವ ಇಷ್ಟವಿಲ್ಲವಲ್ಲ? ತಾನೇನು ಮಾಡುತ್ತೇನೆ ಇವರಿಗೆ?' ಎಂಬ ಸಿಟ್ಟೂ ಬಂತು ಗಂಡನಲ್ಲಿ. ಏನೇ ಆಗಲಿ ಅವರು ಬಂದ ಮೇಲೆ ನೇರವಾಗಿ ಕೇಳಿಯೇ ಬಿಡಬೇಕು ತಾನು ಸದಾನಂದನಲ್ಲಿ. ತನಗೇನು ಕೇಳುವ ಹಕ್ಕಿಲ್ಲವೇ? ಎಂದುಕೊಂಡಳು ಅವಳು.

ಲಾಲ್‌ಬಾಗಿನಲ್ಲಿ ಒರಗು ಬೆಂಚಿನ ಮೇಲೆ ತಂದೆ ಮಗ ಇಬ್ಬರೂ ಹೋಗಿ ಕುಳಿತರು. ಸಂಜೆಯ ಹೊಂಬಿಸಿಲು ಹೂಗಿಡಗಳ, ಮರಬಳ್ಳಿಗಳ ಮೇಲೆ ಬಿದ್ದು ಲಾಲ್‌ಬಾಗ್ ರಮಣೀಯವಾಗಿ ಕಂಗೊಳಿಸುತಿತ್ತು.

ಎರಡು ನಿಮಿಷದ ಮೌನದ ಮೇಲೆ ಸಿಗರೇಟು ಹಚ್ಚಿದ ನರ್ಸಪ್ಪಯ್ಯನವರು, ಸದಾನಂದನ ಮುಖ ನೋಡದೆ, ಅವನಿಗೆ ಹೇಳಿದರು. "ನೀನು ಬರೆದ ಪತ್ರ ಬಂದಿದೆ ಸದಾನಂದ. ನಿನ್ನ ಅಭಿಪ್ರಾಯವನ್ನು ಇನ್ನು ಬದಲಿಸಲು ಸಾಧ್ಯವೇ ಇಲ್ಲವೇ?"

"ಇಲ್ಲ ಎಂದು ಅಲ್ಲ, ಅಪ್ಪಯ್ಯ. ಬದಲಿಸುವ ಆವಶ್ಯಕತೆಯಾದರೂ ಏನು?"

"ಪ್ರಶ್ನೆ ಬಹಳ ಸುಲಭದಲ್ಲಿ ಹಾಕಬಹುದು ಸದಾನಂದ. ಆದರೆ ಯಾವುದಕ್ಕೇ ಆಗಲಿ ಉತ್ತರಿಸುವದು ಕಷ್ಟ. ಪ್ರಶ್ನೆ ಅಂತ ಅನಿಸಬೇಕಾದರೆ, ಉತ್ತರವಿಲ್ಲದೆ ಅದು ಪ್ರಶ್ನೆಯಾಗದು. ಮನುಷ್ಯ ಯಾವಾಗಲೂ ವಿಚಾರಶೀಲ. ಸಮಾಜ ಜೀವಿ. ಸಮಾಜ ಬಿಟ್ಟು ಆ ಸಮಾಜ ಹಾಕಿದ ಕಟ್ಟುಕಟ್ಟಳೆ ಬಿಟ್ಟು, ಥಕ್ಕನೆ ಸುಧಾರಣೆ ಅಂತ ಒಮ್ಮೆಲೇ ಒಬ್ಬನೇ ಮುನ್ನುಗ್ಗಿದರೆ ಅದಕ್ಕೆ ಬೆಲೆ ಬರಲಿಕ್ಕಿಲ್ಲ. ನೀನು ಅವಳನ್ನು ಮೆಚ್ಚಿರಬಹುದು. ಅವಳು ನಿನ್ನನ್ನು ಒಪ್ಪಿರಬಹುದು. ಸಮಾಜ ಇದನ್ನು ಎಷ್ಟರ ಮಟ್ಟಿಗೆ ಒಪ್ಪುತ್ತದೆ? ಒಪ್ಪೀತು? ನಿನ್ನ ತಂದೆ ತಾಯಂದಿರು ಹೇಗೆ ಅಂದಾರು ಎಂಬ ಸೂಕ್ಷ್ಮ ಕಲ್ಪನೆಯೂ ಇಲ್ಲದೆ, ಇದೇ ನನ್ನ ಕೊನೆಯ ನಿರ್ಧಾರ, ಅದೇ ಅಭಿಪ್ರಾಯ ಅಂದರೆ ಅದು ಅಷ್ಟು ಸಮಂಜಸ ಅನಿಸೋದಿಲ್ಲ ನನಗೆ."

"ಅಂದರೆ ನಿಮಗೆ ನಮ್ಮ ಮದುವೆಗೆ ಸಮ್ಮತಿ ಇಲ್ಲ ಅನ್ನಿ ಅಪ್ಪಯ್ಯಾ! ಇನ್ನು ಸಮಾಜದ ಬಗ್ಗೆ. ಸಮಾಜ ಮನುಷ್ಯನಿಗೆ ಬೆಲೆಯೇ ಕೊಡೋದಿಲ್ಲ. ದುಡ್ಡಿದ್ದರೆ ಯಾರೂ ಗಣ್ಯ ವ್ಯಕ್ತಿಯಾದಾನು. ದುಡ್ಡಿಲ್ಲದಿದ್ದರೆ ಎಷ್ಟೇ ವಿಚಾರವಂತನಾದರೂ ಆತನನ್ನು ಅದು ಹೀನಾಯವಾಗಿ ಕಂಡೀತು. ಸಮಾಜದ ದೃಷ್ಟಿಯಿಂದ ಅದಕ್ಕೆ ಹೆದರಿ ಅಥವಾ ಅದರ ಅಭಿಪ್ರಾಯ ನನಗೆ ಮುಖ್ಯವಲ್ಲ. ನಾನು ಕೇಳೋದು ನಿಮ್ಮ ಒಪ್ಪಿಗೆ ಅಷ್ಟೆ."

"ಒಪ್ಪಿಗೆ ಕೊಡೋದು ಅಂದರೆ ಅದೇನು ಅಷ್ಟು ಸುಲಭವಾ ಸದಾನಂದ? ನಿನ್ನನ್ನೇ ನೀನು ನೋಡಿಕೋ! ಒಬ್ಬ ಎಂ.ಬಿ.ಬಿ.ಎಸ್. ಡಾಕ್ಟ್ರು ಬರೇ ಒಬ್ಬಳು ಸಿಸ್ಟರನ್ನು ಮದುವೆಯಾಗೋದು ಅಂದ್ರೆ ಏನು? ಬೇಡ, ನನ್ನನ್ನೇ ಉದಾಹರಣೆ ತೆಗೆದುಕೊ. ಒಬ್ಬ ಮೇಜಿಸ್ಟ್ರೇಟನಿಗೆ ಒಬ್ಬಳು ನರ್ಸ್ ಸೊಸೆಯಾಗಿ ಬರುವುದೆಂದರೆ ಏನು? ಬರೇ ಲವ್ ಅಂತ ಕತೆ ಕಾದಂಬರಿಗಳ ನಾಯಕರ ಹಾಗೆ ಛಲ ಹಿಡಿದರೆ, ಹಿಡಿದದ್ದೇ ಸರಿ ಅಂದರೆ ಅದು ನಿನಗೆ ಹೇಗಾಗುತ್ತದೆ ಹೇಳು?"

"ನರ್ಸ್ ಅಂದರೆ ಅಷ್ಟು ಕೀಳು ಅಂತ ನಿಮ್ಮ ಭಾವನೆಯಾ ಅಪ್ಪಯ್ಯಾ? ಗಾಂಧೀಜಿ ಎಷ್ಟು ಸಣ್ಣ ಕೆಲಸವಾದರೂ ಮಾಡುತ್ತಿರಲಿಲ್ಲವಾ? ನೋಡಿ. ವೃತ್ತಿ, ಪ್ರತಿಗತಿ ಮುಖ್ಯವಲ್ಲ. ವ್ಯಕ್ತಿ ಅವನ ಗುಣ ನೋಡಿ ಪ್ರೀತಿ ಬೆಳೆಯುತ್ತದೆ. ಪ್ರೀತಿಯ ಎದುರು ನರ್ಸ್, ಡಾಕ್ಟರು, ಇಂಜನೀಯರ್ ಎಂಬ ಭೇದವಿಲ್ಲ ಅದು ಎಲ್ಲರಿಗೂ ಒಂದೇ."

ಯಾವುದಾದರೇನು? ಇಲ್ಲಿ ಕೆಲಸಕ್ಕಿಂತಲೂ ಮುಖ್ಯ ಪ್ರಶ್ನೆ. ಸಮಾಜದ ಸ್ಥಾನಮಾನದ ಬಗ್ಗೆ. ಅದೂ ಅಲ್ಲದೆ ಅವಳು ವಿಧವೆಯಾದುದರಿಂದಲೇ ನರ್ಸು ಕೆಲಸಕ್ಕೆ ಸೇರಿದ್ದು. ಒಮ್ಮೆ ಒಬ್ಬನ ಕೈ ಹಿಡಿದವಳನ್ನು, ಒಮ್ಮೆ ಒಬ್ಬನನ್ನು ಪ್ರೀತಿಸಿದವಳನ್ನು ಪುನರ್‌ವಿವಾಹ ವಾಗುವುದು ಎನ್ನುವಾಗ ನಿನಗೇನೋ ಅದು ಸರಿ ಎಂದು ಅನಿಸಿತಾದರೂ ಬೆಂಗಳೂರಲ್ಲಿ ನಾನು ಹೇಗೆ ತಲೆಯೆತ್ತಿ ನಡೆಯಬೇಕು ನೀನೇ ಹೇಳು?"

"ಅವಳಿಗೆ ಬರೇ ಹೆಸರಿಗೆ ಮಾತ್ರ ಒಮ್ಮೆ ಮದುವೆ ಮಾತ್ರ ಆಗಿದೆ ಅಷ್ಟೆ ಅಪ್ಪ. ಬರೆ ಹತ್ತು ದಿನಗಳಲ್ಲೇ ಆಕೆ ಗಂಡನನ್ನು ಕಳೆದುಕೊಂಡಿದ್ದಾಳೆ. ಪ್ರೀತಿಸುವುದು ಅಂದರೆ ಹೇಗೆ? ಎನ್ನುವಷ್ಟರಲ್ಲೇ ಅವಳ ಗಂಡ ಇಹ ಲೋಕ ತ್ಯಾಗ ಮಾಡಿದ್ದಾನೆ. ನನ್ನ ದೃಷ್ಟಿಯಲ್ಲಿ ಆಕೆ ಕನ್ಯೆ. ಅವಳನ್ನು ಮದುವೆಯಾಗುವುದರಲ್ಲಿ ಯಾವುದೇ ತಪ್ಪಿಲ್ಲ ಅಂತ ನನ್ನ ಭಾವನೆ. "

"ತಪ್ಪು– ಸರಿಯ ಪ್ರಶ್ನೆ ಇದಲ್ಲ. ನಾನು ಮಾತ್ರ ಇಷ್ಟು ಹೇಳಬಲ್ಲೆ. ನೀನು ಓದಿದವ, ನೀನು ತಿಳಿದವ. ಏನೋ ಹುಡುಗಾಟಕೆಯಿಂದ ಕಾಲುಜಾರಿದ್ದಿ. ಈಗ ಸರಿ ತಿದ್ದಿಕೊಂಡರಾಯಿತು. ಇದನ್ನೆಲ್ಲ ಮರೆತು ಬಿಟ್ಟು ಆರಾಮವಾಗಿ ಹತ್ತು ದಿನ ಇಲ್ಲೇ ಇದ್ದು ಮತ್ತೆ ಪ್ರ್ಯಾವೇಟ್ ಪ್ರ್ಯಾಕ್ಟೀಸ್ ಮಾಡು ಬೆಂಗಳೂರಲ್ಲೆ. ಬೇಕಾದರೆ ಒಮ್ಮೆ ಕಲ್ಕತ್ತೆಗೆ ಹೋಗಿ ಬಾ. ಅಥವಾ ಮದ್ರಾಸಿಗೋ; ಎಲ್ಲಿ ಬೇಕೋ ಅಲ್ಲಿ ಹೋಗಿ ಮನಸ್ಸು ಸ್ವಚ್ಛ ಮಾಡಿಕೊ. ಆಮೇಲೆ ನೀನು ಒಪ್ಪುವ ಹುಡುಗಿಯನ್ನು ಮದುವೆ ಮಾಡಿಕೊ. ವಾಸುದೇವರಾಯರ ಮಗಳಲ್ಲಿ ಮನಸ್ಸಿಲ್ಲದಿದ್ದರೆ ಇನ್ನೂ ಹತ್ತು ಕಡೆ ನೋಡೋಣ, ವಿಚಾರಿಸೋಣ. ಅದಕ್ಕೇನಂತೆ. ಆದರೆ ಇದು ಮಾತ್ರ ನಮಗೆ ಸಮ್ಮತವಲ್ಲ".

"ಇದುವೇ ನಿಮ್ಮ ಕಡೆಯ ನಿರ್ಧಾರವೋ ಅಪ್ಪಯ್ಯಾ?"

ದಂತೆಯೇ ಆಯಿತು. ತಂದೆ – ತಾಯಿಯ ಒಪ್ಪಿಗೆ ಪಡೆದು ವಸಂತಿಯನ್ನು ಕೈ ಹಿಡಿಯುವ ಹಾಗೇ ಇಲ್ಲ. ಪ್ರೇಮದ ಕಲ್ಪನೆಯೇ ಅವರಿಗಿಲ್ಲ. ಏನೊ, ಹುಡುಗಿಯ ಹುಚ್ಚು ಹಿಡಿದಿದೆ ಅದಕ್ಕೆ ಅವಳಿಗೆ ತಾಗಿದೆ ಎಂಬ ಆಲೋಚನೆ ಇವರಿಗೆ. ಎಂತಹ ತಪ್ಪುಕಲ್ಪನೆಗಳು ಇವು? ಸದಾನಂದ ಮೌನವಾಗಿ ತನ್ನಲ್ಲೇ ಹೇಳಿಕೊಂಡು ನಿರಾಶೆಯ ನಿಟ್ಟುಸಿರು ಬಿಟ್ಟ.

"ಏನು ಸದಾನಂದ ಯಾಕೆ ಸುಮ್ಮನಾದೆ? ಹ್ಞೂ ನಿನ್ನ ಮನಸ್ಸಿನಲ್ಲಿದ್ದುದನ್ನು ಹೇಳು" ನರ್ಸಪ್ಪಯ್ಯನವರು ಮಗ ಸುಮ್ಮನಾದುದನ್ನು ನೋಡಿ, ಎಚ್ಚರಿಸಿದರು.

"ಹೇಳುವುದೇನೂ ಉಳಿದಿಲ್ಲ ಅಪ್ಪಯ್ಯಾ. ನಾನು ಹೇಳಿದ್ದು ಹೇಳಿದ ಹಾಗೇ ಇದ್ದರೆ, ನಿಮ್ಮ ಹಟ ನಿಮ್ಮಲ್ಲೇ ಇದ್ದರೆ ಇದರ ಇತ್ಯರ್ಥ ಹೇಗೆ? ಅಂತೂ ನಿಮ್ಮದು ಖಡಾಖಂಡಿತ ಮಾತಷ್ಟೇ ಇದು?"

"ಹ್ಞೂ" ಎಂದರು ನರ್ಸಪ್ಪಯ್ಯನವರು ದೃಢವಾಗಿ. ಮತ್ತೆ ಕೆಲ ನಿಮಿಷ ಮೌನವಾಯಿತು ವಾತಾವರಣ. ಸದಾನಂದ ಬೆಂಚಿನಿಂದ ಇಳಿದು ಹೇಳಿದ, "ಆರು ಗಂಟೆ ಆಯಿತಪ್ಪ ಹೊರಡೋಣ".

"ಗಂಟೆ ಎಷ್ಟೇ ಆದರೂ ಪರವಾಯಿಲ್ಲ. ನಿನ್ನದೇನು ನೀನು ಹೇಳಲೇ ಇಲ್ಲವಲ್ಲ" ಎಂದರು ನರ್ಸಪ್ಪಯ್ಯನವರು, ಕುತೂಹಲದಿಂದ.

"ನನ್ನದೇನು ಉಳಿದಿದೆ ಇನ್ನು? ಇದನ್ನೆಲ್ಲ ನೋಡುವಾಗ ನನಗೆ ಎಲ್ಲವನ್ನೂ ಬಿಟ್ಟು ಕೋಳ್ಯೂರಿಗೆ ಹೋದರೇಕೆ ಆಗಬಾರದು ಅನಿಸುತ್ತದೆ" ಎಂದ ಸದಾನಂದ.

"ಏನು ಕೋಳ್ಯೂರಿಗೆ? ಏನೋಪ್ಪಾ ಎಂತಹ ಆಲೋಚನೆಗಳೋ ಏನೋ ನಿನ್ನವು? ಈಗ ನಿನಗೆ ಆದ

"ಹುಚ್ಚು ಓಡಿಸುವುದು ಇರಲಿ ಅಪ್ಪಯ್ಯಾ! ಅಲ್ಲಿಗೆ ಹೋಗಿ ನೆಲೆಸುವುದಾದರೆ ನಿಮ್ಮದೇನೂ ಅಡ್ಡಿ ಇಲ್ಲ ತಾನೆ?" ನಿರಾಶೆಯ ಘೋರಾಂಧಕಾರದಲ್ಲಿ ಸದಾನಂದ ಬೆಳಕನ್ನು ಅರಸಿ ಪ್ರಶ್ನಿಸಿದ.

"ಇವಳನ್ನು ಮದುವೆಯಾಗಿ ಇರುವುದಕ್ಕಿಂತ ಅದೆಷ್ಟೋ ವಾಸಿ! ದಮ್ಮಯ್ಯ ಹೋಗು ಅನ್ನುತ್ತೇನೆ ನಾನು."

ನರ್ಸಪ್ಪಯ್ಯ ಹಾಗೆ ಹೇಳುವಾಗ ಅವರ ಮುಖದಲ್ಲಿ ಯಾವ ಭಾವ ಇತ್ತೆಂಬುದನ್ನು ಸದಾನಂದನಿಗೆ ನೋಡಲಾಗಲಿಲ್ಲ. ಅವರ ಹಿಂದಿನಿಂದ ಹೆಜ್ಜೆ ಹಾಕುತ್ತಿದ್ದ ಅವನು ಮುಂದಿನ ಭವಿಷ್ಯವನ್ನು ಯೋಚಿಸುತ್ತ ಅವರನ್ನೇ ಅನುಸರಿಸಿ ಮುಂದೆ ಸಾಗಿದ.

ಲಾಲ್‌ಬಾಗಿನಿಂದ ಹೊರಗೆ ಬರುವಾಗ ಸಿಕ್ಕಿದ ಸಿಟಿ ಬಸ್ಸು ಹತ್ತಿ ಇಬ್ಬರೂ ಮನೆಯತ್ತ ಬಂದರು. ಮನೆಯ ಒಳಗೆ ಕಾಲಿಡುತ್ತಲೇ ಬಾಗಿಲಲ್ಲಿ ಇದಿರುಗೊಂಡ ಸರೋಜಮ್ಮ ನರ್ಸಪ್ಪಯ್ಯನವರನ್ನು ಕೇಳಿದಳು.

"ಏನಾಯ್ತು, ನಿಮ್ಮ ಮಗನ ಮದುವೆಯ ವಿಚಾರ? ಒಪ್ಪಿಗೆ ಕೊಟ್ಟು ಬಂದಿರಾ?"

ಅವಳ ಮಾತಿನಲ್ಲಿ ಅಡಗಿದ್ದ ವ್ಯಂಗ್ಯವನ್ನು ಗುರುತಿಸಿದ ನರ್ಸಪ್ಪಯ್ಯನವರು ಕಟುವಾಗಿಯೇ ಹೇಳಿದರು.

"ನನಗೆ ಮಾತ್ರ ಮಗನಲ್ಲ ಅವನು. ನಿನಗೂ ಕೂಡಾ. ನಿನ್ನ ಒಪ್ಪಿಗೇನೂ ಇಲ್ಲದೆ ಅವನ ಮದುವೆ ಆಗುತ್ತಾ?"

"ಏನು ನನ್ನ ಒಪ್ಪಿಗೇನಾ? ಅವನು ಆ ನರ್ಸನ್ನು ಈ ಮನೆಯ ಒಳಗೆ ತರಬೇಕಾದರೆ ನಾನು ಸಾಯಬೇಕು. ನಾನು ಜೀವಂತ ಇರುವಾಗ ಅವಳು ಬಂದು ಇದು ಆಸ್ಪತ್ರೆಯಾಗುವುದು ಬೇಡ. ಅಷ್ಟು ಉಪಕಾರ ಮಾಡಿದರೆ ಸಾಕು ಅಂತ ನಿಮ್ಮ ಮಗನಿಗೆ ಹೇಳಿ. ತಾಯಿಯ ಮಾತುಗಳು ಕಿವಿಯನ್ನು ಚುಚ್ಚುತ್ತಿದ್ದುದನ್ನು ಕೇಳುತ್ತಾ ಮೆಟ್ಟಲಲ್ಲಿ ನಿಂತಿದ್ದ ಸದಾನಂದನಿಗೆ ನಿಂತಲ್ಲೇ ತಲೆ ತಿರುಗಿ ಬಂತು. ಅವನ ಕನಸಿನ ಬಳ್ಳಿ, ಗ್ರೀಷ್ಮ ಭೀಷಣತೆಗೆ ಒಣಗಿ ಅಪ್ಪಿದ ಮರವನ್ನು ಬಿಟ್ಟು ಒಮ್ಮೆಲೆ ಕೆಳಗೆ ಕುಸಿದು ಬಿತ್ತು.

ಸದಾನಂದ ಮಾತನಾಡಲಿಲ್ಲ. ಮೌನವಾಗಿ ಒಳಗೆ ಬಂದ ಆ ಒಂದು ಮಾತಿನಿಂದ ಮುಂದೆ ಯಾವುದನ್ನಾಡುವ ಶಕ್ತಿಯನ್ನೂ ಆತ ಆಗಲೇ ಕಳೆದುಕೊಂಡ.

೬

ಮೈಸೂರಿಗೆ ತಲುಪುವ ಮೊದಲೇ ಸದಾನಂದ ತಾನು ಕೋಳ್ಯೂರಿಗೆ ಹೋಗುವುದರ ಬಗ್ಗೆ ನಿರ್ಧಾರ ಮಾಡಿದ್ದ. ತಾನು ವಸಂತಿಯನ್ನು ಬಯಸಿದರೂ ತನ್ನ ಮತ್ತು ಅವಳ ಮದುವೆ ಕೇವಲ ಕನಸಿನ ಮದುವೆಯಾಗಿಯೇ ಉಳಿಯಿತೆಂಬ ಕೊರಗಿಗೆ ಪರಿಹಾರ ಆತ ಕಂಡುಕೊಂಡದ್ದು ಅದೊಂದೇ. ಮೈಸೂರಿನಲ್ಲಿ ಇನ್ನು ತಾನು–ವಸಂತಿ ಇರುವಷ್ಟರ ತನಕ ಕೆಲಸ ಮಾಡುವ ಹಾಗಿಲ್ಲ, ತನ್ನ ಮನಸ್ಸು ಅವಳನ್ನು ಬಯಸದೆ ಇರಲಿಕ್ಕಿಲ್ಲ; ಬೆಂಗಳೂರಿನಲ್ಲಿ ನೆಲೆಸಿ ಪ್ರ್ಯಾವ್ಹೇಟ್ ಪ್ರ್ಯಾಕ್ಟಿಸ್ ಮಾಡುವುದಕ್ಕಿಂತ ನೂರಾರು ಡಾಕ್ಟರುಗಳೊಂದಿಗೆ ತಾನೂ ಒಬ್ಬನಾಗಿರುವುದಕ್ಕಿಂತ, ತನ್ನ

ಹಿರಿಯರ ಊರಿಗೆ ಹೋಗಿ, ಅಲ್ಲಿ ಯಾಕೆ ತಾನು ತನ್ನ ವಿದ್ಯೆಯ ಸದುಪಯೋಗವನ್ನು ಮಾಡಬಾರದು ಎನಿಸಿತು ಅವನಿಗೆ.

ಒಂದೆರಡು ದಿನಗಳಲ್ಲಿ ಅವನ ಆಶೆ–ಕೋಳ್ಳೂರಿನ ಕರೆ – ಪ್ರಬಲವಾಯಿತು. ಹಠಾತ್ತನೇ ತಾನು ಹೊರಟು ಹೋದರೆ ಒಮ್ಮೆಲೇ ತಾನು ಏನು ಮಾಡಬೇಕು? ಹೇಗೆ ಅಲ್ಲಿ ಉಳಕೊಳ್ಳಬೇಕು? ಎಂಬುದರ ಬಗ್ಗೆ ಆತ ಯೋಚಿಸಿದ. ತಾನು ಊರಿಗೆ ಬರುವುದಾಗಿಯೂ, ಮುಂದೆ ಅಲ್ಲಿಯೇ ನೆಲೆಸಿ, ಪ್ರ್ಯಾಕ್ಟೀಸ್ ಮಾಡುವುದಾಗಿಯೂ ಆತ ಸುಬ್ರಾಯ ಕಾರಂತರಿಗೆ ಪತ್ರ ಬರೆದಿದ್ದ. ಅವರ ಪ್ರತಿಕ್ರಿಯೆಯನ್ನು ಕಾದು ನೋಡುತ್ತಿದ್ದ ಅವನಿಗೆ ಅವರ ಅವಸರದ ಕಾಗದ ಬಂದು, ನೀರಲ್ಲಿ ಬಿದ್ದವನಿಗೆ ದಡ ಕಾಣಿಸಿದಂತೆ ಆಯಿತು. ಕಾರಂತರು ಸಂಪೂರ್ಣ ಸಹಾಯ ಕೊಡುವುದಲ್ಲದೆ ಸದಾನಂದ ಬಂದು ಊರಲ್ಲಿ ನೆಲೆಸುವುದಾದರೆ ಅವರು ಹಿರಿಯರ ಮನೆಯನ್ನೆಲ್ಲ ಸ್ವಚ್ಛಗೊಳಿಸಿ [ಇಷ್ಟರವರೆಗೆ ಮನೆಯಲ್ಲಿ ಜನ ವಾಸಿಸುತ್ತಿರಲಿಲ್ಲ. ಅವರಿಗೆ ಅದರ ಉಪಯೋಗ ಇದ್ದುದು– ಬರೇ "ಗೋಡೌನ್"ನಂತೆ ಅಷ್ಟೆ!] ಅವನ ವಾಸಕ್ಕೆ ಬೇಕಾದ ಎಲ್ಲಾ ಉಪಕರಣಗಳನ್ನು ಜನರನ್ನೂ ಒದಗಿಸುವ ಆಶ್ವಾಸನೆಯನ್ನೂ ಇತ್ತು ಪತ್ರ ಬರೆದಿದ್ದರು.

ಕಾರಂತರ ಕಾಗದ ಬಂದ ಮೇಲೆ ಸದಾನಂದ ಮುಂದಿನ ಕಾರ್ಯಕ್ರಮದ ಲೆಕ್ಕ ಹಾಕಿದ. ಮೊದಲು ತಮ್ಮ ಮದುವೆಯ ಬಗ್ಗೆ ತಾನು ಪಟ್ಟ ಶ್ರಮ ಮತ್ತು ಅದಕ್ಕೆ ತನ್ನ ಹೆತ್ತವರ ವಿರೋಧ ಇದ್ದುದನ್ನು ಸವಿಸ್ತಾರವಾಗಿ ಬರೆದು– ವಸಂತಿಯ ಕ್ಷಮೆ ಕೋರುವಂತೆ ಒಂದು ಪತ್ರ ಬರೆದ. ಮರುದಿನ ಆಸ್ಪತ್ರೆಯ ಡ್ಯೂಟಿಗೆ ಹೋದವ, ತನ್ನ ಎಲ್ಲ ಕೆಲಸ ಮುಗಿದ ಮೇಲೆ ಕೊಠಡಿಯಲ್ಲಿ ಕುಳಿತ್ತಿದ್ದಾಗ, ಅಲ್ಲಿಗೆ ಮುಗುಳು ನಗುತ್ತಾ ಬಂದ ವಸಂತಿಯ ಕೈಯಲ್ಲಿ ಬರೆದ ಪತ್ರವನ್ನು ಇರಿಸಿ ಹೇಳಿದ.

"ವಸಂತಿ ದಯವಿಟ್ಟು ಈ ಪತ್ರವನ್ನು ಓದು. ಆದರೆ ಇಲ್ಲಿ ಓದಿ ನನ್ನನ್ನು ಕಂಗಾಲು ಮಾಡಬೇಡ. ನಿಮ್ಮ ರೂಮಿಗೆ ಹೋಗಿ ರಾತ್ರಿ ಬಿಡುವುಮಾಡಿ ಓದಿ– ಆ ಕಾಗದವನ್ನು ಸುಟ್ಟುಹಾಕು. ಮತ್ತು ನನ್ನನ್ನು ಸಂಪೂರ್ಣ ಮರೆತುಬಿಡು."

ಸದಾನಂದ ಹಾಗೆ ಹೇಳುವಾಗ ಅವನ ಕಂಠ ತುಂಬಿ ಬರುತ್ತಿತ್ತು. ಅದನ್ನು ಕೇಳುತ್ತಿದ್ದ ವಸಂತಿಗೆ ಸಹಿಸಲಾಗಲಿಲ್ಲ. ಪತ್ರದಲ್ಲಿ ಏನು ಬರೆದಿದೆಯೋ ಎಂಬ ಅಂಜಿಕೆ ಅವಳ ಎದೆ ಬಡಿತವನ್ನು ಜೋರಾಗಿಸಿತು. ಅವಳು ಏನೂ ಹೇಳಲು ತೋಚದೆ, "ಹಾಗಾದರೆ ಈ ಪತ್ರ ನಿಮ್ಮಲ್ಲೇ ಇರಲಿ. ಡಾಕ್ಟರ್, ನಾನಿದನ್ನು ಓದಲಾರೆ."

"ಇಲ್ಲ ನೀನು ಓದಲೇಬೇಕು"

"ಬೇಡ ನಾನು ಓದಲಾರೆ."

"ವಸಂತಿ, ನೀನು ನನ್ನನ್ನು ಪ್ರೀತಿಸುವುದಾದರೆ ಮಾತ್ರ ಕಾಗದವನ್ನು ಓದು. ಇಲ್ಲ, ವಾಪಾಸು ಕೊಡು. ನಾನೇ ಅದಕ್ಕೆ ಬೆಂಕಿ ಇಟ್ಟು ಹೊತ್ತಿಸುತ್ತೇನೆ."

"ಕ್ಷಮಿಸಿ, ಖಂಡಿತ ಓದುತ್ತೇನೆ?" ಎಂದಳು ವಸಂತಿ. ಪತ್ರವನ್ನು ಮಡಚಿ ಕೈಯಲ್ಲಿ ಹಿಡಿದುಕೊಂಡವಳು– ಮತ್ತೆ, ಅಲ್ಲಿ ನಿಲ್ಲಲಾರದೆ ಅವಳು ಹೊರಗೆ ಹೋದಳು.

ಸದಾನಂದ ನಿರ್ವಿಣ್ಣನಾಗಿ ವೈರಾಗ್ಯ ಮೂರುತಿಯಂತೆ ಸರ್ಜನರ ಕೋಣೆಯತ್ತ ನಡೆದ.

× × ×

'ಪ್ರಿಯ ವಸಂತಿ,

ಮೊದಲು ನನ್ನನ್ನು ಕ್ಷಮಿಸಿಕೊಂಡು ಈ ಪತ್ರವನ್ನು ಓದು. ನಿರಾಶೆಯ ಜೀವನದಲ್ಲಿ ಬೆಳಕನ್ನು ಅರಸಿ ಕಡೆಗೂ ಅದನ್ನು ಕಂಡುಕೊಂಡ ನಿನ್ನ ಈ ನರ್ಸ್‌ವೃತ್ತಿಯ ಪುನರ್ಜನ್ಮದಲ್ಲಿ ನಾನು ನಿನ್ನ ಕಣ್ಣೆದುರು ಬಂದು, ತಿರುಗಿ ಗಾಳಿಗೆ ಸಿಕ್ಕಿದ ನಾವೆಯ ಹಾಗೆ ನಿನ್ನ ಜೀವನಮೌಲ್ಯದ ಬೇರುಗಳನ್ನು ಹಿಡಿದು ಅಲುಗಾಡಿಸಿ, ಕಡೆಗೆ ಹೇಡಿಯಂತೆ ನಿನ್ನಿಂದ ನಾನು ದೂರವಾಗುತ್ತಿದ್ದೇನೆ. ಈ ತಪ್ಪಿಗಾಗಿ ನನ್ನನ್ನು ಕ್ಷಮಿಸಬೇಕು. ಕ್ಷಮಿಸಿದರೆ ಸಾಲದು, ನಿನ್ನ ಸುಂದರ ನನ್ನು ನೀನು ಹೇಗೆ ಮರೆತಿಯೋ ಹಾಗೇ ನನ್ನನ್ನು ಸಂಪೂರ್ಣ ಮರೆಯಲು ಪ್ರಯತ್ನಿಸು.

ನಾನು ಡಾಕ್ಟರನಾಗಿ, ನೀನು ನರ್ಸಾಗಿ ಎಷ್ಟೋ ರೋಗಿಗಳ ಸೇವೆ ಮಾಡಿದ್ದೇವೆ. ನಮ್ಮ ಕೊನೆಯುಸಿರಿನ ತನಕವೂ ಇದು ಸಾಗಿ ಬರುವಂಥಾದ್ದಾದರೂ ನಮ್ಮ ಅಗಲುವಿಕೆ ಆಗಬಾರದು. ನಾವು ಒಂದೇ ಭಾವಣೆಯ ಒಳಗೆ ಬೇಯಿಸಿ ತಿನ್ನಬೇಕು, ಮಲಗಬೇಕು, ಬದುಕಬೇಕೆಂಬ ಆಸೆ ಕಟ್ಟಿಕೊಂಡೆವು. ಆದರೆ ಸಮಾಜದ ರೀತಿನೀತಿಗಳು ಇದನ್ನು ಒಪ್ಪಲಾರವು. ಯಾಕೆ ಎಂಬುದು ನಿನಗೆ ತಿಳಿದೇ ಇದೆ. ಆದರೆ, ಸಮಾಜಕ್ಕೆ ಅಂಜಿ ನಾನು ನಿನ್ನನ್ನು ವಂಚಿಸಲಾರೆ. ಕೈ ಬಿಡಲಾರೆ. ಅದಕ್ಕಿಂತಲೂ ಮುಖ್ಯ ನನ್ನ ಹೆತ್ತವರದ್ದು. ನನ್ನ ಹೆತ್ತವರ ಮನ ನೋಯಿಸಿ ನಾನು ನಿನ್ನ ಕೈಹಿಡಿದರೆ– ನಾಳಿನ ಭವಿಷ್ಯದಲ್ಲಿ ಆಸೆ ಇರುವ ನಾನು ನಾಳೆ ನನ್ನ ಮಕ್ಕಳು ಏನು ಮಾಡಿಯಾರೆಂಬುದರ ಬಗ್ಗೆ ಯೋಚಿಸಬೇಡವೇ? ಅದಕ್ಕಾಗಿ ಅಲ್ಲ ದಿದ್ದರೂ ಹೆತ್ತವರ ಋಣಕ್ಕಾಗಿ ನಿನ್ನಿಂದ ನಾನು ದೂರವಾಗುವುದು ಅನಿವಾರ್ಯ.

ಆದರೆ ವಸಂತಿ, ನೀನು ಇಷ್ಟು ತಿಳಿದುಕೊ. ನಿನ್ನ ಹೊರತು ಸದಾನಂದ ಬೇರಾವ ಹೆಣ್ಣಿನ ಮೇಲೂ ಮನಸ್ಸು ಮಾಡಲಾರ. ನೀನು ಇಲ್ಲದಾಗಬೇಕು. ಬಾಳು ಬೇಸರವಾಗಬೇಕು. ಆಗ ಏನಾಗುವುದೋ ಹೇಳಲು ಸಾಧ್ಯವಿಲ್ಲ. ನನ್ನ ಅಗಲುವಿಕೆ ನಿನಗೆ ತುಂಬಾ ಬೇಸರವನ್ನುಂಟುಮಾಡಿದರೂ ನಾನು ನಿನ್ನ ಜೀವನದಲ್ಲಿ ಪ್ರವೇಶಿಸಿಯೇ ಇಲ್ಲವೆಂದು ತಿಳಿದುಕೊ. ನಿಜವಾಗಿಯೂ ಅಷ್ಟೆ. ಚಲನಚಿತ್ರದಂತೆ ಮನುಷ್ಯನ ಋಣಾನುಸಂಬಂಧ. ಅದಕ್ಕಾಗಿ ವ್ಯಥಿಸುವುದು ವ್ಯರ್ಥ.

ನನ್ನ ಮುಂದಿನ ಯೋಜನೆ, ನನ್ನ ಹಿರಿಯರ ಊರಿಗೆ ಹೋಗಿ ನೆಲೆಸುವುದು. ದ. ಕನ್ನಡದ ಒಂದು ಮೂಲೆಯ ಹಳ್ಳಿ, ನೀನು ನೋಡಿರಲಾರೆ. ನಿನಗೆ ಹೇಗೆನಿಸುವುದೋ ಏನೋ! ಆದರೆ ಇಂತಹ ವೇಳೆಯಲ್ಲಿ ಸೇವೆಯ ದೀಕ್ಷೆ ಹೊತ್ತ ಡಾಕ್ಟರರೂ ಎಷ್ಟು ಮಂದಿಯೂ ಸಿಗಬಹುದು. ಹಳ್ಳಿಯಾಚೆ ಮುಖ ಹಾಕುವವರೇ ಇಲ್ಲ. ಸೇವೆ ಮಾಡುವುದಾದರೆ ಮಾಡಬೇಕು–ಅಂತಹ ಹಳ್ಳಿಗಳಲ್ಲಿ. ನಾನು ಸೇವೆಯ ದೀಕ್ಷೆ ಹೊತ್ತು ಅಲ್ಲಿಗೆ ಹೋಗುವುದಿಲ್ಲ, ಅವರಿಗೆ ಉಪಕಾರ ಮಾಡುತ್ತೇನೆಂಬ ಆದರ್ಶದ ಹೆಸರು ಎತ್ತುವುದಿಲ್ಲ. ಮುಖ್ಯವಾಗಿ ನಾನು ಬಯಸುವುದು ನನ್ನ ಬಾಳು- ನನ್ನ ಹಿರಿಯರ ಊರಲ್ಲಿ ಸಾಗಬೇಕು. ನಾನು ಅವರವನಾಗಿಯೇ ಉಳಿಯಬೇಕು!

ನನ್ನ ಇದುವರೆಗಿನ ಬಾಳ್ವೆಯಲ್ಲಿ ನೀನು ನನ್ನ ಮೇಲೆ ಅಗಾಧವಾದ ಪ್ರೀತಿ ವ್ಯಕ್ತಪಡಿಸಿದ್ದೀ. ವಿಶ್ವಾಸ ತೋರಿಸಿದ್ದೀ. ಅದರ ಪ್ರತಿಫಲವಾಗಿ ನನ್ನಿಂದ ನೀನು ಪಡೆದಿರಬಹುದಾದ ಲಾಭವೆಂದರೆ– ಬರೇ ಒಂದು ನಗೆ. ಪರಸ್ಪರ ನಾವು ಪ್ರೇಮಿಸಿದ್ದರೂ ನೀನು ತುಂಬ ಸಂಯಮ ತೋರಿಸಿದ್ದೀ. ಈ ನಿನ್ನ ಎಲ್ಲಾ ಸಜ್ಜನಿಕೆಗೆ ನಾನು ನಿನ್ನ ಕೈಹಿಡಿಯಲೇ ಬೇಕಿತ್ತು. ಆದು ಇಂದು

ಸಾಧ್ಯವಾಗದಾಗಿದೆ. ಮುಂದೆ ಒಂದು ದಿನ ಬರಬಹುದು. ಅಥವಾ ಬಾರದಿರಲೂ ಬಹುದು. ಆದರೂ ಭವಿಷ್ಯವನ್ನು ನಂಬುವ ನಾನೂ ನೀನೂ ಆಶಾವಾದಿಗಳಾಗೋಣ.

ನಿನಗೆ ನಾನು ಬರೆಯುವುದು ಏನೂ ಉಳಿದಿಲ್ಲ. ಹಾಗೆ ಬರೆಯುವಂತಹ ಶಕ್ತಿಯೂ ನನ್ನಲ್ಲಿಲ್ಲ. ನೀನು ನನ್ನನ್ನು ಕ್ಷಮಿಸಿದರೆ, ನನ್ನ ನೆನವರಿಕೆ ನಿನಗೆ ಇದ್ದರೆ ಅಗತ್ಯವಾಗಿ ನನ್ನ ಊರಿಗೆ ಆಗಾಗ ಬರೆ.

ಎಂದೂ ನಿನ್ನ,
ಡಾ. ಸದಾನಂದ.
ಎಂ. ಬಿ. ಬಿ. ಎಸ್.

ಪತ್ರವನ್ನು ಓದುತ್ತಿದ್ದ ಹಾಗೆ ವಸಂತಿಯ ಕಣ್ಣುಗಳು ತುಂಬಿಬಂದುವು. ಅವಳು ಕಾಗದವನ್ನು ಒಮ್ಮೆ ಎದೆಯ ಮೇಲಿಟ್ಟುಕೊಂಡು ಬಿಕ್ಕಿ ಬಿಕ್ಕಿ ಅತ್ತಳು.

ಮೊನ್ನೆ ತಾನೇ ಅವನಾಗಿಯೇ "ನಮ್ಮ ಮದುವೆಗೆ ನಿನಗೆ ಒಪ್ಪಿಗೆಯಾ"? ಎಂದು ಕೇಳಿದವನು ಇಂದು ತನ್ನನ್ನೂ ಸರಕಾರಿ ಕೆಲಸವನ್ನೂ ಬಿಟ್ಟು, ದೂರದ ಹಳ್ಳಿಗೆ ಹೋಗಿ ನೆಲಸುವುದೆಂದರೆ ಏನು? ಪೇಟೆಯಲ್ಲೇ ಬೆಳೆದ- ಕಲಿತ ಸದಾನಂದ ಹಳ್ಳಿಗಾಡಿನಲ್ಲಿ ಹೋಗಿ ಆದರ್ಶದ ಹುಚ್ಚಿನಲ್ಲಿ ಏನು ತಾನೇ ಮಾಡಿಯಾನು? ಆ ಒಂಟಿಜೀವನ, ಹಳ್ಳಿಯವರ ಕುರುಡು ಸಂಪ್ರದಾಯ ಇವೆಲ್ಲವೂ ಆತನಿಗೆ ಹಿಡಿಸೀತೇ? ಒಂದು ವೇಳೆ ಅವನ ಅಪ್ಪ, ಅಮ್ಮ ಮದುವೆಗೆ ಒಪ್ಪಿಗೆ ಕೊಡದಿದ್ದರೂ ಅದೇ ಉದ್ದಿಶ್ಯದಿಂದಲೇ ಊರಿಗಾದರೂ ಏಕೆ ಹೊರಟು ಹೋಗಬೇಕು?

ತಾನು ನಿಜವಾಗಿಯೂ ಹತಭಾಗಿನಿ! ಕೈಗೆ ಬಂದ ತುತ್ತು ತನಗೆ ಇಲ್ಲವಾಯಿತು. ಮದುವೆಯಾದ ಹತ್ತೇ ದಿನದಲ್ಲಿ ತಾನು ಅವರನ್ನು ಕಳೆದುಕೊಂಡ ಮೇಲೆ ಅನಪೇಕ್ಷಿತವಾಗಿ ಸದಾನಂದನ ಸ್ನೇಹ ಲಭ್ಯವಾಗಿತ್ತು. ದಕ್ಷ ಪ್ರಾಮಾಣಿಕನಾದ ಇವನ ಸಖ್ಯ ತನಗೆಷ್ಟು ಹಿಡಿಸಿತು! ತನ್ನ ಮೇಲೆ ಪ್ರಭಾವ ಬೀರಿದ್ದ ಆತ!.

ನೆನಸಿದಂತೆ ವಸಂತಿಯ ದುಃಖ ಏರತೊಡಗಿತು. ಸದಾನಂದನ ಅಗಲುವಿಕೆ ಅವಳಿಗೆ ಆಸ್ಪತ್ರೆಯ ಜೀವನದಲ್ಲೇ–ನರ್ಸ್ ಕೆಲಸದಲ್ಲೇ–ನಿರಾಶೆಯನ್ನುಂಟು ಮಾಡುವಂತಾಗಿತ್ತು. ಎಷ್ಟೋ ಹೊತ್ತಿನ ಮೇಲೆ ಆಕೆ ಅಳು ನಿಲ್ಲಿಸಿ ಮುಖತೊಳೆಯಲು ಹೊರಗೆ ಬಂದಳು. ಮುಖಕ್ಕೆ ನೀರು ಹಾಕಿ ಬಟ್ಟೆಯಿಂದ ಒರಸಿಕೊಳ್ಳುತ್ತಿದ್ದ ಹಾಗೆ, ಪಕ್ಕದ ಕೊಠಡಿಯಿಂದ ಹೊರಗೆ ಬಂದ ರಾಜೀವಿ ಕೇಳಿದಳು.

"ಹೌದೇನಾ ವಸಂತಿ, ಡಾ. ಸದಾನಂದ ರಿಸೈನ್ ಮಾಡಿದ್ದಾರಂತಲ್ಲ? ಒಳ್ಳೇ ಡಾಕ್ಟ್ರು ಅವರು. ಪಾಪ! ಸರ್ಜನರಿಗೆ ಭಾರಿ ಬೇಜಾರಾದೀತು."

ವಸಂತಿ ಮಾತನಾಡಲಿಲ್ಲ. ಮೌನವಾಗಿ ಗೆಳತಿಯ ಮುಖ ನೋಡಿದಳು. ಅವಳ ನೋಟದಲ್ಲಿ ಹುದುಗಿದ್ದ ಅರ್ಥವನ್ನು ಕಂಡುಕೊಂಡ ರಾಜೀವಿ ಗೆಳತಿಯನ್ನು ಸಮಜಾಯಿಸುವಂತೆ ಹೇಳಿದಳು.

"ಸಂಜೆ ಸಿನೀಮಾಕ್ಕೆ ಬರ್ತೀಯಾ ವಸಂತಿ? ಒಳ್ಳೆ ಸಿನಿಮಾ ಬಂದಿದೆಯಂತೆ. ಅರುಣಾ ಥಿಯೇಟರಿನಲ್ಲಿ".

ಮನಸ್ಸಿಲ್ಲದಿದ್ದರೂ ಯಾಂತ್ರಿಕವಾಗಿ ಹೂಂಗುಟ್ಟಿದಳು ವಸಂತಿ. ಅವಳ ಪರಿಸ್ಥಿತಿ ನೋಡಿ ಬೇಸರಗೊಂಡ ರಾಜೀವಿ "ಬಾರೇ, ಪೇಟೆಗೆ ಹೋಗಿಬರೋಣ" ಎಂದು ವಸಂತಿಯ ಕೈ ಹಿಡಿದು ಎಳೆದು ಹೊರಡಿಸಿಕೊಂಡು ಹೊರಟಳು.

ಸದಾನಂದ ಸರ್ಜನರ ಆಫೀಸಿನ ಮೆಟ್ಟಲೇರಿ, ಒಳಗೆ ಕಾಲಿರಿಸುತ್ತಲೇ 'ಗುಡ್ ಮಾರ್ನಿಂಗ್' ಹೇಳಿದ.

"ಗುಡ್ ಮಾರ್ನಿಂಗ್. ಕಮ್ ಇನ್" ಎಂದರು ಸರ್ಜನರು. ಸದಾನಂದ ಅವರ ಎದುರಿಗಿದ್ದ ಕುರ್ಚಿಯ ಮೇಲೆ ಕುಳಿತ. ಅವರು ಅವನ ಮುಖ ನೋಡಿ ಮುಗುಳುನಕ್ಕು ಕೇಳಿದರು. "ಏನು ಚೆನಾಗಿದ್ದೀರಾ ಡಾಕ್ಟರ್?"

## ಬಾ ಸಖಿಯೆ ಬಾರೆ

ಇರುಳಿನಲ್ಲಿ ಬೆಳಕು ಚೆಲ್ಲಿ
ಮೂಡಿಬರಲು ಚಂದಿರ
ಇಳೆಯು ತುಂಬ ಹಾಲು ಚೆಲ್ಲಿದಂತೆ
ಶುಭ್ರ ಸುಂದರ
ಮಿಣುಕು ಮಿಣುಕು ದೀಪದಂತೆ
ಮಿನುಗುತಿಹವು ತಾರೆ
ಮಧುರ ಮಿಲನ ಕಾಯ್ತು ನಾಂದಿ
ಬಾ ಸಖಿಯೆ ಬಾರೆ.

—ಎಂ. ಗೋವಿಂದ.

"ಸರ್, ಹೆಚ್ಚೇನನ್ನೂ ನಾನು ಬಯಸುವುದಿಲ್ಲ. ದಯವಿಟ್ಟು ನನ್ನ ರಾಜೀನಾಮೆಯನ್ನು ಸ್ವೀಕರಿಸಿ." ನಿರ್ವಿಕಾರಚಿತ್ತದಿಂದ ಕೈಯಲ್ಲಿ ಸುರುಳಿಯಾಗಿ ಸುತ್ತಿದ್ದ ಬಿಳಿಯ ಕಾಗದದಲ್ಲಿ ಸ್ಫುಟವಾಗಿ ಬರೆದುದನ್ನು ಮುಂದಿಟ್ಟು ಹೇಳಿದ.

"ರಾಜೀನಾಮೆ? ಯಾಕೆ ಕೊಡುತ್ತೀರಿ ಡಾಕ್ಟ್ರೆ? ಅಂಥಾದ್ದೇನಾಗಿದೆ ನಿಮಗೆ ಇಲ್ಲಿ? ನಾನದಕ್ಕೆ ಪರಿಹಾರ ಮಾಡುತ್ತೇನೆ. ನಿಸ್ಸಂಕೋಚವಾಗಿ ಹೇಳಿ." ಸರ್ಜನರು ಸದಾನಂದ ಇರಿಸಿದ ಅರ್ಜಿಯನ್ನು ಮುಟ್ಟದೆ. ಆಶ್ಚರ್ಯ ಕುತೂಹಲ ಮಿಶ್ರವಾಗಿ ಅದನ್ನೇ ದಿಟ್ಟಿಸಿ ಹೇಳಿದರು.

"ಅಂಥಾದ್ದೇನೂ ಆಸ್ಪತ್ರೆಯಲ್ಲಿ ನಡೆಯಲಿಲ್ಲ ಸರ್. ನಾನು ಮನಸ್ಸಂತೋಷದಿಂದಲೇ ಈ ಕೆಲಸಕ್ಕೆ ರಾಜೀನಾಮೆ ಕೊಡುತ್ತಿದ್ದೇನೆ".

"ಹಾಗಾದರೆ ಮತ್ತೆ ಮುಂದೆ ಏನು ಮಾಡ್ತೀರಾ?"

"ನನ್ನ ಹಿರಿಯರ ಊರು ಇದೆ ಸರ್. ದ. ಕನ್ನಡದಲ್ಲಿ. ಅಲ್ಲಿ ಹೋಗಿ ನೆಲೆಸಿ ಪ್ರೈವೇಟ್ ಪ್ರಾಕ್ಟೀಸ್ ಮಾಡುವ ಆಲೋಚನೆ ಬಂದಿದೆ. ನನಗೆ".

"ಹಳ್ಳಿಗೆ ಹೋಗ್ತೀರಾ? ಅಲ್ಲಿ ಹೇಗೆ ಮಾಡ್ತೀರಾ ಪ್ರಾಕ್ಟೀಸ್? ಒಂದು ಕೇಸ್ ಡಯಗ್ನೋಸಿಸ್ (Diagnosis) ಮಾಡಬೇಕಾದರೆ ಯಾರೂ ಇಲ್ಲ. ಯಾವುದೂ ಎಪರೇಟಸ್ ಇಲ್ಲ. ಆಪರೇಶನ್ ಮಾಡಲು ಥಿಯೇಟರ್ ಇಲ್ಲ. ಬರಿ ಮೆಡಿಸಿನ್ ಮಾತ್ರ ಕೊಡಬಹುದು ಅಷ್ಟೆ!"

"ಹೌದು ಸಾರ್. ಅಷ್ಟೇ ಮಾಡೋದು ಅಲ್ಲಿ. ಅದೇ ಹಳ್ಳಿಯವರಿಗೆ ದೊಡ್ಡ ಉಪಕಾರವಾಗುತ್ತದೆ".

"ಹಾಗಾದರೆ ಇಲ್ಲಿ ನಿಮ್ಮ ಉಪಕಾರ ಇಲ್ಲ ಅಂತ ತಿಳಿದುಕೊಂಡಿರಾ? ನಿಮ್ಮಂಥ ಸಮರ್ಥ ಡಾಕ್ಟರ್ ಸರಕಾರಿ ಕೆಲಸಕ್ಕೆ ರಾಜೀನಾಮೆ ಕೊಡುವುದು ಸರಕಾರಿ ಆಸ್ಪತ್ರೆಗೆ ಎಷ್ಟು ದೊಡ್ಡ ನಷ್ಟ ಎಂಬುದರ ಕಲ್ಪನೆ ನಿಮಗೆ ಇದೆಯಾ?"

"ಇದೆ ಸಾರ್. ಇದ್ದೇ ಇದೆ. ನಾನು ಇಲ್ಲಿ ರಾಜೀನಾಮೆ ಕೊಟ್ಟು ದೇಶಬಿಟ್ಟು ಹೋಗೋದಿಲ್ಲ ತಾನೆ! ದೇಶದ ಯಾವ ಭಾಗದಲ್ಲೇ ಆಗಲಿ, ದುಡಿದರೆ ಅದು ರಾಷ್ಟ್ರ ಸೇವೆ ತಾನೇ?"

"ಸರಿ. ಒಪ್ಪಿಕೊಂಡೆ ಡಾಕ್ಟರ್. ಆದರೆ ಇದ್ದಕ್ಕಿದ್ದ ಹಾಗೆ ಇಷ್ಟು ಅವಸರವಾಗಿ ಯಾರಿಗೂ ಹೇಳದೆ ಯಾಕೆ ಹೊರಟು ಹೋಗ್ತೀರಾ ನೀವು?"

"ಇಲ್ಲ ಸರ್. ಇದು ಇಂದು ನಿನ್ನೆಯ ಆಲೋಚನೆ ಅಲ್ಲ. ಬಹಳ ದಿನಗಳಿಂದಲೇ ಈ ಅಭಿಪ್ರಾಯಕ್ಕೆ ನಾನು ಬಂದಿದ್ದೇನೆ."

"ಎಸ್. ನಿಮ್ಮ ಆಲೋಚನೆಗೆ ನಾನು ಒಪ್ಪಿದೆ. ಆದರೆ ನೀವು ಬಿಟ್ಟುಹೋಗುವುದು ನನಗೆ ತುಂಬಾ ಬೇಸರವನ್ನುಂಟುಮಾಡುತ್ತದೆ. ನಮ್ಮ ಆಸ್ಪತ್ರೆಗೆ ಇನ್ನೂ ನಿಮ್ಮ ಸೇವೆಯ ಅವಶ್ಯಕತೆ ಇತ್ತು. ಇನ್ನು ಒಂದೆರಡು ವರ್ಷ ಇಲ್ಲೇ ಇದ್ದುಬಿಡಿ. ಡಾಕ್ಟರ್, ಹೇಗೂ ನೀವೀಗ ಬ್ಯಾಚುಲರ್. ಯಾವ ತಾಪತ್ರಯವೂ ಇಲ್ಲ...ಅಲ್ಲ.....ಪರ್ಸನಲ್ ಆಗಿ ಮಾತಾಡಿದೆ ಅಂತ ತಪ್ಪು ತಿಳಿಯಬೇಡಿ. ಫ್ರೆಂಡ್ಲಿ ಸಜೆಶನ್ ಕೊಟ್ಟೆ–ಅಷ್ಟೆ".

"ತಪ್ಪು ತಿಳಿಯುವಂತಾದ್ದು ನೀವೇನೂ ಆಡಿಲ್ಲವಷ್ಟೆ! ಆದರೂ ನನಗೆ ಇನ್ನು ಇಲ್ಲಿ ಇರೋಕೆ ಮನಸ್ಸು ಇಲ್ಲ ಸಾರ್. ನಾನು ಊರಿಗೆ ಹೋಗುವ ಎಲ್ಲಾ ಸಿದ್ಧತೆ ಮಾಡಿ ಆಗಿದೆ. ಹಾಗೆ ಊರಿಗೆ ಬರೆದೂ ಆಗಿದೆ. ಇನ್ನೊಮ್ಮೆ ಎಲ್ಲಾ ಬದಲಾಯಿಸುವುದು ಅಂದರೆ ಕಷ್ಟ."

"All right, wish you best of Luck. ನಿಜವಾಗಿಯೂ ನಾನು ಈ ನಿಮ್ಮ ಸಾಹಸಕ್ಕೆ ಮೆಚ್ಚಿದ್ದೇನೆ ಸದಾನಂದ. ಇಂದು ಪೇಟೆಯ ಕಡೆಗೆ ಹಳ್ಳಿಯವರ ಗಮನ ಕೂಡ ಹರಿಯುವಂತಹ ಸಂದರ್ಭದಲ್ಲಿ ನೀವು ಮನಸ್ಸು ಮಾಡಿ ಹಳ್ಳಿಗೆ ಹೋಗಿ ದೀನದಲಿತರ ಸೇವೆಮಾಡುವುದು ರಾಷ್ಟ್ರೀಯ ಸೇವಾ

ದೃಷ್ಟಿಯಲ್ಲಿ ತುಂಬಾ ಮಹತ್ವದ್ದು. ನಮಗೆ ನಿಮ್ಮ ಕೊರತೆ ಬರುತ್ತದೆ ಎಂಬುವಷ್ಟೇ ಅಲ್ಲದೆ ಬೇರಾವ ರೀತಿಯ ಬೇಸರವೂ ನನಗೆ ನಿಮ್ಮಲ್ಲಿ ಇಲ್ಲ. ನಿಮ್ಮ ಪ್ರಾಕ್ಟೀಸ್ ಉತ್ತಮವಾಗುವಂತೆಯೂ ನಿಮ್ಮ ಜೀವನ ಸಾಗುವಂತೆಯೂ ನಾನು ಹಾರ್ದಿಕವಾಗಿ ಹಾರೈಸುತ್ತೇನೆ. ಸದಾನಂದ!...ಮತ್ತೇನೂ ನಾನು ಹೇಳಲಾರೆ-ಅಷ್ಟೆ".

"ಥ್ಯಾಂಕ್-ಯು-ಸರ್"

ಮರುದಿನ ಸದಾನಂದನನ್ನು ಬೀಳ್ಕೊಡುವ ಸಮಾರಂಭ ಜರುಗಿತು. ಅಂದಿನ ಅಧ್ಯಕ್ಷತೆಯನ್ನು ಸ್ವತಃ ಸರ್ಜನರೇ ವಹಿಸಿದ್ದರು. ಆಸ್ಪತ್ರೆಯಲ್ಲಿ ಕೆಲಸ ಮಾಡುವವರೆಲ್ಲ ಸಮಾರಂಭದಲ್ಲಿ ಭಾಗವಹಿಸಿದ್ದರು. ಸದಾನಂದರ ಸಹದ್ಯೋಗಿ ಡಾ॥ ಶ್ರೀನಿವಾಸನ್, ಡಾ. ಮೂರ್ತಿರಾವ್‌ರವರು ಡಾ. ಸದಾನಂದನ ಸ್ನೇಹಶೀಲತೆ, ಕಾರ್ಯದಕ್ಷತೆ, ಪ್ರಾಮಾಣಿಕತನ ಬಗ್ಗೆ ಮಾತನಾಡಿದರು. ಅಧ್ಯಕ್ಷೀಯ ಭಾಷಣ ಮಾಡುತ್ತ ಸರ್ಜನರು ಸದಾನಂದನ ಚುರುಕುಬುದ್ಧಿ, ಶೀಘ್ರ ನಿರ್ಧಾರ, ಕೇಸುಗಳನ್ನು ಚಿಕಿತ್ಸಿಸುವ ನೈಪುಣ್ಯವನ್ನು ಪ್ರಶಂಸಿಸಿ ಅವರಿಗೆ ಶುಭಾಶಯಗಳನ್ನು ವ್ಯಕ್ತಪಡಿಸಿದರು.

ಸದಾನಂದ ತನ್ನ ಬಗ್ಗೆ ಸರ್ಜನರು, ಸಹೋದ್ಯೋಗಿಗಳು ತೋರ್ಪಡಿಸಿದ ಆದರ, ಅಭಿಮಾನದ ಬಗ್ಗೆ ಕೃತಜ್ಞತೆಯನ್ನು ವ್ಯಕ್ತಮಾಡುತ್ತ ತನ್ನ ಮಾತುಗಳನ್ನು ಮುಂದುವರಿಸಿದ:

"ಆಸ್ಪತ್ರೆ ಒಂದು ದೇವಾಲಯದ ಹಾಗೆ. ರೋಗಿಗಳ ಸೇವೆಯೇ ದೇವರ ಅರ್ಚನೆ ಎಂಬ ಭಾವದಲ್ಲಿ, ಸಹೋದರಭಾವದಲ್ಲಿ ನಾವೆಲ್ಲ ಇದುವರೆಗೆ ಇಲ್ಲಿ ದುಡಿದಿದ್ದೇವೆ. ನಾನು ಇಲ್ಲಿ ಇಲ್ಲದಿದ್ದರೂ ನೀವಿನ್ನೂ ದುಡಿಯುವವರಿದ್ದೀರಿ. ನನ್ನ ಎರಡುವರೆ ವರ್ಷದ ಈ ಕಾಲಾವಧಿಯಲ್ಲಿ ನಾನು ನನ್ನ ಕೈಕೆಳಗಿನ ನರ್ಸ್‌ಗಳಿಗೋ, ವಾರ್ಡ್‌ಬಾಯ್‌ಗಳಿಗೋ ಅಥವಾ ಇನ್ನಾರಿಗೋ ಆಗಲಿ ಗದರಿಸಿದ್ದಾಗಲೀ, ಬೈದದ್ದಾಗಲೀ ಇರಬಹುದು. ನಾನು ಅವರ ಮೇಲೆ ಯಾವುದೇ ರೀತಿಯ ದ್ವೇಷದಿಂದ ಅಥವಾ ಅವರನ್ನು ದಂಡಿಸುವ ಅಧಿಕಾರ ನನಗೆ ಇದೆ ಎಂಬುದರಿಂದ ಹಾಗೆ ನಡೆದಿದ್ದಲ್ಲ– ಇದ್ದರೂ ಕೂಡ ಅದು ಅವರ ಬೇಜವಾಬ್ದಾರಿಯುತ ಕೆಲಸಕ್ಕೋ, ಅಪ್ರಾಮಾಣಿಕತೆಗೊ, ಉದಾಸೀನತೆಗೊ ಇರಬಹುದು.... ನಾನು ಈ ಆಸ್ಪತ್ರೆಯನ್ನು ಬಿಟ್ಟು ಹೋಗುವ ಸಂದರ್ಭದಲ್ಲಿ ನೀವು ಈ ಎಲ್ಲಾ ಭಾವಗಳನ್ನು ಮರೆತು ನನ್ನನ್ನು ಕ್ಷಮಿಸಬೇಕೆಂಬುದಾಗಿ ಕೇಳಿಕೊಳ್ಳುತ್ತೇನೆ ಮತ್ತು ನಿಮಗೆಲ್ಲಾ ಋಣಿಯಾಗಿದ್ದೇನೆ......"

ಕೊನೆ ಕೊನೆಗೆ ಸದಾನಂದನ ಕಂಠ ತುಂಬಿ ಬಂತು. ಮಾತು ಮುಂದುವರಿಸಲಾಗಲಿಲ್ಲ. ಅವನು ಮಾತನ್ನು ಅಲ್ಲಿಗೇ ನಿಲ್ಲಿಸಿ ಟವಲಿನಿಂದ ಮುಖವನ್ನು ಒರಸುತ್ತಾ ಅಲ್ಲೇ ಕುಳಿತ. ಅವನ ಈ ರೀತಿಯ ಸೌಜನ್ಯಪೂರ್ಣ ಮಾತುಗಳು, ಆಸ್ಪತ್ರೆಯ ಮೇಲೆ, ಕೆಲಸದವರ ಮೇಲೆ ಅವನಿಗೆ ಇದ್ದ ಪ್ರೀತಿಯನ್ನು ಗುರುತಿಸಿದ ಕೆಲವರು ಅವನ ಕಣ್ಣೀರಿನಲ್ಲಿ ಸಹಭಾಗಿಯಾಗಿ ತಮ್ಮ ಕಣ್ಣುಗಳಲ್ಲೂ ನೀರು ತುಂಬಿಸಿ ಮುಖ ಒರಸಿಕೊಂಡರು.

ಆಸ್ಪತ್ರೆಯಿಂದ ಹಾರ್ದಿಕವಾಗಿ ಬೀಳ್ಕೊಟ್ಟ ಸದಾನಂದ, ಆಸ್ಪತ್ರೆಯ ಮೆಟ್ಟಲಿಳಿದು ನಾಲ್ಕು ಹೆಜ್ಜೆ ಮುಂದೆ ಹೋಗಿ ಹಿಂದೆ ತಿರುಗಿ ನೋಡಿದ. ಎತ್ತರವಾದ ಮೂರು ಅಂತಸ್ತಿನ ಕಟ್ಟಡ. ಒಳಗೆ ತುಂಬ ಬೆಡ್ಡುಗಳು. ಸಾಕಾಗದೆ ನೆಲದ ಮೇಲೂ ಕೂಡಾ ಹಾಸಿಗೆಗಳು. ಎರಡೂವರೆ ವರುಷ ಇದೇ ಆಸ್ಪತ್ರೆಯಲ್ಲಿ ತಾನಿದ್ದೆ, ಡಾಕ್ಟರನಾಗಿ ಎಲ್ಲಾ ವಾರ್ಡುಗಳಿಗೂ ಹೋಗಿದ್ದೆ, ಎಂಬ ನೆನಪು, ಕಳಕಳಿ ಅವನಿಗಾಗದೆ ಹೋಗಲಿಲ್ಲ.

ತನ್ನ ಕೊಠಡಿಗೆ ಹೋಗಿ ಸದಾನಂದ ಮಾಡಿದ ಮುಖ್ಯ ಕೆಲಸವೆಂದರೆ– ತಂದೆಗೆ ಪತ್ರ ಬರೆದುಹಾಕಿದ್ದು. ತಾನು ತನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟು ನಾಳೆಯೇ ಕೋಳ್ಯೂರಿಗೆ ಹೊರಟುಹೋಗುವೆನೆಂದೂ ಸುಬ್ರಾಯ ಕಾರಂತರು ತನಗೆ ಹಾರ್ದಿಕ ಸಹಕಾರವೀಯುವ ಭರವಸೆ ಈಯುವೆನೆಂದು ಬರೆದಿರುವರೆಂದೂ ಆ ಪತ್ರದ ಮುಖ್ಯ ಸಾರಾಂಶವಾಗಿತ್ತು. ಆ ದಿನ ರಾತ್ರಿಯೇ ಆತ ತಾನು ಹೊರಡುವ ಸಿದ್ಧತೆಯನ್ನೆಲ್ಲಾ ಮಾಡಿದ. ರಾತ್ರಿ ಮಲಗಿಕೊಂಡರೂ ಹಲವಾರು ಯೋಚನೆಗಳಿಂದ ನಿದ್ದೆ ಸರಿಯಾಗಿ ಬೀಳಲಿಲ್ಲ. ಅವನಿಗೆ. ಕೋಳ್ಯೂರಿನ ಕರೆ ಹೆಚ್ಚಾಯಿತಾದರೂ ಮೈಸೂರನ್ನು ಬಿಟ್ಟು ಅಗಲಲೂ ಮನಸ್ಸು ಒಪ್ಪದು. ಆಗಾಗ ಕಾಡಿಸುವ ವಸಂತಿಯ ನೆನಪು, ಸರ್ಜನರ ವಿಶ್ವಾಸ, ಪ್ರೇಮಸವನ್ನು ಸೂರೆಗೊಂಡ ಮೈಸೂರಿನ ಪೇಟೆ-ಇವೆಲ್ಲವೂ ಅವನ ಮನೋಮಂದಿರದ ಕಿಟಕಿಯಲ್ಲಿ ಒಳಗೆ ಬರುತ್ತಿದ್ದ ಕಿರಣಗಳು. ಹೊರಟು ನಿಂತವನಿಗೆ ಭೂಮಿಯ ಋಣ ಮುಗಿದಂತಹ ಅನಿಸಿಕೆ ಬಿಡುವ ಊರಿನಿಂದ. ಆದರೂ ಇದೆಲ್ಲದರ ವ್ಯಾಮೋಹವನ್ನು ತೊರೆಯಲೇ ಬೇಕಾಗಿದೆ ಮುಂದಿನ ತನ್ನೆಲ್ಲ ಕನಸುಗಳು ನನಸಾಗಲು.

ಬೆಳಗ್ಗೆ ಎದ್ದ ಸದಾನಂದ ನಿತ್ಯ ಕೆಲಸಗಳನ್ನು ತೀರಿಸಿ ಹೊರಟುನಿಂತ. ಬಸ್ಸುನಿಲ್ದಾಣದ ತನಕ ಅವನನ್ನು ಬೀಳ್ಕೊಡಲು ಡಾ॥ ಶ್ರೀನಿವಾಸನ್ ಬಂದಿದ್ದ. ಕೊನೆಯ ನಮಸ್ಕಾರ ಹೇಳಿ ಕೈ ಕುಲುಕಿ ಬಸ್ಸಿನಲ್ಲಿ ಕುಳಿತ ಸದಾನಂದ. ಬಸ್ಸಿನ ಸಮಯವಾಗಿ ಬಸ್ಸು ಹೊರಟಿತು.

ಗೆಳೆಯ ಮಾಡಿದ 'ಬೈ, ಬೈ' ಮೈಸೂರು ನಗರವೆ ತನಗೆ ಬೈ ಬೈ ಮಾಡುವಂತೆ ಅನಿಸಿತು ಸದಾನಂದನಿಗೆ. ಮೈಸೂರಿನ ಒಂದೊಂದೇ ಕಟ್ಟೋಣಗಳು ಹಿಂದೆ ಹಿಂದೆ ಸರಿದ ಹಾಗೆ ಅವನ ಮನಸ್ಸಿನಲ್ಲೂ ಅವನ ಬಾಳ್ವೆಯಲ್ಲಿ ಪ್ರವೇಶಿಸಿದವರೂ ಹಿಂದೆ ಹಿಂದೆಯೇ ಸರಿದರು.

ಕಡೆಗೂ ಸದಾನಂದನನ್ನು ಹೊತ್ತ ಬಸ್ಸು, ಮೈಸೂರನ್ನು ಬಿಟ್ಟು ಸಾಗಿತು. ಸದಾನಂದ ಬೊಂಬೆಯ ಹಾಗೆ ಬಸ್ಸಿನಲ್ಲಿ ಕುಳಿತಿದ್ದ ಆಲೋಚನಾಪರನಾಗಿ.



## ೨

ಸದಾನಂದ ಕೋಳ್ಯೂರಿಗೆ ಬಂದು ಹತ್ತು ದಿನಗಳಾಗಿವೆ. ಈ ಹತ್ತು ದಿನಗಳಲ್ಲಿ ಕಾರಂತರ ಮತ್ತು ಅವನ ಒಡನಾಟ ಅವರಿಬ್ಬರನ್ನೂ ತುಂಬ ಹತ್ತಿರಕ್ಕೆ ತಂದಿದೆ. ಯಾವುದೇ ಒಂದು ವಿಷಯದ ಬಗ್ಗೆ ಆಲೋಚಿಸುವಾಗ, ಚರ್ಚಿಸುವಾಗ ಸದಾನಂದನಿಗೆ ಕಾರಂತರು ಬೇಕೇ ಬೇಕು. ಕಾರಂತರಿಗೂ ಹಾಗೇ. ಊರ ಮೇಲಿನ ಯಾವುದೇ ವರ್ತಮಾನವಿರಲಿ, ಊರಿನ ಇತಿಹಾಸವಿರಲಿ, ಅದನ್ನೆಲ್ಲಾ ಮನ ಬಿಚ್ಚಿ ಸದಾನಂದನಲ್ಲಿ ಹೇಳಬೇಕು.

ಸದಾನಂದ ಊರಿಗೆ ಬರುತ್ತಾನೆ, ಇಲ್ಲೇ ನೆಲಸುತ್ತಾನೆ. ಆಮೇಲೆ ಸ್ವಂತ ಚಿಕಿತ್ಸಾಲಯವನ್ನು ಊರಲ್ಲೇ ತೆರೆಯುತ್ತಾನೆ ಎನ್ನುವಾಗ ಕಾರಂತರಿಗೆ ಅಪರಿಮಿತ ಆನಂದವಾಗಿತ್ತು. ತಾನು ಅವರ ಜಮೀನಿನಲ್ಲಿ ದುಡಿಯುತ್ತಿದ್ದರೂ ನರ್ಸಪ್ಪಯ್ಯನವರ ಹೀಳಿಗೆಯೇ ಇಲ್ಲಿ ಮುಂದೆ ಬರಬಹುದು ಎಂಬ ಕಲ್ಪನೆ ಅವರಿಗೆ ಇಲ್ಲದೆ ಇದ್ದುದರಿಂದ ಅವರು ಗೇಣಿ ಕಡಿಮೆ ಮಾಡಲಿಲ್ಲ. [ಭೂಮಿ ಹೆಚ್ಚು ಕೊಡಲಿಲ್ಲವೆಂದು ಅವರು






# ಕ್ಲಿಕ್ III ಕ್ಯಾಮೆರಾ

ಬೆಲೆ ರೂ. 56.25 ಎಕ್ಸೈಜ್ ಸೇರಿ. ಇತರ ತೆರಿಗೆಗಳು ಪ್ರತ್ಯೇಕ.

ಆರಂಭಕ್ಕೆ ಉತ್ತಮ. ಸತತ ಉಪಯೋಗಕ್ಕೂ ಉತ್ತಮ!

ನಿಮ್ಮ ಮಕ್ಕಳಿಗೆ ಫೋಟೋಗ್ರಾಫಿ ಪ್ರಪಂಚವನ್ನು ಕ್ಲಿಕ್ III ರಿಂದ ತೋರಿಸಿ ಕೊಡಿರಿ. ಉಪಯೋಗಿಸಲು ಅದು ಎಷ್ಟೊಂದು ಸುಲಭ! ಲೆಕ್ಕ ಮಾಡಬೇಕಾಗಿಲ್ಲ. ಯಾವ ರಗಳೆಯೂ ಇರುವುದಿಲ್ಲ. ಎದುರಿಗೆ ಹಿಡಿದು ನೀವು 'ಕ್ಲಿಕ್' ಮಾಡಿದರಾಯಿತು. ಅದು ಎಷ್ಟೊಂದು ಉಳಿತಾಯ ಮಾಡುತ್ತದೆ. 12 ಉಜ್ವಲ ವರ್ಣದ ಇಲ್ಲವೆ ಕಪ್ಪು-ಬಿಳಿ ಚಿತ್ರಗಳನ್ನು ಪ್ರತಿ 120 ರೋಲ್ ಫಿಲಂನಲ್ಲೂ ಕೊಡುವುದು.

ಎಲ್ಲ ಅಧಿಕೃತ ಅಗ್ಫಾ ಗೆವರ್ಟ್ ವ್ಯಾಪಾರಿಗಳಲ್ಲಿ ದೊರೆಯುತ್ತದೆ.
ದಿ ನ್ಯೂ ಇಂಡಿಯಾ ಇಂಡಸ್ಟ್ರೀಸ್ ಲಿಮಿಟೆಡ್, ಬರೋಡ ಇವರು
ಅಗ್ಫಾ-ಗೆವರ್ಟ್ ಎ ಜಿ. ಲಿವರ್‌ಕುಸೇನ್ ಇವರ ಸಹಯೋಗದಿಂದ ತಯಾರಿಸಿದುದು.

®
ಇದು ಫೋಟೋಗ್ರಾಫಿ
ಸಾಧನಗಳ ತಯಾರಕರಾದ
ಅಗ್ಫಾ-ಗೆವರ್ಟ್ ಎಂಟಿಪಿಪ್
ಲಿವರ್‌ಕುಸೇನ್‌ರವರ
ರಿಜಿಸ್ಟರ್ಡ್ ಟ್ರೇಡ್‌ಮಾರ್ಕ್

CHAG-145-203



ಏಕಮಾತ್ರ ವಿತರಕಗಾರರು:

## ಅಗ್ಫಾ-ಗೆವರ್ಟ್ ಇಂಡಿಯಾ ಲಿಮಿಟೆಡ್

ಮುಂಬಯಿ, ನವದೆಹಲಿ, ಕಲ್ಕತ್ತ, ಮದರಾಸು.

ಅಗ್ಫಾ-ಕ್ಲಿಕ್—ಭಾರತದ ಅತಿ ಜನಪ್ರಿಯ ಕ್ಯಾಮೆರಾ

ಕೊಡಲಿಲ್ಲ.] ಹಾಗೆಂದು ಸದಾನಂದ ಬಂದು ಇರುವ ತನ್ನ ಅಲ್ಪ ಲಾಭಾಂಶಕ್ಕೆ ವಿಘ್ನನಾದ ಎಂಬ-ಬೇಸರವೂ ಅವರಿಗೆ ಇಲ್ಲ. ಅವರ ಆಸ್ತಿಗೆ ಅವರು ಬಂದದ್ದು ತಪ್ಪಲ್ಲ ಎಂಬ ಸಿದ್ಧಾಂತ ಅವರದ್ದು. ಆದರಿಂದಲೇ ಸದಾನಂದ ಬಂದುದರಿಂದ ಅವರು ಮನಸ್ಸಿನಲ್ಲಿ ತಳಮಳಪಡಲಿಲ್ಲ. ಹೊರತು ಸಂತೋಷಪಡಾವಾಗಿತ್ತು ಅವರಿಗೆ. ಶ್ರೇಷ್ಠದರ್ಜೆಯ ಡಾಕ್ಟರರೊಬ್ಬರು ಊರಿಗೆ ಬರುವುದರ ಜೊತೆಗೆ ಅದೂ ಆತ ತನ್ನ ನೆರೆಕರೆಯವನಾಗಿಯೇ ಉಳಿಯುವ ಭಾಗ್ಯ ತನಗೆ ಲಭಿಸಿತಲ್ಲ ಎಂಬ ಹೆಮ್ಮೆ ಅವರಿಗೆ. [ಅದರಿಂದಲೋ ಏನೋ ಅಥವ ವಿಶ್ವಾಸದಿಂದಲೋ ಏನೋ] ಸದಾನಂದ ಮೈಸೂರಿನಿಂದ ಹೊರಟು, ಪುತ್ತೂರಿನ ಮಾರ್ಗವಾಗಿ, ಮಂಜೇಶ್ವರದ ಬಸ್ಸಿನಲ್ಲಿ ಬಂದು ಸುಂಕದಕಟ್ಟೆಯಲ್ಲಿ ಇಳಿಯುತ್ತಾನೆ ಎಂದಾಗ (ಸಾದಾ ಅಡ್ಡಪಂಚೆಯುಟ್ಟು ಬನಿಯನ್ ಹಾಕಿಕೊಂಡು, ತಲೆಗೊಂದು ರುಮಾಲು ಸುತ್ತಿ, ಮೂರು ಸೆಲ್ಲಿನ ಬ್ಯಾಟರಿ ಹಿಡಿದು) ಇಬ್ರಾಹಿಂಸಾಹೇಬನ ಅಂಗಡಿಯಲ್ಲಿ ಬಸ್ಸು ಬರುವುದಕ್ಕೆ ಅರ್ಧ ಗಂಟೆಗೆ ಮುಂಚಿತವಾಗಿಯೇ ಬಂದು ಕುಳಿತಿದ್ದರು ಕಾರಂತರು. ಅಲ್ಲಿ ಕುಳಿತುಕೊಂಡದ್ದಷ್ಟೇ ಅಲ್ಲದೇ ಅದನ್ನೇ "ಬ್ರೋಡ್ ಕಾಸ್ಟಿಂಗ್ ಸ್ಟೇಶನ್ನಾ"ಗಿ ಮಾಡಿ ಅಲ್ಲಿಂದಲೇ ಸದಾನಂದ ಬರುವ ವಿಶೇಷ ವರದಿಯನ್ನು ಬಿತ್ತರಿಸಿದ್ದರು ಅವರು ಆರಾಮವಾಗಿ.

ಬಸ್ಸು ಬಂದು ನಿಂತಾಗ ಬಸ್ಸಿನ ಪಕ್ಕಕ್ಕೆ ಹೋಗಿ, ಇಳಿಯುತ್ತಿದ್ದ ಸದಾನಂದನ ಸೂಟ್‌ಕೇಸಿಗೆ ಹೆಗಲು ಕೊಟ್ಟು ಮೇಲೆಯೇ ಅವರು ಸದಾನಂದನನ್ನು ಸ್ವಾಗತಿಸಿದ್ದು. ಸಧಾನಂದನ 'ಬಿಡಾರ' ತುಸು ಜಾಸ್ತಿಯೇ ಇದ್ದುದನ್ನು ನೋಡಿ "ಇಲ್ಲೇನೂ ಗಾಬರಿ ಇಲ್ಲ ಡಾಕ್ಟ್ರೆ. ನಮ್ಮ ಇಬ್ರಾಹಿಂಸಾಹೇಬನಲ್ಲಿ ಇರಿಸಿ ಹೋಗುವ. ಮನೆಗೆ ಹೋಗಿ ನಾಳೆ ಕೆಲಸದಾಳನ್ನು ಕಳುಹಿಸಿ ಕರೆಸಿದರಾಯಿತು. ಈಗ ನಿಮಗೆ ಅಗತ್ಯ ಬೇಕಾದುದು ಹೇಳಿ. ಅದಕ್ಕೆ ನಾನು ಹೆಗಲು ಕೊಡುತ್ತೇನೆ. ಈ ಮುಸ್ಸಂಜೆಯ ಹೊತ್ತಿಗೆ-ಅದೂ ಅಮಾವಾಸ್ಯೆಯ ಹಿಂದಿನ ಹೊತ್ತು—ಎಲ್ಲಾ ಹಿಡಿದುಕೊಂಡು ಹೋಗುವುದು ಕಷ್ಟ." ಎಂದು ಸದಾನಂದನ ಸಾಮಾನನ್ನೆಲ್ಲ ಅಲ್ಲೇ ಇರಿಸಿ, ಸಾಹೇಬನಿಗೆ ತಿಳಿಹೇಳಿ ಸದಾನಂದನ ಕೈಚೀಲಗಳನ್ನು ತಾನೇ ಹೊತ್ತು ಅವನಿಗೆ ದಾರಿ ತೋರಿಸುತ್ತ ಮುಂದೆ ಬಂದಿದ್ದರು ಅವರು.

ಬಸ್ಸಿನಲ್ಲಿ ಬಂದ ಆಯಾಸ, ಮೂರು ವರುಷದ ಮೇಲೆ ಕಾರಂತರ ಭೇಟಿ–ಮೊದ ಮೊದಲು ಮಾತನಾಡುವುದು ಹೇಗೆ ಎಂಬಂತಾದರೂ ಕಾರಂತರ ಗುಣವನ್ನು ಒಂದೆರಡು ಸಲ ಮೊದಲು ಬಂದಿದ್ದಾಗ–ನೋಡಿದ ನೆನಪಿನಿಂದ, ಮೇಲೆ ಈ ಹಳ್ಳಿಯಲ್ಲಿ ತಾನು ಮುಂದೆ ಇವರನ್ನೇ ಸಮೀಪವರ್ತಿಯಾಗಿ ಇರಿಸಬೇಕಾದುದರಿಂದ–ಸದಾನಂದ ತನ್ನ ಡಾಕ್ಟರಿಕೆಗೆ ಯೋಗ್ಯವಾದ ಮಿತಭಾಷೆಯನ್ನು ಬಿಟ್ಟು ಧಾರಾಳವಾಗಿ ಮಾತಾಡುತ್ತಾ ಮುಂದೆ ಸಾಗಿದ. ಮಾತನಾಡದವರನ್ನು ಮಾತನಾಡಿಸುವ ಬಹುಭಾಷಿ ಕಾರಂತರಿಗೆ ಬಲಿಯಾದರೆ ಮತ್ತೆ ಕೇಳಬೇಕೆ? ಊರೇ ತನ್ನದು ಎನ್ನುವಂತಹ ಹರಟೆಗಾರರು ಅವರು.

ಸದಾನಂದನಿಗೆ 'ಮೂಡುಮನೆ' ಸಮೀಪಿಸಿದುದು ಅರ್ಥವಾಯಿತು. ಆದರೂ ಕಾರಂತರ ಮನೆಯ ದೀಪ ಕಾಣದುದನ್ನು ಕಂಡು ಕೇಳಿದ 'ಏನು ಕಾರಂತರೇ-ಒಂದರ್ಧ ಮೈಲು ಎಂದ ನಿಮ್ಮ ದೂರ ಒಂದುವರೆ ಮೈಲು ಆದ ಹಾಗೆ ಇದೆಯಲ್ಲ! ಇನ್ನೂ ಮೂಡುಮನೆ ಬಂದಿಲ್ಲ?"

"ಹಾಗೆ ಹೇಳಿ–ಡಾಕ್ಟ್ರೇ! ಇದು ಮೈಲೇಜಿನ ಮಿಷ್ಟೇಕಲ್ಲ. ಇದು ನನ್ನ ಕಾರುಬಾರಿನಿಂದ ಮೂಡುಮನೆ ದೂರವಾಯಿತು ಅಷ್ಟೆ!"

"ಅಂದರೆ?"

"ಮತ್ತೇನಿಲ್ಲ ಡಾಕ್ಟ್ರೆ! ನೀವು ಬಂದುಹೋದ ವರ್ಷ ನಮ್ಮಮನೆಯ ಎದುರು ಹಚ್ಚಹಸುರು ಬಯಲು ಇತ್ತಷ್ಟೇ! ಅದೇ ವರ್ಷ ನಾನು ಆ ಗದ್ದೆಗೆ ಅಡಿಕೆ ಸಸಿ ಹಾಕಿದೆ. ಈಗ ಸಸಿ ಬೆಳೆದು ಬಂದು ಮನೆಯ ದೀಪ– ಕಾಣೋದಿಲ್ಲ. ಇನ್ನೆಷ್ಟು ದೂರ ಅಂದೀರಿ?. ಓ ಅದೇ ತೋಟ. ಅಚೆಯೇ ನಮ್ಮ ಮನೆ?"

ಆ ಕತ್ತಲಲ್ಲಿ ಕಾಣದಿದ್ದರೂ ಸದಾನಂದ ದಾರಿ ನಡೆಯುವುದು ಬಿಟ್ಟು, ನಿಂತು ಅಚೆ ನೋಡಿದ. ಏನೂ ಕಾಣಿಸಲಿಲ್ಲ. ಆದರೆ ಇವರ ಮಾತುಕತೆ, ಲೈಟಿನ ಪ್ರಕಾಶಕ್ಕೆ ಹತ್ತಿರದಿಂದ ನಾಯಿ ಬೊಗಳಿದುದನ್ನು ಕೇಳಿ–ಕಾರಂತರ ಮನೆ ಅದೇ ಎಂದು ನಿರ್ಧರಿಸಿಕೊಂಡು ಹೇಳಿದ "ಅಂತೂ-ಪರವಾ ಇಲ್ಲ ಕಾರಂತರೇ ಬಹಳ ದುಡಿಯುತ್ತೀರಪ್ಪ ನೀವು. ಇಲ್ಲವಾದರೆ ನಿಮ್ಮ ಜಮೀನಿನ ಜೊತೆ ನಮ್ಮದು ಇದೆ ಬೇರೆ. ಇದನ್ನೆಲ್ಲ ಸಮತೂಕದಲ್ಲಿ ನೋಡಿಕೊಂಡು ಬರುವುದು ತುಂಬ ಕಷ್ಟ."

"ಕಷ್ಟ ಎಲ್ಲಿ ಬಂತು ಡಾಕ್ಟ್ರೆ. ನೀವೇ ಹೇಳಿದರಲ್ಲ ಆವಾಗ-ಅಭ್ಯಾಸದ ಮೇಲೆ ಯಾವುದೂ ಲೆಕ್ಕ ಇಲ್ಲ ಅಂತ. ಈಗ ನಿಮಗೆ ಟೈಫ್ಯಾಯಡ್ ನ್ಯೂಮೋನಿಯಗಳಿಲ್ಲ ಒಂದು ಗಣ್ಯವಾ? ಹಾಗೇನೇ ನಮಗೆ ಕೃಷಿ"

ಸದಾನಂದ ನಕ್ಕ ಅವರ ಮಾತಿಗೆ. ಅಷ್ಟರಲ್ಲಿ ತೋಟದ ಒಳಗೆ ಕಾಲಿರಿಸಿಯಾಗಿತ್ತು ಅವರು. ಮುಂದೆ ಇಬ್ಬರೂ ಸುಮ್ಮನಾದರು. ಕಾರಂತರು ಅಂಗಳದಲ್ಲಿ ಕಾಲಿರಿಸಿದೊಡನೆ ಅವರ ನಾಯಿ 'ಬೊಳ್ಳು' ಬೊಗಳುತ್ತ ಮುಂದೆ ಬಂತು. ಕಾರಂತರು ನಾಯಿಯ ಹೆಸರೆತ್ತಿ ಕರೆದು ಚಿಟಿಕೆ ಹೊಡೆದರು. ನಾಯಿ ಸುಮ್ಮನಾಯಿತು.

ಸದಾನಂದ ಒಳಗೆ ಕಾಲಿರಿಸಿದ ಹಾಗೆ ಕಾರಂತರ ಹೆಂಡತಿ ತುಂಗಮ್ಮ ಸ್ವಾಗತಿಸಿದಳು. ಹೊಸಬ, ಅದರಲ್ಲೂ ಪ್ಯಾಂಟ್ ಹಾಕಿಕೊಂಡು ಬಂದದ್ದರಿಂದ ಕಾರಂತರು ಹೊರಡುವಾಗಲೇ ಡಾಕ್ಟರ್ ಬರುತ್ತಾರೆ ಎಂದಿದ್ದರಿಂದ–ಕಾರಂತರ ಮೂವರು ಮಕ್ಕಳು, ಪಾರ್ವತಿ, ರಮೇಶ, ಶಿವರಾಮ- ಏನೂ ಮಾತನಾಡದೆ ಪರಸ್ಪರ ಮುಖ ನೋಡಿಕೊಂಡು ಚಾವಡಿಯಲ್ಲಿ ನಿಂತಿದ್ದರು.

ಸದಾನಂದ ಕಾರಂತರು ಕೊಟ್ಟ ಕುರ್ಚಿಯ ಮೇಲೆ ಕುಳಿತು ತುಂಗಮ್ಮ ತಂದಿರಿಸಿದ ಬೆಲ್ಲ-ನೀರು ಕುಡಿದ: "ಎಂತಹ ಸೆಕೆ ಡಾಕ್ಟ್ರೆ ಇಲ್ಲಿ. ನಿಮಗೆ ಇದು ಹೊಸತೋ ಏನೋ? ಇನ್ನು ಮಳೆಗಾಲ- ನೀವು ನೋಡಬೇಕು. ಮೈಸೂರು–ಬೆಂಗಳೂರಲ್ಲಿ ಮಳೆ ಕಡಿಮೆಯಷ್ಟೆ! ಇಲ್ಲಿ ಹಾಗಲ್ಲ! ಮೂರು ನಾಲ್ಕು ತಿಂಗಳು ಬರುತ್ತಲೇ ಇರುತ್ತದೆ." ಎಂದು ಕಾರಂತರು ಗೊಟಗೊಟನೆ ಅರ್ಧ ತಂಬಿಗೆ ನೀರು ಕುಡಿದು ಮುಗಿಸಿಕೊಂಡು ಮೈಒರಸಿಕೊಂಡು ಗೋಡೆಗೆ ಒರಗಿ ಕುಳಿತು ಹೆಂಡತಿಯ ಮುಖ ನೋಡುತ್ತಾ ಹೇಳಿದರು-

'ಪಾಪ, ಡಾಕ್ಟರರಿಗೆ ನಡೆದು ಅಭ್ಯಾಸವೇ ಇಲ್ಲ! ಅದೂ ಈ ಕತ್ತಲೆಯ ಹಳ್ಳಿದಾರಿಯಲ್ಲಿ. ತುಂಬಾ ಸುಸ್ತಾಗಿದ್ದಾರೆ ಅವರು. ಸ್ನಾನದ ಟವೇಲು ತಂದುಕೊಡು ಸ್ನಾನದ ಮೇಲೆ ಊಟ ಮಾಡೋಣ."

ಸದಾನಂದ ಬಾತ್ ಟವೆಲು ಬೇಡ ಎಂದ. ಸ್ವತಃ ಕಾರಂತರೇ ಬಚ್ಚಲಿಗೆ ಹೋಗಿ, ನೀರು ಹಾಕಿ ಬಂದು ಸದಾನಂದನನ್ನು ಕರೆದೊಯ್ದರು. ಸ್ನಾನದ ಮೇಲೆ ಊಟಮಾಡಿ ಹತ್ತು ನಿಮಿಷ ಮಾತನಾಡುತ್ತಾ ಕುಳಿತರು. 'ತುಂಬಾ ಆಯಾಸವಾಗಿರಬಹುದು. ಎಲ್ಲ ನಾಳೆ ನೋಡೋಣ' ಎಂದು ಕಾರಂತರು ಸದಾನಂದನಿಗೆ, ಚಾವಡಿಯಲ್ಲಿ ಹಾಸಿಗೆ ಹಾಸಿದರು. ಸದಾನಂದ ಮರುಮಾತನಾಡದೆ ಮಲಗಿ

ಕೊಂಡ. ಬಾಪ್ಪದರೆ ಬಗ್ಗೆಯೂ ಯೋಚಿಸುವುದರ ಮೊದಲೇ ಬಂದ ಆಯಾಸದಿಂದ, ನಿದ್ರೆ ಅವನನ್ನು ಆವರಿಸಿತು.

ಮರುದಿನ ಕಾಫಿ ತೀರಿಸಿದ ಮೇಲೆ ಕಾರಂತರು ಸದಾನಂದನನ್ನು ಕರೆದುಕೊಂಡು ಅವನ ಆಸ್ತಿಯನ್ನು ತೋರಿಸಲು ಕರೆದೊಯ್ದರು. ತಂದೆ ನರ್ಸಪ್ಪಯ್ಯ ನವರೊಂದಿಗೆ ಬಂದಿದ್ದಾಗ, ಆ ಮೇಲೂ ಸದಾನಂದ ಬಂದಿದ್ದರೂ ಆಗ ಆತ ಕೇವಲ ವೀಕ್ಷಕನಾಗಿ ಬಂದಿದ್ದ. ಈಗ ಸದಾನಂದನ ದೃಷ್ಟಿಕೋನವೇ ಬೇರೆ. ಕೃಷಿಕ ಜೀವನವು ಇಂದು ಅವನಿಗೆ ಮೆಚ್ಚು. ವೈದ್ಯಕೀಯ ದಲ್ಲಿ ಎಷ್ಟು ಆಸಕ್ತಿ ಇದೆಯೋ ಅಷ್ಟೇ ವ್ಯವಸಾಯ ದಲ್ಲೂ ಇದೆ ಅವನಿಗೆ.

ಹೊಳೆಯ ಬದಿಗೆ ಸದಾನಂದನನ್ನು ಕರೆದು ಕೊಂಡು ಹೋದ ಕಾರಂತರು ನೆರೆ ನೀರಿನ ಕಾರುಬಾರು ಗಳನ್ನು ತೋರಿಸುತ್ತ, ವಿವರಣೆ ಮಾಡತೊಡಗಿದರು. "ನಿಮ್ಮ ಭೂಮಿ-ಚಿನ್ನದಂತಾದ್ದು ಡಾಕ್ಟ್ರೆ. ನೀವು ಎಷ್ಟು ಸುರುವಿದಿರೋ ಅದರ ಇಮ್ಮಡಿ ಮುಮ್ಮಡಿ ಅದು ನಿಮಗೆ ಕೊಡುತ್ತದೆ. ಆದರೆ ಎಷ್ಟೇ ಹಾಕಿ ದರೂ ತೊಂದರೆ ಅಂದರೆ ಈ ಹೊಳೆಯದ್ದು. ಈಗ ಇದರಲ್ಲಿ ನೀರು ಕಡಿಮೆಯಾದರೂ ಮಳೆಗಾಲದಲ್ಲಿ ಇದರ ಉಪಟಳ ಬಹಳ. ಮುಖ್ಯ ಯಾಕೆ ಈ ಗದ್ದೆಗೆ ನೀರು ಬರುತ್ತದೆ ಅಂದರೆ-ನೀರು ಈ ಬದಿಯಲ್ಲಿ ಬಹಳಷ್ಟು ಮಳಲು ತಂದು ಹಾಕಿದೆ. ಈ ಮಳಲನ್ನು ತೆಗೆದು- ನಿಮ್ಮ ಭೂಮಿ ಇರುವಷ್ಟು ದೂರ ಅಂದರೆ ಸುಮಾರು ಒಂದುವರೇ ಫರ್ಲಾಂಗಿನಷ್ಟು ದೂರ- ನೀವು ಕಲ್ಲು ಕಟ್ಟಿಸಬೇಕು. ಹಾಗಾದರೆ ಹೊಳೆಯ ದಡ ಕುಸಿಯುವುದಿಲ್ಲ. ಮೇಲೆ ಹ್ಯೊಗೆ ತೆಗೆಸಿದು ದರಿಂದ ದಡ ಉಕ್ಕಿ ನೀರು ಹರಿಯುವುದೂ ಇಲ್ಲ. ಇದೆಲ್ಲಾ ನಿಮ್ಮ ಅಜ್ಜ... ನೀವು ನೋಡಿಲ್ಲ ಅವ ರನ್ನು – ರಾಮಹೊಳ್ಳರೇ ಹೇಳುತ್ತಿದ್ದುದು- ನಾನು ಸಣ್ಣವನಿದ್ದಾಗ ನನಗೆ ಗೊತ್ತು. ಆದರೆ ಆ ಮಹಾತ್ಮ ಯಾಕೊ ಈ ಕಾರ್ಯಕ್ಕೆ ಕೈ ಹಚ್ಚಲಿಲ್ಲ. ಹಚ್ಚುವುದೆಂದರೆ ಅದೇನೂ ಸುಲಭವ? ಆ ಕಾಲದಲ್ಲೆ ಎರಡು ಮೂರು ಸಾವಿರ ಬೇಕಿತ್ತು. ಈಗ ಅದರ ಇಮ್ಮಡಿಗೂ ಆಗು ವುದು ಕಷ್ಟ. ಅಷ್ಟು ಮಾಡಿದರೆ. ಮತ್ತೆ ನಿಮ್ಮ ಭೂಮಿಗೆ ತಾಗಿದ್ದು ಯಾವುದು ಡಾಕ್ಟ್ರೆ ಇದೆ ಹೇಳಿ ಇಲ್ಲಿ?"

ಸದಾನಂದ ಕಾರಂತರ ಭಾಷಣ ಕೇಳಿ ಮೆಚ್ಚಿದ. ಅದರ ಮೇಲೆ ತನ್ನದೂ ಒಂದೆರಡು ಅಭಿಪ್ರಾಯ ಸೇರಿಸಿ ಹೇಳಿದ. "ನೀವೆಲ್ಲಾ ಹೇಳಿದ್ದು ಸರಿ ಕಾರಂತ ರೇ! ಆದರೆ ದಡಕ್ಕೆ ಮಾತ್ರ ಕಲ್ಲುಕಟ್ಟಿಸಿ ಪ್ರಯೋ ಜನವಿಲ್ಲ. ದಡದಿಂದ ಮೂರು ಅಡಿಯಷ್ಟು ಎತ್ತ ರಕ್ಕೆ ಗೋಡೆಯ ಹಾಗೆ ಕಲ್ಲು ಕಟ್ಟಿದರೆ ಅಷ್ಟು ಮಾಡಿದ್ದು ಸಾರ್ಥಕ."

"ಎಲ್ಲಾ ಹೌದು ಸ್ವಾಮಿ! ಆದರೆ ದುಡ್ಡೆ ದೊಡ್ಡಪ್ಪ ಅಲ್ವ ಹೇಳಿ ಈ ಕಾಲದಲ್ಲಿ?".

"ದುಡ್ಡು ಆಗುತ್ತೆ ಹೋಗುತ್ತೆ. ಆಗ್ಲೇ ನಮ್ಮ ಅಪ್ಪ ಇದನ್ನು ವಿಕ್ರಯಿಸಿಯೂ ಬಿಡೋಣ ಅಂದ್ರು. ನಾನೇ ಬೇಡ ಅಂದವ. ಬೇಕಾದರೆ ನಾವು ಮಾಡಿಸ ಬೇಕಪ್ಪ. ಯಾವುದಕ್ಕೂ ಈ ವರ್ಷ ಇರಲಿ. ಬರುವ ಅಂದರೆ ಈ ಮಳೆಗಾಲ ದಾಟಿದ ಮೇಲೆ ನಿಮ್ಮ-ನನ ಆಲೋಚನೆ ಎಲ್ಲ ಕಾ[illegible]ಪಕ್ಕೆ ಇಳಿಸುವ."

"ಏನು? ಡಾಕ್ಟ್ರು ಮನಸ್ಸು ಮಾಡಿದ ಹಾಗೆ ಯೋ?".

"ನನ್ನದು ಯಾವಾಗಲೂ ಅಷ್ಟೆ ಕಾರಂತರೇ. ಒಮ್ಮೆ ಯೋಚಿಸಿದರೆ ಮುಗಿಯಿತು. ಕಷ್ಟ-ನಷ್ಟದ ಬಗ್ಗೆ ಮತ್ತೆ ಚಿಂತಿಸುವುದೇ ಇಲ್ಲ. ಮೊದಲು ನನ ಗೊಂದು ಡಿಸ್ಪೆನ್ಸರಿ ಇಡಲಿಕ್ಕೆ ಕಟ್ಟೋಣ ಒದಗಿಸಿ ಕೊಡಿ. ಆ ಮೇಲೆ ನನಗೆ ನಿಮ್ಮ ಪೂರ್ಣ ಸಹಕಾರ ಕೃಷಿಯ ಬಗ್ಗೆ ಮಾಡಿ. ನಾಲ್ಕು ವರ್ಷದ ಮೇಲೆ ನೋಡಿ. ಇಲ್ಲಿ ನಾವು ಮಾತನಾಡಿದ ಸ್ಥಳವೇ ಹೇಗಾಗುತ್ತದೆ ಎಂದು."

"ಇದ್ದರೆ ಇರಬೇಕಯ್ಯ ಹಾಗೆ. ನನಗಂತೂ ಬಹಳ ಖುಷಿಯಾಯಿತು. ಅಜ್ಜ ಹೇಳುತ್ತಿದ್ದುದನ್ನು ಮೊಮ್ಮಗನಾದರೂ ಮಾಡಿದರೆ– ಸತ್ತ ಅವರಿಗಾ ದರೂ ನೆಮ್ಮದಿ. ಇರುವ ನಿಮಗಾಗಲಿ ಮುಂದಿನ ಪೀಳಿಗೆಗಾಗಲಿ ತೃಪ್ತಿ."

"ಅದು ಸರಿ ಕಾರಂತರೇ. ಡಿಸ್ಪೆನ್ಸರಿಯ ಬಗ್ಗೆ ಏನು ಹೇಳಿ?"

ಸದಾನಂದ ಮಾತು ಮುಂದುವರಿಸಿ ಕೇಳಿದ ಕಾರಂತ ರನ್ನು. ಕಾರಂತರು ಅಲ್ಲಿಂದ ಮುಂದುವರಿಯುತ್ತಾ ದಾರಿಯುದ್ದಕ್ಕೂ ಮಾತು– ಮಾತುಗಳ ಮಧ್ಯೆ ಭೂಮಿ ಯ ವಿವರಣೆ ಮಾಡುತ್ತಾ ಹೇಳುತ್ತಾ ಹೋದರು. "ಡಿಸ್ಪೆನ್ಸರಿ ಬಗ್ಗೆ ನೀವು ಚಿಂತಿಸುವುದೇ ಬೇಡ ಡಾಕ್ಟ್ರೆ. ನೋಡಿ ಮೂಡುಮನೆಯಿಂದ ಅಂದರೆ– ನಿಮ್ಮ ಮನೆಯ ಹಿಂದಿನ ಗುಡ್ಡದಿಂದಲೇ ಬರೇ– ಎರಡೇ ಫರ್ಲಾಂಗು ತಾನೇ ಮಿಯಾಪದವಿಗೆ. ಅಲ್ಲಿ ಮೊಗ ಸಾಲೆ ಕೃಷ್ಣರಾಯರ ಒಂದು ಕಟ್ಟೋಣ ಇದೆ. ಖಾಲಿ. ಡಿಸ್ಪೇನ್ಸರಿಗೆ ಹೇಳಿದ ಸ್ಥಳ ಅದು. ನಾಲ್ಕು ಗ್ರಾಮದ ಸೆಂಟರ್. ಹತ್ತಿರವೇ ಪೋಸ್ಟ್ ಆಫೀಸ್. ಆಚೆ–ಎಲಿ ಮೆಂಟರಿಶಾಲೆ. ಅಂಗಡಿ, ಕಾಫಿ ಹೊಟೆಲ್ ಎಲ್ಲಾ ಇವೆ. ಕಟ್ಟೋಣವೂ ಹಾಗೆ. ಒಳಗೆ ಎರಡು ಕೋಣೆ. ಹೊರಗೆ ವರಾಂಡ. ತುಂಬಾ ಅಚ್ಚುಕಟ್ಟಿನ ಸ್ಥಳ. ಮೊನ್ನೆ ನಿಮ್ಮ ಪತ್ರ ಬಂದಾಗಲೇ ಆಲೋಚಿಸಿದ್ದೆ. ಹೀಗೆ ಮಿಯ ಪದವಿಗೆ ಹೋದಾಗ ಕೃಷ್ಣರಾಯರು ಸಿಕ್ಕಿದ್ದರು. ಅವರಲ್ಲಿ ನಿಮ್ಮ ವಿಚಾರವೆಲ್ಲ ಹೇಳಿದೆ. ಓ ಅಗತ ಕೊಡೋಣ. ನಮ್ಮೂರಿಗೆ ಅವರು ಬರೋದು ವಿಶೇಷ. ಹಾಗಿರುವಾಗ ನಾವು ಅಷ್ಟಾದರೂ ಸಹಾಯ ಮಾಡಬೇಡವೇ ಎಂದರು. ಹ್ಞೂ ಅಂದೆ ನಾನು. ಬಾಡಿಗೆ ಏನು ಹೆಚ್ಚಿಗೆ ಹೇಳಲಿಕ್ಕಿಲ್ಲ. ಒಳ್ಳೆ ಜನ ಅವರು. ಮೊಗಸಾಲೆಯವರಿಗೇನೂ ಊಟಕ್ಕೆ ಕಡಿಮೆ ಇಲ್ಲ. ಮತ್ತೇನಂತೆ- ಆ ವಿಷಯವನ್ನೇ ಬಿಡಿ. ಈಗ ಸದ್ಯ ನಿಮಗೆ ಯಾವುದಕ್ಕೂ ನಾನಿದ್ದೇನೆ."

ಮಾತನಾಡುತ್ತ ಅವರು ಮೂಡುಮನೆಗೆ ಬಂದರು ರಾಮಹೊಳ್ಳರು ಇದ್ದ ಮನೆ ಅದು. ಎರಡು ಉಪ್ಪರಿಗೆಯುಳ್ಳ, ಭಾರಿಗಾತ್ರದ, ನಾಲ್ಕು ಸೂತ್ರದ ಮನೆ ಅದು. ಈಗ ಹತ್ತಿಪ್ಪತ್ತೈದು ವರ್ಷ ದಿಂದ ಮನುಷ್ಯರಿಲ್ಲದುದರಿಂದ, ಮನೆಯ ಕಿಟಿಕಿ ಬಾಗಿಲುಗಳು ಮುಸುಕಾಗಿವೆ. ನೆಲ ಅಶುಭ್ರವಾಗಿದೆ. ಅಲ್ಲಲ್ಲಿ ಜೇಡ–ಬೀಡು ಬಿಟ್ಟಿದೆ. ಕಬ್ಬಿಣದ ಸರಳು ಗಳಿಗೆ ತುಕ್ಕು ಹಿಡಿದಿದೆ.

ಸದಾನಂದ–ಮನೆಯ ಚಾವಡಿಗೆ ಬಂದ. ಕಾರಂತರು ಬೀಗತೆಗೆದು ಒಳಗೆ ಕರದೊಯ್ದರು. "ಇಂತಹ ಗಾತ್ರದ ಮನೆಗೆ ಹತ್ತು ಜನ ಬೇಕು ಡಾಕ್ಟ್ರೆ! ಹಿಂದಿನ ಕಾಲದವರು ಕಟ್ಟಿಸಿ ಹಾಕಿದ್ದು ಮಾತ್ರ. ಈಗ ಎಷ್ಟು ವರ್ಷದಿಂದ ಇದು ನಿರ್ಜನವಾಯಿತು ನೋಡಿ. ಎಲ್ಲದಕ್ಕೂ ಒಂದು ಕಾಲ ಇದೆ ಅನ್ನೋದು ಇದಕ್ಕೆ!"

ಎಂದರು ಕಾರಂತರು ಉಪ್ಪರಿಗೆಯಿಂದ ಕೆಳಗೆ ಇಳಿಯು ವಾಗ.

ಸದಾನಂದ ನಿಟ್ಟುಸಿರು ಬಿಟ್ಟು ಹೇಳಿದ "ಇದನ್ನೆಲ್ಲಾ ಶುಚಿಗೊಳಿಸಬೇಕು ಕಾರಂತರೇ. ನಮ್ಮ ಹಿರಿಯರ ಇಷ್ಟು ದೊಡ್ಡ ಮನೆ ಇರುವಾಗ ನಾನು ಇಲ್ಲಿ ನೆಲೆಸಲೇ ಬೇಕು."

"ಏನು! ಇಲ್ಲಿ ಇರೋದೆ ಡಾಕ್ಟ್ರೆ!? ಒಬ್ಬರೇ ಈ ಮನೆಯಲ್ಲಿ ಬೇಯಿಸಿ ತಿನ್ನೋದು ಅಂದರೆ ಏನು ಬಂತು? ನಮ್ಮ ಮನೆಯಲ್ಲಿ ಯಾಕಿರಬಾರದು ನೀವು? ಮದುವೆ ಗಿದುವೆ ಆದಮೇಲೆ ಸರಿ. ಈಗ ಯಾಕೆ ಅಂತಹ ಆಸೆ ಕಟ್ಟಿಕೊಳ್ಳುತ್ತೀರಿ?"

"ನಿಮ್ಮ ಮನೆಯಲ್ಲಿ ಇರಬಾರದು. ಅಥವಾ ಹಿಡಿಸದು ಎನ್ನುವ ಪ್ರಶ್ನೆ ಅಲ್ಲ ಕಾರಂತರೇ. ನಾನು ಮೈಸೂರಿಂದ ಬಂದದ್ದೇ ಈ ಮನೆಯಲ್ಲಿ ನೆಲೆಸಲು, ಈ ನೆಲದಲ್ಲಿ ಬದುಕಲು. ಹಾಗಿರುವಾಗ ಈ ಮನೆಯನ್ನು ಸ್ವಚ್ಛಮಾಡಿಸಿಕೊಟ್ಟು ಬಿಡಿ. ಮತ್ತೆ-ಬೇಕಾದರೆ ನೀವೇ ಇದ್ದೀರಲ್ಲ ಹತ್ತಿರ!"

ಸದಾನಂದನ ದೃಢನಿರ್ಧಾರ ಕಾರಂತರಿಗೆ ದಂಗು ಬಡಿಸಿತು. ಅವರು ಸಾವರಿಸಿಕೊಂಡು ಹೇಳಿದರು. "ಸರಿ ನಿಮ್ಮ ಇಷ್ಟ ಡಾಕ್ಟ್ರೆ! ನೀವು ಇಲ್ಲೆ ನೆಲಸುವುದಾದರೆ ನಿಮಗೊಬ್ಬ ಅಡಿಗೆ ಹುಡುಗ ಬೇಕು. ಏನೆನ್ನುತ್ತೀರಿ?"

"ಹ್ಞೂ"

"ಆದರೆ ಥಕ್ಕನೆ ಸಿಗಬೇಕಲ್ಲ ಹೇಳಿ."

"ಒಂದೆರಡು ಕಡೆ ಪ್ರಯತ್ನಿಸಿ ನೋಡಿ. ಸಿಕ್ಕಿದರೆ ಆಯಿತು. ಇಲ್ಲವಾದರೆ ಬೇಡ. ನಾನೇ ಎಲ್ಲಮಾಡಿಕೊಳ್ಳುತ್ತೇನೆ".

"ಅದೆಲ್ಲಾ ಭಾರಿ ಕಷ್ಟ ಡಾಕ್ಟ್ರೆ! ನನ್ನ ಹೆಂಡತಿಯ ಪೈಕಿಯಲ್ಲೊಬ್ಬ ಹುಡುಗ ಇರಬೇಕು. ಶಂಕರ ಅಂತ. ಏನೂ ಕೆಲಸ ಇಲ್ಲದೆ ಆತ ಪುತ್ತೂರಿನಲ್ಲಿ ಹೊಟೆಲಿನಲ್ಲಿ ಇದ್ದ ನೆನಪು. ಕಾಗದ ಬರೀತೇನೆ ಅವನಿಗೆ. ಕಾಗದ ಸಿಕ್ಕಿ ಅವನು ಬರುವಾಗ–ಮನೆಯ ರಿಪೇರಿಯೂ ಆಗುತ್ತೆ. ಅಷ್ಟರ ತನಕ ಮಾತ್ರ ನೀವು ನಮ್ಮ ಅತಿಥಿಯಾಗಿರಲೇಬೇಕು."

ಕಾರಂತರ ಮುಂದೆ ಸದಾನಂದ ಏನೂ ಹೇಳದಾದ. ಇಬ್ಬರೂ ಮತ್ತೂ ಕೆಲಹೊತ್ತು ಮಾತನಾಡುತ್ತ ಮಧ್ಯಾಹ್ನವಾಗುತ್ತಾ ಬಂದುದನ್ನು ಕಂಡು ಮನೆಯತ್ತ ಹೆಜ್ಜೆ ಹಾಕಿದರು.

ಸದಾನಂದನಿಗೆ ಕೋಳ್ಯೂರಿಗೆ ಬಂದ ಈ ಹತ್ತು ದಿನಗಳಲ್ಲಿ ಒಂದಿಷ್ಟೂ ಬೇಸರ ಬರಲಿಲ್ಲ. ಪ್ರತಿಯೊಂದನ್ನು ಆತ ಕುತೂಹಲದಿಂದ ನೋಡುತ್ತಿದ್ದ. ವಿಮರ್ಶಿಸುತ್ತಿದ್ದ. ಕಾರಂತರ ಮನೆಯವರು ಅವನನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದರು. ತುಂಗಮ್ಮನಿಗಂತೂ ಸದಾನಂದನೆಂದರೆ ಒಂದು ರೀತಿಯ ಪ್ರೀತಿಯಷ್ಟೆ ಭಯವೂ ಕೂಡಾ. ಆದರೆ ಕಾರಂತರ ಗಂಡು ಮಕ್ಕಳಿಬ್ಬರು–ಮೊದಮೊದಲು ದೂರದಿಂದಲೇ ನೋಡುತ್ತಿದ್ದರೆ, ಕ್ರಮೇಣ ಅವನ ಸ್ನೇಹಶೀಲತೆಗಾಗಿ ಅವನ ಹತ್ತಿರದವರಾದರು.

ಸದಾನಂದನ ಮನಸ್ಸನ್ನು ಅವ್ಯಕ್ತವಾಗಿ ಆಕರ್ಷಿಸಿದವಳೆಂದರೆ ಪಾರ್ವತಿ, ಕಾರಂತರ ಹಿರೇ ಮಗಳು. ಇನ್ನೂ ಲಂಗಹಾಕುವ ಹದಿನಾಲ್ಕರ ಹುಡುಗಿಯ ಚುರುಕುತನ ಸದಾನಂದನಿಗೆ ತುಂಬ ಹಿಡಿಸಿತ್ತು. ಹಳ್ಳಿಯ ಹುಡುಗಿಯಾದರೂ ಅವಳಲ್ಲಿ ಗಾಂಭೀರ್ಯ, ನಡವಳಿಕೆ, ಸ್ನೇಹಶೀಲತೆ ಮತ್ತು ಸರಳತೆ ಅವನಿಗೆ ತುಂಬಾ ಹಿಡಿಸಿತ್ತು. ಅವನು ಬಂದಂದಿನಿಂದ ನೋಡುತ್ತಾನೆ. ಪಾರ್ವತಿ ನಿಸ್ಸಂಕೋಚವಾಗಿ ಅವನೊಂದಿಗೆ ಸಹಕರಿಸುತ್ತಾಳೆ, ಬೆರೆಯುತ್ತಾಳೆ.

ಪ್ರತಿನಿತ್ಯ ಬೆಳಗ್ಗೆ ಮತ್ತು ಸಂಜೆ ಪಾರ್ವತಿಯನ್ನು ಸದಾನಂದ ನೋಡುತ್ತಾನೆ. ಅವಳು ಬೆಳಗ್ಗೆ ಎದ್ದು ಮುಖ ತೊಳೆದೊಡನೆ, ಹೊಸ್ತಿಲಲ್ಲಿ ಹೂ ಇರಿಸಿ, ಬಿಂದಿಗೆಯಲ್ಲಿ ನೀರಿರಿಸಿ ನಮಸ್ಕರಿಸುತ್ತಾಳೆ. ಆ ಮೇಲೆ ಹಟ್ಟಿಗೆ ಹೋಗಿ ದನದ ಮುಖಕ್ಕೆ ಕುಂಕುಮ ಇಡುತ್ತಾಳೆ. ಅದಕ್ಕೆ ತಿನ್ನಲು ಸಣ್ಣ ತುಂಡು ಬೆಲ್ಲ ಈಯುತ್ತಾಳೆ. ಸಂಜೆಯೂ ಹಾಗೇ. ತುಳಸಿಕಟ್ಟೆಯ ಎದುರು ಹಣತೆಯಲ್ಲಿ ದೀಪ ಇರಿಸಿ, ತುಳಸಿ ಕಟ್ಟೆಗೆ ಸುತ್ತು ಬಂದು ನಮಸ್ಕರಿಸುತ್ತಾಳೆ. ಇದನ್ನು ನೋಡಿದಾಗಲೆಲ್ಲಾ ಸದಾನಂದನಿಗೆ – ಭಾರತೀಯ ಸಂಸ್ಕೃತಿಯು ಉಳಿದಿದ್ದರೆ ಈಗಲೂ ಇರುವುದು ಹಳ್ಳಿಯಲ್ಲಿ ಎಂಬ ಅರಿವಾಗುತ್ತದೆ.

ತನ್ಮಧ್ಯೆ ಸದಾನಂದ ಮಿಯಪದವಿಗೆ ಹೋಗಿ ಮೊಗಸಾಲೆ ಕೃಷ್ಣರಾಯರನ್ನು ಕಂಡು, ಮಾತನಾಡಿಸಿ ಅವರ ಕಟ್ಟೋಣದಲ್ಲಿ ಆಸ್ಪತ್ರೆ ತೆರೆಯುವ ಸಿದ್ಧತೆಗೆ ಕೈ ಹಚ್ಚಿದ. ಆಸ್ಪತ್ರೆಗೆ ಬೇಕಾದ ಫರ್ನಿಚರ್‌ಗಳನ್ನು ಇಲ್ಲಿ ಮಾಡಿಸುವುದಕ್ಕಿಂತ ಮಂಜೇಶ್ವರಕ್ಕೆ ಹೋಗಿ ತರುವುದೇ ವಾಸಿ ಎಂಬ ಕಾರಂತರ ಅಭಿಪ್ರಾಯದ ಮೇರೆಗೆ, ಇಬ್ಬರೂ ಮಂಜೇಶ್ವರಕ್ಕೆ ಹೋಗಿ ಅವಶ್ಯವುಳ್ಳ ಫರ್ನಿಚರ್‌ಗಳನ್ನು ತೆಗೆದುಕೊಂಡರು. ಮದ್ದಿನ ವಿಷಯದಲ್ಲೂ ಹಾಗೆ. ಮಂಗಳೂರಲ್ಲಿ ರೂಪಾಯಲ್ಲಿ ಒಂದೆರಡು ಆಣೆ ಕಡಿಮೆ ಇರಬಹುದಾದರೂ– ಸಾರಿಗೆಯ ದೃಷ್ಟಿಯಿಂದ ಪುತ್ತೂರೇ ವಾಸಿ ಎಂದರು ಕಾರಂತರು. ಹಾಗೇ ಇಬ್ಬರೂ ಪುತ್ತೂರು ವರೆಗೆ ಹೋಗಿ ಅಲ್ಲಿನ 'ಫಾರ್ಮಸಿ'ಯವರಲ್ಲಿಯೂ ಮಾತನಾಡಿ ಆಯಿತು. ಅದರ ಜೊತೆಗೆ ತುಂಗಮ್ಮನಿಂದ ಎಲ್ಲ ವಿವರ ಕೇಳಿ, ಪುತ್ತೂರಲ್ಲಿ ಹುಡುಕಾಡಿ ಶಂಕರನ ಪತ್ತೆ ಹಚ್ಚಿದರು ಕಾರಂತರು. ಅವನನ್ನು ಕಂಡು ಭರವಸೆ ಹೇಳಿ ಎಂಟು ದಿವಸ ಬಿಟ್ಟು ಬರುವಂತೆ ಪುಸಲಾಯಿಸಿಯೂ ಆಯಿತು.

ಇಷ್ಟೆಲ್ಲಾ ಹತ್ತು ಹದಿನೈದು ದಿನಗಳ ಒಳಗೆ ಮಾಡಿಯಾದ ಮೇಲೆ ಆಸ್ಪತ್ರೆಯ ಪ್ರಾರಂಭೋತ್ಸವದ ದಿನವನ್ನು ನಿಶ್ಚಯಿಸಿ ಆಯಿತು. "ಯಾವುದೇ ಶುಭ ಕಾರ್ಯಮಾಡುವಾಗ ವಿಘ್ನಗಳಿಗೆ ಬರಬಾರದು ಡಾಕ್ಟ್ರೆ, ನಾವು ನಮ್ಮ ಸಂಸ್ಕೃತಿ ಮೀರಿ ನಡೆಯಬಾರದು. ಯಾವುದಕ್ಕೂ ನಮ್ಮ ಪುರೋಹಿತ ಭಟ್ಟರಲ್ಲಿ ದಿನ ಕೇಳಿಯೇ ಆರಂಭಿಸಿ ಬಿಡಿ ಆಸ್ಪತ್ರೆ" ಎಂದರು ಕಾರಂತರು. ಸದಾನಂದನಿಗೆ ವಿಷ. ಅಮ್ಯಕಗಳಿಗೆಯುಲ್ಲಿ ವಿಶ್ವಾಸವಿಲ್ಲದಿದ್ದರೂ ಯಾಕೆ ಕಾರಂತರ ಮನನೋಯಿಸಲಿ ಎಂದು ಸುಮ್ಮನಾದ. ಆದರೆ ಕಾರಂತರೂ ಬಿಡುತ್ತಾರೆಯೇ? ಸ್ವತಃ ತಾನೇ ಹೋಗಿ ಭಟ್ಟರಲ್ಲಿ ದಿನ ಕೇಳಿ ಬಂದು ಎಲ್ಲವನ್ನೂ ನಿಷ್ಕರ್ಷೆ ಮಾಡಿ ಬಂದು ಸದಾನಂದನಿಗೆ ಹೇಳಿದರು.



ನಾನು ಬಂದು ಒಂದು ಹಂತವನ್ನು ತಲುಪಿ ಇನ್ನೇನು ಡಿಸ್ಪೆನ್ಸರಿಯ ಆರಂಭೋತ್ಸವಕ್ಕೆ ನಾಲ್ಕು ದಿನ ಉಳಿಯಿತು ಎನ್ನುವಾಗ ಸದಾನಂದ ತಂದೆಗೆ, ತಮ್ಮನಿಗೆ ತನ್ನ ಗೆಳತಿ ವಸಂತಿಗೆ ತನ್ನ ಎಲ್ಲಾ ಕಾರ್ಯ ಕಲಾಪಗಳ ಕುರಿತು ಪತ್ರ ಬರೆದ. ತಮ್ಮನ ಪತ್ರದಲ್ಲಿ ಮಾತ್ರ ಕೆಲವು ವಾಕ್ಯಗಳನ್ನು ವಿಶೇಷವಾಗಿ ಅಳವಡಿಸಿ ಕೊಳ್ಳಲು ಆತ ಮರೆಯಲಿಲ್ಲ. "ನಾನು ಕೇವಲ ಪ್ರ್ಯಾಕ್ಟಿಸಿನ ಉದ್ದೇಶಕ್ಕಾಗಿ ಹಳ್ಳಿಗೆ ಬಂದುದಲ್ಲ.ಅಥವಾ ನನ್ನ ಪ್ರೇಮ ಭಗ್ನವಾಯಿತು ಎಂಬ ನಿರಾಶೆಯಿಂದ ಬಂದುದೂ ಅಲ್ಲ, ಇವೆರಡೂ ಅದಕ್ಕೆ ಸಹಾಯಕಗಳು ಅಷ್ಟೆ. ನನ್ನ ಉದ್ದೇಶ ನಮ್ಮ ಹಿರಿಯರ ನೆಲದಲ್ಲಿ ನಾವು ನೆಲೆನಿಲ್ಲಬೇಕು. ನಮ್ಮ ನೆಲವನ್ನು ನಾವು ಹಸನಾಗಿರಿಸಬೇಕು" ಎಂಬಿತ್ಯಾದಿಯಾಗಿ ಬರೆದು, ತನ್ನ ಎಲ್ಲಾ ಸಾಹಸಿ ಕಾರ್ಯಗಳನ್ನು ವಿವರವಾಗಿ ಬರೆದ. "ಕನಿಷ್ಟ ಪಕ್ಷ, ಹದಿನೈದು ಖಂಡಿ ಅಡಿಕೆಯ ಬೆಳೆ ತೆಗೆಯಬೇಕು ನನಗೆ. ಹಾಗೆ ನೂರು ಮುಡಿ ಅಕ್ಕಿ ಒಂದೇ ಬೆಳೆಯಲ್ಲಿ ಬೆಳೆಯುವಂತೆಯೂ ಮಾಡಬೇಕು. ಇದಕ್ಕೆಲ್ಲ ಮುಖ್ಯ ಬೇಕಾದುದು ಹಣ. ನನ್ನ ಕೈಯ್ಯ ಲಾದುದು ನಾನು ಮಾಡುತ್ತೇನೆ. ನಿನ್ನ ನೆರವು ಪ್ರೀತಿ, ವಿಶ್ವಾಸ, ನನ್ನ ಎಲ್ಲಾ ಕೆಲಸಗಳಿಗೆ ಇವೆ ಎಂದೇ ನಾನು ನಂಬುತ್ತೇನೆ. ನಂಬಿದ್ದೇನೆ." ಎಂಬ ವಾಕ್ಯ ಗಳನ್ನು ಎಚ್ಚರಿಕೆಯಿಂದ ಬರೆದಿದ್ದ ಆತ. ಪತ್ರವನ್ನು ಬರೆದು ಮುಗಿಸಿ ಶಿವರಾಮನ ಕೈಗೆ ಕೊಟ್ಟು ಪೋಸ್ಟ್ ಮಾಡಿ ಬರುವಂತೆ ಹೇಳಿದ ಸದಾನಂದ. ಬರುವಾಗ ಒಂದು ಹೊಸ ವರ್ತಮಾನ ತಂದ. ಮಿಯಪದವಿನಲ್ಲಿ ನಾಳೆ 'ಧರ್ಮಸ್ಥಳ' ಮೇಳದ 'ಬ್ರಹ್ಮಕಪಾಲ' ಯಕ್ಷ ಗಾನ ಬಯಲಾಟ ಪ್ರದರ್ಶಿಸಲ್ಪಡುವದು ಎಂದು.

ಆ ರಾತ್ರಿ ಕಾರಂತರು ಸದಾನಂದನಿಗೆ ಯಕ್ಷ ಗಾನ ಬಯಲಾಟದ ರೂಪರೇಖೆಯ ಕುರಿತು ಹೇಳಿ ದರು. ಕಾರಂತರಿಂದ ಎಲ್ಲವನ್ನು ಕೇಳಿದ ಸದಾನಂದ ನಿಗೆ ಅನಿಸಿತು: ತಾನೂ ಒಮ್ಮೆ ಹೋಗಿ ಯಾಕೆ ನೋಡ ಬಾರದು ಈ ಬಯಲಾಟವನ್ನು?

ಮರುದಿನ ಯಕ್ಷಗಾನ ಬಯಲಾಟಕ್ಕೆ ಹೋಗಿ ದ್ದರಿಂದ ಸದಾನಂದನಿಗೆ ದಕ್ಷಿಣ ಕನ್ನಡದ ಒಂದು ಜೀವಂತ ಕಲೆಯ ದರ್ಶನವಾಗುವುದರೊಂದಿಗೆ ಆದ ಉಪಕಾರವೆಂದರೆ ಅವನ ಹತ್ತಿರದ ಸಂಬಂಧಿಕ ನರಸಿಂಹ ಮಯ್ಯರ ಪರಿಚಯವಾದದ್ದು



- ೮ -

ನರಸಿಂಹ ಮಯ್ಯರ ಪರಿಚಯವಾದದ್ದು ಸದಾನಂದನಿಗೆ ಹೀಗೆ. ಆತ ಧರ್ಮಸ್ಥಳ ಮೇಳದ ವೇಷಧಾರಿ. ವೇಷಧಾರಿಗಳಿಗೆಲ್ಲ ಒಂದು ಅಭ್ಯಾಸ: ತಮ್ಮ ಪರಿಚಿತರೊ, ಸಂಬಂಧಿಕರೊ, ಇರುವ ಊರಿಗೆ ಅವರ ಮೇಳ ಬಂದಾಗ– ತಾವು ಮುಖಕ್ಕೆ ಬಣ್ಣ ಹಚ್ಚುವ ಮೊದಲು 'ಟೆಂಟಿನ' ಒಳಗೆ ತಿರುಗಾಡಿ ಪರಿ ಚಿತರು ಸಿಕ್ಕರೆ ಕಂಡು ಮಾತನಾಡುವುದು. ಹಾಗೇ ಆತ ತಿರುಗಾಡುತ್ತಿದ್ದಾಗ ಅನಿರೀಕ್ಷಿತವಾಗಿ ಕಾರಂತರು ಸಿಕ್ಕಿದರು ಅವನ ಕಣ್ಣಿಗೆ. ಅಪರೂಪದ ಭೆಟ್ಟಿ. ಮಾತನಾಡುತ್ತಿದ್ದಂತೆ ಕಾರಂತರಿಗೆ ಸದಾನಂದನಿಗೂ ಮಯ್ಯನಿಗೂ ಇರುವ ಸಂಬಂಧ ಹೊಳೆಯಿತು. ಸರಿ ಅಷ್ಟೆ ಸಾಕು ಅವರಿಗೆ. ಅಲ್ಲಿಂದ ಮಯ್ಯರನ್ನು ನೇರ ವಾಗಿ ಸದಾನಂದ ಕುಳಿತ್ತಿದ್ದಲ್ಲಿಗೆ ಕರೆತಂದು ಅವರ ಪರಿಚಯ ಮಾಡಿಕೊಟ್ಟು ಸದಾನಂದನಿಗೆ ಅವರ ಪರಿಚಯಮಾಡಿಸಿದರು ಕಾರಂತರು.

ಸದಾನಂದನ ಅಜ್ಜ ರಾಮಹೊಳ್ಳರ ತಂಗಿ– ನರಸಿಂಹ ಮಯ್ಯರ ಚಿಕ್ಕಮ್ಮ. ಮಯ್ಯರು ಅವರ ತಾಯಿಗೆ ಒಬ್ಬನೇ ಮಗ. ಹುಟ್ಟೆ ತಾಯಿಯನ್ನು ಕಳೆದುಕೊಂಡ ಅನಾಥ. ಅವರಿಗೆ ತಾಯಿ ಸ್ಥಾನದಲ್ಲಿ ಬಂದವರು–ರಾಮ ಹೊಳ್ಳರ ತಂಗಿ ಕಾವೇರಿ. ಕಾವೇ ರಿಗೆ ಮಕ್ಕಳಾಗಲಿಲ್ಲ. ಆದರೆ ಅವಳ ಕುಂಕುಮ ಭಾಗ್ಯ ಮಾತ್ರ–ರಾಮ ಹೊಳ್ಳರು ಸತ್ತು ಹತ್ತುವರುಷದ ತನಕವೂ ಇತ್ತು. ಮಕ್ಕಳಿಲ್ಲದಿದ್ದರೂ ನರಸಿಂಹನನ್ನು ಆಕೆ ತನ್ನ ಮಗನಂತೆ ಸಾಕಿದ್ದಳು. ರಾಮ ಹೊಳ್ಳರು ಸತ್ತು, ನರ್ಸಪ್ಪಯ್ಯನವರು ಊರು ಬಿಟ್ಟಮೇಲೆ ಆಕೆ ಮೂಡುಮನೆಗೆ ಬಂದಿದ್ದಿಲ್ಲ. ಇನ್ನೂ ಹಣ್ಣು ಮುದುಕಿಯಾಗಿಯೇ ಆಕೆ ಬದುಕಿದ್ದಾಳೆ. ನರಸಿಂಹನಿಗೆ ಮದುವೆಯಾಗಿ ಮಕ್ಕಳಾದುದನ್ನು ಆಕೆ ನೋಡಿದ್ದಾಳೆ. ತನ್ನ ಅಣ್ಣನ ಮಗ ಈಗ ಎಲ್ಲಿದ್ದಾನೆ, ಅವನ ಮಕ್ಕಳು ಮರಿಗಳು ಹೇಗಿದ್ದಾರೆ? ಏನಾಗಿದ್ದಾರೆ ಎಂಬುದರ ಅರಿವೇ ಆಕೆಗೆ ಇಲ್ಲ. ಅದಕ್ಕೆ ಕಾರಣ ಊರು ಬಿಡು ವಾಗ ಊರಿನ ಸಂಬಂಧದೊಂದಿಗೆ ಬಳಗದ ಸಂಬಂಧ ವನ್ನು ಕಳೆದುಕೊಂಡಂತೆ ಹೊರಟು ಹೋಗಿದ್ದಾರೆ ನರ್ಸಪ್ಪಯ್ಯನವರು.

ಸದಾನಂದನಿಗೆ- ನರಸಿಂಹ ಮಯ್ಯನ ಪರಿಚಯ ವಾದಾಗ- ತನ್ನ ಅಜ್ಜನ ಸಂಬಂಧಿಕಳೊಬ್ಬಳು ಇನ್ನೂ

ಬದುಕಿ ಉಳಿದಿದ್ದಾಳಲ್ಲ ಎಂಬ ಆನಂದ ಉಂಟಾಯಿತು. ತನ್ನ ತಂದೆ ಊರಿಗೆ ಬಾರದೇ, ತನ್ನವರನ್ನು ಮರೆತಿದ್ದುದರ ಬಗೆ ನೋಡಿ ಅವನಿಗೆ ತಂದೆಯ ನಡತೆಯ ಬಗ್ಗೆ ಬೇಸರ ಅನಿಸಿತು.

ಮಯ್ಯರಲ್ಲಿ ಕುಶಲ ಸಂಭಾಷಣೆಮಾಡಿ ಅವರನ್ನು ಬೀಳ್ಕೊಟ್ಟ ಮೇಲೆ ಕಾರಂತರಲ್ಲಿ ಮಯ್ಯರ ಸ್ಥಿತಿಗತಿಯ ಬಗ್ಗೆ ಸದಾನಂದ ಕೇಳಿದ. ಕಾರಂತರು–ವೇಷಧಾರಿಗಳ ಇತಿಹಾಸವನ್ನೆಲ್ಲಾ ಬಿಡಿಸಿ ಹೇಳಿದರು.

"ಕಲಾಭಿಮಾನದಿಂದ ಮೇಳಕ್ಕೆ ಹೋಗುವವರು ಕಡಿಮೆ ಡಾಕ್ಟ್ರೆ! ಜೀವನೋಪಾಯವಾಗಿ ಅದನ್ನು ಬಳಸುವವರೇ ಹೆಚ್ಚು ಮಂದಿ. ಕಲೆಗಾಗಿ ಕಲೆ ಎನ್ನುವ ಮಾತು. - ವ್ಯವಹಾರದಲ್ಲಿ ಸುಳ್ಳು. ಈ ಮಯ್ಯರೂ ಅಷ್ಟೇ. ನುರಿತ ವೇಷಧಾರಿ. ಸುಮಾರು ಏಳೆಂಟು ವರುಷದಿಂದ ಮೇಳಕ್ಕೆ ಹೋಗುತ್ತಾರೆ. ಇವರಿಗೆ ಮನೆಯಲ್ಲಿ ಅಂತಹ ಸ್ಥಿತಿಗತಿ ಏನೂ ಇಲ್ಲ. ಹೆಚ್ಚೆಂದರೆ ಒಂದೋ–ಒಂದುವರೆಯೋ ಖಂಡಿ ಅಡಿಕೆ. ಹತ್ತು ಮುಡಿ ಅಕ್ಕಿ ಅಷ್ಟೇ ಇರಬೇಕು. ಅದು ಅವರ ಚಿಕ್ಕ ಸಂಸಾರಕ್ಕೆ ಸಾಕೆನ್ನಿ. ಆದರೆ ಅವರು ಈ ಕಸಬು ಕೈಕೊಂಡು ಉಳಿತಾಯ ಅಲ್ಲದಿದ್ದರೂ ದಿನ ದೂಡುತ್ತಾರೆ".

ಸದಾನಂದನಿಗೆ ಕಾರಂತರ ಮಾತು ಕೇಳಿದಾಗ–ತನ್ನ ಅಜ್ಜಿ ಕಾವೇರಮ್ಮನ ಬಗ್ಗೆ ಕನಿಕರ ಹುಟ್ಟಿತು. ಮಕ್ಕಳು ಮರಿ ಇಲ್ಲ. ಮಯ್ಯರು ಎಷ್ಟು ನೋಡಿದರೂ ಇಷ್ಟೆ ಅಂತ ಇದೆ. ತಾನು ಹೋಗಿ ಅವರನ್ನು ಕರೆದು ತಂದರೆ ಹೇಗೆ? ಮಯ್ಯರಿಗೂ ಮುದುಕಿಯ ಭಾರ ಇಳಿದಂತಾಗಬಾರದೇ? ತನ್ನ ತಂದೆಯೆ ಅವರನ್ನು ನೋಡಬೇಕಾಗಿತ್ತು. ಅವರೇನೋ ಮರೆತರೂ ಅವರ ಸ್ಥಾನದಲ್ಲಿ ತಾನೇಕೆ ಅವರನ್ನು ಕರೆಸಿಕೊಳ್ಳಬಾರದು?.

ಮರುದಿನ ಬೆಳಗ್ಗೆ ಬಯಲಾಟ ಮುಗಿಸಿ ಮನೆಗೆ ಬರುವಾಗ ದಾರಿಯಲ್ಲಿ ಕಾರಂತರಲ್ಲಿ ಈ ಪ್ರಶ್ನೆ ಹಾಕಿದ ಸದಾನಂದ. ಕಾರಂತರೇನೂ ಅಷ್ಟು ಉತ್ಸಾಹಿಗಳಲ್ಲ ಆ ಮಾತಿಗೆ. ಆದರೆ ಸದಾನಂದ ಬಿಡಬೇಕಲ್ಲ ಅವರನ್ನು? ಕಾರಂತರಿಗೆ ತನ್ನನ್ನು–ಅಜ್ಜಿಯನ್ನು ಭೇಟಿ ಮಾಡಿಸುವಂತೆ ಹೇಳಿದ.

ಒಂದು ಸಂಜೆ ಸದಾನಂದನೂ–ಕಾರಂತರೂ ವಡಿಯೂರಿಗೆ ಹೋದರು. ಕಾವೇರಮ್ಮನ ಭೆಟ್ಟಿಗೆ. ಸುಂಕದ ಕಟ್ಟೆಯ ತನಕ ಬಿಸಿಲಿನಲ್ಲಿ ನಡೆದು ಆಮೇಲೆ ಬಸ್ಸು ಹತ್ತಿ ಎಂಟು ಮೈಲು ಹೋಗಿ ಇಳಿದು ವಡಿಯೂರನ್ನು ಸೇರಿದಾಗ ಸಂಜೆ ಆರು ಗಂಟೆಯಹೊತ್ತು. ಇಬ್ಬರೂ ಅಪರಿಚಿತರು ಮಯ್ಯರ ಹೆಂಡತಿಗೆ. ಕಾರಂತರೂ ಮಯ್ಯರಲ್ಲಿಗೆ ಹೋಗಿ ಬರುವುದನ್ನು ಇಟ್ಟುಕೊಂಡವರಲ್ಲ. ಆದರೆ ಕಾವೇರಮ್ಮನಿಗೆ ಮಾತ್ರ ಕಾರಂತರ ಗುರುತು ಹತ್ತಿತು. ಅವರು ಕಾರಂತರ ಪಕ್ಕದಲ್ಲೆ ಕುಳಿತು ಊರಮೇಲಿನ ವರ್ತಮಾನ ಕೇಳಿ, ಪ್ರಶ್ನಿಸಿದರು.

"ಏನು ಕಾರಂತರೇ– ಭಾರಿ ಅಪರೂಪವಾಗಿ ಬಂದಿದ್ದೀರಿ. ಇದು ಯಾರು ನಿಮ್ಮ ಜೊತೆಗೆ ಬಂದವರು?"

ಕಾರಂತರು "ಮೊದಲು ನಿಮ್ಮ ವೀಳ್ಯದ ಹರಿವಾಣ ಕೊಡಿ. ಆ ಮೇಲೆ ಅವರ ಪರಿಚಯ. ಅದು ದೊಡ್ಡ ಹರಿಕಥೆ" ಎಂದು ವೀಳ್ಯ ಜಗಿಯುತ್ತಾ ಕಾವೇರಮ್ಮನಿಗೆ ಹೇಳಿದರು–

"ನಿಮ್ಮ ರಾಮಹೊಳ್ಳರ ಮಗ ನರ್ಸಪ್ಪಯ್ಯ ನಿಮಗೆ ಗೊತ್ತಲ್ಲಾ"

"ಹ್ನೂ"

"ಅವರಿಗೆ ಇವರು ಹಿರೇ ಮಗ. ಸದಾನಂದ ಅಂತ ಹೆಸರು. ... ಎಮ್. ಬಿ. ಬಿ. ಎಸ್. ಡಾಕ್ಟ್ರು."

"ಹ್ನ! ನರ್ಸಪ್ಪಯ್ಯನ ಮಗನಾ? ರಾಮ! ರಾಮ! ಅದೇ ಎಲ್ಲೋ ನೋಡಿದ ಹಾಗೆ ಕಾಣುತ್ತದೆ ಇವನ ಮುಖ. ಯಾರದ್ದು ಅಂತೀರಾ ಕಾರಂತರೇ. ನಮ್ಮ ಅಣ್ಣಂದೇ ಸಾಜಿ ಇವನಿಗೆ. ಅವನಿಗಿಂತ ಸ್ವಲ್ಪ ಬೆಳ್ಳಗೆ ಜಾಸ್ತಿ ಅಷ್ಟೆ!"

ಸದಾನಂದ ಅಷ್ಟರ ತನಕ ಸುಮ್ಮನೆ ಇದ್ದವ ಮಾತಿಗೆ ತೊಡಗಿದ. ಮೂವರು ಸೇರಿದ ಮೇಲೆ ಕೇಳಬೇಕೆ? ಆ ದಿನ ರಾತ್ರಿ ಕಾರಂತರೂ ಸದಾನಂದನೂ ಅಲ್ಲೇ ಉಳಿದರು. ಕಾವೇರಮ್ಮ ಮೊಮ್ಮಗನಿಗೆ ತನ್ನ ಬಾಳಿನ ಮೂಡುಮನೆಯ ಗತವೈಭವಗಳನ್ನೆಲ್ಲಾ ಹೇಳಿದರು. ಅಣ್ಣನನ್ನು ನೆನಸಿ ಗಂಡನನ್ನು ಸ್ಮರಿಸಿ ಕಣ್ಣೀರುಗರೆದರು. ಸಾಯುವ ಕಾಲಕ್ಕಾದರೂ ನನ್ನ ಅಣ್ಣನ ಮಗ ಸಿಗದಿದ್ದರೂ, ನೀನಾದರೂ ಕಾಣಸಿಕ್ಕಿದೆಯಲ್ಲಾ. ಅಪ್ಪಾವರೂ ಪ್ರೀತಿ ನಿನಗೆ ಇತ್ತಲ್ಲ ಎಂದು ದುಃಖಿಸಿದರು.

ರಾತ್ರಿ ಮಲಗಿಕೊಂಡರೂ ಸದಾನಂದನಿಗೆ ಸರಿ ನಿದ್ರೆ ಬೀಳಲಿಲ್ಲ. ಅವನ ರೋಷ ಕೇಂದ್ರೀಕೃತವಾದದ್ದು ತನ್ನ ತಂದೆಯಲ್ಲೆ. ಇದಕ್ಕೆ ಕಾರಣ ಅಮ್ಮನ ಸ್ವಭಾವ ಎಂದೂ ಅನಿಸದೆ ಇರಲಿಲ್ಲ. ತಂದೆಯಾದರೂ ಹಳ್ಳಿಗೆ ಬಂದಾರು. ಅಮ್ಮನಿಗೆ ಅದು ಸರ್ವಥಾ ಮಾನ್ಯವಲ್ಲ ಎಂಬುದು ಅವನಿಗೆ ಗೊತ್ತು. ಮೇಲೆ ಅವನ ಅನುಭವ ಕೂಡಾ.

ಮರುದಿನ ಹೊರಡುವುದಕ್ಕೆ ಮುಂಚೆ ಸದಾನಂದ ಅಜ್ಜಿಯ ಪಕ್ಕದಲ್ಲಿ ಕುಳಿತು – ತನ್ನ ಯೋಜನೆಗಳನ್ನೆಲ್ಲಾ ವಿವರಿಸಿದ. ಅದನ್ನು ಕೇಳಿದ ಮುದುಕಿಗೆ ಅತೀ ಸಂತೋಷವಾಯ್ತು.

"ಮಕ್ಕಳಿಗೆ ಕಲಿಸೋದು ಸುಮ್ಮನೆ. ಕಲಿತ ವಿದ್ಯೆ ಹಿರಿಯರ ನೆಲದತ್ತ ಕೂಡ ಕಣ್ಣೋಡಿಸುವುದಿಲ್ಲ. ನಿನ್ನ ಅಪ್ಪನನ್ನೇ ನೋಡು. ಈಗ ಆಸ್ತಿಯನ್ನು ಮಾರೋಣ ಎನ್ನುವಷ್ಟರ ತನಕ ಮುಂದೆ ಬಂದಿದ್ದಾನೆ. ಅಂದರೆ ಎಲ್ಲಿ ತನಕ ಬಂತು?" ಎಂದು ಅಜ್ಜಿಯು ವಿದ್ಯಾವಂತರಿಗೆ ಸಹಸ್ರನಾಮ ಹಾಕಿದಳು.

ಕಡೆಗೆ ಸದಾನಂದ ಕೇಳಿದ "ನನ್ನದೊಂದು ಅಪೇಕ್ಷೆ ಇದೆ ಅಜ್ಜಿ. ಅದನ್ನು ನೀವು ನಡೆಸಿಕೊಡಬೇಕು"

"ಏನಪ್ಪಾ ಹೇಳು. ಎಂತಾದ್ದು ಅದು?"

"ಮತ್ತೇನೂ ಇಲ್ಲ ಅಜ್ಜಿ. ನೀವು ಮೂಡುಮನೆಗೆ ಬಂದು ಅಲ್ಲಿ ಇದ್ದು ನನಗೆ ಆಶೀರ್ವಾದ ಮಾಡಬೇಕು" ಸದಾನಂದನ ಅಪೇಕ್ಷೆ ಮುದುಕಿಗೆ ಅನಿರೀಕ್ಷಿತವಾಗಿತ್ತು. ಆಕೆ ಸಾವರಿಸಿಕೊಂಡು "ಏನು ಹೇಳ್ತಿ ಮಗು ಸದಾನಂದ? ನಾನು ಮೂಡುಮನೆಗೆ ಬರೋದು ಅಂದರೆ ಏನು? ನನಗೆ ಬಸ್ಸುಮಾರ್ಗದ ತನಕ ನಡೆಯೋಕೆ ಸಾಧ್ಯನಾ? ಹಾಗೇ ನಡೆದೇ ಅಂತ ಇಟ್ಟುಕೊ. ನಿನ್ನ ಅಜ್ಜ ಸತ್ತು ಇಷ್ಟು ವರ್ಷವಾಯಿತು. ಒಮ್ಮೆ ಯಾದರೂ ನಿನ್ನ ಅಪ್ಪ ಇಲ್ಲಿಗೆ ಬಂದನಾ? ಕಾಗದ ಹಾಕಿದನಾ? ನಾನು ಸತ್ತಿದ್ದೇನಾ ಬದುಕಿದ್ದೇನಾ ಅಂತ ನೋಡಿದನಾ? ನನಗೆ ಮಕ್ಕಳಿಲ್ಲದಿದ್ದರೂ ಕೂಡ ನರಸಿಂಹ ತನ್ನ ತಾಯಿಯಂತೆ ನನ್ನನ್ನು ನೋಡಿಕೊಂಡ. ನೀನು ಈಗ ಬಂದು ಸುಖದ ಸುಪ್ಪತ್ತಿಗೆಯಲ್ಲಿ ಕೂಡಿಸುತ್ತೇನೆ ಅಂದರೆ ಇಷ್ಟು ವರುಷ ನೋಡಿದ ನರಸಿಂಹನಿಗೆ ನನ್ನ ಬಗ್ಗೆ ಹೇಗೆ ಅನಿಸಲಿಕ್ಕಿಲ್ಲ. ಕೊಟ್ಟ ಮೇಲೆ ಕುಲಕ್ಕೆ ಹೊರಗಂತೆ ಹೆಣ್ಣು. ಹುಟ್ಟೋದು ಒಂದು ಕಡೆಯಾದರೆ ಸಾಯೋದು ಒಂದು ಕಡೆ. ಇನ್ನು ಸಾಯೋಕೆ ನನ್ನ ನೆಲವೇ ಇರುವಾಗ, ಯಾಕೆ ಮೂಡುಮನೆಗೆ ಬರಬೇಕು ಹೇಳು? ನನಗೆ ಇನ್ನು ಯಾವ ಸುಖ ಯಾವುದಕ್ಕೆ? ನಿನಗೆ ನನ್ನ ಮೇಲೆ ಪ್ರೀತಿ ವಿಶ್ವಾಸ ಇದ್ದರೆ ಸಾಯುವ ಕಾಲಕ್ಕೆ ಬಂದು ಒಂದಿಷ್ಟು ತುಳಸಿ ನೀರು ಹಾಕಿ ಬಿಡು. ನೀನೆ ನನ್ನ ಮಗ ಅಂತ ಗ್ರಹಿಸುತ್ತೇನೆ. ಈಗೇನ ಊ ಬೇಜಾರು ಮಾಡಬೇಡ......!"



ಮುಂದೆ ಹೇಳಲಾಗದ ಮುದುಕಿ ಬಾಗಿ ಸದಾನಂದನ ತಲೆಯ ಮೇಲೆ ಕೈಯಿಟ್ಟು ಕಣ್ಣಲ್ಲಿ ನೀರು ತುಂಬಿಸಿಕೊಂಡು ಆಶೀರ್ವದಿಸಿದಳು. ಇದುತನಕ ಇಂತಹ ಸನ್ನಿವೇಶ ನೋಡದ ಕಾರಂತರ ಕಣ್ಣಲ್ಲೂ ನೀರು ಬಂತು. ಅವರು ವೀಳ್ಯದ ರಸ ಉಗುಳಲಿಕ್ಕೆ ಅಂಗಳದ ತುದಿಗೆ ಹೋದವರು – ಅಲ್ಲೇ ಕಣ್ಣೊರೆಸುತ್ತಾ ನಿಂತರು.

ಸದಾನಂದ ಅಭಿಮಾನಿಯಾದ ಅಜ್ಜಿಯು ಮುಂದೆ ಏನೂ ಹೇಳದಾದ. ಆದರೂ ವಿವರ್ಣವಾಗಿ ಹೇಳಿದ. "ಆಗಲಿ ಅಜ್ಜಿ ನಿಮ್ಮ ಇಷ್ಟ. ನಿಮ್ಮ ದರ್ಶನ ಸಿಕ್ಕಿದ್ದೇ ನನ್ನ ಭಾಗ್ಯ. ನಿಮಗೇನಾದರೂ ಅಸೌಖ್ಯವಾದಲ್ಲಿ ತಿಳಿಸಿ. ಅಗತ್ಯ ಬಂದು ನೋಡಿ ಹೋಗ್ತೇನೆ".

ಕಾವೇರಮ್ಮ ಹೂಂಗುಟ್ಟಿದರು. ಮುಂದೆ ಹತ್ತು ನಿಮಿಷದ ತನಕ ಕಷ್ಟ ಸುಖ ಮಾತನಾಡುತ್ತಾ ಕುಳಿತು ಕಾರಂತರೂ ಸದಾನಂದನೂ ಹೊರಡಲು ಸಿದ್ಧರಾದರು. ಅಂಗಳದ ತುದಿ ತನಕ ಬಂದು ಒಮ್ಮೆಗ ನಿಟ್ಟುಸಿರು ಬಿಟ್ಟು ಕಾವೇರಮ್ಮ ತಮಗೇ ತಾವೇ ಹೇಳಿಕೊಂಡರು.

"ಅಣ್ಣನಂಥಾದ್ದೆ ರೂಪ, ಅವನದ್ದೇ ಗುಣ. ಅವನಿಗೆ ಹೇಗೆ ಹುಟ್ಟಿಕೊಂಡನೋ ಏನೋ ಆ ನರ್ಸ್ ಪ್ರಿಯ್ತು. ಎಲ್ಲರನ್ನೂ ಮರೆತು ಹೋದ ಆ ಬುದ್ಧಿ ಏಂತ!"

× × × ×

ವಿಜಯಪುರದಲ್ಲಿ 'ಗೀತಾ ಕ್ಲಿನಿಕ್'ನ ಆರಂಭೋತ್ಸವ ಜರುಗಿತು. ಖಾಲಿಬಿದ್ದ ಕಟ್ಟೋಣದಲ್ಲಿ ಡಾ. ಸದಾನಂದನ ವಾಸ್ತವ್ಯವಾಯಿತು. ವರಾಂಡದ ಹೊರಗೆ ದೊಡ್ಡ ಕರಿಹಲಗೆ ತೂಗಹಾಕಲ್ಪಟ್ಟಿತು, 'ಗೀತಾ ಕ್ಲಿನಿಕ್' ಎಂಬ ಅಭಿದಾನವನ್ನು ಹೊತ್ತು. ಅದರಲ್ಲೇ ಚಿಕಿತ್ಸಾ ಸಮಯ ನಿರ್ದೇಶನ: ಬೆಳಗ್ಗೆ ೯ ಗಂಟೆಯಿಂದ ೧೨½ಯ ತನಕ. ಸಂಜೆ ೩½ಯಿಂದ ೬½ ತನಕ.

ಆರಂಭದ ಎರಡು ದಿನಗಳಲ್ಲಿ ಆಸ್ಪತ್ರೆಗೆ ಬಂದ ರೋಗಿಗಳಾರೂ ಇಲ್ಲ. ಸಂಜೆಯ ಹೊತ್ತಿಗೆ ಕಾರಂತರು ಬಂದರೆ ಬೆಳಗ್ಗೆ ಮೊಗಸಾಲೆ ಕೃಷ್ಣರಾಯರು ಸದಾನಂದನಿಗೆ ಗಂಟುಬಿದ್ದರು. ಆದರೆ ದಿನಕಳೆದಂತೆ ವಿಜಯಪುರದಲ್ಲಿ ಡಾಕ್ಟರಿದ್ದಾರೆ ಎಂಬ ವರ್ತಮಾನ ಹರಡಿ ಆಚೀಚೆ ಹೋಗುತ್ತಿದ್ದ ರೋಗಿಗಳು ಒಬ್ಬಿಬ್ಬರು ಗೀತಾ ಕ್ಲಿನಿಕನ್ನು ಅರಸಿ ಬರತೊಡಗಿದರು.

ಗೀತಾ ಕ್ಲಿನಿಕಿಗೆ ಬರುವ ರೋಗಿಗಳಿಗೆ – ವರಾಂಡ ಮೇಲೆ ಕಾಲಿರಿಸಿದಾಗ ಕಾಣುವುದು – ಅಗಲವಾದ ಮೇಜು, ಮೇಜಿನ ಹಿಂದೆ ಕುರ್ಚಿ, ಅಲ್ಲಿ ಕುಳಿತ ಡಾ. ಸದಾನಂದ. ಅವನ ಹಿಂದೆಯೇ ಗೋಡೆಯಲ್ಲಿ ಕನ್ನಡಿ ಹಾಕಿದ, ತೂಗಹಾಕಿದ ಪಾರ್ಕ್‌ಡೇವಿಸ್‌ನವರ ಸುಂದರವಾದ ಕ್ಯಾಲೆಂಡರ್‌ಗಳು. ಕೋಣೆಯ ಮೂರು ಬದಿಯಲ್ಲಿ ಒರಗು ಬೆಂಚುಗಳು. ಮೇಜಿನ ಎದುರಿಗೆ ಎರಡು ಕುರ್ಚಿ.

ಸದಾನಂದ ಬಂದ ರೋಗಿಗಳನ್ನು ಸ್ವಾಗತಿಸುತ್ತಾನೆ. ನಿಧಾನವಾಗಿ ಅವರ ಕಾಯಿಲೆಯ ಬಗೆಗೆ ವಿಚಾರಿಸುತ್ತಾನೆ. ಒಳಗಿನ ಕೋಣೆಗೆ ಕರೆದೊಯ್ದು ಪರೀಕ್ಷಿಸುತ್ತಾನೆ. ಮತ್ತೆ ಔಷಧ ಕೊಡುತ್ತಾನೆ. ಪ್ರತಿನಿತ್ಯದ ಅವನ ಕೆಲಸವೆಂದರೆ ಇಷ್ಟೆ. ದಿವಸದಲ್ಲಿ ಆರುವರೆ ಗಂಟೆಯ ಕೆಲಸ.

ಜೂನ್ ತಿಂಗಳು ಕಾಲಿರಿಸಿದ್ದೇ ತಡ, ಒಮ್ಮೆಲೇ ಆಕಾಶದಲ್ಲಿ ರಾಕ್ಷಸಗಾತ್ರದ ಮೋಡಗಳು ಕಾಣಿಸಿಕೊಂಡವು. ಅವುಗಳ ಘರ್ಷಣೆ, ಗುಡುಗು ಸಿಡಿಲು ಮಿಂಚಿನಿಂದ ಆರಂಭವಾದ ಮಳೆ ಎಡೆಬಿಡದೆ ಸುರಿಯತೊಡಗಿತು. ಮಳೆಯನ್ನು ಹಿಂಬಾಲಿಸಿಕೊಂಡೇ ಕಾಯಿಲೆಗಳೂ ಬಂದವು. ಸದಾನಂದನ ರೋಗಿಗಳ ಸಂಖ್ಯೆ

ವಿರತೊಡಗಿತು. ಅವನ ಔಷಧದ ಪ್ರಚಾರವೂ ಆಚೀಚೆ ಹರಡಿತು. ಬೆಳಗ್ಗೆ ಆತನ ಡಿಸ್ಪೆನ್ಸರಿಯ ಬಾಗಿಲು ತೆರೆಯುವುದನ್ನೇ ಕಾಯುತ್ತಾ ರೋಗಿಗಳು ಕೂತುಕೊಳ್ಳುವ ಕಾಲವೂ ಬಂತು.

ಈ ತನ್ಮಧ್ಯೆ ಸದಾನಂದನಿಗೆ ಹಳ್ಳಿಯ ಮೂಲೆ ಮೂಲೆಗೂ ಹೋಗಿ ರೋಗಿಗಳನ್ನು ಪರೀಕ್ಷಿಸಲು ಕರೆ. ಹೋಗದೆ ನಿರ್ವಾಹವಿಲ್ಲ. ರೋಗಿಯ ಜೀವ ಉಳಿಸಬೇಕಾದರೆ ಹೋಗಲೇಬೇಕು. ಹೋಗುವುದೆಂದರೆ ಅದೇನೂ ಸುಲಭದ ಕೆಲಸವಲ್ಲ. ಗದ್ದೆಹುಣಿಗಳನ್ನು ತುಳಿದು ತೋಡುಕಣಿವೆಗಳನ್ನು ದಾಟಿ, ತಡದುದಾರಿಗುಂಟಗಳನ್ನು ಹತ್ತಿ, ಇಳಿದು ಗುಡ್ಡೆಬಯಲನ್ನು ಸುತ್ತಿ ಹೋಗುವುದು ಎಷ್ಟು ತ್ರಾಸದಾಯಕವೋ ಅಷ್ಟೇ ಶ್ರಮದಾಯಕವೂ ಹೌದು. ಒಂದು ಕಡೆ ಹಳ್ಳಿಯ ಅಡಚಣೆಯ ದಾರಿಗಳು ಈ ರೀತಿ ತಾಪತ್ರಯ ಕೊಟ್ಟರೆ, ಇನ್ನೊಂದು ಕಡೆಯಲ್ಲಿ ಒನಕೆ ಗಾತ್ರದಲ್ಲಿ ಸುರಿಯುವ ಮಳೆ. ಹೋಗಿ ರೋಗಿಯನ್ನು ಪರೀಕ್ಷಿಸಿ ತಕ್ಕುದಾದ ಔಷಧ ಕೊಟ್ಟರೂ ಸರಿಯಾದ ಉಪಚಾರ ಮಾಡಲು ಅರಿಯದ ವಿದ್ಯಾವಂತ ಹಳ್ಳಿಗರು. ಅವರ ನಡವಳಿಕೆಯೋ – ಸದಾನಂದನಿಗೆ ನಗಬೇಕೋ – ಅಳಬೇಕೋ ಅರ್ಥವಾಗುತ್ತಿದ್ದಿಲ್ಲ.

ಇದರಿಂದ ಸದಾನಂದನ ಪ್ರ್ಯಾಕ್ಟಿಸ್ ದಿನೇದಿನೇ ಅಭಿವೃದ್ಧಿಯಾಗುತ್ತದೆ. ಅವನಲ್ಲಿ ಆತನ ಔಷಧಿಯಲ್ಲಿ ಜನರಿಗೆ ವಿಶ್ವಾಸ ಬಂದಿದೆ.

ತನ್ಮಧ್ಯೆ ಸದಾನಂದನಿಗೆ ರಾಘವ ಪತ್ರಿಸಿದ್ದಾನೆ.

"ನೀನು ಮಾಡಿದ್ದು ತಪ್ಪು ಎನ್ನುವವ ನಾನಲ್ಲ ಅಣ್ಣ. ಅಪ್ಪ ಅಮ್ಮನ ದೃಷ್ಟಿಕೋನವೇ ಬೇರೆ. ವಿಚಾರವಂತರಿಗೆ ಸ್ವತಂತ್ರವಾಗಿ ಚಿಂತಿಸುವ, ವರ್ತಿಸುವ ಹಕ್ಕಿದೆ. ನಿನ್ನ ಪ್ರತಿ ಹೆಜ್ಜೆಯಲ್ಲೂ ನನ್ನ ಸಹಕಾರವಿದೆ. ನನ್ನ–ನಿನ್ನಲ್ಲಿರುವ ಸಹೋದರ ವಾತ್ಸಲ್ಯ ಎಂದೆಂದಿಗೂ ಮರೆಯುವಂತಾದ್ದಲ್ಲ.

"ನೀನು–ನಮ್ಮ ಆಸ್ತಿಯಲ್ಲಿ ಕೃಷಿ ಮಾಡುವುದರ ಬಗ್ಗೆ ಹಾಕಿರುವ ಯೋಜನೆಗಳನ್ನು ನಾನು ಮನಸಾರೆ ಮೆಚ್ಚಿದೆ. ನಾನು ನಿನ್ನ ಹಾಗೆ ಕೃಷಿಯಲ್ಲಿ ಅನನುಭವಿ. ಆದರೂ ನಿನ್ನ ಯೋಜನೆಗಳು ಯಶಸ್ಸಿನ ದಾರಿಯಲ್ಲೇ ಸಾಗೀತು ಎಂಬ ಭರವಸೆ ಇದೆ. ಅದಕ್ಕಾಗಿ ನೀನು ಆಗಾಗ ತಿಳಿದವರ ಸಲಹೆ ಪಡೆಯುವುದು ಉತ್ತಮವಾದೀತು.

"ನಿನ್ನ ಪತ್ರದ ಅಭಿಪ್ರಾಯದ ಮೇರೆಗೆ ನಿನ್ನ ಆರ್ಥಿಕ ಸ್ಥಿತಿಯೂ ಹೀನವಾಗಿರಬಹುದೆಂದು ಊಹಿಸಿದೆ. ಸದ್ಯ ನನ್ನ ಸ್ಥಿತಿ ಚಿಂತಿಲ್ಲ. ನಿನ್ನ ಪ್ರ್ಯಾಕ್ಟಿಸ್ ಉತ್ತಮವಾಗುವ ತನಕ, ನಿನ್ನ ಯೋಜನೆಗಳು ಗುರಿ ಮುಟ್ಟುವ ತನಕ ಅವಶ್ಯಬಿದ್ದಾಗ ನಿಸ್ಸಂಕೋಚವಾಗಿ ಬರೆ. ಅಗತ್ಯ ಕಳುಹಿಸುತ್ತೇನೆ.

"ನೀನು ನಿನ್ನ ಕೈಯಲ್ಲಿರುವುದನ್ನೆಲ್ಲ ಬರಿದು ಮಾಡಿ ಕುಳಿತಿದ್ದಿಯಾ? ಅದಕ್ಕಾಗಿ ಎರಡು ಸಾವಿರ ರೂ.ಗಳ ಚೆಕ್ಕನ್ನು ನಿನಗೆ ಈ ಪತ್ರದ ಜೊತೆಗೆ ಕಳುಹಿಸಿದ್ದೇನೆ. ನಿನ್ನೆಲ್ಲಾ ವಿಚಾರಗಳಿಗೆ ಆಗಾಗ ಬರೆಯಲು ಮರೆಯಬೇಡ."

ಪತ್ರ – ಓದಿ ಮುಗಿಸಿದ ಸದಾನಂದನಿಗೆ ಅತಿ ನೆಮ್ಮದಿ ಎನಿಸಿತ್ತು. ಆ ದಿನ ತನ್ನ ಸಹೋದರ ದುಡ್ಡು ಕಳುಹಿಸಿದ ಎಂಬುದಕ್ಕಿಂತಲೂ ಅವನ ಸಹಕಾರ ತನ್ನ ಮೇಲಿದೆಯಲ್ಲಾ ಎಂಬುದೇ ಅವನ ನೆಮ್ಮದಿಗೆ ಕಾರಣ. ಅವನು ಹಾಗೆ ಕೋಳ್ಯೂರಿಗೆ ಹೊರಟು ಬರುವಾಗ ಕೈಯಲ್ಲಿದ್ದುದನ್ನೆಲ್ಲಾ ಹಿಡಿದುಕೊಂಡೆ ಬಂದಿದ್ದ. ಅದು ಅವನ ಬಿಡಾರಕ್ಕೆ, ಆಸ್ಪತ್ರೆಗೆ ಖರ್ಚಾಗಿತ್ತು. ಆದರೆ ಸುಧಾರಿಸಿದ ಪ್ರ್ಯಾಕ್ಟಿಸ್ ಅವನಿಗೆ ಯಾರ ಹಂಗೂ ಇಲ್ಲದೆ ಕಾಲಯಾನ ಮಾಡುವಷ್ಟು ಆತ್ಮವಿಶ್ವಾಸವನ್ನು ಅವನಲ್ಲಿ ಹುಟ್ಟಿಸಿತ್ತು.

ಸದಾನಂದ, ತಮ್ಮನಿಂದ ಬಂದ ಪತ್ರ ಹಾಗು ಹಣದ ವಿಚಾರ ಕಾರಂತರಿಗೆ ತಿಳಿಸದೆ ಇರಲಿಲ್ಲ. ಕಾರಂತರಿಗೂ ರಾಘವನ ಪತ್ರ ತುಂಬ ಹಿಡಿಸಿತ್ತು. ಅವರು ಸದಾನಂದ ಮೂಡುಮನೆಯಲ್ಲೇ ವಾಸವಾಗಿದ್ದರೂ ದಿನಕ್ಕೊಂದು ಬಾರಿ – ಅಂದರೆ ಸದಾನಂದ ಆಸ್ಪತ್ರೆಗೆ ಹೊರಡುವ ಮೊದಲು ಹಾಗೂ ರಾತ್ರೆ ಆತ ಆಸ್ಪತ್ರೆಯಿಂದ ಮರಳಿದ ಮೇಲೆ ಬಾರದೆ ಇರುತ್ತಿದ್ದಿಲ್ಲ. ಈಗಿನ ಅವರ ಮಾತುಕತೆ ಬರೇ ಹರಟೆಗೆ ಮೀಸಲಾಗಿರಿಸದೆ ಸದಾನಂದನ ಕೃಷಿಯೋಜನೆಗಳ ಕುರಿತೇ ಆಗಿತ್ತು.

## ನಿರ್ಮಾಪಕನು ಹೇಳಿದ್ದು




ಮೈಸೂರೆ ಒಳ್ಳೆಯದು ಸಬ್ಸಿಡಿ
ಸಿಗಲು
ಇಲ್ಲವಾದರೆ ಹತ್ತು ಮದ್ರಾಸ ರೈಲು
ಸಿಕ್ಕಲ್ಲಿ ಸಿಕ್ಕಷ್ಟು ಹೊಡೆಯುತಲಿ ಜಾಣ
ಕಳಪೆ, ಚಿತ್ರಗಳು ನೂರಾರು ನಿರ್ಮಾಣ.

—ಎಂ. ಗೋವಿಂದ.

ಕಾರಂತರ ಮನೆಯಲ್ಲಿ ವಿಶೇಷ ಅಡಿಗೆ ಏನಾದರೂ ಇದ್ದರೆ, ಹಬ್ಬಹುಣ್ಣಿಮೆಗೆ ಸದಾನಂದನನ್ನು ಕಾರಂತರು ಆಮಂತ್ರಿಸುತ್ತಿದ್ದರು. ಬೇಡ ಎಂದು ಸದಾನಂದ ಹೇಳುತ್ತಿದ್ದ. ಕಾರಂತರೂ ಬಿಡುತ್ತಿದ್ದಿಲ್ಲ. "ಸುಮ್ಮನೆ ಬೇಕಾದರೆ ಬರುತ್ತೇನೆ. ತಿನ್ನಲಿಕ್ಕಾಗಿ ಕರೆಯಬೇಡ" ಎಂದು ಸದಾನಂದ ಹೇಳಿದರೂ ಆತ ವಾರಕ್ಕೊಮ್ಮೆ – ಎರಡು ಬಾರಿಯಾದರೂ ಅವರ ಮನೆಗೆ ಹೋಗದಿಲ್ಲ. ಹೋದಾಗ ಕಾರಂತರು ಇಲ್ಲದಿದ್ದರೂ ತುಂಗಮ್ಮ ಸದಾನಂದನನ್ನು ಆದರದಿಂದ ಬರಮಾಡಿಕೊಂಡು ಮಾತನಾಡುತ್ತಿದ್ದಳು, ಸತ್ಕರಿಸುತ್ತಿದ್ದಳು.

ಕಾರಂತರ ಈ ಸೌಜನ್ಯ ವಾತಾವರಣದ ಸಂಸಾರದಲ್ಲಿ ಸದಾನಂದ ಹಳ್ಳಿಯ ಜೀವನವನ್ನು ಮೆಚ್ಚಿಕೊಂಡ. ಆರಂಭದ ದಿನಗಳು ಪೇಟೆಯ ಜೀವನದ ಸ್ಮೃತಿಗಳನ್ನು ತರುತ್ತಿದ್ದರೂ ದಿನಕಳೆದಂತೆ ಈಗ ಹಳ್ಳಿಯ ಅಭ್ಯಾಸವಾಗಿತ್ತು ಅವನಿಗೆ.

ಸದಾನಂದನ ಅಡಿಗೆಭಟ್ಟ ಶಂಕರ ಒಳ್ಳೆಯ ಚುರುಕು ಬುದ್ಧಿಯ ಹುಡುಗನಾಗಿದ್ದ. ಸದಾನಂದನಿಗೆ ಬೇಕಾದಂತೆ ವರ್ತಿಸುತ್ತಿದ್ದ. ಅವನ ಕೆಲಸದಲ್ಲಿ ಸಹಭಾಗಿಯಾಗಿದ್ದ. ಆದರೆ ಅವನ ಅಡಿಗೆ – ಊಟ ಅಷ್ಟೇನೂ ಹಿತಕರವಾಗುತ್ತಿದ್ದಿಲ್ಲ –ಸದಾನಂದನಿಗೆ. ಆದರೂ ಆತ ಸಹಿಸಿಕೊಂಡಿರಬೇಕಾಗಿತ್ತು.

ಆಗ ಅವನಿಗೆ ವಸಂತಿಯ ನೆನಪಾಗುತ್ತದೆ. ಅವಳ ಮೇಲಿನ ಪ್ರೀತಿ, ಅವನು ಅವಳಿಗೆ ಪತ್ರಿಸುವಂತೆ ಮಾಡುತ್ತದೆ. ಪತ್ರ ಬರೆದು ಮುಗಿಸಿದ ರಾತ್ರೆ – ಯಾಕೋ ಅವನಿಗೆ ಎಂದಿನಂತೆ ನಿದ್ರೆಯೇ ಹತ್ತುವದಿಲ್ಲ. ಪತ್ರದಲ್ಲಿ ಬರೆದುದನ್ನೇ ತಿರುಗಿ ತಿರುಗಿ ಮೆಲುಕಾಡುತ್ತಾನೆ. ಕಡೆಗೆ ಬರೆದುದು ಸರಿ ಎಂಬ ತೀರ್ಮಾನಕ್ಕೆ ಬರುತ್ತಾನೆ. ಅವಳ ಬಗ್ಗೆ ದಟ್ಟವಾಗಿ ಯೋಚಿಸುತ್ತಾನೆ. ಕಡೆಗೆ ನಿದ್ದೆಹೋಗುತ್ತಾನೆ.

ಆದರೆ ಮರುದಿನ ಎದ್ದಾಗ, ಕಾರಂತರ ಮುಖ ಕಂಡಾಗ ಇದೆಲ್ಲಾ ಬರೇ ಕನಸು ಎಂಬಂತಾಗುತ್ತದೆ. ಅವನ ಉತ್ಸಾಹ ಇಮ್ಮಡಿಸುತ್ತದೆ. ಯಾವಾಗ ಮಳೆಗಾಲ ಮುಗಿಯುವದು? ಎಂದು ತನ್ನ ಯೋಜನೆಗಳು ಕಾರ್ಯರೂಪಕ್ಕೆ ಇಳಿದಾವು? ಎಂಬುದನ್ನು ಕಾದುನೋಡುತ್ತಾನೆ.

ಹಾಗೇ – ಕಾರಂತರಿಗೂ ಕೇಳುತ್ತಾನೆ "ಇನ್ನೆಷ್ಟು ಸಮಯ ಬೇಕು ಕಾರಂತರೇ ಪೈರಿನ ಕಟಾವಿಗೆ. ನಾವು ಈಗಲೇ ಪೂರ್ವಸಿದ್ಧತೆ ಮಾಡಬೇಡವಾ ಕೆಲಸಕ್ಕೆ,"

**–೯–**

ಪ್ರಥಮ ಬೆಳೆಯ ಕಟಾವು ತೀರಿಸಿ, ಎರಡನೆ ಬೆಳೆಗೆ ಬೀಜಹಾಕದೆ, ಗದ್ದೆಗೆ ಅಡಿಕೆ ಸಸಿ ಹಾಕುವ ಸಿದ್ಧತೆಗೆ ಸದಾನಂದ ಈಗ ಬಂದಿದ್ದ. ಸುಮಾರು ಅಕ್ಟೋಬರ ತಿಂಗಳಿನ ಆರಂಭದ ಅಥವ ಹಿಂದಿನ ದಿನಗಳು ಇದಕ್ಕೆ ಪ್ರಶಸ್ತ ಸಮಯ. ನಾಲ್ಕು ಬಾಕಿಮಾರು ಗದ್ದೆಗಳಲ್ಲಿ ಒಂದು ಕಂಬಳದ ಗದ್ದೆಯಲ್ಲಿ ಚಚ್ಚೌಕದ ಸುಮಾರು ಮೂರಡಿ ಚದರಳತೆಯ ಹೊಂಡಗಳನ್ನು ಒಂದರಿಂದ ಇನ್ನೊಂದು ಹನ್ನೆರಡು ಅಡಿಯಷ್ಟು ದೂರಬಿಟ್ಟು ಅಗೆಸುವ ಸಿದ್ಧತೆಗೆ ಆತ ತೊಡಗಿದ.

ಸದಾನಂದ ಮುಂಜಾನೆ ಎದ್ದವನೇ ಕಾಫಿ ತೀರಿಸಿ, ಗದ್ದೆಯ ಬದಿಗೆ ಈಗ ಬರುತ್ತಾನೆ. ಅವನ ಜೊತೆಯಲ್ಲೇ ಹತ್ತು ಹದಿನೈದು ಮಂದಿ ಕೂಲಿಯಾಳುಗಳು ಹಾರೆ ಪಿಕ್ಕಾಸುಧಾರಿಗಳಾಗಿ ಕೆಲಸಕ್ಕೆ ಸನ್ನದ್ಧರಾಗಿಯೇ ಬರುತ್ತಾರೆ. ಆತ ಬಂದವ ಒಂದರ್ಧ ಗಂಟೆ ಇದ್ದು ಮೊದಲ ದಿನದ ಕೆಲಸವನ್ನು ವಿಮರ್ಶಿಸಿ ಹೊರಟು ಹೋಗುತ್ತಾನೆ. ಮನೆಗೆ ಹೋದವ ಆಸ್ಪತ್ರೆಗೆ ಹೊರಡುವಾಗ, ಅಡಿಗೆ ಕೆಲಸ ಮಾಡಿದ ಮೇಲೆ ಕೆಲಸದಾಳು

ಗಳು ಇದ ಲ್ಲಿಗೆ ಹೋಗುವಂತೆ ಶಂಕರನಿಗೆ ಆದೇಶವಿತ್ತು. ಪಿಡಾಯುಪದವಿನ ಗುಡ್ಡ ಏರುತ್ತಾನೆ.

ಕಾರಂತರಿಗೆ ಬೇಸಾಯದ ಕೆಲಸ ಮುಗಿಯದಿದ್ದು ದರಿಂದ ಅವರಿಗೆ ಬಿಡುವಿಲ್ಲದಾಗಿದೆ. ಆದರೂ ಸಂಜೆಯ ಪ್ರೋಗ್ರಾಂ ಅವರದ್ದು ಇದ್ದೇ ಇದೆ. ಸದಾನಂದನ ಮನೆಯಲ್ಲಿ. ಹಗಲಲ್ಲೂ ಹಾಗೇಸದಾನಂದ ನಡುನಡುವೆ ಅಡಿಕೆಸಸಿ ಇರುವ ಸ್ಥಳವನ್ನು ಸಂದರ್ಶಿಸುತ್ತಾನೆ. ಕೆಲಸದವರೊಡನೆ ಅರ್ಧ ಮುಕ್ಕಾಲು ಗಂಟೆ 'ಪಟ್ಟಾಂಗ' ಹೊಡೆದು ಸದಾನಂದನನ್ನು ಹೊಗಳಿ, ಶಿಖರಕ್ಕೇರಿಸಿ ಎರಡು ಸಲ ವೀಳ್ಯ ಜಗಿದು ದಾರಿಯುದ್ದಕ್ಕೂ ಉಗುಳುತ್ತಾ ಏನೇನೊ ಯೋಚಿಸಿಕೊಂಡು ಬರುತ್ತಾರೆ.

ಸುಮಾರು ಒಂದೂವರೆ ಸಾವಿರದಷ್ಟು ಅಡಿಕೆಸಸಿ ನಡುವ ಹೊಂಡಗಳು ಸಿದ್ಧತೆಯಾಯಿತು ಎನ್ನುವಾಗ, ಸದಾನಂದ ಮಂಜೇಶ್ವರದ ಬಿ. ಡಿ. ಒ. ಆಫೀಸಿಗೆ ಹೋದ. ಅಲ್ಲಿಯ ಫಾರ್ಮಿನಿಂದ ಅಡಿಕೆಸಸಿಗಳನ್ನು ಪಡೆದು ಅದೇ ದಿನ ಸಂಜೆ ಲಾರಿ ಮಾಡಿಕೊಂಡು ಅವುಗಳನ್ನು ಸಾಗಿಸಿದ. ಒಂದುವರೆ ಅಷ್ಟು ಅಡಿಕೆಸಸಿಗಳನ್ನು ಸಾಗಿಸುವ ಕೆಲಸವಾಯಿತು. ಸದಾನಂದನಿಗೆ ಈಗ ಆಸಕ್ತಿಯು ಕೆಲಸಕ್ಕಿಂತಲೂ ಹೆಚ್ಚು ಕೃಷಿಯ ಕಡೆಗೆ ಒಲವು ಹರಿದಿತ್ತು.

ಮನೆಯ ಹಿಂದೆ ಸುಮಾರು ಒಂದು – ಒಂದೂವರೇ ಎಕ್ರೆ ಸ್ಥಳದಲ್ಲಿ ತೆಳ್ಳಗೆ ಕಾಡು ಹರಡಿತ್ತು. ಭೂಮಿ ಅಲ್ಲಲ್ಲಿ ಏರುಪೇರು ಇದ್ದರೂ ಕಣ್ಣನೋಟಕ್ಕೆ ಸಮತಟ್ಟಾಗಿತ್ತು. ಅದನ್ನು ಕಡಿದು ಗದ್ದೆ ಮಾಡಬೇಕೆಂಬ ಆಲೋಚನೆ ಸದಾನಂದನಿಗೆ ಮೊದಲೇ ಇತ್ತು. ಈಗ ತಾನು ಗದ್ದೆಯನ್ನು ಹಾಳು ಕೆಡವಿ, ಅಡಿಕೆಸಸಿ ಇಟ್ಟಷ್ಟು ಭೂಮಿ ಸ್ಥಳದಷ್ಟು ಭೂಮಿ ಗದ್ದೆಯಾಗಿ ಸಿಕ್ಕಿದರೆ, – ಒಂದಕ್ಕೊಂದು ತಾಳೆಯಾಗಬಹುದೆಂದು ಅವನ ವಾದ. ಮೇಲೆ ಹೊಳೆಯ ಬದಿಯ ಗದ್ದೆಗಳಲ್ಲಿ ಹೆಚ್ಚು ಪೈರು ಬರುತ್ತದೆ ಎಂಬ ವಾಕ್ಯ ಸುಳ್ಳು ಎಂಬುದನ್ನು ಆತ ಕಂಡುಕೊಂಡಿದ್ದ. ದಡ ಉಕ್ಕಿ ಹರಿದರೆ, ನೀರು ನಾಲ್ಕೈದು ದಿವಸ ಗದ್ದೆಯಲ್ಲಿ ನಿಂತರೆ, ಪೈರಿಗೆ ಗದ್ದೆಯನ್ನು ಆವರಿಸುವುದಷ್ಟೇ ಹೊರತು ನದಿಯ ನೀರಿನಲ್ಲಿ ಬಂದ ಕೆಸರುಮಣ್ಣು ಹೆಚ್ಚು ಫಲ ಕೊಡಲು ಕಾರಣವಾದರೂ ಈ ಪೈರಿಗೆ ಅದಕ್ಕೆ ಅಡೆತಡೆಯಾಗಿ ಬರುವುದು. ಇದಕ್ಕಿಂತ ಹೆಚ್ಚು ಗೊಬ್ಬರ ಹಾಕಿದರೆ, ಮನೆಯ ಹಿಂದಿನ ಕಾಡನ್ನೇ ಕಡಿದು ಗದ್ದೆ ಮಾಡಿದರೆ ಯಾಕೆ ಹೆಚ್ಚು ಬತ್ತ ಕೊಡಲಾರದು ಎಂದು ಅವನ ವಾದ.

ಆದರೆ ಈ ಯೋಜನೆ ಅಷ್ಟು ಸುಲಭದಲ್ಲಿ ಕಾರ್ಯಗತವಾಗುವ ಹಾಗೆ ಇರಲಿಲ್ಲ. ಕಾರಣ ಅವನ ಹಣದ ಮುಗ್ಗಟ್ಟು. ಪ್ರ್ಯಾಕ್ಟಿಸ್ ಎಷ್ಟೇ ಚೆನ್ನಾಗಿದ್ದರೂ ಅದರ ದುಡಿತ ಅವನ ಈ ಯೋಜನೆಗಳಿಗೆ ಎಲ್ಲಿಗೂ ಸಾಲದು. ಮೇಲೆ ಈಗಾಗಲೇ ನೀರಿನ ಹಾಗೆ ಅವನು ಹಣ ಸುರಿದಿದ್ದಾನೆ. ಇನ್ನು ನಾಲ್ಕೈದು ವರ್ಷ ಈಗ ಬೆಳೆಯುತ್ತಿದ್ದ ಗದ್ದೆಗಳಲ್ಲಿ ಅಡಿಕೆಸಸಿ ನಟ್ಟದ್ದರಿಂದ ಆ ಉತ್ಪತ್ತಿಯೂ ಇಲ್ಲ. ತೋಟಕ್ಕೆ ನೀರಿನ ಆಶ್ರಯ ತುಂಬಾ ಇದ್ದುದರಿಂದ ೫ ಎಚ್.ಪಿ.ಯ ಒಂದು ಪಂಪ್ ಅವನಿಗೆ ಅವಶ್ಯವಿತ್ತು. ಇಷ್ಟಕ್ಕೆಲ್ಲ ದುಡ್ಡು ಹಾಕುವುದೆಂದರೆ ಸಾಮಾನ್ಯವೇ! ಅದರಿಂದಾಗಿ ಆತ ಸದ್ಯಕ್ಕೆ ಇಷ್ಟೇ ಸಾಕು ಎಂದು ಸುಮ್ಮನೆ ಇದ್ದುಬಿಡೋಣ ಎಂದು ಸಿದ್ಧಾಂತಕ್ಕೆ ಬಂದ. ಆದರೆ ಜೊತೆಯಲ್ಲೇ ರಾಘವ ತನ್ನ ನೆರವು ಬೇಕಾದರೆ ಬರೆ ಎಂದಿರುವಾಗ ತಾನೇಕೆ ಅವನಿಗೆ ಬರೆಯಬಾರದು? ತಾನು ತನ್ನ ಸ್ವಂತಕ್ಕಾಗಿ ಕೇಳೋದಿಲ್ಲವಷ್ಟೆ! ಕೃಷಿಯು ಅಭಿವೃದ್ಧಿಯಾದರೆ ಅದರಲ್ಲಿ ತಮ್ಮನಿಗೂ ಪಾಲು ಇದೆಯಷ್ಟೆ! ಏನೇ ಆಗಲೀ ಪತ್ರ ಬರೆದು ನೋಡೋಣ ಎಂದು–ರಾಘವನಿಗೆ ಈಗಾಗಲೇ ಮಾಡಿದ ಮುಂದೆ ಮಾಡುವ ಕೆಲಸದ ವಿವರಗಳನ್ನೆಲ್ಲಾ ತಿಳಿಸಿ ನೆರವು ಕೇಳಿ ಪತ್ರಿಸಿದ.

ಸದಾನಂದನ ಪತ್ರಕ್ಕೆ ಹತ್ತು ದಿನಗಳಲ್ಲಿ ಉತ್ತರ ಬಂತು. "ದುಡ್ಡಿಲ್ಲವೆಂಬ ಒಂದೇ ಕಾರಣಕ್ಕಾಗಿ ನೀನು ನಿನ್ನ ಕೃಷಿ ಕೆಲಸ ನಿಲ್ಲಿಸಬೇಡ. ನಿಮ್ಮೆಲ್ಲರ ಆಶೀರ್ವಾದದಿಂದ ನಾನೀಗ ಏಳುನೂರರ ತನಕದ ಸಂಬಳ ಪಡೆಯುತ್ತೇನೆ. ನಿನ್ನ ಕೆಲಸ ಕೊನೆಗೊಳ್ಳುವ ತನಕ ತಿಂಗಳೊಂದರ ಮುನ್ನೂರರಂತೆ ಕಳುಹಿಸುತ್ತೇನೆ" ಎಂದು ಆತ ಬರೆದು ಜೊತೆಯಲ್ಲಿಯೇ ಹಣವನ್ನು ಕಳುಹಿಸಿದ್ದ.

ಸದಾನಂದನಿಗೆ ತಮ್ಮನ ಪತ್ರವೇ ಸಾಕಾಯಿತು. ಅವನ ಉತ್ಸಾಹ ಕೆರಳಿಸಲು. ಹೇಗೆಂದರೂ ಕೂಲಿಯೊಬ್ಬನಿಗೆ ದಿನಒಂದರ ಒಂದುವರೇ ರೂಪಾಯಿ ಕೊಟ್ಟರಾಯಿತು. ದಿನಕ್ಕೆ ಹತ್ತು ಮಂದಿಯಂತೆ ದುಡಿಯಲಿ. ಹಾಗಾದರೆ ಆಗುವುದು ತಿಂಗಳಿಗೆ ನಾಲ್ಕುನೂರು ಐವತ್ತು ರೂಪಾಯಿ. ರಾಘವ ಹೇಗೂ ಮುನ್ನೂರು ಕೊಡುತ್ತಾನೆ. ತಾನು ನೂರ ಐವತ್ತು ಸೇರಿಸಿದರಾಯಿತು. ಒಂದಲ್ಲ ಎರಡಲ್ಲ ನಾಲ್ಕು ತಿಂಗಳು ಬೇಕಾದರೂ ಸಾಗಲಿ. ಅಂತೂ ಕಾಡು ಕಡಿದು ಗದ್ದೆಯಾಗಲೇಬೇಕೆಂದು ನಿಶ್ಚಯಿಸಿದ.

ಸರಿ. ಕೆಲಸಕ್ಕೆ ಆರಂಭವಾಯಿತು. ಮೂಡುಮನೆಯ ಹಿಂದಿನ ಕಾಡುಗಳ ದಮನ ಆರಂಭವಾಯಿತು. ಗಿಡ ಪೊದರುಗಳನ್ನು ಕಡಿದು, ಮುಳ್ಳುಮರಗಳನ್ನು ಕುಟ್ಟಿ, ಮೊದಲು ಕಾಡನ್ನು ಸಂಪೂರ್ಣ ಕೊಚ್ಚಿ ಕೆಡವಲಾಯಿತು. ಆನಂತರ ಭೂಮಿಯನ್ನು ಹರಡಿ, ಸಮತಟ್ಟು ಮಾಡಿ, ಅದರ ಸುತ್ತಲೂ ಓರೆಕೋರೆಯಾದ ಕಂದಕ ಅಗೆದು ಅದರ ಹೊರಗೆ ಮುಳ್ಳುಬೇಲಿ

ಯನ್ನು ಹಾಕಿ, ಹೊರಗಿನಿಂದ ದನಕರುಗಳ ಹಾವಳಿ ಗದ್ದೆಗೆ ಆಗದಂತೆ ಮಾಡಲಾಯಿತು.

ಸುಮಾರು ಮೂರು ತಿಂಗಳು ದಿನ ಈ ಕೆಲಸ ನಡೆಯಿತು. ಅದು ಮುಗಿದ ಕೂಡಲೇ ಹೊಳೆಯ ದಡಕ್ಕೆ ಕಲ್ಲು ಕಟ್ಟುವ ಕೆಲಸ ಆರಂಭವಾಯಿತು. ದಡದ ಉದ್ದಕ್ಕೂ –ಸದಾನಂದನ ಭೂಮಿ ಇರುವಷ್ಟು ಮಾತ್ರ – ಇದ್ದ ಮಳಲಿನ ರಾಶಿಯನ್ನು ಕಡಿದು ಹೊಳೆಯ ಮಧ್ಯಭಾಗಕ್ಕೆ ಎಳೆದು ರಾಶಿ ಹಾಕಿ, ಹೊಳೆಯ ದಡದಲ್ಲಿ ಒಂದರ ಮೇಲೊಂದರಂತೆ ಉದ್ದಕ್ಕೂ ಸುಮಾರು ಒಂದುವರೆ ಫರ್ಲಾಂಗಿನಷ್ಟು ದೂರ ಕಲ್ಲು ಕಟ್ಟಲಾಯಿತು. ದಡದಿಂದ ಮೇಲೆ ಕಲ್ಲು ಏರಿಸುವಾಗ ಎರಡು ಅಡಿಯಷ್ಟು ಅಗಲಕ್ಕೆ ಕಲ್ಲು ಇರಿಸಿ, ನಡುವೆ ಗಾರೆ ಹಾಕಿ, ನಾಲ್ಕು ನಾಲ್ಕು ಅಡಿಯಷ್ಟು ಎತ್ತರಕ್ಕೆ ಏರಿಸಿ, ಅದರ ಮೇಲೆ ಮಣ್ಣು ಹಾಸಿ, ಅದರಲ್ಲಿ ಕಳ್ಳರು ಬಾರದಂತೆ ಮುಂಜಾಗರೂಕತೆಗಾಗಿ ಕಳ್ಳಿಗಿಡಗಳನ್ನೂ ಮುಳ್ಳು ಸಸಿಗಳನ್ನೂ ನೆಡಲಾಯಿತು. ಇಷ್ಟೆಲ್ಲಾ ಮಾಡಿ ಮುಗಿಸಿ ತನ್ನ ಯೋಜನೆಗಳು ಒಂದು ಹಂತದಲ್ಲಿ ಬಂದುದನ್ನು ನೋಡಿ ಸದಾನಂದ ನೆಮ್ಮದಿಯ ನಿಟ್ಟುಸಿರು ಬಿಟ್ಟ. ಆಗಾಗ ಅಲ್ಲಿಗೆ ಬಂದು ಹೋಗುತ್ತಿದ್ದ ಕಾರಂತರು ಸದಾನಂದನ ಈ ಮಹತ್ ಸಾಧನೆಯನ್ನು ಕಂಡು ಬೆರಗಾಗಿ 'ಹುಟ್ಟಿದರೆ ಹುಟ್ಟಬೇಕು ಇಂಥ ಮಕ್ಕಳು. ರಾಮಹೊಳ್ಳರು ಇದ್ದರೆ ಈಗ ಎಷ್ಟು ಆನಂದಪಡುತ್ತಿದ್ದರೋ ಏನೋ' ಎಂದು ತಮ್ಮಲ್ಲೇ ಹೇಳಿಕೊಳ್ಳದೆ ಇರಲಿಲ್ಲ.

ಸದಾನಂದ ಕೋಳ್ಯೂರಿಗೆ ಬಂದು ಈಗ ಹತ್ತು ತಿಂಗಳುಗಳಾಗಿವೆ. ಈ ಅವಧಿಯಲ್ಲಿ ಅವನು ಮಾಡಿದ ಸಾಹಸಗಳೇನೂ ಕಡಿಮೆಯದಲ್ಲ. ಅವನ ಯೋಜನೆಯ ರೂಪರೇಖೆಗಳು ಈಗ ಮೈತಳೆದು ಬಂದಿದ್ದವು. ಇನ್ನು ಉಳಿದುದು ಎಂದರೆ ಅವು ಫಲ ಕೊಟ್ಟು ಸದಾನಂದನಿಗೆ ತೃಪ್ತಿ ಈಯುವುದು ಅಷ್ಟೆ!

ಈಗ ಸದಾನಂದನ ಮುಂದೆ ಇರುವ ಪ್ರಶ್ನೆ- ಅಡಿಕೆಸಸಿಗಳಿಗೆ ಇರುವ ನೀರಿನ ಕೊರತೆಯನ್ನು ಹೋಗಲಾಡಿಸುವ ಬಗೆ. 'ಮುನ್ನಿಪ್ಪಾಡಿ ಹೊಳೆ'ಗೆ ಪಂಪು ಇಟ್ಟರೆ, ಮಳೆಗಾಲ ಬರುವ ತನಕ ನೀರಿನ ಕೊರತೆ ಇಲ್ಲ. ಹೊಳೆಯಲ್ಲಿ ನೀರಿನ ಒರತೆ ಬಲವಾಗಿ ಇಲ್ಲದಿದ್ದರೂ ಅಲ್ಪ ಸ್ವಲ್ಪ ನೀರು ಹರಿಯುತ್ತಲೇ ಇರುತ್ತದೆ. ಹತ್ತು-ಹದಿನೈದು ಅಡಿ ಉದ್ದಕ್ಕೆ ಅಷ್ಟೇ ಆಳಕ್ಕೆ ದಡದ ಬದಿಯಲ್ಲಿ ಅಗೆದು ಅದಕ್ಕೆ ಪಂಪು ಇರಿಸಿದರೆ, ನೀರಿನ ಕೊರತೆ ನಿವಾರಣೆಯಾದೀತೆಂಬ ಭರವಸೆ ಇದೆ ಆತನಿಗೆ. ಅದೇನೂ ಅಂತಹ ಸಾಹಸದ ಕೆಲಸವಲ್ಲ. ವರ್ಷ ವರ್ಷವೂ ಹಾಗೆ ಮಾಡಬೇಕಾದರೂ ಅದಕ್ಕೆ ತಗಲುವ ಖರ್ಚು ಅಷ್ಟೇನೂ ಇಲ್ಲ. ಅದಕ್ಕಿಂತಲೂ ಮುಖ್ಯ ಹೊಳೆ ಹರಿಯುವುದು ಸರ್ಕಾರಿ ಸ್ಥಳವಾದುದರಿಂದ ಆ ಬಗ್ಗೆ ಜಿಲ್ಲಾ ಕಲೆಕ್ಟರರ ಅನುಮತಿ ಬೇಕಿತ್ತು. ಊರಿನ ಶಾನುಭಾಗರಲ್ಲಿ ಸದಾನಂದ ವಿಚಾರಿಸಿದ. ಅವರು ನೆರವು ಕೊಡುವ ಭರವಸೆ ಇತ್ತರು. ಆದರೆ ಜಿಲ್ಲಾ ಕಲೆಕ್ಟರರ ಅನುಮತಿ ಸಿಗಬೇಕಾದರೆ, ಈ ಪಂಪು ಇರಿಸಿದುದರಿಂದ ಉಳಿದವರಿಗೆ, ಅಂದರೆ ಅವನ ನೆರೆಕರೆಯವರಿಗೆ ತೊಂದರೆಯಾಗಬಾರದು. ಅವರಿಗೆ ಹೊಳೆಯ ಯಾವುದೇ ಉಪಕಾರವಿಲ್ಲದಿದ್ದರೂ ಅವರು ಸುಮ್ಮ ಸುಮ್ಮನೆ ಅರ್ಜಿ ಹಾಕಿದರೂ ಸಾಕು, ಕಲೆಕ್ಟರ ಅನುಮತಿ ಇಲ್ಲದಾಗುವುದು.

ಇದಕ್ಕೆ ಕಾರಣವಿಲ್ಲದೆಯೂ ಇಲ್ಲ. ಸದಾನಂದನ ಆಸ್ತಿಯ ಕೆಳಗಡೆ ಅವನ ಆಸ್ತಿಗೆ ತಾಗಿ ಹೊಳೆಯ ದಡ



ದಲ್ಲಿ ಮೂರು ನಾಲ್ಕು ಎಕ್ರೆ ಸ್ಥಳದಲ್ಲಿ ಹೊಸ ಹಿತ್ತಲು ರಾಮಶೆಟ್ಟರ ಗದ್ದೆ. ಸದಾನಂದ ಊರಿಗೆ ಬಂದಾಗಲೇ ಆತ ಹೇಳಲು ಆರಂಭಿಸಿದ್ದ. "ಈ ಡಾಕ್ಟರಿಗೆ ಹುಚ್ಚು! ಪೇಟೆ ಬಿಟ್ಟು ಹಳ್ಳಿಗೆ ಬಂದದ್ದು ಯಾಕೆ ಅಂತೀರಿ? ಪೇಟೆಯಲ್ಲಿ ಇವರ ಬೇಳೆಯೂ ಬೇಯಲಿಲ್ಲ. ಅಪ್ಪ ದೊಡ್ಡ ಕೆಲಸದಲ್ಲಿ ಇದ್ದಾರೆ ಅಂತ ಮಗ ಹೇಗೂ ನಾಲ್ಕು ನಾಲ್ಕು ಒಂದೊಂದು ಕ್ಲಾಸಿನಲ್ಲಿ ಓದಿ ಡಾಕ್ಟರನಾದ ಮಾತ್ರಕ್ಕೆ ಮುಗಿಯಿತೇ? ಕೊಂಡುಹೋದಲ್ಲಿ ಗುಣವಾಗದಿದ್ದರೆ ಯಾಕೆ ಹೋಗ್ತಾರೆ ಜನ ಅವರ ಹತ್ರ? ಅದಕ್ಕೆ ಈಗ ಈ ಹಳ್ಳಿಯವರನ್ನಾದರೂ ಸುಲಿಗೆ ಮಾಡೋಣ ಅಂತ ಬಂದದ್ದು".

ಆತ ಹಾಗೆ ಹೇಳಲಿಕ್ಕೆ ಕಾರಣ ಇಲ್ಲದೆಯೂ ಇಲ್ಲ. ರಾಮಹೊಳ್ಳರ ಕಾಲದಿಂದಲೇ ಆ ಎರಡು ಮನೆತನಕ್ಕೆ ವೈರ ಬೆಳೆದು ಬಂದಿತ್ತು. ಕಾರಣ ಏನು? ಯಾಕೆ? ಎಂಬುದು ಸ್ಪಷ್ಟ ಯಾರಿಗೂ ಗೊತ್ತಿದ್ದಿಲ್ಲ. ಆದರೂ ಪರಸ್ಪರ ಒಬ್ಬರಿಗೊಬ್ಬರು ಏಕಲಾಟ, ತರಳೆ, ತಕರಾರು

ಹೂಡುವುದು ತಪ್ಪಿರಲಿಲ್ಲ. ಅದು ಆ ಕಾಲದಿಂದಲೇ ಇಂದಿನ ತನಕ ಬೆಳೆದು ಬಂದಿತ್ತು. ನರಸಪ್ಪಯ್ಯನವರು ಊರು ಬಿಟ್ಟು ಹೋದ ಮೇಲ ಕಾರಂತರಲ್ಲಿ ಮಾತ್ರ ಆ ದ್ವೇಷ ಬೆಳೆಸಿರಲಿಲ್ಲ ಆತ. ಕಾರಂತರೂ ಹಾಗೆ ಅವನಲ್ಲಿ ಸ್ನೇಹಶೀಲತೆಯಿಂದಲೇ ವರ್ತಿಸುತ್ತಿದ್ದರು. ಸದಾನಂದ ಊರಿಗೆ ಬಂದ ಎಂದಾಗ, ಅವನ ಗುಣ ಏನು? ಯೋಗ್ಯತೆ ಏನು? ಏಕೆ ಬಂದ? ಎಂಬುದನ್ನು ಯಾವುದನ್ನೂ ತಿಳಿಯದೆ, ಆತ ತನ್ನದೇ ಆದ ಒಂದು ಅಭಿಪ್ರಾಯಕ್ಕೆ ಬಂದಿದ್ದ. ಸಿಕ್ಕಿದವರಲ್ಲಿ ಹೇಳಿಯೂ ಇದ್ದ. ಹಾಗೆ ಆತ ಆಡಿದ್ದು ಕಾರಂತರ ಕಿವಿ ಮೇಲೆ ಬಿದ್ದು ಅವನಿಂದ ಸದಾನಂದನ ಕಿವಿಯ ತನಕ ಬಂದಿತ್ತು.

ಮುಂದೆ ಸದಾನಂದ ಕೃಷಿಯ ಕೆಲಸಕ್ಕೆ ಕೈಹಾಕಿದಾಗಲೂ ರಾಮಶೆಟ್ಟಿಯ ಟೀಕೆ ಇಲ್ಲದಿರಲಿಲ್ಲ. ಒಮ್ಮೆ ಕಾರಂತರಲ್ಲಿ ಹೇಳಿಯೂ ಇದ್ದ. "ನೀವಾದರೂ ಹೇಳಬಾರದೆ ಕಾರಂತರೇ ಆ ಡಾಕ್ಟ್ರಿಗೆ. ಅಲ್ಲ ಇದ್ದ ಗದ್ದೆಯಲ್ಲೆಲ್ಲ ಅಡಿಕೆ ಸಸಿ ಇಟ್ಟು, ಅಡಿಕೆ ಅಂದರೆ ಮರದಲ್ಲಿ ಬೆಳೆಯುತ್ತೋ ನೆಲದಲ್ಲಿ ಬೆಳೆಯುತ್ತೋ ಅಂತ ಗೊತ್ತಿರದಷ್ಟು ಅನನುಭವಿಯಾದ ಈ ಡಾಕ್ಟ್ರು ಹುಡುಗ ಬುದ್ಧಿಯಿಂದ ಯಾಕೆ ಹೀಗೆ ದುಡ್ಡು ಪೋಲು ಮಾಡ್ತಾರೆ ಹೇಳಿ? ಈ ಹೊಳೆಯ ಬದಿಯಲ್ಲಿ ಈ ವರುಷದ ನೆರೆಗೆ ಇವರ ಅಡಿಕೆಸಸಿಗಳೆಲ್ಲ ನೀರಲ್ಲಿ ಕೊಳೆತು ಹೋಗದಿದ್ದರೆ ನೋಡಿ, ನಾನು ಪಂಥ ಕಟ್ಟುತ್ತೇನೆ! ಅಲ್ಲ ನಿಮಗೂ ಆತ ಗಂಟುಬಿದ್ದದ್ದು ಸಾಕು" ಎಂದು ತನ್ನ ಮಾತಿಗೆ ತಾನೇ ಗಹಗಹಿಸಿದ್ದ.

ಕಾರಂತರಿಗೆ ಅದಕ್ಕೆ ಎದುರಾಡುವ ಮನಸ್ಸಿದ್ದರೂ ಯಾಕೆ ಈಗ ಹೇಳಬೇಕು? ಅವನು ಸದಾನಂದನ ಎಲ್ಲಾ ಕೆಲಸ ಆದಮೇಲೆಯೇ ನೋಡಿ ಮೂಗಿನ ಮೇಲೆ ಬೆರಳಿಡಬೇಕು. ನಾವೇಕೆ ಆಡಿ ನಿಷ್ಠುರ ಮಾಡಿಕೊಳ್ಳಬೇಕು ಎಂದು ಶೆಟ್ಟಿಯ ಮಾತಿಗೆ ಎದುರಾಡದೆ ಹೊಂಗುಟ್ಟಿದ್ದರು.

ಆದರೆ ತನ್ನ ಮಾತೆಲ್ಲ ಸುಳ್ಳಾಗಿ ಸದಾನಂದನ ಕೆಲಸಗಳೆಲ್ಲ ಸಾಂಗವಾಗಿ ನೆರವೇರಿ, ಅವನ ಪ್ರ್ಯಾಕ್ಟೀಸ್ ಉತ್ತಮಗೊಂಡದ್ದನ್ನು ನೋಡಿದ, ರಾಮಶೆಟ್ಟಿ ತಾನು ಎಣಿಸಿದ ಹಾಗಲ್ಲ ಈ ಡಾಕ್ಟ್ರು ಎಂಬಲ್ಲಿಗೆ ಬಂದಿದ್ದ. ಆದರೂ ತನ್ನ ಮಾವನ ಕಾಲದಿಂದ ಬಂದ, ತಮ್ಮೊಳಗಿನ ದ್ವೇಷ ಇರುವಾಗ ತೆಗಳಿದ ಬಾಯಿಯಲ್ಲೇ ಹೊಗಳುವುದು ಯಾವ ನ್ಯಾಯ?

ಕಾರಂತರಿಂದ ಶೆಟ್ಟಿಯ ಟೀಕೆಗಳನ್ನೆಲ್ಲಾ ಸವಿಸ್ತಾರವಾಗಿ ಕೇಳಿದ ಸದಾನಂದ ಯಾವ ಮಾತನ್ನೂ ಆಡದೆ ಸುಮ್ಮನಾಗಿದ್ದ. ತಾನು ಪಂಪು ತಂದು ಹೊಳೆಗೆ ಇಟ್ಟರೆ ಸರಿ. ತನಗೆ ತೊಂದರೆಯಾಗುತ್ತದೆ, ತನ್ನ ಗದ್ದೆಗಳಿಗೆ ನೀರಿಲ್ಲ ಎಂದು ಆತ ಸುಮ್ಮ ಸುಮ್ಮನೆ ತಕರಾರು ಎಬ್ಬಿಸಿ, ಕಡೆಗೆ ಸೋತುಹೋಗುವುದಕ್ಕಿಂತ ಮೊದಲೇ ಏನಾದರೂ ಮಾಡಿದರೆ?

ಹೊಳೆಯ ದಡಕ್ಕೆ ತಾಗಿಯೇ ತನ್ನ ತೋಟದೊಳಗೇ ಹೊಳೆಯಿಂದ ಎಂಟು ಹತ್ತು ಅಡಿ ಆಳವಾದ ಕೆರೆ ತೆಗೆಸಿದರೆ ನೀರು ಯಾಕೆ ದೊರಕದು? ಎಂಬ ವಾದಕ್ಕೆ ಸದಾನಂದ ಬಂದು ಒಬ್ಬಿಬ್ಬರಲ್ಲಿ ಮಾತನಾಡುವಾಗ ವಿಚಾರಿಸಿದ.ಒಬ್ಬೊಬ್ಬರದು ಒಂದೊಂದು ಅಭಿಪ್ರಾಯ. ಏನೇ ಆಗಲಿ ತೆಗೆಯಿಸಿಯೇ ನೋಡೋಣ ಎಂದು ನಿಶ್ಚಯಿಸಿದ ಮಾತ್ರವಲ್ಲ, ಕೆಲಸಕ್ಕೂ ಪ್ರಾರಂಭಿಸಿದ.

ಅವನ ಅದೃಷ್ಟವಶಾತ್ ಹತ್ತು ಹನ್ನೆರಡು ಅಡಿ ಅಗೆಯುವಾಗಲೇ ನೀರು ದೊರಕಿತು. ಮತ್ತು ಆಳದ ತನಕ ಕೆರೆಯ ಕೆಲಸ ಸಾಗಿತು. ಕೆರೆಯನ್ನು ವಿಸ್ತಾರವಾಗಿಯೂ ಮಾಡಿ ಅದರ ಸುತ್ತಲೂ ಕಲ್ಲು ಕಟ್ಟಿಸಿ ಮಣ್ಣು ಕುಸಿದು ಬೀಳದ ಹಾಗೆ ಮಾಡಿಯೂ ಆಯಿತು. ಇನ್ನು ಉಳಿದುದು ಅಂದರೆ, ಪಂಪು ತರಿಸಿ 'ಫಿಟ್' ಮಾಡಿಸುವುದು ಮಾತ್ರ.

ತೋಟಕ್ಕೆ ನೀರಿನ ಆವಶ್ಯಕತೆ ಬಹಳ ಇತ್ತು ಇನ್ನು ತಡಮಾಡಿದರೆ ತೊಂದರೆ ಎಂಬ ಅರಿವಾಯಿತು ಸದಾನಂದನಿಗೆ. ಕಾರಂತರನ್ನು ಜೊತೆಗೆ ಕರೆದುಕೊಂಡು ಆತ ಮಂಗಳೂರಿಗೆ ಹೊರಟ,ಆ ದಿನವೇ ಪಂಪು ತೆಗೆದುಕೊಂಡು, ಮರುದಿವಸ ಲಾರಿಯಲ್ಲಿ ಸುಂಕಗಳ್ಳಿಗೆ ಸಾಗಿಸುವುದು ಎಂದು.

ಮಂಗಳೂರಲ್ಲಿ ಕ್ರಯ ನಿರ್ಣಯಿಸಿ ಹೊಸತು ವಾಟರ್ ಪಂಪು ವಿಕ್ರಯಿಸಿಯಾಯಿತು. ಎರಡೂವರೆ ಇಂಚಿನ ಕೊಳವೆಗಳನು ತೆಗೆದಾಯಿತು. ಮರುದಿವಸ ಮಂಜೇಶ್ವರಕ್ಕೆ ಬರುವ ಸರ್ವಿಸ್ ಲಾರಿಯಲ್ಲಿ ಅದನ್ನು ಕಳುಹಿಸಿಕೊಡುವಂತೆ ಮಾತನಾಡಿದ ಸದಾನಂದ ಸಂಜೆಯ ರೈಲಿನಲ್ಲೇ ಕೋಳ್ಯೂರಿಗೆ ವಾಪಸಾದ. ಆತ ಎಷ್ಟು ನೆಮ್ಮದಿಯಿಂದ ಮನೆಗೆ ಮರಳಿದ್ದನೋ ಅಷ್ಟೇ ದುಃಖದಾಯಕ ವಾರ್ತೆ ಅವನಿಗೆ ಮನೆಯಲ್ಲಿ ಕಾದಿತ್ತು. ಸದಾನಂದ ಬಂದು ಡ್ರೆಸ್ಸು ಕಳಚಿ, ಚಾಯಾರಿಕೆ ಕುಡಿದ ತಕ್ಷಣ, ಶಂಕರ ಅಲ್ಲಿಗೆ ನರಸಿಂಹಮಯ್ಯ ಬಂದುದನ್ನೂ, ಕಾವೇರಜ್ಜಿಗೆ ನಾಲ್ಕು ದಿನಗಳಿಂದೀಚೆಗೆ ಸೌಖ್ಯ ಇಲ್ಲದುದನ್ನೂ ಈಗ ಮಾತುಕತೆ ಕೂಡ ಆಕೆ ನಿಲ್ಲಿಸಿರುವುದನ್ನೂ ನರಸಿಂಹಮಯ್ಯ ಹೇಳಿದ ಹಾಗೆ ಆತ ಹೇಳಿದ. ಶಂಕರ ಹೇಳಿದುದನ್ನೆಲ್ಲಾ ಕೇಳಿದ ಸದಾನಂದನಿಗೆ ಇದು ಕಾವೇರಜ್ಜಿಯನ್ನು ಕರೆದೊಯ್ಯಲೇ ಬಂದ ಕಾಹಿಲೆ ಇರಬೇಕೆಂದೂ ಇನ್ನು ಇದರಲ್ಲಿ ಆಕೆ ಬದುಕಲಾರಳೆಂದೂ ನಿಶ್ಚಯವಾಯಿತು. ಅವಳ ಕೋರಿಕೆಯ ಮೇರೆಗೆ ಅಲ್ಲದಿದ್ದರೂ ಸಾಯುವ ಕಾಲಕ್ಕಾದರೂ ತಾನು ಹೋಗಿ, ಅವಳ ಬಾಯಿಗೆ ಗಂಗೋದಕ ಬಿಡಬೇಕಾದದ್ದು ತನ್ನ ಕರ್ತವ್ಯವೆಂದೂ ಅವನಿಗೆ ಭಾಸವಾಯಿತು. ಆದರೆ ಆಗಲೇ ಮುಸ್ಸಂಜೆಯಾಗಿದೆ. ವಡಿಯೂರು ಅಂದರೆ ಏನು ಬಹಳ ಹತ್ತಿರದ ದಾರಿಯಾ? ಇನ್ನು ಅಲ್ಲಿಗೆ ಹೋಗಲು ಬಸ್ಸು ಇದೆಯೋ ಇಲ್ಲವೋ? ಹಾಗಾದರೆ ತಾನೀಗ ಏನು ಮಾಡಬೇಕು?

ಸದಾನಂದ ಮತ್ತೇನೂ ಯೋಚಿಸಲಾರದೆ, ಮುಂದಿನ ದಾರಿಗಾಗಿ ಕಾರಂತರನ್ನು ಬರಹೇಳುವಂತೆ ಶಂಕರನನ್ನು ಕಳುಹಿಸಿದ. ಲಗುಬಗೆಯಿಂದಲೇ ಕಾರಂತರು ಎದ್ದು ಬಂದರು. ಸದಾನಂದ ಶಂಕರ ಹೇಳಿದ್ದನ್ನೆಲ್ಲಾ ವಿವರಿಸಿ ಹೇಳಿದ. "ಮಯ್ಯರು ಬಂದು ಇಷ್ಟು ಹೇಳಿ ಹೋದಮೇಲೆ, ಅದೂ ನನ್ನ ಹತ್ತಿರದವಳು ಎಂದಮೇಲೆ, ಈ ಕಾಲಕ್ಕಾದರೂ ನಾನು ಹೋಗಬೇಡವೆ? ಆದರೆ ಹೋಗುವ ದಾರಿ ಹೇಗೆ?" ಎಂದು ಸದಾನಂದ ಪ್ರಶ್ನಿಸಿದ ಕಾರಂತರಿಗೆ.

ಕಾರಂತರು ಎರಡು ನಿಮಿಷ ತಡೆದು ಆಲೋಚಿಸಿ ಹೇಳಿದರು. "ಹೋಗಲೇ ಬೇಕಾದರೆ ಒಂದು ದಾರಿ ಇದೆ ಡಾಕ್ಟ್ರೆ! ಆದರೆ ಅದು ಭಾರಿ ತ್ರಾಸದಾಯಕ, ಅದೂ ಈ ರಾತ್ರಿ ಹೊತ್ತಿನಲ್ಲಿ".

"ಅಂದರೆ ಹೇಗೆ ಕಾರಂತರೆ?"

"ಮತ್ತೇನೂ ಇಲ್ಲ. ಈ ಮುನ್ನಿಪ್ಪಾಡಿ ಹೊಳೆ ದಾಟಿ ಕಾರ್ಯದ ಬಯಲಿನಲ್ಲಿ ಹಾದು, ಕುರುಡುಪದವು ಬೆಟ್ಟ ಹತ್ತಿ ಆಚೆ ಇಳಿದರೆ ಎರಡು ಮೈಲಿಗೆ ವಡಿಯೂರು ಸಿಕ್ಕುತ್ತದೆ. ಆದರೆ ಹೇಳಿದ ಹಾಗೆ ಅಲ್ಲ, ದಾರಿ ತುಂಬ ಕಷ್ಟದಾಯಕ".

"ದಾರಿ ಹೇಗೂ ಇರಲಿ ಕಾರಂತರೇ, ದೂರ ಎಷ್ಟಾಗಬಹುದು ಹೇಳಿ."

"ಮಾರ್ಗದಲ್ಲಿ ಹೋಗುವುದಿದ್ದರೆ ಒಂಬತ್ತು ಮೈಲು. ಇದು ಒಳದಾರಿ Short cut ಆರು ಮೈಲಿನ ಒಳಗೆ ಅಷ್ಟೆ! ಬರೇ ಎರಡು ಗಂಟೆಯ ದಾರಿ!"

ಸದಾನಂದ ಯೋಚಿಸಿದ. ದಾರಿ ಹೇಗೆಯೇ ಇರಲಿ! ಎಷ್ಟು ದೂರವೇ ಇರಲಿ. ಹೋಗುವುದು ಶತಃಸಿದ್ಧ. ಅದರಿಂದ ಆತ ಹೇಳಿದ –

"ನನಗೇನೋ ನಿಮಗೆ ತುಂಬಾ ತೊಂದರೆ ಕಾರಂತರೇ. ನಾನು ಸಿದ್ಧ. ನೀವೇನು ಮಾಡ್ತೀರಾ ಹೇಳಿ?"

"ನಾನೋ? ಇಲ್ಲ ಅನ್ನುತ್ತೇನೆಯೇ? ರೆಡಿಯಾಗಿದ್ದೇನೆ. ಒಂದಿಷ್ಟು ಊಟ ಮಾಡಿ ಹೋಗೋಣ".

ಸದಾನಂದ ಒತ್ತಾಯಿಸಿದರೂ ಕಾರಂತರು ಊಟಕ್ಕೆ ನಿಲ್ಲದೆ, ಅವರ ಮನೆಯಲ್ಲೇ ಊಟ ತೀರಿಸಿ ಹೊರಟು ಬಂದರು. ಸದಾನಂದನೂ ಸಿದ್ಧನಾಗಿಯೇ ಇದ್ದ. ಇಬ್ಬರೂ ಬ್ಯಾಟರಿಯ ಲೈಟು ಹಿಡಿದುಕೊಂಡು ಹೊರಟರು. ದಾರಿಯುದ್ದಕ್ಕೂ ಕಾರಂತರು ಆಯಾಯ ಸ್ಥಳದ ಪರಿಚಯ ಮಾಡಿಕೊಡುತ್ತಾ ಸಾಗಿದರು. ಅವರ ಮಾತುಕತೆಗೆ ದಾರಿ ಸಾಗಿದ್ದೇ ಗೊತ್ತಾಗಲಿಲ್ಲ. ಸುಮಾರು ಹತ್ತೂವರೆ ಗಂಟೆಗೆ ಅವರು ಪಡಿಯೂರಿನ ಅಂಗಳ ದತ್ತ ತಲುಪಿ ಹೆಜ್ಜೆ ಹಾಕಿದರು.

ಇಬ್ಬರೂ ಮನೆಯೊಳಗೆ ಕಾಲಿರಿಸಿ ನೋಡುತ್ತಾರೆ. ಕಾವೇರಮ್ಮನನ್ನು ಚಾವಡಿಯಲ್ಲಿ ಹಾಸಿಗೆಯ ಮೇಲೆ ಮಲಗಿಸಿದ್ದಾರೆ. ನರಸಿಂಹ ಮಯ್ಯ ಅವಳ ತಲೆಯ ಸಮೀಪ ಕುಳಿತಿದ್ದಾನೆ. ಹತ್ತಿರದಲ್ಲೇ ದೀಪ ಉರಿಯುತ್ತಿದೆ.

ನರಸಿಂಹ ಮಯ್ಯ ಪಕ್ಕನೆ ಒಳಗೆ ಪ್ರವೇಶಿಸಿದವ ರಾರೆಂದು ಎದ್ದುಬಂದ. ಸದಾನಂದ ಬಂದುದು ಎಂದು ತಿಳಿದ ಮೇಲೆ ವಾಡಿಕೆಯ ಉಪಚಾರ, ಮಾತುಕತೆಗೆ ಪ್ರಾರಂಭವಾಯಿತು. ಕಾವೇರಮ್ಮನ ಅಸೌಖ್ಯದ ಕಾರಣ ಸದಾನಂದ ಕೇಳಿದ. ಮಯ್ಯ ವಿವರಿಸಿ ಹೇಳಿದ – ಎರಡು ದಿವಸದ ಮೊದಲು ಅವರು ಹುಷಾರಾಗಿದ್ದರೆಂದೂ, ಮೊನ್ನೆ ಸ್ನಾನ ಮಾಡಿ ಬರುವಾಗ ಬಚ್ಚಲಲ್ಲೇ ಬಿದ್ದರೆಂದೂ, ಬಿದ್ದವರಿಗೆ ಎಡಗಾಲೊಂದರ ವಶವೇ ತಪ್ಪಿತೆಂದೂ, ಹಾಗೆ ಬಿದ್ದವರನ್ನು ತಂದು ಹಾಸಿಗೆಯ ಮೇಲೆ ಮಲಗಿಸಿದ ಮೇಲೆ ನಿನ್ನೆ ಬೆಳಗಿನ ತನಕ ಮಾತನಾಡುತ್ತಿದ್ದರೆಂದೂ, ಸಂಜೆಯಿಂದ ಮಾತು ಬಿದ್ದಿದೆ ಎಂದೂ ಅವರ ಕಾಯಿಲೆಯ ಕತೆ ವಿವರಿಸಿದ.

ಅವನ ಮಾತಿನ ಮೇಲೆ ಸದಾನಂದ ಅಜ್ಜಿಗೆ ಪಕ್ಷವಾತ ಬಡಿದಿದೆ ಎಂದು ಊಹಿಸಿದ. ಇಷ್ಟು ಪ್ರಾಯದ ಮೇಲೆ ಅದಕ್ಕೆ ಇನ್ನಾವ ಚಿಕಿತ್ಸೆಯೂ ಫಲಕಾರಿಯಿಲ್ಲ ಎಂಬುದರ ನೆನಪೂ ಆಯಿತು, ಅವನಿಗೆ. ಅವನು ಅಜ್ಜಿಯ ಹತ್ತಿರ ಹೋಗಿ ಕುಳಿತ. ಅವರನ್ನು ಪರೀಕ್ಷಿಸುವಂತೆ ನಾಡಿ ಹಿಡಿದು ನೋಡಿದ. ಎದೆಯ ಮೇಲೆ 'ಸ್ಟೆತೋಸ್ಕೋಪ್' ಇರಿಸಿದ. ಹೆಚ್ಚಿನ ಶುಭ ಚಿಹ್ನೆಗಳಾವುವೂ ಅವನಿಗೆ ಕಾಣಸಲಿಲ್ಲ.

ನರಸಿಂಹಮಯ್ಯ ದೊಡ್ಡ ಸ್ವರದಲ್ಲಿ ಕೂಗಿ ಹೇಳಿದ: "ಚಿಕ್ಕಮ್ಮ! ನಿನ್ನ ಅಣ್ಣನ ಮಗ ಡಾಕ್ಟರ್ ಬಂದಿದ್ದಾರೆ, ನಿಮ್ಮನ್ನು ನೋಡಲು. ಗುರುತು ಹತ್ತಿತೋ ಹೇಗೆ?" ಎಂದು.

ಕಾವೇರಮ್ಮ ಏನೂ ಅದಕ್ಕೆ ಪ್ರತಿಕ್ರಿಯೆ ವ್ಯಕ್ತಪಡಿಸಲಿಲ್ಲ. ಶೂನ್ಯದೃಷ್ಟಿಯಿಂದಲೇ ಸದಾನಂದನನ್ನು ನೋಡತೊಡಗಿದಳು. ಸದಾನಂದನೂ ಒಂದೆರಡು ನಿಮಿಷ ನೋಡಿದ. ಅಂತೂ ತಾನು ದುರದೃಷ್ಟವಂತ. ಸಾಯುವ ಕಾಲಕ್ಕಾದರೂ ಅವಳಲ್ಲಿ ನಾಲ್ಕು ಮಾತು ಮಾತನಾಡಲಾಗಲಿಲ್ಲವಲ್ಲ ಎಂದು ಕೊರಗಿದ.

ಅದೇ ಸಮಯಕ್ಕೆ ಆತನಿಗೆ ತನ್ನ ತಂದೆಯ ನೆನಪು ಆಗದಿರಲಿಲ್ಲ. ಅಜ್ಜಿಯ ಕತೆಯೆಲ್ಲ ಬರೆದು, ತನ್ನ ಯೋಜನೆಯನ್ನೆಲ್ಲ ತಿಳಿಸಿ, ಆತ – ನರಸಪ್ಪಯ್ಯನವರಿಗೆ ಕಾಗದ ಬರೆದಿದ್ದ. ಅದಕ್ಕೆ ಉತ್ತರವೇನೋ ಬಂದಿತ್ತು. ಆದರೆ ಅದರಲ್ಲಿ ಅಜ್ಜಿಯ ಬಗ್ಗೆ ನಾಲ್ಕು ಮಾತಾಗಲೀ ತನ್ನ



"ಈತ ಇಲ್ಲಿಗೆ ಬರೋಕೆ ಮುಂಚೆ ಎಲ್ಲೋ ಚಪಾತಿ ಲಟ್ಟಿಸುತ್ತಿದ್ದನಂತೇರಿ"

ಬಗ್ಗೆ ಸಹಾನುಭೂತಿಯಾಗಲೀ ಇದ್ದಿಲ್ಲ. ಅವರಂತೂ ಈ ಕಡೆ ಬರಲೇ ಇಲ್ಲ.

ಸದಾನಂದ ಅಲ್ಲಿಂದ ಎದ್ದು ಅಂಗಳಕ್ಕೆ ಬಂದ. ಕಾರಂತರಲ್ಲಿ ನಾಳೆ ಬೆಳಗಾಗುವುದು ಕಷ್ಟ ಎಂದ. ಕಾರಂತರು ಮರುಮಾತಾಡಲಿಲ್ಲ. ಮಯ್ಯರಿಗೂ ಮಾತನಾಡಲು ಬಾಯಿ ಕಟ್ಟಿ ಬಂತು. "ಹೀಗೆ ಅಕಸ್ಮಾತ್ ಆಗುತ್ತದೆಂದು ನನಗೇನು ಗೊತ್ತು! ಆದರೂ ನನ್ನ ಭಾಗ್ಯ! ನಾನೇನಾದರೂ ಬಯಲಾಟದ ಮೇಳದಲ್ಲಿ ಇರುವ ಸಂದರ್ಭದಲ್ಲಿ ಹೀಗಾದರೆ ಕಣ್ಣಲ್ಲಿ ನೋಡುವ ಪುಣ್ಯವೂ ನನಗೆ ಇದ್ದಿಲ್ಲ" ಎಂದು ಮಯ್ಯ ಕಣ್ಣೀರು ಕರೆದ.

ಮಯ್ಯನ ಕಣ್ಣೀರನ್ನು ನೋಡಿದ ಸದಾನಂದನಿಗೆ ತನ್ನ ಅಪ್ಪನಲ್ಲಿ ಮಯ್ಯನಷ್ಟೂ ಇಲ್ಲವಾಯಿತಲ್ಲ ಈ ಮುದುಕಿಯಲ್ಲಿ ಪ್ರೀತಿ, ಎನಿಸದಿರಲಿಲ್ಲ! ಮನುಷ್ಯ ವಿದ್ಯಾವಂತನಿದ್ದರೆ ಸಾಲದು! ಸುಸಂಸ್ಕೃತನೂ ಆಗಿರದಿದ್ದರೆ ಹೀಗೆಯೇ ಎಂದು ಅವನಷ್ಟಕ್ಕೆ ಆತ ಅವನ ಅಪ್ಪನನ್ನು ಟೀಕಿಸಿಕೊಂಡ.

ಸುಮಾರು ರಾತ್ರಿ ನಾಲ್ಕು ಗಂಟೆಯ ಹೊತ್ತಿಗೆ ಕಾವೇರಮ್ಮನಿಗೆ ಶ್ವಾಸ ಎಳೆಯಲು ಆರಂಭವಾಯಿತು. ಮಯ್ಯರು ಮಲಗಿದ್ದ ಸದಾನಂದನನ್ನು ಎಬ್ಬಿಸಿದರು. ಕಾರಂತರೂ ಎದ್ದುಬಂದರು. ಎಲ್ಲರೂ ಕಣ್ಣಲ್ಲಿ ನೀರು ತುಂಬಿಕೊಂಡೇ ಮುದುಕಿಯ ಗಂಟಲಲ್ಲಿ ತೀರ್ಥ ಹೊಯ್ದರು. ಅದು ನಿಧಾನವಾಗಿ ಗಂಟಲಿನ ಕೆಳಗೆ ಇಳಿಯಿತೋ ಏನೋ!

ಮತ್ತೊಂದು ಅರ್ಧಗಂಟೆಯ ತನಕ ಅವಳ ಜೀವ ಇತ್ತು. ಕಡೆಗೆ ಒಮ್ಮೆ ಅವಳು ಹೊರಗೆ ಬಿಟ್ಟ ನಿಶ್ವಾಸ ಒಳಗೆ ಹೋಗಲೇ ಇಲ್ಲ. ಅವಳ ದೇಹ ನಿಶ್ಚೇಷ್ಟಿತವಾಗಿ ಒಂದು ಬದಿಗೆ ವಾಲಿತು.

ಆಸ್ಪತ್ರೆಯಲ್ಲಿ ಹೀಗೆ ಎಷ್ಟೋ ಮಂದಿ ಕೊನೆಯುಸಿರೆಳೆಯುವುದನ್ನು ಸದಾನಂದ ಕಂಡಿದ್ದ. ಆದರೆ ಸಂಬಂಧಿಕರೊಬ್ಬರು ಹಾಗಾದುದು ಅವನ ಅನುಭವದಲ್ಲಿ ಇದೇ ಮೊದಲು. ಆತ ಎಷ್ಟು ತಡೆಹಿಡಿದರೂ ಕಾವೇರಮ್ಮನ ದಹನದಿಂದ ಹೊರಬರುತ್ತಿದ್ದ ಹೊಗೆಯ ಮೋಡಗಳನ್ನು ನೋಡಿದಾಗ – ತನ್ನ ಕುಟುಂಬದ ಹಿರಿಯ ಜೀವವೊಂದು ಹಾಗಾಯಿತಲ್ಲ ಎಂಬ ಕೊರಗು ಅವನ ಕಣ್ಣಲ್ಲಿ ನೀರು ತುಂಬಿಸಿ, ಆ ಹಿರಿಯ ಜೀವದ ಸ್ಮರಣೆಗಳನ್ನು ಮರುಕಳಿಸಿತು.

## -೧೦-

ಸದಾನಂದ ಕೋಳ್ಯೂರಿಗೆ ಬಂದು ನೆಲೆಸಿದ ಮೇಲೆ ಇದು ಎರಡನೆ ಮಳೆಗಾಲ. ಮಳೆಗಾಲದ ದಿನಗಳು ಕಳೆಯುತ್ತಾ ಬಂದವು. ಈ ಅವಧಿಯಲ್ಲಿ ಅವನ ಕಾರ್ಯಗಳೆಲ್ಲ ಯಶಸ್ಸಿನ ಕಡೆಗೆ ಸಾಗಿದ್ದವು. ಮೂಡುಮನೆಯ ಹಿಂದೆ ಗುಡ್ಡ ಕಡಿದು ಮಾಡಿದ ಹೊಸಗದ್ದೆಯಲ್ಲಿ, ಈ ಸಲ ಬತ್ತ ಬಿತ್ತಿದ್ದ. ಜಪಾನಿ ಪದ್ಧತಿಯಲ್ಲಿ ನಿರೀಕ್ಷಿಸಿದ್ದುದಕ್ಕಿಂತಲೂ ಹೆಚ್ಚಿನ ಬೆಳೆ ಬಂದುದರಿಂದ ಮೂಡುಮನೆಯ ಹಿಂಬದಿಯ ಹೊಸಗದ್ದೆಯಲ್ಲಿ ಇನ್ನೂ ಒಂದು ಬೆಳೆ ಯಾಕೆ ತೆಗೆಯಬಾರದು ಎಂದು ಅವನಿಗೆ ಮನಸ್ಸಾಯಿತು. ಬಾನಬೆಟ್ಟು ಗದ್ದೆಯಾದರೂ ಅಡಿಕೆ ತೋಟದ ಕೆರೆಯ ಪಂಪಿನಿಂದ ನೀರು ಎತ್ತಿ – ಸುಮಾರು ಹದಿನೈದು ಅಡಿ ಎತ್ತರದಲ್ಲಿ ನೀರುಕೊಳವೆಯನ್ನು ಹಾಕಿ, ಮೂಡುಮನೆಯ ಹಿಂದಿನ ಹೊಸಗದ್ದೆಗೆ ನೀರು ಹಾಯಿಸಿದರೆ, ಅವನ ಕನಸು ನನಸಾಗಬಹುದು. ಪೈಪಿನಲ್ಲಿ ಸುಮಾರು ಒಂದು ಫರ್ಲಾಂಗು ಮಿಕ್ಕಿ ನೀರು ಸಾಗಿಸಿ, ಕೃಷಿಯ ಕೆಲಸ ಸಾಗಿತು. ಅವನ ಅದ್ಭುತ ಸಾಹಸ ಕೃಷಿಗಾಗಿ ಹಣವನ್ನು ನೀರಿನಂತೆ ವ್ಯಯಿಸುವ



ವಿದೆಗಾರಿಕೆ. ಕೃಷಿಯಲ್ಲಿ ಆತ ಮಾಡುವ ನೂತನ ಪ್ರಯೋಗಗಳು ಹಳ್ಳಿಯವರ ಮನೆ ಮನೆಗಳಲ್ಲಿ ಮಾತಾಗಿ ಹೋಗಿ, ಸದಾನಂದನ ಆದರ್ಶ ಅವರ ಕಣ್ಣ ಮುಂದೆ ಬಂತು.

ಮೂರನೆಯ ಬೆಳೆಯನ್ನು ಆತ ಹೊಸ ಗದ್ದೆಯಲ್ಲಿ ತೆಗೆಯುವುದು ಸಾಧ್ಯವಿದ್ದರೂ, ನೀರಿನ ಅವಶ್ಯಕತೆ ಅದಕ್ಕಿಂತಲೂ ಹೆಚ್ಚು ಅಡಿಕೆಸಸಿಗಳಿಗೆ ಇತ್ತು. ತೋಟ ಹೊತ್ತಿಹೋಗಬಾರದೆಂದು ಆತ ಮೂರನೆ ಬೆಳೆಯ ಆಸೆಯನ್ನು ಕೈ ಬಿಟ್ಟ. ಕೃಷಿಯಲ್ಲಿ ಇನ್ನೂ ಮಾಡುವಂತಾದ್ದು ಅನೇಕ ಇದ್ದರೂ, ಸದ್ಯದ ಎರಡು ವರ್ಷದ ಮಟ್ಟಿಗೆ, ಇದ್ದುದನ್ನು ಸುಧಾರಿಸಿಕೊಂಡರೆ ಸಾಕು. ಮುಂದೆ ನೋಡೋಣ ಎಂದು ಯೋಜನೆಗಳಿಗೆ ಚುಕ್ಕಿ ಹಾಕಿದ.

ಈಗ ಆತನ ಮನಸ್ಸು ಇನ್ನೊಂದು ಕಡೆಗೆ ಹರಿಯಿತು. ಮಿಯಾಪದವು ನಾಲ್ಕು ಗ್ರಾಮಗಳ ಕೇಂದ್ರ ಸ್ಥಳ. ಇಲ್ಲಿ ಚೆನ್ನಾಗಿ ಪ್ರಾಕ್ಟಿಸ್ ನಡೆಯುವುದೇ ಇದಕ್ಕೆ ಸಾಕ್ಷಿ. ಇಂತಹ ಸ್ಥಳಗಳಲ್ಲಿ ಸಹಕಾರಿ ವಿವಿಧೋದ್ದೇಶ ಸೊಸೈಟಿಯನ್ನು ಒಂದು ಯಾಕೆ ತೆಗೆಯಬಾರದು? ಎಂಬ ಆಲೋಚನೆ ಅವನ ತಲೆಯಲ್ಲಿ ಸುಳಿಯಿತು.

ಅದರೊಂದಿಗೆ ಇನ್ನೊಂದು ಈ ಹಳ್ಳಿಯ ಕ್ಷೇತ್ರದ ಕೊರತೆ ಎಂದರೆ ನಿರಕ್ಷರತೆ. ಓದು ಬಲ್ಲವರಿಗೂ, ಜ್ಞಾನ ಸಾಹಿತ್ಯ ಕಲೆ ತಿಳಿದವರಿಗೊ ಅದನ್ನು ಅಭಿವೃದ್ಧಿಪಡಿಸುವ ದಾರಿ ಯಾವುದೂ ಇಲ್ಲ. ಇದಕ್ಕಾಗಿ ಒಂದು ಒಳ್ಳೆಯ ಲ್ಯಾಬ್ರೇರಿ, ವಾಚನಾಲಯ, ಗೇಮ್ಸ್ ಕೂಟಗಳು ಇರುವ ಸಂಘದ ಅವಶ್ಯಕತೆಯೂ, ಸೊಸೈಟಿಯಷ್ಟೇ ಅವಶ್ಯ ಎಂದು ಆತ ಮನಗಂಡ.

ಸಂಘವನ್ನೂ ಸೊಸೈಟಿಯನ್ನೂ ಸ್ಥಾಪಿಸುವುದು ಕಷ್ಟಕರ ಸಮಸ್ಯೆಯಾಗಿರಲಿಲ್ಲ ಸದಾನಂದನಿಗೆ. ಆದರೆ ಊರವರು ಅದಕ್ಕೆ ಬೆಂಬಲ ಕೊಡದಿದ್ದರೆ? ತಿಳಿದವರಲ್ಲಿ ವಿದ್ಯಾವಂತರಲ್ಲಿ ಈ ಅಭಿಪ್ರಾಯವನ್ನು ವಿಶದಲಿರಿಸಿದ ಮೇಲೆ ಅದರ ಸ್ಥಾಪನೆಯಾದರೆ ಸೂಕ್ತ ಎಂಬ ಅಭಿಪ್ರಾಯ ಬಂತು. ಸೊಸೈಟಿ ಎಂದ ಮೇಲೆ ಶೇರ್ ತೆಗೆದುಕೊಳ್ಳುವವರೂ ಸಾಕಷ್ಟು ಮಂದಿ ಸಿಗಬೇಕಲ್ಲ! ಅದಕ್ಕಾಗಿ ಸದಾನಂದ ಮಿಯಾಪದವು ಶಾಲಾ ಅಧ್ಯಾಪಕರಿಗೆ, ಕರೆಸಿ, ಅವರನ್ನೆಲ್ಲ ಕೇಳಿ ನೋಡಿದ. ಅವರಿಂದ ಅವನಿಗೆ ಪ್ರೋತ್ಸಾಹದಾಯಕ ಮಾತುಗಳೇ ಬಂದವು. ಊರ ಹಿರಿಯರಲ್ಲೂ ಸಂಜೆ ಹೊತ್ತು ವಿಚಾರಿಸಿದ. ಅವರೂ ಒಪ್ಪಿಕೊಂಡರು.

ಒಂದು ದಿನ ಬಿಡುವು ಮಾಡಿಕೊಂಡು ಸದಾನಂದ ಮಂಚೇನಹಳ್ಳಿಗೆ ಬಿ. ಡಿ. ಓ. ಆಫೀಸಿಗೆ ಹೋದ.

ಪರಿಚಯ ಮಾಡಿಕೊಂಡನಂತರ ತನ್ನ ಮನಸ್ಸಿನ ಆಲೋಚನೆಗಳನ್ನೆಲ್ಲ ಅವರ [illegible] ನಮ್ಮ [illegible]ಯೂ ಒಳ್ಳೆಯ ಸೊಸೈಟಿ ಸರ್. ಅಲ್ಲಿ ಇವೆರಡೂ ಫಾರ್ಮ್ ಕ್ಲಬ್ ಮತ್ತು ಸಹಕಾರಿ ಸೊಸೈಟಿಯ ಅವಶ್ಯಕತೆ ಇದ್ದೇ ಇದೆ. ಇವೆರಡಕ್ಕೂ ನಿಮ್ಮ ಡೆವಲಪ್‌ಮೆಂಟ್ ಆಫೀಸಿನ ನೆರವು ಬೇಕು. ಮುಖ್ಯ ನೀವೇ ಮಾಡಬೇಕಾದ ಒಂದು ಕೆಲಸ ಇದೆ ಸರ್. ತಮಗೆ ಬಿಡುವು ಇದ್ದ ದಿವಸ ಹೇಳಿ" ಎಂದ.

"ವೆರಿ ಗುಡ್. ಭಾರಿ ತಲೆಯೋಡಿಸಿದ್ದೀರಿ ನೀವು. ನೀವು ಬಂದದ್ದು ಬಂದಷ್ಟು [illegible] ಮಾದರಿ ಗ್ರಾಮ ಮಾಡುವ ಆಲೋಚನೆ ನಿಮ್ಮದು.

"ಆಲ್ ರಾಯಿಟ್. ನನ್ನಿಂದೇನಾಗಬೇಕು ಹೇಳಿ?" ಸದಾನಂದನ ಮಾತಿಗೆ ಪ್ರಸನ್ನರಾಗಿ ನುಡಿದರು ಬಿ.ಡಿ.ಓ.

"ಮುಖ್ಯ ಕೆಲಸ ಅಂದರೆ ನಾನು ಸದ್ಯಕ್ಕೆ ಇಷ್ಟು ಆಲೋಚನೆ ಮಾಡಿದ್ದೇನೆ. ಮಿಯಾಪದವು ಶಾಲೆಯಲ್ಲಿ ಒಂದು ಸಾರ್ವಜನಿಕ ಸಭೆ ಕರೆದು, ಆ ದಿವಸದ ಅಧ್ಯಕ್ಷತೆಯನ್ನು ನೀವು ವಹಿಸಬೇಕು. ಸೊಸೈಟಿ ಎಂದರೇನು? ಅದಕ್ಕೆ ಸರಕಾರದ ನೆರವು ಹೇಗೆ? ಅದರಿಂದ ಹಳ್ಳಿಯವರಿಗಾಗುವ ಉಪಕಾರ ಹೇಗೆ? ಎಂಬಿತ್ಯಾದಿ ಬಗ್ಗೆ ಭಾಷಣ ಮಾಡಿ ಜನರನ್ನು ಕೇಳಿಕೊಂಡರೆ ಅವರೊಂದು ನಿರ್ಧಾರಕ್ಕೆ ಬರುತ್ತಾರೆ. ಆಮೇಲೆ ಅವರ ಸಮ್ಮುಖದಲ್ಲಿ ಒಂದು ಎಕ್ಸಿಕ್ಯೂಟಿವ್ ಕಮಿಟಿ ತಯಾರಿಸಿ ಅದಕ್ಕೆ ಕೆಲಸ ಮಾಡುವ ಸಂಪೂರ್ಣ ಹಕ್ಕು ಕೊಟ್ಟು ಬಿಡಬೇಕು. ಮುಂದಿನದಕ್ಕೆಲ್ಲಾ ಹೇಗೂ ನಾನು ನೋಡುತ್ತೇನೆ. ಮತ್ತೆಲ್ಲಾ ತನ್ನಿಂದ ತಾನೇ ಆಗುತ್ತದೆ."

ಅವರು ಅವನ ಕೈ ಕುಲುಕಿ ಹೇಳಿದರು. "ನೀವು ಇಷ್ಟು ಶ್ರಮ ತೆಗೆದುಕೊಳ್ಳುವಾಗ ನಾವು ಇಲ್ಲ ಅಂತೇವಾ ಡಾಕ್ಟ್ರೇ? ನಾನು ಮತ್ತು ಸೊಸೈಟಿಯ ಎಕ್ಸ್‌ಟೆನ್‌ಶನ್ ಆಫೀಸರ್ ಆ ದಿನಕ್ಕೆ ಬರುತ್ತೇವೆ. ದಿನ ನಿಶ್ಚಯಿಸುವುದೇನೂ ಕಷ್ಟವಿಲ್ಲ. ಜೀಪ್ ಪ್ರೊಗ್ರಾಂ ಮಾಡುವಾಗ ಸ್ವಲ್ಪ ಅತ್ತಿತ್ತ ಮಾಡಿದರಾಯಿತು" ಎಂದು ಕ್ಯಾಲೆಂಡರಿನ ಹಾಳೆ ಮಗುಚಿ "ಇದೇ ತಿಂಗಳ ಇಪ್ಪತ್ತಕ್ಕೆ ಇಟ್ಟುಬಿಡಿ ಡಾಕ್ಟ್ರೆ! ಏನಾಗುತ್ತೆ?" ಎಂದರು.

"ಸರಿ. ಆದರೆ ನನ್ನದು ಒಂದು ರಿಕ್ವೆಸ್ಟ್ ಸರ್. ಅದಿನ ಮಧ್ಯಾಹ್ನಕ್ಕೆ ನೀವು ನಮ್ಮಲ್ಲಿಗೆ ಬರಬೇಕು. ಸಂಜೆ ಮೂರು ಗಂಟೆಗೆ ಸಭೆ ಆರಂಭಿಸೋಣ. ಅಷ್ಟರತನಕ ಊಟ ಮಾಡಿ ನನ್ನ ಕೃಷಿ ನೋಡಿದ ಹಾಗೂ ಆಗುತ್ತೆ ನಿಮಗೆ" ಎಂದ ಸದಾನಂದ.

ಅವರು ಸದಾನಂದನ ಮಾತಿಗೆ ಒಪ್ಪಿಗೆ ಇತ್ತರು. ಅವರಿಗೆ ನಮಸ್ಕರಿಸಿ ಸದಾನಂದ ಊರಿಗೆ ಹಿಂತಿರುಗಿದ. ಬಂದವನೇ ಅದೇ ದಿನ ಸಂಜೆ ತಾನು ಬಿ. ಡಿ.ಓ. ಆಫೀಸಿಗೆ ಹೋಗಿ ಮಾತನಾಡಿದ್ದನ್ನೆಲ್ಲಾ ತನ್ನ ಅಧ್ಯಾಪಕ ಮಿತ್ರ ಗೋಪಾಲಕೃಷ್ಣನಿಗೆ ಹೇಳಿ – ಸಾರ್ವಜನಿಕ ಸಭೆ ಕರೆಯುವ ಉದ್ದೇಶ, ಅಂದಿನ ಕಾರ್ಯಕ್ರಮದ ವಿವರಣೆಯ ಆಮಂತ್ರಣ ಪತ್ರಿಕೆಯನ್ನು ಅಚ್ಚು ಹಾಕಿಸಿ ಊರಿನ ಪ್ರತಿಯೊಬ್ಬರಿಗೂ ತಲುಪಿಸುವಂತೆ ಹೇಳಿದ.

ನಿಶ್ಚಿತ ದಿನದಂದು ಮಧ್ಯಾಹ್ನ ಹನ್ನೆರಡು ಗಂಟೆಗೆ 'ಗೀತಾ ಕ್ಲಿನಿಕ್'ನ ಮುಂಬದಿಯಲ್ಲೊಂದು ಜೀಪು ಬಂದು ನಿಂತಿತು. ಅದರಿಂದ ಎರಡು ಮಂದಿ ಇಳಿದರು. ರೋಗಿಗಳ ಚಿಕಿತ್ಸೆಯಲ್ಲಿದ್ದ ಸದಾನಂದ ಅವರನ್ನು ಸ್ವಾಗತಿಸಿ ಒಳಗೆ ಕರೆದೊಯ್ದ. ಬಂದ ಬಿ. ಡಿ. ಓ. ಮತ್ತು ಎಕ್ಸ್‌ಟೆನ್ಶನ್ ಆಫೀಸರರು – ಗೀತಾ ಕ್ಲಿನಿಕ್ ನೊಳಗೆ ಬಂದು ಕುಳಿತರು. ಬಂದಿದ್ದ ರೋಗಿಗಳಿಗೆ

ಮೆಂಬರನಾಗಬೇಕು ಎಂದದ್ದು-ಆಶ್ಚರ್ಯದಷ್ಟೆ ಪ್ರಶ್ನಾರ್ಥಕವಾಗಿತ್ತು ಸಮಸ್ಯೆ. ಏನೋ ತನ್ನ ಮಾವನಿಗೂ ಡಾಕ್ಟರರ ಅಜ್ಜನಿಗೂ ಇದ್ದ ದ್ವೇಷದ ಹಗ್ಗದಲ್ಲೇ ತಾನು ಏಕೆ ತೂಗಾಡಬೇಕು? ಅವರಾಗಿಯೇ ತನ್ನನ್ನು ಸಮೀಪ ಕರೆಯುವಾಗ,-ಹಿಂದಿನವರ ಮಾತಿಗೆ, ಕೆಲಸಕ್ಕೆ ಋಣಿಯಾಗಿ, ನಾನೇಕೆ ಇವರ ದ್ವೇಷಕಟ್ಟಿಕೊಳ್ಳಬೇಕು. ಅದೂ ಅಲ್ಲದೆ ಇಂದು ಸದಾನಂದ ಈ ಊರಿನ ಪ್ರತಿಷ್ಠಿತ ವ್ಯಕ್ತಿ.ಯಾವ ಕೆಲಸವೂ ಅವನಿಗೆ ಇಂದು ಸಾಧ್ಯ. ಹಾಗಿರುವಾಗ ತನ್ನ-ಅವನ ದ್ವೇಷ ಮುಂದೆ ತನ್ನ ಅಧಃಪತನಕ್ಕೆ ಕಾರಣವಾದೀತೋ ಏನೋ! ಎಂದೆಲ್ಲಾ ಚಿಂತಿಸಿ ಕಡೆಗೆ ನಿರುತ್ತರನಾಗಿ ಸದಾನಂದನಿಗೆ ಕಟ್ಟುಬಿದ್ದು ಆತ ಯಂಗ್ ಫಾರ್ಮರ್ಸ್ ಕ್ಲಬ್ಬಿನ ಸದಸ್ಯನೂ ಆದ. ಸೊಸೈಟಿಯ ಶೇರ್ ಕೂಡ ಪಡೆದುಕೊಂಡ.



"ಶ್ರೀ ಅಟೆಂಬಾಂಬು ಮಾಡೋದು ಹ್ಯಾಗೆ ಅಂತ ತಿಳ್ಕೊಂಬಂದೇ ಕಣ್ರೀ. ಮಹಾ ನಿಮ್ಮನ್ನ ಕೇಳಿದ್ರೆ ಗೊತ್ತೇ ಇಲ್ಲಾ ಅಂದು ಬಿಟ್ರಿ"

ಸದಾನಂದ ಕಟ್ಟಿದ ಎರಡೂ ಸಂಸ್ಥೆಗಳೂ ಈಗ ಮಿಯಪದವಿನಲ್ಲಿ ಒಂದುವರೇ ವರ್ಷದಿಂದ ಬೆಳೆದು ಬಂದಿದೆ. ಈ ಅವಧಿಯಲ್ಲಿ ಅದರ ಏಳಿಗೆಗಾಗಿ, ಸದಾನಂದ ಮುತವರ್ಜಿಯಿಂದ ಬಹಳಷ್ಟು ದುಡಿದಿದ್ದಾನೆ. ಸರಕಾರಿ ಸ್ಥಳದಲ್ಲಿ ನಾಲ್ಕು ಜನರ ವಂತಿಗೆಯಿಂದ-ಸಹಾಯಧನಕ್ಕಾಗಿ ಯಕ್ಷಗಾನ ಬಯಲಾಟ ಆಡಿಸುವುದರ ಮೂಲಕ ತನ್ನದೇ ಆದ ಚಿಕ್ಕ ಕಟ್ಟೋಣವನ್ನೇ ನಿರ್ಮಿಸಿ, ಅದರಲ್ಲೇ ಈ ಎರಡು ಸಂಸ್ಥೆಗಳ ಆಫೀಸನ್ನು ತೆರೆಯಲಾಗಿದೆ.

ಯಂಗ್ ಫಾರ್ಮರ್ಸ್ ಕ್ಲಬ್ಬಿನ ವತಿಯಿಂದ ಪ್ರತಿನಿತ್ಯ-ಮಿಯಪದವಿನ ಬಯಲಲ್ಲಿ ಕ್ರೀಡಾ ಕಾರ್ಯಕ್ರಮಗಳು ಜರಗುವುದರ ಜೊತೆಗೆ ಉತ್ತಮ ವಾಚನಾಲಯ, ಗ್ರಂಥಾಲಯಗಳು ಸ್ಥಾಪನೆಯಾಗಿದ್ದವು. ಆ ವರುಷ ಅವರ ವಾರ್ಷಿಕೋತ್ಸವವನ್ನು ವಿಸ್ತಾರ ಬೇಕೆಂದು ನಿರ್ಣಯಿಸಲಾಗಿತ್ತು. ಪರಪೂರ ಪಂತುನೀಯರ ಅಧ್ಯಕ್ಷತೆಯಲ್ಲಿ ಆದರ ವಾರ್ಷಿಕೋತ್ಸವವನ್ನು ಯಶಸ್ವಿಯಾಗಿಯೇ ಜರುಗಿಸಲಾಯಿತು.

ಈ ತನ್ಮಧ್ಯೆ-ಯಂಗ್ ಫಾರ್ಮರ್ಸ್ ಕ್ಲಬ್ಬಿನಿಂದಾಗಿ ರಾಮಶೆಟ್ಟಿಗೂ-ಸದಾನಂದನಿಗೂ ರಾಜಿಯಾಗುವ ಸಂದರ್ಭ ಬಂತು. ಮಿಯಪದವಿನಲ್ಲಿ ಯಾಕೋ ಅಲೆದಾಡುತ್ತ ಬಂದ ರಾಮಶೆಟ್ಟಿಯನ್ನು ಸದಾನಂದನೇ ಕರೆದು ಮಾತನಾಡಿಸಿ "ಸಂಘದ ವಿಷಯಗಳೆಲ್ಲ ನಿಮಗೆ ತಿಳಿದಿರಬಹುದು ಶೆಟ್ಟರೆ, ನಾನೇನೂ ಸ್ವಾರ್ಥಕ್ಕಾಗಿ ಕೇಳೋದಿಲ್ಲ. ನೀವು ಇದರ ಸದಸ್ಯರಾಗಬೇಕು. ಮತ್ತು ಸೊಸೈಟಿಯ ಎರಡು "ಶೇರ್" ಗಳನ್ನು ತೆಗೆದುಕೊಳ್ಳಬೇಕು" ಎಂದು ಅವನಿಗೆ ಹೇಳಿದ, ತಮ್ಮಲ್ಲಿ ಯಾವುದೇ ರೀತಿಯ ವೈಷಮ್ಯ ಇಲ್ಲವೆಂಬುದನ್ನು ಮರೆತು.

ರಾಮಶೆಟ್ಟಿಗೆ ಡಾ|. ಸದಾನಂದನೇ ಕರೆದು ಮಾತನಾಡಿದ್ದು, ಅಲ್ಲದೆ ಆತನೇ ಬಾಯಿಬಿಟ್ಟು

ಆದಿನ ರಾತ್ರಿ-ಶೆಟ್ಟಿಗೂ ತನಗೂ ಆದ ಮಾತುಕತೆ, ರಾಜಿಯ ವರ್ತಮಾನ, ಕಾರಂತರಿಗೆ ಹೇಳಬೇಕು ಎಂದು ಸದಾನಂದ ಮನೆಗೆ ಮರಳುವಾಗ ಯೋಚಿಸುತ್ತಾ ಬಂದಿದ್ದ. ಆದರೆ ಆತನ ಮನೆಗೆ ಬಂದಾಗ-ಎಂದೂ ಹಾಜರಾಗಿರುತ್ತಿದ್ದ ಕಾರಂತರು ಅಂದೇನೋ ಕಾಣೆಯಾಗಿದ್ದರು. 'ಏನೋ, ತಾಪತ್ರಯವಿರಬಹುದು, ಆದ್ದರಿಂದ ಬರದಿರಬಹುದು ಎಂದು ಸದಾನಂದ ತನಗೆ ತಾನೇ ಸಮಾಧಾನ ಹೇಳಿಕೊಂಡು ಶಂಕರನಲ್ಲಿ ಕೇಳಿದ, "ಕಾರಂತರು ಮನೆಯಲ್ಲಿ ಇದ್ದಾರೋ? ಇಲ್ಲವೊ ಗೊತ್ತಿದೆಯಾ ಶಂಕರ?" ಎಂದು.

"ನಾನು ಆ ಕಡೆ ಹೋಗಿಲ್ಲ" ಎಂದ ಶಂಕರ.

ಸದಾನಂದ ಮತ್ತೆ ಸುಮ್ಮಗಾದ. ಊಟ ತೀರಿಸಿ ಬರೆದು ಮುಗಿಸುವಂತಾದ್ದೆಲ್ಲ, ಬರೆದು ಮಲಗಿದ. ಮುಂಜಾನೆ ಎದ್ದು ಕಾಫಿ ತೀರಿಸಿ, ಗದ್ದೆ ತೋಟಗಳನ್ನು ನೋಡಿಬರಲೆಂದು ಹೊರಟ. ಆತ ಅಂಗಳಕ್ಕೆ ಕಾಲಿರಿಸುವುದೂ, ಆಚೆಯಿಂದ ಕಾರಂತರು ಬರುವುದು ಸರಿ ಆಯಿತು. ಆದರೆ ನಿತ್ಯ ಬರೇ ಪಂಚೆಯಲ್ಲಿ ಬರುತ್ತಿದ್ದ ಕಾರಂತರು ಈ ದಿನ ಮೈ ತುಂಬ ಹೊದ್ದುಕೊಂಡು ಬಂದಿದ್ದರು. ಸದಾನಂದ ಮುಗುಳು ನಕ್ಕು ಮಾತನಾಡಿದ- "ಏನು ಕಾರಂತರು, ನಿನ್ನೆ ಸಂಜೆ ಈ ಕಡೆ ಬರಲಿಲ್ಲ?"

"ಬರಬೇಕೂಂತ ಇತ್ತು, ಡಾಕ್ಟ್ರೇ! ಆದರೆ ನಿನ್ನೆ ಮಧ್ಯಾಹ್ನ ಎಲ್ಲಿಂದಲೋ ಅಕಸ್ಮಾತ್ ಜ್ವರ ಹಿಡಿದು ಬಿಟ್ಟಿದೆ. ಎಂತಹ ಚಳಿ ಅಂತೀರಾ? ತಲೆನೋವು. ಮೈ, ಕೈ ಹೊಟ್ಟೆ ಎಲ್ಲಾ ಕಡೆ ನೋವೇ. ಯಾವ ನಮೂನೆಯ ಜ್ವರವಪ್ಪ ಇದು? ನೋಡಿ-ಈಗ ಸ್ವಲ್ಪ ಬೆವರು ಬಂದು ಜ್ವರಬಿಟ್ಟಿದೆ." ಎಂದವರೇ - ಜಗಲಿಯಲ್ಲಿ ನಿಶ್ಯಕ್ತರಾಗಿ ಕುಳಿತರು.

"ಜ್ವರವಾ?" ಏನು ತಣ್ಣೀರು, ಗಿಣ್ಣೀರು ಸ್ನಾನ ಮಾಡಿ ಬಂತಾ ಹೇಗೆ? ಸದಾನಂದ ಪ್ರಶ್ನಿಸಿದ, "ಇಲ್ಲಪ್ಪಾ! ಡಾಕ್ಟ! ಅಕಸ್ಮಾತ್ ಪ್ರಾರಂಭವಾದ್ದು ಅಂತ! ಜ್ವರ ಅಂದ್ರೆ ಹೇಗೆ ಅಂತ ನನಗೆ ಅನುಭವಿಸಿ ಇಷ್ಟರ ತನಕ ಗೊತ್ತಿಲ್ಲ. ಆದರೆ ನಿನ್ನೆ ಬರೇ ಅರ್ಧ ದಿನ ಬಂದದ್ದೆ ಸಾಕು ಘಾತ ಮಾಡಿತು ನನಗೆ" ಎಂದರು ಕಾರಂತರು.

"ಗಾಬರಿ ಮಾಡಬೇಡಿ ಕಾರಂತರೇ ಮತ್ತೆ ಹುಡುಗನನ್ನು ಡಿಸ್ಪೆನ್ಸರಿಗೆ ಕಳುಹಿಸಿ, ಮೂರು ಡೋಸ್ ಮದ್ದು ಕೊಡ್ತೇನೆ. ಆಮೇಲೆ ಹೇಳಿ" ಎಂದು ಅವರನ್ನು ಸಂತೈಸಿದ ಸದಾನಂದ. ಅಲ್ಲಿ ಜಗಲಿಯಲ್ಲಿ ಕುಳಿತು ಶಂಕರನನ್ನು ಕೂಗಿ ಕಾರಂತರಿಗೆ ಎಳ್ಳದ

ಕಟ್ಟಿ ತೀರುಕೊಡುವಂತೆ ಹೇಳಿ, ತನಗೂ ರಾಮು ಕಟ್ಟಿಗೂ ಆದ ರಾಜೀವರ್ರವಾನವನ್ನು ಸವಿವರವಾಗಿ ಹೇಳಿದ.

ಸ್ವಲ್ಪಹೊತ್ತು ಮಾತುಕತೆ ನಡೆಯಿತು. ಅನಂತರ ಕಾರಂತರು ಎದ್ದು "ಕೂತುಕೊಳ್ಳೋಕೆ ಆಗೋದಿಲ್ಲ ಡಾಕ್ಟ್ರೆ! ಮನೆಗೆ ಹೋಗ್ತೇನೆ" ಎಂದು ಹೊರಟು ಹೋದರು. ಸದಾನಂದ ತೋಟಗದ್ದೆಗೆ ಹೋದರೆ ದಿಸ್ಪೆನ್ಸರಿಗೆ ತಡವಾದೀತೆಂದು ಅವಸರದಲ್ಲೇ ತನ್ನ ನಿತ್ಯಕರ್ಮ ತೀರಿಸಿ ಮಿಯೊಯುವದವಿನ ಗುಡ್ಡ ಏರಿದ.

ಸಂಜೆಯ ಹೊತ್ತು ಸದಾನಂದ ಮನೆಗೆ ಬಂದಾಗ-ಕಾರಂತರು ಇರಬಹುದು ಎಂದುಕೊಂಡಿದ್ದ. ಅವನ ನಿರೀಕ್ಷೆ ಸುಳ್ಳಾಯಿತು. ಆತ ಬಂದು ಡ್ರೆಸ್ಸು ಕಳಚಿ ಕುಳಿತು ಒಂದರ್ಧ ಗಂಟೆಯೊಳಗೆ ಪಾರ್ವತಿ ಮತ್ತು ಕಾರಂತರ ಕಡೇ ಮಗ ಮೂಡುಮನೆಗೆ ಬಂದರು. ಹೊಳೆಯುವ ಕಣ್ಣುಗಳ, ತುಂಬಿದ ಸುಂದರ ಮುಖದ, ಪಾರ್ವತಿಯ ದೃಷ್ಟಿಗೆ ದೃಷ್ಟಿ ಇಟ್ಟು ಸದಾನಂದ "ಏನು ಪಾರ್ವತಿ ಬಂದಿರೋದು? ಅಪ್ಪ ಹೇಗಿದ್ದಾರೆ?" ಎಂದ.

ಪಾರ್ವತಿ ನಡುಗುವ ಸ್ವರದಲ್ಲಿ, "ಜ್ವರ ಬಿಟ್ಟಿಲ್ಲ! ಸ್ವಲ್ಪ ಇದೆ. ಏನೇನೂ ಮಾತನಾಡುತ್ತಾರೆ. ಕನಸಿನಲ್ಲಿ ಮಾತಾಡಿದ ಹಾಗೆ!" ಎಂದಳು.

"ಏನು! ಜ್ವರ ಜೋರಿದೆಯಾ?" ಸದಾನಂದ ಎದ್ದುನಿಂತು ಶಂಕರನನ್ನು ಕೂಗಿದ. ಶಂಕರನಿಗೆ, "ನೀನು ಹೋಗಿ ಆಸ್ಪತ್ರೆಯಿಂದ ನನ್ನ 'ವಿಸಿಟಿಂಗ್' ಬ್ಯಾಗ್ ತೆಗೆದುಕೊಂಡು ಬಾ. ನಾನು ಕಾರಂತರಲ್ಲಿ ಇದ್ದೇನೆ"ಎಂದು ಪಾರ್ವತಿ ಹಾಗೂ ಅವಳ ತಮ್ಮನನ್ನು ಕಳುಹಿಸಿ ಅವರ ಹಿಂದಿನಿಂದಲೇ ಕಾರಂತರ ಮನೆಗೆ ಬಂದ.

ಸದಾನಂದ ಬಂದಾಗ ಕಾರಂತರಿಗೆ ಜ್ವರ ವಿಪರೀತ ಇತ್ತು. ತುಂಗಮ್ಮ ನಡುಗುವ ಸ್ವರದಲ್ಲೇ ಹೇಳಿದಳು, "ನಿನ್ನೆಯೂ ಹಾಗೆ ಡಾಕ್ಟ್ರೆ! ರಾತ್ರಿ ಜ್ವರ ತಲೆಗೆ ಏರಿದೆ. ರಾತ್ರಿ ನಿದ್ದೇನೂ ಇಲ್ಲ ಅವರಿಗೆ. ಏನೇನೂ ಹೇಳ್ತಾ ಇರ್ತಾರೆ. ಯಾವ ಹೊತ್ತಿನಲ್ಲಿ ಜ್ವರ ಹಿಡಿಯಿತೋ ಏನೋ" ಎಂದು ಅಶುಭವನು ನೆನೆದು ಗದ್ಗದಿಸಿದರು.

ಸದಾನಂದ ಅವರಿಗೆ ಸ್ವಾಂತನ ಹೇಳಿದ, "ನಾನಿದ್ದೇನಲ್ಲಮ್ಮ. ನೀವೇಕೆ ಹೆದರುತ್ತೀರಿ. ಯಾವುದಕ್ಕೂ ತಡೀರಿ. ಶಂಕರ ಆಸ್ಪತ್ರೆಯಿಂದ ಬಂದಮೇಲೆ ಅವರನ್ನು ಪರೀಕ್ಷಿಸಿ ನೋಡಿ ಹೇಳುತ್ತೇನೆ." ಎಂದ.

ಶಂಕರನನ್ನು ಕಾಯುತ್ತಾ ಎಲ್ಲರೂ ಉಸಿರು ಬಿಗಿ ಹಿಡಿಯುತ್ತಾ ಕುಳಿತರು. ಸದಾನಂದ ಶಂಕರ ಬಂದೊಡನೆ ಥರ್ಮಾಮೀಟರ್ ಹಿಡಿದು ಕಾರಂತರ ಜ್ವರ ನೋಡಿದ. ನೂರಮೂರರ ಅಂಕೆಯನ್ನು ಪಾದರಸ ತೋರಿಸಿತು. ಸ್ಟೆತಾಸ್ಕೋಪ್ ತೆಗೆದು ಅವರನ್ನು ಪರೀಕ್ಷಿಸಿದ. ಎದೆಯ ಎಲುಬುಗಳಿಗೆ ಮೃದುವಾಗಿ ಬಡಿದು, ಹೊಟ್ಟೆಯನ್ನು ಒತ್ತಿ, ನಾಡಿ ಹಿಡಿದು, ನಾಲಿಗೆ, ಕಣ್ಣು ಬಾಯನ್ನು ನೋಡಿದ. "ನಾಳೆ ಬೆಳಗ್ಗಿನ ಮೂತ್ರ ಕಳುಹಿಸಿಕೊಡಿ" ಎಂದು ತುಂಗಮ್ಮನಿಗೆ ಹೇಳಿದ. ತುಸು ತಡೆದು ಏನೊ ಯೋಚಿಸಿ, ಎರಡು ಇಂಜಕ್ಷನ್ ಚುಚ್ಚಿದ. "ನೀವೇನೂ ಗಾಬರಿಪಡಬೇಡಿ. ನಾಳೆ ಸಂಜೆ ನಾನೇ ಬರ್‍ತೇನೆ. ಬೆಳಗ್ಗೆ ಶಿವರಾಯ ಬರಲಿ. ಔಷಧ ಕೊಡ್ತೇನೆ." ಎಂದು ಮತ್ತೂ ಹತ್ತು ನಿಮಿಷ ಅಲ್ಲಿ ಇದ್ದು ಹೊರಟು ಬಂದ.

ಮರುದಿನ ಬೆಳಗ್ಗೆ ಕಾರಂತರಿಗೆ ತುಸು ಜ್ವರ ಕಡಿಮೆಯಾಗಿದೆ ಎಂದು ಶಿವರಾಯ ಔಷಧಿಗೆ ಬಂದವ ಹೇಳಿದ. ಸಂಜೆ ಕಾರಂತರಲ್ಲಿಗೆ ಸದಾನಂದ ಹೋದಾಗ ಜ್ವರ ಮೊದಲಿನ ದಿನದಷ್ಟೇ ಇತ್ತು. ತುಂಗಮ್ಮನಿಗೆ ಧೈರ್ಯ ಹೇಳಿ "ಇದು ಟೈಫಾಯ್ಡ್ ಜ್ವರ ಅಮ್ಮ. ಒಂದೆರಡು ದಿವಸದಲ್ಲಿ ಬಿಡುವಹಾಗಿಲ್ಲ. ಎಲ್ಲ ನೆಮ್ಮದಿಯಾಗುತ್ತೆ" ಎಂದು ಕಾರಂತರಿಗೆ ಇಂಜಕ್ಷನ್ ಚುಚ್ಚುವುದರ ಜೊತೆಗೆ, ಉಳಿದ ಮನೆಮಂದಿಗೆಲ್ಲ ಟೈಫಾಯ್ಡ್ ಬಾರದಂತೆ ವ್ಯಾಕ್ಸಿನೇಶನ್ ಹಾಕಿದ.

ಕಾರಂತರಿಗೆ ಈಗ ಜ್ವರದ ಡಿಲೀರಿಯಂ ಸ್ಟೇಜ್ ಇದ್ದಿಲ್ಲ. ಆದರೂ ಅವರ ಜ್ವರ ಇಳಿಮುಖವಾಗಿಲ್ಲ. ಹತ್ತು ದಿನಗಳಿಂದ ಎಡೆಬಿಡದೆ ಬಂದ ಜ್ವರದಿಂದ ಅವರು ಈಗ ತುಂಬಾ ನಿಶ್ಶಕ್ತರಾಗಿದ್ದಾರೆ. ಊಟ ಮಾಡಬಾರದು ಎಂಬ ಕಟ್ಟುನಿಟ್ಟಿನ ಪಥ್ಯ. ಮೋಸಂಬಿ, ಬಾರ್ಲಿ, ಗ್ಲುಕೋಸು, ಸಿಯಾಳ ಇವುಗಳಲ್ಲೇ ಅವರು ಜೀವರಕ್ಷಣೆ ಮಾಡಬೇಕಿತ್ತು. ಸದಾನಂದ ದಿನಕ್ಕೆ ಎರಡು ಸಲ ಬೆಳಗ್ಗೆ-ಸಂಜೆ ಬಂದು ಅವರನ್ನು ಪರೀಕ್ಷಿಸುತ್ತಾನೆ. ಅವರ ಜ್ವರದ ತಾಪವನ್ನು ನೋಡುತ್ತಾನೆ. ಮನೆಯವರಿಗೆ, ಕಾರಂತರಿಗೆ ಸಾಂತ್ವನ ವಚನ ಹೇಳಿ ಹೋಗುತ್ತಾನೆ. ಆದರೆ ಅವನಿಗೂ ಮನಸ್ಸಿಗೆ ನೆಮ್ಮದಿ ಇಲ್ಲ. ಯಾಕೆ ಇನ್ನೂ ಜ್ವರ ಬಿಡಲೊಲ್ಲದು? ತಾನು 'ಕ್ಲೋರೊಮೈಸಿಟಿನ್' ಕೊಡುತ್ತಿದ್ದಾಗ್ಯೂ ಯಾಕೆ ಅದು ಬಗ್ಗುಬಡಿಯಲಿಲ್ಲ? ತಾನೇನಾದರೂ-ರೋಗ ನಿದಾನದಲ್ಲಿ ತಪ್ಪಿಲ್ಲ. ಇದೇ ಮೊದಲ ಟ್ಯಾಫೈಡ್ ಕೇಸೂ ಅಲ್ಲ. ಇಂತಹ ನೂರಾರು ಕೇಸ್‌ಗಳನ್ನು ಗುಣಪಡಿಸಿದ ತಾನು-ತನ್ನ ಆತ್ಮೀಯರಾದ ಕಾರಂತರ ಅನಾರೋಗ್ಯ ಚಿಕಿತ್ಸೆಯಲ್ಲಿ ತಾನು ಸೋಲುತ್ತಿದ್ದೇನೆಯೇ? ಎಂಬ ಕೊರಗು ಅವರನ್ನು ಪೀಡಿಸುತ್ತಿತ್ತು.

ಕಾರಂತರ ಜ್ವರ ಪ್ರಾರಂಭವಾದ ಮೇಲಿನ ಹದಿನಾಲ್ಕು ದಿನಗಳು ಸಂದುವು. ಬೆಳಗ್ಗೆ ಜ್ವರದ ತಾಪ ನೋಡಲು ಸದಾನಂದ ಬಂದಿದ್ದಾನೆ. ಜ್ವರದ ತಾಪ ನೋಡಿದ ಮೇಲೆ ಕಾರಂತರು ಕೇಳಿದರು "ಹೇಗಿದೆ ಡಾಕ್ಟ್ರೆ ಜ್ವರ?"ಎಂದು.

ಸದಾನಂದನಿಗೆ ಏನು ಹೇಳಲೂ ತೋಚಲಿಲ್ಲ. ವಿವರ್ಣನಾದ. ನಡುಗುವ ಧ್ವನಿಯಲ್ಲಿ ಹೇಳಿದ" ತುಸು ಕಡಿಮೆ ಕಾರಂತರೇ ನಿನ್ನೆಯಿಂದ. ಆದರೂ ಬಿಡುವ ಹಾಗಿಲ್ಲ".

ಕಾರಂತರು ನಿಟ್ಟುಸಿರು ಬಿಟ್ಟರು. ಪಕ್ಕದಲ್ಲಿ ಕುಳಿತಿದ್ದ ಪಾರ್ವತಿಯ ಕೈಯನ್ನು ಕೈಯಲ್ಲಿ ಹಿಡಿದುಕೊಂಡರು. ಆಚೆ ನಿಂತಿದ್ದ ಇಬ್ಬರು ಗಂಡುಮಕ್ಕಳು, ಹೆಂಡತಿಯ ಮುಖನೋಡಿ ಸದಾನಂದನ ಕಡೆಗೆ ದೃಷ್ಟಿಬೀರಿ. ನಡುಗುವ ಧನಿಯಲ್ಲಿ ಹೇಳಿದರು.– "ಜ್ವರ ಕಡಿಮೆಯೋ ಹೆಚ್ಚೊ, ಏನಾದರೇನು ಡಾಕ್ಟ್ರೇ!? ಈ ಸಲದ ಜ್ವರ ಖಂಡಿತ ನನ್ನನ್ನು ಮೇಲೆ ಹಾಕುವುದಿಲ್ಲ. ಇದು ಕಡೇಕಾಲಕ್ಕೆ ಬಂದ ಜ್ವರ. ಇದರ ಅರ್ಥವೇ ನನಗೆ ಆಗಿದೆ. ಆರಂಭದ ಚಳಿ ನೋಡಿದಾಗಲೇ... ನಾನು ಸಾಯುವುದಕ್ಕೆ ಹೆದರುವುದಿಲ್ಲ ಡಾಕ್ಟ್ರೆ! ಸಾವಿಗೆ ನಿಮ್ಮ ಚಿಕಿತ್ಸೆಯೂ ಪ್ರಯೋಜನವಿಲ್ಲ ಡಾಕ್ಟ್ರೆ! ನೀವು ತುಂಬಾ ಪ್ರಯತ್ನಮಾಡಿದ್ದೀರಿ. ಪ್ರೀತಿ ಇಟ್ಟದ್ದೀರಿ ಎಂಬುದು ನನಗೆ ಗೊತ್ತು! ನನಗೆ ಇನ್ನೂ ಈ ಲೋಕದಲ್ಲಿ ಆಗಬೇಕಾದುದು ಏನೂ ಇಲ್ಲ. ನನ್ನ ಹೆಂಡತಿಗೆ–ಇಬ್ಬರು ಗಂಡುಮಕ್ಕಳಿದ್ದಾರೆ ಸಾಕಲು. ಊಟಕ್ಕೆ ತಕ್ಕ ಆಸ್ತಿ ಇದೆ. ಅವಳಿಗೆ ಕುಂಕುಮ ಭಾಗ್ಯ ಒಂದು ಇಲ್ಲ ಅಂತ ಅಷ್ಟೆ! ಆದರೆ ಅದಕ್ಕಿಂತ ಹೆಚ್ಚು ನನ್ನ ಈ ಮುದ್ದುಮಗಳು ಪಾರ್ವತಿಯ ಕೈಗೆ -ಇನ್ನೊಂದು ಕೈ ಬೇಕಾಗಿದೆ ಡಾಕ್ಟ್ರೆ! ನೀವೂ ಏನೂ ಮಾಡಿ, ಹೇಗೂ ಮಾಡಿ ಯಾರನ್ನು ಮರೆತರೂ ನನ್ನನ್ನು ಮರೆಯಬೇಡಿ. ನನ್ನ ಮಗಳ ಕೈಗೆ....." ಕಾರಂತರಿಗೆ ಮತ್ತೇನೂ ಹೇಳಲಾಗಲಿಲ್ಲ. ಅವರ ಹೆಂಡತಿ ಮಕ್ಕಳು ಅವರ ಈ ಮಾತು ಕೇಳಿ, ಅಳಲು ಪ್ರಾರಂಭಿಸಿದರು. ಸದಾನಂದನಿಗೆ ಕಣ್ಣಲ್ಲಿ ನೀರು ತುಂಬಿ ಬಂತು. 'ಕಾರಂತರಿಗೆ ಸಾವು ಹತ್ತಿರವಾಗಿದೆಯೇ? ಅವರು ಕಡೆಯ ಮಾತುಗಳನ್ನು ಆಡುತ್ತಾರೆಯೇ?' ಎಂದು ಅವನಿಗೆ ಅವನೇ ಪ್ರಶ್ನೆಹಾಕಿದ.

ಹಾಗೆ ಹೇಳಿದ ಕಾರಂತರು ಮೌನವಾದರು. ಸದಾನಂದ ಎದ್ದು ನಿಂತು ಹೊರಟ. ಹೊರಟು ಜಗಲಿ ಕೆಳಗೆ ಇಳಿಯುವಾಗ ಕಾರಂತರಿಗೆ, "ದೇವರು ನಿಮಗೆ ಹಾಗೇನೂ ಮಾಡಲಾರ ಕಾರಂತರೇ. ನೀವು ಹಾಗೆಲ್ಲ ಹೇಳಲೇ ಬಾರದು. ನಾನು ನಿಮ್ಮ ಮನೆಯನ್ನು ಎಂದೆಂದಿಗೂ ಮರೆಯುವವನಲ್ಲ. ನಿಮ್ಮ ಕುಟುಂಬದ ಕೈಬಿಡುವವನಲ್ಲ. ಆ ಮಟ್ಟಿಗೆ ನೀವೇನೂ ಹೆದರಬೇಡಿ." ಎಂದು ನಿಧಾನವಾಗಿ ಭಾರವಾದ ಹೆಜ್ಜೆಗಳನ್ನಿಡುತ್ತಾ ಮುಂದೆ ಸಾಗಿದ.

ಮಧ್ಯಾಹ್ನ ಊಟ ತೀರಿಸಿ ಮೈಸೂರಿನಿಂದ ವಸಂತಿ ಬರೆದ ವಿರಹತಾಪದ ಪತ್ರವನ್ನೋದಿ ವಸಂತಿಯ ಪ್ರಶ್ನೆಯನ್ನು ಹೇಗೆ ಬಿಡಿಸುವುದು ಎಂದು, ಆಲೋಚಿಸುತ್ತಾ ಕುಳಿತಿದ್ದ ಸದಾನಂದನನ್ನು ಎಚ್ಚರಿಸಿದ್ದು–ಓಡಿ ಬಂದು ಬಿಕ್ಕಳಿಸುತ್ತಿದ್ದ ಪಾರ್ವತಿ. ಅವಳು ಅಳುವನ್ನು ನುಂಗಿಕೊಳ್ಳುತ್ತಲೇ. ಸದಾನಂದನ ಹತ್ತಿರ ಬಂದು–

"ಅಪ್ಪ.... ಅಪ್ಪ.... ತೀರಿಹೋದರು." ಎಂದು ಹೇಳಿದವಳೇ ಗೋಳೋ ಎಂದು ಅಳುತ್ತಲೇ ಹಿಂದಿರುಗಿದಳು.

ಸದಾನಂದ ಆ ಮಾತು ಕೇಳಿ ಅಲ್ಲಿಯೇ ಕುಸಿದು ಕುಳಿತ. ತನ್ನ ಆತ್ಮೀಯರೊಬ್ಬರ ಮರಣದ ವಾರ್ತೆ ಅವನ ಹೃದಯವನ್ನು ಜರ್ಜರಿತಗೊಳಿಸಿತು. ಅವನು ಕಂಬನಿ ತುಂಬಿದ ಕಣ್ಣುಗಳಲ್ಲಿ–ದಾರಿಗಾಣದೆ ತೆವಳುತ್ತಾ– ಕಾರಂತರ ಮನೆಗೆ ಹೆಜ್ಜೆ ಹಾಕಿದ.

ಆ ದಿನ ಸಂಜೆಯ ಹೊತ್ತಿಗೆ ಕಾರಂತರ ಪಾರ್ಥಿವ ಶರೀರ ಅದೇ ಮಣ್ಣಿನಲ್ಲಿ ಲೀನವಾಗಿ ಅವರ ನೆನಪು ಮಾತ್ರ ಉಳಿಯಿತು.

## ೧೧

ಸದಾನಂದನಿಗೆ ಕಾರಂತರ ಮರಣದಿಂದ ಇನ್ನೊಂದು ಸಮಸ್ಯೆ ಹುಟ್ಟಿದಂತೆಯೇ ಆಯಿತು. ಅವರ ಗಂಡುಮಕ್ಕಳು ಇಬ್ಬರೂ ಅಲ್ಪಾಯುಷ್ಯರು. ವಿಧವೆ ತುಂಗಮ್ಮ ಸಜ್ಜನಳು. ಏನೂ ಅರಿಯದ ಅವ್ಯವಹಾರಿ ಹೆಂಗಸು. ಪಾರ್ವತಿ ಬೆಳೆದು ನಿಂತ ಸುಂದರಿ. ಇವರೆಲ್ಲರನ್ನೂ ಒಂದು ದಡದ ತನಕ ಮುಟ್ಟಿಸುವ ಹೊಣೆಗಾರಿಕೆ, ಅವನಿಗೆ ಬಿದ್ದಿದೆ. ಎರಡೂ ದೃಷ್ಟಿಯಿಂದ ಆತ ಆ ಹೊಣೆಗಾರಿಕೆ ಹೊರಲು ಅರ್ಹ. ಕಾರಂತರು ಅವನ ಆಸ್ತಿಯನ್ನು ಆತ ಊರಿಗೆ ಬಂದು ನೆಲೆಸುವ ತನಕ, ಉತ್ತಿದ್ದರು, ಬಿತ್ತಿದ್ದರು, ಫಸಲು ತೆಗೆದುಕೊಟ್ಟಿದ್ದರು. ಇದು ಮೊದಲನೆಯ ಅವರ ಉಪಕಾರವಾದರೆ ಎರಡನೆಯದು–ಆತ ಬಂದಂದಿನಿಂದಲೂ, ಕಾರಂತರು ಅವನಿಗೆ ನೆರವಾದರು. ಅವನ ಆತ್ಮೀಯರಾದರು. ಇದಕ್ಕಾಗಿ ಅವರು ಸಾಯುವ ಮೊದಲು, ತಾನಿತ್ತ ವಾಗ್ದಾನಕ್ಕಾಗಿ, ಆತ ಆ ಕುಟುಂಬದ ಹೊಣೆಗಾರಿಕೆ ಹೊತ್ತ. ಹೇಗೂ ಕೋಳ್ಳೂರಲ್ಲಿ ಕೂಲಿಯಾಳುಗಳಿಗೇನೂ ಕೊರತೆಯಿಲ್ಲ. ಮೇಲೆ ತನಗೆ ನಾಲ್ಕೈದು ಮಂದಿ ಒಕ್ಕಲುಗಳಿದ್ದಾರೆ. ಆದರಿಂದ ಕಾರಂತರ ಬೇಸಾಯ ಹೇಗೂ ಬಾಕಿ ಉಳಿಯದು. ಅವರು ಉಂಡು ಉಡುವಷ್ಟು ಅವರ ನೆಲ– ಅವರಿಗೆ ಕೊಟ್ಟೀತು. ಆದರೆ ಪಾರ್ವತಿಯನ್ನು ಯಾರಿಗೆ ಕೊಡಲಿ? ಅವಳ ಬಗ್ಗೆ ತಾನೀಗ ಏನು ಮಾಡಬೇಕು? ಕಾರಂತರ ಕೊನೆಯ ಬಯಕೆ ಹೇಗಿತ್ತು?

ಅದೇ ಸದಾನಂದನಿಗೆ ತಲೆ ತಿನ್ನುತ್ತಿದ್ದ ಪ್ರಶ್ನೆ. ಪಾರ್ವತಿಯನ್ನು ಆತ ಮೆಚ್ಚಿದ್ದಾನೆ (ಆದರೆ ಪ್ರೀತಿಸಲಿಲ್ಲ.) ಅವಳಲ್ಲಿರುವ ಸುಸಂಸ್ಕೃತಿ, ಸೌಜನ್ಯಪೂರ್ಣ ನಡತೆ, ನಿಸ್ಸಂಕೋಚತನ, ಸಹಾನುಭೂತಿ– ಅವನ ಮೆಚ್ಚಿಗೆಗೆ ಕಾರಣ. ಕಾರಂತರೇನೊ ಸದಾನಂದ ಅವಳ ಕೈ ಹಿಡಿದರಾದೀತು ಎಂದು ಬಯಸಿದ್ದರು. ಆದರೆ ಸದಾನಂದನ ಮನಃಪಟಲದ ಹಿಂದೆ ಅಡಗಿದ್ದ ಕತೆ ಅವರಿಗೇನು ಗೊತ್ತು? ಆ ಕತೆಯಿಂದಲೇ ಆತ ಕೋಳ್ಳೂರಿಗೆ ಬಂದ ಎಂಬುದನ್ನು ಅವರೇನೂ ಅರಿತಿರಲಿಲ್ಲ.

ವಸಂತಿಯನ್ನು ಆತ ಮರೆಯಲಿಲ್ಲ. ಅವಳು ಅವನ ಹೃದಯ ದೇವಸ್ಥಾನದಲ್ಲಿ ಅಲಂಕರಿಸಿದ್ದಾಳೆ. ಅವಳಿಂದ ಅವನಿಗೆ ಮೊದಲಿನಂತೆ ಪತ್ರಗಳು ಬಾರದಿದ್ದರೂ, ಬರುವುದು ನಿಂತಿರಲಿಲ್ಲ. ಅವಳ ಹೃದಯದಲ್ಲಿ ಅವನ ಸ್ಥಾನ, ಅವನ ಹೃದಯದಲ್ಲಿ ಅವಳ ಸ್ಥಾನ, ಮೊದಲಿಗಿಂತಲೂ ಏನೂ ಕಡಿಮೆಯಾಗಿರಲಿಲ್ಲ. "ಆಸ್ಪತ್ರೆಯ ಜೀವನ ಸಪ್ಪೆಯಾಗಿದೆ. ನೀವು ಒಮ್ಮೆಯಾದರೂ ಈ ಕಡೆ ಬರಬಾರದಾ? ಸರ್ವಸ್ವತಂತ್ರರಾದ ನಿಮ್ಮ ಮತ್ತು ನನ್ನ ಮದುವೆಗೆ ಯಾರ ಅಡ್ಡಿ? ಇನ್ನೂ ಏಕೆ ದಿನ ನೂಕುತ್ತೀರಿ." ಎಂದು ಒಂದೆರಡು ಬಾರಿ ಅಲ್ಲ-ಅನೇಕ ಬಾರಿ ಆ ಮಾತುಗಳು, ಅಭಿಪ್ರಾಯಗಳು, ಅವಳಿಂದ ಸದಾನಂದನಿಗೆ ಪತ್ರದಲ್ಲಿ ಬಂದಿವೆ. ಆದರೂ ಸದಾನಂದನಿಗೆ ಒಂದೇ ತಡೆ. ಇಂದಲ್ಲ ನಾಳೆ–ತನ್ನ ತಂದೆ ತಾಯಿಯ ಮನಸ್ಸು ಪರಿವರ್ತನೆಯಾದೀತು, ತಾನು ಬೇರೆ ಮದುವೆಯಾಗದೇ ಇರುವುದನ್ನು ಕಂಡು ಒಪ್ಪಿಗೆ ಕೊಟ್ಟಾರು. ಇದಕ್ಕಿಂತಲೂ ಮುಖ್ಯ ರಾಘವನೂ ತನ್ನ ಪಕ್ಷವಹಿಸಿ, ಅಣ್ಣನ ಮದುವೆ ಮೇಲೆಯೇ ತನ್ನ ಮದುವೆ ಈಗ ಸಾಧ್ಯವಿಲ್ಲ ಎಂದು ತಂದೆತಾಯಿಂದಿರಿಗೆ ಬರೆದದ್ದು–ಇದರಿಂದಾಗಿ ಕೊನೆಗೊಂದು ದಿನ, ತನ್ನ ಮತ್ತು ವಸಂತಿಯ ಮದುವೆ ಸಾಧ್ಯ. ಹಾಗಿರುವಾಗ ತಾನು ಈಗ ಮೈಸೂರಿಗೆ ಹೋಗಿ, ಅವಳನ್ನು ಕಂಡು ಮಾತಾಡಿ, ತನ್ನ ಮನಸ್ಸನ್ನು ಮತ್ತೆ ಯಾಕೆ ಕೆಡಿಸಿಕೊಳ್ಳಬೇಕು ಎಂದು– ಆತ ವಸಂತಿಯ ಪತ್ರಗಳಿಗೆ ಪ್ರತ್ಯುತ್ತರಿಸುವಾಗ–ಸಮಯಹಾಗಿ ಏನೇನೋ ನೆವಹಾಕಿ, ಜಾರಿಸಿಕೊಳ್ಳುತ್ತಿದ್ದ. ಆದರೂ ಅವನ ಚಿತ್ತ ಭಿತ್ತಿಯಲ್ಲಿ ವಸಂತಿ ಅಚ್ಚಳಿಯದೆ ಉಳಿದಿದ್ದಳು.

ಈಗ–

ಪಾರ್ವತಿ ತಾನಾಗಿಯೇ ಹುಟ್ಟಿಕೊಂಡ ಸಮಸ್ಯೆ. ತನ್ನ ತಂದೆತಾಯಿ ಖಂಡಿತ ಸಂಬಂಧಕ್ಕೆ ಒಪ್ಪಿಯಾರು. (ವಸಂತಿಯಿಂದ ಇವಳಾದೀತು ಎಂಬ ದೃಷ್ಟಿಯಿಂದ) ಪಾರ್ವತಿಗೂ ತನ್ನ ಮೇಲೆ ಮನಸ್ಸು ಇದ್ದೇ ಇದೆ. ಆದರೆ ತಾನು ಅವಳನ್ನು ಪ್ರೀತಿಸಿಲ್ಲ. ಪ್ರೀತಿಸಲು ಸಾಧ್ಯವೂ ಇಲ್ಲ. ಹಾಗಿರುವಾಗ ಕಾರಂತರ ಕೊನೆಯ ಮಾತಿಗಾಗಿ ಅವಳ ಕೈಹಿಡಿಯುವುದು ಎಂದರೆ?

ಸದಾನಂದನ ಮನಸ್ಸು ಇಬ್ಬಗೆಯಾಗಿ ಆಲೋಚಿಸುತ್ತಿತ್ತು. ಯಾವ ರೀತಿಯ ಪರಿಹಾರವೂ ಅವನಿಗೆ ಸಿಗಲಿಲ್ಲ. ಈ ಸಂದರ್ಭದಲ್ಲಿ–ಅವನ ಮನನೋಯುವ ಇನ್ನೊಂದು ಭೀಕರ ಘಟನೆ ನಡೆಯಿತು. ಬೆಂಗಳೂರಿಂದ ಬಂದ ತಂದೆಯ ಪತ್ರ ನೋಡಿ ಸದಾನಂದ ಕುಸಿದುಹೋದ.

"ಚಿ. ಸದಾನಂದನಿಗೆ, ಆಶೀರ್ವಾದಗಳು. ನಾವು ಕ್ಷೇಮದಲ್ಲಿದ್ದೇವೆ. ನೀನೂ ಹಾಗೆ ಇರಬಹುದು ಎಂದು ನನ್ನ ಹಾರೈಕೆ. ನಿನ್ನ ತಮ್ಮ ಚಿ. ರಾಘವನಿಗೆ ಕಳೆದ ತಿಂಗಳ ೧೧ನೇ ತಾರೀಕಿನಲ್ಲಿ ಕಲ್ಕತ್ತದಲ್ಲಿ ಉಂಟಾದ ಮೋಟಾರ್ ಅಪಘಡದಲ್ಲಿ ಬಲಗಾಲು ಸಂಪೂರ್ಣ ತುಂಡಾಗಿ ಹೋಗಿದೆ. ಈಗ ಗುಣಮುಖನಾಗಿ ಬೆಂಗಳೂರಿಗೆ ಬಂದಿದ್ದಾನೆ. ನಾನು ಅವನ ಟೆಲಿಗ್ರಾಂ ನೋಡಿ ಕಲ್ಕತ್ತೆಗೆ ಹೋಗಿ, ಅವನ ಚಿಕಿತ್ಸೆ

ಮುಗಿದ ಮೇಲೆಯೇ ಅವನನ್ನು ಇಲ್ಲಿಗೆ ಕರೆದು ತಂದೆ. ನೀನು ಗಾಬರಿಯಾಗುವಿ ಎಂದು ನಿನಗೆ ಟೆಲಿಗ್ರಾಂ ಆತ ಮಾಡಲಿಲ್ಲ. ಬಿಡುವು ಮಾಡಿಕೊಂಡು ಬೆಂಗಳೂರಿಗೆ ಹೊರಟುಬಾ. ಉಳಿಕೆ ಹಿಂದಿನಿಂದ,

ಇತಿ

ಎಂ.ನರ್ಸಪ್ಪಯ್ಯ."

ಪತ್ರ ಓದಿದ ಸದಾನಂದನಿಗೆ ತಲೆ ತಿರುಗಿ ಬಂತು. ಎಂತವನಿಗೆ ಹೀಗಾಯಿತು? ಇಂಜನಿಯರಿಂಗ್‌ನಲ್ಲಿ ಫಸ್ಟ್‌ಕ್ಲಾಸ್ ಮಾಡಿಕೊಂಡು ಏಳುನೂರರ ಸಂಬಳ ಪಡೆಯುತ್ತಿದ್ದ. ತನ್ನ ನೆಚ್ಚಿನ ಸಹೋದರನಿಗೆ ಆದ ಅಪಘಾತದಿಂದ, ಅವನಿಗೆ ಜಗತ್ತೇ ಶೂನ್ಯವಾಗಿ ಕಂಡಿತು. ತಾನು ಎಂತಹ ದುರ್ದೈವಿ ಎಂದು ಅನಿಸದಿರಲಿಲ್ಲ. ರಾಘವ ತನ್ನಲ್ಲಿ ಇಟ್ಟ ವಿಶ್ವಾಸ, ಕೊಟ್ಟ ಸಹಕಾರ, ಅವಿಸ್ಮರಣೀಯ. ಆತನೊಬ್ಬನಿಲ್ಲದಿದ್ದರೆ ತನ್ನ ಯೋಜನೆಗಳೆಲ್ಲ ಯಶಸ್ಸಿನತ್ತ ಸಾಗಲಿದ್ದುವೇ? ಆತ-ತನ್ನ ಸಹೋದರನಿಗಿಂತಲೂ ಹೆಚ್ಚು ಆತ್ಮೀಯ ಮಿತ್ರನಂತೆ ಇದ್ದ.

ಸದಾನಂದ ಮುಂದೆ ಯೋಚಿಸಲಿಲ್ಲ. ಮರು ದಿನವೇ ಬೆಂಗಳೂರಿಗೆ ಹೊರಡುವ ಸಿದ್ಧತೆ ಮಾಡಿದ್ದ. ಇಂತಹ ಸಂದರ್ಭಗಳಲ್ಲಿ ಹೋಗಿ ವಿಚಾರಿಸಿಕೊಂಡು, ತನ್ನ ಸಹಕಾರ ನೀಡದಿದ್ದರೆ, ತಾನು ತಪ್ಪುಗಾರನಾಗುವುದಕ್ಕಿಂತಲೂ ಹೆಚ್ಚು ಆತ್ಮವಂಚನೆಯಾದೀತೆಂದು ಆತ ಬಗೆದ. ಹಾಗೇ ಎಂಟು ದಿವಸದ ಬಿಡುವು ಮಾಡಿ, ಶಂಕರನಿಗೆ ಮನೆಯ ಎಲ್ಲಾ ವ್ಯವಹಾರದ ವಿಚಾರ ಹೇಳಿ, ತುಂಗಮ್ಮನನ್ನು ಕಂಡು ಮಾತನಾಡಿ, ಗೀತಾ ಕ್ಲಿನಿಕನ್ನು ಬಂದು ಮಾಡಿ, ಮೂರುವರೇ ವರುಷದ ನಂತರ ತಿರುಗಿ ಬೆಂಗಳೂರಿನತ್ತ ಮುಖಹಾಕಿದ.

ನರ್ಸಪ್ಪಯ್ಯನವರಿಗೆ– ಸದಾನಂದ ಊರಿಗೆ ಹೊರಟಾಗ ಚಿಂತೆ ಹತ್ತಿತ್ತು. ಅವರು ವಸಂತಿಯನ್ನು ಮದುವೆಯಾಗಬಾರದು ಎಂಬ ದೃಷ್ಟಿಯಿಂದ ಅಷ್ಟೇ ಅದಕ್ಕೆ ಒಪ್ಪಿಗೆ ಇತ್ತರಲ್ಲದೆ, ಅನ್ಯಥಾ ಅಲ್ಲ. ಅದೂ ಆತ ಊರಿಗೆ ಹೋಗಲಾರ. ಹೋದರೂ ಬಹಳ ದಿನ ಆತ ನಿಲ್ಲಲಾರ. ಅವನ ಯೋಜನೆಗಳೆಲ್ಲ ಬರೇ ಕನಸು. ಹಳ್ಳಿಯ ಜೀವನ ಬೇಸರವಾಗಿ, ಆತ ತಿರುಗಿ ಇಲ್ಲಿಗೆ ಬಂದಾನು. ಆಗ ಹಕ್ಕಿ ತನ್ನ ಕೈಗೆ ಸಿಕ್ಕೀತು. ಎಂದೆಲ್ಲಾ ಬಗೆದಿದ್ದರು. ಆದರೆ ಕೋಳ್ಯೂರಿಗೆ ಹೋದ ಸದಾನಂದ ಅಲ್ಲಿ ಬಲವಾಗಿ ಬೇರೂರಿದ ವಿಚಾರದ ಅವನ ಪತ್ರ ಬಂದಾಗ, ಅವರಿಗೆ ಅವನ ಬಗ್ಗೆ ಸಹಾನುಭೂತಿ, ಕಳಕಳಿ ಉಂಟಾಯಿತು. ಏನೋ ಅವನ ಇಷ್ಟ ಆ ನರ್ಸಿನ ಮೇಲೆ ಆಗಿದೆ. ಮಾಡಿಕೊಳ್ಳಬಹುದಿತ್ತು ಅವಳನ್ನು, ಎಂದು ಒಂದೆರಡು ಬಾರಿ ಎಣಿಸದೆ ಇರಲಿಲ್ಲ. ಆದರೆ ಅದಕ್ಕಿಂತಲೂ ಹೆಚ್ಚು ತಮ್ಮ ಹೆಂಡತಿ ಸರೋಜಮ್ಮನ ಪ್ರತಿಭಟನೆಗೆ ಎದುರುತ್ತರ ಕೊಡುವಷ್ಟು ಧೈರ್ಯ ಹಾಗೂ ಆ ಸಾಹಸಕ್ಕೆ ಅವರು ಇಳಿದಿರಲಿಲ್ಲ. ಆದರೂ ಒಂದೆರಡು ಬಾರಿ ಹೆಂಡತಿಯ ಮುಂದೇ ಆಡಿಯೇ ತೋರಿದ್ದರು.

"ನೀನೇ ಅವನನ್ನು ಹಳ್ಳಿಗೆ ಕಳುಹಿಸುವಂತೆ ಮಾಡಿದ್ದು-ಸರೋಜ. ಅವನು ನರ್ಸನ್ನೊ, ಇನ್ನ್ಯಾರನ್ನೊ ಮದುವೆಯಾದರೆ ಏನಿತ್ತು ನಿನಗೆ ತೊಂದರೆ? ಈ ಕಾಲದಲ್ಲಿ ಅದೆಲ್ಲಾ ಯಾರು ನೋಡುತ್ತಾರೆ? ವಿದೇಶಕ್ಕೆ ಹೋದವರೆಲ್ಲ ಇಲ್ಲಿಂದ ಹೆಣ್ಣು ಕಟ್ಟಿಕೊಂಡೇ ಹೋಗ್ತಾರೆ ಅಂತ ತಿಳಿದಿದ್ದೀಯಾ? ಸುಮ್ಮನೆ ಅವನನ್ನು ಪಾಪ ಹಳ್ಳಿಯಲ್ಲಿ ಕೊಳೆಸುವ ಹಾಗೆ ಮಾಡಿದ"

"ಹೌದು–ಅವನು ಹಳ್ಳಿಯಲ್ಲಿ ಕೊಳಿತಾನೇ ಅಂತ ತಿಳಕೊಂಡ್ರಾ? ಏನೂ ಇಲ್ಲ! ಮತ್ತೆ ಅವನು ಯಾರ್‍ಯಾರನ್ನೊ ಕಟ್ಟಿಕೊಂಡ್ರೆ, ಇಲ್ಲಿ ನೀವು ಬಿಡಿ, ನಾನಾದರೂ ಅಕ್ಕಪಕ್ಕದ ಮನೆಯವರಿಗೆ ಹೇಗೆ ಮುಖ ತೋರಿಸಲಿ" ಎಂದಿದ್ದರು ಸರೋಜಮ್ಮ. ಅದಕ್ಕವರು ನಗುತ್ತಲೇ ಉತ್ತರಿಸಿದರು "ಹೇಗೆ ಹೇಗೆ ಏಕೆ? ಈಗ ಇದ್ದ ಹಾಗೆ ಮುಖ ತೋರಿಸಿದರಾಯಿತು. ಈಗ ಹೈಕೋರ್ಟ್ ವಕೀಲ್ ರಂಗರಾಯರ ಮಗ ಹೇಗೆ ಇಂಗ್ಲೀಷ್ ಲೇಡಿಯನ್ನು ಟ್ರಾನ್ಸಿಸ್ಟರ್‌ನ ಹಾಗೆ ಹಿಡಕೊಂಡು ಬೀದಿ ಬೀದಿ ಅಲೆಯುತ್ತಾನೆ?"



"ಅವನೇನೋ ಹಾಗೆ ಮಾಡಿದ ಅಂತ ಇಟ್ಕೊಳ್ಳಿ. ಇವನು ಯಾಕೆ ಹಾಗೆ ಮಾಡಬೇಕು ಹೇಳಿ?"

"ಅದೆಲ್ಲ ನಂಗೊತ್ತಿಲ್ಲಪ್ಪ. ಆದರೆ ಸದಾನಂದ ಮಾತ್ರ ಇನ್ನು ಬೇರೆ ಮದುವೆ ಆಗುವಹಾಗೆ ಇಲ್ಲ. ಸುಮ್ಮನೆ ಅವನನ್ನು ಹಳ್ಳಿಗೆ ಕಳುಹಿಸಿದ್ದು ಬಂತು."

"ಯಾಕೆ ಇಲ್ಲ ಅಂತೀರಿ? ನಾನು ಬೇರೆ ಮಾಡಿಸಲಾ? ಏನು ಇದೆ ಪಂಥ ಹೇಳಿ."

"ಪಂಥ ಕಟ್ಟೋದು ದೊಡ್ಡದಲ್ಲ. ನೀನು ಮಾಡಿಸುವ ವಿಧಾನವಾದರೂ ಹೇಗೆ ಅಂತ ಕೇಳೋಣ. ಆಮೇಲೆ ನೀನು ಹೇಳಿದ್ದೆ ಪಂಥ. ನನ್ನದು ಅದಕ್ಕೆ ಸಮ್ಮತಿ".

"ಹಾಗೇ ಬನ್ನಿ–ಹಾಗಾದರೆ. ಮೊದಲು ಸದಾನಂದನಿಗೆ ಮದುವೆ ಮಾಡಲೇ ಬಾರದು. ರಾಘವನಿಗೆ ಮಾಡಿಸಬೇಕು. ಒಳ್ಳೇ ಕಡೆಯ ಹುಡುಗಿ ಅವನಿಗೆ ಆದರೆ, ಅದನ್ನು ನೋಡಿ ಮತ್ತೆ ತಾನಾಗಿಯೇ ವಾಸುದೇವರಾಯರ ಮಗಳಿಗೆ ಒಪ್ಪಿಗೆ ಕೊಡುತ್ತಾನೆ! ಎಷ್ಟು ದಿನ ಆ ನರ್ಸ್‌ನಲ್ಲಿ ಪ್ರೀತಿ ಇರುತ್ತೆ ಅಂತೀರಿ, ಬರೇ ಹುಚ್ಚು ಬುದ್ಧಿಯಲ್ಲವಾ ಅದು?"

"ನಿನಗೆ ಅದೆಲ್ಲಾ ಹೇಗೆ ಗೊತ್ತಾಗುತ್ತೆ ಸರೋಜ? ನೀನು ಬೆಂಗಳೂರಲ್ಲೆ ಹುಟ್ಟಿದ ಮಾತ್ರಕ್ಕೆ ಆಯಿತಾ? ನಿನ್ನ ತಂದೆ–ಹೊಟೆಲ್ ಯಜಮಾನರು, ನಿನಗೆ ಕಲಿಸುವ ಮನಸ್ಸು ಮಾಡಿದ್ದರು. ನೀನೇ ಚಕ್ಕರ್ ಹೊಡೆದು ಮನೆಯಲ್ಲೇ ಕೂತೆ. ಮತ್ತೇನು ನಿನಗೆ ಗೊತ್ತು ಹೇಳು? ಈಗಿನ ಹುಡುಗರು ಲವ್ ಗಿವ್ ಅಂತ? ಒಮ್ಮೆ ಒಂದು ಹುಡುಗಿಯಲ್ಲಿ ಮನಸ್ಸಾದ ಮೇಲೆ ಆಯಿತು. ಜೀವ ಹೋದರೂ ಬಿಡೋಕಿಲ್ಲ, ಈ ಹುಡುಗರು, ನೋಡಿಕೋ" ಎಂದಿದ್ದರು ನರ್ಸಪ್ಪಯ್ಯನವರು ಹೆಂಡತಿಗೆ. ಅದಕ್ಕೆ ಅವರು "ಎಲ್ಲಾ ಗೊತ್ತು. ನಿಮ್ಮ ಕತೆ! ಯಾವುದಕ್ಕೂ ರಾಘವನಿಗೆ ಬರೀರಿ, ಎಲ್ಲಾ ವಿಚಾರ. ಅವಂದು ಏನು ಬರುತ್ತದೆ ನೋಡಿ. ಮತ್ತೆ ತಾನೇ ಇವನ ಕತೆ" ಎಂದಿದ್ದರು.

ಹಾಗೆ ನರ್ಸಪ್ಪಯ್ಯನವರು ರಾಘವನಿಗೆ ಮದುವೆಯ ಬಗ್ಗೆ ಬರೆದಿದ್ದರು. ಅವನು ಖಡಾತುಂಡಾಗಿಯೇ ಬರೆದ.

"ನೀವು ನನ್ನ ಅಣ್ಣಗೆ ಮದುವೆ ಮಾಡಿಸದೆ ನನ್ನ ಮದುವೆ ಬಗ್ಗೆ ಯೋಚಿಸುವುದೇ ಬೇಡ. ಅವನ ಮದುವೆಯಾಗದೇ ನನಗೆ ಮದುವೆಯಾಗುವ ಇಷ್ಟವೇ ಇಲ್ಲ."

ಈ ಪತ್ರದಿಂದ ನರ್ಸಪ್ಪಯ್ಯನವರಿಗಿಂತಲೂ ಹೆಚ್ಚಾಗಿ ಕಂಗಾಲಾದವರೆಂದರೆ ಸರೋಜಮ್ಮ. ಅವರ ಯೋಜನೆಯೇ ತಲೆಕೆಳಗಾಗಿತ್ತು. ವಿಧವೆ ನರ್ಸನ್ನು ಮನೆಯ ಒಳಗೆ ತರುವಂತಿಲ್ಲ. ಅವಳನ್ನು ತಾರದೆ ತನ್ನ ಕುಡಿ ಬೆಳಗುವಂತಿಲ್ಲ. ಕಡೆಗೆ ಯಾವುದೂ ಹೊಳೆಯದೆ ಅವರು ಮಕ್ಕಳು ಇದ್ದಾರೆ ಎಂಬುದನ್ನು ಮರೆತಂತೆ, ಎರಡೂ ಮಕ್ಕಳೂ ಒಂದೇ, ಬುದ್ಧಿ ಇಲ್ಲದವು ಎಂಬ ಸಿದ್ಧಾಂತಕ್ಕೆ ಬಂದರು. ಚಿಂತೆ ಇದ್ದರೂ ನಿಶ್ಚಿಂತರಂತೆ ಇದ್ದರು.

ಈ ಸಮಸ್ಯೆ ಬಗೆಹರಿಯದೆ ಇದ್ದಾಗ, ಎದ್ದ ಎರಡನೆಯದು ಅಂದರೆ–ನರ್ಸಪ್ಪಯ್ಯನವರಿಗೆ ರಿಟ್ಯಾರ್ ಆದುದು. ರಿಟೈರ್ಡ್ ಆದ ನಂತರ ಬೆಂಗಳೂರಿನಲ್ಲಿ ಕಾಲಕ್ಷೇಪಮಾಡುವುದು ಅಷ್ಟು ಸುಲಭವಲ್ಲ. ಸ್ವಂತ ಮನೆ ಇರುವುದರಿಂದ ಆ ಬಗ್ಗೆ ಬಾಡಿಗೆ ತೆರಬೇಕಾಗಿಲ್ಲವಾದರೂ ಸಿಗುತ್ತಿದ್ದ ಪೆನ್‌ಶನ್ ಅವರ ದರಬಾರಿಗೆ ಸಾಲದು. ರಾಘವ ತಿಂಗಳಿಗೆ ನೂರು ಕಳುಹಿಸಿದರೆ– ಸದಾನಂದ ಎರಡು ತಿಂಗಳಿಗೋ ಮೂರು ತಿಂಗಳಿಗೋ ತನ್ನ ಶಕ್ತ್ಯಾನುಸಾರ ಕಳುಹಿಸುತ್ತಿದ್ದ. ತಾನು ಮೇಜಿಸ್ಟ್ರೇಟರಾಗಿದ್ದುದರಿಂದ ಮುಂದೆ ಯಾವುದೇ ಖಾಸಗಿ ಸಂಸ್ಥೆಗಳಲ್ಲಿ ಅವರ ಅಡಿಯಾಳಾಗಿ ದುಡಿಯಲು ಅವರಿಗೆ ಮನಸ್ಸಿಲ್ಲ. ಮಕ್ಕಳು ಕಳುಹಿಸುತ್ತಿದ್ದ ಹಣ, ಆ ಮೇಲೆ ಅವರಿಗೆ ಸಿಕ್ಕ ಇನ್ಶೂರಿನ ಹಣ ಜೀವನಕ್ಕೆ ಧಾರಾಳವಾಗಿದ್ದರೂ, ಅವರ ಮನಸ್ಸಿನಲ್ಲಿ ತಾನು ಮಕ್ಕಳನ್ನು ದೂರ ಮಾಡಿದೆ ಎಂಬ ಕೊರಗು ಇಲ್ಲದಿರಲಿಲ್ಲ. ಸದಾನಂದ ಈಗ ಬೆಂಗಳೂರಲ್ಲೇ ಇದ್ದರೆ ಎಷ್ಟು ಒಳ್ಳೆದಿತ್ತು ಎಂದು ಅವರಿಗೆ ಅನಿಸದೆಯೂ ಇರಲಿಲ್ಲ. ಆದರೆ ಏನು ಮಾಡಲಾದೀತು ಅವರು? ಸದಾನಂದ ಕೋಳ್ಯೂರಿಗೆ ಹೋಗಿ

ಆಗಲೇ ಎರಡು ಮೂರು ವರ್ಷಗಳು ಉರುಳಿವೆ. ಅವನ ಒಂದೊಂದೇ ಯೋಜನೆಗಳು, ಕೊನೆಯ ಹಂತದಲ್ಲಿವೆ ಎಂಬ ಅವನ ಪತ್ರ ಅವರಿಗೆ ಆಗಾಗ ಬರುತ್ತಿರುತ್ತವೆ. ಆದರೆ ತಾನೇನು ಬರೆಯಬಲ್ಲೆ, ಆ ಪತ್ರಕ್ಕೆ? ತಾನು ಮಗನಿಗೆ ಕಲಿಸಿ ಡಾಕ್ಟರನಾಗಿ ಮಾಡಿ, ಕಡೆಗೂ ಮಾಡಿದ ಉಪಕಾರವೆಂದರೆ, ಇದೇ! ಆತನನ್ನು ಹಳ್ಳಿಯಲ್ಲಿ ಇರುವಂತೆ ಮಾಡಿದುದು ಎಂಬ ಕೊರಗಿನಿಂದ– ಆಗಾಗಲೊಮ್ಮೆ ಅವರು ಮಗನಿಗೆ ಪತ್ರಿಸುತ್ತಿದ್ದರು.

ಈ ತನ್ಮಧ್ಯೆ ಕಲ್ಕತ್ತೆಯಲ್ಲಿ ಇಂಜಿನಿಯರಿಂಗ್ ಆಗಿ ದುಡಿಯುತ್ತಿದ್ದ ರಾಘವ ಅಪಘಾತಕ್ಕೊಳಗಾದ ದುರಂತ ವಾರ್ತೆ, ನರ್ಸಪ್ಪಯ್ಯನವರಿಗೆ ಬಂತು. "ರಾಘವನಿಗೆ ಅಪಘಾತ. ಸ್ಮೃತಿ ಇಲ್ಲ. ಆಸ್ಪತ್ರೆಯಲ್ಲಿದ್ದಾನೆ" ಎಂಬ ಟೆಲಿಗ್ರಾಂ ದಂಗಾಗಿಸಿತು. ಕಲ್ಕತ್ತೆಯೇನು ಹತ್ತಿರದ ಊರೇ? ಹಠಾತ್ತನೆ ಹೋಗುವುದೆಂದರೆ ಏನು ಸಾಮಾನ್ಯವೇ? ಏನೇ ಆಗಲಿ! ಕಣ್ಣಲ್ಲಾದರೂ ನೋಡಿ ಬರಬಹುದಲ್ಲ ಎಂದು ಜೊತೆಗೆ ಹೊರಟ ಸರೋಜಮ್ಮನ ದುಃಖಕ್ಕೂ ಸಮಾಧಾನ ಹೇಳಿ– ಅವರು ಕಲ್ಕತ್ತೆಗೆ ಹೊರಟರು. ಎರಡು ದಿನದ ಪಯಣ ಮುಗಿಸಿ, ಅವನ ವಿಳಾಸ ಹಿಡಿದುಹೋಗಿ ಆಸ್ಪತ್ರೆಯಲ್ಲಿ ನೋಡಿದಾಗ, ರಾಘವ ತನ್ನ ಬಲದ ಕಾಲೊಂದನ್ನು ಸಂಪೂರ್ಣ ಕಳೆದುಕೊಂಡಿದ್ದಾನೆ. ಕಾಲಿನ ಎಲುಬು ಸಂಪೂರ್ಣ ಪುಡಿಪುಡಿಯಾದುದರಿಂದ, ಅದನ್ನು ತುಂಡುಮಾಡಿ ತೆಗೆದು, ಅವನಿಗೆ ಆಸ್ಪತ್ರೆಯಲ್ಲಿ ವಿಶೇಷ ಉಪಚಾರವನ್ನು ಮಾಡಲಾಗಿತ್ತು.

ಮಗನ ದುರವಸ್ಥೆಯನ್ನು ನೋಡಿ ನರ್ಸಪ್ಪಯ್ಯನವರು ಕಣ್ಣೀರುಗರೆದರು. ತಾನು ಓದಿಸಿದರೂ ಅವನ ಗತಿ ಹೀಗಾಯಿತಲ್ಲ ಎಂಬ ಕೊರಗು ಅವರಿಗೆ. ಆದರೆ ರಾಘವನ ದೃಢಚಿತ್ತ–ಅವನ ಸಮಾಧಾನದ ಎದುರು ಮೂಕಚಿತ್ತರಾದರು. ರಾಘವ ಬೈರಾಗಿಯಂತೆ ತಂದೆಗೆ ಉಪದೇಶ ಮಾಡಿದ್ದ. 'ಬದುಕು ನಾವೆಣಿಸಿದಂತೆ ಇಲ್ಲ ಅಪ್ಪಯ್ಯ. ಹಾಗಿದ್ದರೆ ಈ ಪ್ರಪಂಚವೇ ಆಗುತಿದ್ದಿಲ್ಲ. ಏನೋ ಇಷ್ಟರತನಕ ಓದಿ ಕೆಲಸ ಮಾಡುವ ಯೋಗ ನನಗೆ ಇತ್ತು. ದೇವರಿಗೆ ಇನ್ನು ಸಾಕು ಅನಿಸಿತು ಅಷ್ಟೆ! ಹಾಗೇ ಆಯಿತು. ಆದರಲ್ಲಿ ಅಳುವಂತಾದ್ದು, ಬೇಸರಿಸುವಂತಾದ್ದು ಏನೂ ಇಲ್ಲ." ಎಂದು ತನ್ನ ಮನಸ್ಸನ್ನೇ ಗಟ್ಟಿಮಾಡಿಕೊಂಡಿದ್ದ, ಅವರಿಗೂ ತಿಳಿಹೇಳಿದ.

ನರ್ಸಪ್ಪಯ್ಯನವರಿಗೆ ಎಷ್ಟೆಂದರೂ ಆ ವೇದನೆ ತಡೆಯಲಾಗಲಿಲ್ಲ. ಮಗನ ಕಾಲು ಆಪರೇಶನ್ ಮಾಡಿದ್ದು, ಸಂಪೂರ್ಣ ಗುಣವಾದ ಮೇಲೆಯೇ ಹೋದರಾಯಿತು ಎಂದು ನಿರ್ಧರಿಸಿ, ಹೆಂಡತಿಗೆ ಗಾಬರಿ ಇಲ್ಲವೆಂದು ಟೆಲಿಗ್ರಾಂ ಕೊಡಿಸಿದರು. ಮತ್ತೆ ಹದಿನೈದು ದಿನದ ತನಕ ಅಲ್ಲಿ ಇದ್ದು ಗಾಯ ತುಸು ಮಾಯವಾದ ಮೇಲೆ, ಇಬ್ಬರೂ, ಕಲ್ಕತ್ತೆಯಿಂದ ಬೆಂಗಳೂರು ಕಡೆ ಹೊರಟುನಿಂತರು.

ರಾಘವ ಸಿವಿಲ್ ಇಂಜೀನಿಯರಾದುದರಿಂದ ಮೇಲೆ ಆತ ಖಾಸಗಿ ಸಂಸ್ಥೆಯೊಂದರಲ್ಲಿ ದುಡಿಯುತ್ತಿದ್ದುದರಿಂದ, ಅವನಿಗೆ ಪರಿಹಾರಧನ ದೊರಕಿದರೂ ಆತ ಕೆಲಸ ಕಳೆದುಕೊಂಡ. ಮರದ ಕೈಯ ಸಹಾಯದಿಂದ ಆತ ನಡೆಯಬಹುದೆಂದು ಡಾಕ್ಟರರೂ ಆದೇಶವಿತ್ತರೂ– ಖಾಸಗಿ ಸಂಸ್ಥೆ ಆತನನ್ನು ಕೆಲಸಕ್ಕೆ ಇರಿಸಲು ಒಪ್ಪಲಿಲ್ಲ. ರಾಘವ ಕಲ್ಕತ್ತೆಗೂ ತನಗೂ ಇರುವ ಸಂಬಂಧವನ್ನು ಕಡಿದು, ಕೊನೆಯ ಭಾರಿ ಕಲ್ಕತ್ತೆಯನ್ನು ನೋಡಿ, ಬೆಂಗಳೂರಿಗೆ ಹೊರಟಾಗ ಅವನ ತಲೆಯಲ್ಲಿ ಸುಳಿಯುತ್ತಿದ್ದುದು ಒಂದೇ ಯೋಚನೆ: "ಬರೇ ವಿದ್ಯೆಯನ್ನು ನಂಬಿದವನ ಗತಿ ಇಷ್ಟೆ! ವಿದ್ಯೆಯಷ್ಟೆ, ಕೃಷಿ ಉದ್ಯೋಗವೂ ಇದ್ದರೆ ಮಾತ್ರ, ಇನ್ನು ಪ್ರಪಂಚದಲ್ಲಿ ನನ್ನಂಥವರಿಗೆ ಕಾಲಹರಣ ಸಾಧ್ಯ!"

ರಾಘವ ಮನೆಗೆ ಬಂದಾಗ ಸರೋಜಮ್ಮನಿಗೆ ಮೂರ್ಛೆ ಬಂದಂತಾಯಿತು ಅವನನ್ನು ನೋಡಿ. ರಾಘವನೇ ಅವಳಿಗೂ ಸಮಾಧಾನ ಹೇಳಿದ. ನರ್ಸಪ್ಪಯ್ಯನವರು ಶೂನ್ಯಮನಸ್ಕರಾಗಿ, ಬಾಳೇ ಬರಡಾಗಿ ನಿರ್ವಿಕಾರ ಮೂರ್ತಿಗಳಂತಾಗಿದ್ದರು. ಆದರೂ– ಇನ್ನೂ ಉಳಿದ ಆಶೆ ಎಂದರೆ ಸದಾನಂದನದು. ಅದರಿಂದ ಅವನಿಗೆ ಹೊರಟು ಬರುವಂತೆ ಪತ್ರ ಹಾಕಿದ್ದರು. ಆ ಪತ್ರ– ರಾಘವನ ದುರಂತ ಅಪಘಾತದ ವರ್ತಮಾನವನ್ನು ಹೊತ್ತು, ಕೋಳ್ಯೂರಿಗೆ ಹೋದಾಗ, ಸದಾನಂದ ತನ್ನ ಆತ್ಮೀಯ ಕಾರಂತರನ್ನು ಕಳೆದುಕೊಂಡ ದುಃಖದಿಂದ ಚೇತರಿಸುತ್ತಿದ್ದ. ಆಗ ಬಂದ ಪತ್ರ ಹುಣ್ಣಿಗೆ ಉಪ್ಪುನೀರು ಹೊಯ್ದಂತೆ ಮಾಡಿತು, ಅವನನ್ನು.

ಸದಾನಂದ ಬಂದು ಬೆಂಗಳೂರಿನಲ್ಲಿ ಇಳಿಯುವಾಗ ರಾತ್ರಿ ಎಂಟು ಗಂಟೆ. ಟಾಂಗಾ ಮಾಡಿಕೊಂಡು ಆತ ನೇರವಾಗಿ 'ಶ್ರೀಕೃಪ'ಕ್ಕೆ ಬಂದ. ಮನೆಗೆ ಬಂದಾಗ ಆಗ ತಾನೇ ಊಟ ತೀರಿಸಿ, ಕೈ ತೊಳೆದು ಚಾವಡಿಗೆ ಬರುತ್ತಿದ್ದರಷ್ಟೆ– ರಾಘವನೂ ನರ್ಸಪ್ಪಯ್ಯನವರೂ ಬಹು ದಿನಗಳನಂತರ ಅವರ ಭೆಟ್ಟಿ ತುಂಬಾ ಸಂತೋಷದಾಯಕವಾಗಿತ್ತು.

ಬಾಯಾರಿಕೆ ತೀರಿಸುವುದರ ಮೊದಲು ಅವಸರವಾಗಿ ಸದಾನಂದ ತಮ್ಮನ ಕಾಲು ನೋಡಿದ, ಮುಂದೆ ಉಳಿದ ಯಾವ ಪರಿಹಾರವೂ ಇರಲಿಲ್ಲ ಅದಕ್ಕೆ. ನಿಟ್ಟುಸಿರು ಬಿಟ್ಟ ಆತ. ಅಪಘಾತದ ಕಾರಣಗಳನ್ನು ಹೇಗೆ, ಎಲ್ಲಿ ಎಂಬುದರ ಬಗೆಗೆ ಕೇಳಿದ, ರಾಘವ ವಿವರಿಸಿದ. ಕತೆ ಕೇಳಿದ ಮೇಲೆ ರಾಘವ ತುಂಬಾ ದುರದೃಷ್ಟವಂತ ಎಂಬ ಮಾತು ಅವನ ಬಾಯಿಯಲ್ಲಿ ಬಾರದೇ ಉಳಿಯಲಿಲ್ಲ.

ಅಣ್ಣ, ತಮ್ಮನ ಮಾತುಕತೆ ಸದಾನಂದನ ಊಟದ ಸಮಯದಲ್ಲೂ ನಿಂತಿರಲಿಲ್ಲ. ಸದಾನಂದನ ಕ್ಷೇಮ ಸಮಾಚಾರ, ಕೋಳ್ಯೂರಿನ ಯಾವುದೇ ವರ್ತಮಾನ, ಅವನ ತಂದೆ ತಾಯಂದಿರಿಗೆ ಕೇಳುವಷ್ಟು ಬಿಡುವಿರಲಿಲ್ಲ ಅವರ ಮಾತುಕತೆಯಿಂದ. ರಾತ್ರಿ ಉಪ್ಪರಿಗೆಯ ಮೇಲೆ ಮಲಗಿದ್ದ ಇಬ್ಬರೂ ಮಧ್ಯರಾತ್ರಿಯ ತನಕ ಮಾತನಾಡುತ್ತಲೇ ಇದ್ದರು. ಸದಾನಂದನಿಗೆ ಪ್ರಯಾಣದ ಆಯಾಸದಿಂದ ಆವರಿಸಿದ ಜೊಂಪೇ ಕಡೆಗೆ ಅವರ ಮಾತಿಗೆ ಪೂರ್ಣವಿರಾಮ ಹಾಕಿತು.

ಮರುದಿನ ಕಾಫಿ ತೀರಿಸಿದ ಮೇಲೆ ನರ್ಸಪ್ಪಯ್ಯನವರು ಸದಾನಂದನಲ್ಲಿ ಲೋಕಾಭಿರಾಮವಾಗಿ ಕೋಳ್ಯೂರಿನ ವರ್ತಮಾನ ಕೇಳಿದರು. ಸದಾನಂದ ತಾನು ಕೈಕೊಂಡ ಎಲ್ಲಾ ಸಾಹಸಿ ಯೋಜನೆಗಳನ್ನೆಲ್ಲ ವಿವರಿಸಿದ, ಮಗನ ಯೋಜನೆಗಳು, ಅವನ





ನಗರದ ಮನರಂಜನೆಯ ಚಿತ್ರಮಂದಿರ

# ಕೃಷ್ಣಾ ಟಾಕೀಸ್

## ಶಿವಮೊಗ್ಗಾ



ಉತ್ತಮ ಚಿತ್ರಗಳನ್ನು ಪ್ರದರ್ಶಿಸುವ

ಅತ್ಯಾಧುನಿಕ ಸಲಕರಣೆಗಳಿಂದ

ಸುಸಜ್ಜಿತವಾದ

# H. P. C. ಚಿತ್ರಮಂದಿರ

## ಶಿವಮೊಗ್ಗಾ



"ಸರ್ವರಿಗೂ ದೀಪಾವಳಿಯು" ಶುಭವಾಗಲಿ



## ಹೋಟೆಲ್

# ಬೃಂದಾವನ

## ಫಲಹಾರ ಮಂದಿರ ಭೋಜನ ಮತ್ತು ವಸತಿಗೃಹ

- ವಿವೇಚನಾಯುತ ಪೋಷಕರಿಗೆ ತೃಪ್ತಿಕರ ಸೇವೆ ನೀಡಲು ೨೩ ವರ್ಷದ ಅನುಭವದಿಂದದೊಡಗೂಡಿದ ಒಂದು ಆದರ್ಶ ಹೊಟೆಲ್
- ನೀವು ಜರೂರ ಕೆಲಸದಲ್ಲಿರಲಿ ಅಥವಾ ಆರಾಮಧಾಮಗಾಗಿ ಕಾಲ ಕಳೆಯಲು ಬರಲಿ "ಹೊಟೆಲ್ ಬೃಂದಾವನ" ನಿಮಗೆ ಅತ್ಯಂತ ತೃಪ್ತಿಕರವಾಗಿರುವದು.
- ನಗರದ ಕೇಂದ್ರ ಸ್ಥಾನದಲ್ಲಿದ್ದ ವ್ಯಾಪಾರ ಕೇಂದ್ರ ರೇಲ್ವೆ ನಿಲ್ದಾಣ ಕೋರ್ಟು ಕಛೇರಿ ಬಸ್‌ಸ್ಟ್ಯಾಂಡ್ ಇವುಗಳಿಗೆ ಅತಿ ಸಮೀಪ.
- ನೀವು ಹೊಟೆಲ್ ಬೃಂದಾವನದಲ್ಲಿ ಒಮ್ಮೆ ತಂಗಿದರೂ ಎಂದಿಗೂ ಮರೆಯಲಾರದ ಸವಿ ನೆನಪಾಗಿ ಉಳಿಯುವದು.

ಮಾರುತಿಗಲ್ಲಿ ಕಾರ್ನರ  ಬೆಳಗಾವಿ

ಫೋನ್ : **2032**

ಸರ್ವರಿಗೂ ಸಹರ್ಷ!! ಸ್ವಾಗತ!!!

ಉತ್ಸಾಹ, ಕಾರ್ಯದಕ್ಷತೆಯನ್ನು ಕೇಳಿದ ಸರೋಜಮ್ಮ ನಿಗೂ, ತಾನೂ ಒಮ್ಮೆ ಕೋಳ್ಯೂರಿಗೆ ಯಾಕೆ ಹೋಗ ಬಾರದು ಅನಿಸದಿರಲಿಲ್ಲ. ನರ್ಸಪ್ಪಯ್ಯನವರಂತೂ ಮಗನಿಗೆ ಮೆಚ್ಚುಗೆ ಸೂಚಿಸಿದರು. ಈ ಮೊದಲೇ ತಾನೊಮ್ಮೆ ಹೋಗಬೇಕಿತ್ತು! ತಾನು ಅವನನ್ನು ದೂರವಿರಿಸಿದೆ. ಅದು ತನ್ನ ತಪ್ಪು ಎಂದು ಅವರಿಗೆ ಅನಿಸದೇ ಹೋಗಲಿಲ್ಲ.

ಸದಾನಂದ ತನ್ನ ಕೆಲಸಗಳ ವರ್ಣನೆ ಮಾಡಿದ ನಂತರ ಕಾವೇರಮ್ಮ ಸತ್ತದ್ದು, ಕಾರಂತರ ಆತ್ಮೀಯತೆ, ಕಡೆಗೆ ಅವರ ಸಾವು ಎಲ್ಲವನ್ನೂ ವಿವರಿಸಿದ. ಅವನು ಹೇಳುತ್ತಿದ್ದಾಗ ಅವನ ಭಾವೋದ್ವೇಗಕ್ಕೆ ಮೃದು ಹೃದಯದ ಸರೋಜಮ್ಮನೂ ಒಳಗಾಗದೆ ಇರಲಿಲ್ಲ. ಕಾರಂತರ ಪರಿಚಯ ಇಲ್ಲದಿದ್ದರೂ, ಸದಾನಂದನ ಮಾತಿನ ಮೇಲಿಂದ ಅವರನ್ನು ಊಹಿಸಿಕೊಂಡ ಸರೋಜಮ್ಮ ಕೂಡ "ಕಾರಂತರು ಸಾಯಬಾರದಿತ್ತು ಹೀಗೆ" ಎಂದು ಉದ್ಗಾರವೆತ್ತದೆ ಇರಲಿಲ್ಲ. ನರ್ಸಪ್ಪಯ್ಯನವರಂತೂ, "ಒಳ್ಳೆ ಮನುಷ್ಯ. ನನ್ನ ಅಪ್ಪನ ಕಾಲದಿಂದಲೂ ನನಗೂ ಅವರಿಗೂ ಸ್ನೇಹ. ಅವರ ಮನೆತನದಲ್ಲಿ ಕಾರಂತರಂತವರು ಅಂದರೆ ಅವರಿಗೆ ಅವರೇ. ಹೆಚ್ಚೆಂದರೆ ಐವತ್ತೈದೂ ಅರುವತ್ತೊ ಆಗಿರಬಹುದು ಅವರಿಗೆ. ಇನ್ನೂ ಹತ್ತುವರುಷ ಬದುಕಬೇಕಿತ್ತು" ಎಂದು ಸತ್ತವರ ಗುಣಗಾನ ಮಾಡಿದರು.

ಈ ನಡುವೆ ಸದಾನಂದ, ಕಾವೇರಜ್ಜಿಯ ಆತ್ಮಾಭಿಮಾನ, ನರ್ಸಪ್ಪಯ್ಯನವರು ನಡಕೊಂಡ ಬಗ್ಗೆ ಅವಳ ಅಸಮಾಧಾನ ಕಡೆಗೂ ಅಕಸ್ಮಾತ್ ಅವರು ಸತ್ತುದನ್ನು ಹೇಳಿ ಕಡೆಗೆ ಉಸುರಿದ– 'ಇನ್ನಾದರೂ ನಾನು ನಿಮಗೆ ಹೇಳುವುದು ಒಂದೇ ಅಪ್ಪಯ್ಯ. ನೀವು ಊರಿಗೆ ಬರಬೇಕು. ನಮ್ಮ ನೆಲ, ನಮ್ಮ ಜನವನ್ನು ಮರೆಯಬಾರದು. ನಮ್ಮ ಊರೆಂಬ ಸ್ವಾಭಿಮಾನ ಬಿಡಬಾರದು. ಅವಿದ್ಯಾವಂತಳಾದ ಕಾವೇರಜ್ಜಿ ಕೂಡ–ತನ್ನ ನೆಲದಲ್ಲೇ ಸಾಯುತ್ತೇನೆ ಮಗ, ನಿನ್ನಲ್ಲಿ ಬರೋದಿಲ್ಲ ಎಂದು ಹಟಹಿಡಿದಿರುವಾಗ, ನಾವು ವಿದ್ಯಾವಂತರಿಗೆ ಇಂತಹ ಅಭಿಮಾನ ಇಲ್ಲ ಅಂದರೆ, ನಾವೆಷ್ಟು ನಿರಭಿಮಾನಿಗಳು?" ಎಂದು ತಂದೆಗೆ ಸವಾಲು ಹಾಕಿದ.

ನರ್ಸಪ್ಪಯ್ಯನವರು ಹೆಂಡತಿಯ ಮುಖ ನೋಡಿ, ಮಗನ ಮಾತಿಗೆ ಪ್ರತ್ಯುತ್ತರ ಕೊಟ್ಟರು. "ನನ್ನದೇನೂ ಅಡ್ಡಿ ಇಲ್ಲ ಸದಾನಂದ. ಮೊದಲು ನಿನ್ನ ಅಮ್ಮನನ್ನು ಒಪ್ಪಿಸು."

ಸದಾನಂದ ತಾಯಿಯ ಮುಖ ನೋಡಿದ. ಆಕೆ ಆತನಿಗೆ ಹೇಳಿದಳು, "ಒಪ್ಪಿಗೆ ಅಂದರೆ ಅದೇನೂ ಅಷ್ಟು ಸುಲಭದಲ್ಲಿ ಕೊಡುವ ಹಾಗೆ ಇಲ್ಲ. ಯಾವುದಕ್ಕೂ ಒಮ್ಮೆ ಕೋಳ್ಯೂರಿಗೆ ಹೋಗಿ ನೋಡಿಕೊಂಡು ಬರುತ್ತೇನೆ. ಆಮೇಲೆ ನೋಡೋಣ. ಮುಂದಿನ ಯೋಚನೆ".

ಅಲ್ಲಿಗೆ ಆ ಅಭಿಪ್ರಾಯದ ಮಾತುಕತೆ ಕೊನೆಯಾಯಿತು. ಒಮ್ಮೆಯೂ ಕೋಳ್ಯೂರಿನತ್ತ ಮುಖ ಮಾಡಿರದ ತನ್ನ ತಾಯಿ ಈಗ ಇಷ್ಟಾದರೂ ಮೆತ್ತಗಾದಳಲ್ಲ. ಮುಂದೆ ಎಲ್ಲಾ ನೇರವಾಗಬಹುದು! ರಾಘವನಿಂದ ಅವಳಿಗೆ ಕಲಿಸಬೇಕು, ಎಂದುಕೊಂಡ ಸದಾನಂದ ತನ್ನಲ್ಲೇ, ತೋರಿಕೆಗೆ ಮಾತ್ರ ಬಾಯಿ ಮುಚ್ಚಿ ಸುಮ್ಮನಾದ.

ಮಧ್ಯಾಹ್ನದ ಊಟದ ನಂತರ ಮಾಳಿಗೆಗೆ ಏರಿದ ಸಹೋದರರು ಮಾತುಕತೆಗೆ ಆರಂಭಿಸಿದರು.



"ನಾನು ಈ ಬಾಂಟೆಡೈಯಿಂಗ್ ಬೆಡ್‌ಶೀಟ ಉಟ್ಟು ಕುರ್ತಾ ತೊಡೋಕೆ ಶುರು ಮಾಡ್ದಾಗ್ನಿಂದ ದುರು ದುರು ನೋಡ್ತಿದ್ದ ನಮ್ಮ ಆಫೀಸಿನ ಬಕ್ರಾಗಳೆಲ್ಲಾ ಈಗ ಮಂಕಾಗಿ ಮುದುಡಿಕೊಂಡು ಕೂತ್ಬಿಟ್ಟವೆ.

ಮಾತಿಗೆ ಮಾತು ಬೆಳೆದಾಗ ಸದಾನಂದ ಅನಿರೀಕ್ಷಿತವಾಗಿ ತಮ್ಮನನ್ನು ಪ್ರಶ್ನಿಸಿದ. "ಆದದ್ದೆಲ್ಲಾ ಆಯಿತು ರಾಘವ, ಮುಂದೆ ಏನು ಮಾಡುವ ಹವಣಿಕೆ ನಿನ್ನದು? ಯೋಚಿಸಿದ್ದಿಯೋ?" ಎಂದ. "ಯಾವುದರ ಇತ್ಯರ್ಥಕ್ಕೂ ಬಂದಿಲ್ಲ. ಅಷ್ಟು ಸುಲಭವಾಗಿ ಜೀವನದ ಪ್ರಶ್ನೆ ಬಿಡಿಸಲಾಗುತ್ತದೆಯೇ? ಮುಂದೆ ನನ್ನಿಂದ ಯಾವ ನೌಕರಿಯೂ ಮಾಡಲು ಅಸಾಧ್ಯ. ಸಿವಿಲ್ ಇಂಜಿನಿಯರ್ ಆದ ಮೇಲೆ ಕುಳಿತೇ ಕೆಲಸ ಮಾಡುವುದು ಅಲ್ಲ ತಾನೇ? ಈಗೇನೋ ಇನ್ಶೂರೆನ್ಸಿನ ಹಣ ಇದೆ. ಎಕ್ಸಿಡೆಂಟ್‌ನಿಂದಾಗಿ ಸಂಬಳದ ಹಾಗೆ ಬರುತ್ತಾ ಇದೆ. ಅದು ಬಂದರೆ ಎಷ್ಟು ವರ್ಷ ಬಂದೀತು? ಉಳಿದ ದಾರಿ ಎಂದರೆ ಏನೂ ಇಲ್ಲ. ಇಲ್ಲೇ ಬೆಂಗಳೂರಲ್ಲೇ ಇದ್ದುಕೊಂಡು ಏನಾದರೂ ಬಿಸಿನೆಸ್ ಮಾಡಬೇಕು. ಅದಕ್ಕಾಗಿ ಯಾವ ಸಿದ್ಧಾಂತಕ್ಕೂ ಬರಲಿಲ್ಲ ನಾನು".

ರಾಘವನ ಈ ನಿರಾಶಾವಾದ ಸದಾನಂದನಿಗೆ ಹಿಡಿಸಲಿಲ್ಲ. ಆತ ಮುಂದುವರಿಸಿದ. "ನಿರಾಶೆ ಪಡಬೇಡ ರಾಘವ. ಈ ಪೇಟೆಯ ಬಿಸಿನೆಸ್‌ನಲ್ಲಿ ಗಳಿಸುವಷ್ಟೆ ಗಳಿಕೆ, ನಮಗೆ ಹಳ್ಳಿಯಲ್ಲೂ ಗಳಿಸಲು ಸಾಧ್ಯ. ಈಗ ನಾನು ಇಟ್ಟ ಅಡಿಕೆಸಸಿಗಳಲ್ಲಿ ಫಲ ಬಂದರೆ ಸಾಕು. ವರುಷ ಒಂದಕ್ಕೆ ಹೇಗಾದರೂ, ಬರೇ ಅಡಿಕೆಯಿಂದ ಇಪ್ಪತ್ತೈಸಾವಿರ ರೂಪಾಯಿ ಉತ್ಪತ್ತಿ. ಇನ್ನು ಹೆಚ್ಚೆಂದರೆ ಎರಡು ವರ್ಷ. ಆ ಮೇಲೆ ನೋಡು.... ನನಗಾದರೂ ಹಳ್ಳಿಯಾದರೂ ಚೆನ್ನಾಗಿ ಪ್ರಾಕ್ಟೀಸ್ ಇದೆ. ಕೃಷಿ ಮತ್ತು ಈ ವೃತ್ತಿ ಎರಡನ್ನೂ ತೂಗಿಸಿಕೊಂಡು ಹೋಗುವುದು ಎಷ್ಟು ದಿನದ ಮಾತು? ಅದಕ್ಕಾಗಿ ನೀನೇ ಏಕೆ ಬರಬಾರದು ಹೇಳು, ಕೋಳ್ಯೂರಿಗೆ?"

"ಹ್ಲೂ" ಎಂದ ರಾಘವ ಮುಂದುವರಿಸಿದ. "ಅಲ್ಲ ಅಂತ ಹೇಳೋದಿಲ್ಲ ಅಣ್ಣ ನಾನು. ಆದರೆ ಒಂಟಿಕಾಲಿನಲ್ಲಿ ತೋಟದಲ್ಲಿ ಏನು ಮಾಡಬಲ್ಲೆ ನಾನು"?

"ನೀನೇನೂ ಅಲ್ಲಿ ದುಡಿಯಬೇಕಾಗಿಲ್ಲ ರಾಘವ, ನಾನು ಹೇಳೋದು ನೀನು ಅಲ್ಲಿ ವ್ಯವಸ್ಥೆ ನೋಡಿದರೆ ಸಾಕು".

ಎರಡು ನಿಮಿಷ ರಾಘವ ಯೋಚಿಸಿದ. ಅಣ್ಣ ಹೇಳುವುದೇನೂ ತಪ್ಪಲ್ಲ. ಪೇಟೆಯನ್ನು ನೆಚ್ಚಿಕೊಂಡರ ಏನು ಸಿಕ್ಕೀತು. ತನಗೆ ಮುಂದಿನ ಭವಿಷ್ಯದಲ್ಲಿ ಯಾವ ಆಶೆಯೂ ಉಳಿದಿಲ್ಲ. ಮದುವೆ, ಮನೆ, ಮಕ್ಕಳು ಯಾವುದೂ ತನಗೆ ಇಲ್ಲ. ಆಗಲು ಸಾಧ್ಯವೂ ಇಲ್ಲ. ಹೆಣ್ಣು ಕೊಡುವವರು ಸಿಕ್ಕಿದರೂ ಅಪಘಾತದಲ್ಲಿ ತಾನು ತನ್ನ ಪುರುಷತ್ವವನ್ನೇ ಕಳೆದುಕೊಂಡಿರುವಾಗ ಮದುವೆಯಾಗುವುದು ಯಾತಕ್ಕಾಗಿ? ಮದುವೆಯಾಗಿ ಯಾಕೆ ಒಂದು ಹೆಣ್ಣುಜೀವವನ್ನು ದುರಂತಕ್ಕೆಳೆಯಬೇಕು? ಹಾಗಿರುವಾಗ ಪೇಟೆಯಾದರೇನು? ಹಳ್ಳಿಯಾದರೇನು? ಅಂತೂ ಆಯುಷ್ಯ ಇರುವಷ್ಟರ ತನಕ ಬದುಕೋದು.

"ಏನು ರಾಘವ, ನಾನು ಹೇಳಿದ್ದು ಸರಿಕಾಣಲಿಲ್ಲ ನಿನಗೆ? ಎಷ್ಟೆಂದರೂ ಈ ಹಳ್ಳಿಯ ವಾಸ ನಿನಗೆ ಕಷ್ಟವಾದೀತು!"

ಸದಾನಂದ ತಮ್ಮನನ್ನು ಯೋಚನೆಯಿಂದ ಎಚ್ಚರಿಸಿದ. ರಾಘವ ಆದಕ್ಕೆ, "ಹಾಗೇನೂ ಇಲ್ಲಣ್ಣ. ಯೋಚಿಸಿ ನೋಡಿದೆ ಅಷ್ಟೆ. ಯೋಚಿಸಿದಂತೆಯೇ ನಿನ್ನ ಅಭಿಪ್ರಾಯದತ್ತವೇ ನನ್ನ ಮನಸ್ಸೂ, ಮತವೀಯುತ್ತದೆ. ಮತ್ತೇನು ಹೇಳು? ಹೊರಟೇಬಿಡುತ್ತೇನೆ ಕೋಳ್ಳೂರಿಗೆ! ಹ್ಹಾ?" ಎಂದ.

ಸದಾನಂದನಿಗೆ–ರಾಘವನ ನಿರಾಶಾಜನಕ ಜೀವನದಲ್ಲೂ ಇದು ಒಂದು ಮೈಲಿಗಲ್ಲು ಎಂದು ಅನಿಸದಿರಲಿಲ್ಲ. ಆತ ಅವನ ಮೈದಡವಿ ಹೇಳಿದ "ರಾಘವ ನಿನ್ನ ಸಹಕಾರ, ಪ್ರೀತಿ ಇಲ್ಲದಿದ್ದರೆ, ನನ್ನ ಯೋಜನೆಗಳೆಲ್ಲ ಬರೇ ಯೋಜನೆಗಳಲ್ಲೇ ಉಳಿಯುತ್ತಿದ್ದುದು. ಈಗ ನೀನು ಊರಿಗೆ ಬಂದರೆ–ನನಗೆ – ನೀನು ಕುಂಟನಾದರೂ ಮೊದಲಿನ ಹತ್ತರಷ್ಟು ಉತ್ಸಾಹ ಬರುತ್ತದೆ".

ಅಣ್ಣನ ಹೊಗಳಿಕೆಗೆ ರಾಘವ ನಕ್ಕ. ಅಷ್ಟರಲ್ಲಿ ಮಕ್ಕಳು ಏನು ಮಾಡುತ್ತಾರೆ? ಎಂದು ನೋಡಲು ಮೆಟ್ಟಲೇರುತ್ತಾ ಬಂದ ಸರೋಜಮ್ಮನನ್ನು ಕಂಡು ಇಬ್ಬರೂ ಅಲ್ಲಿಗೇ ಮಾತು ನಿಲ್ಲಿಸಿ "ಬಾಮ್ಮಾ" ಎಂದು ಸ್ವಾಗತಿಸಿದರು.

ಸರೋಜಮ್ಮ ಕುಳಿತುಕೊಂಡವಳು ರಾಘವನಿಗೆ, "ಏನಂತೆ ರಾಘವ ನಿನ್ನ ಅಣ್ಣನ ಕಾರುಭಾರು"? ಎಂದು ಪ್ರಶ್ನಿಸಿದಳು, ಕುತೂಹಲದಿಂದ ಅವರ ಮಾತುಕತೆಯ ಬಗ್ಗೆ.

ಅದಕ್ಕೆ ಸದಾನಂದನೆಂದ "ಮತ್ತೇನೂ ಇಲ್ಲಮ್ಮ. ರಾಘವನೂ ಕೋಳ್ಳೂರಿಗೆ ನನ್ನೊಂದಿಗೆ ಬರುತ್ತಾನೆ, ನಾಡಿದು. ಆ ವಿಷಯವಾಗಿ ಮಾತನಾಡುತ್ತಾ ಇದ್ದೇವೆ. ಅಷ್ಟೆ!"

"ಯಾರನ್ನು ಮರುಳು ಮಾಡುವಿಯಪ್ಪಾ ನೀನು? ಆ ಹಳ್ಳಿಗೆ ಕರೆದೊಯ್ಯಲು ಏನಿದೆಯಪ್ಪಾ ಅಲ್ಲಿ, ಈ ಬೆಂಗಳೂರಿಗಿಂತ ಮಿಗಿಲಾದದ್ದು?" ಎಂದಳು ಸರೋಜಮ್ಮ.

ರಾತ್ರಿ ಊಟ ಮಾಡುತ್ತಿದ್ದ ಹಾಗೆ – ಬಡಿಸುತಿದ್ದ ಸರೋಜಮ್ಮ ಗಂಡನಿಗೆ ಹೇಳಿದಳು. "ನಿಮ್ಮ ದೊಡ್ಡ ಮಗ ರಾಘವನನ್ನು ಭಾರೀ ಪುಸಲಾಯಿಸಿದ್ದಾನೆ. ರಾಘವನೂ ಅವನ ಜೊತೆಗೆ ಹೋಗುತ್ತಾನಂತೆ."

"ಹೋದರೇನು ತಪ್ಪು, ಸರೋಜ? ಮತ್ತೆ ಇಲ್ಲಿ ಕುಳಿತಾದರೂ ಆತ ಏನು ಮಾಡಬಲ್ಲ?" ನರ್ಸಪ್ಪಯ್ಯನವರು ನಿರ್ವಿಕಾರ ಚಿತ್ತದಿಂದ ಪಡಿನುಡಿದರು.

"ಹ್ಞೂ ನನಗೆ ಅವನು ಹೋದರೆಷ್ಟು? ಬಿಟ್ಟರೆಷ್ಟು? ಯಾಕೆ ಈ ನೋವಿನ ಕಾಲು ಹಿಡಿದುಕೊಂಡು ಕಷ್ಟಪಡಬೇಕು ಆ ಹಳ್ಳಿಗೆ ಹೋಗಿ ಎಂದರೆ–ನಿಮ್ಮದೂ ಅದಕ್ಕೆ ಒಪ್ಪಿಗೆಯೇ! ನೀವು ತಂದೆಮಕ್ಕಳು ಎಲ್ಲಾ ಒಂದೇ."

ಸರೋಜಮ್ಮ ತುಸು ಸಿಟ್ಟಿನಿಂದ ನುಡಿದಳು– ತನ್ನ ಮಾತನ್ನು ನರ್ಸಪ್ಪಯ್ಯನವರು ಖಂಡಿಸಿದುದರಿಂದ. ಅದಕ್ಕೆ ಅವರು ಮಾತನಾಡುವ ಮೊದಲು ರಾಘವ ಹೇಳಿದ–

"ಪ್ರಾಯಕ್ಕೆ ಬಂದ ಮಕ್ಕಳಲ್ಲಿ ಅಧಿಕಾರ ಚಲಾಯಿಸಬಾರದು ಅಮ್ಮ, ಇನ್ನು ನಾವು ಸಾರಾಸಾರ ವಿಮರ್ಶೆ ಮಾಡಲು ತಿಳಿಯದ ಮಕ್ಕಳಲ್ಲ! ನಾನು ಹೋಗುವುದು ಮಾತ್ರ ಖಂಡಿತ!"

ಅವನ ಮಾತೇ ಕಡೆಯದಾಗಿ ಊಟದ ಕೋಣೆಯಲ್ಲೆಲ್ಲ ಮೌನ ಆವರಿಸಿತು. ಸರೋಜಮ್ಮನಿಗೆ ಮಾತ್ರ ಮಕ್ಕಳೆರಡೂ ತನ್ನ ಕೈಯಿಂದ ಕಡಿವಾಣ ಕಡಿದುಕೊಂಡು ಜಗಿದು ಹೋದವು ಎಂದು ಭಾಸವಾಗದಿರಲಿಲ್ಲ.

ದಿನ ಬಿಟ್ಟು ದಿನದ ಮೇಲೆ, ಅಣ್ಣ ತಮ್ಮ ಇಬ್ಬರೂ ಕೋಳ್ಳೂರಿಗೆ ಹೊರಟುನಿಂತರು. ಅಷ್ಟರಲ್ಲಿ ಸರೋಜಮ್ಮನು ಮೆತ್ತಗಾಗಿದ್ದಳು.

"ಆದಷ್ಟು ಬೇಗ ಬಂದುಬಿಡು ರಾಘವ, ಆಮೇಲೆ ನಾನೂ ಒಮ್ಮೆ ಹೋಗಿ ಬರಬೇಕು ಅಲ್ಲಿಗೆ" ಎಂದು ಅವರನ್ನು ಬೀಳ್ಕೊಡುವಾಗ ಆಡುವಷ್ಟು– ಅವರ ಮನಸ್ಸು ಅವರಿಗೆ ತಿಳಿಯದಂತೆ, ಪರಿವರ್ತನೆ ಆದದ್ದು ನೋಡಿ ಸದಾನಂದನಿಗೆ ನೆಮ್ಮದಿಯಾಗಿತ್ತು.

## –೧೨–

ಅಣ್ಣ ತಮ್ಮ ಇಬ್ಬರೂ ಕೋಳ್ಳೂರಿಗೆ ಬಂದು ಎಂಟು ದಿವಸಗಳಾಗಿವೆ. ಈ ದಿನಗಳಲ್ಲಿ ರಾಘವ ಕೋಳ್ಳೂರಿನಲ್ಲಿ ತಮ್ಮವರದ್ದು ಎಂದು ಇರುವುದನ್ನೆಲ್ಲಾ ನೋಡಿಯಾಗಿದೆ. ಬೆಳಗ್ಗೆ ಆಸ್ಪತ್ರೆಗೆ ಹೊರಡುವ ಮೊದಲು ಸದಾನಂದ ಆತನನ್ನು ಕರೆದುಕೊಂಡು ತೋಟಕ್ಕೆ ಕರೆದೊಯ್ದಿದ್ದಾನೆ. ಮೊದಲು ಆ ಸ್ಥಳ ಹೇಗಿತ್ತು? ತಾನು ಯಾವ ರೀತಿಯ ಶ್ರಮಪಟ್ಟೆ? ಎಂಬುದನ್ನೆಲ್ಲಾ ತಮ್ಮನಿಗೆ ವಿವರಿಸುತ್ತಾನೆ. ಕೃಷಿಯಲ್ಲಿ ಆದ ಸುಧಾರಣೆಗಳು, ಮಾಡಬೇಕಾದ ರೀತಿರಿವಾಜುಗಳನ್ನು ಬಿಡಿಸಿ ಹೇಳುತ್ತಾನೆ, ಮುಂದೆ ಹೀಗೆ ಮಾಡಿದರೆ, ಹೀಗಾಗಬಹುದು ಎಂದು ಊಹಿಸಿ, ತಮ್ಮನಿಗೆ ಹೇಳುತ್ತಾನೆ, ಅವನ ಅಭಿಪ್ರಾಯ ಕೇಳುತ್ತಾನೆ.

ಮಧ್ಯಾಹ್ನದ ಬಿಡುಹೊತ್ತಿನಲ್ಲಿ ಯಂಗ್ ಫಾರ್ಮರ್ಸ್ ಕ್ಲಬ್ಬಿನಿಂದ ಕತೆಪುಸ್ತಕಗಳು ತಂದುದನ್ನು ಓದುವಂತೆ ತಮ್ಮನಿಗೆ ಕೊಡುತ್ತಾನೆ. ಸಂಘ, ಸೊಸೈಟಿಯ ಹುಟ್ಟು ಹೇಗಾಯಿತು? ಅದರಲ್ಲಿ ತನ್ನ ಪಾತ್ರವೇನು? ಅದರ ಬೆಳವಣಿಗೆ ಹೇಗೆ, ಎಂದೆಲ್ಲಾ ತಮ್ಮನಿಗೆ ಹೇಳುತ್ತಾನೆ. ಹೀಗೆ ರಾಘವ ಸದಾನಂದ ಆಡಿಕೊಳ್ಳದ ವಿಷಯವಿಲ್ಲ; ಹೇಳದ ವಸ್ತುವಿಲ್ಲ.

ರಾಘವನಿಗೆ ಅಣ್ಣ ಈ ಹಳ್ಳಿಯಲ್ಲಿ ಬಂದುದು ಅದೂ ಅವನ ಪ್ರಾಕ್ಟೀಸಿನ ಜೊತೆಗೆ–ಇಷ್ಟು ಒಳ್ಳೆಯ ಕೃಷಿಕನಾದುದನ್ನು ನೋಡಿ, ಆಶ್ಚರ್ಯದೊಂದಿಗೆ ಹೆಮ್ಮೆಯೆನಿಸಿತು. ಅಣ್ಣನ ಇಂಜಿನಿಯರಿಂಗ್ ಯೋಜನೆ, ಚುರುಕು ಬುದ್ಧಿಗೆ ಆತ ತಲೆದೂಗಿದ. ತಾನು ಕಳುಹಿಸಿದ ಹಣವನ್ನು ಆತ ಎಷ್ಟು ಅಚ್ಚುಕಟ್ಟಾಗಿ ಸದುಪಯೋಗಪಡಿಸಿಕೊಂಡ ಎಂಬ ಮನವರಿಕೆ ಮಾಡಿಕೊಂಡ. ತಾನು ಇಂತಹ ಚಿನ್ನದಂತಹ ಭೂಮಿ ಇರುವಾಗ ನೌಕರಿಗೆ ಶರಣಾಗಿ, ಆಜೀವಪರ್ಯಂತ ಮೇಲಾಧಿಕಾರಿಗಳಿಗೆ ತಲೆ ಬಗ್ಗಿಸುವುದಕ್ಕಿಂತ ಕೃಷಿಕನಾಗಿ ತನ್ನ ವೈಜ್ಞಾನಿಕ ಬುದ್ಧಿಶಕ್ತಿಯನ್ನು ಇಲ್ಲಿ ಯಾಕೆ ಸದುಪಯೋಗಪಡಿಸಿ ತನ್ನ ಕಾಲಲ್ಲೇ ಇಲ್ಲಿ ನಿಂತು ಅಣ್ಣನಿಗೆ ನೆರವಾಗಬಾರದೇಕೆ? ಎಂದು ತನಗೆ ತಾನೇ ಪ್ರಶ್ನಿಸಿಕೊಳ್ಳುವಷ್ಟು ಆತ ಪ್ರಭಾವಿತನಾದ.

ಈ ನಡುವೆ ಅಣ್ಣನ 'ಸಾಹಸದಲ್ಲಿ ನೆರವಾದ






ಮುಕ್ತಿವಾಹಿನಿ


ಓ ಲಕ್ಷ್ಮೀದೇವಿ ದಯವಿಟ್ಟು ಕರಗಳ ಮೂಲಕ
ನನಗೆ ಹೆಚ್ಚೆಚ್ಚು ಆದಾಯ ಬರುವಂತೆ
ಕೃಪೆ ಮಾಡಮ್ಮಾ
ಚವ್ಹಾಣ


ಸಭೆ-ಸಮ್ಮೇಲನಗಳು
ಪಶ್ಚಿಮ ಬಂಗಾಲ


ಸಮಾಜವಾದ
PRAN

ಕಾರಂತರ ದುರಂತದ ಕರುಣಾಜನಕ ಕತೆ ಅವನಿಗೆ-ಆಗಾಗ ಬರುತ್ತಿದ್ದ ಪಾರ್ವತಿ ಮತ್ತು ಅವಳ ಸಹೋದರರನ್ನು ನೋಡಿದಾಗ ನೆನಪಾಗದಿರಲಿಲ್ಲ. ಸದಾನಂದ, ಕಾರಂತರ ಮರಣದ ವಿವರವನ್ನೆಲ್ಲಾ ಹೇಳಿ ಕಡೆಗೆ ಹೇಳಿದ "ನಾನು ಅಥವಾ ನಾವು ರೋಗಗುಣಮಾಡಿದೆವು ಅಥವಾ ನಮ್ಮಿಂದಾಯಿತು ಎನ್ನುವಂತಾದ್ದು ಸುಳ್ಳು ರಾಘವ. ಇಂದಿನ ಈ ಅಲೋಪತಿ ಸಾಯನ್ಸ್ ಬೆಳೆದಿದೆ ಎಂಬುದು ಖಂಡಿತ. ಆದರೆ ಅದಕ್ಕೂ ನಿಲುಕದ ಅಗೋಚರವಾದ ಕಾಯಿಲೆಗಳೋ, ಅನುಭವಗಳೋ ಎಷ್ಟೋ ಇವೆ. ನಿಜವಾಗಿ ಎಂ. ಬಿ. ಬಿ. ಎಸ್. ಒಂದು ಓದಿದ ಮಾತ್ರಕ್ಕೆ ಆತ ಪರಿಪೂರ್ಣನಾಗಲಾರ. ಕಾಲೇಜಿನಲ್ಲಿ ಕಲಿಯುವುದಕ್ಕಿಂತ ಪ್ರಾಕ್ಟೀಸಿನಲ್ಲಿ ಕಲಿಯುವುದೇ ಹೆಚ್ಚು. ಆದರೆ ಈ ಅನುಭವಗಳು, ಕಲಿಕೆ ಎಲ್ಲ 'ಇದಮಿತ್ಥಂ' ಎನ್ನುವಂತಿಲ್ಲ.ಹಾಗೆ ಇದ್ದರೆ ಕಾರಂತರು ಸಾಯಲೂ ಇದ್ದಿಲ್ಲ."

ರಾಘವನಿಗೂ ಹಾಗೆ ಅನಿಸಿತು. ನಿಜವಾಗಿ ವೈದ್ಯಕೀಯ ಜೀವನದಲ್ಲಿ ಅಣ್ಣನಿಗೆ ತೃಪ್ತಿ ಇಲ್ಲ. ಅದಕ್ಕಿಂತ ಹೆಚ್ಚಿನ ಒಲವು ಈಗ ಅವನಿಗೆ ಕೃಷಿಯಲ್ಲಿ. ಇವು ಎರಡೂ ಹೊಂದಿಸಿಕೊಂಡ ಸವ್ಯಸಾಚಿ ಅವನು. ಅವನೊಂದಿಗೆ ತಾನು ಇರುವುದೇ ಸರಿ. ಅಪ್ಪ ಅಮ್ಮನು ಇಲ್ಲಿಗೆ ಬರುವಂತೆ ಬರೆಯಬೇಕು. ಸುಮ್ಮಸುಮ್ಮನೆ ಬೆಂಗಳೂರನ್ನು ನೆಚ್ಚಿಕೊಳ್ಳುವುದಕ್ಕಿಂತ ಇಲ್ಲೇ ನೆಲಸುವುದೇ ಸರಿ ಎಂಬ ನಿರ್ಧಾರಕ್ಕೆ ಬಂದ ಆತ.

ತಾನು ಮನಸ್ಸಿನಲ್ಲಿ ನಿರ್ಧರಿಸಿಕೊಂಡುದನ್ನು ಆ ದಿನ ಸಂಜೆ ಆಸ್ಪತ್ರೆಯಿಂದ ಮರಳಿದ ಅಣ್ಣನಿಗೆ, ರಾಘವ ಹೇಳಿದ "ನಾನು – ನಿನ್ನದೇ ಅಭಿಪ್ರಾಯಕ್ಕೆ ಬಂದಿದೇನಣ್ಣ. ಇನ್ನು ಬೆಂಗಳೂರಿನ ಆಶೆಯನ್ನೇ ಬಿಟ್ಟು ಬಿಟ್ಟೆ. ಇನ್ನು ನಾನು ಕೋಳ್ಳೂರಿನ ಪ್ರಜೆ. ಇದೇ ನನಗೆ ಬೆಂಗಳೂರು."

"ಗುಡ್" ಎಂದು ತಮ್ಮನ ಕೈ ಕುಲುಕಿದ ಸದಾನಂದ ಹೇಳಿದ "ನಿಜವಾಗಿಯೂ ಒಳ್ಳೆಯ ಮನಸ್ಸು ಮಾಡಿದೆ ತಮ್ಮ. ನೀನು ಇಲ್ಲಿಯೇ ಉಳಿದೆಯಾದರೆ ಅಪ್ಪ, ಅಮ್ಮ ಖಂಡಿತ ಇಲ್ಲಿಗೆ ಬರುತ್ತಾರೆ. ಅಪ್ಪನಿಗೆ ಇಲ್ಲಿಗೆ ಬರಲು ಮನಸ್ಸು ಇಲ್ಲದೆ ಇಲ್ಲ. ಅಮ್ಮ ಮಾತ್ರ ಕುಂಟುನೆವನದಿಂದ ಬೆಂಗಳೂರನ್ನು ಗಟ್ಟಿಮಾಡುತ್ತಿದ್ದಳು. ಈಗ ಬಂದ ತೊಂದರೆ ಅಂದರೆ ಅಮ್ಮನಿಗೆ!"

"ಎಲ್ಲಾ ನಾಲ್ಕು ದಿವಸವಲ್ಲವೇ ಅಣ್ಣ! ಕೋಳ್ಳೂರು ಅಂದರೆ ಹೀಗೆ ಇದ್ದೀತೇ ಎಂಬ ಕಲ್ಪನೆ ಮೊದಲು ನನಗೂ ಇದ್ದಿಲ್ಲ! ಆದರೆ ಇದನ್ನು ನೋಡುವ ಉದ್ದೇಶದಿಂದಲೇ ನಾನು ಹೊರಟಿಲ್ಲ. ನಿನ್ನ ಕರೆಗಾಗಿ ಬಂದೆ. ಬಂದಂದಿನಿಂದ ಮಾತ್ರ – ಈ ನೆಲ, ಈ ಮೊದಲು ಯಾಕೆ ನಾವು ಬರಲಿಲ್ಲ ಎಂದು ಅನಿಸುವಂತೆ ಮಾಡಿತು! ಹಾಗೆ ಅಮ್ಮನಿಗೂ ಕೂಡಾ ಒಂದು ಎರಡು ತಿಂಗಳು ಕಷ್ಟವಾಗಬಹುದು. ಮತ್ತೆಲ್ಲಾ ನೆಮ್ಮದಿಯಾಗುತ್ತೆ."

ಅಣ್ಣ – ತಮ್ಮ ಅದೇ ಮಾತುಕತೆ ಬಹಳ ಹೊತ್ತಿನ ತನಕ ನಡೆಸಿದರು. ರಾಘವ ಮಲಗುವದಕ್ಕಿಂತ ಮುಂಚೆ ಅಪ್ಪನಿಗೆ ಕಾಗದ ಬರೆದು ಹಾಕಿದ.

"ನಾನು ಕೆಲವೇ ದಿನವೆಂದು ಕೋಳ್ಳೂರಿಗೆ ಬಂಧರೂ, ಕೊಳ್ಳೂರು ಈಗ ನನ್ನ ಬಿಡಲೊಲ್ಲದು! ನತದೃಷ್ಟನಾದ ನನಗೆ ಕೋಳ್ಳೂರೂ ಬೆಂಗಳೂರೂ ಒಂದೇ. ಬೆಂಗಳೂರಲ್ಲಾದರೆ ನಾನು ಮಾಡುವಂತಾದ್ದು ಏನೂ ಇಲ್ಲ. ಇಲ್ಲಿ ಮಾಡುವಂತಾದ್ದು ಎಷ್ಟೋ ಇದೆ. ನನ್ನ ಅಣ್ಣ ಈ ನೆಲಕ್ಕೆ ಪರಿಮಳ ಬರಿಸಿದ್ದಾನೆ. ಇಲ್ಲಿಗೆ ಬಂದವರನ್ನು ಅದು ಆಕರ್ಷಿಸುತ್ತದೆ. ಈ ನೆಲ ನಮ್ಮದು ಎಂಬ ಹೆಮ್ಮೆ ಬರುತ್ತದೆ, ಅವನ ಸಾಹಸ ನೋಡಿದಾಗ. ಇದೆಲ್ಲದರಿಂದ ನಾನು ಇಲ್ಲಿಯೇ ನೆಲೆ ನಿಲ್ಲುವ ಆಲೋಚನೆ ಮಾಡಿದ್ದೇನೆ. ನನ್ನದು ಮತ್ತು ಅಣ್ಣನ ಇಬ್ಬರ ಅಭಿಪ್ರಾಯವೂ ನಿಮ್ಮ ವಿಷಯದಲ್ಲಿ ಒಂದೇ! ನೀವಿಬ್ಬರೂ ಇಲ್ಲಿ ಬಂದು ನೆಲಸಬೇಕು. ಹಾಗೆ ಬಂದು ನೆಲಸಿದರೆ ಇಷ್ಟು ಮಾಡಿದ್ದಕ್ಕೆ ಸಾರ್ಥಕ ಎಂದು ಅಣ್ಣನಿಗೂ ನನಗೂ ತೃಪ್ತಿ. ನಮ್ಮ ಈ ಕೋರಿಕೆಯನ್ನು ನೀವು ನೆರವೇರಿಸುವಿರಾಗಿ ನಂಬಿದ್ದೇನೆ" ಎಂದು.

ರಾಘವನ ಈ ಪತ್ರ ನರ್ಸಪ್ಪಯ್ಯನವರು ಈ ಮೊದಲೇ ನಿರೀಕ್ಷಿಸಿದ್ದರೂ ಸರೋಜಮ್ಮನಿಗೆ ಜಂಘಾಬಲವೇ ಉಡುಗಿದಂತಾಯಿತು ಇದರಿಂದ. ಇನ್ನು ಹಳ್ಳಿಗೆ ಹೋಗುವುದು ಅನಿವಾರ್ಯ. ಬೆಂಗಳೂರಲ್ಲಿ ಯಾವುದೇ ಉತ್ಪತ್ತಿ ಇಲ್ಲದೆ ಬರೇ ಪೆನ್ಶನ್‌ಅನ್ನು ಮಾತ್ರ ನಂಬಿ ಕುಳಿತರೆ ದಿನ ಸಾಗುವಂತಿಲ್ಲ. ಮಕ್ಕಳಿಬ್ಬರೂ ಸೇರಿ ಬೆಂಗಳೂರಿನವಳಾದ ತನಗೆ ಬಾಳಕೊನೆಯಲ್ಲಿ ಹಳ್ಳಿಯವಳ ಗತಿ ಒದಗಿಸಿದರಲ್ಲ ಎಂದು ಆಕೆಗೆ ಅನಿಸದಿರಲಿಲ್ಲ.

ಸಂಜೆ ಕಾಫಿ ಕುಡಿದು ಹಜಾರಕ್ಕೆ ಬಂದ ನರ್ಸಪ್ಪಯ್ಯನವರು ಹೆಂಡತಿಯನ್ನು ಕರೆದು ರಾಘವನ ಪತ್ರದ ವಿಚಾರ ಮುಂದಿಟ್ಟರು.

"ರಾಘವನ ಅಭಿಪ್ರಾಯ ತಿಳಿಯಿತಲ್ಲ ಸರೋಜ. ಈಗೇನು ಮಾಡೋಣ ಹೇಳು? ಊರಿನಿಂದ ಅವರು ಕಳುಹಿಸಿದ್ದನ್ನು ತಿಂದುಂಡು ಇಲ್ಲೇ ಬಾಳೋಣವಾ? ಅಥವಾ ಊರಿಗೆ ಹೊರಟುಹೋಗೋಣವಾ?"

ಏನೋಪ್ಪಾ! ನಾನೇನು ಹೇಳಬಲ್ಲೆ ಇದಕ್ಕೆ? ನೀವು – ಅಪ್ಪ ಮಕ್ಕಳು ಒಂದಾಗಿ ನನ್ನ ಚಂದ ನೋಡ ಬೇಕು ಅಂತ ಮಾಡಿದ್ದೀರಿ?" ಸರೋಜಮ್ಮ ಮುನಿಸು ವ್ಯಕ್ತಪಡಿಸಿದಳು.

"ಇದರಲ್ಲಿ ಚಂದ ನೋಡುವಂತಾದ್ದು ಏನಿದೆ ಸರೋಜ? ರಾಘವನನ್ನೇ ನೋಡು – ಕೋಳ್ಳೂರಿಗೆ ಇಷ್ಟರ ತನಕ ಕಾಲಿರಿಸಿದವನಲ್ಲ. ಆತ ಹೇಗೆ ಅಲ್ಲಿಗೆ ಹೊಂದಿಕೊಂಡ! ಹಾಗೆ ಒಮ್ಮೆ ನಾಲ್ಕು ದಿವಸ ಕಷ್ಟ. ಆಮೇಲೆ ಬೆಂಗಳೂರಿಗಿಂತ ಕೋಳ್ಳೂರೇ ವಾಸಿ ಅಂತ ಕಾಣುತ್ತೆ ನಿನಗೆ."

ನರ್ಸಪ್ಪಯ್ಯನವರು ಹೆಂಡತಿಗೆ ಸಮಾಧಾನ ಹೇಳಿದರು. ಸರೋಜಮ್ಮ ಅದಕ್ಕೆ ಏನೂ ಪಡಿನುಡಿ ಯಲಿಲ್ಲ.

ರಾತ್ರಿ ಮಲಗುವುದಕ್ಕೆ ಮುಂಚೆ ಅವರು ಅವ ಳನ್ನು ಕೇಳಿದರು "ಏನಾದರೊಂದು ನಿರ್ಧಾರಕ್ಕೆ ಬರ ಬೇಕು ಸರೋಜ. ನಾನು ನಾಳೆಯ ಪೋಸ್ಟಿಗೆ ಕಾಗದ ಹಾಕಬೇಕು!"

"ಹ್ನೂ ಹಾಕಿ ನನಗೇನಂತೆ?"

"ಹೇಗೆ ಹಾಕಬೇಕೆಂದಾದರೂ ತಿಳಿಸಬಾರದಾ ನಿನಗೆ?"

"ತಿಳಿಸುವುದಾದರೂ ಏನಿದೆ ಹೇಳಿ? ನಿಮ್ಮ ಯೋಜನೆ ಎಲ್ಲಾ ಮೊದಲೇ ಹಾಕಿಕೊಂಡು – ನುಂಗು ತ್ತೀಯಾ? ಉಗುಳುತ್ತೀಯಾ? ಅಂದರೆ ನಾನೇನು ಮಾಡಬಲ್ಲೆ? ನಿಮ್ಮ ಇಷ್ಟ ಇದ್ದ ಹಾಗೆ ಮಾಡಿ.ನನ್ನನ್ನು ಕೇಳಿ ನೀವು ಮಾಡಿದ್ದಾದರೂ ಏನು ಇದೆ ಈ ಮೊದಲು? ಈಗ ಮಾತ್ರ ಯಾಕೆ ಅಭಿಪ್ರಾಯ?"

"ಹೇಗಾದರೂ ನಿನ್ನಲ್ಲಿ ಮಾತು ಬೆಳೆಸುವುದು ಕಷ್ಟ. ನಾನು ಸರಿ ಅಂದರೂ ತಪ್ಪೇ. ತಪ್ಪು ಅಂದರೆ ಸರಿ ನಿನಗೆ. ಅಂತೂ – ನಾನು ನಿನ್ನನ್ನು ವಂಚಿಸಲೇ ಮಾಡುತ್ತಿದ್ದೇನೆಂದೂ ನಿನ್ನ ಅಭಿಪ್ರಾಯ. ನಿನ್ನನ್ನು ವಂಚಿಸುವುದಾದರೂ ನಾನಾ? ಯಾಕೆ ಅಂತ ಬೇಕಲ್ಲ?"

"ನಾನು ನಿಮ್ಮಲ್ಲಿ ಚರ್ಚೆಗೆ ಬಂದಿಲ್ಲ. ನಿಮ್ಮ ಇಷ್ಟ ಇದ್ದ ಹಾಗೆ ಮಾಡಿ".

ಸರೋಜಮ್ಮನ ಮಾತಿಗೆ ಮತ್ತೆ ನರ್ಸಪ್ಪಯ್ಯ ನವರು ಏನೂ ಆಡಲಿಲ್ಲ. ಮೌನವಾಗಿ ಮಲಗಿಕೊಂಡರು. ರಾತ್ರಿ ಬಹಳ ಹೊತ್ತಿನ ವರೆಗೆ ಯೋಚಿಸಿ ಬೆಳಗ್ಗೆ ಮಗನಿಗೆ ಪತ್ರ ಬರೆದರು. ಕಾಗದವನ್ನು ಪೋಸ್ಟಿಗೆ ಹಾಕುವ ಮುಂಚೆ ಹೆಂಡತಿಯ ಹತ್ತಿರ ಹೇಳಿದರು.

"ನೋಡು ಸರೋಜ, ಕಡೆಗೂ ನೀನು ನಿನ್ನ ಅಭಿಪ್ರಾಯ ಹೇಳಲಿಲ್ಲ. ನನಗಂತೂ ಇನ್ನು ಸಾಯುವ ಕಾಲಕ್ಕಾಗುವ ಮಕ್ಕಳನ್ನು ಬಿಟ್ಟಿರುವು ದಕ್ಕಾಗಲಿಲ್ಲ. ನಾನು ಕೋಳ್ಳೂರಿಗೆ ಹೋಗುವು ದೆಂದು ನಿಶ್ಚಯಿಸಿದ್ದೇನೆ. ಹೀಗೇ ಸದಾನಂದನಿಗೂ ಬರೆದಿದ್ದೇನೆ. ನಿನ್ನ ಮಾತು ಕೇಳಿಕೊಂಡು ಇರುವ ಇಬ್ಬರು ಮಕ್ಕಳನ್ನು ದೂರ ಮಾಡಿಕೊಂಡರೆ ಮತ್ತೇನು ಬಂತು ನಮಗೆ? ಹೇಳು? ಮತ್ತೆ ನಿನ್ನಿಷ್ಟ" ಎಂದು ಕಟ್ಟುನಿಟ್ಟಾಗಿ ಹೇಳಿದರು.

"ಯಾವಾಗ ಬರ್ತೇವೆ ಅಂತ ಬರೆದಿದ್ದೀರಿ?" ಎಂದಳು ಸರೋಜಮ್ಮ, ಕಡೆಗೂ ಮುಖ ಸಿಂಡರಿ ಸುತ್ತಾ.

"ಇದೇ ತಿಂಗಳ ಇಪ್ಪತ್ತನೇ ತಾರೀಖಿಗೆ ಅಂತ ಬರೆದಿದ್ದೇನೆ. ಇನ್ನು ಹದಿನೈದು ದಿನ ಇದೆ. ಅಷ್ಟರಲ್ಲಿ ಯಾರಾದರೂ ಸಿಗುತ್ತಾರೆ. ಈ ಮನೆ ಬಾಡಿಗೆಗೆ ತೆಗೆದು ಕೊಳ್ಳಲು. ಮತ್ತೇನು ಬಸ್ಸು ಹತ್ತಿ ಹೊರಟರಾಯಿತು"

ನರ್ಸಪ್ಪಯ್ಯನವರ ಈ ಮಾತು ಸತ್ಯವಾಯಿತು. ಏಪ್ರಿಲ್ ಇಪ್ಪತ್ತರಂದು ಅವರು ಬೆಂಗಳೂರನ್ನು ಬಿಟ್ಟು ಕೋಳ್ಳೂರಿಗೆ ಮುಖ ಹಾಕಿದರು.

× × × ×

ಕೋಳ್ಳೂರಿಗೆ ನರ್ಸಪ್ಪಯ್ಯ ದಂಪತಿಗಳು ಬಂದು ತಿಂಗಳಾಗುತ್ತಾ ಬಂತು. ನರ್ಸಪ್ಪಯ್ಯನವರಿಗೆ ಕೋ ಳ್ಳೂರನ್ನು ಹೊಂದಿಕೊಳ್ಳುವುದಕ್ಕೆ ಏನೂ ತೊಡಕಾಗ ಲಿಲ್ಲ. ಸರೋಜಮ್ಮನಿಗೆ ಮಾತ್ರ ತುಂಬಾ ತ್ರಾಸ ವಾಯಿತು. ಮನೆಯಲ್ಲಿ ಎಲೆಕ್ಟ್ರಿಸಿಟಿ ಇಲ್ಲ. ನಳ್ಳಿನೀರು ಇಲ್ಲ. ಹರಟೆ ಹೊಡೆಯಲು ಬರುವ ನೆರೆಕರೆಯ ಹೆಂಗ ಸರಿಲ್ಲ. ಬೇಕಾದಂತೆ ತೆಗೆದುಕೊಳ್ಳಲು ತರಕಾರಿ ಇಲ್ಲ. ಇದೆಲ್ಲಕ್ಕಿಂತಲೂ ಮಿಗಿಲಾಗಿ ಅವರ ಸ್ಥಾನಕ್ಕೆ ಸರಿಯಾಗಿ ಹೊಂದಿಕೊಳ್ಳುವವರಿಲ್ಲ. ಕೆಲಸದಾಳುಗಳೋ ಅತಿ ವಿನಯದವರು. ಪ್ರತಿಯೊಂದು ಕೆಲಸಕ್ಕೂ ಸಿದ್ಧರು. ಏನಾದರೂ ಪೇಟೆಯಷ್ಟು ಸುಖಜೀವನ ಹಳ್ಳಿಯ ದಲ್ಲ ಎಂಬ ಅವರ ಮನೋಭೂಮಿಕೆ ಇನ್ನೂ ಬದ ಲಾವಣೆಗೊಂಡಿಲ್ಲ.

ಆದರೆ ನರ್ಸಪ್ಪಯ್ಯನವರಿಗೆ ಈ ಚಿಂತೆಗಳಾವುದೂ ಬಾಧಿಸುವುದಿಲ್ಲ. ತನ್ನ ಮಗ ಮಾಡಿದ ಯೋಜನೆಗಳು ಸಾಹಸಗಳು ಅವರು ನೋಡಿ ತುಂಬಾ ಮೆಚ್ಚಿದ್ದಾರೆ. ತಾನು ಇಂತಹ ಮಗನನ್ನು ದೂರವಿರಿಸಿಕೊಂಡದ್ದು ತಪ್ಪು, ಈಗಲಾದರೂ ಹಳ್ಳಿಗೆ ಬಂದು ಅವನೊಂದಿಗೆ ನೆಲಸುವಂತಾದ್ದು, ತಮ್ಮ ಹಿರಿಯರ ನೆಲವನ್ನು ಇಷ್ಟು ಊರ್ಜಿತಗೊಳಿಸಿದ್ದು ಅವರ ಮನಸ್ಸಿಗೆ ತುಂಬಾ ನಾಟಿದೆ. ಅವರು ಮೆಚ್ಚಿದ್ದಾರೆ– ಮಗನನ್ನು ಮತ್ತು ನೆಲವನ್ನು.

ಸದಾನಂದನಿಗೂ ತನ್ನ ತಾಯಿ ಬಂದುದು ಹಿಡಿಸದಷ್ಟು ಆನಂದವಾಗಿದೆ. ತಾನು ಮಾಡಿದ ಕೆಲಸ ಸಾರ್ಥಕವಾಯ್ತು. ಕಾರಂತರು ಈಗ ಇರಬೇಕಿತ್ತು. ಇದ್ದರೆ ಅವರಿಗೆ ಎಷ್ಟು ಆನಂದವಾಗುತ್ತಿತ್ತೋ ಏನೋ. ಸದಾ ಬಂದು ಇಲ್ಲೇ ಇರುತ್ತಿದ್ದರೋ ಏನೋ?

h a p p y

d e e p a v a l i



“ಈ ದೀಪಾವಳಿ ಕಡಿಮೆ ಖರ್ಚಿನಲ್ಲಾಗಲಿ ಅಂತ ಒಂದೇ ಹಣತೆ ಹಚ್ಚಿದೀನಿ... ಶೆಟ್ರೆ...”




“ಆಂ, ಅದರ ಚಾಲ ನನ್ನ ಗೋಡೌನಿಗೆ ಬಂದಿದೆಯೆ?”

ಎಂದು ಅವನು ಆಗಾಗ ಕಾರಂತರನ್ನು ನೆನಸಿಕೊಳ್ಳದೆ ಇರುತ್ತಿರಲಿಲ್ಲ. ಆದರೆ – ಈಗ ಅವನಿಗೆ ಕೃಷಿಯ, ಮನೆಯ ಜವಾಬ್ದಾರಿ ಕಡಿಮೆಯಾಗಿದೆ.ಮೊದಲು ತಾನೇ ಎಲ್ಲದರ ಜವಾಬ್ದಾರಿ ಹೊತ್ತು, ದುಡಿಯಬೇಕಾಗಿದ್ದರೆ ಈಗ ಅವನ ಅರ್ಧ ಜವಾಬ್ದಾರಿ ಕಡಿಮೆಯಾಗಿದೆ. ತಾನು ಈಗ ತನ್ನ ಡಿಸ್ಪೆನ್ಸರಿಯ ಬಗ್ಗೆ ವಿಶೇಷ ಮುತು ವರ್ಜಿ ವಹಿಸಬಹುದು. ಬಹಳ ದಿನಗಳ ತನ್ನ ಬಯಕೆಯನ್ನು ನೆರವೇರಿಸಬಹುದು ಎಂದು ಮುಂದೆ ಸಫಲವಾಗಬಹುದಾದ ಯೋಜನೆಗಳನ್ನು ಹಾಕಿಕೊಂಡ.

ಮಿಾಯಪದವಿನ ಸದಾನಂದನ ಪ್ರ್ಯಾಕ್ಟೀಸ್ ಚೆನ್ನಾಗಿತ್ತು. ಆದರೆ ಸಿರಿಯಸ್ ಕೇಸುಗಳನ್ನು ಚಿಕಿತ್ಸಿಸುವುದು ತುಂಬಾ ಕಷ್ಟಕರವಾಗಿತ್ತು. ದಿನಾಲೂ ಇಂಜೆಕ್ಷನ್ ಚುಚ್ಚುವಂತಿದ್ದರೆ, ಅಥವಾ ಕಟ್ಟುನಿಟ್ಟಾದ ಉಪಚಾರ ಬೇಕಿದ್ದರೆ, ಪ್ರಸೂತಿ ನಡೆಸಬೇಕಾದರೆ ಅಲ್ಲಿ ಒಂದು ನರ್ಸಿಂಗ್ ಹೋಮಿನ ಆವಶ್ಯಕತೆ ಇತ್ತು. ನರ್ಸಿಂಗ್ ಹೋಂ ತೆರೆದರೆ ಅದರಿಂದ ತನಗೇನೂ ನಷ್ಟ ಸಂಭವಿಸಲಾರದು. ಜನರಿಗೆ ಇನ್ನೂ ಹೆಚ್ಚಿನ ಪ್ರಯೋಜನವಾದೀತೆಂದು ಅವನು ಮೊದಲೇ ಮನಗಂಡಿದ್ದ. ಆದರೆ ನರ್ಸಿಂಗ್ ಹೋಂ ತೆರೆದರೆ ತಾನು ಹಗಲು ರಾತ್ರಿಯೂ ಅಲ್ಲಿ ದುಡಿಯಬೇಕಾಗುವುದು–ತಾನು ಒಬ್ಬಂಟಿಯಾಗಿರುವಾಗ, ಇದು ಅಸಾಧ್ಯವೆಂದು ಆತ ಆ ಆಲೋಚನೆಯನ್ನೇ ಕೈಬಿಟ್ಟಿದ್ದ. ಈಗಲಾದರೊ, ತಂದೆ –ತಮ್ಮ ಮನೆಯ ಮಟ್ಟಿಗೆ ಜವಾಬ್ದಾರಿ ಹೊರುತ್ತಾರೆ. ತಾನೇನು ಹೋಗುತ್ತ ಬರುತ್ತಲಿದ್ದರೆ ಸಾಕು. ಮೇಲ್ತನಿಖೆಗೆ ಬೇಡವಷ್ಟೆ ಎಂದು ಆತ ನರ್ಸಿಂಗ್ ಹೋಂ ತೆರೆಯುವ ಸಿದ್ಧತೆಗೆ ಮನಮಾಡಿದ.

ಮನೆಯ ಯಜಮಾನನಾಗಿ ತಂದೆ ಇರುವಾಗ, ತಾನು ಒಂದು ಮಾತನ್ನು ಕೇಳದೆ ಇದ್ದರೆ ಅದು ತಪ್ಪಾದೀತು ಎಂದು, ಒಂದು ರಾತ್ರೆ ಊಟದ ಮೇಲೆ ಆತ, ತಂದೆಯ ಎದುರು ತನ್ನ ಯೋಜನೆಯನ್ನು ಮಂಡಿಸಿದ-

“ನೋಡಿ ಅಪ್ಪಯ್ಯ, ಮಿಾಯಪದವಿನಲ್ಲಿ ಒಂದು ನರ್ಸಿಂಗ್ ಹೋಂ ತೆರೆಯಬೇಕೆಂದು ನಾನು ಆಲೋಚನೆ ಮಾಡಿದ್ದೇನೆ. ಯಾಕೆಂದರೆ ಒಂದು ಹಾಸ್ಪಿಟಲ್ ಟ್ರೀಟ್‌ಮೆಂಟಿಗಾಗಿ ಮಂಜೇಶ್ವರಕ್ಕೋ, ಮಂಗಳೂರಿಗೊ ಇಲ್ಲಿಯವರು ಹೋಗಬೇಕಷ್ಟೆ. ನಾವು ಈ ಕೊರತೆಯನ್ನು ನೀಗಿಸಿದರೆ, ಜನರಿಗೂ ಉಪಕಾರ, ನನ್ನ ಪ್ರ್ಯಾಕ್ಟೀಸು ಇನ್ನೂ ಉತ್ತಮವಾಗುತ್ತದೆ.”

ನರ್ಸಪ್ಪಯ್ಯನವರು ಅದಕ್ಕೇನೂ ಎದುರಾಡಲಿಲ್ಲ. “ಎಲ್ಲಾ ನೀನು ಹೇಳಿದ ಹಾಗೆ ಸದಾನಂದ. ನಮ್ಮ ಭೂಮಿಯನ್ನು ಇಷ್ಟು ಒಳ್ಳೆಯ ಮಟ್ಟಕ್ಕೆ ತಂದವನಿಗೆ, ಆಲೋಚನೆ ನಾನು ಹೇಳಬೇಕಾ? ಅಗತ್ಯವಾಗಿ ನರ್ಸಿಂಗ್ ಹೋಂ ತೆರೆ. ನನ್ನದೇನೂ ಅಭ್ಯಂತರವಿಲ್ಲ. ಆದರೆ ನಿನ್ನ ದೇಹದ ಆರೋಗ್ಯದತ್ತ ನೋಡಿಕೊ. ಹಗಲು ರಾತ್ರಿ ದುಡಿದು ದುಡಿದು ಮತ್ತೆ ಕಾಯಿಲೆಗೆ ಕಾರಣವಾದೀತು” ಎಂಬ ಎಚ್ಚರಿಕೆಯನ್ನು ಅವರು ಕೊಟ್ಟಿದ್ದರು.

ಸದಾನಂದ ತಂದೆಯ ಎಚ್ಚರಿಕೆಯ ಮಾತನ್ನು ತೇಲಿಸಿಬಿಟ್ಟ. ಆದರೆ ಸರೋಜಮ್ಮ ಮಾತ್ರ ಬಿಡಲಿಲ್ಲ. ಅವಳು ಮರುದಿನ ಸದಾನಂದ ಆಸ್ಪತ್ರೆಗೆ ಹೋದ ಮೇಲೆ ಗಂಡನಿಗೆ ಹೇಳಿದಳು “ನೋಡೀಂದ್ರೆ, ಸದಾನಂದನಿಗೆ ಈಗ ಎಷ್ಟು ವರ್ಷ ಅಂತೀರಿ? ಮೂವ್ವತ್ತೆರಡೋ ಮೂರೊ ಅಂತ ಕಾಣುತ್ತೆ. ಇನ್ನೂ ಇವನು ಮದುವೆ ಆಗದೆ ಇರೋದು ಅಂದ್ರೆ ಏನು? ಈ ದಿನ ಅವನಿಗೆ ಹೇಳಿ – 'ನರ್ಸಿಂಗ್ ಹೊಂ ತೆರೆಯುವುದಕ್ಕೆ ಏನೂ ಅಡ್ಡಿಯಿಲ್ಲ. ಆದರೆ ಮೊದಲು ಮದುವೆ ಮಾಡಿಕೊ– ಆಮೇಲೆ ಉಳಿದದ್ದು ಎಲ್ಲ' ಇಲ್ಲವಾದರೆ ಕೆಲಸ ಕೆಲಸ ಅಂತ ಅವನು ಹೀಗೇ ಉಳಿದರೆ, ಹೇಗೆ ಅಂತ”? ಎಂದು ಗಂಡನಿಗೆ ಸವಾಲು ಹಾಕಿದಳು.

“ನಾನು ಹೇಳೋದಾದರೂ ಯಾವ ಮುಖದಲ್ಲಿ ಸರೋಜ? ಅವನು ಕೋಳ್ಯೂರಿಗೆ ಬಂದದ್ದೆ ಯಾಕೆ? ಈ ಮದುವೆಯ ರಂಪಾಟದಲ್ಲಿ ಕಾನೆ? ತಾನು ಮದುವೆಯಾಗೋದಾದರೆ ಆ ನರ್ಸನ್ನೇ ಅಂತ ಆತ ಪಟ್ಟುಹಿಡಿದದ್ದು ನಿನಗೆ ಗೊತ್ತಿಲ್ಲವಾ? ಈಗಲೂ ಅವನ ಮನಸ್ಸು ಬದಲಾಯಿಸಿದೆ ಅಂತ ತಿಳಕೊಂಡ್ಯಾ? ಹಾಗಿರುವಾಗ ಅವನ ಮದುವೆಯ ಪ್ರಸ್ತಾಪ ಹೇಗೆ ಎತ್ತಲಿ ಹೇಳು?” ನರ್ಸಪ್ಪಯ್ಯನವರು ವಸ್ತುಸ್ಥಿತಿಯನ್ನು ಬಿಡಿಸಿ, ಸಮಸ್ಯೆ ಬಿಡಿಸಲು ಹೆಂಡತಿಯ ಎದುರು ಇರಿಸಿದರು.

ಈ ಪ್ರಶ್ನೆಗೆ ಉತ್ತರ ಸರೋಜಮ್ಮನಲ್ಲಿ ಇರಲಿಲ್ಲ. ಆದರೂ ಅವಳು ಗಂಡನಿಗೆ ಹೇಳಿದಳು –

“ಹೌದು, ಇನ್ನೂ ಆ ಹುಡುಗಿಯನ್ನು ಇವನು ಮರೆಯಲಿಲ್ಲಾಂತ ಇಟ್ಕೊಳ್ಳಿ. ಆದರೆ ಅವಳು ಇವನನ್ನು ಮರೆಯದಿರಬೇಕಲ್ಲ! ಗಂಡ ಸತ್ತವಳು! ನರ್ಸ್ ಎಂದಿರುವಾಗ, ಅವಳು ಯಾರಿಗೆ ಗಂಟುಬಿದ್ದಿದ್ದಾಳೊ ಏನೊ? ನಿಮಗೂ ಭ್ರಾಂತು. ಇಲ್ಲವಾದರೆ ಒಂದು ಮಾತು ಕೇಳೋದಕ್ಕೇನು ಹೇಳಿ?”

“ಅದೆಲ್ಲ ಅಷ್ಟು ಸುಲಭದಲ್ಲಿ ಇಲ್ಲ ಸರೋಜ. ಸದಾನಂದ ಅವಳು ಅಂತವಳಾದರೆ ಅವಳ ದೋಸ್ತಿಯೇ ಹಿಡಿಯುತ್ತಿರಲಿಲ್ಲ. ಏನೋ ನಮ್ಮ ದೆಸೆ ಹಾಳು ಅನ್ನು! ಇಲ್ಲವಾದರೆ ಅವನಿಗೆ ಅದೇ ಹುಡುಗಿಯಲ್ಲಿ ಮನಸ್ಸಾಗಬೇಕಾ ಹೇಳು? ಅವನ ತಲೆ, ಬುದ್ಧಿವಂತಿಕೆ ಯಾರಿಗೂ ಇಲ್ಲವೆನ್ನುವುದಕ್ಕೆ ನಮ್ಮ ಭೂಮಿಯನ್ನು ಹೀಗೆ ಮಾಡಿದ್ದು ಸಾಲದೇ ಉದಾಹರಣೆ? ಹಾಗಿರುವಾಗ ಅದೇ ಹುಡುಗಿ ಆಗಬೇಕು ಎನ್ನುವಾಗ ನಾವು ಇನ್ನು ಅಡ್ಡ ಬಂದರೆ ಹೇಗೆ? ”

“ಹಾಗಾದರೆ ಏನು, ಮದುವೆ ಮಾಡಿಕೊಳ್ಳೋ ಅನ್ನೋದಾ?”

“ಹ್ನೂ.”

“ಒಳ್ಳೇ ಕತೆ ನಿಮ್ಮದು? ಗಂಡ ಸತ್ತವಳಿಗೆ ಮದುವೆ ಎಂತಾದ್ದು ತಿರುಗಿ? ಯಾರಾದ್ರೂ ಕೇಳಿದರೆ ಏನು ಹೇಳೋದು ಹೇಳಿ?”

“ಅಲ್ಲ – ಗಂಡ ಸತ್ತವಳು ಅಂತ ಯಾಕೆ ಹೇಳಬೇಕು ಹೇಳು? ನೋಡುವವರಿಗೆಲ್ಲ – ಅವಳು ಗಂಡ ಸತ್ತವಳು ಅನ್ನೋದಕ್ಕೆ ಏನಿದೆ ಗುರುತು? ನರ್ಸ್ ಅಂತ ನಮ್ಮ ಯೋಗ್ಯತೆಗೆ ಕಡಿಮೆ ಅನ್ನಬಹುದು ಕೆಲವರು. ಆದರೂ ಯೋಗ್ಯತೆ ಇದ್ದರೂ ಮಾಡುವುದೇನು ಹೇಳು? ರಾಘವನಿಗೆ ಯಾವುದರಲ್ಲಿ ಕೊರತೆ ಇತ್ತು ಮೊದಲು? ವಿದ್ಯೆಯಲ್ಲೊ? ಬುದ್ಧಿಯಲ್ಲೋ? ತಿಳುವಳಿಕೆಯಲ್ಲೋ? ಎಲ್ಲದರಲ್ಲೂ ಆತ ಕುಶಲ. ಆದರೆ ದೈವ ಏನು ಬಗೆಯಿತು ನೋಡು. ಪಾಪ, ಕೆಲಸ ಕಳೆದುಕೊಂಡ, ಕಾಲು ಕಳೆದುಕೊಂಡ. ಸಾಯಲಿ, ಕುಳಿತಾದರೂ ತಿನ್ನಬಹುದು ಎಂದರೆ ಹೆಣ್ಣು ಕೊಡುವವರು ಇದ್ದರೂ– ಮದುವೆ ಆಗುವ ಯೋಗ್ಯತೆಯೇ ಇಲ್ಲವಾಗಿದೆ ಅವನಿಗೆ! ಹಾಗಿರುವಾಗ ಸದಾನಂದನಿಗೂ ನಾವು ಅಡ್ಡ ಬಂದರೆ. ಮುಂದೆ ಈ ಆಸ್ತಿಪಾಸ್ತಿ ಯಾರಿಗೆ ಹೇಳು? ಅಥವಾ ಅವನೇ ಹೀಗೆ ಇದ್ದಾನು ಅಂತ ಹೇಗೆ ಹೇಳೋದು! ಇದೆಲ್ಲಾ ನೋಡಿದರೆ ನಾವು ಅವನಿಗೆ ಒಪ್ಪಿಗೆ ಕೊಡೋದೇ ವಾಸಿ. ನರ್ಸೋ ಗಿರ್ಸೋ ಅವನ ಇಷ್ಟವಿದ್ದ ರೀತಿ ಮಾಡಿಕೊಳ್ಳಲಿ. ಹ್ನೂ ಎಂದರಾಯಿತು. ನಮಗೇನಾಗಬೇಕಾಗಿದೆ ಇನ್ನು?”

ನರ್ಸಪ್ಪಯ್ಯನವರ ವಾದ ಸರೋಜಮ್ಮನಿಗೆ ಅಲ್ಲ ಎಂದು ಅನಿಸದಿರಲಿಲ್ಲ. ನಿಸ್ಸಂತತಿಯಾಗಿ ತಮ್ಮ ಕುಟುಂಬ ಅಳಿಯುವುದಕ್ಕಿಂತ, ಸದಾನಂದ ಯಾರನ್ನು

ಕ್ಕೆದುವೆ ಮಾಡಿಕೊಂಡರೇನು ತನಗೆ? ತಾನೇಕೆ ಹಟ ಹಿಡಿದು ಅವನ ಬಾಳನ್ನು ಹಾಳುಗೆಡಹಬೇಕು? ಎಂದು ಆಕೆಯೂ ಯೋಚಿಸಿದಳು. ಅಷ್ಟರಲ್ಲಿ ನರ್ಸಪ್ಪಯ್ಯನವರೇ ಮಾತು ಮುಂದುವರಿಸಿದರು. "ಏನು ಸರೋಜ ಏನು ಇತ್ಯರ್ಥಕ್ಕೆ ಬಂದೆ ಹೇಳು" ಎಂದು.

"ನನಗೇನು ಹೇಳಿ? ಆದರೆ ರಾಘವನನು ಕರೆದು ಅವನೇನಾದರೂ ಇದನ್ನು ತಪ್ಪಿಸಲು ಸಾಧ್ಯವಾ ಅಂತ ಕೇಳಿನೋಡಿ. ಅವನಿಂದಲೂ ಆಗದಿದ್ದರೆ ಬೇಡ, ಕಡೆಗೆ ಒಪ್ಪಿಗೆಯೇ ಕೊಡೋಣ" ಎಂದಳು ಅನಿವಾರ್ಯವಾಗಿ.

ಸಂಜೆಯ ಹೊತ್ತು ನರ್ಸಪ್ಪಯ್ಯನವರು ರಾಘವನನ್ನು ಕರೆದರು. "ನಿನ್ನ ಅಣ್ಣನ ಪ್ರೇಮದ ಪ್ರಕರಣ ಎಲ್ಲಿಯ ತನಕ ಬಂದಿದೆ ಗೊತ್ತಿದೆಯಾ ರಾಘವ?"

"ಏನೋ, ನನಗೇನು ಗೊತ್ತು ಅಪ್ಪಯ್ಯ!" ಎಂದು ಮಾತನ್ನು ತೇಲಿಸಿದ.

"ಹೌದು – ಅಣ್ಣ ತಮ್ಮನಿಗೆ ಒಂದೇ ಬೆನ್ನು! ಗೊತ್ತಿಲ್ಲ ಅಂದರೆ ಏನೋ ಅದು?" ಎಂದಳು ಸರೋಜಮ್ಮ ಅದಕ್ಕೆ.

"ಹಾಗಲ್ಲಮ್ಮ – ಅವನ ಪ್ರೇಮದ ಪ್ರಕರಣ ಎಲ್ಲಿಗೆ ಬಂತು ಅಂದರೆ ಏನು ಹೇಳಲಿ ನಾನು? ಇವಳಿಂದ ಅವನಿಗೆ, ಅವಳಿಂದ ಇವನಿಗೆ ಆಗಾಗ ಕಾಗದ ಬರುತ್ತಾ ಇರುತ್ತೆ. ಮತ್ತೇನು, ಇಂದಲ್ಲ ನಾಳೆಯಾದರೂ ಅವಳನ್ನೇ ತಾನು ಮದುವೆಯಾಗೋದು ಎಂದು ನಿಶ್ಚಯ ಮಾಡಿದ್ದಾನೆ ಆತ! ಮತ್ತೇನು ನಿಮ್ಮಿಂದಲೇ ಅವನ ಮದುವೆ ಇಷ್ಟು ದೂರ ಹೋಯಿತು. ಇನ್ನೂ ನೀವು ಹೀಗೆ ಕುಳಿತರೆ ಆಯಿತು, ಅವನಿಗೆ ಮದುವೆ ಆದ ಹಾಗೆಯೇ!" ಎಂದ ರಾಘವ ನಗುತ್ತಾ.

"ಹೇಗೆ ಸರೋಜ ನಾನು ಹೇಳಿದ್ದು? ಅವಳು ಮರೆತಿರಬಹುದು, ಯಾರನ್ನೋ ನೆಚ್ಚಿರಬಹುದು ಈಗ ಅಂದೆಯಲ್ಲಾ, ಈಗ ಖಂಡಿತಾ ನಿನಗೆ? ಅವಳ ಪತ್ರ ಇನ್ನೂ ಬರುತ್ತದೆಯಂತಲ್ಲ!" ಎಂದು ನರ್ಸಪ್ಪಯ್ಯನವರು ಹೆಂಡತಿಯ ಮಾತನ್ನು ಖಂಡಿಸಿದರು.

"ಏನೋ ಈಗಿನ ಕಾಲದ ಹುಡುಗ ಹುಡುಗಿಯರ ಲವ್ ಅಂದರೆ ಹೀಗೆ ಇದೆಯಂತ ನನಗೇನು ಗೊತ್ತು ಹೇಳಿ?" ಎಂದು ಸರೋಜಮ್ಮ ಸೋಲೊಪ್ಪಿಕೊಂಡರು.

"ಅದೆಲ್ಲಾ ಇರಲಿ ಬಿಡಿ. ಈಗ ಏನಾದರೂ ಒಂದು ಅಭಿಪ್ರಾಯಕ್ಕೆ ಬರಬೇಡವಾ ಅಮ್ಮ? ನೀವು ಅವನಿಗೆ ಅವಳನ್ನು ಮದುವೆಯಾಗಲು ಯಾಕೆ ಒಪ್ಪಿಗೆ ಕೊಡಬಾರದು ಹೇಳಿ?" ಎಂದು ಪ್ರಶ್ನಿಸಿದ ರಾಘವ.

"ನಾನೂ ಹೇಳೋದು ಅದನ್ನೆ! ಯಾಕಾಗಬಾರದು ಅಂತ?" ಎಂದು ಧ್ವನಿಗೂಡಿಸಿದರು ನರ್ಸಪ್ಪಯ್ಯನವರು.

"ನಿಮಗೆಲ್ಲಾ ಆಗಬಹುದಾದರೆ ನನಗೇನು? ನನ್ನ ಮಾತಿಗೆ ಬೆಲೆ ಕೊಡುವವರು ಯಾರಿದ್ದಾರೆ ಈಗ? ಬೆಂಗಳೂರು ಬಿಟ್ಟು ಇಲ್ಲಿಗೆ ಬಂದಾಯಿತು. ಮಗನಿಗೆ ಮುಂಡೆಮದುವೆ ಆಗುವುದನ್ನು ನೋಡಿದರೆ ಸಾಕು–ಮತ್ತೇನೂ ಬೇಡ ಈ ಜನ್ಮಕ್ಕೆ!"

ರಾಘವನಿಗೆ ತಾಯಿಯ ಈ ಮಾತು ಸಹಿಸಲಾಗಲಿಲ್ಲ. ಆತ ಸಿಡಿದು ಹೇಳಿದ "ಇನ್ನು ಮುಂದೆ ಆ ಮಾತು ನೀವು ಹೇಳಬಾರದಮ್ಮ! ನೀವು ಅಣ್ಣನಿಗೆ ಒಪ್ಪಿಗೆ ಕೊಡಲೇಬೇಕು".

ಸರೋಜಮ್ಮ ಮರುಮಾತಾಡಲಿಲ್ಲ. ರಾತ್ರಿ ಊಟ ತೀರಿಸಿ ಹಾಲು ಕುಡಿದು ಉಪ್ಪರಿಗೆ ಏರುವುದರ ಮೊದಲು ಅಡಿಗೆಕೋಣೆಗೆ ಹೋದ ರಾಘವ ಪಿಸು ಧ್ವನಿಯಲ್ಲಿ ಅಮ್ಮನನ್ನು ಕೇಳಿದ, "ಏನಮ್ಮ ಅಣ್ಣನಲ್ಲಿ ಮದುವೆಯ ವಿಚಾರ ಪ್ರಸ್ತಾಪಿಸಲೋ ಹೇಗೆ?"

"ಹ್ಞೂ" ಎಂದರು ಸರೋಜಮ್ಮ. ಆಗ ಅವರ ಮುಖದ ಭಾವ ಹೇಗಿತ್ತೆಂಬುದನ್ನು ನೋಡಲಾಗಲಿಲ್ಲ ರಾಘವನಿಗೆ. ಆತ ತಾಯಿಯ ಒಪ್ಪಿಗೆ ದೊರೆತುದು ಕೇಳಿ ಉಬ್ಬಿ ಹೋದ. ತಾನು ಯಾವ ರೀತಿಯಲ್ಲಿ ಮದುವೆಯ ಪ್ರಸ್ತಾಪ ಅಣ್ಣನಲ್ಲಿ ತೆಗೆಯಬೇಕೆಂದು ಯೋಚಿಸುತ್ತಾ, ಯೋಚಿಸುತ್ತಾ, ಆತ ಉಪ್ಪರಿಗೆಯ ಮೆಟ್ಟಲು ಏರಿದ.

ದೀಪ ಆರಿಸಿ ಸದಾನಂದ ಮಲಗಿಕೊಂಡ ಮೇಲೆ ರಾಘವ ಅಣ್ಣನನ್ನು ಕೇಳಿದ. "ನಿನ್ನ ನರ್ಸಿಂಗ್ ಹೋಮಿನ ಆಲೋಚನೆ ಎಲ್ಲೀ ತನಕ ಬಂತಣ್ಣಾ?"

"ಹ್ಞೂ, ಈ ಮಳೆಗಾಲ ಹೋಗಲಿ ಅಂತ ಕಾಯುತ್ತಿದ್ದೇನೆ ಅಷ್ಟೆ. ಬರುವ ಮೇದ ಒಳಗೆ ಉದ್ಘಾಟನೆ ಕೂಡ ಆಗಬೇಕು!"

"ನರ್ಸಿಂಗ್ ಹೋಂ ಅಂದ ಮೇಲೆ ನರ್ಸ್ ಬೇಕು ತಾನೆ?"

"ಮತ್ತೆ ನರ್ಸ್ ಇಲ್ಲದೆ ನರ್ಸಿಂಗ್ ಹೋಂ ಹೇಗಾಗುತ್ತದೆ ರಾಘವ? ಏನು ತಮಾಷೆ ಮಾಡುತ್ತೀಯಾ ಏನು?"

"ಅಲ್ಲ, ಈ ಹಳ್ಳಿಗೆ ಯಾವ ನರ್ಸ್ ಬಂದು ಕೂತುಕೊಂಡಾಳು ಅಂತ ಹಾಗೆ ಕೇಳಿದೆ, ತಮಾಷೆಗೆ ಅಲ್ಲ."

"ಬೇಕಾದರೆ ಕೂತ್ಕೊಳ್ಳುತ್ತಾರೆ. ಇಲ್ಲ ಹೋಗಲಿ. ಒಬ್ಬರಲ್ಲದಿದ್ದರೆ ಇನ್ನೊಬ್ಬರು. ಯಾರನ್ನೂ ನಂಬಿ ನಾನು ನರ್ಸಿಂಗ್ ಹೋಂ ತೆರೆಯುವುದಲ್ಲವಷ್ಟೆ!"

"ಅದು ಸರಿ! ಅಂದರೆ ನನ್ನಲ್ಲಿ ಒಂದು ಎಪ್ಲಿಕಂಟ್ ಇದೆ".

"ಏನು! ನಿನ್ನಲ್ಲಿ ಇದೆಯಾ? ತಮಾಷೆ ಮಾಡೋದಿಲ್ಲ ತಾನೆ?"

"ನಿಜವಾಗಿಯೂ ತಮಾಷೆ ಅಲ್ಲಣ್ಣ".

"ಯಾರು ಆ ಅಪ್ಲಿಕೆಂಟ್".

"ವಸಂತಿ".

ರಾಘವ ಹೇಳಿ ನಕ್ಕ. ಸದಾನಂದ ನಗಲಿಲ್ಲ. ಅವನ ಮುಖಭಾವ ಹೇಗಿತ್ತು? ಎಂದು ಎಂದು ರಾಘವನಿಗೆ ಏನು ಗೊತ್ತು? (ರಾಘವನಿಗೆ ಕತ್ತಲಲ್ಲಿ ಏನೂ ತೋರುತ್ತಿದ್ದಿಲ್ಲ)

ಸದಾನಂದ ಮೌನವಾಗಿದ್ದುದನ್ನೇ ನೋಡಿ, ರಾಘವ ಮತ್ತೂ ಮುಂದುವರಿಸಿದ,

"ನಾನೇನು ತಮಾಷೆ ಹೇಳಿದ್ದು ಅಂತ ತಿಳಕೊಂಡಿಯಾ ಅಣ್ಣ? ನನ್ನ ಸಂಧಾನ ಅಂದರೆ ಅದು ಸೋಲುವುದು ಉಂಟಾ?"

"ಎಂತಹ ಸಂಧಾನವೋ ನಿನ್ನದು?"

"ಹಾಗೆ ಬಾ ದಾರಿಗೆ, ಮತ್ಯಾರ ಸಂಧಾನವೂ ಅಲ್ಲ. ನಿನ್ನ ಮತ್ತು ವಸಂತಿಯ ಮದುವೆಯ ಬಗ್ಗೆ! ಈ ದಿನ ಸಂಧಾನ ಮಾಡಿದ್ದೆ ನಾನು ಅಪ್ಪ ಅಮ್ಮನಲ್ಲಿ!"

"ಹ್ಞೂ! ಏನಾಯಿತು ಹೇಳು?"

"ಆಗೋದೇನು ಮಾರಾಯ? ಸೋಲು ಆಗಲು ಹೇಗೆ ಸಾಧ್ಯ? ಅವರು ಒಪ್ಪಿಕೊಂಡರು!"

ಸದಾನಂದನಿಗೆ ಅತೀವ ಆನಂದವಾಯಿತು. ತಮ್ಮನ ಸಹಕಾರಕ್ಕಾಗಿ ಆತ ಕೃತಜ್ಞತೆಯನ್ನರ್ಪಿಸಿದ. ಬಹಳ ಹೊತ್ತಿನ ತನಕ ಅವರ ಮಾತುಕತೆ ಜರುಗಿತು. ಸದಾನಂದನಿಗೆ ಆ ರಾತ್ರಿ ಸರಿಯಾಗಿ ನಿದ್ರೆಯೇ ಬೀಳಲಿಲ್ಲ. ಕಡೆಗೂ ಅಮ್ಮ ಅಪ್ಪ ಸರಿದಾರಿಗೆ ಬಂದರಲ್ಲ! ಇದನ್ನು ಕೇಳಿ ವಸಂತಿಗೆ ಹೇಗೆ ಅನಿಸಲಿಕ್ಕಿಲ್ಲ? ಆದರೆ ಈ ಹದಿನೈದು ದಿನಗಳಿಂದ ಅವಳ ಪತ್ರವೇ ಇಲ್ಲ. ಎಂತಹ ಆಪತ್ತೋ ಏನೋ ಎಂದು ಅವಳನ್ನು ನೆನಸಿಕೊಂಡೆ ರಾತ್ರಿ ಬೆಳಗು ಮಾಡಿದ.

ಮರುದಿವಸ ನರ್ಸಪ್ಪಯ್ಯನವರೇ ಸದಾನಂದನಲ್ಲಿ ಅವನ ಮದುವೆಯ ಸಂಧಾನ ನಡೆಸಿದರು.

"ನೀನು ಯಾವಳನ್ನು ಮದುವೆ ಆಗುವುದಕ್ಕೂ ನಮ್ಮ ಅಡ್ಡಿ, ಆತಂಕ ಇಲ್ಲ. ಅಂತೂ ನೀನು ಇನ್ನು ಮದುವೆಯಾಗದೆ ಇರಬಾರದು. ಆದಷ್ಟು ಬೇಗ ನಮ್ಮ ಮನೆಯನ್ನು ತುಂಬುವಂತೆ ಮಾಡಬೇಕು" ಎಂದರು.

ಸದಾನಂದ ಅದಕ್ಕೆ ಮಾತನಾಡಲಿಲ್ಲ. ರಾತ್ರಿ ಮಾತ್ರ ನೇರವಾಗಿ ಕೇಳಿದ, "ವಸಂತಿಯನ್ನು ತಂದು ಕೊಳ್ಳುವುದಕ್ಕೆ ನಿಮ್ಮ ಅಭ್ಯಂತರವಿಲ್ಲ ತಾನೆ?"

## ಮತ್ತೆ ವಿಶ್ರಾಂತಿ

ವಿಶ್ರಾಂತಿ
1971 to 1975

PATIL

ಮನೆ ಮನೆ ತಿರುಗಿ, ಜನಗಳಿಗೆ ಕೈ
ಮುಗಿದು
ಅಂತೂ ಆರಿಸಿ ಬಂದು ಆದ ಇನ ಮಂತ್ರಿ
ಹಳ್ಳಿಗೆ ಬಾರದಲೆ ದಿಲ್ಲಿಯಲ್ಲಿಯೇ ಕುಳಿತ
ಐದು ವರುಷಗಳವರೆಗೆ ಮತ್ತೆ ವಿಶ್ರಾಂತಿ.

ಎಂ. ಗೋವಿಂದ

"ಇಲ್ಲ" ಎಂದರು ನರ್ಸಪ್ಪಯ್ಯನವರು.

"ಹಾಗಾದರೆ ನಾಲ್ಕು ದಿನ ಬಿಟ್ಟು ನಾನು ಮೈಸೂರಿಗೆ ಹೋಗಿಬರುತ್ತೇನೆ. ವಸಂತಿಯ ಪತ್ರವೂ ಸದ್ಯ ಬಂದಿಲ್ಲ. ಅವಳನ್ನು ಕಂಡು ಮಾತನಾಡಿ ಆಮೇಲೆ ದಿನ ನಿಶ್ಚಯ ಮಾಡಿದರಾಯಿತು. ಮಳೆಗಾಲ ಬಂದರೂ ಮದುವೆ ಇಲ್ಲೇನೂ ನಡೆಯುವುದು ಇಲ್ಲವಷ್ಟೆ!" ಎಂದ.

ಅದಕ್ಕೆ ಹೂಂಗುಟ್ಟಿದರು ನರ್ಸಪ್ಪಯ್ಯನವರು. ಹಾಗೆ ಅವರ ಒಪ್ಪಿಗೆ ಪಡೆದು, ಆತ ತನ್ನ ಪ್ರೇಯಸಿಯ ಮುಖದರ್ಶನಕ್ಕಾಗಿ, ಮೈಸೂರಿನತ್ತ ತೆರಳಿದ. ನಾಲ್ಕು ದಿವಸ ಗೀತಾ ಕ್ಲಿನಿಕಿಗೆ ರಜೆ ಸಾರಿ.

× × ×

ಯಾರನ್ನು ನೋಡುವ ಆಶೆಯಿಂದ ಸದಾನಂದ ಮೈಸೂರಿಗೆ ತೆರಳಿದ್ದನೋ ಯಾವ ಕನಸಿನ ಬಳ್ಳಿಯನ್ನು ಆತ ನೆಟ್ಟು ಸಾಕಿದ್ದನೋ, ಅದು ಇಂದು ಸೂರ್ಯ ರಶ್ಮಿಗೆ ಬಾಡಿ ಸೊರಗಿ ಹೋಗಿದೆ. ತಾನು ಬರುವುದಕ್ಕೆ ಹದಿನೆಂಟು ದಿವಸಗಳ ಮೊದಲು, ಅನಿರೀಕ್ಷಿತವಾಗಿ ವಸಂತಿ ಹಾರ್ಟ್ ಅಟ್ಯಾಕ್‌ನಿಂದ ಸತ್ತುಹೋದಳು ಎಂಬ ದುರಂತ ವಾರ್ತೆ – ತಾನು ದುಡಿಯುತ್ತಿದ್ದ ಆಸ್ಪತ್ರೆಯಲ್ಲಿ ಕೇಳಿದಾಗ, ಸದಾನಂದನಿಗೆ ಒಮ್ಮೆಲೇ ಪಾತಾಳದರ್ಶನವಾದಂತಾಯಿತು. ಸಿಡಿಲು ಬಡಿದಂತೆ ಆದ ಆತ. ತನಗೇಕೆ ಸಾವು ಬರಬಾರದು? ತನ್ನ ಆತ್ಮೀಯರೇಕೆ ಈ ರೀತಿ ಸಾವಿಗೆ ಬಲಿಯಾಗಿ ತನ್ನನ್ನು ಅನಾಥರನ್ನಾಗಿ ಮಾಡಿದರು? ಎಂದು ಕೊರಗದೆ ಇರಲಿಲ್ಲ ಆತ.

ವಸಂತಿಯ ಸಾವು ಇದುತನಕದ ಅವನ ಕನಸನ್ನು, ದುಡಿಮೆಯನ್ನು, ಬಾಳುವೆಯನ್ನು, ಮಂಜು ಮುಸುಕುವಂತೆ ಮಾಡಿತು. ದಾರಿಗಾಣದೆ ಆತ ತತ್ತರಿಸಿ ಹೋದ.

ಅವಳನ್ನು ನೆನೆದು, ಅವಳ ಪತ್ರಗಳನ್ನು ಮೆಲುಕಾಡಿ, ಅವಳಿಗಾಗಿ ತಾನು ಪಟ್ಟ ಸಂಕಷ್ಟಗಳನ್ನು ಸ್ಮರಿಸಿ ಆತ ಕೊರಗಿದ.

ಆದರೆ ತಾನೇಕೆ ಇನ್ನು ಮೈಸೂರಲ್ಲಿ ಇರಬೇಕು? ತಾನು ಬಾಳಿದರೇನು? ಸತ್ತರೇನು? ಎಂದುಕೊಂಡು ಆತ ವಿರಕ್ತನಂತೆ ಮೈಸೂರಿನಿಂದ ಕೋಳ್ಯೂರಿಗೆ ಹೊರಟು ನಿಂತ. ಈಗ ಅವನನ್ನು ಕೋಳ್ಯೂರು ಆಕರ್ಷಿಸಲಿಲ್ಲ. ಅಲ್ಲಿ ಆತ ಏನನ್ನೂ ಕಾಣದಾದ. ಬದುಕು ಅಂದರೆ ಇಷ್ಟೇ. ಅದರಲ್ಲಿ ಅರಸಿದರೆ ಸಿಗುವುದು ಶೂನ್ಯ ಎಂದು ಆತ ಪಯಣ ಬೆಳೆಸಿದ!

ಕೋಳ್ಯೂರಿನ ನೆಲವನ್ನು ಸ್ಪರ್ಶಿಸಿ, ಆತ ತನ್ನ ಭೂಮಿಗೆ ಕಾಲಿರಿಸುತ್ತಿದ್ದ ಹಾಗೆ, ತೋಟದಿಂದ ಬಾಳೆ ಎಲೆ ಕಡಿದುಕೊಂಡು ಹೋಗುತ್ತಿದ್ದ ಪಾರ್ವತಿ ಅವನಿಗೆ ಎದುರಾದಳು. ಅವಳೇ ಮುಗುಳು ನಕ್ಕು "ಬಂದಿರಾ"? ಎಂದು ಕೇಳಿದಳು.

ಸುತ್ತಲೂ ನಿರಾಶೆ ಕವಿದಿದ್ದರೂ, ಪಾರ್ವತಿಯ ಹೊಳೆಯುವ ಕಣ್ಣುಗಳಿಗೆ ದೃಷ್ಟಿ ಇಟ್ಟು "ಹ್ಞೂ" ಎಂದ ಸದಾನಂದನಿಗೆ, ಆ ಕಣ್ಣುಗಳಲ್ಲಿರುವ ಪ್ರೀತಿ, ಅವಳು ಆಡಿದ "ಬಂದಿರಾ"ಎಂಬ ಮಾತು ನಿರಾಶೆಯಲ್ಲೂ ಆಶೆಯನ್ನು ಕೊನರಿಸಿತು. ಒಂದು ಕ್ಷಣ ಹಾಗೇ ನಿಂತು, ನೋಡಿ ಸದಾನಂದ ಮುಂದೆ ಹೋದ. **



ಒಂದು ಸಣ್ಣ ಮಾತು! ನಿಜ. ಆದರೆ ಜೀವನದಲ್ಲಿ ಅದು ಉಂಟುಮಾಡಿದ ಪರಿಣಾಮ!! ದಂಪತಿಗಳು ಅನುಭವಿಸಿದ ಸಂಕಟ ಅಪಾರ.

# ದೇಸಾಯಿಯವರ ಹೆಂಡತಿ

- ಕೃಷ್ಣಮೂರ್ತಿ ಕಿತ್ತೂರ

ಆಗ ನಾನು ಖಾಸಗಿ ಕಾಲೇಜೊಂದರಲ್ಲಿ ಪ್ರಾಧ್ಯಾಪಕನಾಗಿದ್ದೆ. ಪಿ.ಎಚ್.ಡಿ.ಗಾಗಿ ರಜಿಸ್ಟ್ರೇಶನ್ ಕೂಡ ಮಾಡಿಸಿರಲಿಲ್ಲವಾದರೂ ನಾನು ಡಾ. ಮೂರ್ತಿ ಎಂದೇ ಖ್ಯಾತನಾಗಿ ಬಿಟ್ಟಿದ್ದೆ.

Hobby ಎಂದು ಮಾಡಿದ ಹೋಮಿಯೋಪಥಿಯ ಅಭ್ಯಾಸವನ್ನು ವ್ಯರ್ಥಗೊಳಿಸಬಾರದೆಂದು ನಾನು ಜನರಿಗೆ ಔಷಧ ಕೊಡಲಾರಂಭಿಸಿದೆ. ಆದರೆ ನನ್ನ ಪ್ರಾಧ್ಯಾಪಕ ವೃತ್ತಿಗೆ ಅಡ್ಡಿಬಾರದಂತೆ, ನಾನು ಪ್ರತಿ ರವಿವಾರ ಮುಂಜಾನೆಯ ವೇಳೆಯನ್ನು ಮಾತ್ರ ನನ್ನ ರೋಗಿಗಳಿಗೆ ಮೀಸಲಿಟ್ಟಿದ್ದೆ. ನಿಜವನ್ನೇ ಹೇಳಬೇಕೆಂದರೆ ನನ್ನ ಕಡೆಗೆ ಬರುವ ರೋಗಿಗಳನ್ನೂ ಅವರು ಗುಣಹೊಂದುವ ರೀತಿಯನ್ನೂ ಕಂಡು ನಗರದ ಅನೇಕ ಪ್ರಖ್ಯಾತ ಡಾಕ್ಟರರೂ ಕರುಬಿದ್ದರು. ಅದರಲ್ಲಿ ಇನ್ನೊಂದು ವಿಶೇಷವೆಂದರೆ ರೋಗಿಗಳಿಂದ ನಾನು ಹಣವನ್ನು ಅಪೇಕ್ಷೆ ಮಾಡುತ್ತಿರಲಿಲ್ಲ. ಆದರೂ ಗುಣಹೊಂದಿದ ಕೆಲವರು ತಾವಾಗಿಯೇ ಏನಾದರೂ ಬಹುಮಾನವನ್ನು ಕೊಡದೆ ಇರುತ್ತಿರಲಿಲ್ಲ.

ಮುಖ್ಯವಾಗಿ ವಿದ್ಯಾವಂತರೂ ನಗರದ ಗಣ್ಯ ವ್ಯಕ್ತಿಗಳೂ ಇವರೇ ಹೆಚ್ಚಾಗಿ ನನ್ನ ಕಡೆಗೆ ಔಷಧಕ್ಕೆ ಬರುತ್ತಿದ್ದರು. ಅವರಲ್ಲಿ ಅನೇಕರು ನನ್ನನ್ನು, "ನೀವು ಈ ಪ್ರಾಧ್ಯಾಪಕ ಕೆಲಸವನ್ನು ಬಿಟ್ಟು, ಡಾಕ್ಟರ ವೃತ್ತಿಯನ್ನೇ ಯಾಕೆ ಕೈಕೊಳ್ಳಬಾರದು?" ಎಂದು ಹಲವು ಸಲ ಸೂಚಿಸಿದ್ದರು. ನಿಜ; ಅದನ್ನೇ ವೃತ್ತಿಯನ್ನಾಗಿ ಸ್ವೀಕರಿಸಿದ್ದರೆ ಅದರಿಂದ ನನ್ನ ಗಳಿಕೆ ಹೆಚ್ಚಬಹುದಿತ್ತು. ಆದರೆ ಅಧ್ಯಯನ ಮತ್ತು ಅಧ್ಯಾಪನದಲ್ಲಿಯ ನನ್ನ ಅದಮ್ಯ ಪ್ರೀತಿಯನ್ನು ನಾನು ಎಂದೂ ಬಿಡಲಾರದೆ ಹೋದೆ.

ಬಹುಶಃ ಎಲ್ಲ ಡಾಕ್ಟರರೂ ಪ್ರಯತ್ನಮಾಡಿ ಕೈಬಿಟ್ಟಂಥವರೇ ಹೆಚ್ಚಾಗಿ ನನ್ನ ಕಡೆಗೆ ಬರುತ್ತಿದ್ದರು. ನಾನೂ ಕೂಡ ಇಂಥ ಹಳೆಯ ರೋಗಿಗಳನ್ನೆಲ್ಲ ಸ್ವೀಕರಿಸುತ್ತಿದ್ದೆ. ಕೆಲವು ರೋಗಿಗಳು ಗುಣವಾದುದನ್ನು ಕಂಡು ಸ್ವತಃ ನನಗೇ ಅತಿ ಆಶ್ಚರ್ಯವಾಗಿದೆ! ನಿಜವಾಗಿಯೂ ಹೋಮಿಯೋಪಥಿ ಒಂದು ಇಂದ್ರಜಾಲವಿದ್ದಂತೆ. ರೋಗಿಗೆ ಒಗ್ಗುವಂಥ ಸರಿಯಾದ-ಅತಿ ಸರಿಯಾದ–ಔಷಧವನ್ನು ಹುಡುಕಿ ಕ್ರಮವಾಗಿ ಪ್ರಯೋಗಿಸಿದರೆ ಯಶಸ್ಸು ಕಟ್ಟಿಟ್ಟಂತೆಯೇ. ನಾನು ಅಂಥ ಸರಿಯಾದ ಔಷಧವನ್ನು ಹುಡುಕುವಲ್ಲಿ ಮಾತ್ರ ನನ್ನ ಮನಸ್ಸನ್ನೂ ಬುದ್ಧಿಯನ್ನೂ ಮೀಸಲಿಡುತ್ತಿದ್ದೆ. ಆದರೆ ಜನರು ಮಾತ್ರ ನನ್ನ ಕೈಗುಣವನ್ನೇ ಹೆಚ್ಚಾಗಿ ನಂಬಿದ್ದರು.

ಅಂತೂ ಜನರಲ್ಲಿ ನನ್ನ ಬಗ್ಗೆ ಹೆಚ್ಚಿನ ಗೌರವ ಭಾವ ಬೆಳೆದಿತ್ತು. ಕ್ರಮೇಣ ಜನರು ನನ್ನನ್ನು ಪ್ರೊ. ಮೂರ್ತಿ ಎನ್ನುವುದಕ್ಕೆ ಬದಲಾಗಿ ಡಾ. ಮೂರ್ತಿ ಎಂದೇ ಕರೆಯತೊಡಗಿದರು. ಕ್ಲಬ್ಬಿನಲ್ಲಿಯ ಗೆಳೆಯರೂ ಕೂಡ ಇದಕ್ಕೆ ಅಪವಾದವಾಗಲಿಲ್ಲ. ಅಪರಿಚಿತ ಹೊಸ ಸದಸ್ಯರಿಗೆ ಸ್ನೇಹಿತರು ಪರಸ್ಪರ ಭೆಟ್ಟಿ ಮಾಡಿಸುವಾಗ ನನ್ನನ್ನು ಡಾ. ಮೂರ್ತಿ ಎಂದೇ ಪರಿಚಯ ಮಾಡಿಕೊಡುತ್ತಿದ್ದರು.

ಹಾಗೆ, ಮೊದಲಿಗೆ ನನ್ನ ಪರಿಚಯವಾದಾಗ ದೇಸಾಯಿಯವರು ನನ್ನನ್ನು, "ನೀವೇನು ಎಂ.ಡಿ.ನೋ? ಎಂ.ಎಸ್.ಓ?" ಎಂದು ಕೇಳಿದ್ದರು.

ನಾನು ಮುಗುಳುನಗುತ್ತ "ಎರಡೂ ಅಲ್ಲ, M. A. ಮಾತ್ರ" ಎಂದಿದ್ದೆ.

ಅವರ ಕಣ್ಣಲ್ಲಿ ಅಚ್ಚರಿಯ ಮಿಂಚು ಕಾಣಿಸಿತು.

ನಾನೇ ಮುಂದುವರಿದು "ಏನೋ Hobby ಎಂದು ಹೋಮಿಯೋಪಥಿ ತುಸು ಓದಿದ್ದೇನೆ. ಇವರೆಲ್ಲ ಚೇಷ್ಟೆಯಿಂದ ನನ್ನನ್ನು ಡಾಕ್ಟರ ಎನ್ನುವರು" ಎಂದೆ.

ಆದರೆ ನನ್ನ ಹತ್ತಿರವೇ ಇದ್ದ ಡಾ. ಕುಲಕರ್ಣಿಯವರು, "ಹಾಗೇನಿಲ್ಲ. He is an expert Homoeopath" ಎಂದು ಹೇಳಿದ್ದರು.

× × ×

ದೇಸಾಯಿ ಅವರು ನಮ್ಮ ಪಟ್ಟಣಕ್ಕೆ ವರ್ಗವಾಗಿ ಬರುವ ಮೊದಲು ಕೇವಲ ಮುನ್ಸಿಫ್ ಮ್ಯಾಜಿಸ್ಟ್ರೇಟ್ ಎಂದಿದ್ದರು. ಈಗ ಸಿವಿಲ್ ಜಜ್ ಎಂದು ಬಡತಿ ಹೊಂದಿ ಬಂದಿದ್ದರು. ಒಳ್ಳೇ ಬುದ್ಧಿವಂತ ನ್ಯಾಯಾಧೀಶನೆಂದು ಅವರು ಬೇಗನೆ ಹೆಸರು ಗಳಿಸಿದರು. ಆದರೆ ಅವರಲ್ಲಿ ಅಹಂಕಾರವೆಂಬುದು ಇರಲಿಲ್ಲ. ತುಂಬ ವಿನಯಶೀಲ ವ್ಯಕ್ತಿ. ತುಸು ಸಂಕೋಚ ಸ್ವಭಾವವಾದರೂ ಪೂರ್ಣ ಮೂಕನಲ್ಲ. ಅವರ ಮಾತು, ನಗೆ, ವಿನೋದ ಎಲ್ಲ ಹಿತಮಿತವಾಗಿರುತ್ತಿದ್ದುವು. ನಮ್ಮಿಬ್ಬರಲ್ಲಿ ಅಂಥ ಹೆಚ್ಚಿನ ಸ್ನೇಹವೇನೂ ಬೆಳೆದಿರಲಿಲ್ಲ. ಕ್ಲಬ್ಬಿನಲ್ಲಿ ಭೆಟ್ಟಿಯಾದಾಗ ಪರಸ್ಪರ 'Hello' ಎನ್ನುತ್ತಿದ್ದೆವು. ಅಷ್ಟೇ.

ನಾನು ಅಂಥ ಆಟಗುಳಿಯಲ್ಲವಾದರೂ ದಿನಾಲೂ ಸಾಯಂಕಾಲ ಕ್ಲಬ್ಬಿಗೆ ಹೋಗುತ್ತಿದ್ದೆ. ಎಂದಾದರೂ ರಮೀ ಆಡುತ್ತಿದ್ದೆನಾದರೂ ಅದೇ ನನಗೆ ಚಟವಾಗಿರಲಿಲ್ಲ. ಎಷ್ಟೋ ಸಲ ಕೆಲ ಹೊತ್ತು ಟೇಬಲ್ ಟೆನಿಸ್ ಆಡಿಯೋ, ಇಲ್ಲವೆ ಸುಮ್ಮನೆ ಕೆಲವರು ಸ್ನೇಹಿತರ ಜೊತೆ ಹರಟೆ ಹೊಡೆದೋ ಮನೆಗೆ ಬರುತ್ತಿದ್ದೆ. ದೇಸಾಯಿಯವರು ಕ್ಲಬ್ಬಿಗೆ ಬಂದಾಗಲೆಲ್ಲ ಬ್ರಿಜ್ ಆಡುತ್ತಿದ್ದರು. ಅದರಲ್ಲಿ ಅವರಿಗೆ ಸಾಕಷ್ಟು ಗತಿಯೂ ಇದ್ದಿತು.

ಒಂದು ಸಾಯಂಕಾಲ ನಾನು ಕುಳಿತಲ್ಲಿಯೇ ದೇಸಾಯಿಯವರು ಬಂದು, "Excuse me Dr, Murthy" ಎಂದರು.

ನಾನು "ಓ, ಬನ್ನಿರಿ. ಏನು?" ಎಂದೆ,

ಅವರು ನನ್ನನ್ನು ತುಸು ಬದಿಗೆ ಕರೆದೊಯ್ದು "ಸ್ವಲ್ಪ ಖಾಸಗಿ ಕೆಲಸವಿದೆ. ನಿಮ್ಮ ಮನೆಗೆ ಯಾವಾಗ ಬರಲಿ?" ಎಂದರು.

ಈ ನ್ಯಾಯಾಧೀಶನಿಗೆ ನನ್ನ ಹತ್ತಿರ ಏನು ಕೆಲಸ? ಅದೂ ಖಾಸಗಿ?–ಎಂದು ನನಗೆ ತುಸು ದಿಗಿಲಾಯಿತು.

ಅವರೇ ಮುಂದುವರೆದು, "ನಿಮ್ಮ ಹತ್ತಿರ ತುಸು consult ಮಾಡಬೇಕಾಗಿದೆ." ಎಂದರು.

"ನ್ಯಾಯಾಧೀಶರಾದ ನೀವೂ ನನ್ನನ್ನು ಡಾಕ್ಟರ ಎಂದು ನಿರ್ಣಯಿಸಿದಿರಾ? ನಾನೆಲ್ಲೋ Quack" ಎಂದು ನಾನು ನಕ್ಕುಬಿಟ್ಟೆ.

"ಛೇ, ಹಾಗೆನ್ನಬೇಡಿರಿ. ನಾನು ನಿಮ್ಮ ಪರಿಣತಿಯ ಬಗ್ಗೆ ಸಾಕಷ್ಟು ಕೇಳಿದ್ದೇನೆ. Really you should oblige me" ಎಂದರು ದೇಸಾಯರು.

"ಛೇ ಛೇ, ಹಾಗೆಲ್ಲ ಏಕೆ ಅನ್ನುತ್ತೀರಿ? ನನ್ನ ತುಸು ಅಭ್ಯಾಸವು ತಮ್ಮಂಥವರಿಗೆ ಪ್ರಯೋಜನಕಾರಿಯಾದರೆ ನನಗೆ ಸಂತೋಷವೇ ಸರಿ." ಎಂದೆ.

"ಥ್ಯಾಂಕ್ಸ! ಹಾಗಾದರೆ ಯಾವಾಗ ಬರಲಿ?" ಅವರು ಕೇಳಿದರು.

"You are welcome at any time Sir."

ಎಂದೆ ನಾನು.

"ನೀವೇನೋ ರವಿವಾರ ಮುಂಜಾನೆ ಮಾತ್ರ ಔಷಧ ಕೊಡುತ್ತೀರಂತೆ. ಆಗ ಜನರೂ ಬಹಳ ಇರಬಹುದು... ಅಲ್ಲದೆ ಅಪರಿಚಿತರು..."

"ಓ, ಹಾಗೇನಿಲ್ಲ. ನಿಮಗೆ ಯಾವಾಗ ಅನುಕೂಲವೋ ಆಗ ಬನ್ನಿರಿ." ಎಂದೆ ನಾನು.

"ಹಾಗಾದರೆ ನಾಳಿನ ರವಿವಾರ ಸಾಯಂಕಾಲ ನಿಮಗೆ ಸವಡು ಇದೆಯೊ? ನಿಮಗೆ ಹೆಚ್ಚು ಅನುಕೂಲ ಯಾವಾಗ?... ಅಥವಾ ಮುಂದಿನ ಸೋಮವಾರ ೧೦ನೆಯ ತಾರೀಖು ಏನೋ Public holiday ಉಂಟಲ್ಲ, ಅಂದು ಮುಂಜಾನೆ ಬಂದರೆ?" ದೇಸಾಯಿಯವರು ಅನುಮಾನಿಸುತ್ತ ಕೇಳಿದರು.

ನಾನು, "ಅವಶ್ಯ ಬನ್ನಿರಿ"ಎಂದೆ.

"ಮುಂಜಾನೆ ಎಂಟಕ್ಕೆ?"

"ಆಗಲಿ, ನಾನು ಮನೆಯಲ್ಲಿ ಇರುತ್ತೇನೆ."

ದೇಸಾಯಿಯವರು ಕೃತಜ್ಞತೆಗಳನ್ನು ಸೂಚಿಸಿ ಹೊರಟು ಹೋದರು. ಆದರೆ ದೇಸಾಯಿಯವರು ಹೊರಟು ಹೋದರೂ ನನ್ನ ವಿಚಾರ ಮಾತ್ರ ಅವರ ಸುತ್ತೇ ಸುಳಿಯತೊಡಗಿತು. ಮುಂದೆ ನನಗೆ ರಮಿಯ ಕಡೆಗೆ ಮನಸ್ಸು ಹತ್ತಲಿಲ್ಲ. ಮುಂದಿನ ಆಟಕ್ಕೆ ಸೋತು ದುಡ್ಡನ್ನು ಚೆಲ್ಲಿ ಅಲ್ಲಿಂದ ಎದ್ದುಬಿಟ್ಟೆ.

ಸಾಮಾನ್ಯವಾಗಿ ಯಾರಾದರೂ ನನ್ನ ಕಡೆಗೆ ಔಷಧಕ್ಕಾಗಿ ಬರುವವರಿದ್ದರೆ, ನಾನು ರೋಗದ ಇತಿಹಾಸವನ್ನು ತುಸುವಾದರೂ ಮೊದಲೇ ಕೇಳಿ ತಿಳಿದಿರುತ್ತೇನೆ. ಅಂದರೆ ಅವರಿಗೆ ಸೂಕ್ತವಾಗಬಹುದಾದ ನಾಲ್ಕಾರು ಔಷಧಗಳ ಬಗ್ಗೆ ಚಿಂತಿಸಿ ಇಡಲು ತೆಗೆದು ಹಾಕಿದೆ. ಇಂಥ ಸಜ್ಜನ, ಅದೂ ಅಲ್ಲದೆ ಮುಖದ ಮೇಲೆಯೇ ನಿರೋಗಿಯ ಸುಪ್ರಸನ್ನ ಕಳೆ ತುಳುಕುತ್ತಿರುವ ವ್ಯಕ್ತಿಗೆ ಅಂಥ ರೋಗ ಅಸಂಭವ ಎಂದುಕೊಂಡೆ. ಅದೂ ಅಲ್ಲದೆ, ರೋಗ ತಮಗೇ ಎಂದು ಅವರೆಲ್ಲಿ ಹೇಳಿದ್ದರು. ಇಷ್ಟೆಲ್ಲ ಯಾಕೆ, ಅವರು ಬಂದ ಮೇಲೆಯೇ ವಿಚಾರಿಸಿದರಾಯಿತೆಂದು ಮನೆಯ ಕಡೆಗೆ ನಡೆದೆ.

ಆದರೆ, ವಿಚಿತ್ರವೆಂದರೆ ಆ ಸೋಮವಾರ ಅವರು ನನ್ನ ಕಡೆಗೆ ಬರಲಿಲ್ಲ. ಅಷ್ಟೇ ಅಲ್ಲ, ಆ ನಾಲ್ಕು ದಿನ ಕ್ಲಬ್ಬಿಗೂ ಬರಲಿಲ್ಲ.

ಶಿಷ್ಟಾಚಾರದ ಮಾತು, ಚಹ ಮುಗಿದ ನಂತರ ಅವರೇ,

"ಮೂರ್ತಿಯವರೇ, ಈಗ ನಿಮಗೆ ತುಸು ವೇಳೆ ಇದೆಯಲ್ಲ? ನಾನು ತಮಗೆ ತೊಂದರೆ ಕೊಡುತ್ತಿಲ್ಲವಷ್ಟೇ?.... ಅಂದು ಬರುವುದು ಅಸಾಧ್ಯವೇ ಆಯಿತು. ಕ್ಷಮಿಸಿರಿ," ಎಂದರು.

"ಏನೂ ಇಲ್ಲ. ಇಷ್ಟು ಸಂಕೋಚವೇಕೆ?" ಎಂದು ನಾನು ನುಡಿದೆ.

ಆಗ ಅವರು ಎಲ್ಲವನ್ನೂ ವಿವರಿಸಿದರು. ರೋಗಿ ಅವರಲ್ಲ; ಅವರ ಹೆಂಡತಿ, ಆ ಹೆಣ್ಣು



ಅನುಕೂಲವಾಗುತ್ತದೆ. ಈ ಸಲ ದೇಸಾಯಿಯವರನ್ನು ಆ ಬಗ್ಗೆ ವಿಚಾರಿಸಲಿಲ್ಲ. ಅವರು ಖಾಸಗಿ ಎಂದು ಮೊದಲೇ ಹೇಳಿರುವಾಗ ಕ್ಲಬ್ಬಿನಲ್ಲಿ ಅದರ ಬಗ್ಗೆ ಹೇಗೆ ಕೇಳುವುದು? ಅವರು ಖಾಸಗಿ ಎಂದರಲ್ಲ, ಏನಾದರೂ ವ್ಹಿ. ಡಿ. (Veneral disease) ಇರಬಹುದೇ?-ಎಂಬ ಸಂಶಯವೂ ನನ್ನ ತಲೆಯಲ್ಲಿ ಬಂದು ಹೋಯಿತು. ಆದರೆ ಅದನ್ನು ಕೂಡಲೇ

ಮುಂದೆ ಒಂದು ದಿನ ಮುಂಜಾನೆ ದೇಸಾಯಿಯವರು ಏಳು ಗಂಟೆಗೇ ನಮ್ಮ ಮನೆಗೆ ಬಂದರು. ಅಂದು ರವಿವಾರವೂ ಇರಲಿಲ್ಲ, ಯಾವ ಬಿಡುವಿನ ದಿನವೂ ಇರಲಿಲ್ಲ. ಹಾಗೆ ಹೇಳದೆ ಕೇಳದೆ ಬಂದ ಅವರನ್ನು ಕಂಡು ನನಗೆ ತುಸು ಅಚ್ಚರಿಯೇ ಆಯಿತು. ಆದರೆ ಅದನ್ನು ತೋರಗೊಡದೆ ಅವರನ್ನು ಆದರದಿಂದ ಬರಮಾಡಿಕೊಂಡೆ,

ಮಗಳಿಗೆ ಪ್ರತಿತಿಂಗಳೂ ಋತುಚಕ್ರದ ಮೂರು ನಾಲ್ಕು ದಿನ ತೊಂದರೆ. ಆದರೆ ಅದು ಸಾಮಾನ್ಯವಾಗಿ ಸ್ತ್ರೀಯರಲ್ಲಿ ಕಂಡುಬರುವಂಥ ಜಡ್ಡಾಗಿರಲಿಲ್ಲ. ಆ ಕಾಲಕ್ಕೆ ಅವಳ ವರ್ತನೆಯೇ ವಿಚಿತ್ರವಾಗಿರುತ್ತಿತ್ತು. ಅದು ಒಂದು ರೀತಿಯ ಉನ್ಮಾದ ಎಂಬ'ಂತಿರುತ್ತಿತ್ತು. ಆದರೆ ಉಳಿದವರಿಗೆ ಅವಳು ಏನೂ ಮಾಡುತ್ತಿರಲಿಲ್ಲ. ತಾನೇ ಒಂದು ರೀತಿ



ಸಹಿಂದಾಗಿ ಇರುತ್ತಿದ್ದಳು. ಕೆಲವು ಸಲ ಅವಳ ವೇಳೆಯೆಲ್ಲ ಅಳುವುದರಲ್ಲಿಯೇ ಕಳೆದು ಹೋಗುತ್ತಿತ್ತು. ತನ್ನಷ್ಟಕ್ಕೆ ತಾನೇ ಏನೋ ಅಂದುಕೊಳ್ಳುವಳು. ಕೆಲವು ಸಲ ಅವಳ ಮೈಯೆಲ್ಲ ನಡುಕವಿರುತ್ತಿತ್ತು. ಬಹುಶಃ ಆ ಮೂರು ದಿನ ಅವಳು ನಿದ್ರೆಯನ್ನೇ ಮಾಡುತ್ತಿರಲಿಲ್ಲ. ಉಳಿದ ದಿನಗಳಲ್ಲಿ ಕೂಡ ನಿದ್ರೆಯಲ್ಲಿ ಕನವರಿಸುವುದು, ಗಾಬರಿಯಿಂದ ಚೀರಿಕೊಳ್ಳುವುದು ಆಗಾಗ ಕಂಡುಬರುತ್ತಿತ್ತು... ಡಾಕ್ಟರರು Hysteria ಎಂದು ಔಷಧೋಪಚಾರವನ್ನು ಮಾಡಿದ್ದರು. ಸಾಕಷ್ಟು ಗುಣವಾಗಿರಲಿಲ್ಲ. ಇಷ್ಟೇ; ಮೊದಲಿನ ತೀವ್ರತೆ ಕಡಿಮೆಯಾಗಿತ್ತು. ಆದರೂ ತೊಂದರೆ ಇದ್ದೇ ಇದ್ದಿತು.

ಇದನ್ನೆಲ್ಲ ವಿವರಿಸಿ ದೇಸಾಯಿಯವರು "ಈಗ ನಿಮ್ಮ ಮೇಲೆ ಬಹಳ ಭರವಸೆ ಇಟ್ಟಿದ್ದೇನೆ,"ಎಂದರು.

ನಾನು ಶಾಂತವಾಗಿ ರೋಗದ ಲಕ್ಷಣಗಳನ್ನಲ್ಲದೆ ರೋಗಿಯ ವಯಸ್ಸು, ಮಾನಸಿಕ ಸ್ಥಿತಿ, ತೊಂದರೆಯ ಕಾಲಾವಧಿ, ಉಳಿದ ಕಾಲಕ್ಕೆ ಇರುವ ಸ್ಥಿತಿ, ರೋಗ ಉಲ್ಬಣಗೊಳ್ಳುವ ವೇಳೆ, ಕಡಿಮೆಯಾಗುವ ಕ್ರಮ, ರೋಗಿಯ ಜೀವನದ ರೀತಿ, ನಡೆವಳಿ, ಬೇಕು-ಬೇಡಗಳು ಇವೇ ಮೊದಲಾದ ಹಲವಾರು ಪ್ರಶ್ನೆಗಳನ್ನು ಕೇಳಿದೆ. ಅವರು ಹೇಳಿದುದನ್ನೆಲ್ಲ ಬರೆದುಕೊಂಡೆ. ಆದರೆ ನನ್ನ ಕೆಲವು ಪ್ರಶ್ನೆಗಳಿಗೆ ಅವರಿಂದ ಸಮರ್ಪಕ ಉತ್ತರ ಸಿಗಲಿಲ್ಲ. ಕೊನೆಗೆ ನಾನು,

"ಅವರನ್ನು ಒಮ್ಮೆ ಕರೆತರಬಹುದೇ?" ಎಂದು ಕೇಳಿದೆ.

ಅವರು ತುಸು ತಡೆದು, "ಬಹುದು, ಆದರೆ ಮುಖ್ಯ ಪ್ರಶ್ನೆಯೆಂದರೆ, ಅವಳು ಯಾವ ಔಷಧವೂ ಬೇಡ ಎನ್ನುವಳು," ಎಂದರು.

ನಾನು ಒಂದು ಕ್ಷಣ ಯೋಚಿಸಿದೆ. ಅವರಿಗೆ ಔಷಧೋಪಚಾರದಿಂದ ಬೇಸರ ಆಗಿರಬಹುದು. ಅಥವಾ ಅದು ಗುಣವಾಗಲಾರದ ಬೇನೆ ಎಂಬ ನಿರಾಶಾಭಾವ ಬೆಳೆದಿರಬಹುದು.

"ಅವರಿಗೆ ದೈವಭಕ್ತಿ ಹೇಗೆ?" ನಾನು ವಿಚಾರಿಸಿದೆ.

"ತುಂಬ ಜಾಸ್ತಿ ಇತ್ತು; ಈಗ ಇಲ್ಲ."

"ಅದು ಕಡಿಮೆಯಾಗಲಿಕ್ಕೆ ಕಾರಣ?"

"ಇದೇ. ಜಡ್ಡು ಆರಂಭವಾದಂದಿನಿಂದ...."

"ಉಳಿದ ವೇಳೆ ಹೇಗಿರುತ್ತಾರೆ?"

"ಸಾಮಾನ್ಯವಾಗಿ ನೆಟ್ಟಗಿರುತ್ತಾಳೆ. ಮೊದಲೇ ಅವಳು ಕೋಮಲ ಸ್ವಭಾವದವಳು. ಈಗಂತೂ ಸಣ್ಣ ಸಣ್ಣ ಮಾತಿಗೂ ಕಣ್ಣೀರು ಸುರಿಸುತ್ತಾಳೆ. ಸಮಾಧಾನ ಹೇಳ ಹೊರಟರೆ ಅದು ಇನ್ನೂ ಹೆಚ್ಚೇ ಆಗುತ್ತದೆ... ಮೊದಲು ಅವಳಿಗಿದ್ದ ಜೀವನದಲ್ಲಿಯ ಆಸ್ಥೆಯೇ ಈಗ ಕಳೆದುಹೋಗಿದೆ. ಮೊದಲು ಸಂಗೀತ ಮತ್ತು ಹೆಣಿಕೆ ಕೆಲಸದಲ್ಲಿ ಅತೀವ ಆಸಕ್ತಿಯಿತ್ತು. ಬಿ.ಎ.ದಲ್ಲಿ ಅವಳು minor ವಿಷಯವೆಂದು ಸಂಗೀತವನ್ನೇ ತೆಗೆದುಕೊಂಡು ಫಸ್ಟ್ ರ್‍ಯಾಂಕ್ ಪಡೆದಿದ್ದಳು...ಈಗ ಅವಳಿಗೆ ಯಾವುದರಲ್ಲೂ ಆಸ್ಥೆ ಉಳಿದಿಲ್ಲ... ನನಗೂ ಎಷ್ಟೋ ಸಲ ಜೀವನವೇ ಬೇಸರ ಎನಿಸಿಬಿಡುತ್ತದೆ, ಮೂರ್ತಿಯವರೇ."

ಈ ಮಾತು ಹೇಳುವಾಗ ಅವರ ಕಣ್ಣು ತೇವಾಗಿದ್ದುವು!

"ಧೈರ್ಯಗೆಡಬಾರದು ದೇಸಾಯರೇ, ಪ್ರಯತ್ನಿಸೋಣ" ಎಂದೆ ನಾನು. ಮುಂದೆ ನಾನು,

"ಅಲ್ಲ ದೇಸಾಯರೇ, ಇದು ಆರಂಭವಾಗಿ ನಾಲ್ಕು ವರ್ಷ ಆಯಿತು ಎಂದಿರಿ. ಸರಿ, ಅದು ಮೊದಲು ಹೇಗೆ ಆರಂಭವಾಯಿತು?" ಎಂದು ಕೇಳಿದೆ.

ಅವರ ಮುಖದಲ್ಲಿ ಏನೋ ವಿಚಿತ್ರ ಬದಲಾವಣೆಯಾಯಿತು. ಒಂದು ಕ್ಷಣ ತಡೆದು,

"ಹೇಗೆ ಆರಂಭವಾಯಿತು, ಎಂದಿರಾ?.... ಅಂದು ನಾನು ಕೋರ್ಟಿನಿಂದ ಮನೆಗೆ ಹೋಗುವಷ್ಟರಲ್ಲೇ ಅದು ಆರಂಭವಾಗಿಬಿಟ್ಟಿತ್ತು.......ಏನೇನೋ ಬಡಬಡಿಸುತ್ತಿದ್ದಳು. ನಗುತ್ತಿದ್ದಳು! ಕೂದಲೆಲ್ಲ ಕೆದರಿತ್ತು. ಮನೆಯಲ್ಲಿ ನಮ್ಮ ತಾಯಿ ಇದ್ದರು. ಒಂದು ತಾಸಿನಿಂದ ಹೀಗೇ ಮಾಡುತ್ತಿರುವಳು-ಎಂದು ಗಾಬರಿಯಿಂದ ಹೇಳಿದರು. ನನಗೂ ಗಾಬರಿಯಾಯಿತು. ನಾನು ಯಾಕೆ? ಏನು? ಎಂದು ಕೇಳಿದರೆ ಉತ್ತರವನ್ನೇ ಹೇಳಲಿಲ್ಲ. ತನ್ನ ಮಾತನ್ನೇ ಮುಂದುವರೆಸಿದಳು. ನಾನು ಕೂಡಲೇ ನನ್ನ ಪರಿಚಿತ ಡಾಕ್ಟರಿಗೆ ಫೋನು ಮಾಡಿದೆ. ಅವರು ಬಂದು ಪರೀಕ್ಷಿಸಿ, ಏನೋ

ಒಂದು prick ಕೊಟ್ಟರು. ಕೆಲ ವೇಳೆಯ ನಂತರ ಅವಳಿಗೆ ನಿದ್ರೆ ಹತ್ತಿತು." ಎಂದು ವಿವರಿಸಿದರು.

"ಮುಂದೆ ಹಾಗೆಯೇ ಎಷ್ಟು ದಿನ ಇದ್ದಿತು?"

"ಬಹು ದಿವಸ. ಆದರೆ ಮುಂದಿನ ಸಲ ಕಡಿಗೆ ಆದಾಗ ಅದು ಮತ್ತೆ ತೀವ್ರವಾಯಿತು."

"ಅಂದರೆ ಮೊದಲು ಸಲ ಹಾಗಾದಾಗಲೂ ಅವರು ಹೊರಗಾಗಿದ್ದರೇ?"

"ಹೌದು, ಹೌದು! ಅದನ್ನು ಹೇಳಲು ಮರೆತೆ."

"ಇರಲಿ.. ಆಗ ಅವರು ಏನೆಂದು ಬಡಬಡಿಸುತ್ತಿದ್ದರು?"

"ಏನೆಂದೆ?.... ಏನೋ ಹೀಗೇ!" ಎಂದು ನುಡಿದ ದೇಸಾಯಿಯವರು, "ಯಾಕೆ? ಅದಕ್ಕೇನು ಅಷ್ಟು ಮಹತ್ವ?" ಎಂದು ಕೇಳಿದರು.

"ನಮ್ಮ ಹೋಮಿಯೋಪಥಿಯಲ್ಲಿ ಎಲ್ಲವೂ ಮಹತ್ವದ್ದೇ" ಎಂದೆ ನಾನು, ಮುಗುಳುನಗುತ್ತ.

"ಒಳ್ಳೇದು. ಅವರಿಗೆ ಆ ಮೊದಲು ಏನಾದರೂ ವಿಶೇಷ ಜಡ್ಡು ಆಗಿತ್ತೇ?" ನಾನು ಕೇಳಿದೆ.

"ವಿಶೇಷ ಎಂದರೆ?"

"ತಪ್ಪು ತಿಳಿಯಬೇಡಿರಿ...ಟ್ಯೂಬರಕ್ಯುಲೋಸಿಸ್, ಸಿಫಿಲಿಸ್...."

ಅವರು ನನ್ನನ್ನು ಮಧ್ಯದಲ್ಲೇ ತಡೆದು, "ಛೇ ಛೇ. ಎಂದೂ ಇಲ್ಲ" ಎಂದರು.

"ಬೇರೆ ಏನಾದರೂ ತ್ವಚರೋಗ? ಇಸಬು, ಗಜಕರ್ಣ ವಗೈರೆ?"

"ಇಲ್ಲ, ಬಿಡಿರಿ."

"ಕಜ್ಜೀ?"

ದೇಸಾಯಿಯವರು ತುಸು ನಕ್ಕರು. "ಏನೋ ರೇಪಾ! ನಮ್ಮ ಮನೆಗೆ ಬಂದ ನಂತರ ಮಾತ್ರ ಕಜ್ಜಿ ಆಗಿಲ್ಲ" ಎಂದರು.

ನನಗೂ ನಗೆ ಬಂದಿತು. ನಾನು ತುಸು ತಡೆದು "ನಾನೊಮ್ಮೆ ಅವರನ್ನು ಕಂಡಿದ್ದರೆ ಚೆನ್ನಾಗಿತ್ತು" ಎಂದೆ.

ಅವರು ತುಸು ಯೋಚಿಸಿದಂತೆ ಕಂಡಿತು. ನಂತರ,

"If you dont mind, ನೀವೇ ಒಮ್ಮೆ ನಮ್ಮ ಮನೆಗೆ ಬರ್ರಿ, ಸಹಜ ಎಂಬಂತೆ." ಎಂದರು.

ನಾನು ಒಪ್ಪಿದೆ. ಅದರಿಂದ ಅವರಿಗೆ ತುಂಬ ಸಮಾಧಾನವಾಯಿತು

"ಒಳ್ಳೇದು. ಈಗ ಅವರಿಗೇನು ಔಷಧ ಕೊಡುತ್ತಿರುವಿರಿ?" ನಾನು ಕೇಳಿದೆ.

"ಅವೇ, Sedatives"

"ಅವನ್ನು ನಿಲ್ಲಿಸಿಬಿಡಿರಿ"

"ಅಲ್ಲ, ಮತ್ತೆ ಹೆಚ್ಚಾದರೆ?" ಅವರು ಸಂದೇಹದಿಂದ ಕೇಳಿದರು. ಅವರ ಧ್ವನಿಯಲ್ಲಿ ಗಾಬರಿಯೂ ಇದ್ದಿತು.

"ನಾನಿದ್ದೇನಲ್ಲ!" ನಾನು ನಗುತ್ತ ನುಡಿದೆ.

"ಈಗ ನೀವೇನು ಔಷಧ ಕೊಡುತ್ತೀರಾ?" ಅವರು ಕೇಳಿದರು.

"ಇಲ್ಲ" ಎಂದೆ ನಾನು.

"ಹಾಗಾದರೆ ಬರೆದು ಕೊಡುತ್ತೀರೇನು?

"ಇಲ್ಲ. ಸದ್ಯಕ್ಕೆ ಏನೂ ಬೇಡವೇ ಬೇಡ",

"ಅಂದರೆ?"

"ಚಿಂತಿಸಬೇಡಿರಿ. ಏನೂ ಬೇಡ. ಮಾನವನ ಪ್ರಕೃತಿಯಲ್ಲಿ ತನ್ನ ಸಂರಕ್ಷಣೆ ಮಾಡಿಕೊಳ್ಳುವ ಶಕ್ತಿ ಇದ್ದೇ ಇರುತ್ತದೆ. ನಾವು ಸುಮ್ಮ ಸುಮ್ಮನೆ ಹೆಚ್ಚು drugging ಮಾಡಿ ಕೆಡಿಸುತ್ತೇವೆ." ಎಂದೆ ನಾನು. ನನ್ನ ಮಾತಿನಿಂದ ಅವರಿಗೆಷ್ಟು ಸಮಾಧಾನವಾಯಿತೊ?

ಅವರು ಗಡಿಯಾರದ ಕಡೆಗೆ ನೋಡಿದರು. ಆಗಲೇ ಹತ್ತು ಗಂಟೆಯಾಗಿ ಹೋಗಿತ್ತು.

"ಒಳ್ಳೇದು ಮತ್ತೆ ಕೂಡೋಣ. ಈ ಮಧ್ಯೆ ಮತ್ತೇನಾದರೂ symptoms ಕಂಡರೆ, ಎಷ್ಟೇ ಕ್ಷುಲ್ಲಕವೆನಿಸಿದರೂ ನನಗೆ ತಿಳಿಸಿರಿ." ಎಂದೆ ನಾನು.

ಅಂದು ನಮ್ಮ ಭೆಟ್ಟಿ ಅಷ್ಟಕ್ಕೇ ಮುಕ್ತಾಯವಾಯಿತು.

* * * * *

ಮುಂದೆ ಒಂದು ದಿನ ದೇಸಾಯಿಯವರು ನನ್ನನ್ನು ತಮ್ಮ ಮನೆಗೆ ಕರೆದೊಯ್ದರು. ಮನೆಯನ್ನು ಪ್ರವೇಶಿಸುತ್ತಿರುವಂತೆಯೇ ಮನಸ್ಸು ಪ್ರಸನ್ನವಾಗುವಂತಿತ್ತು. ಎಲ್ಲ ಕಡೆಗೂ ಅಚ್ಚುಕಟ್ಟು. ಡ್ರಾಯಿಂಗ ರೂಮು ಸುವ್ಯವಸ್ಥಿತವಾಗಿತ್ತು. ಅಲ್ಲಲ್ಲಿ ಇದ್ದ ಹೆಣಿಕೆಯ ವಸ್ತ್ರಗಳು ಪಟಗಳು ಮನೆಯ ಯಜಮಾನಿಯ ಸೌಂದರ್ಯಪ್ರಜ್ಞೆಯನ್ನು ಕಲಾಕೌಶಲ್ಯವನ್ನೂ ಎತ್ತಿ ತೋರಿಸುತ್ತಿದ್ದುವು.

ಚಹವನ್ನು ದೇಸಾಯಿಯವರ ಪತ್ನಿಯೇ ತಂದರು. ದೇಸಾಯಿಯವರು, " ಇವರು ಪ್ರೊ ಮೂರ್ತಿ. ಆದರೆ ಊರಿಗೆಲ್ಲ ಇವರು ಡಾ. ಮೂರ್ತಿ" ಎಂದು ನನ್ನ ಕಡೆಗೆ ತಿರುಗಿ ಹೇಳಿದರು.

ನಾಚಿಕೆಯಿಂದ ಕೆಂಪೇರಿದ ಮುಖದಿಂದ "ನಮಸ್ಕಾರ" ಎಂದರು ಅವರ ಪತ್ನಿ.

"ನಮಸ್ಕಾರ ರೀ" ಎನ್ನುತ್ತ ನಾನು ಅವರತ್ತ ನೋಡಿದೆ.

ಮುಖವು ಅತ್ಯಂತ ಸುಂದರವಾಗಿದ್ದರೂ ಕಳಾಹೀನವಾಗಿತ್ತು. ಸಾಕಷ್ಟು ಎತ್ತರದ ಮೈಕಟ್ಟು. ಗುಂಗುರು ಕೂದಲು ಅಲ್ಲಲ್ಲಿ ಬೆಳ್ಳಗಾಗಿತ್ತು. ಕಣ್ಣುಗಳು ಒಡೆದು ಕಾಣುವಷ್ಟು ವಿಶಾಲವಾಗಿದ್ದುವು.

"ಕುಳಿತುಕೋ" ಎಂದರು ದೇಸಾಯಿಯವರು ತಮ್ಮ ಪತ್ನಿಗೆ. ಅವರು ಮುಂದುವರೆದು,

"ಈ ಊರಲ್ಲಿ ಇವರ ಕೈಗುಣವನ್ನು ಹೊಗಳದವರೇ ಇಲ್ಲ!" ಎಂದರು ತಮ್ಮ ಪತ್ನಿಗೆ.

"ಓ, ಹೀಗೇನು?" ಎಂದರು ಅವರ ಪತ್ನಿ.

"ಹಾಗೇನಿಲ್ಲ. ಸಾಹೇಬರು ಸುಮ್ಮನೆ ಪ್ರಶಂಸಿಸುತ್ತಿರುವರು" ಎಂದು ಹೇಳುತ್ತ ಅವಳ ಮುಖದತ್ತ ನೋಡಿದೆ. ಅವಳು ನನ್ನ ದೃಷ್ಟಿಯನ್ನು ತಪ್ಪಿಸಿದಳು. ಅವಳ ಮುಖದಲ್ಲಿ ಕಾತರಭಾವ ಸ್ಪಷ್ಟವಾಗಿ ಕಂಡು ಬರುತ್ತಿತ್ತು.

ದೇಸಾಯಿಯವರು, "ನಾನು ನಿನ್ನ ಬಗ್ಗೆ ಡಾಕ್ಟರರಿಗೆ ಹೇಳಿದೆ. ಅವರು......"

"ಸುಮ್ಮಸುಮ್ಮನೆ ಯಾಕೆ?" ಅವರ ಪತ್ನಿ ಅವರನ್ನು ಮಧ್ಯದಲ್ಲಿಯೇ ತಡೆದರು. ಅವಳ ಮುಖ ಈಗ ತುಂಬ ಆರಕ್ತವಾಗಿತ್ತು. ಅವಳ ಮುಖ ಆಗಾಗ ಆರಕ್ತಗೊಳ್ಳುತ್ತಲೇ ಇತ್ತು. ಬಹುಶಃ ಅಪರಿಚಿತರ ಎದುರು ಹಾಗೆ ಆಗುತ್ತಿದ್ದಿರಬೇಕು. ಯಾಕೆಂದರೆ ಕೆಲವರಿಗೆ ಅದು ರೂಢಿಯಾಗಿರುತ್ತದೆ.

ಆ ಸಲ ನಾನು ಅವಳನ್ನು ಅವಳ ಜಡ್ಡಿನ ಬಗ್ಗೆ ಏನೂ ಕೇಳಲಿಲ್ಲವಾದರೂ, ಆ ಭೆಟ್ಟಿ ನನಗೆ ತುಂಬ ಅನುಕೂಲವಾಯಿತು. ಮುಂದೆ ನಾಲ್ಕಾರು ಸಲ ನಾನು ಅವಳನ್ನು ಭೆಟ್ಟಿಯಾದೆ. ನಿಜವಾಗಿಯೂ ದೇಸಾಯಿಯವರ ಪತ್ನಿ ತುಂಬ ಸುಸಂಸ್ಕೃತ ಹೆಣ್ಣುಮಗಳು,

ನಯ – ವಿನಯಗಳಲ್ಲಿ ಪತಿಯನ್ನು ಮೀರಿಸುವಂಥವಳು. ಸಂಕೋಚ ತುಸು ಜಾಸ್ತಿ. ಬಹುಶಃ ಅದರಿಂದಲೇ ಇರಬೇಕು – ಅವಳ ಮಾತಿನಲ್ಲಿ ನಿಧಾನವಿತ್ತು. ಬಹು ಕೋಮಲ ಸ್ವಭಾವದ ಆ ಹೆಣ್ಣುಮಗಳ ಮುಖದಲ್ಲಿ ಮಾತ್ರ ಯಾವಾಗಲೂ ವಿಷಣ್ಣತೆ, ನಿರುತ್ಸಾಹ, ವ್ಯಾಕುಲತೆ- ಒಡೆದು ಕಾಣುತ್ತಿದ್ದುವು. ಅವಳ ಆ ವಿಶಾಲವಾದ ಕಣ್ಣುಗಳಲ್ಲಿ ಅಪಾರ ಸೌಂದರ್ಯಕ್ಕೆ ಬದಲಾಗಿ ವಿಹ್ವಲತೆ ಕಾಣುತ್ತಿತ್ತು. ಮನಸ್ಸು ಬಹು ಸೂಕ್ಷ್ಮ: ಒಂದು ಸಣ್ಣ ಮಾತು ಕೂಡ ಅವಳನ್ನು ವಿಚಲಿತಗೊಳಿಸುತ್ತಿತ್ತು. ಒಂದು ತೆರನಾದ Hyper-sensitive ಎನ್ನಬಹುದು. ಅದರಿಂದಲೇ ಕ್ಷಣಕ್ಷಣಕ್ಕೆ ಅವಳ ಮುಖವು ಭಾವೋದ್ರೇಕದಿಂದ ಆರಕ್ತಗೊಳ್ಳುತ್ತಿತ್ತು.

ಬಹು ಸುಸ್ವಾಭಾವಿಯಾದ ಆ ಹೆಣ್ಣುಮಗಳ ಬಗ್ಗೆ ನನ್ನಲ್ಲಿ ಒಂದು ತೆರನಾದ ಆತ್ಮೀಯತೆ ಉಂಟಾಯಿತು. ಬಹುಶಃ ಅದರ ಹಿನ್ನೆಲೆಯಲ್ಲಿ ಕನಿಕರ ಇದ್ದರೂ ಇದ್ದಿರಬಹುದು.

ಅವಳ ಮಾನಸಿಕ ಸ್ಥಿತಿಯಲ್ಲದೆ, ವೈದ್ಯಕೀಯ ದೃಷ್ಟಿಯಿಂದ ನಾನು ಕಂಡುಕೊಂಡುದು ಇಷ್ಟೇ; ಅವಳಲ್ಲಿ ಶಾರೀರಿಕ ದೋಷ ವಿಶೇಷವಾಗಿರಲಿಲ್ಲ; ಋತುಚಕ್ರ ನಿಖರವಾಗಿ ನಿಯಮಿತವಾಗಿ ಇದ್ದಿತು. ಆಗ ತುಸು ನೋವಿನ ತಕರಾರು ಇದ್ದರೂ ಅದೇನೂ ಅಷ್ಟು ಮಹತ್ವದ್ದೆಂದು ನನಗೆ ತೋರಲಿಲ್ಲ. ಮೈಯಲ್ಲಿ ತುಸು ನಿಶ್ಶಕ್ತಿಯೂ ಸೇರಿಕೊಂಡಿತ್ತು.

ಆದರೆ ಮೂರು ಮಕ್ಕಳ ತಾಯಿಗೆ ಒಮ್ಮೆಲೆ ಹಾಗೆ ಆಗಲು ಏನು ಕಾರಣವಾಗಿರಬಹುದು – ಎಂಬುದು ಮಾತ್ರ ನನಗೆ ತಿಳಿಯಲಿಲ್ಲ. ಮುಂದೆ ನಾನು ನೇಟ್ರಂಮೂರ, ಪಲ್ಸೇಟಿಲಾ, ಸೇಪಿಯಾ, ಇಗ್ನೇಶಿಯಾ ಅನಾಕಾರ್ಡಿಯಂ ಮೊದಲಾದವುಗಳನ್ನು ಕುರಿತು 'ಮಟೀರಿಯಾ ಮೆಡಿಕಾ' ಮೆಲುಕಾಡಿಸುತ್ತಲೇ ಇದ್ದೆ. ಕೆಂಟ, ನ್ಯಾಶ್, ಕ್ಲಾರ್ಕ, ಅಲೆನ್, ಲಿಪ್ಪೆ, ಮೊದಲಾದವರ ಗ್ರಂಥಗಳನ್ನು ಪುನಃ ಪುನಃ ತಿರುವಿ ಹಾಕಿದೆ.

ನನ್ನ ಪ್ರಯತ್ನ ವ್ಯರ್ಥವಾಗಲಿಲ್ಲ. ಆ ಒಂದೂವರೆ ವರ್ಷದಲ್ಲಿ ಅವಳಿಗೆ ನನ್ನ ಔಷಧದಿಂದ ಬಹಳಷ್ಟು ಗುಣವಾಯಿತು. ಪ್ರತಿ ರವಿವಾರ ಸಾಯಂಕಾಲ ದೇಸಾಯಿಯವರು ತಪ್ಪದೆ ನನ್ನ ಕಡೆಗೆ ಔಷಧಕ್ಕಾಗಿ ಬರುತ್ತಿದ್ದರು. ಈಗ ಅವರಿಗೆ ನನ್ನಲ್ಲಿ ಹೆಚ್ಚಿನ ಭರವಸೆ, ವಿಶ್ವಾಸ ಉಂಟಾಗಿದ್ದುವು. ಆದರೆ ನನಗೇ ಅಷ್ಟು ತೃಪ್ತಿಯಾಗಿರಲಿಲ್ಲ. ದೇಸಾಯಿಯವರ ಪತ್ನಿಗೆ ಹದಿನೈದಾಣೆ ಗುಣವಾಗಿದ್ದರೂ ಹದಿನಾರಣೆ ಯಾಕೆ ಆಗಬಾರದು – ಎಂದು ನನ್ನ ಪ್ರಶ್ನೆಯಾಗಿತ್ತು. ನಾನು Similimum ಹುಡುಕುತ್ತಲೇ ಇದ್ದೆ!

ಹಾಗಿರುವಾಗಲೇ ದೇಸಾಯಿಯವರಿಗೆ ನಮ್ಮೂರಿಂದ ವರ್ಗವಾಯಿತು. ನಾನು ಅವರನ್ನು ಸಹಕುಟುಂಬ ಚಹಕ್ಕೆ ಕರೆದಿದ್ದೆ. ಅವರೂ ನನ್ನನ್ನು ಊಟಕ್ಕೆ ಆಮಂತ್ರಿಸಿದ್ದರು. ಅಂದು ತಿರುಗಿ ಬರುವಾಗ ದೇಸಾಯಿಯವರು ನನ್ನ ಕೈಯಲ್ಲಿ ಒಂದು ಪಾಕೀಟು ಕೊಡಬಂದರು. ಅದರಲ್ಲಿ ಏನಿರಬಹುದೆಂದು ನಾನು ಕೂಡಲೇ ಊಹಿಸಿ ನಿರಾಕರಿಸಿದೆ.

"ಇಲ್ಲ ಮೂರ್ತಿಯವರೇ, ನೀವು ದಯವಿಟ್ಟು ಇದನ್ನು ಸ್ವೀಕರಿಸಿರಿ. ಇದು ಹೂವಲ್ಲ; ಹೂವಿನ ಪಕಳೆ. ನೀವು ಇದನ್ನು ಸ್ವೀಕರಿಸದಿದ್ದರೆ ನಮಗೆ ಕೆಡುಕೆನಿಸುವದು" ಎಂದರು ದೇಸಾಯಿಯವರು.

ಏನು ಹೇಳಿದರೂ ನಾನು ಒಪ್ಪೆನ್ನಲಿಲ್ಲ. ನನ್ನನ್ನು ಮನೆಗೆ ಬೀಳ್ಕೊಡುವಾಗ ಅವರಿಬ್ಬರ ಹೃದಯ ತುಂಬಿಬಂದಿತ್ತು. ನನಗೂ ತುಸು ಕೆಡುಕೆನಿಸಿತು. ಈಗ ನಮ್ಮಲ್ಲಿ ಕೇವಲ ಡಾಕ್ಟರ – ಪೇಶಂಟ ಸಂಬಂಧ ಉಳಿದಿರಲಿಲ್ಲ. ಹೆಚ್ಚಿನ ಸ್ನೇಹ ಬೆಳೆದಿತ್ತು. ಆದರೆ ಜೀವನದಲ್ಲಿ ಎಂಥ ಸ್ನೇಹಿತರನ್ನೂ ಅಗಲುವ ಪ್ರಸಂಗ ಬಂದೇಬರುವುದಲ್ಲ!

* * * *

ಸುಮಾರು ಮೂರು – ಮೂರೂವರೆ ತಿಂಗಳ ನಂತರ ದೇಸಾಯಿಯವರಿಂದ ನನಗೆ ಪೋಸ್ಟಿನಿಂದ ರಜಿಸ್ಟರ ಪಾಕೀಟು ಬಂದಿತು. ಅಂದು ನಿರಾಕರಿಸಿದ್ದಕ್ಕೆ ಇವರು ಮತ್ತೆ ಹಣವನ್ನೇ ಕಳಿಸಿದ್ದಾರೆಂದು ಒಮ್ಮೆಲೇ ನನಗೆ ತೋರಿತು. ಅದನ್ನು ಸ್ವೀಕರಿಸದೆ ಹಾಗೆಯೇ ತಿರುಗಿ ಬಿಡಬೇಕೆ? ಎಂದು ಯೋಚಿಸಿದೆ.

ಆದರೆ ನನ್ನ ಮನೆಯವಳು, "ಹಾಗೆ ಯಾಕೆ ತಿರುಗಿ ಬಿಡುತ್ತೀರಿ? ತಗೊಂಡು, ಮತ್ತೆ ಬೇಡವೆಂದರೆ ತಿರುಗಿ ಕಳಿಸಬಹುದಲ್ಲ?" ಎಂದಳು.

ಅವಳದು ಬಹು ಚತುರ ಬುದ್ಧಿ. ಒಮ್ಮೆ ತೆಗೆದುಕೊಂಡ ಮೇಲೆ (ದೊಡ್ಡ ಹಣವಿದ್ದರೆ ಬಹುಶಃ ಆಕರ್ಷಿತನಾಗಿ) ನಾನು ಮತ್ತೆ ಹಿಂದಿರುಗಿಸದೆಯೂ ಇರ



ಬಹುದು. ಅಲ್ಲದೆ, ಹಾಗೆ ಸ್ವೀಕರಿಸಿದರೂ ಅದರಲ್ಲಿ ತಪ್ಪೇನು ಬಂತು! ಔಷಧಕ್ಕಾಗಿ ಹೋಮಿಯೋ ಪುಸ್ತಕ ಮೊಪಲಾದವುಗಳಿಗಾಗಿ ಹಣ ಖರ್ಚು ಮಾಡಿರುವುದಿಲ್ಲವೇ? ಅದಕ್ಕೂ ಹೆಚ್ಚಾಗಿ ನನ್ನ ಅಮೂಲ್ಯವೇಳೆಯನ್ನು ನಾನು ಪೇಶಂಟುಗಳಿಗಾಗಿ ಕಳೆದಿರುವುದಿಲ್ಲವೇ? ...ಅದೇನೋ ನಿಜವೇ. ನಾನು ಕೆಂಟನ 'ಲೆಕ್ಚರ್ಸ್' ಓದುತ್ತ ಕುಳಿತಾಗ ಎಷ್ಟೋ ಸಲ ಅವಳ ಸಿನೇಮಾ ಕಾರ್ಯಕ್ರಮಕ್ಕೆ ಸೊನ್ನೆ ಬಿದ್ದಿತ್ತು!

"ಆಗಲಿ" ಎಂದು ನಾನು ಒಪ್ಪಿದೆ. ಪಾಕೀಟಿನಲ್ಲಿ ಇರುವುದಾದರೂ ಏನು? ನೋಡೋಣ - ಎನ್ನುವುದೇ ನನ್ನ ಮುಖ್ಯ ಉದ್ದೇಶವಾಗಿತ್ತು. ಅದರಲ್ಲಿ ಹಣವೇ ಇದೆಯೆಂದು ಖಚಿತವಾಗಿ ಹೇಗೆ ಹೇಳುವುದು?

ಹೌದು; ನನ್ನ ಊಹೆಯೇ ಸರಿಯಾಯಿತು.

ಪಾಕೀಟು ಒಡೆದು ನೋಡಿದರ ಅದರಲ್ಲಿ ಬ್ಯಾಂಕಿನ ಚೆಕ್ಕು ಇರಲಿಲ್ಲ; ಕೇವಲ ಒಂದು ಪತ್ರವಿತ್ತು. ಆದರೆ ದೇಸಾಯಿಯವರು ಪತ್ರವನ್ನು ಯಾಕೆ ರಜಿಸ್ಟರ ಮಾಡಿದರೆಂದು ನನಗೂ ಅರ್ಥವಾಗಲಿಲ್ಲ. ಆದರೆ ಅದು ಯೋಗ್ಯವೇ ಆಗಿತ್ತು. ಅವರು ಪತ್ರದಲ್ಲಿ ನನ್ನ ಮುಂದೆ ತಮ್ಮ ಹೃದಯವನ್ನೇ ತೆರೆದು ತೋರಿಸಿದ್ದರು. ಅವರು ಎಂದೂ ಯಾರಿಗೂ ಹೇಳದ ತಮ್ಮ ಜೀವನದ ಅತ್ಯಂತ ರಹಸ್ಯ ವಿಷಯವನ್ನು ನನಗೆ ತಿಳಿಸಿದ್ದರು. ಆ ಪತ್ರ ಬೇರೆಯವರ ಕೈಗೆ ಸಿಗಬಾರದೆಂದು ಅವರು ಭಾವಿಸಿದ್ದರಲ್ಲಿ ತಪ್ಪೇನೂ ಇರಲಿಲ್ಲ.

ಈಗ, ಆ ಪತ್ರವನ್ನು ನಾನು ಇಲ್ಲಿ ಜಾಹೀರ ಪಡಿಸುವುದು ಸಭ್ಯತೆಯೇ?- ಎನ್ನಬಹುದು ನೀವು ಆದರೆ ನಾನು ಅಂಥ ಅಸಭ್ಯತೆಯನ್ನು ತೋರಲಿಲ್ಲ. ಅದು ರಹಸ್ಯವಾಗಿಯೇ ಉಳಿಯುತ್ತದೆ. ಯಾಕೆಂದರೆ ನಾನು ನಿಮಗೆ 'ದೇಸಾಯಿ' ಎಂದು ನೆ... ವ್ಯಕ್ತಿಯ ನಿಜವಾದ ಹೆಸರು ಬೇರೆಯೇ ಇದೆ. ಈಗ ನಾನು ನಿಮಗೆ ಅವರ ಪತ್ರವನ್ನು ಕೊಡುತ್ತೇನೆ; ಆದರೆ ಅವರ ನಿಜವಾದ ಹೆಸರನ್ನು ಮಾತ್ರ ಬಿಟ್ಟುಕೊಡುವುದಿಲ್ಲ.

ದೇಸಾಯಿಯವರು ನಮ್ಮೂರಿಂದ ಹೋಗುವಾಗ ನಾನು ಅವರ ಪತ್ನಿಗೆ ಕೊಟ್ಟಿದ್ದ ಆ ಅಧಿಕ ಶಕ್ತಿಯ ಒಂದೇ ಒಂದು ಡೋಜಿನಿಂದ ಅವರಿಗೆ ಸಂಪೂರ್ಣ ಗುಣವಾಗಿದೆಯೆಂದು ಅತಿ ಸಂತೋಷದಿಂದ ತಿಳಿಸಿದ್ದರು. ಮತ್ತು ತಮ್ಮ ಅನಂತ ಕೃತಜ್ಞತೆಗಳನ್ನೂ ವ್ಯಕ್ತಪಡಿಸುತ್ತ,

"......ಆದರೆ ನಾನು ತಮಗೆ ಮೋಸ ಮಾಡಿದೆನೆಂದು ನನ್ನ ಮನಸ್ಸು ತಿನ್ನುತ್ತಿದೆ. ಅಂದು ನೀವು ಕೇಳಿದ ಒಂದು ಪ್ರಶ್ನೆಗೆ ನಾನು ಉತ್ತರ ಗೊತ್ತಿಲ್ಲ ಎಂದು ಸುಳ್ಳು ಹೇಳಿದ್ದೆ. ತಮ್ಮಂಥ ಹಿತಚಿಂತಕರ ಮುಂದೆಯೂ ನಾನು ಸತ್ಯವನ್ನು ಹೇಳಲಿಲ್ಲವಲ್ಲ ಎಂದು ನನಗೆ ಈಗ ಬಹಳ ವಿಷಾದವೆನಿಸುತ್ತದೆ. ಈಗ ನಾನು ಪ್ರಾಂಜಲವಾಗಿ ಎಲ್ಲವನ್ನೂ ಹೇಳಿಬಿಡುತ್ತೇನೆ. ಇದು ಹೆಚ್ಚಾಗಿ ನನ್ನ ಆತ್ಮತೃಪ್ತಿಗಾಗಿಯೇ ಎನ್ನಬಹುದು...

ನಮಗೆ ಮೂರು ಮಕ್ಕಳಾದ ಕೂಡಲೇ ನಾವಿಬ್ಬರೂ 'ಸಾಕು' ಎಂದು ನಿರ್ಧರಿಸಿದೆವು. ಆದರೆ ಅವಳಿಗೆ ಆಪರೇಶನ್‌ಗೆ ಧೈರ್ಯ ಸಾಲಲಿಲ್ಲ. ನಾನೇ Vasectomy ಮಾಡಿಸಿಕೊಂಡೆ. ಮುಂದೆ ನಾಲ್ಕು ವರ್ಷ ಎಲ್ಲವೂ ಸರಿಯಾಗಿಯೇ ಇತ್ತು.

ಅವಳ ಋತುಚಕ್ರ ತೀರ ನಿಯಮಿತವೆಂಬುದು ನಿಮಗೂ ತಿಳಿದೇ ಇದೆಯಲ್ಲ. ಆದರೆ ಒಂದು ಸಲ ಮೂವತ್ತು ದಿನಕ್ಕೆ ಬದಲಾಗಿ ಮೂವತ್ತೇಳು ದಿನಗಳಾದರೂ ಅವಳು ಹೊರಗಾಗಲಿಲ್ಲ. ಅವಳು ಅದನ್ನು ನನಗೆ ತಿಳಿಸಿದಾಗ ನಾನು ಡಾಕ್ಟರರಿಗೆ ತೋರಿಸೋಣವೇ ಎಂದೆ.

"ಅವಳು ಯಾತಕ್ಕೆ? ಇನ್ನೆರಡು ದಿನ 'ನೋಡೋಣ'" ಎಂದಳು.

"ಮತ್ತೆ, ಎಂಥ ಆಪರೇಶನ್ನು?" ನಾನು ಸಹಜವಾಗಿ ನಗುತ್ತ ನುಡಿದೆ.

ಆದರೆ ಈ ಮಾತನ್ನು ಕೇಳುತ್ತಲೇ ಅವಳ ಮುಖ ಒಮ್ಮೆಲೆ ವಿವರ್ಣವಾಯಿತು. ಅವಳು ಜರ್ರನೆ ಇಳಿದು ಹೋದಳು. ಅವಳ ಮುಖದಿಂದ ಮಾತೇ ಹೊರಡಲಿಲ್ಲ.

ಅವಳು ನನ್ನ ಮುಖವನ್ನು ನೋಡಲಾರದೆ ಅಲ್ಲಿಂದ ಹೊರಟು ಹೋದಳು.

ಆಗ ಮಾತ್ರ, ನನ್ನ ಸ್ಥಿತಿ ಇನ್ನೂ ವಿಚಿತ್ರವಾಯಿತು. ಅವಳ ವರ್ತನೆ ನನಗೆ ಒಗಟಾಯಿತು... ನಿಜವಾಗಿ ಹೇಳಬೇಕೆಂದರೆ, ಮೂರ್ತಿಯವರೇ, ನನ್ನ ತಲೆಯಲ್ಲಿ ರಾಕ್ಷಸ ಸೇರಿಕೊಂಡ!

ಆ ಎರಡು ದಿನ ಇಬ್ಬರಿಗೂ ಅಸಹನೀಯವಾದವು! ಮೂರನೆಯ ದಿನ ನಾನು ಕೋರ್ಟಿನಿಂದ ಮನೆಗೆ ಬರುವಷ್ಟರಲ್ಲಿ ಅವಳು 'ಹಾಗೆ' ಆಗಿಬಿಟ್ಟಿದ್ದಳು.

ಅವಳು ಆಗ ಏನೆಂದು ಬಡಬಡಿಸುತ್ತಿದ್ದಳು?- ಎಂದು ನೀವು ಕೇಳಿದ್ದೀರಲ್ಲವೇ?

"ನಾನು ಕಡಿಗಿ ಆದೆ! ಹೋ ! ! ನಾನು ಕಡಿಗಿ ಆದೆ!" ಎಂದೇ ಅವಳು ಪದೇ ಪದೇ ಹೇಳುತ್ತಿದ್ದಳು. ಹೇಳುತ್ತಿದ್ದಳೇನು, ಹಾಗೆ ಚೀರಿಕೊಳ್ಳುತ್ತಿದ್ದಳು!... ಮುಂದೆ ಕೂಡ ಅವಳು ಬಹು ದಿನ ಅದೇ ಮಾತನ್ನು ಅಂದುಕೊಳ್ಳುತ್ತಲೇ ಇದ್ದಳು.

ಅಂದು ಮನೆಯಲ್ಲಿ ನಮ್ಮ ತಾಯಿಯವರಿದ್ದರು. ಅವರಿಗೆ ಅವಳ ವರ್ತನೆ ಮತ್ತು ಮಾತುಗಳು ಅರ್ಥವೇ ಆಗಲಿಲ್ಲ.

ನನಗೆ ಮಾತ್ರ ಹೃದಯದಲ್ಲಿ ತಿವಿದಂತಾಯಿತು. ನನ್ನ ಮಾತಿನಿಂದ ಅವಳ ಮನಸ್ಸು ಎಷ್ಟು ಆಘಾತಗೊಂಡಿತ್ತೆಂದು ಆಗ ನನಗೆ ತಿಳಿಯಿತು. ಎರಡು ದಿನಗಳ ನಂತರ ಅದು ಸ್ಫೋಟವಾಗಿತ್ತು!

ಮುಂದಿನದೆಲ್ಲ ನಿಮಗೆ ಗೊತ್ತೇ ಇದೆಯಲ್ಲ?

ಬೇರೆಯವರ ದೋಷಗಳನ್ನು ನಿರ್ಣಯಿಸುವ ನ್ಯಾಯಾಧೀಶ ನಾನು ಅವಳಿಗೆ ಅಪಾರ ಅನ್ಯಾಯವನ್ನು ಎಸಗಿದ್ದೆ. ಆದರೆ ಮೂರ್ತಿಯವರೇ, ನಾನೇನು ಹಾಗೆ ಬೇಕೆಂತಲೇ ಅಂದಿದ್ದನೇ? ಅವಳಲ್ಲಿ ನನಗೆ ಅಪಾರ ವಿಶ್ವಾಸವಿತ್ತು. ನಾನು ಸಹಜವಾಗಿ ನುಡಿದೆ; ಆದರೆ ಆ ಮಾತೇ ಅವಳಿಗೆ ಶಲ್ಯವಾಗಿತ್ತು.

ಮುಂದೆ, ಇದನ್ನು ಅವಳಿಗೆ ಎಷ್ಟೋ ಸಲ ತಿಳಿಸಿ ಹೇಳಿದೆ. ಅವಳೂ ನಂತರ ನನ್ನನ್ನು ನಂಬಿದಳು. ಆದರೂ ಅವಳ ಮನದ ಒಂದು ಮೂಲೆಯ ಗಾಯವು ಮಾತ್ರ ಉಳಿದೇ ಬಿಟ್ಟಿತ್ತು.

ನೀವು ದೇವರಂತೆ ನನಗೆ ಭೆಟ್ಟಿಯಾದಿರಿ. ಅವಳನ್ನು ಗುಣಪಡಿಸಿದಿರಿ.

ಅಂದು ನಾನು ನಿಮಗೆ ಎರಡು ನೂರು ರೂಪಾಯಿಗಳನ್ನು ಕೊಡಮಾಡಿದ್ದೆ. ನೀವು ಸ್ವೀಕರಿಸಲಿಲ್ಲ. ಸರಿ. ನಿಜವಾಗಿಯೂ ಮೂರ್ತಿಯವರೇ, ನಿಮ್ಮ ಉಪಕಾರವನ್ನು ನಾನು ಹಣದಿಂದ ತೀರಿಸಬಲ್ಲೆನೆ?"

ಎಂದು ದೇಸಾಯಿಯವರು ಪತ್ರವನ್ನು ಮುಗಿಸಿದ್ದರು.

ಮಹಾಪ್ರಸ್ಥಾನದ ಯಾತ್ರೆಗೆ ಹೊರಟ ಜೀವಿಗೆ ಹೆಂಡತಿ, ದುಡ್ಡು, ಗೆಳೆಯ ಯಾರ ಜೊತೆಯೂ ಇಲ್ಲ. ಆತ ಏಕಾಕಿ. ಆದರೆ ಕೈತಪ್ಪಿ ಮಾಡಿದ ಪುಣ್ಯ-'ಸತ್ಕರ್ಮ'-ವಷ್ಟೇ ಮಹಾಪ್ರಸ್ಥಾನದ ದಾರಿಯಲ್ಲಿ ಊರುಗೋಲು. ಜೀವ(ಣ್ಣ!)ನ ವೇದಾಂತದ ರೂಪಕವಿದು.

ಜೀವಿ ಕುಲಕರ್ಣಿ

# ಜೀವಣ್ಣನ ಮಹಾಪ್ರಸ್ಥಾನ

## ಗೀತನಾಟಕ

**ಪಾತ್ರಗಳು**

| | |
|---|---|
| ಸೂತ್ರಧಾರ | ದುಡ್ಡಪ್ಪ |
| ಜೀವಣ್ಣ | ಹೆಂಡತಿ |
| ಸಾವಣ್ಣ | ಗೆಳೆಯ |

ಸತ್ಕರ್ಮ



**( ತೆರೆ ಮುಚ್ಚಿರುವಾಗಲೇ ಪ್ರಾರ್ಥನೆ )**

ಸಿದ್ಧಿವಿನಾಯಕ ನಮೋಸ್ತುತೇ
ವಿದ್ಯಾಪ್ರದಾಯಕ ನಮೋಸ್ತುತೇ
ಸರ್ವವಿಘ್ನಗಳ ಪರಿಹರಿಸುತ ಜೀ-
ವಿಗಳನು ರಕ್ಷಿಸು ನಮೋಸ್ತುತೇ ||೧

**ಸೂತ್ರಧಾರ:**

ನಾವು ಇಂದು ಆಡುತಿಹೆವು ನಮ್ಮ-ನಿಮ್ಮ ನಾಟಕ
ಆಡಿಸುವನು ಸೂತ್ರ ಹಿಡಿದು ಕಾಣದಿರುವ ಆಟಕ ||ಪ||
ನೀರೊಳಿದ್ದ ರುಚಿಯ ತೆರದಿ ಕಾಣದಂತೆ ಬೆರೆತಿಹ
ದಾಳಿ ದಿಕ್ಕು ತೋರಿದಂತೆ ಕಾಣದೇನೇ ತೋರಿಹ



ಹೂವಿನಲ್ಲಿ ಗಂಧ ಅಡಗಿದಂತೆ ಅವನು ಅಡಗಿಹ
ನಮ್ಮ ಎಲ್ಲ ಕಾರ್ಯದಲ್ಲಿ ತಿಳಿಯದಂತೆ ತೊಡಗಿಹ
ನಾವು ಇಂದು ಆಡುತಿಹೆವು......

ಆದಿ ಇಲ್ಲ ಅಂತವಿಲ್ಲ ಮಧ್ಯ ಪಡೆದ ಜೀವನ
ಮೊಳೆತು ಬೆಳೆತು ಹೂತು ಕಾತು ಹಣ್ಣಾಗುವ ಕಾನನ.
ತಿಪ್ಪೆಯಲ್ಲಿ ಬಿದ್ದ ಗೊರಟ ಬೆಳೆಯೆ ಪಡೆಯೆ ಯೌವನ
ಕಸವು–ರಸವು ಆಗುವಂಥ ಚೋದ್ಯವಿದುವೆ ಜೀವನ.
ನಾವು ಇಂದು ಆಡುತಿಹೆವು......

ಚಿಕ್ಕ ಬಾಳಿನಲ್ಲಿ ನೀನು ನೆಗೆಯುತಿರುವೆ ಮಾನವಾ
ಮಂಗಳದಾ ಅಂಗಳೇರು ಆಗಬೇಡ ದಾನವಾ
ಗಾಳಿಪಟವು ಎಷ್ಟು ದೂರ ಹಾರಿಹೋದರೇನದು
ಸೂತ್ರ ಹರಿಯೆ ಗಿರಿಕೆಹೊಡೆದು ತಿರುಗುವಂಥ ಬಾಳಿದು.
ನಾವು ಇಂದು ಆಡುತಿಹೆವು.........

( ಸೂತ್ರಧಾರನ ನಿಷ್ಕ್ರಮಣ )

[ ಜೀವಣ್ಣನ ಪ್ರವೇಶ. ಹತ್ತು ಬೆರಳುಗಳಲ್ಲಿ ಉಂಗುರ. ಸಿಲ್ಕ ಜುಬ್ಬ. ಮಲ್ ಧೋತರ. ಶ್ರೀಮಂತಿಕೆಯ ನಡಿಗೆ. ಮೀಸೆ ತೀಡುತ್ತ ಸ್ವಸ್ತುತಿಗಾನ ಮಾಡುವನು. ]

ನನ್ನ ಹೆಸರು ಜೀವಣ್ಣ! ಈ ಊರಿನ ಕಾಮಣ್ಣ
ನನ್ನ ಮುಂದ ಯಾರಣ್ಣ? ॥ಪ॥

ನಾನು ಕರೆದದ್ದೇ ಪೂರ್ವ। ನಾನು ನಡೆದದ್ದೇ ಪರ್ವ
ನಾನು ತುಳಿದದ್ದೇ ದಾರಿ। ನಾನು ಒಲಿದವಳೇ ನಾರಿ,

ನಾನು ಹಿಡಿದದ್ದೇ ಆಜ್ಯ! ನಾನು ಬಿಟ್ಟದ್ದೇ ತ್ಯಾಜ್ಯ
ನಾನು ಹೇಳಿದ್ದೇ ವೇದ! ನಾನು ತಿಂದದ್ದೇ ಸ್ವಾದ.

ನಾನು ಹಿಡಿದದ್ದೇ ಸೂತ್ರ। ನಾನು ತೀಡಿದ್ದೇ ಚಿತ್ರ.
ನನ್ನ ಗೆಳೆಯಗೆ ಕಲ್ಯಾಣ। ನನ್ನ ವೈರಿಗೆ ಇದೊ ಮರಣ.

[ ಯಮುವಂತಹ ವೇಷ ಧರಿಸಿದ ಸಾವಣ್ಣನು ಪ್ರವೇಶಿಸುತ್ತಾನೆ. ನೀಲಿ ಬಣ್ಣ. ಕೆಂಪು ಕಣ್ಣು. ಕಿವಿಯಲ್ಲಿ ಕುಂಡಲ. ಇವನನ್ನು ಕಂಡು ಜೀವಣ್ಣನು ಹೆದರಿ ಹಿಂದೆ ಸರಿಯುತ್ತಾನೆ. ಓಡಲು ಅನುವಾಗುವನು. ]

ಸಾವಣ್ಣ :

ಬೆದರಬೇಡ ಓಡಬೇಡ ಅಣ್ಣ ಜೀವಣ್ಣ
ನಿನ್ನ ಹುಡುಕಿಕೊಂಡು ಬಂದೆ ನಾನು ಸಾವಣ್ಣ ॥ಪ॥

ಹಾಗೆ ಅಂದ್ರೆ ಅವಳಿ-ಜವಳಿ ನಾವು-ನೀವಣ್ಣ
ನಿನ್ನ ಜೊತೆಗೆ ನಾನು ಹುಟ್ಟಿ ಇಲ್ಲಿ ಬಂದ್ನೆಣ್ಣಾ ॥ಅನುಪಲ್ಲವಿ॥

ವಸ್ತು ಇರಲು ನೆರಳು ಹ್ಯಾಗೆ ನಾನು–ನಿನಗಣ್ಣ
ನಿನ್ನ ಮೂಗಿನ ತುದಿಯ ಮ್ಯಾಲ ಇರ್‍ತಾ ಇದ್ನೆಣ್ಣಾ.
ನಾಸಿಕಾಗ್ರದ ಕಡೆಗೆ ಚಿತ್ತ ಇಟ್ಟು ನೋಡಿದ್ರೆ
ಧ್ಯಾನದಲ್ಲಿ ಒಂದ್-ಹತ್-ನೂರು ಕಮಲ ಕಂಡಿದ್ರೆ,

ನಿನ್ನ ಬಾಳು ಬದಲಾಗ್ತಿತ್ತು, ಮುಕ್ತಿ ದೊರಿತಿತ್ತು,
ಹತ್ತು ಅಂಗುಲ ಮೇಲೆ ಬ್ರಹ್ಮರಂಧ್ರ ತೆರಿತಿತ್ತು,
ಅದೇ ಮೋಕ್ಷದ ದಾರಿ, ಅದುವೆ ಬೆಳಕಿಂಡ್ಯಾಗಿತ್ತು,
ಹಿಂದಿನ ಜನ್ಮದ, ಹಿಂದಿನ ಕರ್ಮದ ಪರಲು ಹರೀತಿತ್ತು.

ನೀನು ಮಾತ್ರ ನನ್ನ ಮರೆತು ರಾಜನಾಗಿದ್ದಿ
ನನ್ನ ನೆನಪು ಇದ್ದರೆ ಮಾತ್ರ ಜ್ಞಾನ ಪಡೆತಿದ್ದಿ;
ಜ್ಞಾನದಿಂದ ವೈರಾಗ್ಯವನು ಮೆಚ್ಚಿ ಒಲಿಯುತಿದ್ದಿ
ಹಾಗೆ ಇದ್ರೆ ಪಾಪದ ಗಂಟನು ಕಡಿಮೆ ಮಾಡುತಿದ್ದಿ.

ಈಗ ಮಾತ್ರ ಮುಗಿಯುದಂಥಾ ಯಾತ್ರೆ ಕಾಯ್ದಿಹುದು
ನುಂಗಿಕೊಂಡ್ರು ತೀರದಂಥ ವ್ಯಥೆಯು ಕಟ್ಟಿಹುದು.
ದೇವದೇವನ ಮರೆತೆ ನೀನು ಮೃಣ್ಮಯ ದೇಹದಲಿ
ಸಿದ್ಧನಾಗು ಪಯಣಕಾಗಿ ಈಗಲೆ ತ್ವರಿತದಲಿ.

ಜೀವಣ್ಣ:

ತೊಲಗೆಲವೊ ಠಕ್ಕ, ನಾನೂ ಇರುವೆ ಪಕ್ಕಾ.
ಸೇರ್ಗೆ ಸವ್ವಾಸೇರು, ತಿಳಿದಿಲ್ಲವೆ ನಾನಾರು
ನಿನ್ನ ನಡತೆಯು ಹೊಲ್ಲ, ತುಚ್ಛ ನಿನ್ನಯ ಸೊಲ್ಲ
ನಿನ್ನ ನಿಜದಾ ಸುದ್ದಿ, ಹೊರತೆಗೆವೆ ಗುದ್ದಿ.

ಸಾವಣ್ಣ:

ನೀನಿಲ್ಲೆ ಬಿದ್ದಿ, ಪಾತಾಳಕೆ ಬಿದ್ದಿ.

ಜೀವಣ್ಣ:

ಯಾರ ದೂತನು ನೀನು ಹೊಸ ಮುಖದ ಬಂಟ
ಯಾರ ಊಳಿಗದವನು ಕಪ್ಪಗಿಹ ತುಂಟ
ನನ್ನ ಹಿಂಬಾಲಿಸುವೆ ಏನಿಹುದು ಕಜ್ಜ
ನನಗೆ ಭಯವಾಗುತಿದೆ ಕತ್ತಲೆಯ ಅಜ್ಜ
ಯಾವ ನಾಡಿನ ಪುರುಷ ನೀನಾಗಿ ಬಂದೆ
ಯಾವ ಲೋಕದ ಸುದ್ದಿ ನೀ ಹೊತ್ತು ತಂದೆ.



ಸಾವಣ್ಣ:

ನಾವಿಬ್ಬರೊ ಒಂದೆ ತೆಂದೆಯಲಿ ಜನಿಸಿ
ಇಲ್ಲಿ ಬಂದೆವು ಇಳೆಗೆ- ನೀ ಅವನ ಮರೆತಿ
ಪಾಪ-ಪುಣ್ಯದ ಲೆಕ್ಕಪತ್ರಗಳ ಗಂಟು
ತೆಗೆದುಕೊ, ಹೊರಡಿನ್ನು ಹೊಡೆಯದಿರು ಪಂಟು.

ಜೀವಣ್ಣ:

ನಿಜವಾಗಿ, ನೀ ನನ್ನ ಸಾ... ಅಹುದೇ?

ಸಾವಣ್ಣ:

ನಿನ್ನ ಜೀವನ ರಾಗ ಸ-ರಿ-ಗ-ಮ-ಪ-ಧ-ನಿ-ಯಾಯ್ತು
ಮತ್ತೆ "ಸ" ಬಂತು 'ಸಂ' ಬಂತು 'ಯಮ' ಬಂತಿದೋ
ನನ್ನ ಸಂಯಮ ಮೀರಿ ನಿನ್ನನೆಳೆಯುವ ಪೂರ್ವ
ನೀನೆ ಹೊರಡಲು ಬೇಕು, ಯಾತ್ರೆ ನಡೆಸಲು ಬೇಕು

ಜೀವಣ್ಣ:

ನಿನಗೆ ಶರಣೆನ್ನುವೆನು, ನಿನ್ನಡಿಯ ಸೇವಿಪೆನು
ನಿನ್ನ ದಾಸನ ದಾಸನಾಗಲೂ ಸಿದ್ಧನಿಹೆ-
ನನ್ನಲಿಹ ಸಂಪತ್ತು, ಸರ್ವಸ್ವವನು ಕೊಡುವೆ
ಮತ್ತೆ ಬಾ, ತಡೆದು ಬಾ, ಸುತ್ತಿ ಬಾ, ಮರೆತು ಬಾ.

ಸಾವಣ್ಣ:

ಅಬಾಬಾ.....
ಹೇಸಿಕೆಯ ಹೇನೇ ನೀ ತಿಪ್ಪೆಯನು ಬಿಡುತಿಲ್ಲ
ಉಪ್ಪರಿಗೆಯಲ್ಲಿರುವ ತಿಮ್ಮಪ್ಪನೆಡೆಗೊಯ್ವ
ನನ್ನ ಯಾತ್ರೆಯ ಮಾರ್ಗ ಮಧ್ಯದಲಿ ಹೊಳೆಯಿಹುದು
ಬೆಂಕಿಯಾ ನದಿಯಿಹುದು, ಈಸಿ ದಾಂಟಲು ಬೇಕು.
ದೇಹಗಳ ಬಟ್ಟೆಗಳ ಸಂಪದವ ತೊರೆಯುತ್ತ
ದಾಟಿ ನಡೆಯಲು ಬೇಕು, ಒಂಟಿಯಾಗಲು ಬೇಕು
ಒಂಟಿ ಮರುಭೂಮಿಯಲಿ ಏಕಾಕಿ ನಡೆಯುತಿರೆ
ತನ್ನ ಬೆನ್ನಲಿ ತಾನು ನೀರಿಡುತಲಿಹುದು-
ತನ್ನ ಒಡಲಿನ ಮಧ್ಯೆ ಬುತ್ತಿಯನು ಕಟ್ಟಿಹುದು
ನೀನಾವ ಸರಕನ್ನು ಪಡೆದಿರುವೆ ಜೀವಣ್ಣ
ನಿನ್ನೊಡನೆ ತರುವಂಥ ಸಾಮಗ್ರಿ ಇದ್ದರೋ
ತ್ವರೆಯಿಂದ ಸಂಗ್ರಹಿಸು. ಒಂದು ದಿನ ನೀಡುವೆನು
ಇದೆ ನಿನ್ನ ಕೊನೆಯ ಪಯಣ!

ಜೀವಣ್ಣ:

ಯಾತ್ರೆಗಿದೊ ಸಿದ್ಧನಿಹೆ, ಪುರಳುವುದು ಯಾವಾಗ?

ಸಾವಣ್ಣ:

ಒಮ್ಮೆ ಹೊರಟರೆ ತಿರುಗಿ ಬರುವುದರ ಮಾತಿಲ್ಲ!
ನದಿ ಹರಿದು ಸಾಗರವ ಸೇರಿದಂತೆ
ಘಟ ಒಡೆದು ಮತ್ತೆ ಮಣ್ಣಾಗುವಂತೆ
ಬಿಟ್ಟ ಬಾಣವು ತಿರುಗಿ ಮರಳದಂತೆ-.......

ಜೀವಣ್ಣ:

ಅಂದರೆ? ನೀನಾರು? ಕರುಣೆ ಇಲ್ಲದ ಮರಾ?
ಅಂತವಿಲ್ಲದ ಕೂಪ, ಜೀವಜಾತದ ಶಾಪ?

ಸಾವಣ್ಣ:

ಹರಟಲಿಕೆ ಬಿಡುವಿಲ್ಲ, ಚರ್ಚೆಗಾಸ್ಪದವಿಲ್ಲ
ಮರುಕ ತೋರುತ ನಾನು, ಎಚ್ಚರವ ಕೊಡುತಿರುವೆ.

ನಂತರದಿ,
ಅಳುವಿಲ್ಲ, ಕರೆವಿಲ್ಲ, ಕಣ್ಣೀರ ಮಡುವಿಲ್ಲ,
ನಿನ್ನ ಪ್ರಸ್ಥಾನದಲಿ ನಿನಗೆ ಬೇಕಾದುದನು
ನೀನೀಗಲೇ ಬೇಗ ಸಂಗ್ರಹಿಸಿಕೋ–
ಒಂದು ದಿನ ನೀಡಿರುವೆ, ನೀನಾಗು ಬುದ್ಧ
ಚಿಂತೆಯಲ್ಲಿಯೆ ಮರೆತು ಆಗದಿರು ಬುದ್ದು.
ದೇವ-ದೇವನ ಆಜ್ಞೆ ಹೊತ್ತು ತಂದಿಹೆ ನಾನು
ಒಮ್ಮೆ ಹೋದರೆ ಮತ್ತೆ ಬರುವ ಹಾಗಿಲ್ಲ.
ಕೊನೆಯಸಲ ನೋಡಿಕೊೋ ನಿನ್ನ ಪ್ರೀತಿಯ ಜಗವ
ಕೊನೆಯ ಸಲ ಸಂಗ್ರಹಿಸು ನಿನ್ನ ಒಲವಿನ ಚೆಲವ.

( ತೆರಳುತ್ತಾನೆ )

**ಜೀವಣ್ಣ :**

( ಏಕಾಕಿಯಾಗಿ ದುಃಖ ಹಾಗು ಭ್ರಾಂತಿಗಳಿಂದ ತಳಮಳ ತಿರುಗುತ್ತಾನೆ. )

( ಈ ಹಾಡನ್ನು ಬೇರೆಯವರೂ ಹಾಡಬಹುದು, ಆಗ ಜೀವಣ್ಣ ಅಭಿನಯಿಸಬೇಕು. )

ಎದೆಯು ಬಡಿಯುತಿಹುದು ಎನುತ ಧಕ್ ಧಕ್ ಧಕ್ ಧಕ್
ಗಾಡಿ ಸದ್ದು ಕೇಳುತಿಹುದು ಚುಕ್‌ಭಕ್ ಚುಕ್‌ಭಕ್ ॥ಪಲ್ಲ॥

ಇದೇ ಇಹುದು ಕೊನೆಯ ಪಯಣ, ಅಜ್ಞರೆನ್ನುತ್ತಾರೆ ಮರಣ
ಸಾವು ಸತ್ಯವಿರಲು ಏನು ಹುಟ್ಟಿಬಂದ ಕಾರಣ? ॥ಅನುಪಲ್ಲವಿ॥

ಪಯಣದಲ್ಲಿ ನನ್ನ ಜೋಡಿ ಬರುವರನ್ನು ಕಾಣೆನಾ
ಒಂಟಿಯಾಗಿ ಒಬ್ಬನೇ ದೂರ ದೂರ ನಡೆಯೆ ನಾ
ಕಾಳರಾತ್ರಿಯಲ್ಲಿ ನಾನು ದಿಕ್ಕುದಾರಿ ತಿಳಿಯದೇ–
ಕೋಳಿಮರಿಯ ಪುಚ್ಚದಂತೆ ಗಾಳಿಯಲ್ಲಿ ಹಾರೆನಾ.
ಎದೆಯು ಬಡಿಯುತಿಹುದು...॥

ಕಣ್ಣಿನಲ್ಲಿ ನೀರು ಉಂಟು ಆದರೂನು ಬಾರದು
ಸಾಗರದಲಿ ಉಪ್ಪುನೀರು ನನ್ನ ತೃಷೆಯು ತೀರದು
ಸಾವಿನ-ಸರಿ ನೆನಪಾಗದೆ ಘೋರ ಪಾಪ ಮಾಡಿದೆ
ನಿಷ್ಪಾಪಿ ಜೀವಗಳನು ನಿರ್ದಯದಲಿ ಕಾಡಿದೆ.
ಎದೆಯು ಬಡಿಯುತಿಹುದು.॥

ಕತ್ತಲೆಯಲಿ ಚಲಿಸುವಾಗ ಮಕ್ಕಳ್ ಹೆದರುವಂತೆಯೇ
ಸಾವೆಂದೊಡೆ ಹೆದರುತಿಹುದು ನನ್ನ ಜೀವಚೇತನೆ.
ಈಗ ಅರಿವು ಪಡೆದ ನನಗೆ ತೀರದಂಥ ಯಾತನೆ
ಜನ್ಮ ಕಳಚಿ ಹೊಸ ಜನ್ಮವ ಹಡೆವ ಪ್ರಸವ-ವೇದನೆ,

## ದೃಶ್ಯ–೨

( ಜೀವಣ್ಣನು ನಿಸ್ತೇಜನಾಗಿ ಕುಳಿತಿದ್ದಾನೆ. ದುಡ್ಡಪ್ಪನು ಪ್ರವೇಶಿಸುತ್ತಾನೆ. ಪೈಜಾಮಾ ಅಂಗಿ ಟೊಪ್ಪಿಗೆ ಹಾಕಿದ್ದಾನೆ. ಅಂಗಿಯೇ ನೋಟಿನ ಡಿಝೈನ್ ಪಡೆದಿದೆ. )

**ದುಡ್ಡಪ್ಪ:**

ಏನು ನೆನೆದೆಯಾ ಜೀವಪ್ಪ!
ನಾನು ಬಂದೆನಿದೊ ದುಡ್ಡಪ್ಪ!

**ಜೀವಣ್ಣ :**

( ದುಃಖ ಒತ್ತರಿಸಿ ಬಳಲಿ ಕಣ್ಣೀರಿಡುವನು )

ಇಡೀ ಜನ್ಮದಲಿ ನಾನು ಮಾಡಿದೆನು ಬಿಡದೆ ನಿನ್ನ ಸೇವೆ.
ನಾನು ಭಾವಿಸಿದೆ ಎಲ್ಲ ಕಷ್ಟದಲಿ ನೀನೆ ಎನ್ನ ಕಾಯ್ವೆ
ನನಗೆ ಬಂದಿಹುದು ಘೋರವಾದ ಕರೆ, ನೋಯುವಂತೆ ಹರಣ.

ಮರೆತು ಕುಳಿತಿರಲು ಬಂದು ಯಾರೊ ಚೆನ್ನಾಗ ಗುಮ್ಮಿಧಾಂಗ
ಉಸಿರು-ಹಿಡಿಯೆ ಪಕ್ಕಡಿಯು ಕೀಲ ಒಮ್ಮೆಲೇ ಮುರಿದ ಹಾಂಗ
ಸಣ್ಣ ಕಂದನಿಗೆ ಹೊಟ್ಟೆ ಕಡಿದು ಹೇಳಲಿಕೆ ಬಾರದಂತೆ
ಬೇರು ನಾಲಗೆಯ ಕಿತ್ತುತಿಹುದು ನಾ ಉಸಿರಲಾರೆ ಚಿಂತೆ.

ನೀನು ಬಂದೊಡನೆ ನನ್ನ ನಾಡಿಯಲಿ ಬಡಿತ ಮರಳಿ ಬಂತು
ನನ್ನ ಕಷ್ಟದಲಿ ನನ್ನ ಚಿಂತೆಯಲಿ ಒಂದು ಧೈರ್ಯ ತಂತು
ನೀರಿನೊಳಗೆ ಮುಳು-ಮುಳುಗಿ ಸಾಯುವಗೆ ಫಲಕ-ತುಂಡು ನೀನು
ದೈವದಾಟದಲಿ ಒದೆಸಿಕೊಳ್ಳುವಾ ಚಿಕ್ಕ ಚೆಂಡು ನಾನು.

**ದುಡ್ಡಪ್ಪ:**

( ತನ್ನ ಮಹಿಮೆ ಹೇಳುತ್ತ ಕುಣಿಯುವನು )

ಅಯ್ಯೊ ಮರುಳೆ ನೀ ಚಿಂತೆ ಮಾಡದಿರು
ನಾನು ಇರುವವರೆಗೆ
ನನ್ನ ದಾಸ ನೀ ನಿನ್ನ ದಾಸ ನಾ
ಸ್ನೇಹ ಇರುವವರೆಗೆ
ನೀನು ನನ್ನ ತ್ಯಜಿಸಿಲ್ಲ ಅದಕ್ಕೆ ಓ–
ಗೊಟ್ಟೆ ನಿನ್ನ ಕರೆಗೆ



ನಿನ ಆಜ್ಞೆಯನು ಪಾಲಿಸಿದೆನು
  ಪಾಲಿಸುವೆ ಕೊನೆಯವರೆಗೆ.
ಅಲ್ಲಾದ್ದೀನನ ದೀಪದಂತೆ ಹೊಸ
  ಸೃಷ್ಟಿ ತಂದು ಇಡುವೆ
ನೀನು ಬಯಸಿದಾ ಮಾನವತಿಯ
  ಶೀಲವನು ದೋಚಿಬಿಡುವೆ.
ದೈತ್ಯನಂತೆ-ಬಡಬಗ್ಗರ ರಕ್ತವ
  ಹಿಂಡಿ ಹೀರಿಬಿಡುವೆ
ನಿನ್ನ ಬೊಕ್ಕಸವ ತುಂಬಿ ನಾನು
  ಸಂತೃಪ್ತಿ ತಂದುಕೊಡುವೆ.

ನಾನು ಮಾಡದಿಹ ಕಜ್ಜವಿದೆಯೆ
  ನಮ್ಮೀ ಪ್ರಪಂಚದಲ್ಲಿ
ಹಳ್ಳಿಯಿಂದ ದಿಳ್ಳಿಗೂ ವ್ಯಾಪಿಸಿಹೆ
  ಲಂಚ-ಶಾಖೆಯಲ್ಲಿ
ವಟದ ವೃಕ್ಷದೊಲು ಹಬ್ಬುತಿರುವೆ
  ಕೈ ಚಾಚಿದಲ್ಲಿ ಬೇರು.
ಬಂಡೆ--ಛಿದ್ರದಲಿ ಬೀಜ ಬಿದ್ದರೂ
  ಒಡೆವೆ ಆರುಪಾರು

ಹಾಡೆ-ಹಗಲಿನಲಿ ನೀನು ಕೊಲೆಯ
ಮಾಡಿದುದ ಪಾರುಗೈವೆ
ಸಾಕ್ಷಿಗಳಿಗೆ ಬಾಯ್ತುಂಬ ತಿನಿಸಿ
  ಅವರನ್ನೆ ಖೊಟ್ಟಗೈವೆ.
ಹಣವು ಎಂದೊಡನೆ ಹೆಣವು ಬಾಯ್ತೆರೆವ-
  -ದೆಂಬ ಗಾದೆಯನ್ನು
ಸತ್ಯ ಮಾಡಿ ತೋರಿರುವೆ ನಿಜದಿ
  ಕಲಿಕಾಲ ಮಹಿಮೆಯನ್ನು.

ಜೀವಣ್ಣ:

ವಿಸ್ತರಿಸದಿರು ಮಿತ್ರ ನಿನ್ನ ಸಾಮರ್ಥ್ಯವನು
ನಾನು ಬಲ್ಲೆನು ಸರ್ವ.
ನನ್ನ ಪಯಣವು ದೀರ್ಘ
ಬರುವೆಯಾ ನನ್ನೊಡನೆ.

ದುಡ್ಡಪ್ಪ:

ಎಲ್ಲ ಪಯಣಕು ನಾನು ಅರ್ಥನೀಡಿಹ ಅರ್ಥ
ನಾನಿಲ್ಲದಿರೆ ಪಯಣ ವಿರಸ ತುಂಬಿದ ವ್ಯರ್ಥ.
ಭರತವರ್ಷದಲೆಲ್ಲ ನನ್ನೊಡನೆ ಪಯಣಿಸಲು
ನಿನಗುಂಟು ಮಾನಮರ್ಯಾದೆ ಶ್ರೀ ಮುಖವು-
ಪರದೇಶ ಗಮನದಲಿ ನನಗೆ ಸ್ಥಾನವು ಉಂಟು
ಸರಕಾರ ಕೊಡದಿರೆ ನಾ ಕೊಡುವೆ ಭರವಸೆಯು
ಕಾಳಸಂತೆಯ ಮಂದಿ, ಅಕ್ರಮದ-ಭೂತಗಣ
ನನ್ನ ಆರಾಧಕರು. ಇಲ್ಲಿ ಸಲ್ಲುವರೆಲ್ಲ
ಅಲ್ಲಿಯೂ ಸಲ್ಲುವರು. ಇಲ್ಲಿ ರೂಪಾಯಿ ಕೊಡಲು
ಅಲ್ಲಿ ಡಾಲರ್ ಪಡೆವೆ!

ಜೀವಣ್ಣ:

ನಾನು ಹೇಳಿದ ಪಯಣ ದೀರ್ಘಪಯಣ
ಹೋದವರು ಎಂದಿಗೂ ಮರಳದಿಹ ಪಯಣ
ಮುಗಿದವರು ಎಂದಿಗೂ ಅರಳದಿಹ ಪಯಣ
ಗಾಡಿ ಹತ್ತಿದರೊಮ್ಮೆ ನಿಲ್ಲದಿಹ ಪಯಣ.

ದುಡ್ಡಪ್ಪ:

ಅರ್ಥವಾಯಿತು ಮಿತ್ರ, ದಾರಿಯಲಿ ಬೆಂಕಿಹೊಳೆ
ಮರಮರನೆ ಉರಿಯುವೆನು ಬೂದಿಯಾಗುವೆ ನಾನು
ಲೋಕಕ್ಕೆ ದೊಡ್ಡಪ್ಪ-ಅಲ್ಲಿ ಬೆಲೆ ಇಲ್ಲಪ್ಪ.
ಕ್ಷಮಿಸುವೆಯ ಮಿತ್ರ, ಮೊದಲ ಸಲ, ಕೊನೆಯ ಸಲ.

( ಕೆರಳುತ್ತಾನೆ )

( ಜೀವಣ್ಣನು ಚಿಂತೆಯಿಂದಿರಲು ಅವನ ಹೆಂಡತಿ ಬರುತ್ತಾಳೆ )

ಹೆಂಡತಿ:

ಎಂದೂ ಚಿಂತಿಸಿದವನಲ್ಲ
  ನನ ನಲ್ಲ,
ಇಂದೇಕೆ ಚಿಂತಿಸುವನಿವ
  ತಿಳಿಯಲಿಲ್ಲ.

**ಜೀವಣ್ಣ :**

ಎಲವೊ ಬೆಡಗಿನ ಹೆಣ್ಣೆ ಎನ್ನ ಅರ್ಧಾಂಗಿ–
ನನ್ನ ಸುಖ ವರ್ಧಿಸಿಹೆ, ದುಃಖವನು ಅರ್ಧಿಸಿಹೆ
ಹೇಳೆನ್ನ ಸಾವಿತ್ರಿ, ದೀರ್ಘಪಯಣಕೆ ಹೊರಟೆ
ನಾನು ಅಡವಿಗೆ ಹೊರಟೆ, ಬರುವೆಯಾ ನನ್ನೊಡನೆ?

**ಹೆಂಡತಿ:**

ಅಡವಿಯಲಿ ಏನಿಹುದು, ಊರಲ್ಲಿ ಇಲ್ಲದ್ದು?
ಅಷ್ಟು ಅವಸರವಿರಲು, ಹೋಗಿಬಿಟ್ಟು ಬನ್ನಿ
'ಅಡವಿ' ಹೆಸರಿನ ಹೋಟ್ಲು ಇದ್ದರೆ ಹೇಳಿ
ಬರಲು ನಾ ಸಿದ್ಧ.
ಹೇಳುವರು ಬತ್ತಲೆಯ ನೃತ್ಯ ಪ್ರಸಿದ್ಧ
ಅಂತಾರೆ ಅಪ್ಸರೆಗೆ ಅಲ್ಲಿಲ್ಲ ವಸ್ತ್ರ
ಕಲಿಸುವರೆ ವೃದ್ಧರಿಗೂ ಕೋಕಶಾಸ್ತ್ರ,

**ಜೀವಣ್ಣ :**

ಆಹಾಹಾ, ಸಾವಿತ್ರಿ! ಅಭಿನವ ಗಾಯತ್ರಿ
ನಿನ್ನ ವಚನವ ಕೇಳಿ ಎದೆಯಾಯ್ತು ಛಿದ್ರ
ಕೊನೆಯ ಮಾತನು ಕೇಳು, ಮರೆಯದಿರು ಕೆಲಸದಲಿ
ಎರಡು ಲಕ್ಷದ ಬೆಲೆಯ ವಿಮೆ ಇರಲಿ ಭದ್ರ!

( ತೆರಳುತ್ತಾನೆ )

( ಜೀವಣ್ಣನ ಗೆಳೆಯ ಸಂಧಿಸುತ್ತಾನೆ )

**ಜೀವಣ್ಣ :**

ನನ್ನ ಜೀವದ ಗೆಳೆಯ ಲಂಗೋಟಿ ಮಿತ್ರ
ಬಾರಯ್ಯ ನಂಬಿದೆನು ನಿನ್ನನ್ನು ಮಾತ್ರ
ತಂದೆ–ತಾಯ್‌ ನಲ್ಲೆಗೂ ಹೇಳದ ಗುಟ್ಟುಂಟು
ಎಲ್ಲಕ್ಕು ಸ್ನಿಗ್ಧವಿದೆ ನಮ್ಮಗಳ ನಂಟು.

ಒಂದೆ ತಟ್ಟೆಯಲೂಟ ಮಾಡಿದೆವು ನಾವು
ಒಂದೆ ಹಾಸಿಗೆ–ನಿದ್ರೆ ಗೈದಿಹೆವು ನಾವು
ದೇಹ ಎರಡಿದ್ದರೂ ಮನಮಾತ್ರ ಒಂದು
ಗಂಡ-ಭೇರುಂಡರೊಲು ಬಾಳಿದೆವು ನಾವು.

ದುಡ್ಡಪ್ಪ ಕೈಕೊಟ್ಟ ಕೇಳೆನ್ನ ಮಾತು
ಹೆಂಡತಿಗೂ ತನ್ನ ಸುಖ ತನಗಿದ್ರೆ ಸಾಕು
ನನಗೀಗ ಬಿಡಲಾಗದಂತಹದು. ಪಯಣ
ನಿನ್ನ ಸ್ನೇಹದ ಜೊತೆಯು ನನಗೀಗ ಬೇಕು.

**ಗೆಳೆಯ:**

ಪಯಣಕ್ಕೊ? ಸಾಹಸಕೊ ಇದೊ ನಾನು ಸಿದ್ಧ
ನಿನ್ನ ಇಚ್ಛೆಯೆ ಆಜ್ಞೆ, ಸರ್ವದಾ ಬದ್ಧ.

ಹುಲಿಬೇಟೆ, ಮಿಕಬೇಟೆ ಯಾವುದಕು ಸಿದ್ಧ
ನರಭಕ್ಷ ದ್ವೀಪಕ್ಕೆ ಬರಲು ನಾ ಸಿದ್ಧ
ಆದರೊಂದಿದೆ ಅರಿಕೆ,
ನನ್ನ ಹೆಂಡತಿ ಬಸಿರಿ, ಆರು ತಿಂಗಳು ಮಾತ್ರ
ಬೇಗ ಮರಳಲು ಬೇಕು, ಬರಲಿಹನು ಪುತ್ರ,

**ಜೀವಣ್ಣ :**

ನಾನು ಜಿಗಿಯೆಂದೊಡನೆ ಜಿಗಿಯುತಿದ್ದೆ
ತಗ್ಗಿರಲು, ಬೆಂಕಿಯಾ ಹೊಳೆಯೆ ಇರಲಿ,
ಇಂದೇಕೆ ಸಂಶಯವು, ಇಂದೇಕೆ ಅನುಮಾನ
ನಾ ಹೊರಟೆನಿದೊ, ಯಾರೆ ಬರಲಿ ಬಿಡಲಿ!

ಗೆಳೆಯ:

ಬಿಗಟದಂತಾಡುತಿಹೆ. ನಿನ್ನ ಮಾತನ ಕೇಳಿ
ವೀರನಿಗೆ ವ್ಯಂಗ್ಯ-ನಡುಕ ಹುಟ್ಟುತಿಹುದು
ನಿನ್ನ ಮುಖ ನೋಡಿದರೂ ಪ್ರಥಮ ರಾತ್ರಿಯ ಸೋತೆ
ಷಂಢನೊಲು ಕ್ಲೀಬತೆಯು ತೋರುತಿಹುದು.

ಮೈಯೆಲ್ಲ ಬೆವೆತಿಹುದು, ಕಣ್ಣು ಕಳೆಗೆಟ್ಟಿಹವು
ಮುಖದಲ್ಲಿ ಬರೆದಿಹುದು ಜ್ವಾಲಾಮುಖಿ.
ಎಲ್ಲ ಭಯದೊಳಗಿಹುದು ಮರಣಭಯ ಗಂಭೀರ
ಸಾವನೀಡಾಡಿದವ ಪರಮಸುಖಿ.

ಜೀವಣ್ಣ:

ನನ್ನ ನಾಲಗೆ-ಮಾತು ನೀನೆತ್ತಿ ಹೇಳಿರುವೆ
ಅದೆ ಯಾತ್ರೆ ಅದೆ ಭಯವು ನನ್ನ ವ್ಯಥೆಯು
ನನ್ನೊಡನೆ ಬರಲಿಕ್ಕೆ ಸಿದ್ಧವಿರುವರ ಕಾಣೆ
ಮೆರೆದಿದ್ದೆ, ಮುಗಿದ್ಹೋಯ್ತು ನನ್ನ ಕಥೆಯು

ಗೆಳೆಯ:

ಸಾವು ಬೇಡವೆಂದರೂ ತಾನೇ ಬರುವಾ ಅತಿಥಿ
ಅದಕೆದೆಯ ಕೊಡಲಿಕ್ಕೆ ಬೇಕು ಜ್ಞಾನ
ಈ ಜ್ಞಾನ ಪಡೆಯಲಿಕೆ ಸ್ಥಿರಚಿತ್ತ ಬೇಕು
ಸ್ಥಿರಚಿತ್ತ ಪಡೆಯಲೋ ಬೇಕು ಧ್ಯಾನ!

ಈ ಮಹಾಪ್ರಸ್ಥಾನ ಏಕಾಕಿ ಯಾತ್ರೆ ಇದೆ
ಯಾರು ಸಂಗಡ ಬರುವ ಹಾಗೆ ಇಲ್ಲ



ಧನ-ಕನಕ-ಐಶ್ವರ್ಯ ಅಧಿಕಾರ ಎಲ್ಲವೂ
ಬಿಸಿಲುಗುದುರೆಗಳಿಹವು ದಿಟವು ಅಲ್ಲ
ಸತ್ಕರ್ಮ ಮಾತ್ರ ನಿನ್ನೊಡನೆ ಬರುವುದು ಅಲ್ಲಿ
ಉಳಿದೆಲ್ಲವೂ ಜೊಳ್ಳು ಜೊಟ್ಟಯೆಲ್ಲ.

ಜೀವಣ್ಣ:

ಸಮಯವೂ ಬಹಳಿಲ್ಲ, ಧೈರ್ಯವೂ ಉಳಿದಿಲ್ಲ
ಉದಯರವಿಯೊಂದಿಗೆ ಪಯಣ-ಸಿದ್ಧ
ಈ ಅಲ್ಪಕಾಲದಲಿ ಯಾರನ್ನು ಪ್ರಾರ್ಥಿಸಲಿ
ನನಗೆ ನಾಲಗೆ ಕೂಡ ಶುದ್ಧವಿಲ್ಲ!

ಗೆಳೆಯ:

ತಾಯಿ ಶಾರದೆಯನ್ನು ಧ್ಯಾನಿಸುತ ಕೇಳಿಕೊಂ
ಸುಮನವರಳಿಸಿ ಬೆಳಕು ಬೀರಲೆಂದು
ಈ ಜನ್ಮ ಹೋದರೂ ಹೊಸ ಜನ್ಮ ಬಂದಾಗ
ಸದ್ಬುದ್ಧಿ ಸದ್ಭಾವ ನೀಡು ಎಂದು.

( ಹೊರಡುತ್ತಾನೆ )

( ಜೀವಣ್ಣ ಚೌಕಾಸನ ಹಾಕಿ ಧ್ಯಾನಿಸುತ್ತ ಕೂಡುತ್ತಾನೆ. ಶಾರದೆಯನ್ನು ಕುರಿತು ಆರ್ತಭಾವದಿಂದ ಹಾಡುತ್ತಾನೆ )

ಜೀವಣ್ಣ :

ನಮೋ ತಾಯೆ ಶಾರದೇ।
ನನಗೆ ಬುದ್ಧಿ ಬಾರದೇ।

ನನ್ನ ಪಾಪ ತೀರದೇ
ಮುಕ್ತಿಮಾರ್ಗ ತೋರದೇ
ಜೀವ ರೆಕ್ಕೆ ಪಡೆಯದೇ
ಅಮೃತದೆಡೆಗೆ ಹಾರದೇ?
ನಮೋ ತಾಯಿ ಶಾರದೇ
ನನಗೆ ಬುದ್ಧಿ ಬಾರದೇ॥

( ಕತ್ತಲೆ ಆವರಿಸುತ್ತದೆ. ಒಬ್ಬ ವೃದ್ಧ ಬಡಕ ಮೈ ಎದೆಯ ಎಲುಬು ತೋರುತ್ತ ಇವನನ್ನು ಸಂಧಿಸುತ್ತಾನೆ )

ಸತ್ಕರ್ಮ :

ಓ ನನ್ನ ಜೀವಣ್ಣ
ನೀನು ಚಿಂತಿಸ ಬೇಡಣ್ಣ ॥ಪ॥

ಇತರರು ಸಂಗಡ ಬರಲಿ ಬಿಡಲಿ
ನಾನು ಮಾತ್ರ ಬರ್ರೇನಣ್ಣಾ ॥ಅನು ಪ॥
ನೀನು ನನ್ನನು ಗುರ್ತಿಸಲಿಲ್ಲ
ನೀನು ನನ್ನನು ಕರೆದಿರಲಿಲ್ಲ
ನಿನಗೆ ನನ್ನ ನೆನಪೇ ಇಲ್ಲ
ಆದರೂ ನಾನು ಬರ್ರೇನಣ್ಣಾ
ಓ ನನ್ನ ಜೀವಣ್ಣ............
ನಿನ್ನ ಹಿತ್ತಲದಿ ನಾ ಬಿದ್ದಿದ್ದೆ
ನಿನ್ನ ಮನೆಯೊಳಗೇ ನಾ ಎದ್ದೆ
ನಿನ್ನ ಎಂಜಲಾ ನಾ ತಿಂದಿದ್ದೆ
ಆದರೂ ನಿನ್ನ ನಂಬೇನಣ್ಣ
ಓ ನನ್ನ ಜೀವಣ್ಣಾ.

ಬಚ್ಚಲ ನೀರನು ನಾ ಉಂಡಿದ್ದೆ

ಬಾಳೆಯ ತೆರದಲಿ ನಾ ಬೆಳೆದಿದ್ದೆ
ಬೀಜವಿಲ್ಲದೆ ಫಲ ತಂದಿದ್ದೆ
ಕಸದಲಿ ರಸ ತಂದೇನಣ್ಣಾ
ಓ ನನ್ನ ಜೀವಣ್ಣಾ......

**ಜೀವಣ್ಣ :**

ಓ ಮುದಕಪ್ಪ? ನೀನಾರಪ್ಪ!

**ಸತ್ಕರ್ಮ :**

ಕೈ ತಪ್ಪಿ ಮಾಡಿದ ಪುಣ್ಯ ನಾನಣ್ಣ
ನನಗೆ ಸತ್ಕರ್ಮ ಅಂತಾರಣ್ಣ
ನೀ ಮರೆತರು ನಾ ಮರೆತಿಲ್ಲಣ್ಣ
ಕಡೆದಲ್ಲಿಗೆ ನಾ ಬರ್ತೇನಣ್ಣಾ
ಓ ನನ್ನ ಜೀವಣ್ಣ......

( ಕತ್ತಲೆ ಆವರಿಸುತ್ತದೆ. ಜೀವಣ್ಣ ಮಲಗುತ್ತಾನೆ. ಹಿಂದೆ ಬಿಳಿಯ ಪರದೆ ಇದೆ. ಸೂರ್ಯೋದಯದ ಚಿತ್ರ. ಜೀವಣ್ಣನ ಹಿಂದಿನಿಂದಲೇ ಅವನ ನೆರಳಿನೊಡನೆ ಸಾವಣ್ಣ ಬರುತ್ತಾನೆ. ಜೀವಣ್ಣ ಪಂಚೇಂದ್ರಿಯ ಗಳ ಶಕ್ತಿಯನ್ನು ಕಳೆದುಕೊಳ್ಳುತ್ತಾನೆ. ಅಶಕ್ತನಾಗಿ ಏಳುತ್ತಾನೆ. ಸಾವಣ್ಣನನ್ನು ಹಿಂಬಾಲಿಸಲು ಶಕ್ತಿಯಿಲ್ಲ. ಸತ್ಕರ್ಮ ಅವನ ಮುಂದೆ ನಿಲ್ಲುತ್ತಾನೆ. ಅವನ ಹೆಗಲ ಮೇಲೆ ಕೈ ಹಾಕಿ ಮುದುಕರಂತೆ ನಡೆಯು ತ್ತಾನೆ ಜೀವಣ್ಣ. ಹಿನ್ನೆಲೆಯಲ್ಲಿ ಸೂತ್ರಧಾರ ಹಾಡುತ್ತಾನೆ. )

**ಸೂತ್ರಧಾರ :**

ನಾಮದೊಂದಿಗೆ ನಾಶ ಬರುವದು ಜೀವಕೋಟಿಯಲ್ಲಿ
ಜನಿಸಿದಾತ ತಾ ಸಾಯಬೇಕಲವೊ ತನ್ನ ಬಾಳಿನಲ್ಲಿ
ರಾಮ ಕೃಷ್ಣರೂ ಬುದ್ಧ ಕ್ರಿಸ್ತರೂ ಪಡೆದರಲ್ಲ ಸಾವು
ಅವರು ಮಾತ್ರ ಅರಿತಿದ್ದರಂತೆಯೇ ಪಡೆಯಲಿಲ್ಲ ನೋವು

ನಾಶ ...ಳಿಹೆವು ನಮ್ಮ ಜೀವನದಿ, ನಮಗೆ ನಿತ್ಯ ಮರಣ
ಮಹಿಮರಾದವರು ಸತ್ತರೂನು ಇದೆ ಅಮರ ಅವರ ಹರಣ
ರೂಪ ಕಳೆದರೂ ಶಕ್ತಿಯಾಗಿ ಬಾಳುವರು ನಮ್ಮ ಒಡನೆ
ಅವರೆ ಹೆಚ್ಚು ಜೀವಂತರಿಹರು ನಮಗಿಲ್ಲ ನಿಜದ ಗಣನೆ

ದೇಹ ನಶ್ವರವು ಆತ್ಮ ಈಶ್ವರವು, ಬಿಡಿರೊ ಬಾಹ್ಯಮೋಹ
ವಿವಿಧ ವರಗಳನು ಪಡೆದ ರಾಕ್ಷಸರು ಉಳಿಸಲಿಲ್ಲ ದೇಹ
ಶಕ್ತಿ ಗಳಿಸಿ ದಾನವರು ಆಗದಿರಿ ನಿಮ್ಮ ಬಾಳಿನಲಿ
ಮುಕ್ತಿ ಗಳಿಸುವಾ ದಾರಿ ತುಳಿಯಿರಿ – ಚಣದ ಬಾಳಿನಲ್ಲಿ

ವ್ಯಾಧ ಬಿಟ್ಟ ಆ ಬಾಣದಲ್ಲೆ ಶ್ರೀ ಕೃಷ್ಣ ಕೊನೆಯ ಪಡೆದ
ಸೊಕ್ರೆಟೀಸನವ ವಿಷದ ಬಟ್ಟಲವ ತಾನೆ ಎತ್ತಿ ಕುಡಿದ
ಏಸುಕ್ರಿಸ್ತನವ ಶೂಲವೇರಿ ಪ್ರೀತಿಯನು ಸಾರಿ ಮೆರೆದ
ಗುಂಡು ಹಾಕಿದರು ಗಾಂಧಿ ರಾಷ್ಟ್ರಪಿತ "ರಾಮ ರಾಮ" ಎಂದ.

ಆದಿಶಂಕರರು ಗುಹೆಯ ಸೇರಿ ಪ್ರಸ್ಥಾನಗೈದರಲ್ಲ
ದ್ವೈತ ಬೆಳಗಿದಾನಂದತೀರ್ಥರೋ ನಡೆದೆ ಹೋದರಲ್ಲ
ಸಾವು ತಿಳಿದವರು ನಗುತ – ನಗುತಲೇ ಅದನು ಅಪ್ಪುತಿಹರು
ಅರಿಯದಿರುವ ನಮ್ಮಂಥ ಅಜ್ಞರೇ ನಿತ್ಯ ಅಳುತಲಿಹರು.

( ತೆರೆ )

* ಈ ನಾಟಕ ಬರೆಯಲು ಸ್ಫೂರ್ತಿಯಿತ್ತ ಅನೇಕ ಕೃತಿಗಳನ್ನು, ಮುಖ್ಯವಾಗಿ 'Everyman' ಎಂಬ ೧೫ನೆಯ ಶತಮಾನದ ಅನಾಮಿಕ ಕೃತಿಯನ್ನು ಸ್ಮರಿಸುವೆ.

**ಸೂಚನೆ:** ಈ ನಾಟಕವನ್ನು ಪ್ರಯೋಗಿಸಲು ಬಯಸು ವವರು ರೂ. ೨೫|– ಸಂಭಾವನೆಯನ್ನು ಲೇಖಕರಿಗೆ ಕಳಿಸಿ ಲಿಖಿತ ಅಪ್ಪಣೆ ಪಡೆಯಬೇಕು. (ವಿಳಾಸ: ಪರ್ ಎಮ್. ವಿ. ಕಾಲೇಜ ಅಂಧೇರಿ (ಪೂರ್ವ), ಮುಂಬೈ-೬೯ ಎನ್. ಬಿ.)

**ಅವಳು ಹಂಬಲಿಸಿದಳು; ಇವನು ಕನಿಕರಪಟ್ಟ.**
**ಆದರೆ ಅಸಹಾಯಕತೆ ಎಂಥದು !!**
**ಅದರಲ್ಲಿ ಸಿಲುಕಿ ಪತಂಗದಂತೆ**
**ಉರಿದು ಹೋದರು. ಏಕೆ? ಹೇಗೆ?**

# ಗ್ಯಾಸ್ ಸ್ಟೋವ್ 

**ಶ್ರೀನಿವಾಸ ಕುಲಕರ್ಣಿ**

ಅಸ್ತವ್ಯಸ್ತವಾದ ಗಾದಿ – ತಲೆದಿಂಬು, ಜಲ್ಲಾ ಪಿಲ್ಲಿಯಾದ ಚಾದರ – ದುಪ್ಪಟ್ಟಿಯ ಮಧ್ಯೆ, ಮಡಚಿದ ಮೊಣಕಾಲುಗಳ ಮಧ್ಯೆ ಕತ್ತು ತುರುಕಿ ಏದುಸಿರು ಬಿಡುತ್ತ, ಚಿಕ್ಕ ನಳಿಕೆಯೊಳಗಿನ ರಸ ಹೀರಿ ರಕ್ತ ಹೀರಿ ಕಚ್ಚಿ ಕಚ್ಚಿ ಎಸೆದ ಎಲುಬಿನ ತುಕುಡಿಯಂತೆ ಬಿದ್ದಿದ್ದೆ.

ಕಿಟಕಿ – ಗವಾಕ್ಷಿಯೊಳಗಿಂದ, ಬಾಗಿಲ ಸಂದಿಯೊಳಗಿಂದ ಸಹ ಬೆಳಕು ಬಾರದಂತೆ ಬಟ್ಟೆ ತುರುಕಿದ್ದೆ.

ನನ್ನ ಸರ್ವ ಹೀನ ಸ್ಥಿತಿಯನ್ನು ಕಂಡು ಮರುಕದಿಂದ ಶೋಕ ಮೌನವನ್ನಾಚರಿಸುತ್ತ 'ಬಿಕೊ' ಎನ್ನುತ್ತಿದ್ದ ಬರಿದಾದ ಖುರ್ಚಿಯ ಮೇಲೆ ಕುಸಿದು, "ಥೂ ನನ್ನ ರೀತಿಗಿಷ್ಟು ಬೆಂಕಿ ಹಾಕ" ಎಂದು ಮುಖ ಮುಚ್ಚಿಕೊಂಡೆ.

ಮುಚ್ಚಿದ ಕಣ್ಣು ಮುಂದಿನ ಕತ್ತಲೆಯೊಳಗೆ, ಅದೇ ಆಗ ಬಂದು ಹೋದ, ಹೇಮಾಳ ಚಿತ್ರ ನನ್ನ ಗುಡ್ಡಿಯೊಳಗಿಂದ ಪ್ರತಿಫಲನಗೊಂಡು ಅಚ್ಚೊತ್ತಿದಂತೆ ಮೂಡಿ ನಿಂತಿತು. ಅದರ ಹಿಂದೆ ಆವಳ ನಗು ಚಲಚ್ಚಿತ್ರದ ಹಿಂದಿನ ಧ್ವನಿಯಂತೆ ಬಂದು ನನ್ನನ್ನು ಅಣಕಿಸತೊಡಗಿತು.

"ಯಾರು ... ಯಾರು?"

"ನಾನೇ...... ನಾನೇ..."

"ಓ! ಹೇಮಾ – ಹೊರಟು ಹೋಗು...... ಹೋಗು" ನಾನು......ತುರುಬು ಮುಂಗುರುಳನ್ನು ಜಗ್ಗಿಕೊಂಡು ಕಿಟಕಿ ಹತ್ತಿರ ಬಂದು ನಿಂತೆ:

ಬಿಸಿಯೇರಿದ ಭೂಮಿ. ಅದೇ ಆಗ ಸುರಿದ ಆರಂಭದ ಮಳೆಯಿಂದ ತಣಿದು ತೃಪ್ತಿಯಿಂದ ಪೈಚಲ್ಲಿ ಮಲಗಿತ್ತು.

ಆ ಸುಖಾ ನನ್ಗ ಸಿಗಲಿಲ್ಲ
ಆ ಶಾಂತಿ ನನ್ಗ ಸಿಗಲಿಲ್ಲ
ಆ ತೃಪ್ತಿ ನನ್ಗ ಸಿಗಲಿಲ್ಲ.

ಬಾಟಲಿಯಿಂದ ಉಕ್ಕಿ ಚೆಲ್ಲುವ ಬುರುಗನ್ನು ಹತ್ತಿಕ್ಕಿ ಕಾರ್ಕಿನಿಂದ ನೂಕಿದ್ದೆ. "ಯಾಕೆ...ಯಾಕೆ?"

"ನಾ ಹೇಳಲೇ?...... ನಾ ಹೇಳಲೇ?"

ಶೂನ್ಯಾಕಾಶದಲ್ಲಿ ಪಸರಿಸಿದ ಹೇಮಾಳ ಧ್ವನಿ ತರಂಗಗಳು ನನ್ನೆಡೆಗೆ ಬಂದು ಅಪ್ಪಳಿಸತೊಡಗಿದ್ದವು.

"ರವಿ ನೀನು ಹೇಡಿ. ಥೂ ಈ ಮುಖಾ ಯಾಕ ಇಟಕೊಂಡಿದ್ದೀಯಾ?"

"ಓ! ಮತ್ತ ಯಾಕ ಬಂದಿ ಹೇಮಾ– ಹೋಗು ಹೋಗು... ಹೌದು ನಾನು ಹೇಡಿ...ನಾ ಹೇಡಿ..."

ಕತ್ತಲೆಯ ಮುಖ ಪರಚಿದಂತೆ ಆಗಸದಲ್ಲಿ ಅರೆಕ್ಷಣ ಮಿಂಚು ಮೂಡಿ ಮಾಯವಾಯಿತು.

ಹೇಮಾ...ನನ್ನ(?) ಹೇಮಾ ನನ್ನ(?)...... ಇದೀಗ ಬಂದು ಹೋದ್ಲು – ಬಂದು ಅಷ್ಟು ಹೋಗಲಿಲ್ಲ. ಈಗೂ ಈ ಕರ್ಮಾ ನಿಂದು ಅಂದುಹೋದ್ಲು.

ಥೂ ನಾನೆಂಥ ಮೀಸೆ ಹೊತ್ತ ಗಂಡಸು! ಬೆಂಗಳೂರಿಗೆ ಬಂದು ಎರಡು ವರ್ಷದೊಳಗ ಹೇಮಾ ಹ್ಯಾಂಗ ಆಗಿ ಬಿಟ್ಟಾಳಲ್ಲಾ. ಛೆ ಛೇ... ಅವಳ ಈ ನಡವಳಿಕೆ.

ನಾ ಅಂಜುಬುರುಕನೋ... ಹೇಮಾ ನಿರ್ಲಜ್ಜಳೊ? ಆಕಿ ಅಬಲೆ ಅಲ್ಲ – ಸಬಲೆ. ನಾ ದುರ್ಬಲ... ದುರ್ಬಲಾ...... ನಾ– ಆಕಿ..........

ಆಗ ಬಂದ ಹೇಮಾ ವ್ಯಾನಿಟಿ ಬ್ಯಾಗ್ ಟೇಬಲ್ ಮ್ಯಾಲೆ ಒಗೆದು ಮುಖದ ಮೇಲೆ ಬಿದ್ದ ಅಸ್ತವ್ಯಸ್ತ ಕೂದಲನ್ನು ಹಿಂದೆ ಸರಿಸಿ ನನ್ನ ಬಳಿ ಕೂತ ರೀತಿ?...

"ಇದೇನು ಹೇಮಾ ನಿನ್ಗ ಲಜ್ಜಾ, ಮರ್ಯಾದಿ ಅನ್ನೋದು ಇಲ್ಲೇನು?"

ನನ್ನ ಈ ಪ್ರಶ್ನೆಗೆ ಉತ್ತರ:

ತುಯ್ತ... ತುಡಿತ... ನಗು...

"ಯಾಕ ನಗತಿ ಹೇಮಾ?"

ಮತ್ತ – ಒಂದು... ಎರಡು... ಮೂರು...

"ಹೇಮಾ" ಅವಳ ಭುಜ ಅಲುಗಿಸಿ ಕೇಳಿದೆ.

"ಅಲ್ಲೋ – ಎಂಥ ಸಿಲ್ಲಿ ನೀನು? ನನ್ನ ಇಲ್ಲೀವರೆಗೂ ಈ ಸ್ಥಿತಿಗೆ ತಂದಾಂವ ನೀನ ಅಲ್ಲೇನು?"

ನನ್ನನ್ನು ಎತ್ತಿ ಕುಕ್ಕರಿಸಿದಂತೆ ಆಯಿತು–

"ಹೇಮಾ".

"ಹೌದು ರವಿ, ಸಾವಿರ ಸಾರೆ ಹೇಳ್ತೇನಿ: ಇದಕ್ಕೆ ನೀನ ಕಾರಣ".

"ನೀ ಬ್ರೇಕ್ ಇಲ್ಲದ್ಹಂಗ ಆಗಿ ಬಿಚ್ ಆದ್ರ ನಾ ಏನ ಮಾಡ್ಲಿ"?

"ಏನಂದಿ ರವಿ ಇನ್ನೊಮ್ಮೆ ಹೇಳು?"

"ಹೌದು ನೀನು ಬಿಚ್......"

"ಬಿಚ್...ಬಿಚ್...ಅದ್ಕೂ ಹೆಚ್ಚು ಏನಾದರೂ ಇದ್ದರ ಹೇಳು".

ಹೇಮಾ ಕ್ಯಾಬರೆ ನರ್ತಕಿಯಂತೆ ನಗತೊಡಗಿದ್ದಳು. ಆ ನಗು ನನ್ನ ಮೈ ತುಂಬಾ ಇಂಜೆಕ್ಷನ್ ಮಾಡುತ್ತಿರುವಂತೆ ಭಾಸವಾಗತೊಡಗಿತು. ಬೆವರಿ ಹೋದೆ. ಹೌದು ಹೇಮಾಳನ್ನು ಈ ಸ್ಥಿತಿಗೆ ತಂದವನು ನಾನೇ– ಗ್ಯಾಸ ಸ್ಟೋವ್ ಹೊತ್ತಿಸಿ–ಅದನ್ನು ಆರಿಸಲು ಅಶಕ್ತನಾದೆ, ನಿಜ. ಹೇಮಾ ನನ್ನ ಸೋದರ ಮಾವನ ಮಗಳು. ನಾವಿಬ್ಬರೂ ಕೂಡಿ, ಆಡಿ ಬೆಳೆದವರು. ಶಾಲೆಯನ್ನು ತಪ್ಪಿಸಿ ನಾನು ಆಕೆಯನ್ನು ಎಳೆದುಕೊಂಡು ಹೋಗುತ್ತಿದ್ದೆ.

"ಎಲ್ಲಿಗೆ ಎಳಕೊಂಡು ಹೊಂಟಿ ರವಿ?..."

"ನಾ ಎಲ್ಲಿಗೆ ಕರಕೊಂಡು ಹೋಗ್ತೇನಿ ಅಲ್ಲಿಗೆ ನಡೆ".

"ಊಹೂಂ... ಮೊದಲು ನೀ ಹೇಳು".

"ಹಳ್ಳಕ್ಕೆ ಹೋಗೋಣ ನಡಿ. ನಿನ್ನೆ ಮಳಿ ಹೊಡೆದದ್ದಕ್ಕೆ ಹಳ್ಳ ತುಂಬಿ ಬಂದsದಂತ...".

"ಹೌದ... ನಡಿ. ಪಾಟೀಚೀಲದಾಗ ಪುಟಾಣಿ, ಬೆಲ್ಲ ಹಕ್ಕೊಂಡು ಬಂದೀನಿ".

ಇದು ನಮ್ಮಿಬ್ಬರ ಸಂವಾದ. ನಾನು ದಂಡೆ ಮೇಲಿನ ಕಲ್ಲಿನ ಮೇಲೆ ಅವಳನ್ನು ಪಕ್ಕದಲ್ಲಿ ಕೂಡಿಸಿಕೊಂಡು ಕೊಚ್ಚಿಕೊಂಡು ಹೋಗುವ ಪ್ರವಾಹವನ್ನು ನೋಡಿದ್ದೇನೆ.

ನನಗರಿಯದಂತೆ ನನ್ನೊಳಗೂ ನನ್ನ ದೇಹದೊಳಗೂ ಕಿರು ಅಲೆಯಿಂದ ಭೋರ್ಗರೆವ ಪ್ರವಾಹ ಪ್ರವಹಿಸಲಾರಂಭಿಸಿದಾಗ ಇದೇನು! ಅರಮನೆಯೊಳಗೆ, ರಂಗುರಂಗಿನ ಕಾರಂಜಿಯೊಳಗೆ ಬಿಸಿ ನೀರಿನ ಬುಗ್ಗೆ ಚಿಮ್ಮಿದಂತೆ ಭಾಸವಾಗತೊಡಗಿತು. ಸುಮಧುರ ಸನಿಹ ಬಯಸಿತು ಮನ. ಆಗಿನ್ನೂ ನನಗೆ ಹತ್ತು ಹನ್ನೆರಡು ವರುಷ ಇರಬಹುದು. ಇದೇನು ಅಸಹ್ಯ ಅಂದುಕೊಂಡೆ. ಪಾಪ ಎಂದು ಪರಿತಪಿಸಿದೆ.

ಇನ್ನೊಂದು ಘಟನೆ ನೆನಪಿದೆ – ಹೇಮಾಳನ್ನು

ನಾನು ಊರ ಹೊರಗಿನ ಹನುಮಂತ ದೇವರ ಗುಡಿಗೆ ಕರೆದುಕೊಂಡು ಹೋದುದು.

"ಇಲ್ಲಿಗೆ ಯಾಕ ಕರಕೊಂಡು ಬಂದಿ"?

ಹೇಮಾ ಕೇಳಿದ್ದಳು.

"ಹನುಮಂತ ದೇವರ ಮುಂದಿನ ಕಲ್ಲು ಎತ್ತಿದ್ರ ನಮ್ಮ ಮನಸಿನ್ಯಾಗ ಅನಿಸ್ಕೊಂಡಿದ್ದು ಆಗ್ತದಂತ" ನಾನು ಹೇಳಿದ್ದೆ. ಹೇಮಾ ಏನ ಅನಕೊಂಡಿದ್ದಳೋ ಏನೋ – ನಾನಾದರೂ ಅನಕೊಂಡಿದ್ದು 'ನನ್ಗ ಸಿಕ್ತು'. ಕಲ್ಲು ಎತ್ತಿದಳು: ಕಲ್ಲು ಬಿಟ್ಟಳು......

ನನಗರಿವಿಲ್ಲದೆ ಹೊಮ್ಮುವ ಅವ್ಯಕ್ತ ಆಶೆಗೆ ಬಲಿಯಾದೆ. ಹಳಹಳಿಸಿದೆ. ಆದರೂ ಅನಾಯಾಸ ದೊರೆತ ಪ್ರಯೋಗಶಾಲೆಯಲ್ಲಿ ಪ್ರಯೋಗಶೀಲನಾದೆ. ವಿಜ್ಞಾನಿಯಲ್ಲ ಅಜ್ಞಾನಿ. ಏನೇನೋ ತಯಾರಿಸಲೆತ್ನಿಸಿದೆ.

ವರುಷಗಳುರುಳಿದವು. ನಾನು ನಾನಾಗಿಯೆ



ಉಳಿದಿರಲಿಲ್ಲ. ಹೇಮಾ – ಹೇಮಾಳಾಗಿಯೇ ಇರಲಿಲ್ಲ. ನಿಸರ್ಗದ ಎರಕದಲ್ಲಿ ಅದ್ದಿ ತೆಗೆದಿದ್ದೆವು. ಇದಕ್ಕೂ ಹೆಚ್ಚಿಗೆ ನಾನು ಹೇಳಲಾರೆ.

ನಿಗಿ ನಿಗಿ ಅರಳಿದ ಅಗ್ಗಿಷ್ಟಿಕೆಯೊಳಗೆ ಹೇಮಾಳನ್ನು ತಳ್ಳಿದ್ದೆ. ಎತ್ತಿಕೊಳ್ಳುವ ಸಾಹಸ ನನಗಾಗಲಿಲ್ಲ. ಅವಳು ಹಂಬಲಿಸಿದಳು – ನಾನು ಬರಿ ಕನವರಿಸಿದೆ; ಕನಿಕರ ಪಟ್ಟೆ. ಅಸಹ್ಯ ಅಸಹಾಯಕನಂತೆ ಅನ್ನಿ. ಒಂದೆಡೆ ಮನೆತನದ ಮರ್ಯಾದೆಯ ಭಯ – ಏನಾದರೂ ಅನಾಹುತವಾದರೆ? ಆದರೆ ಎಲ್ಲಿಂದ ಬಂತು– ಆಗಿಯೇ ಬಿಟ್ಟಿತು. 'ಥೇರಿ ಕಲಿಸಿ ಪ್ರಾಕ್ಟಿಕಲ್ ಕಲಿಸದ ಗುರು ನೀನು ಗುರೂನೆ? – ಥೂ ... ನನ್ನ ಅರಿವಿನ ದಾರಿ ಹಿಡಿಯುತ್ತೇನೆ' ಎಂದು ಹಂಗಿಸಿ ಹೋಗಿದ್ದಳು.

ಮರುದಿನ ಹೇಮಾ ಮನೆಯಲಿ ಕಾಣಲಿಲ್ಲ. ಎಲ್ಲರೂ ಗಾಬರಿಗೊಂಡರು. ಯಾರಿಗೂ ಕಾರಣ ಗೊತ್ತಾಗಲಿಲ್ಲ. ನನಗೊಬ್ಬನಿಗೇ ಅದು ಗೊತ್ತಾದುದು. ಅಸಹ್ಯ ಬಂತು. ಹೌದು–ಅವಳು ನನ್ನ ಕೆಲಸಕ್ಕೆ ಅಸಹ್ಯ ಪಟ್ಟು ಈ ಕೃತ್ಯಕ್ಕೆ ಇಳಿದಿದ್ದಳು.

ಮತ್ತೆ ಎಲ್ಲಾ ನೆನಪು...

ಹೇಮಾ ಮಾತು ಮುಂದುವರೆಸಿದಳು:

"ರವಿ – ನಾ ಮಾಡಿದ ಪಾಪಕ್ಕೆ ಪಶ್ಚಾತ್ತಾಪ ಪಟ್ಟು ನಿನ್ನ ಹತ್ತಿರ ಬಂದಿದ್ದೆ. ಆದ್ರ ಅವತ್ತು ನೀನು ನಾಯಿ ಮುಟ್ಟಿದ ಎಂಜಲು ಗಡಿಗೆ – ಎಂದು ಎಲ್ಲಿ ನಾನು ಗಂಟುಬೀಳುತ್ತೇನೋ ಅನ್ನೋ ಭಯದಿಂದ ಪಲಾಯನ ಮಾಡ್ದಿ. ನನ್ಗ ಉಳಿದ ಮಾರ್ಗ ಇದೊಂದೇ ಆಗಿತ್ತು. ಆವ್ಯಾಲೆ ನಾನು ಬೆಂಗಳೂರಿಗೆ ಬಂದ್ಯ, ನೌಕರೀ ಹಿಡ್ದೀನಿ",

"ಆದರೆ......"

"ಆದರೇನು – ನೀನು ಆಗಲೆ ಹೇಳಿದೆಲ್ಲ".

"ಅದಕ್ಯಾಕ ಹೆದ್ರಲಿ ಬಿಚ್ ಸಹಿತ ಅರಿಗಿ–ತಿಳೀತ?"

"ಹೇಮಾ!"

ನನಗೆ ಏನು ಹೇಳಬೇಕು ತಿಳಿಯದೆ ಬಾಯಿ ಕಟ್ಟಿದೆ.

"ರವಿ ನೀನು ಕರಲ ಮೊಗ್ಗಿ ಹೀಚಿ ಹಿಚುಕಿ ಅರಳಿಸಿದ್ದಿಲ್ಲಾ ಅಂದ್ರ ನಾನೂ ಹೆಣ್ಣುತನ ಉಳಿಸಿಕೋತಿದ್ದೆ! ನಾನು ಗೃಹಿಣಿ ಆಗಿ ಬಾಳೋ ಯೋಗ್ಯತಾ ಪಡೀತಿದ್ದೆ".

"ಹೇಮಾ ಬಾಯಿಮುಚ್ಚು".

"ನಾನೇನೋ ಬಾಯಿ ಮುಚ್ಚಿಕೋತೀನಿ. ಆದ್ರ

ನಿನ್ನ ಮನಸಿನ ಬಾಗಿಲಾ ತಗದ ನೋಡು- ಎಷ್ಟು ಹೊಲಸ ತುಂಬೇದ".

"ಇರಲಿ ನಿನ್ನ ಉಪದೇಶ ನನ್ಗ ಬೇಕಾಗಿಲ್ಲ- ನಿನ್ನ ದೇಹ ಎಷ್ಟು ಮಲಿನ ಆಗೇದ ಅನ್ನೋದನ್ನ ನೋಡ ಕೋ. ಇಲ್ಲಿಗೆ ಯಾಕ ಬಂದಿ?"

ಹೇಮಾ ನಗಹತ್ತಿದಳು. ಅಂಥ ನಗುವನ್ನು ನಾನು ಯಾವ ಹೆಂಗಸಿನ ಮುಖದಲ್ಲಿಯೂ ನೋಡಿಯೇ ಇರಲಿಲ್ಲ.

"ಹೇಮಾ......"

"ಎಂಥಾ ಪುಕ್ಕಲು ಪ್ರಾಣಿ ನೀನು. ನನ್ನ ಮದಿವಿ ಆಗು ಅಂತ ಕೇಳಲಿಕ್ಕೆ ಬಂದಿಲ್ಲ".

"ಮತ್ಯಾಕ ಬಂದಿ?"

"ನೀ ಕಲಿಸಿದ ಪಾಠ ಒಪ್ಪಿಸಲಿಕ್ಕೆ ಬಂದೀನಿ-ರವಿ. ಈಗ ನನ್ನ ಹತ್ತರ ರೊಕ್ಕ ಅದ-ನಾ ಫಳಸ್ತೀನಿ".

"ಅದಕ್ಕ ನಾ ಏನ ಮಾಡಲಿ- ಬೇಕಾದ್ರ ಹೋರಿಕೊ".

"ಹಂಗ ತೂರಿನ ನಾನು ಹೊಸಾ ಹೊಸಾ ಗ್ಯಾಸ್ ಸ್ಟೋವ್ ಖರೀದಿ ಮಾಡ್ತೀನಿ. ನಾ ಯಾವಾಗ ಬೇಕು ಆವಾಗ ಅವನ್ನ ಹೊತ್ತಿಸಬಹುದು, ಬ್ಯಾಡಾ ಆದಾಗ ಆರಿಸಬಹುದು".

"ಹೇಮಾ..."

"ರವಿ".

ನನ್ನ ಕಿವಿ ಹತ್ತಿರ ಬಂದು ಉಸುರಿದಳು-

"ನಾನೀಗ ಪ್ರಬುದ್ಧ ಪ್ರಯೋಗಶಾಲೆ-ನೆನಪಿರಲಿ".

ಆಗ ನಾನು ಅಶಕ್ತನಾದೆ. ತುಡಿವ ಮನಸ್ಸನ್ನು ಹಿಡಿದು ಲಗಾಮು ಹಾಕಿದೆ. ಆಗಲೂ ಒತ್ತಾಯದ ಮಾಘಸ್ನಾನ...

ಹೇಮಾ ವ್ಯಾನಿಟಿ ಬ್ಯಾಗ ಎತ್ತಿಕೊಂಡು-

"ಆಲ್‌ರೈಟ್ ಬರ್ತೀನಿ - ಬಾಯ್ ನಿನ್ನಿಷ್ಟ. ಬೆಂಗಳೂರಾಗ ಬೀಚ್ ಇಲ್ಲ ಬಿಚ್ ಅದ - ಗೊತ್ತ ಅದ ಅಲ್ಲ......"

ಹೊರಗಿನಿಂದ ಬಾಗಿಲು ಹಾಕಿಕೊಂಡು ಹೋದಳು.

ಅಲ್ಲಮ್ಮಿನ ಮಿಂಚು ತಿರುವಿದಂತೆ ಹೇಮಾ ಮಾಯವಾಗಿ ಹೋದಳು. ಆದರೆ ಅವಳ ಕೊನೆಯ ನುಡಿಗಳು ನನ್ನ ತಲೆಯಲ್ಲಿ ದರವು ಹಿಡಿಸಿದವು. ಸಂದಿಗೊಂದಿ, ಹಂಚಿನೊಳಗಿಂದ ಸೋರತೊಡಗಿದವು. ಹರಿದ ಲಂಗರದ ನಾವೆಯಾಗಿತ್ತು ನನ್ನ ದೇಹ. ಸಾವರಿಸಿಕೊಂಡು ಕಿಟಕಿಯ ವರೆಗೆ ಬಂದೆ.

ಮತ್ತೆ ಮಳೆಹನಿಯೊಡೆದಿತ್ತು,
ದಾರಿ ತುಂಬ ಕೆಸರು
ದೇಹ ತುಂಬ ಕೆಸರು.

ಮನಸ್ಸಿನ ತುಂಬ ಕೆಸರು. ಸರ್‍ರನೆ ಹಾದುಹೋದ ಕಾರು ನನ್ನ ಮುಖದ ಮೇಲೆ ರಜ್ಜಿನ ಪಿಚಕಾರಿ ಹೊಡೆಯಿತು.

* * * * *

## ಆ ಸಂಜೆ



ನಿನ್ನೊಂದಿಗೆ ಕಳೆದ ಆ ಒಂದು
ಮಧುರ ಸಂಜೆ-
ಸಾಸಿರ ವಸಂತದ ಬೆಳಗಿನ
ಚೆಲುವು ತುಂಬಿತ್ತು!
ಸೂರ್ಯನ ಪ್ರಥಮ ಕಿರಣದೊಂದಿಗೆ
ಹೂಮುಳೆಗರೆದಷ್ಟು ಚೆಲುವಾಗಿತ್ತು!-
ಆ ಸಂಜೆ!

- ಪಂಚಾಕ್ಷರಿ ಹಿರೇಮಠ

ಸೌಂದರ್ಯ, ಸಮೃದ್ಧಿ, ವೈವಿಧ್ಯ ಈ ಮೂರು ಶಬ್ದಗಳಲ್ಲಿ ಕೊಡಗಿನ ಹಿರಿಮೆ ಅಡಕವಾಗಿದೆ.

# ನೆನೆವುದೆನ್ನ ಮನಂ ಕೋಡಿಮಲೆನಾಡಂ

ಸಿದ್ದಯ್ಯ ಪುರಾಣಿಕ
ಐ. ಎ. ಎಸ್.

ರಾಷ್ಟ್ರಪತಿ ವ್ಹಿ.ವ್ಹಿ. ಗಿರಿಯವರು ಮೈಸೂರಿನ ರಾಜ್ಯಪಾಲರಾಗಿದ್ದಾಗ ಮಡಿಕೇರಿಯ ಪುರಸಭೆಯುವ ರಿತ್ತ ಮಾನಪತ್ರಕ್ಕೆ ಉತ್ತರವಾಗಿ, "ಕೊಡಗನ್ನು ದಕ್ಷಿಣದ ಕಾಶ್ಮೀರವೆಂದು ಕರೆಯುವುದು ಉಚಿತವೆನಿಸದು; ಕಾಶ್ಮೀರವನ್ನೇ ಉತ್ತರದ ಕೊಡಗೆಂದು ಕರೆಯ ಬೇಕು," ಎಂದು ಸಾರಿದರು. ಎರಡನ್ನೂ ಕಣ್ತುಂಬ ನೋಡಿರುವ ನನಗೆ ಇದರಲ್ಲಿ ಅಷ್ಟೊಂದು ಅತ್ಯುಕ್ತಿಯಿಲ್ಲವೆಂದೆನಿಸಿತು.

ಕಾಶ್ಮೀರದ ಸೊಬಗೊಂದು ತೆರ, ಕೊಡಗಿನ ಬೆಡಗಿನ್ನೊಂದು ತೆರ. ಎರಡೂ ಭಾರತದ ಸ್ವಯಂಭು ಸೌಂದರ್ಯದ ಅಕ್ಷಯ ಅಪಾರ ರಮಣೀಯತೆಯ ಎರಡು ನವನಿಧಿಗಳು. ತವನಿಧಿಗಳು. ಅಲ್ಲಿ ಕೇಶರ, ಕಸ್ತೂರಿ, ಕವಿತೆ; ಇಲ್ಲಿ ಕಾಫಿ, ಕಿತ್ತಳೆ, ಏಲಕ್ಕಿ, ಕುಣಿತ. ಅಲ್ಲಿ ಕಾಶ್ಮೀರದ ಲಲಿತ ಲಂತಾಂಗಿಯರು; ಇಲ್ಲಿ ಕೊಡವರ ಕಡು ಬೆಡಂಗಿಯರು. ಭರತ ಭೂಮಿಯ ನಿಸರ್ಗ ಸುಂದರಿಗೆ ಕಾಶ್ಮೀರ ಕೊಡಗುಗಳು ಎರಡು ಕಣ್ಣುಗಳು–ಬಣ್ಣನೆಗೆ ನಿಲುಕದ ಚೆಲುವನೊಳಕೊಂಡ ಕಣ್ಣುಗಳು.

ಪಶ್ಚಿಮ ಘಟ್ಟದ ಕೋಡಿಮಲೆಗಳಲ್ಲಿ, (ಕೋಡಿ ಮಲೆ ನಾಡೆಂಬ ಮೊದಲಿನ ಹೆಸರೇ ಸಂಕ್ಷೇಪಗೊಂಡು "ಕೊಡಗು"ಎಂದಾಯಿತೆಂದು ಹೇಳುತ್ತಾರೆ) ಅದರ ಮೂಡಣ ಪಡುವಣ ಇಳಿಜಾರುಗಳಲ್ಲಿ ನಾಲ್ವತ್ತು ಮೈಲು ಅಗಲ, ಅರವತ್ತು ಮೈಲು ಉದ್ದವಾಗಿ ವ್ಯಾಪಿಸಿರುವ ಕೊಡಗು ಜಿಲ್ಲೆಯು ಕನ್ನಡನಾಡಿಗೆ ಕಾವೇರೀ ಮಾತೆಯ ಕೊಡುಗೆಯೆಂದರೂ ಸಲ್ಲುವುದು. ಕೊಡಗಿನ ವೈಶಿಷ್ಟ್ಯಕ್ಕೆ ವಿಶೇಷ ಕಾರಣರಾದ ಕೊಡವರಂತೂ ತಮ್ಮನ್ನು ಕಾವೇರಿಮಾತೆಯ ಕುವರ ಕುವರಿಯರೆಂದೇ ಭಾವಿಸಿದ್ದಾರೆ. ಪಾವನ ರಮಣೀಯ ಬ್ರಹ್ಮಗಿರಿಯ ಭವ್ಯಮಸ್ತಕದಲ್ಲಿ ಉದ್ಭವಿಸಿ, ಗುಪ್ತಗಾಮಿನಿಯಾಗಿ ಭಾಗಮಂಡಲದ ವರೆಗೆ ಹರಿದು, ಅಲ್ಲಿ ಕನ್ನಿಕೆ ಸುಜ್ಯೋತಿಯರೊಡನೆ ಬೆರೆದು ತ್ರಿವೇಣೀ ಸಂಗಮವಾಗಿ ಮೆರೆದು, ಬಲಮುರಿಯ ಹತ್ತಿರ ಹೊಸ ತಿರುವು ಮುರಿವು ತೋರಿ, "ಭೂರಿ ಜನ ಹರ್ಷವಿಸ್ತಾರಿ;..ಶಿವನಾಲಿರಿ ಗಂಗಾಂಬಾವತಾರಿ... ಬರ ನಿರ್ದಗಂ ಕತಾರಿ"ಯಾಗಿ ಶೋಭಿಸುವ ಕಾವೇರಿ ತಾಯಿ ಕೊಡಗಿನಲ್ಲಿ ಎತ್ತ ಸುಳಿದರೂ ನಮಗೆ ದರ್ಶನ ನೀಡುತ್ತಾಳೆ! ವರ್ಷಕ್ಕೊಮ್ಮೆ ತುಲಾ ಸಂಕ್ರಮಣದ ಸಮಯದಲ್ಲಿ ತಲಕಾವೇರಿಯಲ್ಲಿ ತೀರ್ಥೋದ್ಭವ. ನಿತ್ಯ ನೂರು ಸಾವಿರ ಜನರು ತನ್ನಲ್ಲಿ ಉಳಿಸಿ ಹೋಗುವ ಮಾಲಿನ್ಯವನ್ನು ತೊಳೆದುಕೊಳ್ಳಲು ಸ್ವತಃ ಗಂಗಾ ಮಾತೆಯೇ ಆಗ ಅಲ್ಲಿಗೆ ಆಗಮಿಸುವಳೆಂಬ ನಂಬಿಕೆ ಅಲ್ಲಿಯವರಿಗೆ. ನೋಡಬೇಕೊಮ್ಮೆ ವಿಸ್ಮಯ ಜನಕವಾದ ಆ ತೀರ್ಥೋದ್ಭವವನ್ನು, ಋಷಿ "ಅಗಸ್ತ್ಯರ ತಪದ ಮಣೆ"ಯಾದ ಬ್ರಹ್ಮಗಿರಿಯನ್ನು, ಅಲ್ಲಿ ನೆರೆವ ಸದ್ಭಕ್ತ ಸಂದೋಹವನ್ನು, ಅಲ್ಲಿ ನಡೆವ ವೈಶಿಷ್ಟ್ಯಪೂರ್ಣ ಜಾತ್ರೆಯ ವೈಭವವನ್ನು.

ಮೂರು ಶಬ್ದಗಳಲ್ಲಿ ಕೊಡಗಿನ ಹಿರಿಮೆಯನ್ನು ಹೇಳುವುದಾದರೆ "ಸೌಂದರ್ಯ, ಸಮೃದ್ಧಿ, ವೈವಿಧ್ಯ"ಗಳೇ ಆ ಶಬ್ದಗಳು. ಕೊಡಗಿನಲ್ಲಿ ಮೊದಲು ನಮ್ಮ ಕಣ್ಣು ಮನಗಳನ್ನು ಸೆಳೆಯುವುದು ಅದರ ಸೌಂದರ್ಯ-ಅಕೃತಕ, ಅಸೀಮ ಸೌಂದರ್ಯ. ಬ್ರಹ್ಮಗಿರಿಯಿಂದ ಪುಷ್ಪಗಿರಿ ಪರ್ಯಂತ ಹರಡಿರುವ ಈ ಗಿರಿವನಗಳ, ದರಿ ಕಂದರಗಳ, ತೋಟಗದ್ದೆಗಳ, ಹೊಳೆ ಕೊಳ್ಳಗಳ, ಝರಿ ಕೆರೆಗಳ ಪ್ರೇಕ್ಷಣೀಯ ಪ್ರಸ್ಥಭೂಮಿಯು ವಿಹಾರಿಗಳ ನಂದನವನ, ಕಲಾವಿದರ ಕಾಶಿ, ಕವಿಗಳ ಕನಸಿನ ನಾಡು. ಆಸ್ತಿಕರಿಗೆ ಪರಮ ಪವಿತ್ರ ಯಾತ್ರಾಸ್ಥಳ, ನಾಸ್ತಿಕರಿಗೆ "ಸೌಖ್ಯದೆಡೆ, ವಿನೋದದಾಗರ", ಉದ್ಯಮಿಗಳಿಗೆ "ಸಿರಿಯ ಪೆರ್ಚುಗೆಗೆ ಒಳ್ಮನೆ", ಸೌಂದರ್ಯೋಪಾಸಕರಿಗೆ ಸ್ವರ್ಗ! ಇದರ ದಕ್ಷಿಣ, ಪಶ್ಚಿಮ, ವಾಯುವ್ಯ ಭಾಗಗಳು ಮಲೆ-ಮಾಲೆಗಳಿಂದಲೂ, ರಮ್ಯಾರಣ್ಯಗಳಿಂದಲೂ, ಕೂಡಿದ್ದು ಅಲ್ಲಿ ಮಳೆಯೂ ವಿಶೇಷ. ಇದರ ಈಶಾನ್ಯ ಹಾಗೂ ಪೂರ್ವ ಭಾಗಗಳು ಮೈಸೂರು ಜಿಲ್ಲೆಯಂತಿದ್ದು ಮಲೆ-ಬಯಲುಗಳ ಮಿಲನದಿಂದ ಹೊಸ ಬಗೆಯ ಸೊಬಗಿನ ಸೀಮೆಯಾಗಿದೆ.

ಕೊಡಗಿನ, "ಎಲ್ಲಿ ಭೂರಮೆ ದೇವ ಸನ್ನಿಧಿ ಬಯಸಿ ಬಿಮ್ಮನೆ ನಿಂದಳೋ" ಆ ಕೊಡಗಿನ ಕೊನೆಯಿಲ್ಲದ ಚೆಲುವಿನ ದಿವ್ಯದರ್ಶನ ಪಡೆಯಬೇಕಾದರೆ ನವೆಂಬರಿನ ನಿರಭ್ರದಿನವೊಂದರಲ್ಲಿ ನೀಲ ಗಗನದಲ್ಲಿ ಸುವರ್ಣ ಕಿರಣಗಳ ತರುಣ ಅರುಣ ಉದಯಿಸುತ್ತಿರುವಾಗ ತಲಕಾವೇರಿಯ ಪಕ್ಕದ ಸಪ್ತರ್ಷಿ ತಪಃಪೂತ ಬ್ರಹ್ಮಗಿರಿಯ ಮೇಲೆ ನಿಂತು ಕಾವೇರಿ ಕನ್ನಿಕೆ ಕಣಿವೆಗಳತ್ತ ಕಣ್ಣಾಡಿಸಬೇಕು. ದೃಷ್ಟಿ ಹರಿವವರೆಗೆ ಹರಡಿದ ಸೃಷ್ಟಿ ಸೌಂದರ್ಯವನ್ನು ಕಂಡು ನವಿರಾಗುವದು ತನು, ಧನ್ಯತೆಯನ್ನು ಅನುಭವಿಸುವುದು ಮನ, ಆನಂದತುಂದಿಲವಾಗುವುದು ಆತ್ಮ. ಒಂದರ ಹಿಂದೊಂದರಂತೆ ಸಾಲು ಸಾಲಾಗಿ, ಮಾಲೆ ಮಾಲೆಯಾಗಿ ಹಬ್ಬಿರುವ ಮಲೆಗಳು- ಹಸಿರು ಹೊದೆದ, ಹೂ ಮುಡಿದ, ಮಂಜು ತಳೆದ ಮಲೆಗಳು,– ಅಲ್ಲಿ ಒಮ್ಮೆಗೆ ಇಳಿಜಾರಾಗಿ ಇಲ್ಲಿ ಒಮ್ಮೆಗೆ ಉತ್ತುಂಗವಾಗಿ, ಸಪ್ತಭಂಗಿಯ ಶೃಂಗಗಳಾಗಿ, ಮಂಗಳ ಧಾಮಗಳಾಗಿ, ಬಂಗಾರ ಬೆಳಕಿನಲ್ಲಿ ಝಗಝಗಿಸಿ ಬಗೆಗೊಳ್ಳುವ ಮಲೆಗಳು! ದಕ್ಷಿಣ ಕನ್ನಡ ಜಿಲ್ಲೆಯತ್ತ ದೃಷ್ಟಿ ಹೊರಳಿಸಿದರೆ ಕಾಣುವುದು ಕುದುರೇ ಮುಖ; ಮೈಸೂರಿನತ್ತ ನೋಡಿದರೆ ಬೆಟ್ಟದ ಪುರ, ಚಾಮುಂಡೀ ಬೆಟ್ಟಗಳ ಚೇತೋಹಾರಿ ದೃಶ್ಯ; ಮಲಾಬಾರಿನತ್ತ ವೀಕ್ಷಿಸಿದರೆ ವೈನಾಡು ಗಿರಿಸಾನು, ದೂರದ ನೀಲಗಿರಿಯ ದೊಡ್ಡಬೆಟ್ಟ; ಇನ್ನಷ್ಟು ದೂರ ದೃಷ್ಟಿ ಹರಿದರೆ ಮಂಗಳೂರು ಕಾನನೂರುಗಳ ಕರಾವಳಿಯ ಬೆರಗುಗೊಳಿಸುವ ಬೆಡಗು-ತೆಂಗು, ಕೌಂಗು, ಗೇರು ಗೋಡಂಬೆಗಳ ವನಗಳು; ಅಂಕು ಡೊಂಕಾಗಿ ಉರಗ ಸದೃಶವಾಗಿ ಹರಿವ ಹೊಳೆಗಳು, ಕೊಳಗಳು, ಬಗೆ ಬಗೆಯ ಬೆಳೆಗಳು, ಬಳ್ಳಿಗಳು, ಪೊದೆಗಳು; ಅದೊ, ಆಚೆಗೆ ವೀಚಿವಿರಹಿತ ವಾರಿ ವಿಸ್ತಾರ-ಕಡಲು! ಮೇಲೆ ನಲಿವ ನೌಕೆಗಳು! ಅದರಾಚೆ ಬಾನ ನೀಲಿ ಕಡಲ ನೀಲಿಯನ್ನು ಚುಂಬಿಸುತ್ತಿರುವ ರೋಮಾಂಚನಕರ ದೃಶ್ಯ! ಪ್ರೇಕ್ಷಣೀಯ ಪುಷ್ಪಗಿರಿಯಿಂದ ನೋಡಿದರೂ ಸುಂದರ ದೃಶ್ಯಗಳ ಸುರುಳಿ ಬಿಚ್ಚುತ್ತದೆ.

ಕೊಡಗು ಕಾಶ್ಮೀರದಂತೆ ನೋಡಬಂದವರಿಗೆ ನಂದನವನವಾಗಿ, ಅಲ್ಲಿರುವವರಿಗೆ ಬಡತನದ ಬೀಡಾಗಿಲ್ಲ. ಸೌಂದರ್ಯದೊಡನೆ ಸಮೃದ್ಧಿಯನ್ನೂ ಪಡೆದ ಪುಣ್ಯಶಾಲಿಯಾದ ಪ್ರದೇಶವಿದು. ಮಲೆಗಳ ಇಳಿಜಾರುಗಳಲ್ಲಿ ಕಾಫಿ, ಏಲಕ್ಕಿ, ಚಹಾದ ತೋಟಗಳು; ಸಮನೆಲ ಸಿಕ್ಕುವಲ್ಲೆಲ್ಲ ಬತ್ತ, ಕಿತ್ತಳೆ, ಇತರ ಫಲದ್ರುಮಗಳು; ಮರಮರಕ್ಕೆ ಏರಿರುವ ಮೆಣಸಿನ ಬಳ್ಳಿಗಳು; ಮನೆಮನೆಗೆ ಮಧುವನಗಳು, ಜೇನು–ಗೂಡುಗಳು; ನಿಂತ ಶ್ರೀಮಂತಿಕೆಯೆನಿಸಿರುವ ಅರಣ್ಯ ವಿಸ್ತೀರ್ಣ, ನೋಡದ ನಿಧಿಗಳೆನಿಸಿರುವ ಖನಿಜಗಳು- ಹೀಗೆ ಹಲವು ಬಗೆಯ ಸಿರಿವಂತಿಕೆಯನ್ನು ಪಡೆದ ನಾಡು ಕೊಡಗು.

ಇವುಗಳಲ್ಲಿ ಒಂದೊಂದರ ಬಗೆಗೂ ಒಂದಿಷ್ಟು ವಿವರಣೆ ಅಗತ್ಯವೆನಿಸುತ್ತಿದೆ. ಕೊಡಗಿನಲ್ಲಿ ಬತ್ತದ ಕ್ಷೇತ್ರ ೧೯೬೭-೬೮ರ ಅಂಕಿ ಸಂಖ್ಯೆಗಳ ಪ್ರಕಾರ ೧,೧೨,೫೪೧ ಎಕರೆಗಳು. ಬಹಳ ಉತ್ತಮವಾದ ಬತ್ತದ ಬೇಸಾಯ ಇಲ್ಲಿಯದು. ಸುಮಾರು ಹತ್ತು ಸಾವಿರ ಟನ್ನುಗಳಷ್ಟಾದರೂ ಹೆಚ್ಚಿನ ಬತ್ತ ಬೆಳೆದು ಹೊರಗೆ ಕಳಿಸುತ್ತಾರೆ. ಕೊಡಗಿನಲ್ಲಿ ನಾನಿದ್ದಾಗ ಆರಂಭಿಸಿದ ಬೇಸಿಗೆ ಬೆಳೆಯ ಆಂದೋಲನ ಇನ್ನಷ್ಟು ಬೇರುಬಿಟ್ಟರೆ ಇನ್ನೂ ಹೆಚ್ಚು ಬತ್ತವನ್ನು ಕನ್ನಡ ನಾಡಿಗೆ ಕೊಡಗು ಕೊಡಬಲ್ಲದು. ಇದಾಗಬೇಕಾದರೆ ಅಲ್ಲಿ ಸಣ್ಣ ದೊಡ್ಡ ನೀರಾವರಿ ಸೌಕರ್ಯಗಳು ಹೆಚ್ಚುಬೇಕು; ಸಾಂದ್ರ ಬೇಸಾಯ ಯೋಜನೆಯನ್ನು ಕೊಡಗಿನಾದ್ಯಂತ ಕೈಕೊಳ್ಳಬೇಕು. ಗ್ರಾಮ ವಿದ್ಯುದೀಕರಣ ಪೂರ್ಣವಾಗಬೇಕು; ಗ್ರಾಮಾಂತರ



ಟೀಕ ಬನದ ಸುಂದರ ನೋಟ



ಮೆಣಸಿನ ತೋಟದಲ್ಲಿ ಬಳ್ಳಿ ಹರಡಿರುವುದು

ಪ್ರದೇಶದಲ್ಲೆಲ್ಲ ಗಟ್ಟದಾರಿಗಳೂ ಸಣ್ಣ ದೊಡ್ಡ ಸೇತುವೆಗಳೂ ನಿರ್ಮಾಣಗೊಳ್ಳಬೇಕು.

ರಾಗಿಯ ಕ್ಷೇತ್ರ ಬಹಳ ಕಡಮೆ. ೫೪೯೪ ಎಕರೆ ಮಾತ್ರ. ನೆಲಗಡಲೆ, ಹತ್ತಿ, ಜೋಳ, ಸಜ್ಜೆ, ನವಣೆ, ಇತ್ಯಾದಿ ಇಲ್ಲವೆಂದರೂ ಸಲ್ಲುವುದು. ಕೊಡಗಿನ ಮುಖ್ಯಬೆಳೆಗಳೆಲ್ಲ ರೊಕ್ಕದ ಬೆಳೆಗಳು. ಕಾಫೀ-೮೬,೭೭೫ ಎಕರೆಗಳನ್ನು ವ್ಯಾಪಿಸಿದೆ. ಇದು ಭಾರತದ ಒಟ್ಟು ಕಾಫೀ ಕ್ಷೇತ್ರದ ಏಕ ತೃತೀಯಾಂಶದಷ್ಟಾಗುವುದು. ಇನ್ನೂ ಕಾಫೀ ಕ್ಷೇತ್ರ ಬೆಳೆಯುತ್ತಲೇ ಇದೆ. ತತ್ಪರಿಣಾಮವಾಗಿ ಕಾಡು, ಅದರೊಡನೆ ಮಳೆ ಕಡಿಮೆಯಾಗುತ್ತ ನಡೆದಿದೆ. ಇದು ಶುಭಲಕ್ಷಣವಲ್ಲ! ಇಲ್ಲಿಯೇ ಉದ್ಭವಿಸುವ ಕಾವೇರಿಯಲ್ಲಿ ನೀರು ಕಡಿಮೆಯಾದರೆ ಮೆಟ್ಟೂರು ಜಲಾಶಯದ ವರೆಗೆ ಕಾವೇರಿಯನ್ನೇ ನಂಬಿರುವ ರೈತರ ಗತಿಯೇನು? ಆದುದರಿಂದ ಕೊಡಗಿನಲ್ಲಿ ಕಾಡು ಕಡಿಮೆಯಾಗದಂತೆ ನೋಡಿಕೊಳ್ಳಲೇಬೇಕು.

ಕಾಫಿಯ ತರುವಾಯ ಕಿತ್ತಳೆಯ ಕ್ಷೇತ್ರ-೨೮೧೫೩ ಎಕರೆಗಳಷ್ಟು. ಕೊಡಗಿನ ಇನ್ನೊಂದು ಪ್ರಖ್ಯಾತವಾದ ಬೆಳೆ ಏಲಕ್ಕಿಯದು- ೧೫೨೪೫ ಎಕರೆಗಳಲ್ಲಿ. ಇವಲ್ಲದೆ ೭೭೮ ಎಕರೆಗಳಷ್ಟು ಅಡಿಕೆ, ೮೯೪ ಎಕರೆಗಳಲ್ಲಿ ಮೆಣಸು, ೨೧೨ ಎಕರೆ ತೆಂಗು, ೧೨೨೨ ಎಕರೆ ಚಹ! ಹೇಗಿದೆ ಕೊಡಗಿನ ಸಮೃದ್ಧಿ? ಇವುಗಳಿಗೆ ೩,೦೨೪೦ ಎಕರೆಗಳ ರಕ್ಷಿತ ಅರಣ್ಯವನ್ನೂ, ಸಾಕಷ್ಟು ಕ್ಷೇತ್ರದಲ್ಲಿರುವ ದೇವರ ಕಾಡು, ಊರುಡುವೆ, ಪೈಸಾರಿ ಕಾಡುಗಳನ್ನೂ, ಶೋಧಿತ ಅಶೋಧಿತ ಗಣಿಗಳನ್ನೂ, ಪ್ರಗತಿಪರ ಸುಶಿಕ್ಷಿತ ಕೃಷಿಕ ಸಮಾಜವನ್ನೂ, ಹಳ್ಳಿಹಳ್ಳಿಗೂ ಹಬ್ಬಿರುವ ಜೇನುಗಾರಿಕೆ, ಸಹಕಾರ ಸಂಘಗಳು, ಕುಟೀರ ಉದ್ಯೋಗಗಳು, ವನ್ಯ ಪ್ರಾಣಿ ಸಂಪತ್ತುಗಳನ್ನು ಸೇರಿಸಿದರೆ ಕೊಡಗಿನ ಸಮೃದ್ಧಿಯ ಕಲ್ಪನೆ ಬರುತ್ತದೆ.

ಇನ್ನು ಅದರ ವೈವಿಧ್ಯವನ್ನು ಕಂಡೇ ಅನುಭವಿಸಬೇಕು. ಭೌಗೋಲಿಕ ಪಾಕೃತಿಕ ವೈವಿಧ್ಯದ ಜೊತೆಗೆ ಮಳೆಬೆಳೆಗಳ ವೈವಿಧ್ಯ, ವನರಾಜಿಯ ವೈವಿಧ್ಯ, ಭಾಷೆಗಳ ವೈವಿಧ್ಯ, ಉಡಿಗೆ ತೊಡಿಗೆಗಳ ವೈವಿಧ್ಯ, ರೂಢಿ ರೀತಿಗಳ ವೈವಿಧ್ಯ, ಆಹಾರ ವಿಹಾರಗಳ ವೈವಿಧ್ಯ, ಮದುವೆ-ಪೂಜೆ-ಪುರಸ್ಕಾರಗಳ ವೈವಿಧ್ಯ-ಹೀಗೆ ಹಲವು ಬಗೆಯ ವೈವಿಧ್ಯಗಳ ತವರು ಕೊಡಗು. ಅಲ್ಲಿ ಅಲ್ಪ ಸಂಖ್ಯಾತಕವಾಗಿದ್ದರೂ ಅಂತರರಾಷ್ಟ್ರೀಯ ಖ್ಯಾತಿಯನ್ನು ಪಡೆದ ಕೊಡವರ ಸಮಾಜವಿದೆ; ಜೇನು ಕುರುಬರು, ಕಾಡು ಕುರುಬರು ಮೊದಲಾದ ಗಿರಿಜನರಿದ್ದಾರೆ; ಹರಿಜನರಿದ್ದಾರೆ; ಕೇರಳೀಯರಿದ್ದಾರೆ; ಮಹಮ್ಮದೀಯರಿದ್ದಾರೆ; ಕ್ರಿಶ್ಚಿಯನರಿದ್ದಾರೆ; ಬ್ರಾಹ್ಮಣ-ಜೈನ-ವೀರಶೈವ-ಗೌಡ-ಬಿಲ್ಲವ ಮೊದಲಾದವರಿದ್ದಾರೆ. ಆದರೂ ಸಾಮಾಜಿಕ ಜೀವನದಲ್ಲಿ ಸಾಮರಸ್ಯವೇ ಪ್ರಧಾನ ಲಕ್ಷಣವಾಗಿ ಕಾಣುತ್ತಿದೆ. ವೇಶ್ಯಾವೃತ್ತಿಯಿಲ್ಲ. ಪಾನ ಪ್ರವೃತ್ತಿಯಿದೆ. ಅತಿಥಿ ಸತ್ಕಾರ ಅತಿಯೆನಿಸುವ ಮಟ್ಟಿಗೆ ಇದೆ. ಕಳವಿಲ್ಲ, ಕೃಪಣತನವಿಲ್ಲ, ಕೀಳ್ತನವಿಲ್ಲ. ಚಾಡಿಕಾರರು ಸಿಕ್ಕಬಹುದು, ಬೇಡಿಕೊಳ್ಳುವವರು ಕಡಮೆ. ವೀರತನವಿದೆ, ಉದಾರತನವಿದೆ, ಚಾರುತೆಯಿದೆ, ಸುರುಚಿಯಿದೆ, ಸಣ್ಣತನವಿಲ್ಲ.

ಒಟ್ಟಿನಲ್ಲಿ "ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು" ಈ ಕೊಡಗಿನದು. ಕನ್ನಡ ನಾಡಿನ ಕಾಮಧೇನು ಕೊಡಗು ಜಿಲ್ಲೆ. ಈ ಪುಟ್ಟ ಪರಿಚಯವನ್ನು ಕೊಡವರ ಜಾನಪದ ಗೀತೆಯೊಂದರ ಈ ಕೋರಿಕೆಯೊಂದಿಗೆ ಮುಗಿಸೋಣ.-

ನಂದಾತ್ ಈ ಮನೆ ನಂದಿ ಮಹದೇವ!
ಒಂದಾಂಗೊಂನ್ ಕೂಡಿ ಪೊಲಿಂಜಿ ಬರಡೊ!
ಪತ್ತಾಯ ಚಿತ್ತಾರಿ ತೊನೆಯ ತಿರಡೊ!
ಪೊಳ್ಳಾಲ್ ಪಾಕುಂಞ್ಞಿ ತಪ್ಪತಿರಡೊ!
ತೊಟ್ಟಾಲ್ ಕರಪತ್ತ ತಪ್ಪತಿರಡೊ!
ಪೊಟ್ಟಿಲ್ ಬೀರಾಳಿ ನೀಂಗತಿರಡೊ!
ಚೆಪ್ಪಿಲ್ ಪೊಂಬಣ ಅನಂಗ ತಿರಡೊ!

(ನಂದಿವಾಹನ, ಮಹಾದೇವ, ಈ ಮನೆ ಆನಂದಮಯವಾಗಿರುವಂತೆ ಅನುಗ್ರಹಿಸು; ಈ ಮನೆಯಲ್ಲಿ ಒಂದಕ್ಕೊಂದು ಸೇರಿ ಒಗ್ಗಟ್ಟಾಗಿ, ಪ್ರಗತಿಯುಂಟಾಗಲಿ; ಉಗ್ರಾಣದಲ್ಲಿ ಸಣ್ಣಕ್ಕಿ ಸದಾ ತುಂಬಿರಲಿ; ತೊಟ್ಟಿಲಲ್ಲಿ ಹಾಲುಂಡ ಹಸುಗೂಸು ತಪ್ಪಗಿರಲಿ; ಕೊಟ್ಟಿಗೆಯಲ್ಲಿ ಹಾಲು ಕರೆವ ಹಸು ಯಾವಾಗಲೂ ಇರಲಿ; ಪೆಟ್ಟಿಗೆಯಲ್ಲಿ ಪಟ್ಟೆ ಪೀತಾಂಬರ ನಿರಂತರ ತುಂಬಿ ತುಳುಕುತ್ತಿರಲಿ! )

ಕೊಡವರ ಈ ಹುತ್ತರಿ ಹಾಡಿನ ಕೋರಿಕೆ ಎಲ್ಲ ಕನ್ನಡಿಗರ ಹಾರೈಕೆಯಾಗಲಿ! ನನ್ನ ಮಟ್ಟಿಗೆ ಹೇಳುವುದಾದರೆ ಪಂಪ "ನೆನೆವುದೆನ್ನ ಮನಂ ಬನವಾಸಿ ದೇಶಮಂ" ಎಂದು ಉದ್ಗರಿಸಿದರೆ ನಾನು "ನೆನೆವುದೆನ್ನ ಮನಂ ಕೋಡಿ ಮಲೆನಾಡಂ" ಎಂದು ಅನವರಿಸುತ್ತಿರುವೆನು!

●



ಸರೋದ್



ಏಸ್ ರಾಜ್

ಶಾಸ್ತ್ರ ಮತ್ತು ಮಾಧುರ್ಯ ಎರಡನ್ನೂ ಅಳವಡಿಸಿಕೊಂಡು ಇವು ಜನಪ್ರಿಯವಾಗಿವೆ

# ಹಿಂದು-ಮುಸ್ಲಿಂ ಮೈತ್ರಿ ವಾದ್ಯಗಳು

+ಸಂತೋಷ್‌ಕುಮಾರ ಗುಳವಾಡಿ

ವೈವಿಧ್ಯ ಭಾರತೀಯ ಸಂಗೀತದ ವೈಶಿಷ್ಟ್ಯ. ಹಾಗೆಂದೇ ಹೊರಗಿನ ಪ್ರಭಾವಗಳನ್ನೂ ಅರಗಿಸಿಕೊಂಡು ನಮ್ಮ ಸಂಗೀತ ಸಮೃದ್ಧವಾಗಿ ಬೆಳೆಯಿತು. ನಮ್ಮ ಸಂಗೀತವಾದ್ಯಗಳಿಗೂ ಈ ಮಾತು ಅನ್ವಯಿಸುತ್ತದೆ. ಮುಘಲ್ ಕಾಲಕ್ಕೆ ನಮ್ಮ ಸಂಗೀತದಲ್ಲಿ – ಮುಖ್ಯವಾಗಿ ಉತ್ತರದಲ್ಲಿ – ಆದ ಪುನರುಜ್ಜೀವನ ಹೊಸ ತಿರುವೊಂದನ್ನೇ ತಂದಿತು. ಇತಿಹಾಸದಲ್ಲಿ ಇದೊಂದು ಮುಖ್ಯ ಹಂತ. ಭಾರತೀಯ ವಾದ್ಯಗಳ ಮೇಲೆ ಅರಬ್-ಪರ್ಶಿಯಾಗಳ ಪ್ರಭಾವ ಹೆಚ್ಚಾದುದು ಇದೇ ಕಾಲದಲ್ಲಿ. ವಾದ್ಯಗಳಲ್ಲಿ ನವೀನ ಆವಿಷ್ಕಾರವಾಗಿ, ಭಾರತೀಯ [illegible] ಹಿಂದು – ಮುಸ್ಲಿಂ ಮೈತ್ರಿಯ ಹಿನ್ನೆಲೆಯಲ್ಲಿ. ತಾನಸೇನ ಮತ್ತು ಅಮೀರ ಖುಸ್ರು ಈ ಬದಲಾವಣೆಯ ಧ್ರುವ ತಾರೆಗಳು. ಅಬುಲ್ ಫಝಲ್‌ನ 'ಐನ್ – ಇ– ಅಕ್ಬರಿ' ಅಹೋಬಲನ 'ಸಂಗೀತ ಪಾರಿಜಾತ' (೧೭ನೆಯ ಶತಮಾನ), ದಾಮೋದರನ 'ಸಂಗೀತ ದರ್ಪಣ' ಜಹಾಂಗೀರನ ಆಸ್ಥಾನ ಕವಿ – ೧೭ನೆಯ ಶತಮಾನ ಮಹಾ ದಾಖಲೆಗಳು. ಈ ಪರಿಷ್ಕರಣದಲ್ಲಿ ಹುಟ್ಟಿಕೊಂಡ ಅನೇಕ ವಾದ್ಯಗಳು ಇದಕ್ಕೆ ಶಾಸ್ತ್ರ – ಮಾಧುರ್ಯ ಎರಡನ್ನೂ ಅಳವಡಿಸಿಕೊಂಡು ಇಂದಿನ ವರೆಗೆ ಬೆಳೆದು ಕೊಂಡು ಬಂದು ಜನಪ್ರಿಯವಾಗಿವೆ. ಅವು ಬಾಳಿಕೊಂಡು ಬಂದ ಕಥೆ ಕುತೂಹಲಕಾರಿ.

## ಸಪ್ತತಾರ

ವೀಣೆಯ ಸುಲಭೀಕರಣದ ಪ್ರಯತ್ನಗಳು ೧೧-೧೨ನೆಯ ಶತಮಾನದಲ್ಲಿ ನಡೆದೇ ಇದ್ದುವು. ಇದಕ್ಕೆ ಪರ್ಶಿಯಾದ ಸ್ಫೂರ್ತಿ ಅವಶ್ಯವಾಯಿತು. ಅಲ್ಲಾವುದ್ದೀನ್ ಖಿಲ್ಜಿಯ ದರಬಾರದಲ್ಲಿದ್ದ ಅಮೀರ್ ಖುಸ್ರು (೧೨ನೆಯ ಶತಮಾನ) ವೀಣೆಯ ಸೌಲಭ್ಯವುಳ್ಳ ಆದರೆ ಕೆಲವು ಹೊಸ ತೊಡಕುಗಳು ಅನಿವಾರ್ಯವಾದ ಮೂರು ತಂತಿಗಳ ವಾದ್ಯವೊಂದನ್ನು ಆವಿಷ್ಕರಿಸಿದನು. ಇದಕ್ಕೆ ಅವನಿಟ್ಟ ಹೆಸರು 'ಸಹತಾರ್' ಎಂದು. ಮೂರು ತಂತಿಗಳ ಈ ವಾದ್ಯ ಪೂರ್ಣವಾಗಿರಲಿಲ್ಲ. ಪಾರಸೀ ಭಾಷೆಯಲ್ಲಿ 'ಸಹ' ಎಂದರೆ ಮೂರು ಎಂದರ್ಥ. ಈ ವಾದ್ಯದ ಸುಧಾರಣೆಯಾಗಲು ಇನ್ನೂ ಅರ್ಧ ಶತಮಾನವೇ ಬೇಕಾಯಿತು. ಅದರ ಜನಕ ಯಾರೆಂದು ಗೊತ್ತಿಲ್ಲದಿದ್ದರೂ ಆ ಮಹಾನುಭಾವನ ಹೃದಯ ಭಾರತೀಯವೇ ಆಗಿದ್ದಿರಬೇಕು. ೧೭ ಚಲಿಸುವ ಮೆಟ್ಟಲುಗಳು ಹಾಗೂ ೭ ತಂತಿಗಳ ಈ ಪೂರ್ಣವಾದ್ಯದ ಹೆಸರು ಸಪ್ತತಾರ್. ಇನ್ನೊಂದು ತರ್ಕದಂತೆ 'ಛತಾರ್' (ಆರು ತಂತಿಗಳು) ಇದ್ದುದು ಸಿತಾರ್ ಆದುದು. ಏಳನೆಯ ತಂತಿಯನ್ನು ಹೆಸರಾಂತ ಸಿತಾರಪಟು ವಿಲಾಯತ್ ಖಾನರ ಪೂರ್ವಜರು ಜೋಡಿಸಿದರು.

ನಾವು ಇಂದು ಕಾಣುವ ಸಿತಾರ್ ಸುಧಾರಣೆಯಾದುದು ಬಹುಶಃ ೧೯ನೆಯ ಶತಮಾನದ ಕೊನೆಯಲ್ಲಿ. ಆದರೆ ಇಂದಿಗೂ ವೀಣೆಯಲ್ಲಿ ನುಡಿಸುವ ಸಿತಾರ್‌ನಲ್ಲಿ 'ಹಾಡು' ನುಡಿಸಲು ಬರುವುದಿಲ್ಲ. ಗಮಕಗಳಿಗೆ ತೊಡಕಿದ್ದೇ ಇದೆ. ಕರ್ನಾಟಕ ಪದ್ಧತಿಗೆ ಸಿತಾರ್ ಹೊಂದಿಕೊಂಡಿಲ್ಲ. ಸಿತಾರ್‌ನಲ್ಲಿ ಗತ್, ಆಲಾಪ್, ಜೋಡ್, ಝಾಲಾ ಪ್ರದರ್ಶಿಸಲು ಸಾಧ್ಯ. ಇಂದಿನ ಸಿತಾರ್‌ನಲ್ಲಿ ಚಲ ಹಾಗು ಅಚಲ ಎಂಬ ಎರಡು ವಿಧಗಳಿವೆ. ಅಚಲದಲ್ಲಿ ೨೨-೨೪ ಮೆಟ್ಟಲುಗಳು. ವೀಣೆ ಗಂಭೀರ ಸ್ವರ ಕೊಟ್ಟರೆ ಸಿತಾರ್ ಲಲಿತ ಸ್ವರ ಕೊಡುತ್ತದೆ. ವೀಣೆಗೆ ತರಫ್ (ಕಂಪನ ತಂತಿಗಳು) ಇಲ್ಲ. ಸಿತಾರಿಗೆ ೧೧ ತರಫ್‌ಗಳಿವೆ. ಇದು ಅರೇಬಿಯಾ – ಪರ್ಶಿಯಾ ಸ್ಫೂರ್ತಿ.



ಸಾರಿಂದಾ

ಅಮೀರ್‌ಖುಸ್ರುವಿನ ಮೂರು ತಂತಿಗಳ ಸಹತಾರವನ್ನು ಇಂದಿಗೂ ನುಡಿಸುವವರಿದ್ದಾರೆ. ಇಪ್ಪತ್ತನೆಯ ಶತಮಾನದಲ್ಲೂ ಸಿತಾರಿನಲ್ಲಿ ಕೆಲವು ಯಶಸ್ವೀ ಪ್ರಯೋಗಗಳಾಗಿವೆ. ರುದ್ರವೀಣೆ – ಸಿತಾರ್ ಗಳೆರಡರ ಸೌಲಭ್ಯದ 'ಬೀನ್‌ಸಿತಾರ್' ಉತ್ತರದಲ್ಲಿ ಕೆಲವು ಕಾಲ ಬಹಳ ಜನಪ್ರಿಯವಾಯಿತು. ಸಿತಾರಿಗೊಂದು ನವಿಲಿನ ಮುಖ ಜೋಡಿಸಿ 'ಮಯೂರಿ'– 'ತಾಯುಸ್' ಎಂದು ಕರೆದರು. ಪಾಶ್ಚಾತ್ಯರ ಬಾಸ್ ಅನುಕರಣೆಯಲ್ಲಿ 'ಸೂರಶೃಂಗಾರ' ಇಲ್ಲವೆ 'ಸುಂದರಿ' ರಚಿತವಾಯಿತು. ಸೋರೆಬುರುಡೆಯನ್ನೇ ಅಡ್ಡಕ್ಕೆ ಕೊಯ್ದು ರಚಿಸಿದ ಚಪ್ಪಟೆಯಾಕಾರದ 'ಸೂರ ಬಹಾರ' ಬಂಗಾಳದಲ್ಲಿ ಬಹು ಪ್ರಿಯ. ಅಮೇರಿಕೆಯಲ್ಲಿ ರವಿಶಂಕರ್ ಪ್ರಚಾರ ಮಾಡಿದ ಮಿನಿಸಿತಾರ್ – ಇವು ಯಾವುದೂ ಇದುವರೆಗೆ ಸಿತಾರ್ ಯೋಗ್ಯತೆಯನ್ನು ಮೀರಲಾಗಿಲ್ಲ.

## ಭಾರತೀಯ ಪಿಟೀಲು

ಇದು ಹುಟ್ಟಿದುದು ಭಾರತದಲ್ಲಿ; ಬೆಳೆದುದು ಪರ್ಶಿಯಾ ಅರೇಬಿಯಾಗಳಲ್ಲಿ. ಅಫಘಾನಿಸ್ತಾನದ ೧೩ರಿಂದ ೨೨ ತರಫುಗಳು. ತಂತಿಗಳ ಅಡಿಯಿಂದ ಉಗುರಿನ ಮೂಲದಿಂದ ಸವರಿ ಸವರಿ ನುಡಿಸುವ ಕ್ರಮ. ಮಾನವನ ಕಂಠಕ್ಕೆ ಅತ್ಯಂತ ಹತ್ತಿರದ ವಾದ್ಯ.

ಒಂದು ತಂತಿಯ ವಾದ್ಯದಿಂದಾರಂಭಿಸಿ ಇಂದಿನ ಸ್ವರೂಪ ಗೌರವ ಪಡೆಯುವ ವರೆಗಿನ ಸಾರಂಗಿಯ ಕಥೆ ಸ್ವಾರಸ್ಯಕರ. ಭಾರತಕ್ಕೆ ಪ್ರವೇಶ ಮಾಡುವಾಗ ಇದಕ್ಕೆ ಎರಡೇ ತಂತಿಗಳಿದ್ದವು. ತರಫಗಳಿರಲಿಲ್ಲ. ಈ ರೂಪದಲ್ಲಿ ಅದಕ್ಕೆ ಸಾರಿಂದಾ ಎಂಬ ಹೆಸರು. ಕಮಾನಿನಿಂದ ನುಡಿಸುವರು. ಮೂರು ತಂತಿಗಳು, ಐದು ತರಫಗಳಿರುವ ಇದೇ ರೀತಿಯ ವಾದ್ಯ ಚಿಕಾರಾ.

ಸಾರಂಗಿಯ ಅಣ್ಣನೋ ತಮ್ಮನೋ ಆಗಿರುವ ಇಂದಿನ ಸರೋದ್, ಅದರ ಮೂಲ ರಬಾಬ್ ಪ್ರಗತಿಯ ಹಂತದಲ್ಲಿ ಕವಲೊಡೆದು ಸ್ವತಂತ್ರ ವಾದ್ಯಗಳಾದುವು. ಮುಂಬಯಿಯ ಗಂಧರ್ವ ವಿದ್ಯಾಲಯದಲ್ಲಿ ಏಳು ಅಡಿ ಎತ್ತರದ ಒಂದು ಸಾರಂಗಿ ಮಾಡಿಟ್ಟಿದ್ದಾರೆ. ವಾದ್ಯ ವೃಂದಕ್ಕಾಗಿ ಇಂಗ್ಲಿಷ್ ಬಾಜ್. ಮಾದರಿಯಲ್ಲಿದೆ. ಸಾರಂಗಿಗೆ ಸಮನಾದ ಪಕ್ಕವಾದ್ಯ ಇನ್ನೂ ಇಲ್ಲ.

## ಸ್ವರಾಧ್ಯಾಯಿ

"ಇದು ಭಾರತೀಯ ವಾದ್ಯ" ಎನ್ನುತ್ತಾರೆ, ಜನ



ಆಧುನಿಕ ಸಿತಾರ



ಚಿಕಾರಾ



ರಾವಣಾಸ್ತ



ರಬಾಬ್

ಮೂಲಕ ಮತ್ತೆ ಭಾರತಕ್ಕೆ ಫಕೀರರ ಜಾನಪದ ವಾದ್ಯವಾಗಿ ಪ್ರವೇಶಿಸಿದ ಸಾರಂಗಿ ಮೊಘಲರ ಕಾಲಕ್ಕೆ ವೇಶ್ಯಾಗಾರದಲ್ಲಷ್ಟೇ ಇದ್ದಿತ್ತು. ಮೂಲರಾವಣನ ಆವಿಷ್ಕಾರವೆನಿಸಿದ 'ರಾವಣ ಹಸ್ತ' ಇಲ್ಲವೇ ರಾವಣಾಸ್ತ ಜಗತ್ತಿನಲ್ಲಿ ಕಮಾನಿನಿಂದ ನುಡಿಸುವ ಮೊತ್ತ ಮೊದಲ ವಾದ್ಯ. ದಕ್ಷಿಣದಲ್ಲಿ ಈ ವಾದ್ಯ ಇಲ್ಲವೆನ್ನುವಷ್ಟು ವಿರಳ. ಕರ್ನಾಟಕ ಸಂಗೀತದಲ್ಲಿ ಪಿಟೀಲು ಪಕ್ಕವಾದ್ಯವಾದರೆ ಹಿಂದುಸ್ತಾನಿಯಲ್ಲಿ ಆ ಸ್ಥಾನ ಸಾರಂಗಿಗೆ.

ಮಹಾಕಠಿಣವಾದ್ಯ. ಎರಡು ಅಡಿಗಳ ಅಖಂಡ ಒಂದು ತುಂಡು. ಖೈರ್ (ಕಾಚು) ಮರದ ವಾದ್ಯದ ಹೊಟ್ಟೆಗೆ ಚರ್ಮ ಹೊದಿಸುತ್ತಾರೆ. 'ಉರಜ್' ಎನ್ನುವ ನಾಲ್ಕು ಗಟ್ (ಚರ್ಮದಿಂದ ಮಾಡಿದ) ತಂತಿಗಳು; ಪ್ರಿಯಗೊಳಿಸಿದ ಉಸ್ತಾದ್ ಅಲ್ಲಾವುದ್ದೀನ್ ಖಾನ್, ಮಗ ಅಲೀ ಅಕ್ಬರ್ ಖಾನ್. ಇಂದಿನ ಹೆಸರು ಸರೋದ್. ಮೆಟ್ಟಿಲುಗಳಿರುವ ಜಾಗದಲ್ಲಿ ಲೋಹದ (ತಗಡಿನ) ಹೊದಿಕೆ ಇರುತ್ತದೆ. ಹೊಟ್ಟೆಗೆ ಚರ್ಮದ ಹೊದಿಕೆ.

ಸಂತೋಷಕುಮಾರ ಗುಲ್ವಾಡಿ

ರೇಖಾ ಚಿತ್ರಗಳು : ವೈ. ಎಸ್. ಪ್ರಭು

ಭಾರತೀಯ – ಪರ್ಶಿಯಾ – ಅರೇಬಿಯಾ ಬುದ್ಧಿವಂತಿಕೆಯ ಅತಿ ಹೆಚ್ಚಿನ ಪ್ರಯೋಗಗಳು ಈ ವಾದ್ಯದ ಮೇಲಾಗಿ ಇಂದು ಅತಿ ಮಧುರವಾದ್ಯವಾಗಿ ರೂಪಿತವಾಗಿದೆ. ಸಾರಂಗಿ ಮತ್ತು ರಬಾಬ್ ಪ್ರಕಾರಗಳಾಗಿ ಒಂದನ್ನು ಕಮಾನಿನಿಂದ ನುಡಿಸುವ ವಾದ್ಯವನ್ನಾಗಿ ಅಭಿವೃದ್ಧಿಪಡಿಸಿ ಇನ್ನೊಂದನ್ನು ಮಿಡಿಯುವ ವಾದ್ಯವನ್ನಾಗಿ ಉಪಯೋಗಿಸಿದಾಗಲೇ ಸರೋದ್ ಸ್ವತಂತ್ರವಾಯಿತು.

ರಬಾಬ್ ಕೂಡ ರಾವಣನ ಆವಿಷ್ಕಾರ 'ವೀಣಾ ಪಾಹ'ದ ಆಧುನಿಕ ಸ್ವರೂಪ. ರಬಾಬ್‌ನು ಸರೋದ್

—೨೩೪ನೆಯ ಪುಟಕ್ಕೆ



ಭಕ್ತಿಪುರಸ್ಸರ ಲಕ್ಷ್ಮೀಪೂಜೆ

## ಜೂಜಾಡದಿದ್ದವ ಮುಂದಿನ ಜನ್ಮದಲ್ಲಿ ಕತ್ತೆಯಾಗುತ್ತಾನೆ!




ಭಾರತೀಯ ಜನಜೀವನದಲ್ಲಿ ತಮ್ಮ ಕಷ್ಟನಷ್ಟಗಳನ್ನು ಒಳಗೇ ಹುದುಗಿಸಿಟ್ಟುಕೊಂಡು ಬಹು ಜೀವಂತವಾಗಿ ಬಾಳಿ, ರಸ ಜೀವನಕ್ಕೆ ಮೌಲ್ಯಕಟ್ಟುವ ಜನಾಂಗವೆಂದರೆ ಪಂಜಾಬಿಗಳು. ಮನುಷ್ಯನಿಗೆ, ತಾನಾಗಿಯೇ ಬಂದೊದಗುವ ಕಷ್ಟ ಪರಂಪರೆಗಳಿಗಿಂತ ಅವನಾಗಿಯೇ ಕಲ್ಪಿಸಿಕೊಳ್ಳುವ ತೊಂದರೆ ತಾಪತ್ರಯಗಳು ಹೆಚ್ಚು. ಆದರೆ ಪಂಜಾಬಿಗಳು ಇದಕ್ಕೆ ಅಪವಾದವೆಂದು ನನಗನಿಸುತ್ತದೆ. ಬರುವ ತೊಂದರೆಗಳು ಏನಿದ್ದರೂ ಇವರ ಮುಖ ಮಾತ್ರ ಯಾವಾಗಲೂ ಗೆಲುವಿನಿಂದಿರುತ್ತದೆ.

ಅಪ್ಪಟ ಹಿಂದುಗಳೆನಿಸಿಕೊಳ್ಳುವ ನಮಗೂ ಹಿಂದುಗಳೆಂದು ಕರೆದುಕೊಳ್ಳುವ ಇವರಿಗೂ ಮಾನಸಿಕ, ಸಾಮಾಜಿಕ, ಸಾಂಸ್ಕೃತಿಕ ಜೀವನದಲ್ಲಿ ಅಂತರವಿರುವುದು ಸ್ಪಷ್ಟವಾಗುತ್ತದೆ. ಇವರ ಜೀವನದ ಯಾವ ಪ್ರಾಕಾರದಲ್ಲೂ ಜೀವಕಳೆ ತುಂಬಿ ತುಳುಕುತ್ತದೆಯೆನ್ನುವುದಕ್ಕೆ ಅವರುಗಳು ಆಚರಿಸುವ ದೀಪಾವಳಿ – ಒಂದು ದೃಷ್ಟಾಂತ.

ಹಿಂದೂ ಜನಾಂಗಕ್ಕೆ ವರ್ಷದಲ್ಲಿ ಎಷ್ಟು ದಿನಗಳಿವೆಯೋ ಅಷ್ಟೂ ದಿನಗಳಲ್ಲಿ ಒಂದಲ್ಲ ಒಂದು ವಿಧದ ಹಬ್ಬವಿರುತ್ತದೆ ಎಂದು ಅನ್ನರು ಆಡಿಕೊಳ್ಳುವಂತೆ ಮನೆಯಲ್ಲಿ ಏನಾದರೊಂದು ಇರಲೇಬೇಕು. ಇಂದಿನ ಕಷ್ಟದ, ಕ್ಷೋಭೆಯ, ಬಿಡುವಿಲ್ಲದ ಕಾಲದಲ್ಲೂ ಇದಕ್ಕೆ ಒಂದು ಅರ್ಥವಿದೆಯೆನ್ನುವುದಾದರೆ, ಹುಟ್ಟಿಸಿದ ದೇವರೇ ಅದಕ್ಕೆ ಅರ್ಥ ಹೇಳಬೇಕು. ಕೆಲವೊಮ್ಮೆ ಇದು ಯೋಚನಿಸುತ್ತದೆ.

ಋತುಗಳ ಅನುಸಾರ ಹಬ್ಬಗಳ ಜನನ. ಹಿಂದುಗಳಲ್ಲಿ ಎಷ್ಟು ಪಂಗಡಗಳಿವೆಯೋ ಅಷ್ಟು ಹಬ್ಬಗಳು. ಇವುಗಳಲ್ಲಿ ದೀಪಾವಳಿ (ಉತ್ತರದ ದಿವಾಲಿ) ಅಂತರಭಾರತಿ ಹಬ್ಬ. ಕೇರಳ ಪಾಲ್ಗೊಳ್ಳುವುದಿಲ್ಲವೆಂದು ತೋರುತ್ತದೆ. ಜೀವನಕ್ಕೊಂದು ಹೊಸ ಹುರುಪು ಈ ಹಬ್ಬ. ಪಂಜಾಬಿನ ಮಹಿಳೆಯರು ತಮ್ಮ ಪತಿವ್ರತೆಯ ಕಾಂತಿಪೂರ್ಣತೆಗೆ, ಮಕ್ಕಳ ಸುಖಕ್ಕಾಗಿ, ಪತಿದೇವರ ದೀರ್ಘಾಯುವಿಗಾಗಿ ಆಚರಿಸುತ್ತಾರೆ. ಇದೊಂದು ಸ್ತ್ರೀ ದೃಷ್ಟಿ ಮಾತ್ರ. ಕೌಟುಂಬಿಕವಾಗಿ, ಹಬ್ಬದ ಮುಖ್ಯಾಕರ್ಷಣೆ ಲಕ್ಷ್ಮೀ (ಸಿರಿ)ಯನ್ನು ಮನೆಯೊಳಗೆ ಕರೆತರುವುದು– ಅದು ಲಕ್ಷ್ಮೀ ಪೂಜೆಯೆನಿಸುತ್ತದೆ.

## ವಿಜಯೋತ್ಸವ

ಪಂಜಾಬಿಗಳ ಕಂದಾಚಾರದಂತೆ; ದೀಪಾವಳಿಯು ದಸರಾ ಮುಗಿದು ಸರಿಯಾಗಿ ಇಪ್ಪತ್ತು ದಿನಗಳು ಕಳೆದುವೆಂದರೆ ಈ ಹಬ್ಬ ಬರುವುದು ಸ್ವಾಭಾವಿಕವೆನ್ನುತ್ತಾರೆ. ಈ ೨೦ ದಿನಗಳ ಅಂತರವೇನೆಂಬ ಪ್ರಶ್ನೆ ಬಂದಾಗ – ಶ್ರೀ ರಾಮಚಂದ್ರ ರಾವಣಾದಿಗಳನ್ನು ಸಂಹಾರ ಮಾಡಿ ವಿಜಯೋತ್ಸವ ನಡೆಸಿದ ದಿನಗಳೆಂದು ಇವರಲ್ಲಿ ಪ್ರತೀತಿ. ಆ ಶುಭ ದಿನದಂದೇ ದಿವಾಲಿ ಆಚರಣೆ. ಸೀತೆಯೊಂದಿಗೆ ಶ್ರೀರಾಮಚಂದ್ರ ಅಂದೇ ಅಯೋಧ್ಯೆ ಸೇರಿದ. ನಮ್ಮ ಕರ್ನಾಟಕದಲ್ಲಿ ಮಹಾಭಾರತ ಅಂಶ (ಉತ್ತರ ಹಾಗೂ ದಕ್ಷಿಣ ಗೋಗ್ರಹಣ) ಈ ಹಬ್ಬದ ವಸ್ತುವಾದರೆ ಪಂಜಾಬಿಗಳಿಗೆ ರಾಮಾಯಣದ ಅಂಶ, ವಸ್ತು.

ದೀಪಾವಳಿಗೆ ಎರಡು ತಿಂಗಳ ಮುಂಚೆ, ಮನೆ. ಅಂಗಡಿಗಳು ಒಪ್ಪಗೊಂಡು ಹೊಸ ರೂಪ ಪಡೆಯುತ್ತವೆ. ತಮ್ಮ ತಮ್ಮ ಕುಟುಂಬಕ್ಕೆ ಸೀಮಿತವಾದ ಈ ಹಬ್ಬ ಅವರವರ ಮನೆಗಳಲ್ಲೇ ಆಚರಿಸುತ್ತಾರೆ. ಕುಟುಂಬ ಸದಸ್ಯ ಎಷ್ಟೇ ದೂರದಲ್ಲಿರಲಿ, ಯಾವ ಪ್ರದೇಶದಲ್ಲಿರಲಿ, ಅತ್ತೆಮನೆಯಲ್ಲಿರಲಿ, ಎಂಥ ಸಂದರ್ಭವಿದ್ದರೂ ಅಂದು ಸರಿಯಾಗಿ ಅವರುಗಳು ಒಡಹುಟ್ಟಿದರೊಂದಿಗೆ ಸೇರಲೇಬೇಕು. ಮಗಳು ತೌರಿಗೆ ಹೋಗುತ್ತಾಳೆ. ಸೊಸೆ ಅತ್ತೆಮನೆಗೆ ಹೋಗುತ್ತಾಳೆ.

ಹಬ್ಬಕ್ಕೆ ಮೊದಲು ಮನೆಗೆ ಸುಣ್ಣ ಬಣ್ಣಗಳಾಗಬೇಕು, ಪಾತ್ರೆಗಳಿಗೆ ಕಲಾಯಿ, ಹೊಸ ಹೊಸ ಸಾಮಾನುಗಳ ಖರೀದಿ – ಈ ಸಂಭ್ರಮ, ಉಲ್ಲಾಸಪೂರ್ಣ ವಾತಾವರಣದಿಂದೊಡಗೂಡಿರುತ್ತದೆ.

## ತರಕ್ ಚೌಥ್

ಹಬ್ಬದ ಮುನ್ನಾದಿನವನ್ನು 'ತರಕ್ ಚೌಥ್' ಎಂದೆನ್ನುತ್ತಾರೆ. ಅಂದು ಮನೆ ಪೂರ್ಣ ಸಜ್ಜಿನಿಂದ ಪೂರ್ಣವಾಗುತ್ತದೆ. ಹೊಸ ಪಾತ್ರೆಗಳನ್ನು ಅಂದೇ ಕೊಂಡು ತರಬೇಕು. ಕೊನೆಗೆ ಕೈಲಾದಷ್ಟನ್ನಾದರೂ ತಂದು ಮರುದಿನದ ಪೂಜೆಗೆ ಅದನ್ನು ಇಡಬೇಕಾ

ಗುತ್ತದೆ. ಈ 'ತೆರಕ್ ಚೌಥ್' ದಿನ ತಮ್ಮ ಮನೆಯನ್ನು ಎಷ್ಟು ಹೊಳುಪುಗೊಳಿಸಿದರೂ ಸಾಲದು, ಎಂಥಾ ಒಪ್ಪ ಮಾಡಿದರೂ ಸಾಲದು, ಆ ರೀತಿ ಸಜ್ಜು ಮಾಡುತ್ತಾರೆ.ಕಾರಣ, ಲಕ್ಷ್ಮೀ.ಮನೆಯ ವಾತಾವರಣ ನೋಡಿಯೇ ತಮ್ಮಲ್ಲಿ ಅತಿಶಯವಾಗಿ ಪ್ರಸನ್ನಳಾಗುವಳೆಂದು ಒಂದು ನಂಬಿಕೆ ಇವರಲ್ಲಿ. ಹೊಸಪಾತ್ರೆ ಪೂಜೆಯೂ ಇಂದೇ. ಚಿಕ್ಕ ದಿವಾಲಿ (ಛೋಟಾ ದಿವಾಲಿ) ಎಂದು ಕರೆಸಿಕೊಳ್ಳುತ್ತದೆ.

ಮಾರನೆಯ ದಿನವೇ ಮುಖ್ಯ ದೀಪಾವಳಿ. ಅಂದು ಸೂರ್ಯೋದಯಕ್ಕೆಮೊದಲೇ ಎದ್ದು ಸ್ವಯಂ ಕೈಲಿ ಚೀಲ, ಬುಟ್ಟಿಗಳನ್ನು ಹಿಡಿದು ಲೆಕ್ಕವಿಲ್ಲದಷ್ಟು ಬಗೆ ಬಗೆಯ ಸಿಹಿ ತಿನಸು, ಪೂಜಾ ಸಾಮಾನು, ಪಟಾಸುಗಳನ್ನು ಕೊಂಡು ತಂದು ಸಾಯಂಕಾಲಕ್ಕೆ ಮುಂಚೆಯೇ ತಮ್ಮ ಬಂಧುಮಿತ್ರರಿಗೆ ಮಿಠಾಯಿಗಳ ಸರಬರಾಜು ಆಗಲೇ ಬೇಕು. ಎಲ್ಲಾ ಅಂಗಡಿಯಲ್ಲಿ ಕೊಂಡು ತಂದದ್ದು. ಹಬ್ಬ ದಡಿಗೆಯ ಕಾಟವಿಲ್ಲ. ಹಬ್ಬದ ಸಂಭ್ರಮ ಅನುಭವಿಸ ಬೇಕಾದಲ್ಲಿ, ಅಡಿಗೆ ಮನೆ ಬಂದಿಯಾಗಿದ್ದರೆ ಸಾಧ್ಯವಿಲ್ಲ. ಹಬ್ಬದ ದಿನಗಳಲ್ಲಿ ನಮ್ಮ (ಕನ್ನಡನಾಡಿನ) ಹೆಂಗಸರು ಪಡುವ ಪಾಡು ಅಷ್ಟಿಷ್ಟಲ್ಲ. ನವವಧೂವರರು ಮೊದಲ ದೀಪಾವಳಿ ಆಚರಿಸುವುದು ನಮ್ಮಂತೆಯೇ ಅತ್ತೆ ಮಾವಂದಿರ ಮನೆಗಳಲ್ಲಿ. ಮನೆಯ ಮಗಳು ಹಬ್ಬ ಮುಗಿಸಿಕೊಂಡು ಅತ್ತೆಯಮನೆಗೆ ಹೊರಡುವಾಗ ಸಿಹಿ ತಿನಿಸುಗಳ ಗಂಟುಕಟ್ಟಿ ತೆಗೆದುಕೊಂಡು ಹೋಗುವ ಪದ್ಧತಿಯಿದೆ. ಕಾರಣವೆಂದರೆ ಅತ್ತೆಯರನ್ನು ಸಂತುಷ್ಟಗೊಳಿಸಲು. ಅತ್ತೆಗೆ ಲಂಚ ತಿನ್ನಿಸಿ ತನ್ನ ಕಡೆ ಮಾಡಿಕೊಳ್ಳಲು ಇದೂ ಒಂದು ಆಟ.

## ಲಕ್ಷ್ಮೀಪೂಜೆ

ಹಬ್ಬದ ಸಾಯಂಕಾಲ ಕೆಲ ಪಂಜಾಬಿಗಳು ಬ್ರಾಹ್ಮಣರನ್ನು (ಪಂಡಿತಜೀ) ಕರೆದು ಮನೆಯಲ್ಲಿ ಪೂಜೆ ಮಾಡಿಸುತ್ತಾರೆ. ಪೂಜೆ ಸಾಯಂಕಾಲದಲ್ಲೇ ಏಕೆ ಎಂದರೆ ಲಕ್ಷ್ಮೀ ಬರುವುದು ಆದೇ ಸಮಯದಲ್ಲಿ ತಾನೆ. ಅಂಗಡಿ ಪೂಜೆಯೂ ಅಂತೆಯೇ. ಲಕ್ಷ್ಮಿಯ ಚಿಕ್ಕದೊಂದು ಗುಡಿಯಂತೆ ನಿರ್ಮಿಸಿ, ಹಸಿ ಹಾಲು, ಜಿಲೇಬಿ ನೈವೇದ್ಯದೊಂದಿಗೆ ಬೆಳ್ಳಿ ರೂಪಾಯಿಗಳು, ನೋಟಿನ ಕಂತೆ ಹಾಗೂ ಲೆಕ್ಕಪತ್ರದ ಪುಸ್ತಕಗಳನ್ನು ಇಟ್ಟು ಪೂಜೆಗೆ ಕುಳಿತುಕೊಳ್ಳುತ್ತಾರೆ. ಪುಸ್ತಕದ ಮೊದಲ ಹಾಳೆಗೆ ಕೇಸರಿ ಲೇಪಿಸಿ ಗಣಪತಿಯನ್ನು ಚಿತ್ರಿಸಿ, ಅಕ್ಕಿಕಾಳಿನಿಂದ ವಿಧಿಪೂರ್ವಕ ಹವನಹೋಮಗಳೊಂದಿಗೆ ಲಕ್ಷ್ಮೀಪೂಜೆ ಮಾಡಿ, ಕೊನೆಗೆ ಮಂಗಳಾರತಿ ನಡೆಯುತ್ತದೆ. ನಂತರವೇ ಪ್ರಸಾದ ವಿನಿಯೋಗ

ಇಲ್ಲಿಯ ಮನೆ ಕೆಲಸ, ಬೀದಿ ಕೆಲಸ ಮಾಡುವವರಿಗೆ ಭಕ್ಷೀಸ್‌ನ ಅರ್ಥ ಗೊತ್ತಿಲ್ಲವೆನಿಸುತ್ತದೆ. ಭಕ್ಷೀಸ್ ತಗೊಳ್ಳುವುದು ನಮ್ಮ ಹಕ್ಕೆಂದು ಜಗಳಕ್ಕೇ ಮೊದಲಿಡುತ್ತಾರೆ. ಹಣ, ತಿಂಡಿಗಳೊಂದಿಗೆ ಬಟ್ಟೆಗಳೂ ಅವರಿಗೆ ದೊರೆಯುತ್ತವೆ.

ಪ್ರಸಾದ ವಿನಿಯೋಗದೊಂದಿಗೆ ಹಬ್ಬ ಮುಗಿದಂತಲ್ಲ. ಅಂದು ಬಾಗಿಲು ಹಾಕಬಾರದು. ದೀಪ ಆರಿಸಬಾರದು. ಬೆಳಗಿನವರೆಗೂ ಸಾವಿರಾರು ರೂಪಾಯಿ ಪಟಾಕಿ ಸುಡುತ್ತಾರೆ.

ಮೂರನೇ ದಿನದ ರಾತ್ರಿ ವರೆಗೆ, ಹಬ್ಬ ಒಳ್ಳೆಯ ಸಂಭ್ರಮದಲ್ಲಿರುತ್ತದೆ. ಆ ದಿನವನ್ನು 'ಭಾಯಿ ದೂಜ್'



ಹಣತೆಗಳ ಮಾರಾಟ — ಪಿ. ಜವಾಹರಲಾಲ ನೆಹರೂ ಅವರೂ ಪಾಲ್ಗೊಂಡಿದ್ದಾರೆ.

ಎನ್ನುತ್ತಾರೆ. (ಸೋದರಿ ತನ್ನ ಸೋದರನಿಗೆ ಕಟ್ಟುವ ರಕ್ಷಾಬಂಧನ ಹಬ್ಬ).

## ಜೂಜಾಟ

ಪಂಜಾಬಿ ದೀಪಾವಳಿಯಲ್ಲಿ ಮತ್ತಷ್ಟು ವಿಶೇಷವಿದೆ. ಈ ಜನಾಂಗ ದಸರಾ ಮತ್ತು ದೀಪಾವಳಿಯ ನಡುವಣ ದಿನಗಳಲ್ಲಿ ಜೂಜಾಡುತ್ತಾರೆ. ಇದೂ ಒಂದು ನಡೆದು ಬಂದಿರುವ ಪದ್ಧತಿ. ಜೂಜು ಆಡಲೇಬೇಕು ಎನ್ನುವುದೊಂದು ಕಟ್ಟಳೆ. ಜೂಜಾಡದವನು ತನ್ನ ಮುಂದಿನ ಜನ್ಮದಲ್ಲಿ ಕತ್ತೆಯಾಗಿ ಹುಟ್ಟುತ್ತಾನೆಂಬ ನಂ



ಗೋಲಗುಪ್ಪಾದ ಮಾರಾಟ



ದೀಪಾವಳಿಯ ಗೊಂಬೆಗಳು

ಬಿಕೆಯಿದೆ ಇವರಲ್ಲಿ. ಜೂಜಿನೊಂದಿಗೆ ಕುಡಿತವಿಲ್ಲದಿದ್ದರೆ ಹೇಗೆ? ಅದೂ ಇದೆ. ಹೆಂಡತಿ-ಮಕ್ಕಳು, ಅಪ್ಪ, ಅಮ್ಮ ಒಟ್ಟು ಕೂಡಿ ಜೂಜಾಡುತ್ತಾರಂತೆ. ಜೊತೆಗೆ ಸ್ನೇಹಿತರೂ ನೆರೆಹೊರೆಯವರೂ ಸೇರಬಹುದು. ಆದರೆ ಕೆಲವರು ಇದನ್ನೇ ಅತಿರೇಕ ಮಾಡಿಕೊಂಡು ಸಾವಿರಾರು ರೂ.ಗಳನ್ನು ಕಳೆದುಕೊಳ್ಳುತ್ತಾರೆ. ಗೆದ್ದವರ ಮನೆಯಲ್ಲಿ ವರ್ಷವಿಡೀ ಲಕ್ಷ್ಮೀ ತಾಂಡವವಾಡುತ್ತಾಳಂತೆ. ಸೋತವರಿಗೆ ಪಶ್ಚಾತ್ತಾಪ ಮಾತ್ರ.

ಇಷ್ಟೆಲ್ಲಾ ಸರಿ. ಲಕ್ಷ್ಮೀಗೆ ಇಷ್ಟು ಅತ್ಯುನ್ನತ ಸ್ಥಾನ ಕೊಟ್ಟ ಈ ಜನ ನಾರಾಯಣನನ್ನೇಕೆ ಮರೆತರು ಎಂಬ ಪ್ರಶ್ನೆ? ಅವನಿಗೆ ಕೆಲವಂಶದಷ್ಟಾದರೂ ಪೂಜೆ ಸಲ್ಲಬೇಕಿತ್ತು. ಲಕ್ಷ್ಮೀ ಬರಲು ಗಂಡನಪ್ಪಣೆ ಬೇಡ ಬೇಡವೆ. ಶ್ರೀಮನ್ ನಾರಾಯಣನ ಒಪ್ಪಿಗೆ ಮುದ್ರೆಯಿಲ್ಲದಿದ್ದರೆ ಹೇಗೆ? ಎಂದು ನನಗನಿಸುತ್ತದೆ.





ವಿವಿಧ ಬಗೆಯ ಸಿಹಿ ಸಿಹಿ ತಿನಸುಗಳು

# ಹಿಂದೂ-ಮುಸ್ಲಿಂ ಮೈತ್ರಿವಾದ್ಯಗಳು

(೨೩೧ನೆಯ ಪುಟದಿಂದ)

ನಂತೆ ಗೆರೆಟೆಯ ಚಿಪ್ಪಿನಿಂದ ಮಿಾಟಿ ನುಡಿಸಬಹುದು; ಸಾರಂಗಿಯಂತೆಯೂ ಕಮಾನಿನಿಂದ ಬಾರಿಸಬಹುದು. ರಬಾಬ್‌ನ ಮೊದಲ ಉಲ್ಲೇಖ ದೊರೆತಿರುವುದು ಅಹೋಬಲನ 'ಸಂಗೀತ ಪಾರಿಜಾತ'ಗ್ರಂಥದಲ್ಲಿ ಬರುವ "ರವಂ ವಹತಿ ಯದ್ಯಸ್ಮಾತ್ತತೋ ರವಾವಹಃ ಸ್ಮೃತಃ" ವಾಕ್ಯದಲ್ಲಿ. ಕನ್ನಡದ ದೇವಗಿರಿ ಅರಸರ ಆಸ್ಥಾನದಲ್ಲಿ ೧೩ನೆಯ ಶತಮಾನದಲ್ಲಿದ್ದ ಶಾರ್ಙ್ಗದೇವನು ಇದನ್ನು ಆವಿಷ್ಕರಿಸಿದನೆಂಬ ಪ್ರತೀತಿಯೂ ಇದೆ. ರಾವಣನ ಕಾಲದಲ್ಲಿ ತೆಂಗಿನ ಚಿಪ್ಪಿನಿಂದ ಮಾಡಿ ಚಿರತೆಯ ಚರ್ಮದಿಂದ ಹೊದಿಸುತ್ತಿದ್ದ ಈ ವಾದ್ಯಕ್ಕೆ ಐದು ಮೆಟ್ಟಿಲುಗಳಿದ್ದ ದಾಖಲೆಯೂ ಇದೆ. ಎಂದೇ ಪಾಶ್ಚಾತ್ಯರು ಇದನ್ನು 'ಭಾರತೀಯ ಬೆಂಜೋ' ಎಂದಿದ್ದಾರೆ. 'ಐನ್-ಇ-ಅಕ್ಬರಿ'ಯಲ್ಲಿ ೧೩ ಹಾಗೂ ೧೮ ತಂತಿಗಳ ರಬಾಬ್ ವರ್ಣನೆಯಿದೆ.

ರಬಾಬ್‌ನ ಈ ಶತಮಾನದ ಎರಡು ಸುಧಾರಿತ ಸ್ವರೂಪಗಳು – ರಾಮಪುರದ ನವಾಬ ಸೈಯದ್ ಅಲಿಖಾನರ 'ಸೂರ ಶೃಂಗಾರ' ಮತ್ತು ನೂರು ವರ್ಷ ಏರಿದ ಅಲ್ಲಾವುದ್ದೀನ್‌ಖಾನರ' ಚಂದ್ರಸಾರಂಗ',

## ದಿಲ್‌ರುಬಾ

ಪ್ರಯೋಗಗಳಿಗೆ ಕೊನೆಯಿಲ್ಲ. ಸಿತಾರನ್ನೂ ಸಾರಂಗಿಯನ್ನೂ ಕಸಿ ಮಾಡಿದರೆ ಹೇಗೆ? ಅದರ ಫಲವೇ ಎಸರಾಜ್ ಮತ್ತು ದಿಲ್‌ರುಬಾ. ಮನಸ್ಸನ್ನು ಪ್ರಸನ್ನಗೊಳಿಸುವ ಈ ವಾದ್ಯಗಳಿಗೆ ಸಾರಂಗಿಯಂತೆ ಚರ್ಮದ ಹೊದಿಕೆ. ಮೇಲೆ ಸಿತಾರಿನಂತೆ ೧೬–೧೭ ಮೆಟ್ಟಿಲುಗಳು; ತರಫ್‌ಗಳು. ನೇರವಾಗಿಟ್ಟುಕೊಂಡು ಸಾರಂಗಿಯಂತೆ ಕಮಾನಿನಿಂದ ನುಡಿಸುವ ಕ್ರಮ.

ದಿಲ್‌ರುಬಾ ಎರಡು ಮೂರು ದಶಕಗಳ ಹಿಂದಿನವರೆಗೆ ಹಿಂದುಸ್ಥಾನಿ ಸಂಗೀತದಲ್ಲಿ ಪಕ್ಕವಾದ್ಯವಾಗಿ ಸಾರಂಗಿಯೊಂದಿಗೆ ಸ್ಪರ್ಧಿಸುತ್ತಿತ್ತು. ಸಾರಂಗಿಯ ಕಾಠಿಣ್ಯವಿಲ್ಲ, ಮಾನವ ಸ್ವರದ ಅಣಕವಿಲ್ಲ. ಸ್ವರ ಬಲು ಮಂದ. ದಿಲ್‌ರುಬಾ ಇಂದು ಬಲು ದುರ್ಲಭ.

ಬಂಗಾಳದಲ್ಲಿ ಮಾತ್ರ ಕಾಣಸಿಗುವ ಸಿತಾರ್–ಸಾರಂಗಿ ಕಸಿ ವಾದ್ಯ ಎಸರಾಜ್. ಇದಕ್ಕೂ ದಿಲ್‌ರುಬಾಕ್ಕೂ ನುಡಿಸುವುದರಲ್ಲಿ ಹೆಚ್ಚಿನ ವ್ಯತ್ಯಾಸವಿಲ್ಲ. ಇಂದು ಬಂಗಾಳದಲ್ಲೂ ಇದು ಜನಪ್ರಿಯತೆ ಕಳೆದುಕೊಳ್ಳತೊಡಗಿದೆ.

× × × ×

ನಮ್ಮ ವಾದ್ಯಗಳಿಗೂ ಡಾರ್ವಿನ್ನನ ವಿಕಾಸವಾದದ ಸಮರ್ಥನೆ ಅನ್ವಯಿಸುತ್ತದೆ. ತನ್ನತನ ಬೆಳೆಸಿಕೊಳ್ಳುವ ಸುಧಾರಣೆಯ ಈ ಹಂತಗಳಲ್ಲಿ ಕೊಳಲೊಂದನ್ನು ಬಿಟ್ಟರೆ ಉಳಿದೆಲ್ಲ ವಾದ್ಯಗಳೂ ಕಾಲಕ್ರಮೇಣ ಬದಲಾಗಿವೆ. ಪ್ರಗತಿಯ ಹೆಜ್ಜೆ ಇಡುವಾಗ ಇದು ಅನಿವಾರ್ಯ.





ಮುದ್ದು ಮುಖದ ಭಾರತಿ

# ಭಾರತಿ ಈಗ ಮುಂಬೈ ತಾರೆ

( ನಮ್ಮ ಪ್ರತಿನಿಧಿಯಿಂದ )

ಕನ್ನಡದ ನಟಿ ಭಾರತಿ, ವೈಜಯಂತಿಮಾಲಾ, ವಹೀದಾ ರೆಹಮಾನ್, ಹೇಮಾ ಮಾಲಿನಿ ತುಳಿದ ದಾರಿಯನ್ನೇ ತುಳಿದು ಈಗ ಮುಂಬಯಿ ತಾರೆಯಾಗಿ ಬಿಟ್ಟಿದ್ದಾಳೆ. ಬೆಂಗಳೂರಿನಲ್ಲೇ ಹುಟ್ಟಿದ ಈ ತಾರೆಯ ಮಾತೃಭಾಷೆ ಆಕೆಯೇ ಹೇಳುವಂತೆ ಮರಾಠಿ. ಹಿಂದಿ ಕಲಿಯಲು ಕಷ್ಟವಾಗಲಿಲ್ಲ. ಮದರಾಸು ಸ್ಟುಡಿಯೋಗಳಲ್ಲಿ ಸಿದ್ಧವಾಗುವ ಹಿಂದಿ ಚಿತ್ರಗಳ ಮೂಲಕ ಮುಂಬಯಿಗೆ ಬರಲು ತಡವಾಗಲಿಲ್ಲ.

ಭಾರತಿಯ ಹಿಂದಿ ಚಿತ್ರಗಳು ರಾಜೇಶ ರೋಷನನೊಂದಿಗೆ 'ಘರ್ ಘರ್ ಕಿ ಕಹಾನಿ'; ಬಿಡುಗಡೆಯಾದ ಇನ್ನೊಂದು ಹಿಂದಿಚಿತ್ರ 'ದುನಿಯಾ ಕ್ಯಾ ಜಾನೆ' – ಪ್ರೇಮೇಂದ್ರನೊಂದಿಗೆ, 'ಆಂಖ್ ಮಿಚೋಲಿ' ಮದ್ರಾಸಿನಲ್ಲಿ ತಯಾರಾಗುತ್ತಿರುವ ಹಿಂದಿ ಚಿತ್ರ.

ಪ್ರಸ್ತುತ ಭಾರತಿ ಮುಂಬಯಿಯ ಎರಡು ಚಿತ್ರಗಳಲ್ಲಿ ಕೆಲಸ ಮಾಡುತ್ತಿದ್ದಾಳೆ. 'ಸೀಮಾ'ದಲ್ಲಿ ರಾಜೇಶ ರೋಷನ ಆಕೆಯ ನಾಯಕ ನಟ. 'ಹಮ್ ತುಮ್ ಔರ್ ವೋ'ನಲ್ಲಿ ವಿನೋದ ಖನ್ನಾ. ಇವಲ್ಲದೆ ಇನ್ನೂ ನಾಲ್ಕಾರು ಚಿತ್ರಗಳಿಗೆ ಆಕೆ ಸಹಿ ಮಾಡಿದ್ದಾಳೆ.

'ಕರ್ಮವೀರ' ಪ್ರತಿನಿಧಿ ಸೆಟ್ ಮೇಲೆ ಭಾರತಿಯನ್ನು ಕಂಡು, ಅನಂತರ ಮತ್ತೆ ಗ್ರೀನ್ ರೂಮಿನಲ್ಲಿ ಆಕೆಯ ಭೇಟಿ ಮಾಡಲು ಹೋದಾಗ ತಾಯಿ ಮಗಳು ಸಮಯ ಕಳೆಯಲು ಇಸ್ಪೀಟು ಆಡುತ್ತಿದ್ದರು. ಮುಂಬಯಿಯ ಸ್ಟುಡಿಯೋಗಳಲ್ಲಿ 'ಕರ್ಮವೀರ' ಕಂಡ ಅತ್ಯಂತ ಗಂಭೀರ, ಶಿಸ್ತಿನ ತಾರೆ ಭಾರತಿ. ಕನ್ನಡದಲ್ಲಿ ಮಾತು ಆರಂಭವಾದೊಡನೆ ಭಾರತಿ ಬೇಗನೇ ಆತ್ಮೀಯರಾದರು.

"ನೀವು ಮುಂಬಯಿ ತಾರೆಯಾದುದು ತುಂಬ ಸಂತೋಷದ ವಿಚಾರ. ಅಭಿನಂದನೆಗಳು" ಎಂದಾಗ ಭಾರತಿಗೆ ತುಂಬ ನಾಚಿಕೆ. ಆವಳು ಸದ್ಯವೇ ಮುಂಬಯಿಯಲ್ಲಿ ಒಂದು ಮನೆ ಖರೀದಿ ಮಾಡುವವಳಿದ್ದಾಳೆ. ತಂದೆ ಶ್ರೀರಾವ್ ಕೂಡ ಜತೆಯಲ್ಲಿದ್ದರು.

"ಬೆಂಗಳೂರು, ಮದ್ರಾಸು, ಮುಂಬಯಿ ಈ ಮೂರೂ ಕೇಂದ್ರಗಳ ಸ್ಟುಡಿಯೋಗಳಲ್ಲಿಯ ಕೆಲಸದ ಬಗ್ಗೆ ನಿಮ್ಮ ಅನುಭವವೇನು?" ಎಂದು ಕೇಳಿದಾಗ ಭಾರತಿ ಹೇಳಿದಳು:

"ಬೆಂಗಳೂರಿನಲ್ಲಿ ಇನ್ನೂ ಆರಂಭವಾಗಿದೆಯಷ್ಟೆ. ಕಲಾತ್ಮಕವಾಗಿ ತಾಂತ್ರಿಕವಾಗಿ ಮದ್ರಾಸಿನವರು ತುಂಬ ಮುಂದಿದ್ದಾರೆ. ಆದರೆ ಮುಂಬಯಿ ಸ್ಟುಡಿಯೋಗಳ ವಾತಾವರಣವೇ ಬೇರೆ. ಸಮಗ್ರ ಭಾರತದ ಜನರೂ ಇಲ್ಲಿ ಸ್ಟುಡಿಯೋದಲ್ಲಿ ಕಾಣಸಿಗುತ್ತಾರೆ. ಅವರೊಂದಿಗೆ ಕೆಲಸ ಮಾಡುವುದು ಎಂದರೆ ಹೊಸ ಹೊಸ ಅನುಭವ ಪಡೆಯುವುದು. ಇನ್ನೂ ಇನ್ನೂ ಕಲಿಯುವುದು".

ಆದರೂ ಭಾರತಿಯ ನಾಚಿಕೆ ಇನ್ನೂ ಬಿಟ್ಟಿಲ್ಲ ಎಂಬಂತೆ ತೋರಿತು. ಒಂದು ದೃಷ್ಟಿಯಿಂದ ಇದು ತುಂಬಾ ಒಳ್ಳೆಯದು. ದಕ್ಷಿಣದ ತಾರೆಯೊಬ್ಬಳು ಸರಿಯಾಗಿ ಮುಂಬಯಿಯಲ್ಲಿ ಪ್ರತಿಷ್ಠೆ ಪಡೆಯಬೇಕಾದರೆ ಸ್ವಲ್ಪ ಕಾಲವೇ ತಗಲುತ್ತದೆ. ಭಾರತಿ ಪೂರ್ಣವಾಗಿ ಮುಂಬಯಿ ತಾರೆಯೇ ಆಗುವ ದಿನಗಳು ದೂರವಿಲ್ಲ.

ಆಕರ್ಷಕ ನಿಲುವಿನಲ್ಲಿ ಭಾರತಿ





ಕನ್ನಡ ಚಿತ್ರರಂಗದ ಹೆಸರಾಂತ ತಾರೆ ಭಾರತಿ

ಫೋಟೋ : ಶಿವರಾಜ ಸುಳವಾ

# ಕರೋನಾರವರಿಂದ ನಿಮಗೆ ದೀಪಾವಳಿಯ ಕೊಡುಗೆ



ಸುಂದರವಾದ ಪಾದರಕ್ಷೆಗಳ
ಹೊಸ ಶ್ರೇಣಿ



ಟಾಪ್‌ಸ್ಟೈಲ್-ಉತ್ತಮ್
ಪುರುಷರಿಗಾಗಿ
ಸೈಜ್ 6-10
ರೂ. 15.95*



ಮಹಾರಾಜಾ ಡಿಲಕ್ಸ್
ಪುರುಷರಿಗಾಗಿ
ಸೈಜ್ 6-10
ರೂ. 20.95*



ರಾಣಿ (27)
ಸ್ತ್ರೀಯರಿಗಾಗಿ
ಸೈಜ್ 3-7
ರೂ. 15.95*



ಫೆಮಿನಾ-ಸಾಧನಾ
ಸ್ತ್ರೀಯರಿಗಾಗಿ
ಸೈಜ್ 2-7
ರೂ. 8.95*



ಒಮೇಗಾ
ಪುರುಷರಿಗಾಗಿ
ಸೈಜ್ 6-10
ರೂ. 32.95*



ವೇರ್‌ವೆಲ್
ಪುರುಷರಿಗಾಗಿ
ಸೈಜ್ 6-10
ರೂ. 29.95*



ಕಾರ್ಟೆ ಆರ್/ಎಸ್
ಹುಡುಗರಿಗಾಗಿ
ಸೈಜ್ 11-1½ ರೂ. 16.95*
ಸೈಜ್ 6-10 ರೂ. 15.95*



ಕಾರ್ಟೆ ಬಾರ್ ಆರ್/ಎಸ್
ಹುಡುಗಿಯರಿಗಾಗಿ
ಸೈಜ್ 11-1½ ರೂ. 16.95*
ಸೈಜ್ 6-10 ರೂ. 15.95*

ನಿಮ್ಮ ಸಮೀಪದ
ಕರೋನಾ ಅಂಗಡಿಯಲ್ಲಿ
ಇವೆಲ್ಲವನ್ನು ನೋಡಿರಿ

## ಕರೋನಾ ಪಾದರಕ್ಷೆಗಳು

*ತೆರಿಗೆಗಳು ಪ್ರತ್ಯೇಕ

AIYARS-CS.220 KN.



ಉದಯ ಚಂದ್ರಿಕಾ ನೃತ್ಯ ಭಂಗಿಯಲ್ಲಿ

# ತಾರಾಮಂಡಲದ ದಿವ್ಯ ದೀಪಾವಳಿ

ಉದಯಚಂದ್ರಿಕಾ

"ಉದಯ' ನಿನಗೆ ಯಾರದೋ ಕರೆ ಬಂದಿದೆ"

'ಟ್ರಿಣ್ ಟ್ರಿಣ್'ಗೆ ಉತ್ತರಿಸಿ ಬಂದೆ,

"ನೋಡೆ, ಯಾರದೋ ಕಾರು ಬಂದಿದೆ"

ನಿರ್ಮಾಪಕರೊಬ್ಬರು ಕಾರಿನಿಂದ ಇಳಿದು ಬಂದರು. ಅವರನ್ನು ಕೂರಲು ಹೇಳಿ 'ತಂಪು ಪಾನೀಯ' ತರಿಸಿಕೊಟ್ಟೆ. ಅವರು 'ಕಾಲ್‌ಷೀಟ್' ಬಗ್ಗೆ ಮಾತನಾಡಿ ಹೋದರು. ಬಳಿಕ ಬಂದವರು ನಮ್ಮ ಡಾನ್ಸ್‌ಮಾಸ್ಟರ್.

"ಸಾರ್ ಇವತ್ತೊಂದು ದಿನ ಬಿಡುವು ಕೊಡಿ ಸಾರ್!" ಎಂದು ಗಿಂಜಿ ಕೇಳಿಕೊಂಡೆ. ಅವರು ಹೊಗೆಸೊಪ್ಪು ಬಾಯಿ ತುಂಬಾ ತುರುಕಿಕೊಂಡು ಅವರ 'ಪನ್ನೀರ್ ದಾನಿ' (ಬಾಯಿ)ಯಿಂದ ಚಿಮುಕಿಸುತ್ತಾ (ತಾಂಬೂಲವನ್ನು) ನುಡಿದರು. "ಅದೆಲ್ಲ ಮುಡಿಯಾದು" ಎಂದು. ಅವರ ಒತ್ತಾಯಕ್ಕೆ 'ಸೈ' ಎಂದು 'ಥೈ' ಎಂದು ಕುಣಿದೆ.

ನಾಳೆ ದೀಪಾವಳಿ ಎನ್ನುವಾಗ ಎಲ್ಲರಿಗೂ ಚಕ್ಕರ್ ಕೊಟ್ಟು, ಎಲ್ಲಿಯಾದರೂ ಓಡಿ ಹೋಗಿ ಗೊಂದಲದಿಂದ ದೂರವಾಗಿದ್ದು ಏಕಾಂತದಲ್ಲಿ ಶಾಂತವಾಗಿ ಕಾಲಕಳೆಯ ಬೇಕೆಂದು ನಿರ್ಧರಿಸಿದೆ.

ಕಾರಿನ ಡ್ರೈವರಿಗೆ ಸೂಕ್ಷ್ಮ ತಿಳಿಸಿ ದೀಪಾವಳಿ ಹಿಂದಿನ ದಿನವೇ ತಿರುಪತಿಗೆ ಹೋಗಲು ಅಣಿಮಾಡಿಕೊಂಡೆ. ನನ್ನ ಜೊತೆಯಲ್ಲಿ ನನ್ನ ಸಿಬ್ಬಂದಿಗಾಗಿ 'ಚೆಟ್ಟಿಯಾರ್' ಹಾಗೂ 'ಅಮ್ಮ' ಇಬ್ಬರೂ ಹೊರಟರು.

ಸುಖಕರವಾಗಿ ಬೆಟ್ಟವನ್ನು ತಲುಪಿದೆವು. ರಾತ್ರಿ ಯಾವ 'ಟ್ರಿಣ್ ಟ್ರಿಣ್' ಆಗಲಿ, 'ಪಂ ಪಂ' ಆಗಲಿ ಇಲ್ಲದೆ ಹಾಯಾಗಿ ನಿದ್ದೆ ಬಂತು. ಬಣ್ಣ ಹಚ್ಚಿಕೊಳ್ಳದ ನಿದ್ದೆ, ಸಹಜವಾದ ನಿದ್ದೆ ಆನಂದವಾಗಿತ್ತು.

ಬೆಳಗಾಗುತ್ತಲೇ ಶ್ರೀ ವೇಂಕಟೇಶ್ವರ ಸುಪ್ರಭಾತ ಕಿವಿಗೆ ದಿವ್ಯ ದೀಪಾವಳಿಯ ಮಂಗಳ ಮುಂಬೆಳಕಿನಲ್ಲಿ ಅತ್ಯಂತ ಹಿತವಾಗಿತ್ತು.

ಆದಷ್ಟು ಬೇಗ ಹೋಗಿ ಆ ತಿಮ್ಮಪ್ಪನ ಸನ್ನಿಧಿಯಲ್ಲಿ ಧ್ಯಾನಮಗ್ನಳಾಗಿ ಕಾಲ ಕಳೆಯೋಣವೆಂದು ಎಲ್ಲರನ್ನೂ ಬೇಗ ಬೇಗ ಎಬ್ಬಿಸಿ ಸ್ನಾನದಿಂದ ಶುಚಿಯಾಗಿ ನವ ವಧುವಿನಂತೆ ಸಿಂಗರಿಸಿಕೊಂಡು ಆಹ್ಲಾದಕರ ವಾತಾವರಣದಲ್ಲಿ ಹಿಗ್ಗಿ ಕುಣಿಯುತ್ತಾ, ಜಿಗಿಯುತ್ತಾ, ನೆಗೆಯುತ್ತಾ ಓಡಲಿದ್ದೆ............

ಅಷ್ಟರಲ್ಲಿ...... "ಅಮ್ಮ ನಿಮ್ಮನ್ನು ಹುಡುಕಿ ಹುಡುಕಿ ಸಾಕಾಯ್ತು" ಎನ್ನುತ್ತಾ ಪ್ರೊಡ್ಯೂಸರ್ ಪ್ರತ್ಯಕ್ಷರಾದರು.

"ಇಲ್ಲಿ! ಇಲ್ಲಿ ಏನು?"

"ನೀವು ಇಲ್ಲಿರೋದು ತಿಳಿಯಿತು.– ಅದಕ್ಕೋಸ್ಕರ ಇಲ್ಲೇ ಔಟ್‌ಡೋರ್ ಷೂಟಿಂಗ್ ಇಟ್ಟುಕೊಂಡಿದ್ದೇವೆ" ಎಂದರು.

ನಾನು......"ಶ್ರೀನಿವಾಸಾ! ಇದೂ ನಿನ್ನ ಇಚ್ಛೆ" ಎಂದು ನಿಟ್ಟುಸಿರು ಬಿಟ್ಟು ಕರೆಯದೆ ಕರ್ತವ್ಯವನ್ನು ತಿಮ್ಮಪ್ಪನ ಆಜ್ಞೆ ಎಂದು ಪಾಲಿಸಿದೆ.

ಮತ್ತೊಂದು ನೃತ್ಯಭಂಗಿಯಲ್ಲಿ ಉದಯಚಂದ್ರಿಕಾ





# ಜನತಾ ಜನಾರ್ಧನನ ಸಹಾಯಧನ ಬೇಕು

❖ ಎಸ್. ಆರ್. ಪುಟ್ಟಣ್ಣ ಕಣಗಾಲ



ನಿರ್ದೇಶಕ ಎಸ್. ಆರ್. ಪುಟ್ಟಣ್ಣ ಕಣಗಾಲ
( ‹ಕರ್ಣವೀರ›ಕ್ಕಾಗಿ ವಿಶೇಷ ಫೋಟೊ )

ಅಪಾರ ಜನಮನ್ನಣೆಯು ಸಾಕ್ಷಿ ಸಾಕ್ಷಾತ್ಕರಿಸಿತ್ತು: ಜನಸಮೂಹ ಸಮುದ್ರ ಉಕ್ಕಿದಂತೆ ಕಿಕ್ಕಿರಿದು ನೆರೆದಿತ್ತು. ಗಾಜಿನಮನೆ ನುಚ್ಚುನೂರಾಗುವುದರಲ್ಲಿತ್ತು. ಎಲ್ಲೆಲ್ಲೂ ಜಯಭೇರಿಯ ಧ್ವನಿ – ಪ್ರತಿಧ್ವನಿ.

"ಶರಪಂಜರ!" ಚಿತ್ರದ
೨೫ನೇ ವಾರದ ರಜತೋತ್ಸವ! !
ಜನಪ್ರಿಯತೆಯ ಬೆಳ್ಳಿಹಬ್ಬದ ವೈಭವ! ! !

ಇದು ಸ್ವಪ್ನಲೋಕದ ಸುಂದರ ಕಲ್ಪನೆಯಲ್ಲ. ನಿಜ ಪ್ರಪಂಚದ ಅಭೂತ ಪೂರ್ವ ಸಮಾರಂಭ. ಚಿತ್ರಪ್ರೇಮಿಗಳು ಕನ್ನಡಚಿತ್ರವೊಂದಕ್ಕೆ ಬಿಚ್ಚುಮನದಿಂದ, ಮುಕ್ತಹಸ್ತರಾಗಿ ಮೆಚ್ಚಿ ಮೆಚ್ಚಿ ಮಾಡಿದ ಮಹೋತ್ಸವ ಬೆಂಗಳೂರಿನಲ್ಲಿ.

ಮೈಸೂರಿನಲ್ಲೂ ಈ ಚಿತ್ರದ ನಿರ್ದೇಶಕ, ತಂತ್ರಜ್ಞರು ಹಾಗೂ ಕಲಾವಿದರಿಗೆ ಕಲಾಭಿಮಾನಿಗಳ ಸನ್ಮಾನ. ಮೂಲೆ ಮೂಲೆಯಲ್ಲೂ 'ಶರಪಂಜರ' ತಂದ ಸುಮ್ಮಾನ.

ಚಿತ್ರ ಜನಪ್ರಿಯವೆಂಬುದರಲ್ಲಿ ಸಂದೇಹವೇನು? ಜನರು ಹುಚ್ಚೆದ್ದು ನೋಡಿದರೆಂದು ಕೆಲವರು ನುಡಿದರು. ಅದೂ ನಿಜವೇ. ಈ ಹುಚ್ಚನ್ನು ಎಲ್ಲ ಚಿತ್ರಗಳು ಉಂಟುಮಾಡಲಾರದಾಗಿ ಹೊಟ್ಟೆಕಿಚ್ಚೆದ್ದು ನುಡಿದಿದ್ದಾರೆ ಕೆಲವರು.

ಈಗ ನಾನು ಹೇಳತೊಡಗಿರುವುದು ಈ 'ಕೆಲವರಲ್ಲಿ' ಆಗಬೇಕಾಗಿರುವ ಸುಧಾರಣೆಯೇ ಕನ್ನಡ ಚಿತ್ರರಂಗಕ್ಕೆ ನಿಜವಾದ ಸಹಾಯಧನ ಎಂಬ ವಿಷಯ.

ಊರಿನ ಹತ್ತು ಸಮಸ್ತರು ಕೈತಟ್ಟಿ, ಬೆನ್ನುತಟ್ಟಿದ ಮಾತ್ರಕ್ಕೆ ಅದೇ ಅತ್ಯುತ್ತಮ ಎಂಬುದು ಸುಳ್ಳು. "ಶರಪಂಜರ" ಬೆಳ್ಳಿಹಬ್ಬ ಆಚರಿಸಿತಾಗಿ ಅದು ಅತ್ಯುತ್ಕೃಷ್ಟ ಚಿತ್ರ ಎಂದು ನಾನೇ ಹೇಳುವುದಿಲ್ಲ. ಸಮಿತಿಯ ದೃಷ್ಟಿಕೋನದಿಂದ ಸಮ್ಮತಿಪತ್ರದಲ್ಲಿ ಪ್ರತ್ಯೇಕಿಸಲ್ಪಟ್ಟಿದ್ದರೆ ಆ ಪ್ರತ್ಯೇಕತೆಗೆ ಮಾನ್ಯತೆ ಕೊಡಬೇಕಾಗಿಲ್ಲ. ಜನತೆಯೇ ಜನಾರ್ದನ ನಿಜ. ಆ ಜನಾರ್ದನ ನಿರ್ಧರಿಸಿದ್ದೇ ನಿಜ.

ಕನ್ನಡ ಜನತೆ ಪರಭಾಷೆಯ ಚಿತ್ರ ವೀಕ್ಷಕರಿಗಿಂತ ವಿಭಿನ್ನ ಅಭಿರುಚಿಯುದು.

ಕನ್ನಡಚಿತ್ರಪ್ರೇಕ್ಷಕ ಕನ್ನಡ ಚಿತ್ರವೊಂದನ್ನೇ ನೋಡುವ ಸತ್ಯಸಂಕಲ್ಪ ಮಾಡಿಲ್ಲ. ಆತ ಇತರ ಭಾಷೆಯ ಚಿತ್ರಗಳನ್ನೂ ನೋಡುತ್ತಾನೆ. ಬೆಂಗಳೂರು, ಮೈಸೂರು ನಗರಗಳಲ್ಲಂತೂ ಕನ್ನಡಿಗರು ನೋಡದ ಇಂಗ್ಲಿಷ್, ಹಿಂದಿ, ತಮಿಳು, ಮಳಯಾಳಿ ಚಿತ್ರಗಳಿಲ್ಲ. ಇವರಲ್ಲನೇಕರು ಇತರ ಭಾಷೆಯ ಚಿತ್ರಗಳನ್ನು ಮೊದಲು ನೋಡಿ ಕೊನೆಗೆ ಕನ್ನಡವನ್ನು ನೆನೆಯುತ್ತಾರೆ. ಇವರು ಅತೃಪ್ತ ಮನಸ್ಕರಾಗಿ ಕನ್ನಡ 'ಋಣ' ತೀರಿಸುವಂತೆ 'ಟಿಕೆಟ್' ಕೊಳ್ಳುತ್ತಾರೆ. ಇವರಿಗೆ ಎಂಥ ಒಳ್ಳೆ ಚಿತ್ರದಲ್ಲೂ ಕಾಣುವುದು ಕಾಕರೇಖೆಯೇ. ಒಳ್ಳೆಯದೋ ಕೆಟ್ಟದ್ದೋ ಎಂದು ಇವರು ನಿರ್ಧರಿಸುವುದರೊಳಗಾಗಿ ಚಿತ್ರದ ಹಂಚಿಕೆದಾರರ, ಪ್ರದರ್ಶಕರ ಪೂರ್ವಭಾವೀ ಒಪ್ಪಂದವೋ ಇಲ್ಲವೇ ಜನತೆಯ ನಿರಾದರಣೆಯೋ ಚಿತ್ರದ ಅಪಮೃತ್ಯುಗೆ ಕಾರಣವಾಗಿ ಚಿತ್ರ ಪ್ರದರ್ಶನ ಮಂದಿರದಿಂದ ಮಾಯವಾಗಿ ಬಿಡುತ್ತದೆ.

ಕಲವು ಚಿತ್ರಗಳು ಗುಣಮೌಲ್ಯದ ದೃಷ್ಟಿಯಿಂದ ಉನ್ನತ ದರ್ಜೆಯದಾಗಿದ್ದರೂ, ಪ್ರೇಕ್ಷಕರ ನಿರೀಕ್ಷಣೆ ಬೇರೆಯದಾಗಿದ್ದು, ಬೇರೆಯಾಗುವುದೇ ಕಷ್ಟವಾಗುತ್ತದೆ

ಇತರ ಭಾಷೆಯ ಚಿತ್ರಗಳು ಶತದಿನೋತ್ಸವಗಳನ್ನು ಮಾಮೂಲಾಗಿ ಅನೇಕ ಚಿತ್ರಮಂದಿರಗಳಲ್ಲಿ ಆಚರಿಸುವಾಗ ಕನ್ನಡ ಚಿತ್ರಗಳು ವರ್ಷಕ್ಕೆ ಒಂದೋ, ಎರಡೋ ಆಚರಿಸುತ್ತವೆ. ಹೀಗೆ ಆಚರಿಸಿದಾಗ 'ಕೆಲವರು' ನುಡಿಯುತ್ತಾರೆ ಜನ ಹುಚ್ಚೆದ್ದು ನೋಡಿದರೆಂದು. ಈ 'ಹುಚ್ಚು' ಇತರ ಭಾಷೆಯವರಲ್ಲಿ 'ಅಭಿಮಾನ'ವೆನಿಸಿಕೊಂಡಿದೆ. ಈ ಅಭಿಮಾನ ಕನ್ನಡ ಚಿತ್ರ ಪ್ರೇಕ್ಷಕರಲ್ಲಿ ಅಭಿವೃದ್ಧಿಯಾದರೆ ಕನ್ನಡಿಗ ಕನ್ನಡ ಚಿತ್ರಗಳಿಗೆ ಆದ್ಯತೆ ಕೊಟ್ಟು, ಇತರ ಭಾಷೆಯ ಚಿತ್ರಗಳಿಗೆ ಕನ್ನಡದ ನಂತರ ಸ್ಥಾನ ಕೊಟ್ಟರೆ ಸಾಕು ಅದೇ ಜನತಾ ಜನಾರ್ದನನ ಸಹಾಯಧನ! ಈ ಸಹಾಯಧನ ಅನಂತವಾಗಿ, ಅಪಾರವಾಗಿ, ಸಾರೋದ್ಧಾರವಾಗಿ ತೊರೆಯಾಗಿ, ಹೊಳೆಯಾಗಿ, ಕಡಲಾಗಿ ಹರಿದು ಬರುವವರೆಗೆ ಸರ್ಕಾರದ ಸಹಾಯಧನಕ್ಕೆ ಉದ್ಯಮ ಅಂಟಿಕೊಂಡಿರುವುದು ಅನಿವಾರ್ಯ.

★

# ಸಹಾಯಧನ ಸಾಧನವಾಗಬೇಕು

**ವಿಜಯನಾರಸಿಂಹ**

ಸಹಾಯ ಯಾವುದೇ ಸಂಸ್ಥೆಯಿಂದಾಗಲೀ, ಸರ್ಕಾರದಿಂದಾಗಲೀ, ವ್ಯಕ್ತಿಯಿಂದಾಗಲಿ ಹೊಂದುವುದು ಪಡೆಯುವವರನ್ನು ಅಶಕ್ತರೆಂದು ಸೂಚಿಸುತ್ತದೆ. ಸರ್ಕಾರದ ನೆರವನ್ನು ನಿರೀಕ್ಷಿಸಿ ಚಿತ್ರ ತಯಾರಿಸುವ ತಯಾರಕ ತನ್ನ ಅಶಕ್ತತೆಯನ್ನು ಸರಕಾರದ ನೆರವಿನಿಂದ ತುಂಬಿಕೊಳ್ಳುತ್ತಾನೆಯೇ? ಸರ್ಕಾರದ ಸಹಾಯಧನ ಯಾವ ರೀತಿ ವಿನಿಯೋಗವಾಗುತ್ತಿದೆ? ಇದನ್ನು ಸೂಕ್ಷ್ಮವಾಗಿ ವಿವೇಚಿಸೋಣ.

ಮಗು ದೊಡ್ಡದಾಗುವವರೆಗೆ ತಾಯಿ ಹಾಲು ಕೊಡುತ್ತಾಳೆ. ರೆಕ್ಕೆ ಬಲಿಯುವವರೆಗೆ ಹಕ್ಕಿ ಮರಿಯನ್ನು ಸಾಕುತ್ತದೆ. ಇದು ಪ್ರಕೃತಿ ಹೇಳಿಕೊಡುವ ಪಾಠವಲ್ಲವೆ? ಈ ಪಾಠವನ್ನು ನಾವು 'ಸಹಾಯ' ಹೊಂದುತ್ತಿರುವ ಉದ್ಯಮದಲ್ಲಿ ಹೋಲಿಸಿನೋಡಿದರೆ ಸಹಾಯ ಪಡೆಯುವ ಚಿತ್ರೋದ್ಯಮ ಶೈಶವದಲ್ಲಿದೆ ಎಂದು ಕರೆಯಬಹುದೆ? ಇಲ್ಲ ಸಹಾಯ ನೀಡುವ ಸರ್ಕಾರಕ್ಕೆ ಚಿತ್ರೋದ್ಯಮದ ಮೇಲೆ ಅಪಾರ ಕರುಣೆ ಇದೆಯೇ? ಎರಡೂ ಸುಳ್ಳು.

ಕನ್ನಡ ಚಿತ್ರೋದ್ಯಮ ಇಂದು ಎಷ್ಟು ಪ್ರಗತಿಯನ್ನು ಸಾಧಿಸಿದೆ ಎಂದರೆ ಕನ್ನಡ ಚಿತ್ರಗಳು ವಿದೇಶಗಳಲ್ಲಿ ಪ್ರದರ್ಶಿತವಾಗಿ ಪರದೇಶಿಯ ಚಿತ್ರತಂತ್ರ ನಿಪುಣರ ಹಾಗೂ ಕಲಾವಿದರ ಮೆಚ್ಚುಗೆಗೆ ಪಾತ್ರವಾಗಿವೆ. ಇದು ಅಶಕ್ತತೆಯ ಕುರುಹೇ? ಗುಣಮಟ್ಟದಲ್ಲಿ ಕಳಪೆ ಚಿತ್ರಗಳಾಗಿದ್ದರೆ ಅವುಗಳನ್ನು ನಮ್ಮ ನಿರ್ಮಾಪಕರು ಪ್ರದರ್ಶಿಸುವ ಕೆಚ್ಚು ತೋರುತ್ತಿದ್ದರೆ? ಅಥವಾ ನಮ್ಮ ಜನ ಮೆಚ್ಚಿ ಗಲ್ಲಾಪೆಟ್ಟಿಗೆ ತುಂಬುತ್ತಿತ್ತೆ?

ನಮ್ಮ ಕನ್ನಡ ಚಿತ್ರಗಳು ಇಂದು ಇತರ ಭಾಷೆಯ ಚಿತ್ರಗಳಿಗೆ ಯಾವ ವಿಧದಲ್ಲೂ ಬೀಳಾಗಿಲ್ಲ. ವರ್ಣ ಛಾಯಾಗ್ರಹಣ, ಕಪ್ಪು ಬಿಳುಪಿನ ಛಾಯಾಗ್ರಹಣ, ಧ್ವನಿಮುದ್ರಣ, ವಸ್ತ್ರಾಲಂಕರಣ, ಸಂಕಲನ, ಅಭಿನಯ, ಸಾಹಿತ್ಯ, ಸಂಗೀತ, ನಿರ್ದೇಶನ, ನಿರ್ಮಾಣ ನಿರ್ವಹಣ ಇತ್ಯಾದಿ ಯಾವ ದೃಷ್ಟಿಯಿಂದಲೂ ನಮ್ಮ ಚಿತ್ರಗಳು ಇತರ ಭಾಷಾ ಚಿತ್ರಗಳಿಗಿಂತ ಕೆಳದರ್ಜೆಯಲ್ಲಿಲ್ಲ.

ಆದರೆ ನಮ್ಮ ಚಿತ್ರಗಳಿಗೆ ಪ್ರೋತ್ಸಾಹದ ಬಡತನವಿದೆ, ಜನತೆಯ ಬೆಂಬಲದ ಬಡತನವಿದೆ, ಸಹೃದಯ ಪ್ರೇಕ್ಷಕರ ಬಡತನವಿದೆ, ಅಭಿಮಾನಿಗಳ ವಿಶಾಲಹೃದಯದ ಬಡತನವಿದೆ. ಈ ಬಡತನವನ್ನು ಸಹಾಯಧನ ನೀಗಬಲ್ಲದೆ?

ಬೈಲೋ ರಪ್ಪಾದಲ್ಲಿ ಇತ್ತೀಚೆಗೆ ಒಂದು ವಾರ ಕನ್ನಡ ಚಿತ್ರಗಳ ಪ್ರದರ್ಶನವಾಗಿ ಅಸಾಧಾರಣ ಜನಾದರಣೆಯನ್ನು ಗಳಿಸಿದೆ. ಇದು ನಮ್ಮ ಉದ್ಯಮದ ಮುನ್ನಡೆಗೆ ಹೆಗ್ಗುರುತಾಗಿದೆ.

ಸರ್ಕಾರ ನೀಡುತ್ತಿರುವ ಸಹಾಯಧನದಿಂದ ಗಲ್ಲಾಪೆಟ್ಟಿಗೆಯಲ್ಲಿ ಸೋತ ನಿರ್ಮಾಪಕ ಆಸೆಯನ್ನು ಚಿಗುರಿಸಿಕೊಳ್ಳುತ್ತಾನೆ. ಈ ನಿರ್ಮಾಪಕನಿಗೆ ಈ ಧನಸಹಾಯ ಆಪದ್ಧನವಾಗುತ್ತದೆ. ಹೋದಜೀವ ಬಂದಂತಾಗಿ ಮತ್ತೆ ಎದ್ದುನಿಲ್ಲುತ್ತಾನೆ. ಈ ಬಗೆಯ ಸಹಾಯ ಯೋಗ್ಯನಾದವನಿಗೆ ಸಂದಾಯವಾದಾಗ ಮಾತ್ರ ಸದ್ವಿನಿಯೋಗವಾದಂತಾಗುತ್ತದೆ. ಆದರೆ 'ಸಹಾಯಧನ' ಅಪಾಯಧನವಾಗುವುದೂ ಉಂಟು.

'ಸಹಾಯಧನ' ಬರುತ್ತದೆಂಬ ನಿರೀಕ್ಷೆಯಿಂದ ನಾನಾ ಮೂಲಗಳಿಂದ ಹಣವನ್ನು ಕೂಡಿ ಹಾಕಿ ನಿರ್ಮಾಪಕ ಪದವಿಗೇರುವ ಖೋಟಾ ನಿರ್ಮಾಪಕನ ಲಕ್ಷ್ಯ 'ಸಂತೆ ಹೊತ್ತಿಗೆ ಮೂರು ಮೊಳ ನೆಯ್ಯುವ ನೇಕಾರನಂತಿರುತ್ತದೆ.' ಹೇಗೋ ಸುರುಳಿ ಸುತ್ತಿ ಚಿತ್ರವನ್ನು ಯಾವ ವಿತರಕನಿಗೋ ಗಂಟು ಹಾಕಿ ನೆಮ್ಮದಿಯಾಗಿರುತ್ತಾನೆ. ಅವನಿಗೂ ಸರ್ಕಾರ ಈ ಸಹಾಯಧನವನ್ನು ನೀಡಲೇ ಬೇಕಲ್ಲವೆ?

ಉದ್ಯಮ ಬಲಿಷ್ಠವಾಗಬೇಕು. ಸ್ವಪರಿಪೂರ್ಣವಾಗಬೇಕು, ಸ್ವಾವಲಂಬಿಯಾಗಬೇಕು, ಸಹಾಯಧನದ ಮೇಲೆ ಆಧಾರಿತವಾಗಿರುವ ವರೆಗೆ ತನ್ನ ಹೊಣೆಗಾರಿಕೆಯನ್ನು ಅರಿಯದೇ ಹೋದೀತು.

ಸರ್ಕಾರ ಈ ದೃಷ್ಟಿಯಿಂದ ಗುಣಮಟ್ಟದಲ್ಲಿ ಉತ್ತಮವಾದ ಚಿತ್ರಗಳನ್ನು ಆಯ್ದು ಸಮಯೋಚಿತವಾಗಿ ಸಹಾಯ ಮಾಡುವುದು ಅತ್ಯಗತ್ಯ. ಸಾರ್ವಜನಿಕರಿಂದ ಸಂಗ್ರಹಿಸಿದ ಸರ್ಕಾರದ ಹಣ ಸಹಾಯರೂಪದಲ್ಲಿ ಬಂದಾಗ ಯೋಗ್ಯಚಿತ್ರಗಳು ಹೊಂದಿದರೆ ಮಾತ್ರ ಚಿತ್ರೋದ್ಯಮಕ್ಕೆ ಆರೋಗ್ಯ. ●



ಹಿಂದಿಯ ಅಚ್ಚುಮೆಚ್ಚಿನ ತಾರೆ ಮುಮತಾಜ





ತನ್ನ ಜೀವನದಲ್ಲಿ ಮಹತ್ವದ್ದಾದ 'ದರ್ಶನ'ದಲ್ಲಿ ಮುಮ್ತಾಜ

# ಅತ್ಯಂತ ಜನಪ್ರಿಯ ತಾರೆಯ ಆತ್ಮವೃತ್ತಾಂತ

# ನಾನು ಮತ್ತು ನನ್ನ ಚಿತ್ರಜೀವನ

## ಮುಮತಾಜ

( ಕರ್ಮವೀರ ಪ್ರತಿನಿಧಿಯಿಂದ )

"ನನ್ನ ಬಗ್ಗೆ ನಾನೇ ಹೇಳಿಕೊಳ್ಳುವುದೇನು? ಇಂಥ ಸ್ವಗತ ಆತ್ಮಪ್ರಶಂಸೆಯೇ ಆದೀತು"

ಎಂದೇ ಆರಂಭಿಸಿದ ಮಮ್ತಾಜ್ 'ಕರ್ಮವೀರ' ಪ್ರತಿನಿಧಿಯೊಡನೆ ತನ್ನ ಬಗ್ಗೆ ಹೇಳಿಕೊಳ್ಳಲು ಮೊದಲು ನಿರಾಕರಿಸಿದಳು.

"ನನ್ನ ನಟನೆಯ ಬಗ್ಗೆ ನೀವು ವಿಮರ್ಶಕರು, ಪತ್ರಿಕೋದ್ಯಮಿಗಳು ಹೇಳಿಯೇ ಹೇಳುತ್ತೀರಿ. ದಿನಕ್ಕೆ ಮೂರು ಮೂರು ಶಿಫ್ಟ್ ಮಾಡಿ ಮಾಡಿ 'ನಾನು' ಎಂಬುದನ್ನೇ ಮರೆಯುತ್ತಿದ್ದೇನೆ. ಬೆಳಗ್ಗೆ ಪ್ರಣಯ ದೃಶ್ಯವಾದರೆ, ಸಂಜೆ ದುಃಖ, ರಾತ್ರಿ ಇನ್ನೊಂದೇ ಆಗುತ್ತದೆ. ನನಗೆ ಖಾಸಗಿ ಜೀವನವೆಂಬುದೇ ಇಲ್ಲ ಎಂದರೆ ಆಶ್ಚರ್ಯಪಡಬೇಡಿ ಮತ್ತೆ"

"ಹಾಗಾದರೆ ನೀವು ಬೇಗ ವಿವಾಹವಾಗುವುದೊಳಿತು. ರಜತಪರದೆಯ ಕೃತಕ ಸುಖಪಟ್ಟಿದ್ದೀರಿ. ಈಗ ಸಾಂಸಾರಿಕ ಜೀವನದ ಸ್ನ್ಯಾಪ್‌ಶಾಟ್ ಕೂಡ ನೋಡಿರಿ" ಎಂದು ಸಲಹೆ ಮಾಡಿದಾಗ, ಮುಗುಳ್ನಗುತ್ತಾ ಮಮ್ತಾಜ್ ಎಂದಳು,

"ನಿಜ. ರಜತಪರದೆಯ ಮೇಲಿನ ನನ್ನ ಜೀವನವನ್ನು ಹಿಂದಿರುಗಿ ನೋಡಿದಾಗ ನನಗೇ ವಿಸ್ಮಯವಾಗುತ್ತದೆ!"

"ಏಕೆ? ಅಭಿಮಾನವಾಗುವುದಿಲ್ಲವೆ?"

"ಅದು ಸಹೃದಯರಾದ ನಿಮ್ಮಂತಹ ಮಿತ್ರರ ಮಾತು. ನಿಜ. ಕೆಲವೇ ವರ್ಷಗಳ ಹಿಂದೆ 'ಸ್ಟಂಟ್' ಚಿತ್ರಗಳಲ್ಲಿ ಮಾತ್ರ ಯೋಗ್ಯಳೆನಿಸಿದ ನಾನು 'ಪುನರ್ ಜನ್ಮ' ಪಡೆದು ಬಂದುದು ಒಂದು ದಾಖಲೆಯೇ ಸರಿ. ಬಹುಶಃ ನಾನು ನಟಿಸಿದ ಚಿತ್ರಗಳು ಆಚರಿಸಿದಷ್ಟು ಜ್ಯುಬಿಲಿಗಳನ್ನು ಬೇರಾವ ನಟಿಯರ ಚಿತ್ರಗಳೂ ಪಡೆದಿಲ್ಲ. ಇದು ಅದೃಷ್ಟದ ಆಟ ಎನ್ನುತ್ತಾರೆ. ನಾನೂ ಒಪ್ಪುತ್ತೇನೆ. ಆದರೆ ಅದೃಷ್ಟವೊಂದೇ ಏನೂ ಮಾಡಲಾರದು. ಅದರೊಂದಿಗೆ ನಮ್ಮಲ್ಲೂ ಕರ್ತೃತ್ವ ಶಕ್ತಿಯಿರಬೇಕು; ತ್ಯಾಗ ಮಾಡುವ ಬುದ್ಧಿಯಿರಬೇಕು".

೧೯೭೦ರ ಶ್ರೇಷ್ಠತಾರೆ ಎಂದು 'ಫಿಲ್ಮ್‌ಫೇರ್' ಪ್ರಶಸ್ತಿ ಪಡೆದ ಮಮ್ತಾಜ್ 'ಲಕೀ ಸ್ಟಾರ್' ಎಂದು ಹೆಸರು ಪಡೆದಿದ್ದಾಳೆ. ಕಳೆದ ವರ್ಷ ಅವಳು ನಟಿಸಿದ ಪ್ರತಿಚಿತ್ರವೂ ಜ್ಯುಬಿಲಿಯಾಗಿದೆ. 'ಖಿಲೋನಾ', 'ಹಿಮ್ಮತ್', ಬಂಧನ್', 'ಸಚ್ಚಾ ಝೂಟಾ'. ಆಕೆ ಅತಿಥಿ ನಟಿಯಾದ 'ಹಮ್‌ಜೋಲಿ' ಕೂಡ ರಜತೋತ್ಸವ ಆಚರಿಸಿತು. 'ದೋರಾಸ್ತೆ' ಸ್ವರ್ಣೋತ್ಸವ ಮಾಡಿತು.

"ನೀವು ಜೀವನದಲ್ಲಿ ಮಾಡಿದ ಅತಿ ದೊಡ್ಡ ಅಪರಾಧ ಯಾವುದು?"

"ನಾನು ನಾಯಕಿ ನಟಿಯಾದುದೇ ದೊಡ್ಡ ಅಪರಾಧ. ಏಕೆಂದರೆ ನನ್ನ ಕಲ್ಪನೆಯ ನಾಯಕಿಯ ಮಟ್ಟಕ್ಕೆ ನಾನೆಂದೂ ಬರುವುದಿಲ್ಲ ಎಂಬ ಅಸಮಾಧಾನವಿಷ್ಟೇ ಇದೆ"



‹ದರ್ಖನ› ಚಿತ್ರದಲ್ಲಿಯ ಸ್ನಾನದ ದೃಶ್ಯದಲ್ಲಿ ಮುಮ್ತಾಜ

ತಂಗಿ ಮಲ್ಲಿಕಾ, ಹಾಗು ತಮ್ಮ ರೂಪೇಶ ಕುಮಾರರೊಂದಿಗೆ ಮುಮ್ತಾಜ



"ನೀವು ಯಾವುದಕ್ಕೆ ಹೆದರುತ್ತೀರಿ? ಚಿತ್ರಗಳಲ್ಲಿ ನಟಿಸುವ ಪ್ರತಿಗೆ?"

"ಊಹೂಂ. ನಿಮ್ಮಂಥ ಪತ್ರಿಕಾಕರ್ತರು ಬಂದು ಪ್ರಶ್ನೆ ಪಟ್ಟಿ ಕೇಳುವಾಗ ಹೆದರದೆ ಹೇಗಿರಬಲ್ಲೆ?" ಎಂದು ನಕ್ಕಳು.

## ಮುಮ್ತಾಜಳ ಚಿತ್ರಗಳು

ಮೊದಲ ಚಿತ್ರ 'ಆಗ್ ಕಾ ಪರ್ಬತ್' – ಆಕೆ ನಾಯಕಿ. ಆಕೆಯ ತಾಯಿ ಚಿತ್ರದಲ್ಲೂ ತಾಯಿ. ಆದರೆ ದುರದೃಷ್ಟ. ನಿರ್ಮಾತೃ ವೈ. ಬಿ. ಯಾವರ್ ಈ ಚಿತ್ರವನ್ನು ಮೂರು ರೀಲಿನಲ್ಲಿ ಮುಗಿಸಿ ಅಂಗಡಿ ಮುಚ್ಚಿ ಕೂತರು. ಯಾರು ನಂಬಿದ್ದರು ಮುಮ್ತಾಜ್ ಅದೃಷ್ಟ ತಾರೆ ಎಂದು? ಇಂದು ಇದೇ ಯಾವರ್ ಮುಮ್ತಾಜಳ ಆರ್ಥಿಕ ಕಾರ್ಯದರ್ಶಿ. ಮುಮ್ತಾಜಳ ಎರಡನೇ ಚಿತ್ರ 'ಪತ್ಲಿ ಕಮರ್ ತಿರಚಿ ನಝರ್' ಕೂಡ ಅರ್ಧದಲ್ಲೇ ನಿಂತುಬಿಟ್ಟಿತು. ಸರಿ. ಮುಮ್ತಾಜಳ ಚಿತ್ರಜೀವನ ಅಲ್ಲೇ ನಿಂತು ಹೋಗಬೇಕಿತ್ತು. ಈ ದುರದೃಷ್ಟದ ತಾರೆಯನ್ನು ಯಾರು ಕೇಳಬೇಕು? ನಿರ್ಮಾತೃರು, ದಿಗ್ದರ್ಶಕರು, ಹೀರೋಗಳು ಎಲ್ಲರೂ ಆಕೆಯನ್ನು 'ಅಸ್ಪೃಶ್ಯ'ಳಂತೆ ದೂರವಿಟ್ಟರು. ಇಂದು ಅವರೆಲ್ಲ ಆಕೆಯ ಹಿಂದೆ ಬಿದ್ದಿದ್ದಾರೆ.

ಮೊದಲು ಮುಮ್ತಾಜ್ ಶಾಂತಾರಾಮರ 'ಸಹೇಲಿ' ಮತ್ತು 'ಸ್ತ್ರೀ' ಚಿತ್ರಗಳಲ್ಲಿ ಕೆಲವೇ ಮಾತುಗಳ ಚಿಕ್ಕಮುಟ್ಟ ಪಾತ್ರವಾಡಿದ್ದಳು. ಇವು ಮುಮ್ತಾಜಳ ಮೊತ್ತ ಮೊದಲ ಚಿತ್ರಗಳು.

ಕೊನೆಗೂ ಪಹಿಲ್ವಾನ ದಾರಾಸಿಂಗ ಈ ತಾರೆಯೊಂದಿಗೆ ನಟಿಸಲು ಒಪ್ಪಿದ. ೧೯೬೧ರ ಈ ಚಿತ್ರವೇ 'ಫೌಲಾದ'. ಅಲ್ಲಿಂದ ಆಕೆ ಚಿತ್ರ ಕೆಟ್ಟದಿರಲಿ, ಒಳ್ಳೆಯದಿರಲಿ ಪ್ರೇಕ್ಷಕರೆದುರಿಗೆ ಒಂದಲ್ಲ ಒಂದು ಚಿತ್ರದಲ್ಲಿ ಕಾಣಿಸುತ್ತಲೇ ಇದ್ದಳು. ಓ. ಪಿ. ರಾಹ್ಲನನ 'ಗೆಹರಾ ದಾಗ' (ಮುಮ್ತಾಜಳ ಮೊದಲ ಸಾಮಾಜಿಕ ಚಿತ್ರವಿದು) ಆಕೆಗೆ ಹೊಸ ಅವಕಾಶ ಕೊಟ್ಟರೆ ನಾಗಿರೆಡ್ಡಿಯ 'ರಾಮ್ ಔರ್ ಶ್ಯಾಮ್'ನಲ್ಲಿ ದಿಲೀಪ – ವಹೀದರ ನಡುವೆ ಚಿಕ್ಕ ಪಾತ್ರ ಕೊಟ್ಟು ಚಿತ್ರಜೀವನದಲ್ಲಿ ತಿರುವನ್ನು ತಂದಿತು. ಜಿ. ಪಿ. ಸಿಪ್ಪಿ, ವಿ. ಶಾಂತಾರಾಮ ಮತ್ತೊಮ್ಮೆ ಮುಮ್ತಾಜಳಲ್ಲಿ ಆಸಕ್ತರಾದರು. 'ಮೇರೆ ಸನಮ್','ಬಂಧನ', 'ಬೂಂದ್ ಜೊ ಬನಗಯಿ ಮೋತಿ' 'ಜಿಗ್ರಿದೋಸ್ತ,' ಇವು ಅವಳ ಸಂಕ್ರಾಂತಿ ಕಾಲದ ಚಿತ್ರಗಳು.

ಪ್ರಸಾದರ 'ಖಿಲೋನಾ' ಮುಮ್ತಾಜ್‌ಳ ಜೀವನದಲ್ಲೇ ಅವಿಸ್ಮರಣೀಯ. ಒಮ್ಮೆಲೆ ಮುಮ್ತಾಜ್ ಜನಪ್ರಿಯಳಾದಳು. ಅದೃಷ್ಟತಾರೆಯಾದಳು. ಅನಂತರದ ಅವಳ ಯಶಸ್ಸಿನ ಕತೆ ಚಿತ್ರಪ್ರೇಮಿಗಳಿಗೆಲ್ಲ ಚೆನ್ನಾಗಿ ಗೊತ್ತು. ಇಂದು ಮುಮ್ತಾಜ್ ಎಳೆಂಟು ಚಿತ್ರಗಳಲ್ಲಿ ನಟಿಸುತ್ತಿರುವ ಬಿಡುವಿಲ್ಲದ ತಾರೆ.

ರೂಪ ತೇರಾ ಮಸ್ತಾನಾ', ದುಷ್ಮನ್', ಟಾಂಗೆವಾಲಾ', ದರ್ಖನ್', 'ಶರಾಫತ್', ಆಕೆಯ ಬರಲಿರುವ ಕೆಲವು ಮುಖ್ಯ ಚಿತ್ರಗಳು.

ಕರ್ಮವೀರ

## ಮುಮ್ತಾಜಳ ಬಗ್ಗೆ

* ಮುಮ್ತಾಜ ಹುಟ್ಟಿದುದು ಜುಲೈ ೩೧, ೧೯೪೭ರಂದು ಮುಂಬೈಯಲ್ಲಿ. ತಾಯಿ ಸರದಾರ್ ಬೇಗಂ ಕೂಡ ನಟಿಯಾಗಿದ್ದರು.
* ಮುಮ್ತಾಜಳ ಎತ್ತರ ೫' ೩". ನೋಡಲು ಇನ್ನೂ ಷೋಡಶ ಕನ್ಯೆ
* ಮುಮ್ತಾಜ್ ೧೯೭೧ ರಲ್ಲಿ ವಿವಾಹವಾಗುವೆನೆಂದು ಹೇಳುತ್ತಾಳೆ.
* ಆಸಕ್ತಿಗಳು: ಈಜಾಟ, ಸೈಕಲಿಂಗ್, ಕುದುರೆ ಸವಾರಿ.
* ವೇಷಭೂಷಣ: ಸೀರೆ ಅತಿಪ್ರಿಯ ಉಡುಪು (ಬಿಳಿ ಸೀರೆ)
* ಪ್ರೀತಿಯ ಬಣ್ಣಗಳು: ಕಪ್ಪು, ಬಿಳಿ, ಕೇಸರಿ.
* ಮುಮ್ತಾಜಳ ವಿಳಾಸ:

ಪ್ಲಾಟ್ ೨೩, ಸಂಜಾನಾಗಲ್ಲಿ<br>ಕಾರ್ಟರ್‌ರೋಡ್, ಬಾಂದ್ರಾ,<br>ಮುಂಬಯಿ ೫೦.



→ ಮುಮ್ತಾಜ ಮುದ್ದುಮುಖಕ್ಕೆ ಮೇಕಪ್
(ಜನ್ಮದಿನದ ವಿಶೇಷ ಫೋಟೊ)

'ರೂಪತೇರಾ ಮಸ್ತಾನಾ' ಚಿತ್ರದ ಪ್ರಣಯದೃಶ್ಯವೊಂದರಲ್ಲಿ ಜಿತೇಂದ್ರನೊಂದಿಗೆ ಮುಮ್ತಾಜ

ವಿಶೇಷಲೇಖನ

# ಅನಾಮಧೇಯ ಎಕ್ಸ್‌ಟ್ರಾಗಳ ಕರುಣಕಥೆ



ತಾನೂ ಮುಮ್ತಾಜಳಂತೆ ಮೇಲೇರ ಬೇಕೆನ್ನುವ ಎಕ್ಸ್‌ಟ್ರಾ ನಟಿ

( ಮುಂಬಯಿ ಪ್ರತಿನಿಧಿಯಿಂದ )

ಒಬ್ಬ ದಿಲೀಪ ಕುಮಾರ – ರಾಜೇಶ ಖನ್ನ– ಒಬ್ಬಳು ಮುಮ್ತಾಜ. ಅವರ ಹಿಂದೆ ನೂರಾರು ಅನಾಮಧೇಯ ನಟ – ನಟಿಯರು. "ಸಾವಿರಾರು ಹೂಗಳು ಅರಳುತ್ತವೆ; ಮುಡಿಯಲು ತೆಗೆಯುವುದು ಕೆಲವನ್ನು" ಎಂಬಂತೆ ಯಾರೂ ಗುರುತಿಸದೆ, ಪ್ರೋತ್ಸಾಹಿಸದೆ ನಿರಾಶೆ ಹೊಂದಿದ ಅನಾಮಧೇಯ ತಾರೆಯರು ನೂರಾರು. ಇದು ಪ್ರಕೃತಿಯ ನಿಯಮ.

ಮುಂಬಯಿಯ ಮಹಾಲಕ್ಷ್ಮಿ ರೈಲುನಿಲ್ದಾಣದ ಬಳಿ, ಜೆಕಾಬ್ ಸರ್ಕಲ್ ಪಕ್ಕದಲ್ಲಿ ಇರುವ ಧೋಬಿ ಘಾಟದ ಹಿಂದಿನ ತಗಡಿನ ಶೆಡ್ಡಿನಲ್ಲಿ ಕೆಲವು ಮಂಕು ದೀಪಗಳು . ಒಳಗಡೆ ಇರುವ ಹಲಗೆಗಳಲ್ಲಿ ಅಷ್ಟೇ ಮಂಕಾಗಿ ಕೂತಿದ್ದಾರೆ – ತರುಣ – ತರುಣಿಯರು; ಮುದುಕ – ಮುದುಕಿಯರು. ನೋಡಿದರೆ ಬಂಗ್ಲಾ ದೇಶದಿಂದ ಬಂದ ನಿರಾಶ್ರಿತರಂತೆ ಕಾಣುವ ಇವರು ಹಿಂದಿ ಚಿತ್ರರಂಗದಲ್ಲಿ 'ದಿನಕೂಲಿ' ಮಾಡುವ ಎಕ್ಸ್‌ಟ್ರಾ ನಟನಟಿಯರು! ಅವರಿಗೀಗ ಗೌರವದ ಹೆಸರಿದೆ– 'ಜ್ಯೂನಿಯರ್ ಆರ್ಟಿಸ್ಟ್' ಎಂದು.

ಚಿತ್ರರಂಗದಲ್ಲಿ ಅನವರತ ನಡೆವ ಶೋಷಣೆಗೆ ಸಿಕ್ಕು ಜಬ್ಬೆಯಾಗಿರುವ ಈ 'ಸಂತ್ರಸ್ತರು' ಒಗ್ಗಟ್ಟಿನಲ್ಲಿ ಬಲವಿದೆ ಎಂಬ ಸೂತ್ರ ನಂಬಿ ಸಂಘ ಕಟ್ಟಿದ್ದಾರೆ. ಇದರ ಸದಸ್ಯತ್ವ ೪೨೫. ತಕ್ಕಮಟ್ಟಿಗೆ ಸುಸೂತ್ರವಾಗಿ ನಡೆಯುತ್ತಿರುವ ಈ ಸಂಘಕ್ಕೆ ಆಡಳಿತ ಸಮಿತಿಯೂ ಇದೆ.

ಒಳಹೊಕ್ಕು ಅಧ್ಯಕ್ಷ ಕೆ.ಜೆ. ಗೋಪಾಲ, ಉಪಾಧ್ಯಕ್ಷ ಮಿಜ್ವಾನ, ಸೀನಿಯರ್ ಸೆಕ್ರೆಟರಿ ಪಂಡಿತ ಇಕ್ಬಾಲ ಕೃಷ್ಣ, ಸಹಕಾರ್ಯದರ್ಶಿ ಝಾಫರ ಅಹಮ್ಮದ್ ಕೋಶಾಧಿಕಾರಿ ಹಫೀಝ್ ಕರ್ದಾರ, ಆಫೀಸು ಕಾರ್ಯದರ್ಶಿ ವರ್ಮಾ (ಇವರೂ ಎಕ್ಸ್ಟ್ರಾ ನಟರೇ) ಇವರನ್ನು ಕಂಡು 'ಕರ್ಮವೀರ' ಪ್ರತಿನಿಧಿ ಮಾತನಾಡಿದಾಗ ದೊರೆತ ಮಾಹಿತಿ ಅಪೂರ್ವ.

ಸುಮಾರು ೩೦ ವರ್ಷ ಹಳೆಯದಾದ ಈ ಸಂಸ್ಥೆ ಅನೇಕ ಬಾರಿ ಮುರಿದು ಹೋದರೂ ಮತ್ತೆ ಮತ್ತೆ ಚೇತರಿಸಿ ಹೇಗಾದರೂ ಬದುಕಿದೆ. ಬಿಲಿಮೋರಿಯಾರಂಥ ಹಳೆಯ ನಟರು ಇಂದಿಗೂ ಇದರ ಸದಸ್ಯರು. "ಇದು ಚಿತ್ರರಂಗದ ಮಾತೃಸಂಸ್ಥೆ" ಎನ್ನುತ್ತಾರೆ ಅಭಿಮಾನದಿಂದ ಕಾರ್ಯದರ್ಶಿ ಇಕ್ಬಾಲ ಕೃಷ್ಣ. ಇಂದಿನ ಸಂಸ್ಥೆ ೧೯೪೩ರಲ್ಲಿ ಭದ್ರವಾಗಿ ಕಟ್ಟಲ್ಪಟ್ಟು ಮೇಲೆ ಎಡೆಬಿಡದೆ ಮುಂದೆ ಬಂದಿದೆ. ಆದರೂ ಆಶ್ರಯವಿಲ್ಲದೆ ದಾದರ, ಪರೇಲ, ಮಾಹಿಮಗಳಲ್ಲಿ ಸುತ್ತಾಡಿ ಈಗ ತಗಡಿನ ಶೆಡ್ಡಿನಲ್ಲಿ ಮಹಾಲಕ್ಷ್ಮಿಯಲ್ಲಿ ಬಂದು ನಿಂತಿದೆ.

ಮೋಹನ ಛೋಟಿ, ಮಹಮೂದ್, ಜಯಶ್ರೀ ಟಿ, ದಿಗ್ದರ್ಶಕ ಸಾಕಪಾಲ, ಚಂದ್ರಶೇಖರ, ಶ್ಯಾಮಾ, ಜಗದೀಪ ಇವರೆಲ್ಲ ಈ ಸಂಸ್ಥೆಯಿಂದಲೇ ಮೇಲೆ ಬಂದವರು. ಹಳೆಯ ದಿಗ್ದರ್ಶಕ ಕೊಹಲಿ ಕೂಡ ಈಗ ಇದರ ಸದಸ್ಯರು. ಚಿತ್ರರಂಗದಲ್ಲಿ ಸ್ಥಾನವಿಲ್ಲದೆ ಪೇಚಾಡುವವರೆಲ್ಲ ಬಂದು ಇಲ್ಲಿ ಆಶ್ರಯ ಪಡೆಯುತ್ತಾರೆ. ತಾರೆಯಾಗುವೆನೆಂದು ಊರಿನಿಂದ ಓಡಿ ಬಂದವರೆಷ್ಟೋ. ಆಕಸ್ಮಿಕವಾಗಿ ಈ ಸಂಸ್ಥೆ ಸೇರಿದವರೆಷ್ಟೋ. ಅವರೆಲ್ಲರೂ ಪಡುತ್ತಿರುವ ಪಾಡನ್ನು ನೋಡಿದರೆ ಮಾತ್ರ "ಅಯ್ಯೋ" ಅನ್ನಿಸದೇ ಇರದು.



ಪಾಳಿಗಾಗಿ ಕಾದಿರುವ ಈ ಕಲಾವಿದರನ್ನು ಆತ್ಮೀಯತೆಯಿಂದ ವಿಚಾರಿಸಿದಾಗ ನಿರಾಶೆ ತುಂಬಿದ ಮನದಾಳದಲ್ಲೂ ಆಶಾಕಿರಣ ಮಿಂಚುತ್ತದೆ.

ಸ್ತ್ರೀ ಸದಸ್ಯರಲ್ಲಿ ಮೂರು ಬಗೆಗಳು. ಎಲ್ಲರಿಗೂ ದಿನಕೂಲಿ. ಏ ಕ್ಲಾಸಿನವರಿಗೆ ದಿನಕ್ಕೆ ೧೭.೫೦ ರೂ. ಸಂಬಳ. 'ಬಿ'ಕ್ಲಾಸಿನ ನಟಿಯರಿಗೆ ರೂ. ೧೦. ಸೂಪರ್ ಕ್ಲಾಸ್ ಎಂಬುದಿದೆ – ದಿನಕ್ಕೆ ೨೭.೫೦ ಸಂಸ್ಥೆಗೆ ತಿಂಗಳ ಚಂದಾ ರೂ. ೨ ಮಾತ್ರ. ಗಂಡಸರಲ್ಲಿ ಎರಡೇ ವಿಧಗಳು. 'ಬಿ'ಕ್ಲಾಸ್‌ನವರಿಗೆ ದಿನಕ್ಕೆ ರೂ. ೧೦. 'ಡಿಸೆಂಟ್ ಕ್ಲಾಸ್'ಗೆ ರೂ. ೨೦. ಇವರೆಲ್ಲ ಅವರವರ ಕ್ಲಾಸ್‌ಹೊಂದಿ ಪಾತ್ರಗಳನ್ನು ಮಾಡಬೇಕಾಗುತ್ತದೆ. ಪೋಲೀಸು ಪ್ಯಾದೆ, ಪ್ರಜೆಗಳು, ಕೋರ್ಟು ದೃಶ್ಯವೊಂದರಲ್ಲಿ ಸಾಕ್ಷಿಗಳು, ನೃತ್ಯದಲ್ಲಿ ಸಹನರ್ತಕಿಯರು, ಸಖಿಯರು,

ಚಿತ್ರರಂಗದ ಮಾಯಾಲೋಕದಲ್ಲಿ ಸೋತು, ಮರೆತು, ಅದೃಷ್ಟಹೀನರಾಗಿ, ಮೇಲೆ ಬರಲು ಪೇಚಾಡುವವರ ಕಥೆಯಿದು. ಮೃಗಜಲವನ್ನರಸಿ ನಿರಾಸೆಹೊಂದಿ ನಾಳೆಗಾಗಿ ಕಾದಿರುವ ಕಲಾವಿದರ ಕಷ್ಟದಕಥೆ



ಈ ಹಳೆಯ ತಾರೆ ಇಳಿವಯಸ್ಸಿನಲ್ಲೂ ಆಶೆ ಬಿಟ್ಟಿಲ್ಲ.

ಯುದ್ಧವಾದರೆ ಸೈನಿಕರು – ಹೀಗೆ ದೃಶ್ಯಕ್ಕೆ ಹೊಂದಿದ ಪಾತ್ರ. ಕೆಲವೊಮ್ಮೆ ಒಂದೆರಡು ಮಾತುಗಳನ್ನು ಬಿಟ್ಟರೆ 'ಬಾಡಿಗೆಗೆ' ತೆಗೆದುಕೊಂಡ ಈ ಕಲಾವಿದರು ಅನಾಮಧೇಯರೆ. ಅವರಿಗೆ ಹಣಕೊಡುವ ರಶೀದಿ ಹೊರತು ಎಲ್ಲೂ ಅವರ ಹೆಸರು ಕಾಣಿಸಲಾರದು. ಆದರೂ ಹೆಚ್ಚಿನವರೆಲ್ಲ ತಾವೂ ಒಂದು ದಿನ ದಿಲೀಪನೋ, ಮಮ್ತಾಜಳೋ ಆಗಬಹುದೆಂಬ ಆಸೆ ಹಿಡಿದೇ ಇದ್ದಾರೆ.

ಪತ್ರಿಕೆಯವರು ಬಂದರು ಎಂದೊಡನೆ ಎಲ್ಲರೂ ಸುತ್ತುಗಟ್ಟಿ "ನಮ್ಮ ಫೋಟೋ ತೆಗೆಯಿರಿ. ನಾನು ಇಂಥಿಂಥ ಚಿತ್ರಗಳಲ್ಲಿ ನಟಿಸಿದ್ದೇನೆ" ಎನ್ನುವವರೇ ಎಲ್ಲರೂ. 'ಕರ್ಮವೀರ'ನಿಗೆ ಅಲ್ಲಿ ಕಂಡ ಇನ್ನೊಂದು ಆಶ್ಚರ್ಯದ ಸಂಗತಿ ಎಂದರೆ ಏಳೆಂಟು ಕನ್ನಡಿಗರೂ ಇರುವುದು.

ಕೆಲವರು ತಮ್ಮ ವಿಚಾರಗಳನ್ನು ಹೇಳಿಕೊಳ್ಳಲು ಹಿಂದೆಗೆದರು. ಹಿಂದೊಮ್ಮೆ ಇಂಗ್ಲಿಷ್ ಪತ್ರಿಕೆಯವರು ಅವರನ್ನು ಟೀಕಿಸಿದ್ದರಂತೆ. ಕೆಲವು ಎಕ್ಸ್‌ಟ್ರಾ ತಾರೆಯರು ವೇಶ್ಯೆಯರು ಎಂದು ಬರೆದಿದ್ದರಂತೆ. ನಿಜ. ಚಿತ್ರರಂಗದಲ್ಲಿ ಭರವಸೆ ಇಲ್ಲದಿದ್ದಾಗ ಅಡ್ಡಹಾದಿ ಹಿಡಿಯುವ ಪ್ರಸಂಗಗಳೂ ಅಪರೂಪವಲ್ಲ. ಚಿತ್ರರಂಗದಲ್ಲಿ ಅದಕ್ಕೆ ಅವಕಾಶಗಳು ಹೆಜ್ಜೆಗೊಂದು.

ಪ್ರತಿದಿನ ಸಂಜೆ ೫-೩೦ರಿಂದ ೭-೩೦ರ ವರೆಗೆ ಸದಸ್ಯರು ಕೂಡುತ್ತಾರೆ. ಸುಮಾರು ೭ ಗಂಟೆಗೆ ಮರುದಿನದ ಷೂಟಿಂಗಿನ ಪಟ್ಟಿ (ಕಾಲ್‌ಶೀಟ್) ಬರುತ್ತದೆ. ಯಾವ ಯಾವ ಸ್ಟುಡಿಯೋದಲ್ಲಿ ಎಷ್ಟೆಷ್ಟು ಮಂದಿ ಬರಬೇಕೆಂಬ ಈ ಪಟ್ಟಿಯನ್ನು ಹಿಡಿದು ವ್ಯವಸ್ಥಾಪಕರು ಬಂದಾಗ ಎಲ್ಲರೂ ಕಾತರದಿಂದ ಓಡಿಬಂದು ಸ್ವಸ್ಥಾನ ಸೇರುತ್ತಾರೆ. "ನಾಳೆ ಒಳ್ಳೆಯದನ್ನು ತಂದೀತು" ಎಂಬ ಆಸೆಯಿಂದ ಅವರೆಲ್ಲ ಹಾಗೆ ಎಷ್ಟು ಸಂಜೆಗಳನ್ನು ಕಳೆಯಬೇಕೋ!



ಅವಕಾಶಕ್ಕಾಗಿ ಕಾಯುವುದೇ ಈ ಎಕ್ಸ್‌ಟ್ರಾ ಕಲಾವಿದರಿಗಳಿಗುಳಿದ ಮಾರ್ಗವಾಗಿದ್ದರೂ ಅಂಥ ಸಂದರ್ಭಕ್ಕಾಗಿ ವಿಶ್ವಪ್ರಯತ್ನ ನಡೆಸಿರುತ್ತಾರೆ......

ಶೀತದಿಂದ ನಿಜವಾಗಿಯೂ ತೊಂದರೆಯಾಗ್ತಾ ಇತ್ತು ಮಗೂಗೆ.

ಪಾಪ ಮೂಗು
ಕಟ್ಟಿಕೊಂಡಿತ್ತು,
ಉಸಿರಾಟ
ಕಷ್ಟವಾಗಿತ್ತು,
ಮತ್ತೆ ಅದು ಬಹಳ
ಚಡಪಡಿಸುತ್ತಾ ಇತ್ತು

ಆದರೆ ಈಗ, ಆರಾಮವಾಗಿ ನಿದ್ದೆ ಹೋಗ್ತಾ ಇದೆ.

## ವಿಕ್ಸ್ ವೆಪೋರಬ್ ಶೀತದಿಂದುಂಟಾದ ಎಲ್ಲಾ ಕಷ್ಟಗಳನ್ನು ನಿವಾರಿಸುತ್ತದೆ. ಕಟ್ಟಿದ ಮೂಗು ತೆರೆಯುತ್ತದೆ, ಉಸಿರಾಟ ಸುಲಭವಾಗುತ್ತದೆ, ಅಳುವುದನ್ನು ನಿಲ್ಲಿಸಿ ಮಗು ಆರಾಮವಾಗಿ ನಿದ್ದೆ ಹೋಗ್ತಾಇದೆ.

ಮೂಗು, ಗಂಟಲು, ಎದೆ ಮತ್ತು ಬೆನ್ನು ಹೆಚ್ಚಾಗಿ ಶೀತದ ಭಾಧೆಗೊಳಗಾಗುವ ದೇಹದ ಭಾಗಗಳು. ಅವುಗಳ ಮೇಲೆ ನೇರವಾಗಿ ತಿಕ್ಕಲು ವಿಕ್ಸ್ ವೆಪೋರಬ್ ಅನುಕೂಲವಾಗಿದೆ.

ವಿಕ್ಸ್ ವೆಪೋರಬ್‌ನ ಬೆಚ್ಚತನ ಮಗುವಿಗೆ ತಕ್ಷಣ ಆರಾಮ ನೀಡುತ್ತದೆ. ಉಸಿರಾಟ ಸುಲಭವಾಗಿ, ಮಗು ಹಾಯಾಗಿ ಮಲಗುತ್ತದೆ.

ವಿಕ್ಸ್ ವೆಪೋರಬ್‌ನ ವಿಶೇಷ ಗುಣವೆಂದರೆ, ಅದು ನಿವಾರಣೆಗೆ ಎರಡು ರೀತಿಯಲ್ಲಿ ಪರಿಣಾಮಕಾರಿ.




ಮೈಯ ಮೇಲೆ  ಶ್ವಾಸದೊಂದಿಗೆ

1. ವಿಕ್ಸ್ ವೆಪೋರಬ್ ತಿಕ್ಕುವುದರಿಂದ ಸ್ನಾಯುಗಳ ಜಡತೆ ಸಡಿಲಾಗಿ ಶರೀರದ ನೋವು ದೂರಾಗುತ್ತದೆ.

2. ಶರೀರದ ಬೆಚ್ಚತನದಿಂದ ವಿಕ್ಸ್ ವೆಪೋರಬ್ ಆವಿಯಾಗುತ್ತದೆ. ಈ ಆವಿಯಲ್ಲಿ ವಿಕ್ಸ್ ವೆಪೋರಬ್‌ನ ಮದ್ದು ಕೂಡಿ ಕೊಂಡಿದೆ. ಉಸಿರಾಡುವಾಗ ಮದ್ದಿನಿಂದ ಕೂಡಿದ ಆವಿ ಒಳಹೊಕ್ಕು, ಕಟ್ಟಿದ ಮೂಗು ತೆರೆದಂತಾಗುತ್ತದೆ, ಗಂಟಲ ಕೆರೆತ ವಾಸಿಯಾಗುತ್ತದೆ ಮತ್ತು ಎದೆಯ ಜಡತನ ಸಡಿಲಾಗುತ್ತದೆ. ಈ ರೀತಿ ಶೀತದ ಎಲ್ಲ ಕಷ್ಟಗಳು ದೂರಾಗುತ್ತವೆ.

ಉತ್ತಮ ಫಲಿತಾಂಶಕ್ಕಾಗಿ ಸಾಕಷ್ಟು ವಿಕ್ಸ್ ವೆಪೋರಬ್ ತಿಕ್ಕಿರಿ... ಹತ್ತೊಂಬತ್ತು ಗ್ರಾಮ್‌ನ ಸೀಸೆ, ಮಕ್ಕಳಿಗೆ ಏಳು ಅಥವಾ ಎಂಟು ಬಾರಿ ಹಾಗೂ ದೊಡ್ಡವರಿಗೆ ಮೂರು ಅಥವಾ ನಾಲ್ಕು ಬಾರಿ ಹಚ್ಚಲು ಯಥೇಷ್ಟ ಸಾಕು.



ವಿಕ್ಸ್ ವೆಪೋರಬ್‌ನ್ನು ಮೂಗು ಮತ್ತು ಗಂಟಲಿನ ಮೇಲೆ ನಯವಾಗಿ ಹಚ್ಚಿರಿ, ಎದೆ ಮತ್ತು ಬೆನ್ನ ಮೇಲೆ ಚೆನ್ನಾಗಿ ತಿಕ್ಕಿರಿ. ಶೀತ ಸಂಪೂರ್ಣ ದೂರಾಗುವ ವರೆಗೆ ಈ ಚಿಕಿತ್ಸೆಯನ್ನು ತಪ್ಪದೆ ಮಾಡುತ್ತಿರಿ.




12 ಗ್ರಾಮ್ ದೊಡ್ಡ ಡಬ್ಬಿ




ಶೀತದ ಕಾಟ ಮಕ್ಕಳಿಗೆ ತಪ್ಪಿದ್ದಲ್ಲ, ವಿಕ್ಸ್ ವೆಪೋರಬ್ ಸದಾ ನಿಮ್ಮ ಮನೆಯಲ್ಲಿರಲಿ.

489

## ಕೆ. ಪದ್ಮನಾಭರಾವ್

೫೮ ವರ್ಷದ, ಉಡುಪಿಯ ಕೆ. ಪದ್ಮನಾಭರಾವ್ ಚಿತ್ರರಂಗದಲ್ಲಿ ೪೧ ವರ್ಷ ದುಡಿದವರು. ಮೂಕಚಿತ್ರಗಳಲ್ಲೂ ನಟಿಸಿದವರು. ಕನ್ನಡ, ತೆಲುಗು, ತಮಿಳು, ಮಲೆಯಾಳಂ, ಹಿಂದಿ, ಗುಜರಾಥಿ ಚಿತ್ರಗಳಲ್ಲಿ ನಟಿಸಿದ ರಾವ್ ನಾಯಕ – ಖಳನಾಯಕನ ಪಾತ್ರದಲ್ಲಿ ಮೊದಲು ಕಾಣಿಸಿಕೊಂಡವರು. 'ಚಂದ್ರಹಾಸ' (ತಮಿಳು) ನನ್ನ ಜನಪ್ರಿಯ ಚಿತ್ರ" ಎನ್ನುತ್ತ ರಾವ್, ತನ್ನ ಜೊತೆಯೊಂದಿಗೆ ಅಮೀರಬಾಯಿ ಕರ್ನಾಟಕಿ, ಸಯಂಪಳ್ಳಿ, ಜಗದೀಶ ಸೇಠಿ, ಪೃಥ್ವೀರಾಜ ಮೊದಲಾದವರೆಲ್ಲ ನಟಿಸಿದ್ದರು. ಎಂದರು. ಬ್ರಾಹ್ಮಣರಾದ ರಾವ್ ಅವರಿಗೆ ಜ್ಯೋತಿಷ್ಯ – ಸಂಸ್ಕೃತ ಸ್ವಲ್ಪ ಗೊತ್ತು. ಎಂದೇ ಹಿಂದಿ ಚಿತ್ರಗಳಲ್ಲಿ ಅವರಿಗೆ ಪುರೋಹಿತನ ಪಾತ್ರ ಕಟ್ಟಿಟ್ಟದ್ದು.

ಕೆ. ಪದ್ಮನಾಭರಾವ್

[illegible]

## ಮೀನಾಕ್ಷಿ ಶೆಟ್ಟಿ

ಸೂಪರ್ ಕ್ಲಾಸಿನ ಮೀನಾಕ್ಷಿ ಶೆಟ್ಟಿ ಮಂಗಳೂರಿನವರು. ಹತ್ತು ವರ್ಷದಿಂದ ಚಿತ್ರರಂಗದಲ್ಲಿದ್ದಾರೆ. 'ಉಪಕಾರ' ಮೊದಲಾದ ಚಿತ್ರದಲ್ಲಿ ನಟಿಸಿದ್ದಾರೆ. ೨೦೦–೩೦೦ ಡಾಕ್ಯುಮೆಂಟರಿಯಲ್ಲಿ ತಾನು ನಟಿಸಿದ್ದೇನೆಂದು ತಿಳಿಸಿದರು. ಅವರಿಗೆ ನೃತ್ಯವೂ ಬರುತ್ತದೆ.

## ರವೀಂದ್ರನ್

ಚಿಕ್ಕಮಗಳೂರಿನ ರವೀಂದ್ರನ್ ೧೪ ವರ್ಷದಿಂದ ಮುಂಬಯಿಯಲ್ಲಿದ್ದಾರೆ. ಒಂಭತ್ತು ವರ್ಷಗಳಿಂದ ಸುಮಾರು ೨೦೦ ಚಿತ್ರಗಳಲ್ಲಿ ಚಿಕ್ಕಪುಟ್ಟ ಪಾತ್ರ ಮಾಡಿದ್ದಾರೆ. ಮದುವೆ ಬೇಡವೆಂದು ಮನೆಯಿಂದ ಓಡಿ ಬಂದ ರವೀಂದ್ರನ್‌ಗೆ ದಕ್ಷಿಣದವರು ಎಂದು ಮೊದಲು ಯಾರೂ ಕೆಲಸ ಕೊಡಲಿಲ್ಲವಂತೆ. "ಈಗ ಪರಿಸ್ಥಿತಿ ಸುಧಾರಿಸಿದೆ" ಎಂದರು. 'ಸಿಕಂದರ್' 'ಇಂಟರ್ ನ್ಯಾಷನಲ್ ಕ್ರೂಕ್' ಮೊದಲಾದುವು ಅವರು ನಟಿಸಿದ ಒಂದೆರಡು ಚಿತ್ರಗಳು. ಫೋಟೋ ತೆಗೆಯಲು ಮಾತ್ರ ರವೀಂದ್ರ ಬಿಡಲೇ ಇಲ್ಲ.

ಮೀನಾಕ್ಷಿ ಶೆಟ್ಟಿ

ಕಾಸಂ

## ಕಸಮ್

೭೨ ವರ್ಷದ ಕಸಂ ಸಂಸ್ಥೆಯ ಅತ್ಯಂತ ಹಿರಿಯ ನಟ. ಚಿತ್ರರಂಗದಲ್ಲಿ ಅವರದು ಸ್ವರ್ಣೋತ್ಸವ. ಮೊದಮೊದಲು ಮುಖ್ಯಪಾತ್ರ ವಹಿಸಿದ ಮೂಕಚಿತ್ರದ ಕಾಲದ ಈ ನಟನಿಗೆ ದುರ್ದೆಶೆ ಪ್ರಾರಂಭವಾದುದು 'ಆನ್' ಚಿತ್ರದಿಂದ. "ಅಲ್ಲಿಂದ ನಾನು ಎಕ್ಸ್‌ಟ್ರಾ ಆಗಿ ಬಂದಿದ್ದೇನೆ" ಎಂದರು ಬೇಸರದ ನಗು ನಗುತ್ತ ಕಸಂ. 'ತೂಫಾನ್ ಮೇಲ್' ಅವರ ಯಶಸ್ವಿಚಿತ್ರ.

## ಗೋವರ್ಧನ ಲಾಂಬಾ

ಒಳ್ಳೆಯ ಮೈಕಟ್ಟು, ವ್ಯಕ್ತಿತ್ವವಿರುವ ಗೋವರ್ಧನ ಲಾಂಬಾ ಖಳನಾಯಕನಾಗುವ ಪ್ರಯತ್ನದಲ್ಲಿ ಈಗಾಗಲೇ ಮೂರು ವರ್ಷ ಕಳೆದಿದ್ದಾರೆ. 'ಸಾರುಷ್ ಔರ್ ಸನಮ್' 'ಆಪ್ ಆಯೆ ಬಹಾರ್ ಆಯೆ' 'ಛೋಟಿ ಸರ್ಕಾರ್' ಮೊದಲಾದವುಗಳಲ್ಲಿ ನಟಿಸಿದ್ದಾರೆ.

'ಜ್ಯೂನಿಯರ್ ಆರ್ಟಿಸ್ಟ್ ಸಂಘ'ದ ಜತೆಕಾರ್ಯದರ್ಶಿ ಝುಲ್ಫಿಕರ ಅಹಮ್ಮದ



ಗೋವರ್ಧನ ಲಾಂಬಾ



# ಅಜ್ಜನ ತತ್ತ್ವ ಜ್ಞಾನ

ಶ್ರೀದೇವದತ್ತ

-೧-

ವಿದ್ಯಾ, ತಿಳಿವಿಗೆ ತಳಹದಿಯು
ವಿನಯಾ, ಭಕ್ತಿಯ ಚಾವಡಿಯು
ಸಚ್ಚಿದಾನಂದದ ತುದಿಯು
[illegible] ಅಜ್ಜನ ಎದೆಯು

-೨-

ಜ್ಞಾನ ಧ್ಯಾನದಲಿ ನಿರೀಕ್ಷಣ
ಮಾನೋನ್ನತಿಯಲಿ ಉಪೇಕ್ಷಣ
ಈ ಸಾಧನೆ ರಸಭರಿತ ಶ್ರಾವಣ.
ಹಚ್ಚಹಸಿರು ಬುವಿ, ಗುರುವೇ ಕಾರಣ!

-೩-

ಸದ್‌ಜ್ಞಾನದ ಅಂತರ್ ಜ್ಯೋತಿ,
ಸ್ಫೂರ್ತಿಪ್ರೇರಣೆಯ ನೀಡುವ ರೀತಿ.
ಒಳಗೂ ಹೊರಗೂ ಅರಿವಿನ ಪ್ರೀತಿ.
ಬಾಳಿನ ತುಂಬಾ ನಿರ್ಭೀತಿ.

-೪-

ಚೇತನ ಮೈಗೊಂಡಿಹ ಶ್ರೀಕೃಷ್ಣ,
ಎದೆ ವೃಂದಾವನ ಸದಾ ವಿತೃಷ್ಣ,
ಅಚಲಪ್ರೀತಿಯ ಮೂರ್ತಿಯು ರಾಧಾ
ರಾಸಕ್ರೀಡೆಗೆ ಇಲ್ಲವೊ ಬಾಧಾ.

-೫-

ಧಿಕಿಟ, ಧಿತ್ತೋಂ ಸಚ್ಚಿದಾನಂದಾ
ಜ್ಞಾನ, ಭಕ್ತಿ, ಕೃತಿ ಈ ಹೊಸ ಕಂದಾ
ಹತ್ತೂ ಕಡೆ ಹಬ್ಬಿದ ಸ್ವಚ್ಛಂದಾ
ಸವಿನುಡಿಗೂ ಮಿಡಿಯುತ್ತಿದೆ ಛಂದಾ.

-೬-

ಯೋಗಿಗಿದೆ ಎಲ್ಲಾ ಉಪಕರಣ
ಸಾಧನ, ಮಿಡಿಯಲು ಅಂತಃಕರಣ
ಹೂ ಹಗುರ್ಕೆ ಗಮಗಮಿಸೀ ಹರಣ
ಶುದ್ಧಪ್ರೀತಿಗೆ ಅಜ್ಜನು ಶರಣ.

-೭-

ವಿದ್ಯಾ-ವಿನಯಾ, ತಿಳಿವು-ಒಲವು,
ಸಚ್ಚಿದಾನಂದವೆ ಸತ್ ಫಲವು,
ಶುಭ ಮಧುರ ಗೀತೆಯದೀ ಹೆಪ್ಪು
ತೆರೆದ ಕಣ್ಣು ಕಣ್ಣಿಗು ಇದು ಒಪ್ಪು.

-೮-

ವಂಶವೃಕ್ಷದಲಿ ಈ ಅಪತ್ಯ
ಸೃಷ್ಟಿಕರ್ತನ ಬಾಧಿತ ಸತ್ಯ
ಮೂರೂ ಹೊತ್ತು ಇರದಿದೆ ಧ್ಯಾನ
ನಡೆದಿದೆ ಸತತ ಅನುಷ್ಠಾನ.

-೯-

ಇದುವೇ ಅಜ್ಜನ ತತ್ತ್ವಜ್ಞಾನ
ಇದುವೇ ಬಾಳಿನ ವಿಜ್ಞಾನ,
ಇದೇ ಸುಖದುಃಖವ ಮೀರಿದ ನಿತ್ಯ,
ದೇವದತ್ತನೋ ಕೃತಕೃತ್ಯ.



# ಅವಗಾಗಿ ... ನೆಯ್ಯುತಿದ್ದಳು

## ಶ್ರೀ ಕಯ್ಯಾರ ಕಿಞ್ಞಣ್ಣ ರೈ

[ ಬುದ್ಧಶಿಷ್ಯನಾದ ಆನಂದನು ದೀರ್ಘದಾರಿ ನಡೆದುಬಂದು ಬಿಸಿಲಿಂದ ತುಂಬಾ ಬಾಯಾರಿದ್ದನು; ಅಲ್ಲೆ ಬಳಿಯಲ್ಲಿ ಚಂಡಾಲ ಕನ್ಯೆ 'ಮಾತಂಗಿ' ಬಾವಿಯಿಂದ ನೀರು ಸೇದುತಿದ್ದಳು; ಆಕೆಯೊಡನೆ ಭಿಕ್ಷು ದಾಹವಾರಿಸಲು ನೀರನೆರೆಯೆಂದನು. ಉಚ್ಚ ಕುಲದ ಸನ್ಯಾಸಿಗೆ ನೀಚವಂಶಜಳಾದ ತಾನು ನೀರನೆರೆವುದೇ ಎಂದು ಶಂಕಿಸಿದಳಾಕೆ. ಬಾಯಾರಿದ ಭಿಕ್ಷು ಅವಳಿಗೆ ಸಮಾಧಾನ ಹೇಳಿದನು; ಆಕೆಯೆರೆದ ನೀರು ಬೆಳ್ಳಿಸರಿಗೆಯಂತೆ ಭಿಕ್ಷುವಿನ ಅಂಜಲಿಗೆ ಬಿದ್ದಿತು; ಆಸರಿಂಗಿತ್ತು; ಮಾತಂಗಿಗೂ ಸಂತೋಷವಾಯಿತು; ಕೊಡವನ್ನೆತ್ತಿ ನಡೆದಳು. ಭಿಕ್ಷುವಿಗಾಗಿ ಎರಡು ನೀಲದಾವರೆಯ ಮಾಲೆಗಳನ್ನು ನೆಯ್ಯುತ್ತಿದ್ದಳು. ಇದು ಮಲೆಯಾಳದ ಮಹಾಕವಿ ಕುಮಾರನ್ ಆಶಾನ್ ಕೃತಿ ಚಂಡಾಲ ಭಿಕ್ಷುಕಿಯ ದ್ವಿತೀಯ ಭಾಗ.]



೧

ಕೊಳೆಯಿರದ ಹಾಳೆಯನು ಬಾವಿಗೆಸೆಯುತ ಮತ್ತೆ
ಚೆಲುಗೈಯೊಳೆಳೆದು ಹಗ್ಗವ ನೀರನೆತ್ತಿ
ಕೋಮಲಾಂಗಿಯು ನಿಂತಿರಲು-ಬಳಿಗೆ ಸಾರುತ್ತೆ
ಶ್ರೀ ಭಿಕ್ಷು ಬೇಡಿದನು-ನೀರಾಸೆ ಹತ್ತಿ.

೨

"ದಾಹಿಸಿದೆ ಭಗಿನಿಯೆ! ಕೃಪಾರಸದಿ ಮೋಹಿಸುವ
ತಂಪು ತಣ್ಣೀರ ನೀಡೆನಗೆ ಯೆಲೆ ಚೆಲುವೆ!"
—ಎಂಬ ನುಡಿ ಕೇಳಿದಳು ವಿಭ್ರಮನ ತಾಳಿದಳು
ಆ ಮನೋಹರಿ ಪೇಳ್ದಳೀ ಮಾತನೊಡನೆ;

೩

"ಅಲ್ಲಲ್ಲ-ಏನು ಕಥೆಯಿದು? ಹಂತ ಕಷ್ಟವೇ!
ಅರರೆ ದಾಹ ನಿಮಿತ್ತ ಜಾತಿ ಮರವೇ?
ನೀಚ ನಾರಿಯ ಕೈಯ ನೀರ ನೀನ್ ಕುಡಿಯುವುದೆ?
ನಿಮ್ಮದೋ ಖ್ಯಾತಾರ್ಯ ಕುಲವಲ್ಲವೆ?

೪

"ಸಿಟ್ಟುಗೊಳದಿರಿ! ನಿಮಗೆ ನೀರೆರೆಯೆ ಪಾಪವಿದೆ!
ನಾನೊರ್ವ ಚಂಡಾಳಿ-ಊರ ಹೊರಗೆ
ಬಡ ಗುಡಿಸಲಲ್ಲಿರುವ ಗುರಿಕಾರ ಚಾಮರನ
ಮಗಳಾನು-ಹೊಲತಿ, ನೀರೆರೆವೆ ಹೇಗೆ?

೫

ಅತಿ ಲಜ್ಜತನು ಭಿಕ್ಷು ಪೇಳ್ದನೀ ಮಾತನ್ನು
"ಜಾತಿ ಕೇಳಿದೆನಿಲ್ಲ ನಾ ಸೋದರಿ!
ಕೇಳ್ದೆ ಜಲವನು, ಗಂಟಲಾರಿಹುದು-ನಿನಗಿನ್ನು
ಭೀತಿ ಬೇಡೌ-ನೀರು ಸುರಿ ಸುಂದರಿ."

೬

ಎಂದೊಡನೆ ಮುಂದೆ ಚಾಚಿದನು ಕೆಂದಾವರೆಯ
ಚಂದವಿಹ ಕರ ಪುಟವ ಸುಂದರನು ಭಿಕ್ಷು;
ಮುಂದೆ ವಾದಿಸಲಿಲ್ಲವವಳ ಕೋಮಲ ಹೃದಯ
ಆ ತನ್ವಿ ಕಲ್ಲಲ್ಲ ಕಬ್ಬಿಣವು ಅಲ್ಲ!

೭

ಚೆಲುವ ಕರಿಗೂದಲನು ಮುಚ್ಚಿ ತಲೆಯೊಡನೆ ಮುಖ
ಪೂರ್ತಿ ಮರೆಯಾಗಿರುವ ಸೀರೆಯೊಳಗಿಂದ
ಮಂದಹಾಸವ ಬೀರಿ-ಬಹುವಿಸ್ಮಯವ ತೋರಿ
ನಿಂದಳ್ಕೆ ಮಿನುಗುತಿಹ ತಾರೆಯಂದ

೮

ಕೆಂದಳಿರ ಹೋಲುತಿಹ ರಕ್ತರಂಜಿತ ಕಿರಣ
ಪೂರದಿಂ ಮೈಮರೆಸಿ ಮುಂಜಾವದಿ
ತುಂಬಿ ಸೇರಲು ಬಿರಿದ ಕೆಂದಾವರೆಯು ತನ್ನ
ದಳವನ್ನು ತೋರಿಸುತ ನಿಲುವ ತೆರದಿ

೯

ಮತ್ತೆ ಕರಪದ್ಮ ನಡುಗುತ್ತಿರಲು ಹಾಳೆಯಲಿ
ಚೆದರಿ ನಿಂತು ತುಳುಂಕಿ ಚೆಲುವಾಗಿರೆ,
ಮಧ್ಯೆ ಕೂಡಿರೆ ನುರಿಗಿ ಬೆಳಗುತಿಹ ಕನ್ನಡಿಯ
ಕಾಂತಿ ಬೀರುವ ನೀರ ಕರುಣೆ ದೊರ್ಕೆ-

೧೦

ಭಿಕ್ಷು ಚಾಚಿರುವ ಕರ ಕುಸುಮಕ್ಕೆ ನಸುಬಾಗಿ
ಮೆಲ್ಲನೆರೆದಳು-ಹೀರುತಿದ್ದನವನು;
ಪುಣ್ಯಶಾಲಿನಿ! ನೀನೆರೆದ ಜಲದ ಪ್ರತಿಕಣವು
ನಿನ್ನಂತರಾತ್ಮಕ್ಕೆ ಪುಣ್ಯಾಭರಣವು!

೧೧

ಆತ್ಮನಿರ್ವಾಣ ಶಿಕ್ಷಿತ ಭಿಕ್ಷುಗಳೊಳೆಂದು
ಇವನಗ್ರಗಣ್ಯನೆಂದರಿಯೆ ಬಾಲೆ!
ರಕ್ಷಿಸಲು ದಕ್ಷನಾದೀತನ ಹರಳೆ ಸಂದು
ನೀನೊ ಬೇರಾಗಿ ಮಾರ್ಪಡಲು ಬಲ್ಲೆ!

೧೨

ಅಂಜಲಿಗೆ ಅರ್ಪಿಸುತ ತನ್ನ ಮುಖಕಂಜವನು
ಭಿಕ್ಷು ಬಾಗುತ ವಾರಿ ಹೀರ್ದನಂತು
ಬೆಳ್ಳಿಸರಿಗೆಯು ತೆರದಿ ಬೀಳುತಿಹ ತಣ್ಣೀರು
ಭಾವಿ ವಿಜ್ಞಾನ ಧಾರೆಯು ನೆನೆಯಿಪಂತು!

೧೩

ಆ ಮಹಾತ್ಮನು ತಳೆದ ಸಂತೃಪ್ತಿಯನು ನೋಡಿ
ಚೆಲುವೆ ರೋಮಾಂಚನವಗೊಂಡಿರ್ದಳು!
'ಆಸರಿಂಗಿತು-ಸಾಕು ನೀರೆಂದು ದನಿಗೂಡಿ
ಎಡಗೈಯ ಹಿಡಿದೆತ್ತಿ ಭಿಕ್ಷುವೆನಲು

೧೪

ತನ್ನ ಕೊಡವನು ತುಂಬಿಸುತಲುಜ್ಜಿ ದೂರಿರಿಸಿ
ನಾರೀಮಣಿಯು ನೀಳ ಹಗ್ಗ ಸುರುಳಿ
ಶಾಳೆಯಲಿ ಮಡಗಿ ಹೊರಡಲು ಮನನ ಮಾಡಿದಳು
ಅತ್ತಿತ್ತ ಸುತ್ತಿದಳು ಜಾಡ್ಯನಂಟ

೧೫

ಸಂಜೆ ಬಾನಿನ ದೂರದೊಂದು ಮೂಲೆಯು ತೆರದಿ
ಬಳಿಯಲ್ಲೆ ಹೂತು ಚೇತೋಹಾರಿಯಾಗಿ,--
ಕಂಗೊಳಿಪ ಕಿರುಬಾಗೆ ಮರದ ಚೆಲು ನೆರಳ್ಲಿ
ಆ ಮನೋಹರಿ ಸೇರಿಕೊಂಡಳಾಗಿ--

೧೬

ಚಾರುನೇತ್ರಳು ಮರದ ಬಳಿ ಸಾರಿ ಕೈಚಾಚಿ
ಒಂದು ಚೆಲು ಗೊಂಚಲನು ಕಿತ್ತುಕೊಂಡು,--
ನೋಡಿದಳು, ಎಡತೋಳ ಮರಳೆ ತಾಗಿಹ ಬಾಗಿ
ಓರೆಗಣ್ಣಲಿ-ಭಿಕ್ಷು ದೂರದಲಿ ಕಂಡು!

೧೭

ಅನಗಾಗಿ ನೆಯ್ಯುತಿದ್ದಳು ನೀಲದಾವರೆಯ
ಎರಡು ಹೂಮಾಲೆಗಳ ಪ್ರೀತಿಯಿಂದ;
ನೆಲವ ಗೀರಿದಳೊಂಟಕಾಲಿನಲಿ ನಿಂತಿದ್ದು
ಸುಂದರಿಯೊ--ಮನ್ಮಥನ ದೂತಿಯಂದ!



# ಅವರು ನಕ್ಕಾಗ... ಅವಳು?



1

ಆ ಅವಳ ಮುಖ
ನನಗೆ ಇಂದಿಗೂ ಸರಿಯಾಗಿ ಜ್ಞಾಪಕವಿದೆ.
ಅಂದು ಮೊದಲುಸಲ ಕಾಲೇಜಿಗೆ ಅಂಜುತಲೆ ಹೋದಾಗ
ನನ್ನ ಧೋತರ, ಶರ್ಟು, ಟೊಪ್ಪಿಗೆ, ಕಂಡು
ಒಬ್ಬರೂ ಆತ್ಮೀಯತೆಯಿಂದ ಮಾತನಾಡಿಸದಲೇ
ಹಳ್ಳಿಯ ಗೊಡ್ಡು ಎಂದು ಮನಗಂಡು
ಪಿಕಿಪಿಕಿ ನೋಡುತ್ತಿದ್ದ ನನ್ನನು ಕಂಡು
ಎಲ್ಲರೂ ಕಿಸಿಕಿಸಿ ನಗುತ್ತಿದ್ದರು
ಅಂದು ಆ ಅವಳೂ ಸಹ ನನ್ನನು ಕಂಡು
ಬಹುಹೊತ್ತಿನವರೆಗೂ ನಕ್ಕಿದ್ದಳು.




2

ಆ ನನ್ನ ಮಿತ್ರರೆಲ್ಲ ನನ್ನನ್ನು ಸ್ಥಿತಿವಂತನೆಂದು ತಿಳಿದು
ಆಪ್ತಮಿತ್ರರಾಗಿ, ಏನೇನೊ ಕಾರಣ ಕೂಡಿಸಿ
ಮನೆಗೆ ಪತ್ರವ ಬರೆಸಿ ಸಾಕಷ್ಟು ಹಣ ತರಿಸಿ
ನಿತ್ಯ ಎಲ್ಲರಿಗೂ ಅಭಿಷೇಕ ಮಾಡಿಸುತ್ತಿದ್ದಾಗ
ನನ್ನನು ಜೀನ್ಸ್‌ಬಾಂಡ್ ಡ್ರೆಸ್ಸಿಗೆ ಬದಲಾಯಿಸಿದರು.
ಕಾಲೇಜ ರಾಜಕುಮಾರನೆಂದು ಹೊಗಳಿ
ಇಲೆಕ್ಶನ್ನಿಗೂ ನಿಲ್ಲಿಸಿ, ಸಾಕಾಗುವಷ್ಟು ತಿಂದು ಕುಡಿದು
ನಾನು ಸೋತಾಗ, ದೂರ ಸರಿದು
ಹರಿದು ಹೋಗಿದ್ದರು.
ಆ ಕಾಲೇಜ ಕ್ಯಾಂಟಿನ ಭಟ್ಟ
ನನ್ನ ಹಣುಮಂತನ ಬಾಲದಂತೆ ಬೆಳೆದ ಬಿಲ್ಲನ್ನು
ಪಾನ ದುಕಾನ ನಬೀಸಾಬನೊಡನೆ ಬಂದು
ಜಗಳ ತೆಗೆದು ಕೊಡಲು ಕೇಳಿದಾಗ
ವಾಚು, ಉಂಗುರ, ಚೈನು, ಮಾರಿ ಮುಟ್ಟಿಸಿ
ಬರಿಗೈಯಿಂದಾ ಕಾಲೇಜಿನಲಿ ತಿರುಗುತಿರುವಾಗೆ
ಮತ್ತೆ ಎಲ್ಲರೂ ನನ್ನನ್ನು ಕಂಡು ಕಿಸಿಕಿಸಿ, ನಕ್ಕಿದ್ದರೂ
ಆದರೆ ಆ ಅವಳು
ಕನಿಕರದಿಂದಾ ನನ್ನನ್ನೆ ನೋಡುತ್ತಾ
ಗಂಭೀರವಾಗಿ ನನ್ನ ಮುಂದೆ ಹಾಯ್ದು ಹೋಗಿದ್ದಳು.



3

ನಾನು ದುಶ್ಚಟಗಳಿಗೆ ಬಲಿಯಾಗಿ
ಮೂರುವರುಷ ಒಂದೇ ತರಗತಿಯಲ್ಲಿ
ಫೀ ಕಟ್ಟದೆ ಕುಳಿತು ಬಂದ ಹಣ ಪೋಲು ಮಾಡುತ್ತಿದ್ದಾಗ
ನನ್ನ ತಂದೆಗೆ ಹೇಗೊ ಅದು ಗೊತ್ತಾಗಿ
ಒಂದು ದಿನ ಬಂದು ನನ್ನ ಸಾಲ, ಶೂಲಗಳನ್ನು ತೀರಿಸಿ
ನನ್ನ ಕಾಲೇಜು ಬಿಡಿಸಿ
ಊರಿಗೆ ಕರೆದುಕೊಂಡು ಹೊರಟಾಗ
ನನ್ನ ಆತ್ಮೀಯರೆಲ್ಲರೂ ಮತ್ತೆ ನನ್ನನು ಕಂಡು
ಕಿಸಿ, ಕಿಸಿ, ನಕ್ಕಿದ್ದರು.
ಆದರೆ ಆ ಅವಳು?
ದುಃಖ ಪೂರಿತವಾಗಿ ನನ್ನೆಡೆಗೆ ನೋಡುತ್ತಾ
ಒಂದು ಮೂಲೆಯಲಿ ನಿಂತು
ಅಳುತ್ತಿದ್ದಳು.

– ಎಂ. ಗೋವಿಂದ




# ಮಾವನ ಮನೆ!

ಒಕ್ಕಲರೆ ಅಂಗಡಿಯ ರಂಗಯ್ಯಶೆಟ್ಟಿ ತನ್ನ ಮಗಳ ಮದುವೆ ಮಾಡಿದ ಹೊಸತು. ಮಗಳನ್ನು ಇನ್ನೂ ಗಂಡನ ಮನೆಗೆ ಕಳುಹಿಸಿರಲಿಲ್ಲ. ದೀಪಾವಳಿಯಾದ ಮೇಲೆ ಕಳುಹಿಸುವ ಸಂಪ್ರದಾಯವಿತ್ತು. ಈ ನಡುವೆಯೇ ಒಮ್ಮೆ ಅಳಿಯನು ಮನೆಗೆ ಬಂದ. ನಾಲ್ಕು ದಿನ ಕಳೆಯಿತು, ಹದಿನೈದು ದಿನಗಳೂ ಕಳೆದುವು; ರಂಗಯ್ಯ ಶೆಟ್ಟಿ ಪೇಚಿಗೆ ಸಿಕ್ಕಿ ಹಾಕಿಕೊಂಡ. "ಅಳೀಮಯ್ಯನವರೇ ಊರಿನಿಂದ ಕಾಗದವೇನಾದರೂ ಬಂದಿತ್ತೇ?" ಎಂದು ಒಂದೆರಡು ಸಲ ಪ್ರಶ್ನಿಸಿದ್ದಾಯಿತು. ಇಲ್ಲ ಎನ್ನುತ್ತಿದ್ದ ಅಳಿಯ! ಕೊನೆಗೆ ಅವನಿಗೂ ಬೇಸರವಾಯಿತೇನೋ – "ಕಾಗದ ಬಂದಿತ್ತು; ಊರಿನಲ್ಲಿ ಎಲ್ಲಾ ಕ್ಷೇಮವಾಗಿದ್ದಾರಂತೆ" ಎಂದುಕೊಂಡೇ ಇನ್ನೂ ನಾಲ್ಕು ದಿನ ಕಳೆಯಿತು. ರಂಗಯ್ಯ ಶೆಟ್ಟಿಗೆ ಹೆಂಡತಿಯ ಕಡೆಯಿಂದ ನಿರಾಶೆ. ಮಗಳಿಂತೂ ಸರಿಯೇ ಸರಿ. ಇನ್ನೂ ಹೊಸತು, ಕಿಟಕಿಯ ಕಿಂಡಿಯಿಂದ ಗಂಡನನ್ನು ಇಣಕಿ ನೋಡುತ್ತಾಳೆಯೇ ಹೊರತು ಶೆಟ್ಟಿಯ ಪೀಕಲಾಟ ಅವಳಿಗೇನು ಗೊತ್ತು? ನಿತ್ಯವೂ ತಪ್ಪದ ಭಕ್ಷ್ಯಗಳ ಹಾವಳಿಯಿಂದ ಅಂಗಡಿ ಮುಚ್ಚುವ ಸ್ಥಿತಿಗೆ ಬಂದುಬಿಟ್ಟಿತ್ತು.

ಅಂದು ರಾತ್ರಿ ಶೆಟ್ಟಿ ತಲೆಯ ಮೇಲೆ ಕೈಹೊತ್ತು ಕುಳಿತುಕೊಂಡಿದ್ದ. ನಡುಮನೆಯ ಎಣ್ಣೆಯ ದೀಪದ ಬಳಿ ಆತನ ಮಗ–ಆರನೆಯ ತರಗತಿಯಲ್ಲಿ ಓದುವ ಸೀನು–ಕುಳಿತು ಮಗ್ಗಿ ಬಾಯಿಪಾಠ ಮಾಡುತ್ತಿದ್ದ – "ಎಂಟೊಂದ್ಲಿ ಎಂಟು, ಎಂಟೊಂದ್ಲಿ ಎಂಟು" – ಎನ್ನುತ್ತಾ! ಅದೇ ಸಮಯಕ್ಕೆ ಅಡ್ಡಾಡಿಕೊಂಡು ಬಂದ ಅಳಿಯನು ಮೈದುನನ ಪಕ್ಕದಲ್ಲೇ ಕುಳಿತುಕೊಂಡ.

ಶೆಟ್ಟಿಗೆ ತಟ್ಟನೆ ತಲೆಯಲ್ಲಿ ಉಪಾಯ ಹೊಳೆಯಿತು. ಕುಳಿತಲ್ಲಿಂದ ಎದ್ದು ಮಗನ ಬಳಿಗೆ ಬಂದವನೇ, "ನಿನ್ನ ಓದಿಗೆ ಬೆಂಕಿ ಬೀಳ, ಎಂಟೊಂದ್ಲಿ ಎಂಟೊಂತ ಹೇಳಿದ್ದನ್ನೇ ಹೇಳ್ತೀಯೇನೋ ಬೇಕೂಫ್" ಎನ್ನುತ್ತಾ ಸೀನೂ ಕೆನ್ನೆಗೆ ಚೆನ್ನಾಗಿ ಒಂದು ಬಿಗಿದೇ ಬಿಟ್ಟ. ಆ ರಭಸದಲ್ಲಿ ದೀಪ ಆರಿಹೋಯಿತು–ಎಣ್ಣೆ ದೀಪ!

"ಹೇಳೋ ಸರಿಯಾಗಿ ಮಗ್ಗೀನ, ಲೋ ಮುಟ್ಠಾಳ" ಎನ್ನುತ್ತಾ, ಶೆಟ್ಟಿ ಬಲಗೈಯಿಂದ ಗುದ್ದುವಾಗ ಎಡಗೈಯಿಂದ ಜುಟ್ಟು ಹಿಡಿದುಕೊಂಡಿದ್ದ ಕತ್ತಲಿನಲ್ಲಿ!

ಆದರೆ ಈಗ ಹಿಡಿದದ್ದು ಮಗನ ಜುಟ್ಟನ್ನಲ್ಲ, ಅಳಿಯನ ಜುಟ್ಟನ್ನು! ಪಟಪಟನೆ ಬಿಡುವಿಲ್ಲದೆ ಏಟುಗಳು, ಗುಪುಗುಪನೆ ಗುದ್ದುಗಳು, ಗುದ್ದಿದ್ದೂ ಗುದ್ದಿದ್ದೇ ಕೆಲಸ. ಏಕೆಂದರೆ ಮನೆಯಾಕೆ ದೀಪ ಮತ್ತೆ ಹೊತ್ತಿಸುವುದರೊಳಗೇ ಸೇಡು ತೀರಿಸಿಕೊಳ್ಳಬೇಕಲ್ಲ!

ಏಟುಗಳಿಗೆ ಪ್ರಾರಂಭವಾಗುತ್ತಲೇ ಸೀನು ಪಕ್ಕಕ್ಕೆ ಕುಳಿತವನು ತೆಪ್ಪಗೆ ಇದ್ದುಬಿಟ್ಟ. ಪೆಟ್ಟುಗಳನ್ನು ತಿನ್ನುತ್ತಿರುವ ಅಳೀಮಯ್ಯ ಉಸಿರು ಬಿಗಿ ಹಿಡಿದು ಹೇಳಿದ –"ಮಾವಯ್ಯ, ಸೀನೂ ಓದ್ತಾನೆ, ಹೋಗಲಿ ಇವತ್ತಿಗೆ ಬಿಟ್ಟುಬಿಡಿ".

"ನೀವು ಸುಮ್ಮನಿರಿ ಅಳೀಮಯ್ಯನವರೇ, ಇವನ ವಿಷಯ ನಿಮಗೆ ಬೇಡ. ನಿಮ್ಮದ್ದೇನಿದ್ದರೂ ಎರಡು ಹೊತ್ತು ಊಟ, ಮೂರು ಹೊತ್ತು ಟಿಫಿನ್ನು. ನೀವು ಸುಮ್ಮನಿರಿ ಅಳೀಮಯ್ಯನವರೇ......"

"ಸೀನೂನ ಇವೊತ್ತಿಗೆ ಬಿಟ್ಟುಬಿಡಿ" ಎಂದು ಹೇಳುತ್ತಾನೆಯೇ ಹೊರತು, ಅಳೀಮಯ್ಯ ತನಗೇ ಏಟು ಬೀಳುತ್ತಿದೆಯೆಂದು ಹೇಳಲೇ ಇಲ್ಲ. ಸೀನುವಾದರೋ ತೆಪ್ಪಗೆ ಸರಿದಿದ್ದಾನೆಯೇ ಹೊರತು ಭಾವನಿಗೆ ಏಟು ಬೀಳುತ್ತಿದೆಯೆಂದು ಹೇಳಲಿಲ್ಲ. ಅಂತೂ ಮನೆಯಾಕೆ ಬೆಂಕಿ ಪೆಟ್ಟಿಗೆ ಹುಡುಕಿ ದೀಪ ಹಚ್ಚಿ ತರುವಷ್ಟರೊಳಗಾಗಿಯೇ ಶೆಟ್ಟಿಯು ಯಥಾ ಶಕ್ತಿಯಾಗಿ ಅಳಿಯನನ್ನು ಗುದ್ದಿ ಸುಸ್ತು ಮಾಡಿದ್ದ.

ದೀಪದ ಬೆಳಕು ಬರದಿತು. ಅಳಿಯ ಹೇಗೋ ಕಷ್ಟಪಟ್ಟು ಎದ್ದು ಕುಳಿತು ಒತ್ತಾಯದ ನಗೆ ಬೀರತೊಡಗಿದ. ಆದರೆ ಹರಳೆಣ್ಣೆ ಕುಡಿದಂತಾದಿರುವ ಮುಖವು ಚರಿತ್ರೆಯನ್ನು ಹೇಳದೆ?

ಮಾರನೆಯ ದಿನ ಯಾರೂ ಹೇಳದೇನೇ ಅಳೀಮಯ್ಯ ಗಂಟು – ಮೂಟೆ ಎತ್ತಿಕೊಂಡು. "ಹೋಗಿ ಬರ್ತೀನಿ ಅತ್ತೆ" ಎಂದ.

ಅಂಗಳದಲ್ಲಿದ್ದ ಶೆಟ್ಟಿ "ಅವಸರವೇನು ಬಂದಿದೆ ಅಳೀಮಯ್ಯನವರೇ, ನಾಳೆ ಹೋದರಾಗದೆ?" ಎಂದ.

"ಇಲ್ಲಇಲ್ಲ, ಊರಿನಿಂದ ಕಾಗದ ಬಂದಿದೆ" ಎಂದವನೇ ತಿರುಗಿ ನೋಡದೆ ಹೊರಟೇ ಹೋದ.

ಅಂದು ಮಧ್ಯಾಹ್ನ ಶೆಟ್ಟಿಯ ಹೆಂಡತಿಯು ಸೀನುವಿಗೆ ಛೀಮಾರಿ ಹಾಕಿ ಕೇಳಿದಳು,

"ಪಾಪ ಭಾವನಿಗೆ ಅಷ್ಟೊಂದು ಏಟು ಬೀಳುತ್ತಿರುವಾಗ ನೀನಾದರೂ ಹೇಳೋಕಿಲ್ವೇನೋ?"

"ನಂಗೂ ಗೊತ್ತಿದ್ದರಲ್ವೇನಮ್ಮಾ ಹೇಳೋದು? ಅಪ್ಪ ನನ್ನನ್ನೇ ಹೊಡೀತಿದ್ದಾನೇನೋಂತ ತಿಳ್ಕೊಂಡು ಸುಮ್ಮನಿದ್ದುಬಿಟ್ಟಿದ್ದೆ" ಎಂದ ತಂದೆಗೆ ತಕ್ಕ ಮಗ!

ಏನೇ ಇರಲಿ ಅಳೀಮಯ್ಯ ಈಗಲೂ ಅಪರೂಪವಾಗಿ ಬರುವುದುಂಟು. ಆದರೆ ಎರಡು ರಾತ್ರಿ ಬಿಡಾರ ಮಾಡಿದ್ದಂತೂ ಇಲ್ಲ.



**ಕೈಪು ಲಕ್ಷ್ಮೀನರಸಿಂಹಶಾಸ್ತ್ರಿ**

# ಕೋತಿಯ ದೀಪಾವಳಿ

ರಮಣ ಅಂಬಲಪಾಡಿ

ರಂಗಪ್ಪ ಅಂಬಲಪಾಡಿಯಲ್ಲಿ ವಾಸಿಸುತ್ತಿದ್ದ ಹಾವಾಡಿಗ. ಕೋತಿ ಮತ್ತು ಹಾವುಗಳನ್ನು ಆಡಿಸುತ್ತ ದಿನ ದೂಡುತ್ತಿದ್ದ ರಂಗಪ್ಪನಿಗೆ ಕೋತಿಯ ಮೇಲೆ ತುಂಬಾ ಪ್ರೀತಿ. ಅಂದು ದೀಪಾವಳಿ ಹಬ್ಬದ ಸಮಯ; ಸುತ್ತುಮುತ್ತಲೂ ಪಟಾಕಿಗಳ ಶಬ್ದ. ರಾಕೆಟ್‌ಗಳ ಹಾರಾಟ; ದುರುಸುಬಾಣಗಳ ಧ್ವನಿ. ಈ ಗಮ್ಮತ್ತುಗಳನ್ನು ನೋಡಿದಾಗ, ಕೋತಿಯ ಮನಸ್ಸು ಚಂಚಲವಾಗತೊಡಗಿತು. ಅಂದು ರಂಗಪ್ಪ ಸಂಸಾರ ಸಮೇತ ಮಾವನ ಮನೆಗೆ ಹೋಗಿದ್ದ.

ಮಲಗಿದ್ದ ಹಾವನ್ನು ಎಬ್ಬಿಸಿದ ಕೋತಿಯು– "ಎಲ್ಲರೂ ಪಟಾಕಿ ದುರುಸು ಬಿಡುತ್ತಾ ಸಂತೋಷದಲ್ಲಿದ್ದಾರೆ: ಇಂದು ರಂಗಪ್ಪ ಮನೆಯಲ್ಲಿಲ್ಲ. ನಾವು ಕೂಡ ಪಟಾಕಿ, ದುರುಸು ಬಿಟ್ಟು ಗಮ್ಮತ್ತು ಮಾಡೋಣ" ಎಂದಾಗ,

"ಅತಿರೇಕ ಯಾವಾಗಲೂ ಅಪಾಯಕಾರಿ. ಬೆಂಕಿ, ನೀರುಗಳ ಸಹವಾಸ ಪ್ರಾಣಕ್ಕೆ ಸಂಚಕಾರ. ಮನುಷ್ಯರಂತೆ ನಾವು ನಡೆಯ ಬಯಸುವುದು ದೇವರು ಮೆಚ್ಚದ ಕೆಲಸ" ಹಾವಿನ ಬುದ್ಧಿಯಮಾತು ಕೋತಿಗೆ ಕಹಿ ಕಂಡಿತು.

"ನಿನ್ನ ಗೊಡ್ಡು ವೇದಾಂತ ನನಗೆ ಬೇಕಾಗಿಲ್ಲ. ಅವಕಾಶ ದೊರಕಿರುವಾಗ ಮಜಾ ಮಾಡುವುದನ್ನು ಬಿಟ್ಟು ದೇವರು – ದಿಂಡರು ಎಂದು ಹೆದರಿ ಸಾಯುವುದು ಮೂರ್ಖರ ಲಕ್ಷಣ; ಕಟ್ಟಿರುವ ಹಗ್ಗವನ್ನು ಬಿಚ್ಚುವಷ್ಟು ಉಪಕಾರವಾದರೂ ಮಾಡು" ಎಂದಾಗ, "ಮೂರ್ಖರಿಗೆ ಹೇಳುವ ಬುದ್ಧಿವಾದ ಬೋರ್ಗಲ್ಲ ಮೇಲೆ ಸುರಿದ ನೀರಿನಂತೆ ವ್ಯರ್ಥ" ಎಂದುಕೊಂಡ ಹಾವು, ಹಗ್ಗವನ್ನು ಬಿಚ್ಚಲು, ಕೋತಿ ಸಂತೋಷದಿಂದ ಪೇಟೆಗೆಹೊರಟಿತು.

ಕಾಳಪ್ಪ ಶೆಟ್ಟರ ಅಂಗಡಿ ಪಟಾಕಿ ದುರುಸುಗಳ ರಖಂ ಅಂಗಡಿ. ರಂಗಪ್ಪ ಮತ್ತು ಶೆಟ್ಟರು ನೆರೆಹೊರೆಯವರು. ಆ ಅಂಗಡಿಗೆ ಕೋತಿ ಬಂದಾಗ "ಏನು ಬಂದೀ?" ಸಹಜವಾಗಿ ಶೆಟ್ಟರು ಕೇಳಿದರು,



"ಪಟಾಕಿ, ನಕ್ಷತ್ರ ಕಡ್ಡಿ ಬೇಕು ಎಂದು ಯಜಮಾನರ ಮಗ ಹಠ ಮಾಡುತ್ತ ಇದ್ದ. ಈ ಉಪದ್ರವ ತಾಳಲಾರದೆ ಯಜಮಾನರು ಒಂದು ರೂಪಾಯಿಯ ಪಟಾಕಿ, ನಕ್ಷತ್ರ ಕಡ್ಡಿ ತಾ ಎಂದು ಕಳುಹಿಸಿದ್ದಾರೆ. ಹಣ ನಾಳೆ ಕೊಡುತ್ತಾರಂತೆ" ಕೋತಿ ಬಾಯಿಪಟಾಕಿ ಬಿಟ್ಟಿತು.

ನೆರೆಹೊರೆಯವರು, ಕಷ್ಟಸುಖಕ್ಕೆ ಬೇಕಾದವರು ಎಂದುಕೊಂಡ ಶೆಟ್ಟರು ಒಂದು ರೂಪಾಯಿಯ ದುರುಸು, ಬಾಣ, ನಕ್ಷತ್ರ ಕಡ್ಡಿ, ಪಟಾಕಿಗಳನ್ನು ಕಟ್ಟಿಕೊಟ್ಟರು. "ನಾಳೆ ನಾನೇ ಹಣ ಕೊಡುತ್ತೇನೆ" ಎಂದುಕೊಂಡ ಕೋತಿ ಸೀದಾ ಮನೆಗೆ ಹೊರಟಿತು.



"ನೀನು ಸುಮ್ಮನೆ ಪುಕ್ಕನಂತೆ ಕುಳಿತುಕೊಂಡಿದ್ದೀ. ನಾನು ನೋಡು, ಪೇಟೆಗೆ ಹೋಗಿ ಪಟಾಕಿ, ದುರುಸು ತಂದಿದ್ದೇನೆ" ಎನ್ನುತ್ತಾ ಒಳಬಂದ ಕೋತಿ ಪಟಾಕಿ ಮಾಲೆ, ನಕ್ಷತ್ರ ಕಡ್ಡಿಯ ಕಟ್ಟು, ದುರುಸುಗಳನ್ನು ಹಾವಿಗೆ ತೋರಿಸಿತು.

ವಿಚಾರ ತಿಳಿದ ಪಕ್ಕದ ಮನೆ ನಾರಾಯಣ ಭಟ್ಟರಲ್ಲಿಯ ಬೆಕ್ಕು ಕೂಡಲೇ ರಂಗಪ್ಪನ ಗುಡಿಸಲಿಗೆ ಬಂದಿತು. ಹುಡುಗಾಟದ ಪ್ರಾಯ. ಅದರ ಮೇಲೆ ಗಳಸ್ಯ ಕಂಠಸ್ಯ ಸ್ನೇಹ.

"ನಕ್ಷತ್ರಕಡ್ಡಿ, ಪಟಾಕಿಗಳನ್ನು ಮನೆಯೊಳಗೆ ಬಿಡುವುದು ಅಪಾಯ" ಎಂಬ ಹಾವಿನ ಮುಂಜಾಗ್ರತೆಯ ಮಾತನ್ನು ಕೇಳದ ಕೋತಿ.

"ಎಲ್ಲಾ ನನಗೆ ತಿಳಿದಿದೆ. ನಿನ್ನ ಬುದ್ಧಿವಾದ ಬೇಕಿಲ್ಲ. ಬಾಲಕ್ಕೆ ಪಟಾಕಿ ಕಟ್ಟಿದರೆ ಹೇಗೆ ಬಿಡುತ್ತದೆ ನೋಡುವ" ಎಂದಾಗ ಸರಿಯಾದ ಉಪಾಯ ಎಂದುಕೊಂಡ ಬೆಕ್ಕು, ಕೋತಿಯ ಬಾಲಕ್ಕೆ ಪಟಾಕಿಯನ್ನು ಕಟ್ಟಿತು. "ಇನ್ನು ನಾನು ಇಲ್ಲಿಯೇ ಇದ್ದರೆ ಪ್ರಾಣಕ್ಕೆ ಅಪಾಯ" ಎಂದುಕೊಂಡ ಹಾವು, ಸೀದಾ ಹೋಗಿ ತನ್ನ ಪೆಟ್ಟಿಯೊಳಗೆ ಕುಳಿತುಕೊಂಡಿತು.

"ಮೊದಲು ನಕ್ಷತ್ರಕಡ್ಡಿ ಬಿಡುವಾ" ಕೋತಿಯ ಮಾತಿಗೆ ಅಸ್ತು ಎಂದ ಬೆಕ್ಕು, ಬೆಂಕಿಕಡ್ಡಿ ಗೀರಿ ಕೋತಿಯ ಕೈಯಲ್ಲಿದ್ದ ನಕ್ಷತ್ರ ಕಡ್ಡಿಗೆ ಹಚ್ಚಲು, ಉರಿಯತೊಡಗಿದ ಚಟ ಚಟ ಶಬ್ದ ಕೇಳುತ್ತಾ ಕೋತಿ ಮತ್ತು ಬೆಕ್ಕು ನಲಿಯತೊಡಗಿದವು.

ಪಾಪ, ದುರದೃಷ್ಟ ಇರಬೇಕು, ನಕ್ಷತ್ರ ಕಡ್ಡಿಯಿಂದ ಹಾರಿದ ಬೆಂಕಿಯ ಕಿಡಿ ಕೋತಿಯ ಬಾಲಕ್ಕೆ ಕಟ್ಟಿದ ಪಟಾಕಿಯ ಮಾಲೆಗೆ ಹಿಡಿಯುವುದೇ ತಡ, ಪಟಾಕಿ ಸಿಡಿಯತೊಡಗಿತು. ಆಕಸ್ಮಿಕ ಸಿಡಿಯುವಿಕೆಯ ಶಬ್ದದಿಂದ ಗಾಬರಿಗೊಂಡ ಕೋತಿಯು ಪ್ರಾಣಭಯದಿಂದ ಓಡತೊಡಗಿತು. ಹಾರತೊಡಗಿತು. ಬೆಂಕಿ ಗುಡಿಸಲಿಗೆ ತಗಲಿ, ಗುಡಿಸಲು ಉರಿಯತೊಡಗಿತು. ನೆರೆ... ವರು ಬರುವುದರೊಳಗಾಗಿ ಗುಡಿಸಲು ಬೂದಿಯಾಗಿತ್ತು. ಹಾವು, ಬೆಕ್ಕುಗಳು ಬೆಂಕಿಗೆ ಸಿಲುಕಿ ಸತ್ತುಹೋಗಿದ್ದವು. ಇನ್ನು ಕೋತಿ ಸೀದಾ ಯಮಲೋಕಕ್ಕೆಯೇ ಹೇಳದೆ ಕೇಳದೆ ಹೋಗಿತ್ತು, ಎಂದು ಬೇರೆ ಹೇಳಬೇಕೇ?



# Yezdi-Jawa

PROVE

*Quality and Performance*

AT THE FIRST INDIAN

# GRAND PRIX

250cc CLASS

*& THE 14TH ALL INDIA MOTOR RACES, MADRAS, FEB.'71*

| TROPHY | CLASS | FIRST | SECOND | THIRD |
|---|---|---|---|---|
| IDEAL JAWA TROPHY | GRAND PRIX Upto 250cc | YEZDI-JAWA 250cc R. Hormuzdi | YEZDI-JAWA 250cc Laxman Rao | JAWA 250cc B. Shaha |
| S.M.H. ROLLING TROPHY | Upto 75cc | YEZDI-60cc Laxman Rao | YEZDI 60cc Y. P. Udayashankar | - |
| IDEAL JAWA ROLLING TROPHY | Upto 250cc | YEZDI-JAWA 250cc R. Hormuzdi | YEZDI-JAWA 250cc Laxman Rao | JAWA 250cc K. A. Krishnan |
| ENFIELD ROLLING TROPHY | Upto 350cc | YEZDI-JAWA 250cc R. Hormuzdi | JAWA 250cc Y. R. Putterudrappa | - |
| G.M.D.M. ROLLING TROPHY | RACING CLASS 350cc | - | JAWA 250cc R. Rehman | - |







**IDEAL JAWA (INDIA) PVT. LTD.**
**MYSORE-2.**

SGS/IJ/2/71

*Now! Feel the exciting difference—*

# *Ride the* SPEED KING

## —the first sports cycle made in India!

You will be amazed by the effortless pedalling, the smooth, sheer speed, the feeling of absolute comfort as you ride—Speed King alone can give you all these!

Distinctive Features which make for riding pleasure:

- LIGHTWEIGHT FRAME
- WESTRICK RIMS
- SPECIAL HUBS
- HANDLEBAR SPECIALLY DESIGNED FOR COMFORT
- CALIPER BRAKES WITH POSITIVE INSTANT ACTION
- PEDALS WITH POLISHED CONES AND BEARINGS FOR SMOOTH ACTION.
- FREEWHEELS WITH TWO FULL ROWS OF SPECIALLY HARDENED STEEL BALLS
- CHAIN MANUFACTURED TO HIGHEST PRECISION

Speed King is beautifully streamlined and finished sleekly in rich chrome and in flamboyant colours—Cherry Red, Peacock Blue and Flashing Green.

*Be proud—own a*

**SPEED KING**

**HIND CYCLES LTD.**

Bombay,

the largest composite cycle manufacturing company in India producing all components under one roof.




**Norton JAWAHAR**  **Better Bicycle from any angle**

**HIND CYCLES LTD.,** 31, Infantary Road, BANAGLORE-1 Phone : 24950



## ರೈತ ಬಾಂಧವರಿಗೆ ದೀಪಾವಳಿಯ ಶುಭಾಶಯಗಳು



# ರೈತ ಬಾಂಧವರೇ ಗಮನಿಸಿ

## ಅಧಿಕ ಉತ್ಪತ್ತಿಗಾಗಿ

## ಬಿತ್ತನೆಗೆ ಪ್ರಮಾಣಿತ ಬೀಜವನ್ನೇ ಬಳಸಿರಿ






ಭಾರತೀಯ ಬಿತ್ತನೆ ಬೀಜ ಶಾಸನ ಪ್ರಕಾರ ಈ ಕೆಳಕಂಡ ತಳಿಗಳನ್ನು ಮಾರಾಟ ಮಾಡುವಾಗ ಅವು ನಿಯಮಬದ್ಧವಾದ ಗುರುತು ಚೀಟಿಗಳನ್ನು ಹೊಂದಿರಬೇಕು.

- ಐ. ಆರ್ 8 ಮತ್ತು ಜಯ ಭತ್ತದ ತಳಿಗಳು,
- ಪೂರ್ಣಾ ರಾಗಿ ತಳಿ.
- ಸಿ. ಎಸ್. ಎಚ್-1 ಮತ್ತು ಸಿ. ಎಸ್ ಎಚ್-2 ಸಂಕರಣದ ಜೋಳ.
- ಎಚ್ ಬಿ-1 ಎಚ್ ಬಿ-2, ಎಚ್ ಬಿ-3 ಮತ್ತು ಎಚ್ ಬಿ-4 ಸಂಕರಣದ ಸಜ್ಜೆ)
- ಡೆಕ್ಕನ್ ಸಂಕರಣದ ಮೆಕ್ಕೆಜೋಳ
- ಸಫೇದ್ ಲರ್ಮ ಮತ್ತು ಛೋಟಿಲರ್ಮ ಗೋಧಿ ತಳಿಗಳು

(ಬಿತ್ತನೆ ಬೀಜದ ಗುಣಗಳಿಗಾಗಿ (ಯೋಗ್ಯತೆ ತಿಳಿಯುವುದಕ್ಕೆ) ಗುರುತು ಚೀಟಿಯನ್ನು ಪರಿಶೀಲಿಸಿ [illegible] ಚೀಟಿಯಲ್ಲಿ ಬೀಜದ ಕನಿಷ್ಟ ಪರಿಶುದ್ಧತೆ ಮತ್ತು ಮೊಳೆ ಒಡೆಯುವ ಪ್ರಮಾಣವನ್ನು ನಮೂದಿಸಲಾಗುವುದು

ವ್ಯವಸಾಯ ಇಲಾಖೆಯಿಂದ ಪ್ರಕಟಿತ

Our best Wishes to all customers on Deepavali Occassion



Phone No. : 955

*From :*

## KWALITY STORES

**3162 Khade Bazar, BELGAUM**

*Dealers in :*

Latest Suiting, Shirting, Sarees, Readymade Garments, & Wollen Hosiery & Kashmir Coats.

*Authorised Dealers*






ದೀಪಾವಳಿ ಎಲ್ಲರಿಗೂ ಶುಭವಾಗಲಿ!

★ ಶುಚಿ

★ ರುಚಿ

★ ಮನಸ್ಸಿನ ತೃಪ್ತಿ

ಇವುಗಳ ಸಂಗಮ

ಫೋನ :
ರೆಸ್ಟಾರೆಂಟ 1880
ಲಾಜಿಂಗ 160

## ಕೃಷ್ಣಾ ಕೆಫೆ

ಖಡೇ ಬಝಾರ: ಬೆಳಗಾವಿ

ಊಟ, ವಸತಿ, ಉಪಹಾರ ಗೃಹ

## ಬಡತನ ತೊಲಗಿಸಿರಿ ಇಲ್ಲ ಶ್ರೀಮಂತಿಕೆ ಹೆಚ್ಚಿಸಿರಿ

ಸಂಪತ್ತು ಹಾಗು ಶ್ರೀಮಂತಿಕೆ ಬೆಳೆಯಬೇಕಾದರೆ ಒಳ್ಳೆ ವಸ್ತುಗಳನ್ನು ಕಡಿಮೆ ಕ್ರಯದಲ್ಲಿ ಸಾಕಷ್ಟು ಉತ್ಪಾದಿಸಬೇಕು. ಹೀಗೆ ಸಾಕಷ್ಟು ಉತ್ಪಾದನೆಯಾದರೆ ಮಾತ್ರ ಶ್ರೀಮಂತಿಕೆ ಹಾಗೂ ಸಂಪತ್ತು ಬೆಳೆಯುತ್ತದೆ. ಬಡತನ ತೊಲಗುತ್ತದೆ.



ನಿಮ್ಮ ಟಾಯರಗಳನ್ನು ಅರ್ಧ ಕ್ರಯದಲ್ಲಿ ರಿಮೋಲ್ಡ ಮಾಡಿಸಿ
ಹೊಸ ಟಾಯರಿನಂತೆ ಮಾಡಿ ಟಾಯರಿನ ಖರ್ಚಿನಲ್ಲಿ
೧೦೦ಕ್ಕೆ ೧೦೦ ರಷ್ಟು ಉಳಿತಾಯ ಮಾಡಿ
ನಿಮ್ಮ ಶ್ರೀಮಂತಿಕೆ ಹೆಚ್ಚಿಸಿರಿ.

ಫೋನ್ : 195

## ಮೆ॥ ಎಸ್. ಜಿ. ಫಡಕೆ ಆ್ಯಂಡ್ ಸನ್ಸ್

ಖಡೇ ಬಝಾರ, ಬೆಳಗಾವಿ

ದೀಪಾವಳಿಯು ಶುಭದಾಯಕವಾಗಲಿ





# ಕೈಮಗ್ಗದ ಬಟ್ಟೆಗಳೇ ಏಕೆ?

ಅಪ್ರತಿಮವಾದ ಅನೇಕ ಬಣ್ಣಗಳಲ್ಲಿ ಬಹುಕಾಲ
ತಾಳಿಕೆ ಅಚ್ಚಿನ ಅತ್ಯುತ್ತಮ ಕಲಾಕೃತಿಗಳು ತನ್ನದೇ ಆದ
ವಿಶಿಷ್ಟ ತರಗತಿಯಿಂದ ಆಧುನಿಕ
ಸೊಗಸುಗಾರಿಕೆಯತ್ತ ಹೆಜ್ಜೆ. ಶುದ್ಧ
ಸ್ವದೇಶೀಯವಾದದ್ದರಿಂದ
ಕೈಮಗ್ಗದ ಅರಿವೆಗಳನ್ನೇ ಹೊಂದಿರಿ.



# ಕೈಮಗ್ಗದ ನಿಲಯವೇಕೆ?

ಉತ್ತಮ ಮತ್ತು ಆಧುನಿಕ ತರಹ ತರಹದ
ನಿಮ್ಮ ಮೆಚ್ಚುಗೆಯ ವಿಪುಲ ಸಂಗ್ರಹ ಮತ್ತು
ನಿಯಂತ್ರಿತ ಬೆಲೆ
ತ್ವರಿತ ವಿನಯಶೀಲ ಸೇವೆ ಕೈಮಗ್ಗದ ನಿಲಯದಿಂದ
ಪಡೆಯಿರಿ, ಆದ್ದರಿಂದ
ಹ್ಯಾಂಡಲೂಮ ಹೌಸದಿಂದಲೇ ಪಡೆಯಬಾರದೇಕೆ?

**ಶ್ರೇಷ್ಠವಾದ ಬಟ್ಟೆಗಳಿಗಾಗಿ**
**ಇದೇ ಸಂದರ್ಶಿಸಿರಿ.**







**handloom house**
Opp. Town Hall
Jayachamaraja Road,
Bangalore-2 • Phone: 73740

(GAI/HH/3)





ದೀಪಾವಳಿಯು ಸರ್ವರಿಗೂ ಸುಖಸಮೃದ್ಧಿ ಯನ್ನೀಯಲಿ

ನೀವು ಗೋವೆಯನ್ನು ಸಂದರ್ಶಿಸಲು ಬಂದಾಗ ಸಂದರ್ಶಿಸಿರಿ

# ತಾಜಮಹಲ್ ರೆಸ್ಟಾರೆಂಟ್

**ಶುದ್ಧ ಶಾಕಾಹಾರಿ**

ದಕ್ಷಿಣ ಭಾರತದ ಶುಚಿರುಚಿಯಾದ ಊಟ ಮತ್ತು ತಿಂಡಿಗಳಿಗಾಗಿ

---

**And, Do not forget to visit**

## SHALIMAR

**Bar & Restaurant**

**For best NON-Vegetarian Food in Panjabi, Goan and Mangalore Type**

Datta Prasad Alfonso Albuquerque Road

PANJIM

---



ದೀಪಾವಳಿಯು ಸರ್ವರಿಗೂ ಆಯುರಾರೋಗ್ಯವನ್ನೀಯಲಿ!



ಸುಮಾರು ಅರವತ್ತು ವರ್ಷಗಳಿಂದ
ಜನತಾಸೇವೆಯಲ್ಲಿ ತೊಡಗಿರುವ ಈ ಸಂಸ್ಥೆಯಲ್ಲಿ

ಲೋಕವಿಖ್ಯಾತಿ ಗಳಿಸಿರುವ

## ನಂಜನಗೂಡು ಟೂತ್-ಪೌಡರ್

ಅನುಭವಸಿದ್ಧ ಮತ್ತು ಅತ್ಯಂತ ಪ್ರಭಾವಶಾಲಿ

## ಆಯುರ್ವೇದಿಯ ಸಿದ್ಧೌಷಧಗಳು

ಮತ್ತು

ಚಿತ್ತಾಕರ್ಷಕ ಪರಿಮಳಯುಕ್ತವಾದ

ಅಗರಬತ್ತಿ, ಹೇರ್ ಆಯಿಲ್, ಕರವಸ್ತ್ರದ ಸೆಂಟ್ ಮುಂತಾದ

## ಸುಗಂಧ ದ್ರವ್ಯಗಳು

ಸಹ ಉತ್ತಮ ರೀತಿಯಲ್ಲಿ ಪ್ರತಿನಿತ್ಯವೂ ತಯಾರಾಗುತ್ತಲಿವೆ

# ದಿ ಸದ್ವೈದ್ಯ ಶಾಲಾ (ಪ್ರೈವೆಟ್)

ಲಿಮಿಟೆಡ

ನಂಜನಗೂಡು, ಮೈಸೂರು ಸ್ಟೇಟ್)

ಶಾಖೆಗಳು : ಬೆಂಗಳೂರು, ಮಂಗಳೂರು, ಮೈಸೂರು.

---



ಹಬ್ಬಗಳ ರಾಜ 'ದೀಪಾವಳಿ' ಸರ್ವರಿಗೂ ಶುಭವಾಗಲಿ !



## ಬೆಳಗಾವಿ ಸಂದರ್ಶಿಸಿದಾಗ ಏನು ಒಂದು ಮರೆಯಬಹುದು ?

**ಆದರೆ:**

# ಶರ್ಮಾ ಇವರ ಕುಂದಾ?

ಛೇ: ಅದನ್ನು ಮರೆಯಲು ಸಾಧ್ಯವಿಲ್ಲ.

ಫೋನ : 882

# ಶರ್ಮಾ ಸ್ವೀಟಮಾರ್ಟ

ಕಿರ್ಲೋಸ್ಕರ ರೋಡ: **ಬೆಳಗಾವಿ.**

---



ದೀಪಾವಳಿಯು ಸರ್ವರಿಗೂ ಶುಭವಾಗಲಿ





ನೀರು ಪೂರೈಕೆಯು ಸಲುವಾಗಿ ಬೇಕಾಗುವ ಶ್ರೇಷ್ಠವಾದ ಸಿಮೆಂಟ್ ಪಾಯಿಪ್ ಸುಲಭ ದರದಲ್ಲಿ ಮತ್ತು ಖಾತ್ರಿಯಾಗಿ ದೊರೆಯುವ ಸ್ಥಳ:

## ತಯಾರಕರು

# ಭಾರತ ಸ್ಪನ್ ಪಾಯಿಪ್ ಕಂಪನಿ

ಫ್ಯಾಕ್ಟರಿ: PHONE: 1789 ಆಫೀಸ್: Phone. 454

ಕಮಕಾರಟ್ಟಿ 174 ರಾಮದೇವಗಲ್ಲಿ

ಧಾರವಾಡ ರೋಡ್, ಬೆಳಗಾವಿ ಬೆಳಗಾವಿ

ನಮ್ಮ ಗ್ರಾಹಕರಿಗೂ ಹಿತಚಿಂತಕರಿಗೂ ನೂತನ ವರುಷ ಹಾಗೂ ದೀಪಾವಳಿಯ ಹಾರ್ದಿಕ ಅಭಿನಂದನೆಗಳು

ಅತಿ ಕಡಿಮೆ ಖರ್ಚಿನಲ್ಲಿ ಬಟ್ಟೆಗಳ ಶುಭ್ರತೆಗೆ



**NATRAJ**

# ನಟರಾಜ

ನೂತನ ಆಕಾರದ ಸಾಬೂನನ್ನೇ ಉಪಯೋಗಿಸಿರಿ

ತಯಾರಕರು:

## ಹಿಂದ ಸೋಪ್ ವರ್ಕ್ಸ್

ರವಿವಾರಪೇಟೆ, ಬೆಳಗಾವಿ

ಸೇಲ್ಸ್ ಡಿಪೋ:

ಹುಬ್ಬಳ್ಳಿ, ಸಾಗರ, & ಶಿವಮೊಗ್ಗಾ, ಕೊಲ್ಹಾಪುರ

---

ದೀಪಾವಳಿಯ ಶುಭಾಶಯಗಳು

# ಪ್ರಕಾಶ ಬೀಡೀಸ್

ತಯಾರಕರು

## ಕೆ. ಎಮ್. ಆನಂದ ಪ್ರಭು ಅಂಡ್ ಸನ್ಸ್

ಮಂಗಳೂರು-೧

ಫೋನ್ : H. O. 3718 / Factory 3532 — Grams "ANAND"

---

ಮಹಾರಾಷ್ಟ್ರ ಮತ್ತು ಮೈಸೂರು ರಾಜ್ಯದಲ್ಲಿ ಪ್ರಸಿದ್ಧಿಯನ್ನು ಪಡೆದ ಇದಲ್ಲದೆ ಮಿಠಾಯಿಯ ಅತ್ಯುತ್ತಮ ಕೇಂದ್ರವೆಂದು ಹೆಸರನ್ನು ಗಳಿಸಿದ ಮತ್ತು ಬೆಳಗಾವಿ-ಶಹಾಪುರದಲ್ಲಿಯೇ ಸರ್ವೋತ್ಕೃಷ್ಟ ಮಿಠಾಯಿ ಕೇಂದ್ರ

ಸರ್ವರಿಗೂ ದೀಪಾವಳಿಯು ಶುಭವಾಗಲಿ !!





# ಗಜಾನನ ಮಿಠಾಯಿವಾಲಾ

೬೨೨, ವಿಠ್ಠಲದೇವಗಲ್ಲಿ, ಶಹಾಪುರ—ಬೆಳಗಾವಿ ಫೋನ್-1788

ನಮ್ಮ ವೈಶಿಷ್ಟ್ಯಗಳು :

"ಸ್ಪೇಶಲ್ ಕುಂದಾ" AI ಕಾಜು ಬರ್ಫಿ. ಮಾವಾ ಪೇಢೆಗಳು, ಸಿಹಿ ಮತ್ತು ಖಾರಾ ಜಿನಸುಗಳು - ಶುದ್ಧ ತುಪ್ಪದಲ್ಲಿ ಸಿಗುವ ಏಕಮೇವ ಕೇಂದ್ರ.

ವಿ. ಸೂ. : ಪರ ಊರಿನವರಿಗೆ ಪಾರ್ಸಲ್ಲಿನಿಂದ ಕಳಿಸಿಕೊಡುತ್ತೇವೆ.

ಮಾಲಕರು : ಜಯಕಿಸನ ಜೋಶಿ



ದೀಪಾವಳಿಯು ಸರ್ವರಿಗೂ
ಶುಭದಾಯಕವಾಗಲಿ!

# ಹಾನಗಲ್ ಆಟೋಮೊಬಾಯಿಲ್ಸ

ಶೋ-ರೂಮು :
ದಾಜಿಬಾನ ಪೇಟೆ, ಹುಬ್ಬಳ್ಳಿ

ಡೀಲರರು :
ಹಾಲ್ಡಾ ಟಾಯಿಪರಾಯಟರ,
ಫೇಸಿಟ ಕ್ಯಾಲಿಕ್ಯುಲೇಟರ್ಸ, ಆಡಿಟಿಂಗ್ ಮಶಿನಗಳು
ಫೋನ್ : 3274

**

## ಹಾನಗಲ್ ಡ್ರಗ್ ಹೌಸ

ಕೆಮಿಸ್ಟ್ಸ ಮತ್ತು ಡ್ರಗಿಸ್ಟ್ಸ
ದಾಜಿಬಾನ ಪೇಟೆ, ಹುಬ್ಬಳ್ಳಿ

★

## ಹಾನಗಲ್ ಫಾರ್ಮ ಏಡ್ಸ

ಶೋರೂಮು ವಿದ್ಯಾನಗರ, ಹುಬ್ಬಳ್ಳಿ

ಡೀಲರ್ಸ : ಎಸ್ಕಾರ್ಟ್ಸ ಟ್ರ್ಯಾಕ್ಟರ್ಸ, URSUS ಟ್ರ್ಯಾಕ್ಟರ್ಸ, ಫೋರ್ಡ-3000 ಟ್ರ್ಯಾಕ್ಟರ್ಸ,
ರಾಜದೂತ ಮೋಟಾರ ಸಾಯಕಲಗಳು, ಮತ್ತು ಸ್ಕೂಟರಗಳು

****

## ಹಾನಗಲ್ಸ

ಶೋರೂಮು ನರಸಿಂಹರಾಜಾ ರೋಡ
ಬೆಂಗಳೂರು-2

ಫೋನ: 75665

ಡೀಲರರು:
ವಿಕಿ ಮೋಪೇಡ, ಸ್ಕೂಟರ್ಸ,
ರೇಡಿಯೊ, ಟ್ರಾನ್ಸಿಸ್ಟರ್ಸ ಮತ್ತು
ವಿದ್ಯುತ್ ಉಪಕರಣಗಳು.

## ಹಾನಗಲ್ಸ

ಶೋರೂಮು : ಸ್ಟೇಶನ್ ರೋಡ
ಹೈದರಾಬಾದ- 1 (A. P.)

ಡೀಲರರು :
ಏಅರ ಕಂಡಿಶನರ ರೆಫ್ರಿಜಿರೇಟರ್ಸ,
ವಾಟರ ಕೂಲರ, ರೇಡಿಯೋಗಳು
ಮತ್ತು ವಿದ್ಯುತ್ ಉಪಕರಣಗಳು.



ಕರುಣಾಳು ಬಾ ಬೆಳಕೆ,
ಮುಸುಕಿನಲಿ ಮಬ್ಬಿನಲಿ
ಕೈ ಹಿಡಿದು ನೀ ಸಲಹು"

# ಸುಗಂಧ ಶೃಂಗಾರ

ನೀಡುವ ಪರಿಮಳ ಸಂದೇಶ

ಕನ್ನಡ ನಾಡಿನಲ್ಲಿ ತಯಾರಾಗಿ
ಇಡೀ ವಿಶ್ವದಲ್ಲೀ ವಿಖ್ಯಾತವಾದ

**ಮೈಸೂರು ಅರವಿಂದ ಪರಿಮಳ ವರ್ಕ್ಸ್**



ನವರ ಹಾರ್ದಿಕ ದೀಪಾವಳಿಯ
ಶುಭಾಶಯಗಳು




T. F. 3 1760
(3 Lines)

ತಯಾರಕರು :

## ಅರವಿಂದ ಪರಿಮಳ ವರ್ಕ್ಸ್

ಮೈಸೂರು – ೪

ದೀಪಾವಳಿಯು ಸವರಿಗೂ ಸುಖಪ್ರದವಾಗಲಿ

ದಕ್ಷಿಣ ಭಾರತದ ಸುಪ್ರಸಿದ್ಧ
ಆರೋಗ್ಯಧಾಮ

ಮಿರಜಿಗೆ ಬಂದಾಗ್ಗೆ ನೆನಪಿಡಿರಿ

ಉಳಿದುಕೊಳ್ಳಲು ಅತ್ಯಾಧುನಿಕ ಮಾದರಿಯ ಸರ್ವ ಸೌಕರ್ಯವುಳ್ಳ ಲಾಜಿಂಗ್ ಹಾಗೂ ಬೋರ್ಡಿಂಗ್

ರೈಲು ನಿಲ್ದಾಣಕ್ಕೆ ತೀರ ಹತ್ತಿರ

# ಸುಖ ನಿವಾಸ

ಊಟ - ವಸತಿ - ಉಪಹಾರ

ಸ್ಟೇಶನ್ ಬೀದಿ.... ಮಿರಜ

ತಂತಿ : ಸುಖ ನಿವಾಸ ಫೋನ ... 646

ದೀಪಾವಳಿಯ ಶುಭಾಶಯಗಳು

# ವಿಜಯ ಟ್ರೇಡರ್ಸ್

ಮೋಟಾರ್ ಸಾಮಾನುಗಳ ವ್ಯಾಪಾರಿಗಳು

ಪುಣೆ-ಬೆಂಗಳೂರು ರಸ್ತೆ- ದಾವಣಗೆರೆ

ಹಿಂದೂಸ್ಥಾನ ಅಂಬಾಸಿಡರ್ ಕಾರ್ ಮತ್ತು ತಾತಾ ಬೆಂಜ್‌ನ ಎಲ್ಲಾ ಬಿಡಿ ಭಾಗಗಳು ದೊರೆಯುತ್ತವೆ.

ಎಕ್ಸೈಡ್ ಬ್ಯಾಟರಿಗಳು, ಸ್ಪ್ರಿಂಗ್ ಬ್ಲೇಡುಗಳು ಮತ್ತು ಟೈರು ಟ್ಯೂಬುಗಳಿಗೆ ವಿಚಾರಿಸಿರಿ.

ಮೇಲ್ಕಂಡ ಸಂಸ್ಥೆಯನ್ನು ಹೊಸದಾಗಿ ಪ್ರಾರಂಭಿಸಿದ್ದೇವೆ. ಎಲ್ಲ ಗ್ರಾಹಕರ ಸಹಕಾರ ಕೋರುತ್ತೇವೆ.

ಕೇವಲ ಒಂದು ಸಲ ಮಾತ್ರ
ರೂ. 100/- ಪಾವತಿಮಾಡಿ
"50 ಅವಕಾಶಗಳು"

ವಿವರಗಳಿಗೆ ಬರೆಯಿರಿ:

ಈಗಲೇ ಸೇರಿರಿ !

ಸುವರ್ಣ ಮಹೋತ್ಸವ



ಸುಲಭ ಕಂತಿನ ಯೋಜನೆಗಳು

ಪ್ರತಿಯೊಬ್ಬ ಸದಸ್ಯರಿಗೂ ಉಚಿತ ಬಹುಮಾನ.




ಅಖಿಲ ಭಾರತ ಸದಸ್ಯತ್ವ 5400 ಕ್ಕೂ ಮಿಗಿಲಾಗಿದೆ !

ಸಚಿತ್ರ ಉಚಿತ ಪುಸ್ತಕಕ್ಕೆ ಬರೆಯಿರಿ

Phones: 72529, 74279. Grams: VACO

ವಿ. ಅಣ್ಣಯ್ಯಪ್ಪ ಅಂಡ್ ಕಂಪೆನಿ



ದೀಪಾವಳಿಯ ಶುಭಾಶಯಗಳು!

# ಶ್ರೀ ದ್ವಾರಕಾರಾಮ ಎಂಟರ್‌ಪ್ರೈಸಸ್‌ರವರ

# ?

(ಕುತೂಹಲಕಾರಕ ಸಂಶಯಪ್ರಧಾನ ಚಿತ್ರ)

**ರಮೇಶ, ಶ್ರೀನಾಥ, ದಿನೇಶ, ಚೇತನ್, ಶೈಲಶ್ರೀ, ಶ್ರೀಲಲಿತ**

**ಇಂದಿರಾ ಜಾರ್ಜ್, ಸೋಮು, ಬಲರಾಮು, ರಾಜು, ಸತ್ಯ ಮುತ್ತು ಮಾಸ್ಟರ ಬಾಲರಾಜ**

---

| ಸಂಭಾಷಣೆ : | ಛಾಯಾ : | ಸಂಗೀತ : | ಸಂಕಲನ : |
|---|---|---|---|
| ಎಂ. ಎನ್. ಬಾಬು | ಶೇಖರ | ರತ್ನ | ಭಕ್ತವತ್ಸಲಂ |

ನಿರೂಪಣೆ, ನಿರ್ದೇಶನ :

## ಕೆ. ಸೀತಾರಾಮು

---



ದೀಪಾವಳಿಯ ಶುಭಾಶಯಗಳು!

# ಪ್ರೀಮಿಯರ್ ಸ್ಟುಡಿಯೋಸ್

ಮೈಸೂರು-೨

- ಸ್ವತಂತ್ರ ಚಿತ್ರನಿರ್ಮಾಪಕರಿಗೆ ಇದು ಆದರ್ಶ ಸ್ಟುಡಿಯೋ
- ಆಧುನಿಕ ಸಲಕರಣೆಗಳು
- ನಿಪುಣ ತಾಂತ್ರಿಕರು
- ಇಷ್ಟೆಲ್ಲ ಇದ್ದರೂ ಅತ್ಯಂತ ಮಿತವಾದ ದರಗಳು

